ಪ್ರಾತಃ ಸ್ಮರಣೀಯ ಗುರುಗಳಾದ ಶ್ರೀಶ್ರೀವಿದ್ಯಾಮಾನ್ಯತೀರ್ಥರ ಜನ್ಮಶತಮಾನೋತ್ಸವ
ಹಾಗೂ ಶ್ರೀಶ್ರೀ ವಿದ್ಯೇಶತೀರ್ಥಶ್ರೀಪಾದರ ಷಷ್ಟ್ಯಬ್ದ ಮಹೋತ್ಸವ ಸ್ಮಾರಕ ವಿಶೇಷ ಪ್ರಕಾಶನ

# ಸತ್ಕಥಾಸಾಗರ

## ಭಗವತ್ಕಥಾತರಂಗ–1



ಸಂಗ್ರಹ - ಪ್ರೇರಣೆ

ಶ್ರೀ ಶ್ರೀ 108 ಶ್ರೀ ವಿದ್ಯೇಶತೀರ್ಥಶ್ರೀಪಾದರು, ಶ್ರೀಭಂಡಾರಕೇರಿ ಮಠ, ಉಡುಪಿ

ಶ್ರೀ ಐತರೇಯಶೋಧಪ್ರಕಾಶನಪೀಠ
ಶ್ರೀ ಭಾಗವತಾಶ್ರಮ ಪ್ರತಿಷ್ಠಾನ, ಶ್ರೀಭಂಡಾರಕೇರಿ ಮಠ, ಗಿರಿನಗರ, ಬೆಂಗಳೂರು-560 08

# ಸತ್ಕಥಾಸಾಗರ

## ಭಗವತ್ಕಥಾತರಂಗ-೧

(ದಿ.ವಿದ್ವಾನ್ ಕೊಯಮತ್ತೂರು ವಾದಿರಾಜಾಚಾರ್ಯ
ಇವರು ಬರೆದ ''ಸಾವಿರ ಕಥೆಗಳು'' ಇಂದ ಆಯ್ದ ಕಥೆಗಳು)

ಪ್ರಾತಃ ಸ್ಮರಣೀಯ ಗುರುಗಳಾದ ಶ್ರೀಶ್ರೀವಿದ್ಯಾಮಾನ್ಯತೀರ್ಥರ
ಜನ್ಮಶತಮಾನೋತ್ಸವ ಹಾಗೂ ಶ್ರೀಶ್ರೀ ವಿದ್ಯೇಶತೀರ್ಥಶ್ರೀಪಾದರ
ಷಷ್ಟ್ಯಬ್ದ ಮಹೋತ್ಸವ ಸ್ಮಾರಕ ವಿಶೇಷ ಪ್ರಕಾಶನ

ಸಂಗ್ರಹ - ಪ್ರೇರಣೆ
ಶ್ರೀ ಶ್ರೀ ೧೦೮ ಶ್ರೀ ವಿದ್ಯೇಶತೀರ್ಥಶ್ರೀಪಾದರು
ಶ್ರೀಭಂಡಾರಕೇರಿ ಮಠ - ಉಡುಪಿ

ಪ್ರಕಾಶನ
''ಶ್ರೀ ಐತರೇಯಶೋಧಪ್ರಕಾಶನಪೀಠ''
ಶ್ರೀ ಭಾಗವತಾಶ್ರಮ ಪ್ರತಿಷ್ಠಾನ
ಶ್ರೀಭಂಡಾರಕೇರಿ ಮಠ,
ಗಿರಿನಗರ, ಬೆಂಗಳೂರು-560 085
ದೂ. 080-26721527
www.vidyeshabhandara.org

**Satkatha Sagara - Bhagavatkatha Taranga-I** -Collection of short stories from Puranas and Mahabharata, Upanishats written by **Nyaya Siromani, Late Vidwan Sri Coimbatore Vadirajacharya,** Udupi.

*This book is published in commemoration of Janmasatamanotsava of His Holiness Sri Vidyamanya Tirtha Swamiji and Sastyabda Mahotsava of H.H. Sri Vidyesa Tirtha Swamiji of Bhandarakeri Matha, Udupi.*

| | | |
|---|---|---|
| Edited by | : | **Dr. G. Sheshagiri Acharya Vedagarbha** |
| Published by | : | **Aitareya Shodha Prakashana Peetha**<br>a research and publication unit of<br>Sri Bhagavatashrama Pratisthana, Sri<br>Bhandarakeri Matha(Udupi).<br>Bengaluru-560 085 |

| | | |
|---|---|---|
| First edition | : | 2014 |
| Copies | : | 1000 |
| Copyright | : | Reserved |
| Price | : | Rs. 400 |
| Pages | : | 568 + 40 |
| Page Design | : | **Sri R.S.Premkumar** |
| Cover Page | : | **Sri K.M.Sheshagiri** |
| Copies available at | | **Sri Bhagavatashrama Pratishthana,**<br>Sri Bhandarakere Matha,<br>1343, Ist H Main, 8th Cross,<br>2nd Stage, Girinagar, Bengaluru-85.<br>Ph. 080-26721527 |
| Printed at | : | **Vagarth Printers**,N.R.Colony, Bengaluru-4<br>Ph. 080-22427677 |

# ಹೃದಯವಾಣಿ

**''ಯಸ್ತೇ ಕಥಾಸೇವಕ ಏವ ಸರ್ವದಾ ಸದಾರತಿಸ್ತ್ವಯ್ಯಚಲೈಕಭಕ್ತಿಃ ।**
**ಸ ಜೀವಮಾನೋ ನ ಪರಃ ಕಥಂಚಿತ್ ತಜ್ಜೀವನಂ ಮೇಽಸ್ತ್ವಧಿಕಂ ಸಮಸ್ತಾತ್ ॥''**

*-ಮ.ತಾ.ನಿ. ಅ-8-246*

ಇದು ಹನುಮಂತದೇವರು ರಾಮದೇವರಲ್ಲಿ ಬೇಡಿದ ವರ. ಭಗವತ್ಕಥಾ ಸೇವಕನಾಗಿ ಭಕ್ತಿಯಿಂದ ಬದುಕುವುದೇ ನಿಜವಾದ ಜೀವನ. ಭಕ್ತಿಯಿಂದ ಭಗವತ್ಕಥಾಶ್ರವಣ ಮಾಡದವನು ಬದುಕಿದ್ದರೂ ಸತ್ತವನೇ ಸರಿ. ಭಗವತ್ಕಥೆಯೇ ಉಸಿರು ಎಂದು ಹನುಮಂತದೇವರ ಅಭಿಪ್ರಾಯ.

ಭಗವತ್ಕಥಾಶ್ರವಣ-ಕಥನವಿಲ್ಲದ ಒಂದೊಂದು ಕ್ಷಣವೂ ವ್ಯರ್ಥವೇ ಸರಿ - **''ತಸ್ಯರ್ತೇ ಯಃ ಕ್ಷಣೋ ನೀತ ಉತ್ತಮಶ್ಲೋಕವಾರ್ತಯಾ''** -ಭಾ-I-3-17

**ಶ್ರವಣ ಮನಕಾನಂದವೀವುದು**
**ಭವಜನಿತದುಃಖಗಳ ಕಳೆವುದು**
**ವಿವಿಧಭೋಗಗಳಿಹಪರಂಗಳಲಿಟ್ಟು ಸಲಹುವುದು ।**
**ಭುವನಪಾವನನೆನಿಪ ಲಕುಮೀ-**
**ಧವನ ಮಂಗಳ ಕಥೆಯು ಪರಮೋ-**
**ತ್ಸವದಿ ಕಿವಿಗೊಟ್ಟಾಲಿಪುದು ಭೂಸುರರು ಪ್ರತಿದಿನದಿ ॥** *ಹರಿಕಥಾಮೃತಸಾರ 2-1*

ಇಲ್ಲಿ ಭೂಸುರರು ಎನಿಸಿದ ಬ್ರಾಹ್ಮಣರು ಭಗವತ್ಕಥಾಶ್ರವಣದ ಹೊಣೆಯನ್ನು ಹೊತ್ತು ಇತರರಿಗೂ ಶ್ರವಣ ಮಾಡಿಸುವ ಹೊಣೆಯನ್ನು ಹೊರಬೇಕು ಎನ್ನುವ ದೃಷ್ಟಿಯಿಂದ ದಾಸರು 'ಭೂಸುರ'ರೆಂದು ಉಲ್ಲೇಖಿಸಿದ್ದಾರೆ. ಹೀಗಾಗಿ ಇತರರಿಗೆ ಶ್ರವಣ ಬೇಕಿಲ್ಲವೆಂದು ಸರ್ವಾತ್ಮನಾ ಅರ್ಥೈಸಬಾರದು.

ಭಗವಂತ-ಭಗವದ್ಭಕ್ತರ ಕಥೆಗಳು, ತೀರ್ಥಕ್ಷೇತ್ರಗಳ ಮಾಹಾತ್ಮ್ಯ ಕಥೆಗಳು, ವ್ರತ-ನಿಯಮಗಳ ಮಹತ್ತ್ವದ ಕಥೆಗಳು ಹಾಗೂ ಪ್ರಸಿದ್ಧ ಮಹಾಭಾರತ-ಭಾಗವತಾದಿ ಕಥೆಗಳನ್ನು ಭಾರತ-ಭಾಗವತ-ಇನ್ನಿತರ ಪುರಾಣಾದಿಗಳಿಂದ ಸಂಗ್ರಹಿಸಿ "**ಒಂದು ಸಾವಿರ ಕಥೆಗಳು**" ಎಂಬ ಶೀರ್ಷಿಕೆಯಲ್ಲಿ ದಿವಂಗತ ಶ್ರೀ ಕೊಯಮತ್ತೂರು ವಾದಿರಾಜಾಚಾರ್ಯರು ಬರೆದಿದ್ದಾರೆ. ಇವರು ನಮ್ಮ ಗುರುಗಳಾದ ಪ್ರಾತಃಸ್ಮರಣೀಯರಾದ ಶ್ರೀ ವಿದ್ಯಾಮಾನ್ಯತೀರ್ಥರ ಅತ್ಯಂತ ಪ್ರೀತಿಗೆ ಪಾತ್ರರಾದ "ಶ್ರದ್ಧಾಳು ಶಿಷ್ಯರು". ಅವರು ಬರೆದ ಸಾವಿರ ಕಥೆಗಳಲ್ಲಿ ಸುಮಾರು 670 ಕಥೆಗಳು ಉಪಲಬ್ಧವಾಗಿವೆ. ಅವುಗಳನ್ನು ಅವರ ಪುತ್ರರಾದ ದಿವಂಗತ ಶ್ರೀ ರಾಮಚಂದ್ರ ಭಟ್ಟರಿಂದ ನಾವು ಸ್ವಾಧೀನಪಡಿಸಿಕೊಂಡು ಸುರಕ್ಷಿತವಾಗಿ ಇಟ್ಟಿದ್ದೆವು. ಇದೀಗ ಗುರುಗಳ ಜನ್ಮಶತಮಾನೋತ್ಸವ ಹಾಗೂ ನಮ್ಮ ಷಷ್ಟ್ಯಬ್ದ ಮಹೋತ್ಸವದ ಶುಭಸಂದರ್ಭದಲ್ಲಿ ಪ್ರಕಟವಾಗುತ್ತಿರುವುದು ಶುಭಯೋಗವೇ ಸರಿ.

ನಮ್ಮಲ್ಲಿ ಸುಧಾಪಾಠ ಕೇಳುತ್ತಿರುವ ನಮ್ಮ ಶಿಷ್ಯರಾದ ಶ್ರೀ ವೇದಗರ್ಭ ಶೇಷಗಿರಿಯವರಿಗೆ ಈ ಕಥೆಗಳ ಪ್ರಕಾಶನ ಪ್ರಸ್ತಾವವನ್ನು ಮಾಡಿದೆವು. ಪ್ರಕಾಶನ ಹಂತಕ್ಕೆ ತಲುಪಿಸಲು ಮಾಡಬೇಕಾದ ಗ್ರಂಥಸಂಪಾದನ-ಸಂವೀಕ್ಷಣ-ಕಥಾ ಸಂಯೋಜನೆ, ಕರಡು ಪ್ರತಿ ತಿದ್ದುವುದು, ಗಣ್ಯ ವ್ಯಕ್ತಿಗಳ ಅಭಿಪ್ರಾಯ ಸಂಗ್ರಹ ಮುಂತಾದ ಕಾರ್ಯಗಳನ್ನು ತುಂಬಾ ಶ್ರದ್ಧೆಯಿಂದ ಅವರು ಮಾಡಿದ್ದಾರೆ. ಅವರಿಗೆ ಈ ಸಂದರ್ಭದಲ್ಲಿ ವಿಶೇಷ ವಾಗಿ ಹರಿಗುರುಗಳ ಕೃಪಾಕಟಾಕ್ಷಕವಚವನ್ನು ಹಾರೈಸುತ್ತಾ ಅಭಿನಂದಿಸುತ್ತೇವೆ.

ಮುದ್ರಣಾಲಯದಲ್ಲಿ ಮುದ್ರಣಕಾರ್ಯವು ಸುಗಮವಾಗಿ ಆಗುವಂತೆ ಪಾತ್ರ ವಹಿಸಿದ ನಮ್ಮ ಶಿಷ್ಯನಾದ ಶ್ರೀನಿಧಿ ವಾಸಿಷ್ಠನನ್ನು ಅಭಿನಂದಿಸುತ್ತೇವೆ. ಕಲಾವಿದ ರಾದ ಶ್ರೀ ಶೇಷಗಿರಿಯವರು ರಕ್ಷಾಪುಟದ ವಿನ್ಯಾಸವನ್ನು ಹೃದಯಂಗಮವಾಗಿ ಮಾಡಿ ಅಭಿನಂದನಾರ್ಹವಾಗಿದ್ದಾರೆ. ಪ್ರಕಾಶನ ವೆಚ್ಚವನ್ನು ಟ್ರಸ್ಟಿನ ಮೂಲಕ ನೀಡಿದ ಉದ್ಯಮಿ ಶ್ರೀ ರಾಮಪ್ರಸಾದ, ಚೆನ್ನೈ ಇವರನ್ನು ಹರಿಗುರುಗಳ ಅನುಗ್ರಹ ಪ್ರಾರ್ಥನೆ ಯೊಂದಿಗೆ ಅಭಿನಂದಿಸುತ್ತಿದ್ದೇವೆ. ಕನ್ನಡ ಸಾಹಿತ್ಯದ ಹರವಿನ ದೃಷ್ಟಿಯಲ್ಲಿ ಈ ಕೃತಿಯನ್ನು ಅವಲೋಕಿಸಿ, ತಮ್ಮ ಮೆಚ್ಚುಗೆಯನ್ನು ನೀಡಿರುವ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಪುಂಡಲೀಕ ಹಾಲಂಬಿಯವರನ್ನು ಹಾಗೂ ಕನ್ನಡ ಸಾಹಿತ್ಯದ ಹಿರಿಯ ತಜ್ಞರಾದ ಪ್ರೊ. ಜಿ. ವೆಂಕಟಸುಬ್ಬಯ್ಯ, ಡಾ. ಎಂ. ಚಿದಾನಂದ ಮೂರ್ತಿಯವರನ್ನು ನಾವು ಅಭಿನಂದಿಸುತ್ತೇವೆ.

ಶ್ರೀ ಐತರೇಯ ಶೋಧ-ಪ್ರಕಾಶನ ಪೀಠ, ಶ್ರೀ ಭಂಡಾರಕೇರಿ ಮಠದಿಂದ ಮೂರನೆಯ ಪ್ರಕಟಣೆಯಾಗಿ "**ಭಗವತ್ಕಥಾತರಂಗ -1**" ಪ್ರಕಟವಾಗುತ್ತಿದೆ. ಈ ಹಿಂದೆ ವಿರೋಧೋದ್ಧಾರ ಹಾಗೂ ಸೂತ್ರಾರ್ಥಮಣಿಮಂಜರಿ (1-2 ಅಧ್ಯಾಯ ಗಳ ಮೊದಲ ಸಂಪುಟ) ಗ್ರಂಥಗಳು ಪ್ರಕಟವಾಗಿದ್ದವು.

ಸದ್ಭಕ್ತರು-ಜಿಜ್ಞಾಸುಗಳು ಇದರ ಸದುಪಯೋಗವನ್ನು ಪಡೆದು ಭಾರತೀಯ ಧರ್ಮ-ಸಂಸ್ಕೃತಿ-ಸಂಸ್ಕಾರಗಳಿಂದ ದೂರವಾಗುತ್ತಿರುವ ಬಾಲ-ಯುವವರ್ಗಕ್ಕೆ ಇದನ್ನು ತಲುಪಿಸಲಿ. ಅವರು ಭಾರತಮಾತೆಯ ಹೆಮ್ಮೆಯ ಸುಪುತ್ರ-ಸುಪುತ್ರಿಯ ರಾಗಿ ಉಜ್ಜ್ವಲವಾಗಿ ಬಾಳುವುದಕ್ಕೆ ಈ ಸತ್ಕಥೆಯು ಉತ್ತಮ ಪ್ರೇರಣೆ-ಸಂಸ್ಕಾರ ಗಳನ್ನು ನೀಡಲಿ ಎಂದು ಹಾರೈಸುತ್ತೇವೆ.

ಇತಿ ಶ್ರೀಮನ್ನಾರಾಯಣಸ್ಮರಣೆಗಳು

**ಶ್ರೀ ವಿದ್ಯೇಶತೀರ್ಥರು**

ಶ್ರೀಭಂಡಾರಕೇರಿ ಮಠ

## ಬನ್ನಂಜೆ ಶ್ರೀ ರಾಘವೇಂದ್ರತೀರ್ಥ ಶ್ರೀಪಾದಂಗಳವರು

ಬನ್ನಂಜೆ ಮಠ, ಉಡುಪಿ-676 101

# ಕೊಯಮತ್ತೂರು ವಾದಿರಾಜಾಚಾರ್ಯರು

ಕೊಯಮತ್ತೂರು ವಾದಿರಾಜಾಚಾರ್ಯರು ನಮ್ಮ ಪೂರ್ವಾಶ್ರಮದ ದೊಡ್ಡಪ್ಪನವರು. ಇವರು ಉಡುಪಿಯವರಾಗಿದ್ದರೂ ಕೊಯಮತ್ತೂರಿನಲ್ಲಿ ಬಹಳ ವರ್ಷ ಪಾಠ ಪ್ರವಚನ ನೆರವೇರಿಸಿಕೊಂಡು ಬಂದುದರಿಂದ 'ಕೊಯಮತ್ತೂರಿನ ವಾದಿರಾಜಾಚಾರ್ಯ'ರೆಂದೇ ಪ್ರಸಿದ್ಧರಾದರು.

'ನ್ಯಾಯಶಿರೋಮಣಿ'ಯಾಗಿರುವ ಇವರು ಶ್ರೀ ವಿದ್ಯಾಮಾನ್ಯತೀರ್ಥರಲ್ಲಿ 'ಶ್ರೀಮನ್ನ್ಯಾಯಸುಧಾ'ದಿ ಗ್ರಂಥಗಳನ್ನು ಅಧ್ಯಯನ ಮಾಡಿ ಗುರುಗಳ ಆದೇಶದಂತೆ ಕೊಯಮತ್ತೂರಿನಲ್ಲಿನ ತಾಮ್ರಪರ್ಣಿ ಸುಬ್ಬಾಚಾರ್ಯರಿಗೆ ತರ್ಕಪಾಠ ಹೇಳುತ್ತಿದ್ದರು. ಉಳಿದವರಿಗೆ ಬೇರೆಬೇರೆ ಪಾಠಗಳನ್ನು ಹೇಳುತ್ತಿದ್ದರು.

12 ಸುಧಾ ಮಂಗಳ, 108 ಶ್ರೀಮದ್ಭಾಗವತ ಸಪ್ತಾಹಗಳನ್ನು ನೆರವೇರಿಸಿರುವ ಇವರು ಮಹಾಭಾರತ, ರಾಮಾಯಣ, ಹರಿವಂಶಾದಿಗಳಲ್ಲಿ ಕತೆಗಳನ್ನು ಹೇಳುತ್ತಿದ್ದರು. ಅವುಗಳನ್ನು ಬರೆದು ಇಡುತ್ತಿದ್ದರು.

ಉಡುಪಿಯ ಸಂಸ್ಕೃತ ಪಾಠಶಾಲೆಯಲ್ಲಿ ಓದುತ್ತಿದ್ದಾಗ ಶ್ರೀ ಶ್ರೀ ಸತ್ಯಪ್ರಮೋದರು ಪೂರ್ವಾಶ್ರಮದ ಬಾಲ್ಯದಲ್ಲಿ ಇವರ ಗೆಳೆಯರಾಗಿದ್ದರು. ಶಾಲೆಗೆ ಹೋಗುವಾಗ, ಭೋಜನಶಾಲೆಗೆ ಹೋಗುವಾಗ, ಮನೆಗೆ ಬರುವಾಗ, ಆಟವಾಡುವಾಗ ಚಿಂತನ–ಮನನ ಮಾಡುವಾಗ ಜೊತೆ ಜೊತೆಯಲ್ಲಿ ಇರುತ್ತಿದ್ದರು. ಈ ಗೆಳೆತನ ಕೊನೇತನಕವೂ ಇತ್ತು.

ಇವರ ಬುದ್ಧಿ ಅತಿ ತೀಕ್ಷ್ಣವಾಗಿತ್ತು. ಅಪಾರ ಪ್ರತಿಭಾವಂತರಾಗಿದ್ದರು. ಇದನ್ನು ಗುರುತಿಸಿದ ಪಾಠಶಾಲೆಯವರು ಒಂದನೇ ತರಗತಿಯಿಂದ ಮೂರನೇ ತರಗತಿಗೂ, ಅಲ್ಲಿಂದ ಐದನೇ ತರಗತಿಗೂ, ಅಲ್ಲಿಂದ ಏಳನೇ ತರಗತಿಗೂ, ಅಲ್ಲಿಂದ ಒಂಬತ್ತನೇ ತರಗತಿಗೂ ಹಾಕುತ್ತಿದ್ದರು. ಆಗಿನ ಶಿಕ್ಷಣ ಪದ್ಧತಿ ಹಾಗಿತ್ತು. ಕಿರುವಯಸ್ಸಿನಲ್ಲೇ **'ನ್ಯಾಯಶಿರೋಮಣಿ'**ಯಾದರು.

ಶ್ರೀ ವಿದ್ಯಾಮಾನ್ಯರು ಶ್ರೀ ಸತ್ಯಧ್ಯಾನರಲ್ಲಿ ವ್ಯಾಸಂಗಕ್ಕೆ ಬಂದಿದ್ದಾಗ ಇವರ ಜೊತೆಯಲ್ಲೇ ಇರುತ್ತಿದ್ದರು. ಶ್ರೀ ಸತ್ಯಧ್ಯಾನರ ದಿವಾನರಾಗಿದ್ದ ಪಾಂಡುರಂಗಿ

ಜಯಾಚಾರ್ಯರು ಇವರ ಪ್ರತಿಭೆಯನ್ನು ಗುರುತಿಸಿ 'ತರ್ಕ ತಾಂಡವ' ಪಾಠವನ್ನು ಹೇಳಿ ಮುಗಿಸಿದರು. ನ್ಯಾಯಶಿರೋಮಣಿಯಾಗಿದ್ದರಿಂದ ಪಾಠ ಬೇಗ ಅರ್ಥವಾಗುತ್ತಿತ್ತು. ಪರೀಕ್ಷೆಯಲ್ಲಿ ನೂರಕ್ಕೆ ನೂರು ಅಂಕ.

ಸಹ ವಿದ್ಯಾರ್ಥಿಗಳಿಗೆ ಬೇರೆ ಬೇರೆ ಗ್ರಂಥಗಳ ಚಿಂತನೆ–ಮನನ ಮಾಡಿಸುತ್ತಿದ್ದ ಕಾರಣ ಎಲ್ಲ ಪಾಠಗಳೂ ಕಂಠಸ್ಥ ಬುದ್ಧಿಸ್ಥವಾಗುತ್ತಿತ್ತು. ಹೀಗಾಗಿ ಎಲ್ಲ ಪರೀಕ್ಷೆಯಲ್ಲಿ ನೂರಕ್ಕೆ ನೂರು ಅಂಕ ಸಿಗುತ್ತಿದ್ದವು. ಶ್ರೀ ಸತ್ಯಧ್ಯಾನರು ಇದನ್ನು ಗಮನಿಸುತ್ತಿದ್ದರು. ತಾವು ಪರೀಕ್ಷೆ ಮಾಡಿ ಸಂತೋಷಪಡುತ್ತಿದ್ದರು.

ಒಮ್ಮೆ ಸತ್ಯಧ್ಯಾನರು ವಾದಿರಾಜಾಚಾರ್ಯರನ್ನು ಕರೆದು ಕೇಳಿದರು.

''ಮದುವೆ ಯಾಕೆ ಮಾಡಿಕೊಳ್ಳಲ್ಲವೋ''

''ದುಡ್ಡಿಲ್ಲ ಅದಕ್ಕೆ ಮಾಡಿಕೊಳ್ಳಲ್ಲ''

''ಎಷ್ಟು ದುಡ್ಡು ಬೇಕು''

''ನೂರು ರೂಪಾಯಿಯಾದರೂ ಬೇಕಾಗುತ್ತೆ''

''ದುಡ್ಡು ಕೊಟ್ಟರೆ ಮದುವೆ ಮಾಡಿಕೊಳ್ಳುತ್ತೀಯಾ?''

''ಹೂಂ''

''ಇಗೋ, ನೂರು ರೂಪಾಯಿ ಮದುವೆ ಮಾಡಿಕೊಂಡು ಬಾ''

ನೂರು ರೂಪಾಯಿಯಲ್ಲಿ ವಾದಿರಾಜಾಚಾರ್ಯರೂ ಮದುವೆಯಾಗಿ, ಉಳಿದ ಹಣದಲ್ಲಿ ಅವರ ತಮ್ಮ ಗೋಪಾಲಕೃಷ್ಣಾಚಾರ್ಯರ ಉಪನಯನವೂ ಆಯಿತು. (ಇವರ ತಮ್ಮ ಪೂರ್ವಾಶ್ರಮದ ತಂದೆ)

ಹಿಂದೆಲ್ಲ ಸ್ವಾಮಿಗಳವರ ಉಪನ್ಯಾಸ ಮಾಡುವ ಪದ್ಧತಿ ಇದ್ದಿಲ್ಲ. ವಾಕ್ಯಾರ್ಥ, ಪಾಠಪ್ರವಚನ ಮಾತ್ರ ನಡೆಸುತ್ತಿದ್ದರು. ಕೆಲವು ಪಂಡಿತರು ಮಾತ್ರ ಉಪನ್ಯಾಸ ಮಾಡುತ್ತಿದ್ದರು.

ಒಂದುದಿನ ವಾದಿರಾಜಾಚಾರ್ಯರು ಶ್ರೀ ವಿದ್ಯಾಮಾನ್ಯತೀರ್ಥ ಗುರುಗಳಲ್ಲಿ ಬಂದು ''ಸ್ವಾಮೀ ತಾವ್ಯಾಕೆ ಉಪನ್ಯಾಸ ಮಾಡಬಾರದು?'' ಎಂದು ಕೇಳಿದರು.

''ಏನು ಉಪನ್ಯಾಸ ಮಾಡುವುದು? ಯಾರು ಕೇಳುತ್ತಾರೆ''

''ಯಾಕೆ ಕೇಳೋಲ್ಲ? ನಾನು ಮನೆ ಮನೆಗೆ ಹೋಗಿ ಜನರನ್ನು ಬರಲಿಕ್ಕೆ ಹೇಳುತ್ತೇನೆ. ಭಗವದ್ಗೀತೆ, ಸಂಧ್ಯಾವಂದನೆ, ದೇವರಪೂಜೆ, ಆಚಾರ–ವಿಚಾರ,

ಏಕಾದಶಿ ಮಹತ್ವ, ಸ್ತ್ರೀಧರ್ಮ ಇವುಗಳ ಬಗ್ಗೆ ಹೇಳಬಹುದು. ಸಣ್ಣ ಸಣ್ಣ ಕತೆಗಳನ್ನು ಹೇಳಬಹುದು. ಸ್ವಾಮಿಗಳ ಉಪನ್ಯಾಸ ಮಾಡುತ್ತಾರೆಂದರೆ ಜನರು ಕುತೂಹಲ ದಿಂದ ಬರುತ್ತಾರೆ.

ಸ್ವಾಮಿಗಳಿಗೆ ಸರಿ ಎಂದನಿಸಿತು. ಆದಿನ ಮಾಡಬೇಕಾದ ಉಪನ್ಯಾಸದ ಸಿದ್ಧತೆ ಮಾಡಿಕೊಂಡರು. ಜನರು ಬಂದು ಸೇರಿದರು. ಉಪನ್ಯಾಸ ತುಂಬಾ ಚೆನ್ನಾಗಿ ಮೂಡಿಬಂದಿತು.

ಅನಂತರ ಇತಿಹಾಸ.

ಅದುವರೆಗೆ ವಿದ್ಯಾರ್ಥಿಗಳಿಗೆ, ಪಂಡಿತರಿಗೆ ಮಾತ್ರ ಅರ್ಥವಾಗುವಂತೆ ಪಾಠ ಪ್ರವಚನ, ವಾಕ್ಯಾರ್ಥ ಮಾಡುತ್ತಿದ್ದ ಸ್ವಾಮಿಗಳು, ಪಾಮರರಿಗೆ ಅರ್ಥವಾಗುವಂತೆ ಉಪನ್ಯಾಸ ಮಾಡಲು ಆರಂಭ ಮಾಡಿ ಕ್ರಾಂತಿಯನ್ನೇ ಮಾಡಿದರು.

ಶ್ರೀ ಸತ್ಯಧ್ಯಾನರು ನಡೆಸುತ್ತಿದ್ದ ವಿದ್ವತ್ ಸಭೆಗಳನ್ನು ಸೂಕ್ಷ್ಮವಾಗಿ ಗಮನಿಸುತ್ತಿದ್ದ ವಾದಿರಾಜಾಚಾರ್ಯರು ಶ್ರೀ ವಿದ್ಯಾಮಾನ್ಯ ಗುರುಗಳಲ್ಲಿ ಬಂದರು.

''ಸ್ವಾಮಿ ತಾವು ಯಾಕೆ ವಿದ್ವತ್ ಸಭೆಗಳನ್ನು ನಡೆಸಬಾರದು? ಅದಕ್ಕೆ ಸ್ವಾಮಿಗಳು ಹೇಳಿದರು ''ಅದಕ್ಕೆ ನಿಧಿ ಸಂಗ್ರಹವಾಗಬೇಕು. ಪಂಡಿತರು ಬರಬೇಕು. ಪ್ರಚಾರ ಮಾಡಬೇಕು. ಬೇಕಾದ ಏರ್ಪಾಟು ಆಗಬೇಕು. ಇವೆಲ್ಲ ನಮ್ಮ ಕೈಯಲ್ಲಾಗುತ್ತಾ? ಎಂದರು. ಅದಕ್ಕೆ ಆಚಾರ್ಯರು ''ಯಾಕೆ ಆಗೋಲ್ಲ? ನಾವೆಲ್ಲ ಒಬ್ಬೊಬ್ಬರು ಒಂದೊಂದು ಕೆಲಸ ಹಂಚಿಕೊಂಡು ಮಾಡುತ್ತೇವೆ.

ಸಭೆಯ ನಿಯಮಾವಳಿಯನ್ನು (ರೂಲ್ಸ್ ಅಂಡ್ ರೆಗ್ಯುಲೇಷನ್ಸ್) ನಾನು ಬರೆದುಕೊಡುತ್ತೇನೆ ಎಂದರು ಆಚಾರ್ಯರು. ಸ್ವಾಮಿಗಳು ಸಮ್ಮತಿಸಿದರು. ಅಂದುಕೊಂಡಂತೆ ಸಭೆಯೂ ಆಯಿತು. ನಂತರ ಪ್ರತಿವರ್ಷವೂ ವೈಭವದಿಂದ ಸಭೆ ನಡೆಯುತ್ತಿದ್ದುದು ಇತಿಹಾಸ. ಈರೀತಿ ಎಲೆಮರೆಕಾಯಾಗಿ ವಾದಿರಾಜಾಚಾರ್ಯರ ಕೊಡುಗೆ ಅಪಾರ.

'ಪಾಠ ಪ್ರವಚನದಿಂದಲೇ ಸಕಲತೀರ್ಥ ಕ್ಷೇತ್ರಯಾತ್ರೆಯ ಫಲ ಸಿಗುತ್ತೆ' ಎಂಬುದರಲ್ಲಿ ದೃಢವಿಶ್ವಾಸ ಆಚಾರ್ಯರಲ್ಲಿತ್ತು. ಆದ್ದರಿಂದಲೇ ಬದರಿ–ಕಾಶಿ–ರಾಮೇಶ್ವರಗಳಿಗೆ ಕೊನೇತನಕ ಹೋಗ್ಲೇ ಇಲ್ಲ. ತುಲಾಕಾವೇರಿ ಸ್ನಾನಕ್ಕಾಗಿ ಶ್ರೀರಂಗಕ್ಕೆ ವರ್ಷಕ್ಕೊಂದು ಸಲ ಹೋಗುತ್ತಿದ್ದರಷ್ಟೆ. ಹರಿವಾಯುಸ್ತುತಿ ಪುನಶ್ಚರಣೆ ಯಿಂದ ಹಲವಾರು ಜನರ ಕಷ್ಟ ಪರಿಹರಿಸುತ್ತಿದ್ದರು. ಮಹಾಭಾರತ ತಾತ್ಪರ್ಯ ನಿರ್ಣಯ ಪ್ರಶ್ನೆ ನೋಡಿ ಅನೇಕರ ಸಮಸ್ಯೆಗಳಿಗೆ ಪರಿಹಾರ ಹೇಳುತ್ತಿದ್ದರು.

''ಪ್ರವಚನ ಪರಂಪರೆ ಉಳಿಯಬೇಕು. ಅದರಿಂದಲೇ ಧರ್ಮ ಜಾಗೃತಿ ಸಾಧ್ಯ'' ಎಂದು ನಂಬಿದ್ದರು. ಅದಕ್ಕಾಗಿ ನೂರಾರು–ಸಾವಿರಾರು ಕಿರು ಉಪನ್ಯಾಸ ಗಳನ್ನು, ಕತೆಗಳನ್ನು ಬರೆದಿಡುತ್ತಿದ್ದರು. ನಮ್ಮಿಂದ ಓದಿಸುತ್ತಿದ್ದರು. ಕಂಠಪಾಠ ಮಾಡಿಸುತ್ತಿದ್ದರು–ಸಭೆಗಳಲ್ಲಿ ಹೇಳಿಸುತ್ತಿದ್ದರು.

ಪ್ರವಚನ ಪರಂಪರೆ ತನ್ನಲ್ಲೇ ನಿಂತುಬಿಡುತ್ತದಲ್ಲಾ ಎಂಬ ಕೊರಗು ಅವರಲ್ಲಿತ್ತು. ಒಮ್ಮೆ ನಮ್ಮ ಹತ್ತಿರ ''ಭಾಗವತ ಪ್ರವಚನ ಪರಂಪರೆ ನಮ್ಮೊಂದಿಗೆ ನಿಂತು ಹೋಯಿತಲ್ಲಾ ಎಂದು ಕೊರಗುತ್ತಿದ್ದೆ. ದೇವರು ನಿಮ್ಮ ಮೂಲಕ ಮುಂದುವರೆಯುವಂತೆ ಮಾಡಿದ. ಭಾಗವತ ದೀಪ ನನ್ನೊಂದಿಗೆ ನಿಂತು ಹೋಗಿಲ್ಲ. ನಿಮ್ಮ ಹೃದಯದಲ್ಲಿ ಹತ್ತಿಕೊಂಡು ಮುಂದುವರಿಯುತ್ತಿದೆ. ಈಗ ಸಮಾಧಾನ ವಾಯಿತು'' ಎಂದಿದ್ದರು. ನಮ್ಮಲ್ಲಿ ಧನ್ಯತಾ ಭಾವನೆ ಮೂಡಿತು. ನಿಜ ಹೇಳ ಬೇಕಾದರೆ ಅವರ ಭಾಗವತ ಸಪ್ತಾಹ ಕೇಳಿಯೇ ನಾವು ಮನಃಪರಿವರ್ತನೆಗೊಂಡು ಸನ್ಯಾಸಿಯಾದದ್ದು. ಭಾಗವತ ಸಿದ್ಧಿ ಅವರಲ್ಲಿತ್ತು.

ಇಂತಹ ವಾದಿರಾಜಾಚಾರ್ಯರು ಬರೆದಿಟ್ಟ **'ಸಾವಿರ ಕತೆ'**ಗಳನ್ನು ಪರಮ ಪೂಜ್ಯ ಭಂಡಾರಕೇರಿ ಮಠಾಧೀಶರಾದ ಶ್ರೀಶ್ರೀ ವಿದ್ಯೇಶತೀರ್ಥ ಗುರುಗಳು ಪ್ರಕಟಿಸಿ ಪರಮಾನುಗ್ರಹ ಮಾಡುತ್ತಿದ್ದಾರೆ. ವಾದಿರಾಜಾಚಾರ್ಯರ ಪರವಾಗಿ, ಅವರ ಮಕ್ಕಳ ಪರವಾಗಿ, ವೈಯಕ್ತಿಕವಾಗಿ ಕೃತಜ್ಞತಾಪೂರ್ವಕ ಅನಂತ ಕೋಟಿ ಪ್ರಣಾಮಗಳನ್ನು ಶ್ರೀಗಳವರಿಗೆ ಸಮರ್ಪಿಸುತ್ತಿದ್ದೇವೆ. ಸಜ್ಜನರು ಇದರ ಲಾಭ ಹೊಂದುವಂತಾಗಲಿ.

ನಾರಾಯಣ ಸ್ಮರಣೆಗಳು

**ಬನ್ನಂಜೆ ಶ್ರೀ ರಾಘವೇಂದ್ರತೀರ್ಥ ಶ್ರೀಪಾದಂಗಳವರು**

## ಕನ್ನಡ ಸಾಹಿತ್ಯ ಪರಿಷತ್ತು

ಪಂಪ ಮಹಾಕವಿ ರಸ್ತೆ ಚಾಮರಾಜಪೇಟೆ ಬೆಂಗಳೂರು-೫೬೦ ೦೧೮

ದೂ : ೨೬೬೧೨೯೯೧, ೨೬೬೨೩೫೮೪ ಫ್ಯಾಕ್ಸ್ : ೨೨೪೨೩೮೬೭


ಸ್ಥಾಪನೆ ೧೯೧೫ ಕ್ರಮಸಂಖ್ಯೆ: ಕಸಾಪ/ದಾಖಲೆ/೨೦೧೩-೧೪

ದಿನಾಂಕ: ೧೨-೦೩-೨೦೧೪

ಇವರಿಂದ
**ಪುಂಡಲೀಕ ಹಾಲಂಬಿ**
ಅಧ್ಯಕ್ಷರು

ಇವರಿಗೆ
**ಪೂಜ್ಯ ಶ್ರೀ ಶ್ರೀ ಶ್ರೀ ವಿದ್ಯೇಶತೀರ್ಥ ಶ್ರೀಪಾದರು**
ಭಂಡಾರಕೆರೆ ಮಠ, ಉಡುಪಿ

ಪೂಜ್ಯರೇ,

ತಮ್ಮ ಪತ್ರ ಡಾ.ಶೇಷಗಿರಿಆಚಾರ್ಯರ ಮೂಲಕ ತಲುಪಿತು. ತಮ್ಮ ಮಠದಿಂದ ಪ್ರಕಾಶಿತವಾಗಲಿರುವ "**ಸಾವಿರ ಕಥೆಗಳು**" ಇದರ ಕೆಲವು ಮಾದರಿ ಕಥೆಗಳನ್ನು ಅವಲೋಕಿಸಿದೆ. ಸುಂದರವಾದ ಕನ್ನಡ ಗದ್ಯದಲ್ಲಿ ದಿ|| ಕೊಯ ಮತ್ತೂರು ವಾದಿರಾಜಾಚಾರ್ಯರು ಅವರು ಬರೆದ ಈ ಕಥಾಸಂಕಲನ ಕನ್ನಡಿಗರಿಗೆ ತುಂಬಾ ಉಪಯುಕ್ತವಾಗಿದೆ. ವಿಶೇಷವಾಗಿ ಮಕ್ಕಳಿಗೆ ಹಾಗೂ ಮಹಿಳೆಯರಿಗೆ ಪುರಾಣ, ಮಹಾಭಾರತ, ರಾಮಾಯಣಗಳಲ್ಲಿ ಬಂದಿರುವ ಕಥೆಗಳಲ್ಲಿ ಬಂದಿರುವ ವಿಷಯ ಸಂದೇಶದಿಂದ ಕೂಡಿದೆ.

ಕೃತಿ ಉತ್ತಮವಾಗಿ ಲೋಕಾರ್ಪಣೆಗೊಂಡು ಜನರಿಗೆ ತಲುಪಲಿ ಎಂದು ನಿಮ್ಮಲ್ಲಿ ನಮಸ್ಕಾರಗಳೊಂದಿಗೆ ಪ್ರಾರ್ಥಿಸುತ್ತೇನೆ.

ಇಂತಿ ನಮಸ್ಕಾರಗಳು

ತಮ್ಮ ವಿಶ್ವಾಸಿ
ಸಹಿ
**(ಪುಂಡಲೀಕ ಹಾಲಂಬಿ)**
ಅಧ್ಯಕ್ಷರು

**ಪ್ರೊ.ಜಿ.ವೆಂಕಟಸುಬ್ಬಯ್ಯ** ಎಂ.ಎ ಬಿ.ಟಿ
ನಂ. 58,31ನೆ ಕ್ರಾಸ್, 7ನೆ ಬ್ಲಾಕ್, ಜಯನಗರ, ಬೆಂಗಳೂರು 560 070
ದೂ : 080-26649232
ನಿವೃತ್ತ ಪ್ರಾಧ್ಯಾಪಕರು ವಿಜಯ ಕಾಲೇಜು ಬೆಂಗಳೂರು
ನಿವೃತ್ತ ಪ್ರಾಂಶುಪಾಲರು ವಿಜಯ ಸಂಜೆ ಕಾಲೇಜು ಬೆಂಗಳೂರು
ಮಾಜಿ ಅಧ್ಯಕ್ಷರು ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು
ಮಾಜಿ ಅಧ್ಯಕ್ಷರು ಹಾಗೂ ಪ್ರಧಾನ ಸಂಪಾದಕರು ಬೃಹತ್ ಕನ್ನಡ-ಕನ್ನಡ ನಿಘಂಟು
ಅಧ್ಯಕ್ಷರು ಶ್ರೀ ರಾಮಕೃಷ್ಣ ಸ್ಟೂಡೆಂಟ್ಸ್ ಹೋಂ

ಡಾ|| ವೇದಗರ್ಭ ಜಿ. ಶೇಷಗಿರಿರಾಯರಲ್ಲಿ ವಿಜ್ಞಾಪನೆಗಳು

ಸನ್ಮಾನ್ಯ ಶ್ರೀ ಶ್ರೀ ಶ್ರೀ ವಿದ್ಯೇಶತೀರ್ಥ ಮಹಾಸ್ವಾಮಿಗಳಿಗೆ ನನ್ನ ಸಾಷ್ಟಾಂಗ ಪ್ರಣಾಮಗಳನ್ನು ತಿಳಿಸಿ. ತಾವು ನನಗೆ ಕೊಟ್ಟ ಕೆಲವು ಜ಼ೆರಾಕ್ಸ್ ಪುಟಗಳನ್ನು ಆಳವಾಗಿ ಪರಿಶೀಲಿಸಿದ್ದೇನೆ. ತಾವು ತಿಳಿಸಿದ ಸಾವಿರಕಥೆಗಳ ಸಂಬಂಧದ ಈ ಬರವಣಿಗೆಯನ್ನು ಮಾಡಿರುವವರು ನಿಜವಾಗಿ ರಾಮಾಯಾಣ, ಮಹಾಭಾರತ, ಭಾಗವತ ಮತ್ತು ಎಲ್ಲ ಮಹಾಪುರಾಣಗಳನ್ನು ಓದಿ ಜೀರ್ಣಿಸಿಕೊಂಡಿರುವ ವಿದ್ವಾಂಸರಾಗಿರಬೇಕು. ಈ ಪುಸ್ತಕಗಳಲ್ಲಿರುವ ಎಲ್ಲ ಬರಹಗಳೂ ಜನೋಪಯೋಗಿ ದೃಷ್ಟಿಯಿಂದ ರಚಿತವಾಗಿದೆ. ಎಲ್ಲಿಯೂ ಲೇಖಕರು ತಮ್ಮ ವಿದ್ವತ್ತನ್ನು ಪ್ರದರ್ಶಿಸಲು ಪ್ರಯತ್ನಪಟ್ಟಿಲ್ಲ.

ಅವರ ವಾಕ್ಯ ಸರಣಿಯು ಸರಳವಾಗಿದ್ದು ವಾಕ್ಯಗಳು ಚಿಕ್ಕದಾಗಿದ್ದು ಓದುಗರಿಗೆ ಸುಲಭವಾಗಿ ಅರ್ಥವಾಗುತ್ತದೆ. ವಾಕ್ಯಗಳು ವ್ಯಾಕರಣಬದ್ಧವಾಗಿದೆ, ಶೈಲಿಯು ಸುಲಲಿತ ವಾಗಿದೆ. ಸಾಮಾನ್ಯರು ಓದಿ ತಮ್ಮ ಪ್ರಾಚೀನ ಗ್ರಂಥಗಳ ಸಾರವನ್ನು ಅರ್ಥಮಾಡಿ ಕೊಂಡು ಸಜ್ಜನರಾಗಿ ಬಾಳಲಿ ಎಂಬ ಉದ್ದೇಶವನ್ನು ಹೊಂದಿರುವುದು ಸ್ಪಷ್ಟ.

ತಾವು ಈ ಲೇಖಕರ ಎಲ್ಲ ಹಸ್ತಪ್ರತಿಗಳನ್ನು ಸಂಗ್ರಹಿಸಿ ಭಾಗಗಳಾಗಿ ಪ್ರಕಟಿಸಿದರೆ ಕನ್ನಡ ಜನತೆಗೆ ಸಹಾಯ ಮಾಡಿದ ಹಾಗಾಗುತ್ತದೆ, ತಮಗೆ ಪುಣ್ಯಬರುತ್ತದೆ, ಪರಮಾಚಾರ್ಯರ ಆಶೀರ್ವಾದ ಲಭಿಸುತ್ತದೆ. ನನಗೆ ನಿಜವಾಗಿ ಸಂತೋಷವಾಗು ತ್ತಿದೆ.

ಇಂತಿ ತಮ್ಮವ

27-02-2014 **ಜಿ. ವೆಂಕಟಸುಬ್ಬಯ್ಯ**

**ನಾಡೋಜ ಡಾ॥.ಎಂ.,ಚಿದಾನಂದಮೂರ್ತಿ,**

ಎಂ.ಎ., ಪಿ.ಎಚ್.ಡಿ(ಮೈ).,ಡಿ.ಲಿಟ್(ಬೆಂ)

ವಿಶ್ರಾಂತ ಕನ್ನಡ ಪ್ರಾಧ್ಯಾಪಕರು(ಬೆಂಗಳೂರು ವಿಶ್ವವಿದ್ಯಾಲಯ)

ಕೇಂದ್ರ ಸಾಹಿತ್ಯ ಅಕಾಡೆಮಿ ಮತ್ತು ಪಂಪ ಪ್ರಶಸ್ತಿ ವಿಜೇತರು

'ವಿಜಯ' ನಂ 1013/ಬಿ, 4ನೆ ಅಡ್ಡರಸ್ತೆ ,11ನೆ ಮುಖ್ಯರಸ್ತೆ ,

ಹಂಪಿನಗರ, ಬೆಂಗಳೂರು-560 104 ದೂ. 080-23300687

ದಿನಾಂಕ 20-2-2014

## ಅಪೂರ್ವ ಪೌರಾಣಿಕ ಕಥೆಗಳ ಸಂಕಲನ

ದಿ॥ ವಿದ್ವಾನ್ ಕೊಯಮತ್ತೂರು ವಾದಿರಾಜಾಚಾರ್ಯರು ಹುಟ್ಟಿನಿಂದ ಕರ್ನಾಟಕ ಉಡುಪಿ ಪ್ರಾಂತದವರು, ದ್ವೈತವೇದಾಂತ ಮತ್ತು ಇತರ ಭಾರತೀಯ ತತ್ವಶಾಸ್ತ್ರ ಶಾಖೆಗಳನ್ನು ಆಳವಾಗಿ ಬಲ್ಲವರಾಗಿದ್ದು ಅವರು ಉಡುಪಿಯ ತಮ್ಮ ಗುರುಗಳ ಆದೇಶದ ಮೇರೆಗೆ ತಮಿಳುನಾಡಿನ ಕೊಯಮತ್ತೂರಿನಲ್ಲಿ ನೆಲಸಿ ಅಲ್ಲಿ ಸಂಸ್ಕೃತ ಪಾಠ ಪ್ರವಚನಗಳನ್ನು ಮಾಡಿಕೊಂಡು ಶಿಷ್ಯರ ಜ್ಞಾನವನ್ನು ಬೆಳಗಿದ ಮಹಾಮೇಧಾವಿಗಳು. ಕರ್ನಾಟಕದ ದಕ್ಷಿಣದ ಗಡಿಗೆ ಅಂಟಿಕೊಂಡಂತಿರುವ ಕೊಯಮತ್ತೂರು ಇಂದಿಗೂ ತಮಿಳು-ಕನ್ನಡ ದ್ವಿಭಾಷಾ ಪ್ರದೇಶ, ಹೀಗಾದ್ದ ರಿಂದಲೇ ಶ್ರೀ ಪರಮಾಚಾರ್ಯರು ಸಂಸ್ಕೃತದಲ್ಲಿ ಸ್ಥಳೀಯ ತಮಿಳಿನಲ್ಲಿ ಮತ್ತು ತಮ್ಮ ಮಾತೃಭಾಷೆ ಕನ್ನಡದಲ್ಲಿಯೂ ಪ್ರವಚನ ನೀಡುತ್ತಿರಬಹುದು.

ಅವರು ಮಹಾಭಾರತ, ರಾಮಾಯಣ ಮತ್ತು ಇತರ ಪುರಾಣಗಳಿಂದ ಸಂಗ್ರಹಿಸಿ ರಚಿಸಿರುವ **'ಒಂದು ಸಾವಿರ ಕಥೆಗಳು'** ಕೃತಿಯ ಪೂರ್ಣಪಾಠ ಲಭ್ಯವಾಗಿರದಿದ್ದರೂ ಅದರ ಹಸ್ತಪ್ರತಿಯ ಆರುನೂರುಎಪ್ಪತ್ತು ಕತೆಗಳು ಲಭ್ಯವಾಗಿದೆ. ಸಂಸ್ಕೃತಗಳಲ್ಲಿನ ಕತೆಗಳನ್ನು ಕನ್ನಡೀಕರಿಸಿ ಮನಮುಟ್ಟುವಂತೆ ಬಹು ಅಚ್ಚುಕಟ್ಟಾಗಿ, ಕೆಲವೆಡೆ ಮೋಹಕವಾದ ಶೈಲಿಯಲ್ಲಿ ನೀಡಿದ್ದಾರೆ. ಉದಾಹರಣೆಗೆ ಹರಿಶ್ಚಂದ್ರನ ಕಥೆ, ನರಕಾಸುರನ ವಧೆ,ಪಾಂಡವರ ಕಥೆಗಳನ್ನು ನೋಡಬಹುದು.

ನಮ್ಮ ರಾಷ್ಟ್ರ ಭಾರತದ ಸಮೃದ್ಧ ಸಾಂಸ್ಕೃತಿಕ ಸಂಪತ್ತನ್ನು ಅರಿಯಬೇಕಾದರೆ ರಾಮಾಯಣ, ಮಹಾಭಾರತ ಕಥೆಗಳನ್ನು , ಪುರಾಣಗಳಲ್ಲಿ ಬರುವ ಕಥೆಗಳನ್ನು ವಿಶ್ಲೇಷಿಸಿ ನೋಡಬೇಕು. ಎಲ್ಲ ಕಡೆ ಕಾಣುವ ಆತ್ಮವೆಂದರೆ 'ಧರ್ಮ'ದ ಪರಿಕಲ್ಪನೆ.

'ಧರ್ಮ'ವೆಂಬುದು ಮತವಲ್ಲ ಅದೊಂದು ಇನ್ನೊಂದು ಬಾಷೆಗೆ ಅನುವಾದಿಸಲು ಸಾಧ್ಯವಾಗದಂತಹ ಉದಾತ್ತ ಪರಿಕಲ್ಪನೆಯನ್ನು ಹೊಂದಿದೆ. ಅದರ ಅರ್ಥವಂತಿಕೆ ಗಡಿಯನ್ನು ಮೀರಿದ್ದು. 'ಸತ್ಯಂ ವದ ಧರ್ಮಂ ಚರ' ಈ ಮಾತೇ ಅದನ್ನು ಸೂಚಿಸುತ್ತದೆ. ಬದುಕಿನಲ್ಲಿ ಸತ್ಯಪ್ರಿಯತೆ, ನ್ಯಾಯಯುತ ನಡವಳಿಕೆ, ಪರೋಪಕಾರ, ದ್ವೇಷ ಅಸೂಯೆಗಳ ತ್ಯಾಜ್ಯ ಇತ್ಯಾದಿಗಳನ್ನು ಮೋಹಕ ಕತೆಗಳ ಮೂಲಕ ರಾಮಾಯಣ, ಮಹಾಭಾರತದ ಕಥೆಗಳು, ಪೌರಾಣಿಕ ಕತೆಗಳು ಜನರಿಗೆ ತಮ್ಮದೇ ಆದ ರೀತಿಯಲ್ಲಿ ತಲುಪಿಸುತ್ತವೆ. ಅಂತಹ ನೂರಾರು ಕಥೆಗಳನ್ನು ದಿ। ವಾದಿರಾಜಾಚಾರ್ಯರು ತಮ್ಮ ಕೃತಿಯಲ್ಲಿ ನೀಡಿ ಕನ್ನಡದ ಸಂಪತ್ತನ್ನು ಹೆಚ್ಚಿಸಿರುವುದಲ್ಲದೆ ಭಾರತೀಯ ಸಂಸ್ಕೃತಿಯ ಬಗೆಗಿನ ನಮ್ಮ ಅಭಿಮಾನವನ್ನು ವರ್ಧಿಸಿದ್ದಾರೆ. ಅವರ ಕೃತಿಯು ಓದುಗರಿಗೆ ಮುದವನ್ನು ನೀಡುತ್ತದೆ, ಅಂತೆಯೇ ಅದರ ಪರಂಪರೆಯ ಬಗ್ಗೆ ಓದುಗರಿಗೆ ಅರಿವನ್ನು ಹೆಚ್ಚಿಸುವುದಲ್ಲದೆ ಅವರ ಜೀವನ ವಿಧಾನವನ್ನೂ ಬದಲಾಯಿಸುತ್ತದೆ, ನಮ್ಮ ರಾಷ್ಟ್ರ ಭಾರತದ ಬಗ್ಗೆ ಅಭಿಮಾನವನ್ನು ವರ್ಧಿಸುತ್ತದೆ.

**ಎಂ. ಚಿದಾನಂದ ಮೂರ್ತಿ**



ದಿ|| ಶ್ರೀ ಬನ್ನಂಜೆ ವಾದಿರಾಜಾಚಾರ್ಯ

## ಲೇಖಕಕರ ಕಿರು ಪರಿಚಯ

| | | |
|---|---|---|
| ಲೇಖಕರು | : | **ದಿ|| ಶ್ರೀ ಬನ್ನಂಜೆ ವಾದಿರಾಜಾಚಾರ್ಯ**, ಉಡುಪಿ (ಕೊಯಮತ್ತೂರು ವಾದಿರಾಜಾಚಾರ್ಯ) |
| ಮಾತಾಪಿತೃಗಳು | : | **ದಿ|| ಶ್ರೀ ರಾಮಚಂದ್ರ ಭಟ್ ಹಾಗೂ ಶ್ರೀಮತಿ ಭೂಮಿ** |
| ವಂಶದ ಹೆಸರು | : | **ಪೆರಲ್ತಾಯ** |
| ಹುಟ್ಟಿದ ಊರು | : | **ಕೃಷ್ಣಾಪುರ** |
| ಹುಟ್ಟಿದ ವರ್ಷ | : | **1916** |
| ವಿದ್ಯಾಭ್ಯಾಸ | : | ಬನ್ನಂಜೆಯ ಪ್ರಾಥಮಿಕ ಶಾಲೆಯಲ್ಲಿ ಓದಿದ ನಂತರ ಉಡುಪಿಯ ಸಂಸ್ಕೃತ ಕಾಲೇಜಿನಲ್ಲಿ ವ್ಯಾಸಂಗ. ಮದ್ರಾಸು ವಿಶ್ವವಿದ್ಯಾಲಯದಿಂದ ''**ನ್ಯಾಯ ಶಿರೋಮಣಿ**'' ಎಂಬ ಪದವಿ ಪ್ರಾಪ್ತಿ. |
| ವಿದ್ಯಾಗುರುಗಳು | : | ಪರಮಪೂಜ್ಯ **ಶ್ರೀ** ವಿದ್ಯಾಮಾನ್ಯ **ತೀರ್ಥಶ್ರೀಪಾದಂಗಳವರು** ಇವರಲ್ಲಿ **ಶ್ರೀಮನ್ನ್ಯಾಯಸುಧಾ** ಗ್ರಂಥದ ಅಧ್ಯಯನ. ನಂತರ ವ್ಯಾಸರಾಜರ **ತರ್ಕತಾಂಡವದ** ಅಧ್ಯಯನವನ್ನು **ದಿ. ಪಾಂಡುರಂಗೀ ಜಯತೀರ್ಥಾಚಾರ್ಯರ** ಬಳಿ ನಡೆಸಿದರು. ಇವರೇ ಮುಂದೆ ಉತ್ತರಾದಿ ಮಠಾಧೀಶರಾದ **ಶ್ರೀ ಸತ್ಯಪ್ರಜ್ಞ** ತೀರ್ಥ ಶ್ರೀಪಾದರಾದರು. |

1937ರಲ್ಲಿ ಉಚ್ಚಿಲದಲ್ಲಿ ದಾಂಪತ್ಯ ಜೀವನ ಪ್ರವೇಶಿಸಿ ಗುರುಗಳ ಆದೇಶದ ಮೇರೆಗೆ ಕೊಯಮತ್ತೂರಿನಲ್ಲಿ ನೆಲೆಸಿ ಅಲ್ಲಿ ಜಿಜ್ಞಾಸುಗಳಿಗೆ ತತ್ವಜ್ಞಾನ ಪ್ರಸಾರ ಮಾಡುತ್ತಾ ದ್ವೈತಸಿದ್ಧಾಂತದ ಪ್ರಚಾರದಲ್ಲಿ ನಿರತರಾದರು. ನ್ಯಾಯಸುಧೆಯ ಮಂಗಳವನ್ನು ಹನ್ನೆರಡು ಬಾರಿ ನಡೆಸಿದರು. 108 ಬಾರಿ ಶ್ರೀಮದ್ಭಾಗವತ ಸಪ್ತಾಹ ಮಂಗಳವನ್ನು ಮಾಡಿದ್ದಾರೆ. ಭಾಗವತ ದಶಮ ಸ್ಕಂದದ ಹೋಮವನ್ನು ಮಾಡಿದ್ದಾರೆ. ಮುತ್ತಿನಂತಹ ತಮ್ಮ ಹಸ್ತಾಕ್ಷರದಲ್ಲಿ 'ಸಾವಿರ ಕಥೆಗಳು' ಎಂಬ ಸತ್ಕಥಾ ಸಂಕಲನ ಸಂಗ್ರಹಿಸಿದ್ದಾರೆ. ಕೊಯಮತ್ತೂರಿನ ಪ್ರಖ್ಯಾತರಾದ ದಿ। ತಾಮ್ರಪರ್ಣಿ ಸುಬ್ಬಾಚಾರ್ಯರೇ ಮೊದಲಾದ ಶಿಷ್ಯರಿಗೆ ಪಾಠಹೇಳಿ ಅವರಿಂದ ಅನೇಕ ಗ್ರಂಥಗಳನ್ನು ರಚನೆ ಮಾಡಲಿಕ್ಕೆ ಮಾರ್ಗದರ್ಶನ ನೀಡಿದ್ದಾರೆ.

ಸಾರ್ಥಕ ದಾಂಪತ್ಯ ಜೀವನ ನಡೆಸಿದ ಆಚಾರ್ಯರು ಪತ್ನಿಯಾದ ಶ್ರೀಮತಿ ಲಕ್ಷ್ಮಿಯಲ್ಲಿ ಎರಡು ಗಂಡು ಹಾಗೂ ಒಬ್ಬ ಮಗಳನ್ನು ಪಡೆದಿದ್ದಾರೆ.

॥ श्रीरस्तु ॥

**जयति हरिरचिन्त्यः सर्वदेवैकवन्द्यः परमगुरुरभीष्टावाप्तिदः सज्जानाम् ॥**
**निखिलगुणगणार्णो नित्यनिर्मुक्तदोषः सरसिज नयनोऽसौ श्रीपतिर्मानदो नः ॥**

श्रीमन्मध्वशास्त्र संपन्न वेदमूर्ति उडुपीश्री वादिराजभट्टरवर पादसन्निधानगळल्लि, कोयमुत्तूरु पुर वासिगळाद नावेल्लरु विद्वत् शिरोभूषणराद निंमन्नु अनेक साष्टांग नमस्कारगुलु निंम पादगळल्लि समार्पिसिरुव मान्य पत्र ॥

**महनीयरे**

श्रीमत्परमहंसेत्यादि गुणगणालंकृतराद श्री श्री १०८ श्री भण्डारकेरी मठाधीश श्री विद्यामान्यतीर्थ श्रीपादंगळवरिंद आज्ञप्तरागि नीवु ई कोयमुत्तूरिगे बंदु अज्ञगळाद नंमन्नु उद्धरिसि इरूविरि । निंमिंद कोयमुत्तुरिन अनेक माध्वरु **नावु माध्वरु यंत हेळि कोळ्ळुव बगेयल्लि मध्व** शास्त्रद ज्ञानैश्वर्यवन्नु पडदिरुवरु । नीवु हरि वायुगुरुगळल्लि निर्व्याज भक्तियन्नु माडि अवर कृपाकटाक्षक्के पात्ररागि इरूविरि ।

**पूज्यरे**

कळेद साधारण संवत्सर कार्तिकमासदल्लि नीवु परमानुग्रह माडिद कारण कोयमुत्तूरिन अशेष स्त्री पुरुष माध्वरु ७ दिनगळ पर्यन्तवागि ''श्रीमद्भागवत, श्रीमन्नयसुधा श्रीसर्वमूल ग्रन्थगळ पारायण अर्थ कथन गळन्नु श्रवणमाडि ग्रन्थगळ प्रतिपाद्य श्री भारतीरमण मुख्यप्राणांतर्गत वेदव्यास देवर परमानुग्रहवन्नु होंदिरुवरु ॥ ईरीतियागि पदे पदे नमगेश्रवण माडुव भाग्यवन्नु कोडिसबेकु ॥

**मध्वशास्त्रदल्लि दीक्षा उळ्ळवरे**

ई काल पर्यन्त याव मनुष्यन दया दाक्षिण्यक्कू नीवु ओळगागदे पारमार्थिकदिंद प्रवर्तकरागि इरुविरि । कोयमुत्तूरिन माध्वरु मडिद भाग्य विशेषदिंद निम्मन्नु श्रीहरियु नमगे कोट्टिरुवनु । नीवु हरि वायु गुरुगळ अनुग्रहदिंद बहुकाल नम्मेल्लरिगू ज्ञानोपदेशकरागि इरबेकेनुत श्रीभारतीरमण मुख्यप्राणान्तर्गत सर्व स्वामी श्रीकृपणनन्नु पदे पदे प्रार्थना माडि निमगे नंम विनय भक्तिपूर्वकवाद साष्टंग नमस्कारगळन्नु समर्पिसिरुत्तेवे ॥

**कोयमुत्तूरु** — **कोयमुत्तूरु पुरवासिनः**

**विरोधकृत् श्रावणकृष्णद्वितीय । ८.८.१९७१**

# ADDRESS PRESENTED TO VEDAMURHI SRI VATHIRAJACHAR COIMBATORE

## on Sunday The 8th August 1971

We are happy to give you this address on this auspicious day, because it is only 300 years ago, on this day, Sri Raghavendra Swamiji entered the Brindavan at Mantralaya and is ever since showering HIS BLESSINGS on his devotees. This occasion is being celebrated in a grand scale in **Mantralaya,** and also at several other places. Here, at Coimbatore, we too are celebrating it in a fitting manner and this is highlighted by the fact that you, Sir, who is His ardent follower, is in our midst.

Without a proper GURU, we cannot understand the Vedas and like Scriptures by merely reading them. The true interpretation can be had only through a proper GURU. The ''BRAHMA SUTRA AND MAHABHARATHA'' though written by **"Veda Vyasa"** were wrongly interpreted by very many and hence God ordained SRI MADHWACHARYA to write Bhashya on the Brahma Sutra and **THATHPARYA NIRAYANA** on **MAHABHARATHA**. Accordingly Sri Madhwacharya who is the III Avatar of VAYU, (the previous two Avatars being Hanuma and Bhima) wrote the Brahma Sutra Bhashya and Mahabharatha Tatparya Nirnaya giving the correct interpretaion. He wrote in all 37 works and established the Dwaita System. The path shown by Sri Madhwacharya was followed by **Sri Tikacharya** and **Sri Raghavendra Swamiji** and others. And they wrote several commentaries on Madhwa's works, the most important of them being Sriman Nyaya Sudha

of Sri Tikacharya and Parimala of Sri Raghavendra Swamiji. To undersatand all these works also a proper teacher is required. You, Sir, at Coimbatore have solved this difficulty for us. By your vast learning you have been conducting classes on the above works and produced very many disciples, some of whom are eminent. The several lectures given by you often, on Thatparya Nirnaya, Bagavatha, and other topics of Madhwa philosophy have enlightened us and leading us to the correct path. Your vast learning, capacity to teach, your smiling face and readiness to clear the doubts of disciples at any time on any point, have captivated us all. We respect you, Sir, for your sterling charactes, you being the true follower of the teachings of Sri Madhwacharya. Every one knows that you are spending most of the time every day for religious classes, without caring even for your health. Such is the sacrifice you are making for the Madhwas, and we are really proud to honour you Sir, as a true follower of the teachings of Sri Madhwacharya and Sri Raghavendra Swamiji etc. on this auspicious day. We pray God to give you long life and health and be the becon light to us all.

We reamin Sir
With respects
**300th year Sri Raghavendraswami Aradhana Mahotsava Committee, Coimbatore and Sri Raghavendraswami Seva Sangam Coimbatore**

# ಮುನ್ನುಡಿ

''ತೇನ ವ್ಯಾಸದಿವಾಕರೇಣ ಸತತಂ ಮಾ ತ್ಯಾಜಿ ಮೇ ಮಾನಸಮ್''

''ವಂದೇ ವಿಷ್ಣುಂ ನಮಾಮಿ ಶ್ರಿಯಮಥ ಚ ಭುವಂ ಬ್ರಹ್ಮವಾಯೂ ಚ ವಂದೇ
ಗಾಯತ್ರೀಂ ಭಾರತೀಂ ತಾಮಪಿ ಗರುಡಮನಂತಂ ಭಜೇ ರುದ್ರದೇವಮ್
ದೇವೀರ್ವಂದೇ ಸುಪರ್ಣೀಮಹಿಪತಿದಯಿತಾಂ ವಾರುಣೀಮಪ್ಯುಮಾಂ ತಾಂ
ಇಂದ್ರಾದೀನ್ ಕಾಮಮುಖ್ಯಾನಪಿ ಸಕಲಸುರಾನ್ ತದ್ಗುರೂನ್ ಮದ್ಗುರೂಂಶ್ಚ ॥''

ಮಹಾಭಾರತ, ಪುರಾಣ ಮೊದಲಾದ ಮೂಲಕೃತಿಗಳಿಂದ ಪೂಜ್ಯ ಕೊಯಮತ್ತೂರು ವಾದಿರಾಜಾಚಾರ್ಯ–ಉಡುಪಿ, ಇವರಿಂದ ಬರೆಯಲ್ಪಟ್ಟ **ಸಾವಿರ ಕಥೆಗಳು** ಎಂಬ ಕೃತಿಯನ್ನು 'ಸಂಪಾದನ' ಮಾಡುವ ಕೆಲಸವು ನನ್ನ ಗುರುಗಳಾದ ಪರಮಪೂಜ್ಯ ಶ್ರೀ ಶ್ರೀ 1008 ಶ್ರೀ ವಿದ್ಯೇಶತೀರ್ಥ ಶ್ರೀಪಾದರು, ಭಂಡಾರಕೇರಿ ಮಠ– ಇವರ ಕಾರುಣ್ಯದಿಂದ ನನಗೆ ದೊರಕಿದೆ. ಈ ಕೆಲಸಕ್ಕೆ ನನ್ನನ್ನು ಆಯ್ದ ಅವರ ವಾತ್ಸಲ್ಯಕ್ಕೆ ಮೊದಲು ಅವರಿಗೆ ನನ್ನ ಅನಂತ ಕೃತಜ್ಞತಾಪೂರ್ವಕ ಸಾಷ್ಟಾಂಗ ಪ್ರಣಾಮಗಳನ್ನು ಸಮರ್ಪಿಸಿ ಈ ಕೃತಿಯ ಹಿನ್ನೆಲೆ ಮುನ್ನೆಲೆಗಳ ಬಗ್ಗೆ ನಾಲ್ಕು ಮಾತುಗಳನ್ನು ಬರೆಯಲು ಇಚ್ಛಿಸುತ್ತೇನೆ.

ಕನ್ನಡದ 'ಕಥೆ(ತೆ)' ಶಬ್ದವು 'ಸಂಸ್ಕೃತದ 'ಕಥಾ' ಶಬ್ದದ ತದ್ಭವವಾಗಿದೆ. ಕಥಾ ಶಬ್ದದ ನಿಷ್ಪತ್ತಿ ಹೀಗಿದೆ.

[1] 'ಕಥ' 'ವಾಕ್ಯ ಪ್ರಬಂಧೇ' (ಚುರಾದಿ 10ಉಭಯಪದ ಸ) ಎಂಬ ಧಾತುವಿಗೆ ಅಜ್ (3-3-105) ಪ್ರತ್ಯಯದ ಜೋಡಣೆಯಿಂದಾಗಿ ಕಥಾ ಶಬ್ದ ನಿಷ್ಪನ್ನವಾಗಿದೆ. ಇದರ ಅರ್ಥ (1) ಹೇಳುವುದು, ನಿರೂಪಿಸುವುದು (2) ಪರಸ್ಪರ ಮಾತನಾಡುವುದು, ಸಂಭಾಷಣೆ (3) ಅನೇಕ ವಿದ್ವಾಂಸರು ಒಂದೆಡೆ ಸೇರಿ ತತ್ತ್ವನಿರ್ಣಯ ಅಥವಾ ವಿಜಯಕ್ಕಾಗಿ ಮಾಡುವ ಪ್ರಮಾಣಬದ್ಧವಾದ ಯುಕ್ತಿಯುಕ್ತವಾದ

1. ಸಂಸ್ಕೃತ ಕನ್ನಡ ಶಬ್ದಕೋಶ–ಸಂಪುಟ–2, ಸಂ.ಚಕ್ರವರ್ತಿ ಶ್ರೀನಿವಾಸ ಗೋಪಾಲಾಚಾರ್ಯ ಬಾಪ್ಕೋ ಸಂಪಾದನೆ. 1999. ಪುಟ 583

ವಿಚಾರಗೋಷ್ಠಿ. ಹೀಗೆ ಹಲವು ಅರ್ಥಗಳನ್ನು ನಾವು ಕೋಶಗಳಲ್ಲಿ ಈ ಶಬ್ದಕ್ಕೆ ನೋಡಬಹುದು.

ಕಥಾ ಎನ್ನುವುದು ವಿಚಾರಗೋಷ್ಠಿ ಎಂಬ ಅರ್ಥದಲ್ಲಿ ವಾದ, ಜಲ್ಪ, ವಿತಂಡಾ ಎಂದು ಮೂರು ವಿಧವಾಗಿರುತ್ತದೆ.

ಅಲ್ಲದೆ ಆಖ್ಯಾನ, ಉಪಾಖ್ಯಾನ, ಆಖ್ಯಾಯಿಕಾ ಎಂಬ ಶಬ್ದಗಳು ಹೆಚ್ಚು ಕಡಿಮೆ ಇದೇ ಅರ್ಥದಲ್ಲಿ ಬಳಕೆಯಲ್ಲಿವೆ. ಇವು 'ಖ್ಯಾ ಪ್ರಕಥನೇ' ಹೇಳು–ಪ್ರಸಿದ್ಧಿ ಪಡಿಸು (ಅದಾದಿ–2.ಪ.ಸ) ಎಂಬ ಧಾತುವಿಗೆ ಅನು, ಆ, ಉಪ ಎಂಬ ಉಪಸರ್ಗಗಳ ಜೋಡಣೆಯಿಂದ ಬೇರೆಬೇರೆ ಅರ್ಥಗಳಲ್ಲೂ ಬಳಕೆಯಾಗುತ್ತವೆ.[2]

(1) ಅನು+ಆ+ಖ್ಯಾ –ಣಿಜಂತದಲ್ಲಿ ಅನ್ವಾಖ್ಯಾನ ಶಬ್ದವಾಗಿ 'ಹಿಂದೆ ಹೇಳಿದ ವಿಷಯವನ್ನು ವಿವರಿಸಿ ಹೇಳುವುದು' ಎಂಬ ಅರ್ಥ ಕೊಡುತ್ತದೆ.

(2) ಆ+ಖ್ಯಾ-ಣಿಜಂತದಲ್ಲಿಯೇ ಆಖ್ಯಾನ ಶಬ್ದವಾಗಿ 'ಚೆನ್ನಾಗಿ ಹೇಳುವುದು, ಸರಿಯಾಗಿ ಹೇಳುವುದು' ಎಂಬ ಅರ್ಥ ಕೊಡುತ್ತದೆ.

[3]ಹೀಗೆ 'ಕಥ' ಮತ್ತು 'ಖ್ಯಾ' ಧಾತುಗಳಿಂದ ಹಿಂದಿನ ಕಥೆಗಳನ್ನು ಸರಿಯಾಗಿ, ಚೆನ್ನಾಗಿ, ಇರುವಂತೆಯೇ ಹೇಳಲ್ಪಟ್ಟ ವಿಷಯವೆಂದು ತಿಳಿಯಬಹುದು. ಎಂದರೆ ಕಥಾಶಬ್ದವು ಹಿಂದೆ ನಡೆದ ಘಟನೆಗಳ ವಿವರಗಳನ್ನು ತಿಳಿಸುವ ಕೃತಿ ಎಂದರೆ ತಪ್ಪಾಗದು.

ಹೀಗೆಯೇ 'ಇತಿಹಾಸ' ಎಂಬ ಶಬ್ದವೂ ಪುರಾತನ ಕಥೆಯನ್ನು ಹೇಳುವ ಗ್ರಂಥ ಎಂಬ ಅರ್ಥದಲ್ಲಿ ಬಳಕೆಯಲ್ಲಿದೆ. ತಾಂತ್ರಿಕವಾಗಿ–ವೇದಾಂತ ಗ್ರಂಥಗಳಲ್ಲಿ ಇತಿಹಾಸ ಶಬ್ದವು ಪಂಚಮವೇದವೆಂದು ಕರೆಯಲ್ಪಡುವ 'ಭಾರತ, ಮೂಲರಾಮಾಯಣ, ಪಂಚರಾತ್ರ ಹಾಗೂ ಪುರಾಣ'ಗಳಲ್ಲಿ ಒಂದಾಗಿದೆ. ಇದು ಉಪನಿಷತ್ತು ಹೇಳಿದ ಅರ್ಥವೂ ಆಗಿದೆ.

''ಇತಿಹಾಸಪುರಾಣಃ ಪಂಚಮೋ ವೇದಾನಾಂ ವೇದಃ'' –ಉಪನಿಷತ್

ಇತಿಹಾಸ ಶಬ್ದವು 'ಇತಿ' 'ಹ' ಎಂಬ ಎರಡು ಅವ್ಯಯಗಳ ಮುಂದೆ 'ಆಸ' ಎಂಬ ಧಾತು ಪ್ರತಿರೂಪಕ ಅವ್ಯಯವೂ ಸೇರಿ ನಿಷ್ಪನ್ನವಾಗಿದ್ದರೂ, 'ಹಿಂದೆ ನಡೆದ

---

2. ಸಂಸ್ಕೃತ ಕನ್ನಡ ಶಬ್ದಕೋಶ–ಸಂಪುಟ 2. ಬಾಪ್ಕೋ ಪ್ರಕಾಶನ ಪುಟ 897.

3. ಕನ್ನಡದಲ್ಲಿ ಕಥೆ(ತೆ) ಶಬ್ದಕ್ಕೆ ಕಲ್ಪಿತ ಸಂಗತಿ ಎಂದೂ ಅರ್ಥವಿದೆ. ಆಯಾಸಂದರ್ಭ–ಗ್ರಂಥಕರ್ತೃವಿನ ಅಭಿಪ್ರಾಯವನ್ನು ಗಣನೆಗೆ ತೆಗೆದುಕೊಂಡು ಅರ್ಥ ಮಾಡಬೇಕು.

ಕಥೆ' ಎಂಬ ಅರ್ಥ ರೂಢಿಯಲ್ಲಿದೆ. ಮಹಾಭಾರತ, ಪುರಾಣಗಳಲ್ಲಿ ಈ ಅರ್ಥವನ್ನು ಸಾವಿರಾರು ಕಡೆ ನೋಡಬಹುದು.

''**ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್**'' ಎಂದು.

ಹೀಗೆ 'ಆಖ್ಯಾನ', 'ಉಪಾಖ್ಯಾನ', 'ಆಖ್ಯಾಯಿಕಾ', 'ಇತಿಹಾಸ', 'ಕಥಾ' ಶಬ್ದಗಳೆಲ್ಲ ಹಿಂದೆ ನಡೆದ ಘಟನೆಗಳನ್ನು ನಿರೂಪಿಸುವ ಸಾಹಿತ್ಯ ಪ್ರಕಾರಗಳು. ಈರೀತಿಯಾಗಿ ಕಥೆಗಳು ಸಾಹಿತ್ಯದ ಅವಿಭಾಜ್ಯ ಅಂಗಗಳಾಗಿವೆ. ಇವು ಆಯಾ ಭಾಷೆಗಳಿಗೆ ತಕ್ಕಂತೆ ಇದ್ದು ಹಲವು ಬದಲಾವಣೆಗಳಿಗೆ ಒಳಗಾಗಿರಲೂ ಸಾಕು.

ಸಂಸ್ಕೃತ ಸಾಹಿತ್ಯ ಚರಿತ್ರೆಯಲ್ಲಿ ಇವೆಲ್ಲ ಗದ್ಯ, ಪದ್ಯ, ಚಂಪೂ ಕಾವ್ಯಗಳಾಗಿ ಸಿಗುತ್ತವೆ. ವೇದಗಳಲ್ಲಿ ಕೂಡಾ ಉಪಾಖ್ಯಾನ, ಆಖ್ಯಾಯಿಕೆಗಳಿವೆ.

ಉದಾ:

(1) ತಲವಕಾರೋಪನಿಷತ್ ಭಾಷ್ಯದಲ್ಲಿ ಶ್ರೀಮದಾಚಾರ್ಯರು ಈ ಉಪನಿಷತ್‌ನಲ್ಲಿ ಬಂದಿರುವ ಯಕ್ಷ ಹಾಗೂ ದೇವತೆಗಳ ಸಂವಾದವನ್ನು 'ಆಖ್ಯಾಯಿಕಾ' ಎಂದು ಕರೆದಿರುವ 'ಬ್ರಹ್ಮಸಾರ' ಎಂಬ ಪ್ರಮಾಣ ಗ್ರಂಥವನ್ನು ಉದಾಹರಿಸಿದ್ದಾರೆ.

**'ಇತ್ಯತ್ರಾಖ್ಯಾಯಿಕಾಂ ವಚ್ಮಿ ಶೃಣು ತಾಂ ತ್ವಂ ಮಹೇಶ್ವರ ।**
**ಸ್ಥಿತ್ವಾ ದೇವೇಷು ತದ್ಬ್ರಹ್ಮ ವ್ಯಜಯತ್ ದೈತ್ಯದಾನವಾನ್ ॥'**

(2) ಛಾಂದೋಗ್ಯೋಪನಿಷತ್‌ನಲ್ಲಿ –

(ಅ) 'ಜಾನಶ್ರುತಿ ಉಪಾಖ್ಯಾನ' (ಅಧ್ಯಾಯ 4 ಖಂಡ 1–3)

(ಆ) 'ಜಾಬಾಲಿ ಸತ್ಯಕಾಮನ ಉಪಾಖ್ಯಾನ' (ಖಂಡ 4–9)

(ಇ) 'ಉಪಕೋಸಲನ ಉಪಾಖ್ಯಾನ' (ಖಂಡ 10–14)

(3) ಮಹಾಭಾರತದಲ್ಲಂತೂ 200 ಕ್ಕೂ ಹೆಚ್ಚು ಉಪಾಖ್ಯಾನಗಳಿವೆ. ಇವು ಆದಿಪರ್ವ, ವನಪರ್ವ, ಶಾಂತಿಪರ್ವ, ಅನುಶಾಸನಪರ್ವ ಮೊದಲಾದವುಗಳಲ್ಲಿ ಪಸರಿಸಿವೆ.

(4) ಪದ್ಮ ಮೊದಲಾದ ಪುರಾಣಗಳಲ್ಲೂ ಚೈತ್ರಾದಿ ಮಾಸ ಮಹಾತ್ಮೆಗಳಲ್ಲೂ ಇಂತಹ ಕಥೆ, ಆಖ್ಯಾನ ಶಬ್ದಗಳಿಂದ ಕರೆಯಲ್ಪಡುವ ಪ್ರಸಂಗಗಳನ್ನು ಹೇರಳವಾಗಿ ನೋಡಬಹುದು.

ಕೆಲವು ತಿಂಗಳುಗಳ ಹಿಂದೆ ಶ್ರೀ ಗುರುಗಳಾದ ಶ್ರೀ ಶ್ರೀ ವಿದ್ಯೇಶತೀರ್ಥರು ನಾನು ಸುಧಾ ಪಾಠಕ್ಕೆ ಹೋದಾಗ, ತಾವು ಸಂಚಾರದಲ್ಲಿರುವಾಗ ಕೊಯಮತ್ತೂರು ನಗರದಲ್ಲಿ ಒಬ್ಬ ಭಕ್ತರ ಮನೆಯಿಂದ ಸಂಗ್ರಹಿಸಿದ ಏಳೆಂಟು ಹಳೆಯದಾದ ವಹಿಗಳನ್ನು (ಪುಸ್ತಕಗಳನ್ನು) ನನಗೆ ತೋರಿಸಿದರು. ಇವೆಲ್ಲವೂ ಶ್ರೀ ಶ್ರೀ 1008 ಶ್ರೀ ವಿದ್ಯಾಮಾನ್ಯತೀರ್ಥರ ಶಿಷ್ಯರಾದ ದಿ.ವಿದ್ವಾನ್ ಕೊಯಮತ್ತೂರು ವಾದಿರಾಜಾ ಚಾರ್ಯರೆಂಬ 'ಶ್ರದ್ಧಾಳು' ಶಿಷ್ಯರು ಸ್ವತಃ ಬರೆದ **'ಸಾವಿರ ಕಥೆಗಳು'** ಎಂದೂ, ಇವು ಪಂಡಿತ–ಪಾಮರರಿಬ್ಬರಿಗೂ ಉಪಯೋಗವಾಗುವ ಭಾರತ–ಪುರಾಣಗಳಲ್ಲಿನ ಕಥೆಗಳ ಸಂಗ್ರಹವೆಂದು ತಿಳಿಸುತ್ತಾ ಇವುಗಳನ್ನು ಪ್ರಕಟಿಸುವ ತಮ್ಮ ಹಂಬಲವನ್ನು ವಿವರಿಸಿ ಈ ಪ್ರಕಟನಪೂರ್ವಭಾವಿ ಪರಿಶೀಲನೆ–ಸಂಪಾದನ ಕಾರ್ಯವನ್ನು ಮಾಡಲು ಆದೇಶಿಸಿದಾಗ ನನಗೆ ಒಂದೆಡೆ ಆಶ್ಚರ್ಯ ಇನ್ನೊಂದೆಡೆ ಆನಂದ ಎರಡೂ ಆದವು. ಕಾರಣ ಅವರ ಮಾತು ಕೇಳುವ ಅನೇಕ ಪಂಡಿತರು ಇದ್ದರೂ ನನಗೆ ವಹಿಸಿದ್ದು ಆಶ್ಚರ್ಯವಾಯಿತು. ನನಗೇ ಈ ಕೆಲಸ ಕೊಟ್ಟುದುದಕ್ಕೆ ಆನಂದವಾಗಿ ಅವರಿಂದ 'ಅನುಗ್ರಹ ಮಂತ್ರಾಕ್ಷತೆಗಳನ್ನು' ಸ್ವೀಕರಿಸಿ ಕಾರ್ಯ ಪ್ರವೃತ್ತನಾದೆ.

**'ಸಾವಿರ ಕಥೆಗಳು' ಕೃತಿಯ ಬಗ್ಗೆ**

ಶ್ರೀಪಾದರು ಕೆಲತಿಂಗಳ ಹಿಂದೆ ನನಗೆ ಒಂದುದಿನ ಆರು ಪುಸ್ತಕಗಳನ್ನು ಮತ್ತು ಕಳೆದ ತಿಂಗಳು ಕೊಯಂಬತ್ತೂರಿನ ಅದೇ ಭಕ್ತರ ಮನೆಯಿಂದ ಮತ್ತೊಂದು ಹೀಗೆ ಏಳು ಹಳೆಯದಾದ ಪುಸ್ತಕಗಳನ್ನು ಕೊಟ್ಟರು. ಆ ಏಳು ಪುಸ್ತಕಗಳಲ್ಲಿ **'ಒಂದು ಸಾವಿರ ಕಥೆಗಳ ಪೈಕಿ'** ಸುಮಾರು 670 ಕಥೆಗಳ ಸಂಗ್ರಹ ಸುಂದರವಾದ ಕನ್ನಡ ಗದ್ಯದಲ್ಲಿತ್ತು.

ಪುಸ್ತಕಗಳನ್ನು ನೋಡಿದಾಗ ಹಳೆಯ ವಿದ್ವಾಂಸರೊಬ್ಬರು ಇಷ್ಟು ಅಚ್ಚುಕಟ್ಟಾಗಿ ಬರೆದ ಆಧುನಿಕ ತರಬೇತಿ ಪಡೆದವರೂ ಕೂಡಾ ತಿಳಿದುಕೊಳ್ಳಬೇಕಾದ ರೀತಿಯಲ್ಲಿ ಎಲ್ಲಕ್ಕೂ ಹೆಚ್ಚಾಗಿ ಅತ್ಯಂತ ಸ್ಫುಟವಾಗಿ ಎಲ್ಲೂ ಅಳಿಸದಂತಹ, ಮುದ್ರಿತ ಪುಸ್ತಕದಂತೆ ಇದ್ದ ಅಕ್ಷರಗಳನ್ನು ಕಂಡು ಸಂತೋಷ ಆಶ್ಚರ್ಯ ಆಯಿತು. ಪ್ರತಿಯೊಂದು ಕಥೆಗೂ ಕಥಾಸಂಖ್ಯೆ ತಪ್ಪದೆ ಬರೆಯಲಾಗಿದೆ. ಪುಸ್ತಕದಲ್ಲಿ ಪುಟಸಂಖ್ಯೆ ತಪ್ಪದೇ ನೋಡ ಬಹುದು. ಒಂದು ಪುಸ್ತಕಕ್ಕೆ ಮಾತ್ರ ಪುಟಸಂಖ್ಯೆ ಇದ್ದಿಲ್ಲ.

ಹೀಗಾಗಿ 1000 ಕಥೆಗಳ ಪೈಕಿ 670 ಕಥೆಗಳನ್ನು ಒಳಗೊಂಡ 2970 ಪುಟಗಳಲ್ಲಿನ 7 ಪುಸ್ತಕಗಳ ಪರಿಶೀಲನೆ ಮಾಡಬೇಕಾಯಿತು. ಇವುಗಳಲ್ಲೂ

ಮೊದಲು ಹಾಗೂ ಕೊನೆಯ ಕೆಲಪುಟಗಳು ಓದಲು ಬರದಂತೆಯೂ, ನೀರು ಬಿದ್ದು ಹಾಳಾಗಿರುವ ಭಾಗಗಳೂ ಸೇರಿವೆ. ಪ್ರತಿಸಂಪುಟದಲ್ಲಿನ ಕಥೆಗಳು, ಕೆಲವು ಕಡೆ ಒಂದೇ ತರಹದ ಕಥೆಗಳೂ ಇವೆ. ಕೆಲವು ಕಡೆ ಬೇರೆ ತರಹದ ಕಥೆಗಳೂ ಇವೆ. ಕೇವಲ ಭಾರತ, ಭಾಗವತ, ಪುರಾಣ-ಹೀಗೆ ಒಂದೇ ಕಡೆ ವರ್ಗೀಕರಿಸಲು ಬರುವಂತೆ ಪ್ರಾಯಃ ಇಲ್ಲ. ಎಲ್ಲ ಪುಸ್ತಕಗಳಲ್ಲಿಯೂ ಎಲ್ಲ ತರಹದ ಕಥೆಗಳು ಬಂದಿರುವುದರಿಂದ ಇವುಗಳ ಪರಿಷ್ಕರಣೆಯ ಸೂತ್ರವನ್ನು ಡಾ.ಸತ್ಯನಾರಾಯಣಾ ಚಾರ್ಯರೊಡನೆ ಚರ್ಚಿಸಿ ಈ ಕೆಳಕಂಡ ವರ್ಗೀಕರಣ ಮಾಡಲಾಯಿತು.

**(1) ಭಗವಂತನ ಕಥೆಗಳು (2) ಮಹಾಭಾರತದ ಮೂಲಕಥೆಗಳು (ಪಾಂಡವರ-ಕೌರವರ) (3) ಭಗವದ್ಭಕ್ತರ ಕಥೆಗಳು. (4) ತೀರ್ಥಕ್ಷೇತ್ರ+ಸದಾಚಾರ+ ಸಂಕೀರ್ಣ ಕಥೆಗಳು**

ಸದ್ಯ ಭಗವಂತನ ಕಥೆಗಳನ್ನು ಒಳಗೊಂಡ ಎಲ್ಲ ಸಂಪುಟಗಳನ್ನು ಪರಿಶೀಲಿಸಿ ಸುಮಾರು 570 ಪುಟಗಳ ಪ್ರಥಮ ಸಂಪುಟವನ್ನು ಸಿದ್ಧಗೊಳಿಸಲಾಗಿದೆ. 'ಭಗವಂತನ ಕಥೆಗಳು' ಶೀರ್ಷಿಕೆಯಡಿ (1)ನಾಮಮಹಿಮೆ (2) ಕಥಾಮಹಿಮೆ (3) ಅವತಾರ ಸ್ತೋತ್ರ (4) ಉಡುಪಿ ಶ್ರೀಕೃಷ್ಣ (5) ವೇದವ್ಯಾಸದೇವರು (6) ಮತ್ಸ್ಯ (7)ಕೂರ್ಮ (8) ಮೋಹಿನೀ (9) ಕಪಿಲ (10) ರಾಮಾಶ್ವಮೇಧ ಕಥೆ (11) ಕೃಷ್ಣಾವತಾರ (12) ಶ್ರೀನಿವಾಸ ಕಲ್ಯಾಣ (13) ಬುದ್ಧ (14) ಕಲ್ಕಿ (15) ಹರಿಯೇ ಪರದೇವತೆ (16) ಪರಶುಕ್ಲತ್ರಯರು (17) ಷಣ್ಮಹಿಷಿಯರು (18) ಭಗವದ್ಗೀತಾ ಮಹಾತ್ಮ್ಯೆ (19) ಕೊನೆಯದಾಗಿ ದೇವತಾ ತಾರತಮ್ಯ ವಿಷಯಗಳ ಬಗ್ಗೆ ಶ್ರೀವಾದಿರಾಜಾಚಾರ್ಯರ ಕಥಾ ಲೇಖನಗಳನ್ನು ಯೋಜಿಸಲಾಗಿದೆ. ಇವುಗಳಲ್ಲಿ ಪರಶುಕ್ಲತ್ರಯರು (ಲಕ್ಷ್ಮೀ, ಬ್ರಹ್ಮ ಸರಸ್ವತೀಯವರ ಮಹಿಮೆಗಳು) ಭಗವಂತನ ಅತಿಹತ್ತಿರದ ಭಕ್ತರೆಂದೂ, ಷಣ್ಮಹಿಷಿಯರು ಲಕ್ಷ್ಮೀ ಆವೇಶವುಳ್ಳವರಾದ್ದರಿಂದ ಭಗವಂತನ ಪತ್ನಿಯರೆಂಬ ದೃಷ್ಟಿಯಿಂದಲೂ ಇಲ್ಲಿ ಸೇರಿಸಲಾಗಿದೆ.

ಭಗವಂತನ ಪರಾತ್ಪರತ್ವದ್ಯೋತಕವಾದ 'ಪರದೇವತೆ' ಲೇಖನ ಹಾಗೂ ದೇವತಾ ತಾರತಮ್ಯ ಲೇಖನವನ್ನು ಇಲ್ಲಿಯೇ ಸೇರಿಸಿದೆ. ಇದು ಶೀರ್ಷಿಕೆಯಿಂದ ಅತಿ ಕಡಿಮೆ ವ್ಯತ್ಯಾಸ ಮಾಡಿದ್ದು, 'ಪ್ರಾಯಿಕ' ಎಂಬ ಅರ್ಥದಲ್ಲಿ.

ಪೂಜ್ಯ ಲೇಖಕರು ರಾಮಾವತಾರದ ಆರಂಭದ ಕಥೆಗಳನ್ನು ಬರೆದಿರಲೂ ಸಾಕು. ಆದರೆ ನಮಗೆ ಉತ್ತರಕಾಂಡದ ಕೆಲಭಾಗ ಮಾತ್ರ ಸಿಕ್ಕಿದೆ. ಅದನ್ನು ಮಾತ್ರ

ಇಲ್ಲಿ ಕೊಡಲಾಗಿದೆ. ಕೃಷ್ಣಾವತಾರ ಪ್ರಾಯಃ ಸಾಕಷ್ಟು ಸಿಕ್ಕಿದ್ದು ಅದನ್ನು ಸಂಯೋಜಿಸಲಾಗಿದೆ. ಗೀತಾ ಪ್ರತಿ ಅಧ್ಯಾಯದ ಮಹಿಮೆ, ಭಗವಂತನ ಮಹಿಮೆಯೇ ಆದ್ದರಿಂದ ಗೀತಾ ಪ್ರತಿ ಅಧ್ಯಾಯ ಮಹಾತ್ಮೆಗಳನ್ನು ಈ ಸಂಪುಟದಲ್ಲಿಯೇ ಸೇರಿಸಿದೆ.

**ಲೇಖಕರ ಪರಿಚಯ (೧೯೧೬-೧೯೮೨)**

ಪೂಜ್ಯ ಶ್ರೀ ವಾದಿರಾಜಾಚಾರ್ಯರು ಮೂಲತಃ ಉಡುಪಿಯವರು. ಅಲ್ಲಿಯೇ ಅವರ ಪ್ರಾಥಮಿಕ ಸಂಸ್ಕೃತ ಅಧ್ಯಯನ. ಉಡುಪಿಯ ಸಂಸ್ಕೃತ ಪಾಠಶಾಲೆಯಲ್ಲಿ ನ್ಯಾಯಶಿರೋಮಣಿ ಪದವಿವರೆಗೆ ಅವರ ಅಧ್ಯಯನ ಸಾಗಿತ್ತು. ಮುಂದೆ ಶ್ರೀವಿದ್ಯಾಮಾನ್ಯತೀರ್ಥರಲ್ಲಿ ಶ್ರೀಮನ್ನ್ಯಾಯಸುಧಾಧ್ಯಯನ ಹಾಗೂ ಮಂಗಳ. ಅಂದಿನ ಪಾಂಡುರಂಗಿ ಜಯತೀರ್ಥಾಚಾರ್ಯರು (ಮುಂದೆ ಇವರೇ ಶ್ರೀ ಸತ್ಯಧ್ಯಾನತೀರ್ಥರ ಉತ್ತರಾಧಿಕಾರಿಗಳಾಗಿ ಶ್ರೀ ಸತ್ಯಪ್ರಜ್ಞತೀರ್ಥರಾದರು) ಇವರಿಗೆ ತರ್ಕತಾಂಡವಾದಿ ಪಾಠ ಹೇಳಿದ್ದರಂತೆ. ಆಚಾರ್ಯರ ಪರಿಚಯವೆಂಬುದಾಗಿ ಅವರ ಪುತ್ರ ಶ್ರೀ ರಂಗನಾಥ ಅವರು ಕಳಿಸಿದ ಮಾಹಿತಿಯನ್ನು ಪ್ರತ್ಯೇಕವಾಗಿ ನೀಡಲಾಗಿದೆ. ಅಲ್ಲದೆ ಅವರ ಶಿಷ್ಯರಾದ ಶ್ರೀ ಡಿ.ವಿ.ಸುಬ್ಬಾಚಾರ್ಯರ (ಸಿಎ) ಪುತ್ರರಾದ ಶ್ರೀ ಟಿ.ಎಸ್.ರಾಘವೇಂದ್ರನ್ ಅವರು ಕೂಡಾ ಪತ್ರಮುಖೇನ ಪೂಜ್ಯ ಆಚಾರ್ಯರ ಬಗ್ಗೆ ತಿಳಿಸಿದ್ದಾರೆ. ಆ ಪತ್ರದಲ್ಲಿನ ಉಲ್ಲೇಖನೀಯ ಕೆಲವು ಮಾತುಗಳು ಹೀಗಿವೆ.

(1) Sri Achar (Vadirajachar) was very affectionate and used to carry me as a child and because of his blessings only I am alive today running 76 years.

(ಪೂಜ್ಯ ಆಚಾರ್ಯರು ಶ್ರೀವಿದ್ಯಾಮಾನ್ಯತೀರ್ಥರ ಆದೇಶದಂತೆ ಕೊಯಮತ್ತೂರಿನ ಮಾಧ್ವ ಜನತೆಗೆ ಪಾಠ ಹೇಳುತ್ತಿದ್ದರು. ಅವರು ಕೆಲವರ್ಷ ಇದ್ದುದು ಶ್ರೀ ಡಿ.ವಿ.ಸುಬ್ಬಾಚಾರ್ಯರ ಮನೆಯಲ್ಲಿ. ಆಗ ಶ್ರೀ ಟಿ.ಎಸ್. ರಾಘವೇಂದ್ರನ್ ಇನ್ನೂ ಮಗುವಾಗಿದ್ದರು. ಅದನ್ನು ಇಲ್ಲಿ ಸ್ಮರಿಸಲಾಗಿದೆ)

(2) "Achar used to write the slokas with all details what he taught. The note books are preserved even today. The handwriting will be far better than printed ones'.

(3) His knowledge of the subject was very profound and he could even recollect the pages and lines of the commentary by Sri Vijayadhvaja Mahan on Bhagavatha.

(4) "There is a tank near the house near Sri Anjaneya swamy temple and daily twice Sri Acharya used to take holy bath in the tank in a most orthodox manner and carried water for pooja'.

(5) "Sri Acharya has written a detailed foreword to the book running for 15 pages in lucid sanskrit. The scholarship of Sri Achar was very vast and great'.

ಹೀಗೆ ಆಚಾರ್ಯರು ಸದಾಚಾರ ಮತ್ತು ಸದ್ವಿಚಾರ ಪೂರ್ಣ ಶಾಸ್ತ್ರ ಪಾಂಡಿತ್ಯದಲ್ಲಿ ರಾಜಿಯಾಗದೆ ಸದಾಚಾರ ಹಾಗೂ ಶಾಸ್ತ್ರಪರಂಪರೆಯನ್ನು ಉಳಿಸಿಕೊಂಡವರಾಗಿದ್ದರು. ಅವರು ಒಟ್ಟಾರೆ ಬಾಳಿದ ಜೀವನ ಸುಮಾರು 66 ವರ್ಷ. ಅವರು ತಮ್ಮ ಮಧ್ಯಾಹ್ನ ಸವನದಲ್ಲಿಯೇ ಹರಿಪದ ಸೇರಿದರು. ಅಷ್ಟ ರಲ್ಲಿಯೇ ಅವರು ಪೂರ್ಣಾಯುಷ್ಯದ ಸಾಧನೆ ಮಾಡಿದ್ದರೆಂದು ತೋರುತ್ತದೆ.

**ಲೇಖಕರ ಭಾಷಾಶೈಲಿ**

ಪೂಜ್ಯ ಆಚಾರ್ಯರು ಶುದ್ಧವಾದ ಕನ್ನಡ ಗದ್ಯದಲ್ಲಿ ದಕ್ಷಿಣಕನ್ನಡ ಶೈಲಿಯಲ್ಲಿ ಬರೆದಿದ್ದಾರೆ. ಹೀಗಾಗಿ ಅಲ್ಲಿನ ಕೆಲ ಪ್ರಾದೇಶಿಕ ಶಬ್ದಗಳ ಬಳಕೆ (1) ನೆಗಾಡಿದರು (2) ಕೊತುಕೊಳ್ಳಿರಿಸಿದರು ಮುಂತಾದವು ದಕ್ಷಿಣಕನ್ನಡ-ಉತ್ತರ ಕನ್ನಡೇತರ ಪ್ರದೇಶ ಭಾಷಾ ಜನರಿಗೆ ಸ್ವಲ್ಪ ಭಿನ್ನವಾಗಿ ತೋರುತ್ತದೆಯಾದರೂ ಒಟ್ಟಾರೆ ವಿಷಯ ಗ್ರಹಣ ಮಾಡಲು ಯಾವುದೇ ತೊಂದರೆಯಾಗದು. ಲೇಖಕರು ಸಂಸ್ಕೃತ ಭಾಷೆಯ ಉದ್ದಾಮ ವಿದ್ವಾಂಸರು. ಅಲ್ಲದೆ ನ್ಯಾಯ-ವೇದಾಂತ-ವ್ಯಾಕರಣ ಶಾಸ್ತ್ರಗಳ ವಿದ್ವಾಂಸ ರೆಂದು ಪೂಜ್ಯ ಪ್ರೊ.ಡಿ.ಪ್ರಹ್ಲಾಚಾರ್ಯರೇ ಮೊದಲಾದ ವಿದ್ವಾಂಸರಿಂದ ಕೇಳಿದ್ದೇನೆ. ಅಂತೆಯೇ ಅವರ ನಿರೂಪಣೆಯಲ್ಲಿ ವೇದಾಂತದ ಆಳ ಹಾಗೂ ಸತ್ವಗಳಿವೆ. ಅವರು ಎಲ್ಲೂ ಭಾಷಾ ಪಾಂಡಿತ್ಯವನ್ನಾಗಲೀ, ನಿರೂಪಣಾ ಪಾಂಡಿತ್ಯವನ್ನಾಗಲೀ ಪ್ರದರ್ಶನ ಮಾಡಿಲ್ಲ. ಅದೊಂದು ನೇರ ವಸ್ತುನಿಷ್ಠ ಪ್ರಾಮಾಣಿಕ ನಿರೂಪಣೆಯಾಗಿದೆ. ಪಾಂಡಿತ್ಯ ಪ್ರದರ್ಶನ ಎಲ್ಲೂ ಇಲ್ಲ. ಅವರ ಬರವಣಿಗೆಯಲ್ಲಿ ಎಲ್ಲೂ ಬರೆದುದನ್ನು ಅಳಿಸಿಲ್ಲ.

ಅವರೊಂದಿಗೆ ನನ್ನ ಬರವಣಿಗೆ ಮೊದಲಾದುವನ್ನು ಹೋಲಿಸಿಕೊಂಡಾಗ ನಾಚಿಕೆ ಹಾಗೂ ಮುಜುಗರವನ್ನು ಅನುಭವಿಸಿದ್ದೇನೆ. ವಿಷಯವನ್ನು ಚೆನ್ನಾಗಿ ಮನದಟ್ಟು ಮಾಡಿಕೊಂಡ ಶ್ರೇಷ್ಠ ಲೇಖನ ಸಿದ್ಧಿ ಹೊಂದಿದವರು ಪೂಜ್ಯ ಆಚಾರ್ಯರು. ಹೀಗಾಗಿ ಅವರು ಒಬ್ಬ ಶ್ರೇಷ್ಠ ಲೇಖಕರೂ, ವಿದ್ವಾಂಸರೂ ಆಗಿದ್ದಾರೆ. ಹೀಗೆ ಎರಡೂ ಗುಣಗಳುಳ್ಳವರು ತುಂಬಾ ವಿರಳ. ಅಪರೂಪ.

ಈ ಕಥೆಗಳನ್ನು ಓದುವಾಗ ಓದುಗರಿಗೆ ಕೆಲಮಟ್ಟಿಗೆ ದ್ವೈತವೇದಾಂತ ಪ್ರಮೇಯ ಜ್ಞಾನ ಇದ್ದರೆ ಹೆಚ್ಚು ಅನುಕೂಲವಾಗುತ್ತದೆ. ಇಲ್ಲದವರಿಗೆ ಮೂಲ ಗ್ರಂಥಗಳ ಹಾಗೂ ಶ್ರೀಮನ್ಮಧ್ವಾಚಾರ್ಯರ ಅಭಿಪ್ರಾಯ ಸಮೇತ ಮೂಲಗ್ರಂಥಗಳ ಅಭಿಪ್ರಾಯವೂ ಆಗಿ ಮುಂದೆ ಇನ್ನೂ ಜಿಜ್ಞಾಸೆ ಮಾಡಬೇಕೆಂಬ ಅಭಿಲಾಷೆ ಹುಟ್ಟುತ್ತದೆ. ಇಲ್ಲಿ ಕೆಲವು ಕಥೆಗಳನ್ನು ಪ್ರಮೇಯ ದೃಷ್ಟಿಯಿಂದ ನೋಡದೆ ನೀತಿಯ ದೃಷ್ಟಿಯಿಂದ ನೋಡಬೇಕು. (ಮ.ತಾ.ನಿ.ಅ.22-ಶ್ಲೋ.394-395)

ಪ್ರಕೃತ **'ಸಾವಿರ ಕಥೆಗಳು'** ಕೃತಿಯು ಕನ್ನಡ ಸಾಹಿತ್ಯದ ಸುಂದರ ಗದ್ಯದಲ್ಲಿ ಬರೆಯಲಾಗಿದೆ ಎಂದು ಈಗಾಗಲೇ ತಿಳಿಸಿದ್ದೇನೆ. ಈ ಬಗ್ಗೆ ನಮ್ಮ ನಾಡಿನ ಪ್ರಸಿದ್ಧ ಕನ್ನಡ ವಿದ್ವಾಂಸರಾದ (1)ಪ್ರೊ.ಜಿ.ವೆಂಕಟಸುಬ್ಬಯ್ಯ–ಮಾಜಿ ಅಧ್ಯಕ್ಷರು, ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು, ಮಾಜಿ ಅಧ್ಯಕ್ಷರು ಮತ್ತು ಪ್ರಧಾನ ಸಂಪಾದಕರು ಬೃಹತ್ ಕನ್ನಡ–ಕನ್ನಡ ನಿಘಂಟು, (2) ನಾಡೋಜ ಡಾ.ಎಂ.ಚಿದಾನಂದಮೂರ್ತಿ– ವಿಶ್ರಾಂತ ಕನ್ನಡ ಪ್ರಾಧ್ಯಾಪಕರು–ಪಂಪ ಪ್ರಶಸ್ತಿ ವಿಜೇತರು, ಕರ್ನಾಟಕ ಇತಿಹಾಸ ತಜ್ಞರು ಹಾಗೂ ಕನ್ನಡ ಸಾಹಿತ್ಯ ಪರಿಷತ್ತಿನ ಪ್ರಸಕ್ತ ಅಧ್ಯಕ್ಷರಾದ ಶ್ರೀ ಪುಂಡಲೀಕ ಹಾಲಂಬಿ ಇವರಿಗೆ ಪೂಜ್ಯ ಆಚಾರ್ಯರ **'ಸಾವಿರ ಕಥೆಗಳು'** ಕೃತಿಯಲ್ಲಿ ಮಾದರಿ ಯಾಗಿ ಕೆಲ ಕಥೆಗಳನ್ನು ತೋರಿಸಿ ಅವರ ಅಭಿಪ್ರಾಯಗಳನ್ನು ಕನ್ನಡ ಸಾಹಿತ್ಯ ದೃಷ್ಟಿಯಿಂದ ಶ್ರೀಗಳವರ ಆದೇಶ ಪಡೆದು ಕೊಡಲು ಕೋರಿದೆ. ಮಾದರಿ ಕಥೆಗಳನ್ನು ಹಾಗೂ ನಮ್ಮ ಯೋಜನೆಯನ್ನು ಅವರಿಗೆ ಕೊಟ್ಟು ಅವರ ಅಭಿಪ್ರಾಯಗಳನ್ನು ಕೊಡಲು ಕೋರಿದಾಗ ಇವರೆಲ್ಲರೂ ತುಂಬಾ ಅಭಿಮಾನ, ವಿಶ್ವಾಸಗಳಿಂದ ನಮ್ಮ ಗುರುಗಳಾದ ಶ್ರೀ ಶ್ರೀ ವಿದ್ಯೇಶತೀರ್ಥರ ಪ್ರಕಾಶನ ಯೋಜನೆಯನ್ನು ಮುಕ್ತಕಂಠ ದಿಂದ ಪ್ರಶಂಸಿದ್ದಲ್ಲದೆ ಪ್ರಸ್ತುತ ಲೇಖಕರ 'ಸಾವಿರ ಕಥೆಗಳು' ಕೃತಿಯನ್ನು ಭಾಷೆಯ ದೃಷ್ಟಿಯಿಂದ ಉತ್ತಮ ಕೃತಿ ಎಂದು ಕೊಂಡಾಡಿದ್ದಾರೆ. ಅವರ ಅಭಿಪ್ರಾಯಗಳನ್ನು ಒಳಗೊಂಡ ಪತ್ರಗಳನ್ನು ಈ ಹೊತ್ತಿಗೆಯಲ್ಲಿ ಸೇರಿಸಲಾಗಿದೆ.

## ನನ್ನ ಪಾತ್ರ

ಈ ಸಂಪಾದನಾ ಕಾರ್ಯದಲ್ಲಿ ಮೂಲ ಲೇಖಕರಾದ ಆಚಾರ್ಯರ ಗ್ರಂಥವನ್ನು ಯಥಾವತ್ತಾಗಿ ಮುದ್ರಣ ಮಾಡಿಸಲಾಗಿದೆ. ಅರ್ಥವಾಗದ ಶಬ್ದಗಳಿಗೆ ಅರ್ಥಗಳನ್ನು ಅಡಿಟಿಪ್ಪಣಿ, ಕೆಲವಡೆ ಕಂಸಗಳಲ್ಲಿ ನೀಡಲಾಗಿದೆ. ಕಥೆಗಳಿಗೆ ಆಕರ ಗ್ರಂಥಗಳನ್ನು ಸಾಧ್ಯವಾದಷ್ಟು ಗುರುತಿಸಿ ಅಡಿಟಿಪ್ಪಣಿಯಲ್ಲಿ ಕೊಡಲಾಗಿದೆ. ಲೇಖಕರ ಅಭಿಪ್ರಾಯಕ್ಕೆ ಚ್ಯುತಿಬಾರದಂತೆ ನೋಡಿಕೊಳ್ಳಲಾಗಿದೆ. ಈ ಕಥೆಗಳಲ್ಲಿ ಕೆಲವೊಂದು ವಿವಾದಾತ್ಮಕ ಹೇಳಿಕೆಗಳು ಸೇರಿರಬಹುದು. ಅವುಗಳನ್ನು ತಿದ್ದಿ ಬರೆಯುವ ಅಧಿಕಾರ ಸಂಪಾದಕನಿಗೆ ಇರುವುದಿಲ್ಲ. ಹಾಗಾಗಿ ಅವುಗಳನ್ನು ಲೇಖಕರ ಅಭಿಪ್ರಾಯವೆಂದೇ ಪರಿಗಣಿಸಬೇಕು.

## ಮುಂದೇನು ?

ನನ್ನ ಗುರುಗಳಾದ ಶ್ರೀಪಾದರು ಶ್ರೀವಾದಿರಾಜಾಚಾರ್ಯರ ಈ ಕೃತಿಯನ್ನು ಪ್ರಕಟಿಸಲು ಮುಂದಾಗಿರುವುದು ನಾಡಿನ ಕನ್ನಡ ಜನತೆಯ ಸುದೈವವಾಗಿದೆ. ನಮ್ಮ ಪುರಾತನ–ಸಂಸ್ಕೃತಿ ಭಾಷೆಯಲ್ಲಿರುವ ಭಾರತ ಪುರಾಣಾದಿಗಳಲ್ಲಿ ಬಂದಿರುವ ಸಾವಿರಾರು ಕಥೆಗಳನ್ನು ಸಮಸ್ತ ಕನ್ನಡಿಗರಿಗೆ ತಿಳಿಯಲೆಂದು ಪ್ರಕಟಿಸಲು ಮುಂದಾಗಿದ್ದಾರೆ. ಇದರಿಂದ ಸನಾತನ ಸಂಸ್ಕೃತಿಯ ಅರಿವಿನೊಂದಿಗೆ, ಕಥೆಗಳಿಂದ ಸಾವಿರಾರು ನೀತಿಗಳನ್ನೂ, ತಾತ್ತ್ವಿಕ ವಿಚಾರಗಳನ್ನೂ ಮಕ್ಕಳಿಗೆ, ಮಹಿಳೆಯರಿಗೆ, ಪಂಡಿತರಿಗೆ ಮುಟ್ಟಿಸುವ ಈ ಪ್ರಯತ್ನ ಎಲ್ಲರ ಆಧ್ಯಾತ್ಮಿಕ ಶ್ರೇಯಸ್ಸಿಗೆ ಕಾರಣವಾಗು ತ್ತದೆ.

ಪ್ರಕೃತ ಲೇಖಕರ ಈ ಕೃತಿಯು ಕನ್ನಡ ಗದ್ಯ ಭಾಷೆಯಲ್ಲಿನ ಒಂದು ಶ್ರೇಷ್ಠಕೃತಿ ಎಂಬುದರಲ್ಲಿ ಯಾವುದೇ ಸಂಶಯವಿಲ್ಲ. ಸಂಸ್ಕೃತ ಭಾಷಾ ವಿದ್ವಾಂಸರಿಂದ ರಚಿತವಾದ ಕನ್ನಡ ಭಾಷೆಯ ಈ ಕೃತಿಯು, ವಿಷಯ, ಸಂಸ್ಕೃತಿ, ಭಾಷಾ ದೃಷ್ಟಿಗಳಿಂದ ಮಾನ್ಯತೆ ಅರ್ಹವಾಗಿದೆ. ಇಂತಹ ಕಥೆಗಳು ಮೂಲತಃ 'ಸಣ್ಣ ಕಥೆ'ಗಳ ಗುಂಪಿಗೆ ಸೇರಿಸಬಹುದಾದ ಶ್ರೇಷ್ಠ ಪ್ರಕಾರಗಳು ಕನ್ನಡ ಸಾಹಿತ್ಯಕ್ಕೆ ಇದೊಂದು ಕೊಡುಗೆಯೆಂದೇ ಸೇರ್ಪಡೆ ಯಾಗಬೇಕಿದ್ದ ಈ ಕೃತಿ ಇಂದಾದರೂ ಬೆಳಕಿಗೆ ಬಂದಿದೆ ಎಂದು ಹಿಗ್ಗಬೇಕಾಗಿದೆ.

ಕನ್ನಡದ ಆಸ್ತಿ ಡಾ॥ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರು ಅನೇಕ ಸಣ್ಣ ಕತೆಗಳನ್ನು ಬರೆದು ಸಮಾಜದ ನ್ಯೂನತೆಗಳನ್ನು ತಮ್ಮ ಬರವಣಿಗೆಯಲ್ಲಿ ಕನ್ನಡಿ

ಹಿಡಿದಿದ್ದಾರೆ. ನಂತರದ ಕನ್ನಡದ ಗೌರಮ್ಮ, ಕುವೆಂಪು, ಚದುರಂಗ, ಅನಕೃ, ತರಾಸು, ಅನುಪಮಾ ನಿರಂಜನ, ಪ್ರೇಮಾಭಟ್ ಮೊದಲಾದ ಅನೇಕ ಲೇಖಕರು ಈ ಸಣ್ಣಕತೆಗಳ ರಚನೆಯನ್ನು ಮುಂದುವರಿಸಿರುವುದು ನಿಜಕ್ಕೂ ಶ್ಲಾಘನೀಯವಾಗಿದೆ. ಸಣ್ಣಕತೆಗಳ ಪರಂಪರೆಯು ಈಗೀಗಂತೂ ಅನೇಕ ಪತ್ರಿಕೆಗಳಲ್ಲಿ ಬಂದು ಕನ್ನಡ ವಾಙ್ಮಯ ಸಮೃದ್ಧಿಯಾಗುತ್ತಿದೆ. ಇದು ಹಾಗೆಯೇ ಬೆಳೆದು ಕರ್ನಾಟಕ ಮಾತೆಯ ಸೇವೆಯು ಚಿರಂತನವಾಗಿ ಸಿಗಲೆಂದು ಆಶಿಸೋಣ.

ಅಲ್ಲದೆ ಈ ಸಣ್ಣಕತೆಗಳ ಪರಂಪರೆಗಳು ಎಲ್ಲ ಭಾಷೆಯಲ್ಲಿಯೂ ಇವೆ. ಆಂಗ್ಲಭಾಷೆಯ ಸಾಹಿತ್ಯದ ಮೂಲಕ ಓ.ಹೆನ್ರಿ, ವಿಲಿಯಮ್‌ಬಾಯ್ಡ್ ಮೊದಲಾದವರು 19ನೇ ಶತಮಾನದದಿಂದ ಈ ಸಣ್ಣಕತೆಗಳನ್ನು ಹುಟ್ಟುಹಾಕಿದರು. ಹೀಗೆ 19ನೇ ಶತಮಾನದಿಂದ ವಿವಿಧ ಭಾಷೆಗಳಲ್ಲಿ ಸಣ್ಣಕತೆಗಳ ಆಂದೋಲನ ಆರಂಭವಾಗಿದ್ದು ಅದು ಈಗ ಎಲ್ಲಾ ಭಾಷೆಗಳಲ್ಲೂ ತುಂಬಾ ಪ್ರಬುದ್ಧವಾಗಿ ಬೆಳೆಯುತ್ತಿದೆ.

ಸಣ್ಣಕಥೆಗಳ ಬೆಳವಣಿಗೆಯು ಪ್ರಪಂಚದಲ್ಲಿ ನೋಬೆಲ್ ಬಹುಮಾನ ಪಡೆಯುವಷ್ಟರ ಮಟ್ಟಿಗೆ ಮುಂದುವರೆದಿದೆ. ಇದಕ್ಕೆ ಸಾಕ್ಷಿಯಾಗಿ 2013ರಲ್ಲಿ (11.10.2013ರಂದು) "Alice Munro' ಎಂಬ ಕೆನಡಾ ದೇಶದ ಮಹಿಳೆಗೆ ನೋಬೆಲ್ ಬಹುಮಾನವು "Master of the contemporary short story' ಎಂಬ ಕೃತಿಗೆ 'ಸಾಹಿತ್ಯ' ಪ್ರಕಾರದಡಿಯಲ್ಲಿ ಸಿಕ್ಕಿದೆ.

ಈ ಹಿನ್ನೆಲೆಯಲ್ಲಿ ಪ್ರಕೃತ ಭಾಗವತಾಶ್ರಮ ಪ್ರತಿಷ್ಠಾನದ '**ಐತರೇಯಶೋಧ ಪ್ರಕಾಶನ**'ವು ಪ್ರಕಾಶನ ಮಾಡುತ್ತಿರುವ '**ಸಾವಿರ ಕಥೆಗಳ**' ವಿವಿಧ ತರಂಗಗಳನ್ನು ಕನ್ನಡ ಜನತೆಯು ಸ್ವಾಗತಿಸುತ್ತದೆ ಎಂದು ನಂಬಿದ್ದೇನೆ. ಈ ಎಲ್ಲ ಕಥೆಗಳನ್ನೂ ನಾಲ್ಕು ತರಂಗಗಳಲ್ಲಿ ಪ್ರಕಟಿಸುವ ಆಶಯವನ್ನು ಶ್ರೀಪಾದರು ಇಟ್ಟುಕೊಂಡಿದ್ದಾರೆ. ಇದನ್ನು ಕನ್ನಡ ಸಾಹಿತ್ಯ ಪರಿಷತ್ತು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿವಿಧ ವಿಶ್ವವಿದ್ಯಾಲಯಗಳಲ್ಲಿನ ಕನ್ನಡ ವಿಭಾಗಗಳು, ಕನ್ನಡದ ವಿವಿಧ ಸಂಸ್ಥೆಗಳು ಈ ಪ್ರಕಾಶನಗಳನ್ನು ಪರಿಶೀಲಿಸಿ–ಸೂಕ್ತ ಪ್ರೋತ್ಸಾಹ ನೀಡುವರೆಂದು ನಂಬಿದ್ದೇನೆ.

ಪ್ರಕೃತ ಲೇಖಕರು ತಮ್ಮ ಕೃತಿ ಎಂದು ಎಲ್ಲೂ ಹೆಸರಿಸದೆ ಬರೆದಿರುವುದು ಮತ್ತೊಂದು ಬಹು ಆಶ್ಚರ್ಯಪಡಬೇಕಾದ ವಿಷಯವಾಗಿದೆ. ಅವರ ಮನೆಯವರು ಹಾಗೂ ಅವರ ಶಿಷ್ಯರಿಂದ ಈ ಕೃತಿಯು ಶ್ರೀವಾದಿರಾಜಾಚಾರ್ಯರದೇ ಎಂದು ಸಾಬೀತಾಗಿದೆ. ಇಲ್ಲದಿದ್ದರೆ ಇದೊಂದು ಗೂಢಕರ್ತೃಕ ಕೃತಿಯಾಗಿ ಉಳಿಯುತ್ತಿತ್ತು. ಇದರಿಂದ ಶ್ರೀವಾದಿರಾಜಾಚಾರ್ಯರು ತಮ್ಮ ಕೃತಿಯನ್ನು ರಚಿಸಿದುದು ಕೇವಲ

ಭಗವಂತನ ಸೇವೆಗಾಗಿ ಎಂದು ಅವರ ಜೀವನದಿಂದ ತಿಳಿಯುತ್ತದೆ. ಅವರಿಗೆ ಕನ್ನಡ ಜನತೆ, ವಿಶೇಷವಾಗಿ ಬ್ರಾಹ್ಮಣ ಸಮಾಜ ಯಾವ ಪ್ರಶಸ್ತಿ, ಸಮ್ಮಾನ ನೀಡಿದರೂ ಕಡಿಮೆ. ಆದರೆ ಸಮ್ಮಾನ ಸ್ವೀಕರಿಸಲು ಲೇಖಕರೇ ಹರಿಪಾದ ಸೇರಿದ್ದಾರೆ! ಯಾರಿಗೆ ತಾನೇ ನೀಡುವುದು!!

ಆ ಚೇತನಕ್ಕೆ ಸಮಾಜ ಶ್ರದ್ಧಾಪೂರ್ಣ ನಮನ ಬಿಟ್ಟರೆ ಏನೂ ಮಾಡಲೂ ಸಾಧ್ಯವಿಲ್ಲ! ಮಾಡಿದರೆ ಅದು ಕೇವಲ ಕರ್ತವ್ಯ ದೃಷ್ಟಿಯಿಂದ ಮಾತ್ರ. ಈ ಕೆಲಸವನ್ನು ಕೊಯಮತ್ತೂರು ಮಾಧ್ವಸಮಾಜ 8.8.1971ರಂದು ಅವರಿದ್ದಾಗಲೇ ಸಮ್ಮಾನಿಸಿ ಕೃತಜ್ಞತೆ ಸಲ್ಲಿಸಿದೆ. ಸಮ್ಮಾನ ಪತ್ರದ ಆಂಗ್ಲ ಹಾಗೂ ಸಂಸ್ಕೃತ ಲಿಪಿಯ (ಕನ್ನಡ ಭಾಷೆಯ) ಪ್ರತಿಯನ್ನು ಈ ಪುಸ್ತಕದಲ್ಲಿ ಸೇರಿಸಲಾಗಿದೆ.

ಹೀಗೆ ಶ್ರೀವಾದಿರಾಜಾಚಾರ್ಯ–ಕೊಯಂಬತ್ತೂರು ಇವರು ವೇದಸಾಹಿತ್ಯ ದಿಂದ ಪುರಾಣಸಾಹಿತ್ಯದವರೆಗೆ ಇದ್ದ ಸಂಸ್ಕೃತದ 'ಸಣ್ಣಕಥೆ(ತೆ)'ಗಳನ್ನು ಕನ್ನಡ ಭಾಷೆಗೆ ಸುಂದರ ಸುಲಲಿತ ಸುಬೋಧಕ ರೀತಿಯಲ್ಲಿ ನಿರೂಪಿಸಿ 'ಸಣ್ಣಕತೆ' ಸಾಹಿತ್ಯ ಪ್ರಕಾರವನ್ನು ಶ್ರೀಮಂತಗೊಳಿಸಿದ್ದಾರೆ. ಈ ಸಂಪಾದನೆಯಲ್ಲಿ ದೋಷಗಳು ಎಷ್ಟೇ ತಿದ್ದಿದ್ದರೂ ಇನ್ನೂ ಉಳಿಯಲು ಸಾಕು. ಓದುಗರು ತಿಳಿಸಿದಲ್ಲಿ ಮುಂದಿನ ಮುದ್ರಣದಲ್ಲಿ ತಿದ್ದಲಾಗುವುದು.

**ಕೃತಜ್ಞತೆಗಳು**

ಈ ಕೃತಿಯನ್ನು ಪರಿಶೀಲಿಸಿ, ಪರಿಷ್ಕರಿಸಿ, ಸಂಪಾದಿಸಲು (ಮೂಲಕೃತಿಗೆ ಭಂಗ ಬರದಂತೆ) ಆದೇಶ ನೀಡಿದ ಪರಮಪೂಜ್ಯ ಗುರುಗಳಾದ ಶ್ರೀ ಶ್ರೀ ವಿದ್ಯೇಶತೀರ್ಥ ಶ್ರೀಪಾದರ ಪಾದಕಮಲಗಳಲ್ಲಿ ಹೃತ್ಪೂರ್ವಕ ಅನಂತ ಸಾಷ್ಟಾಂಗ ಪ್ರಣಾಮಗಳು.

ಪೂಜ್ಯ ಶ್ರೀ ಶ್ರೀ ಬನ್ನಂಜೆ ರಾಘವೇಂದ್ರ ತೀರ್ಥ ಸ್ವಾಮೀಜಿ(ಉಡುಪಿ) ಬೆಂಗಳೂರು ಇವರು ಶ್ರೀವಾದಿರಾಜಾಚಾರ್ಯರ ಜೀವನದ ಬಗ್ಗೆ ಮಾಹಿತಿ ನೀಡಿದ್ದಾರೆ. ಅವರಿಗೆ ನನ್ನ ಅನೇಕ ಸಾಷ್ಟಾಂಗ ಪ್ರಣಾಮಗಳು.

ಸಂಪಾದನೆಯ ಕಾರ್ಯದಲ್ಲಿ ಸೂಕ್ತ ಸಲಹೆಗಳನ್ನು ಸೂಚಿಸಿದ ಪೂಜ್ಯ ಗುರುಗಳಾದ ಡಾ.ಹೆಚ್.ಸತ್ಯನಾರಾಯಣಾಚಾರ್ಯರಿಗೆ ಅನೇಕ ಪ್ರಣಾಮಗಳು.

ಪ್ರಕೃತ ಕೃತಿಯನ್ನು ಪರಿಶೀಲಿಸಿ ಸಾಹಿತ್ಯ ಹಾಗೂ ಭಾಷಾದೃಷ್ಟಿಯಿಂದ ತಮ್ಮ ಸಂತೋಷ, ಮೆಚ್ಚುಗೆ ವ್ಯಕ್ತಪಡಿಸಿ ಕನ್ನಡ ಜನತೆಗೆ ಉಪಯುಕ್ತ ಕೃತಿಯಾಗುತ್ತದೆ ಎಂದು ಅಭಿಪ್ರಾಯಪಟ್ಟ ಸನ್ಮಾನ್ಯ ಶ್ರೀಯುತ

(1) ಪುಂಡಲೀಕ ಹಾಲಂಬಿ, ಅಧ್ಯಕ್ಷರು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

(2) ಪ್ರೊ.ಜಿ.ವೆಂಕಟಸುಬ್ಬಯ್ಯ, ಎಂ.ಎ. ಬಿ.ಟಿ., ಮಾಜಿ ಅಧ್ಯಕ್ಷರು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಮಾಜಿ ಅಧ್ಯಕ್ಷರು ಹಾಗೂ ಪ್ರಧಾನ ಸಂಪಾದಕರು, ಕನ್ನಡ-ಕನ್ನಡ ನಿಘಂಟು ಇತ್ಯಾದಿ.

(3) ನಾಡೋಜ ಡಾ.ಎಂ.ಚಿದಾನಂದಮೂರ್ತಿ, ಎಂ.ಎ. ಪಿ.ಹೆಚ್‌ಡಿ., ನಿವೃತ್ತ ಕನ್ನಡ ಪ್ರಾಧ್ಯಾಪಕರು, ಕೇಂದ್ರ ಸಾಹಿತ್ಯ ಅಕೆಡಮಿ ಪ್ರಶಸ್ತಿ, ಪಂಪಪ್ರಶಸ್ತಿ ವಿಜೇತರು, ಖ್ಯಾತ ಕರ್ನಾಟಕ ಇತಿಹಾಸ ತಜ್ಞರು ಇತ್ಯಾದಿ ಇವರಿಗೆ ನನ್ನ ಹೃತ್ಪೂರ್ವಕ ಕೃತಜ್ಞತೆಗಳು

ನನ್ನ ನೆಚ್ಚಿನ ಗೆಳೆಯ ಶ್ರೀರಾಯಸಂ ಶ್ರೀಧರ, ನವ್ಯ ಕನ್ನಡ ಸಾಹಿತಿ, ಮಾಜಿ ಅಧ್ಯಕ್ಷರು, ಕನ್ನಡ ಸಾಹಿತ್ಯ ಪರಿಷತ್ತು, ಬಳ್ಳಾರಿ ಜಿಲ್ಲೆ (ಸಣ್ಣ ಕತೆಗಳು, ಹಾಸ್ಯಲೇಖನಗಳು, ಧಾರ್ಮಿಕ ರಸಪ್ರಶ್ನೆಗಳ ಶಿಬಿರಗಳು ಮುಂತಾದ ಕನ್ನಡ ಭಾಷಾ ಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡವರು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ಇವರಿಂದ ಸಮ್ಮಾನಿತರು) ಇವರಿಗೆ ನನ್ನ ಈ ಸಂಗ್ರಹ-ಸಂಪಾದನೆ ಕೆಲಸದಲ್ಲಿ ಆಗಾಗ ನೆರವು ನೀಡಿದ್ದಕ್ಕಾಗಿ ಕೃತಜ್ಞತೆಗಳು.

ಮಾನ್ಯ ಶ್ರೀ ಟಿ.ಎಸ್.ರಾಘವೇಂದ್ರನ್ ಹಾಗೂ ಶ್ರೀ ರಂಗನಾಥ (ಶ್ರೀವಾದಿರಾಜಾಚಾರ್ಯರ ಪುತ್ರ) ಇವರು ಪೂಜ್ಯ ಆಚಾರ್ಯರ ಬಗ್ಗೆ ಜೀವನ ಚರಿತ್ರೆಯ ಅಪೂರ್ವ ಮಾಹಿತಿ ನೀಡಿದ್ದಕ್ಕಾಗಿ ನನ್ನ ಕೃತಜ್ಞತೆಗಳು. ಕೃತಿಯ ಸಂಪಾದನೆಯಲ್ಲಿ ಅಲ್ಲಲ್ಲಿ ನೆರವನ್ನಿತ್ತ ಚಿ॥ವಾಸಿಷ್ಠ ಶ್ರೀನಿಧಿಗೆ ಅನೇಕ ಅಭಿನಂದನೆಗಳು. ಕಲಾತ್ಮಕವಾಗಿ ಮತ್ತು ಹೃದಯಂಗಮವಾಗಿ ಮುಖಪುಟವನ್ನು ವಿನ್ಯಾಸ ಮಾಡಿರುವ ಶ್ರೀ ಕೆ.ಎಂ.ಶೇಷಗಿರಿಯವರಿಗೆ ಅಭಿನಂದನೆಗಳು.

ಕೃತಿಯನ್ನು ಅಂದವಾಗಿ ಬಲು ಶೀಘ್ರವಾಗಿ ಅಕ್ಷರ ಜೋಡಣೆ ಮಾಡಿರುವ ಶ್ರೀ ಆರ್.ಎಸ್.ಪ್ರೇಮಕುಮಾರ್ ಅವರಿಗೆ ಅನೇಕ ಕೃತಜ್ಞತೆಗಳು.

ಕೃತಿಯನ್ನು ಸಕಾಲದಲ್ಲಿ ಮುದ್ರಣ ಮಾಡಿದ ವಾಗರ್ಥ ಪ್ರಿಟಿಂಗ್ ಪ್ರೆಸ್ ಅವರಿಗೆ ಕೃತಜ್ಞತೆಗಳು.

**ಡಾ. ಜಿ.ಶೇಷಗಿರಿ ಆಚಾರ್ಯ, ವೇದಗರ್ಭ**

# ವಿಷಯಾನುಕ್ರಮಣಿಕೆ


| | |
|---|---|
| ಅನುಗ್ರಹ ಸಂದೇಶ : ಶ್ರೀ ಶ್ರೀ ವಿದ್ಯೇಶತೀರ್ಥರುಸ ಭಂಡಾರಕೇರಿ ಮಠ | iii |
| ಶ್ರೀ ಶ್ರೀ ಬನ್ನಂಜೆ ರಾಘವೇಂದ್ರತೀರ್ಥರು | vi |
| ಪುಸ್ತಕದ ಬಗ್ಗೆ | |
| ಶ್ರೀ ಪುಂಡಲೀಕ ಹಾಲಂಬಿ–ಅಧ್ಯಕ್ಷರು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು | x |
| ಪ್ರೊ. ಡಾ.ಜಿ. ವೆಂಕಟಸುಬ್ಬಯ್ಯ, ಬೆಂಗಳೂರು | xi |
| ನಾಡೋಜ ಡಾ. ಎಂ. ಚಿದಾನಂದಮೂರ್ತಿ, ಬೆಂಗಳೂರು | xii |
| ಲೇಖಕರ ಪರಿಚಯ | xiv |
| ವಾದಿರಾಜಾಚಾರ್ಯರಿಗೆ ಸನ್ಮಾನ – ಸಂಸ್ಕೃತ ಲಿಪಿ | xvi |
| ಇಂಗ್ಲೀಷ್‌ನಲ್ಲಿ | xvii |
| ಮುನ್ನುಡಿ | xix |
| ಸಂಕೇತಾಕ್ಷರಗಳು | xxxviii |
| ಲೇಖಕರ ಹಸ್ತಪ್ರತಿ | xxxix |
| **01 ಭಗವನ್ನಾಮದ ಮಹಿಮೆ** | **1** |
| **02. ಭಗವತ್ಕಥೆಯ ಮಹಿಮೆ** | **7** |
| **03. ಬ್ರಹ್ಮದೇವರು ಮಾಡಿದ ಸ್ತೋತ್ರ** | **11** |
| **04. ಭಗವಂತನ ಅವತಾರಗಳು** | **17** |
| **05. ಉಡುಪಿ ಶ್ರೀಕೃಷ್ಣ** | **21** |
| **06. ವೇದವ್ಯಾಸದೇವರು** | **25** |
| **07. ಮತ್ಸ್ಯಾವತಾರದ ಕಥೆ** | **34** |
| **08. ಅಮೃತಮಥನ** | **37** |
| **09. ರುದ್ರದೇವರು ಮೋಹಿನಿಗೆ ಮೋಹಿತರಾದದ್ದು** | **42** |
| **10. ಕಪಿಲದೇವರ ಚರಿತ್ರೆಯು** | **44** |
| **11. ರಾಮಾಶ್ವಮೇಧ** | **54** |
| ಸುಬಾಹುರಾಜನ ಯುದ್ಧ | 54 |
| ಸುಬಾಹುರಾಜನ ಯುದ್ಧ ದಮನನ ಪರಾಜಯ | 57 |
| ಸುಬಾಹುರಾಜನು ಯುದ್ಧಕ್ಕೆ ಬಂದದು | 59 |
| ಸುಕೇತು ಲಕ್ಷ್ಮೀನಿಧಿಗಳ ಯುದ್ಧ | 60 |
| ಚಿತ್ರಾಂಗನ ಮರಣ | 63 |

| | |
|---|---|
| ಸುಬಾಹುರಾಜನ ಪರಾಜಯವು | 64 |
| ಸುಬಾಹುವು ಶರಣಾಗತನಾದದ್ದು | 65 |
| ಸತ್ಯವಂತನ ಕಥೆಯು | 69 |
| ಗೋವನ್ನು ಹಿಂಸಿಸಬಾರದು | 74 |
| ವಿದ್ಯುನ್ಮಾಲಿಯ ವಧೆ | 78 |
| ಆರಣ್ಯಕಮುನಿಯ ಕಥೆ | 84 |
| ಯೋಗಿನಿಯ ದರ್ಶನ | 93 |
| ವೀರಮಣಿಯ ಮಗನಾದ ರುಕ್ಮಾಂಗದನು ಕುದುರೆಯನ್ನು ಕಟ್ಟಿದ್ದು | 95 |
| ವೀರಮಣಿಯು ಯುದ್ಧಕ್ಕೆ ಬಂದದ್ದು | 98 |
| ರುಕ್ಮಾಂಗದನ ಪರಾಜಯವು | 100 |
| ವೀರಮಣಿಯ ಪರಾಜಯವು | 102 |
| ಪುಷ್ಕಲನ ಮರಣ | 105 |
| ಶತ್ರುಘ್ನನ ಪರಾಜಯ | 107 |
| ಹನುಮಂತದೇವರ ಪರಾಕ್ರಮ | 108 |
| ಹನುಮಂತದೇವರು ಪುಷ್ಕಲಾದಿಗಳನ್ನು ಬದುಕಿಸಿದ್ದು | 110 |
| ಶ್ರೀರಾಮದೇವರ ಆಗಮನ | 114 |
| ವೀರಮಣಿಯ ಶರಣಾಗತಿ | 115 |
| ಸಾತ್ವಿಕ ಬ್ರಾಹ್ಮಣನ ಕಥೆ | 117 |
| ಪಾಪಕರ್ಮಗಳ ಫಲವು | 120 |
| ಕುಂಡಲನಗರಕ್ಕೆ ಕುದುರೆಯ ಪ್ರವೇಶ | 126 |
| ಅಂಗದನ ದೌತ್ಯ | 129 |
| ಚಂಪಕನ ಪರಾಕ್ರಮ | 132 |
| ಚಂಪಕನ ಪರಾಜಯ | 134 |
| ಸುರಥನ ಪರಾಕ್ರಮ | 135 |
| ಶ್ರೀರಾಮದೇವರ ಪರಮಾನುಗ್ರಹ | 138 |
| ಲವನು ಕುದುರೆಯನ್ನು ಕಟ್ಟಿದ್ದು | 139 |
| ಕಾಲಜಿತ್ ಮೃತನಾದದ್ದು | 142 |
| ಲವ ಪುಷ್ಕಲರ ಯುದ್ಧ | 144 |
| ಹನುಮಂತದೇವರಿಗೂ ಲವನಿಗೂ ಯುದ್ಧ | 146 |
| ಶತ್ರುಘ್ನನಿಗೂ ಲವನಿಗೂ ಯುದ್ಧ | 147 |
| ಶತ್ರುಘ್ನನು ಮೂರ್ಛಿತನಾದದ್ದು | 149 |

| | |
|---|---|
| ಕುಶಲವರ ವಿಜಯವು | 152 |
| ರಾಮದೇವರ ಕುದುರೆಯು ಹಿಂದೆ ಬಂದದ್ದು | 155 |
| ಯಜ್ಞಶಾಲೆಯ ವೈಭವವು | 156 |
| ದಿಗ್ವಿಜಯದ ವೃತ್ತಾಂತ | 157 |
| ಕುಶಲವರ ಚರಿತ್ರೆ | 158 |
| **12. ಶ್ರೀಕೃಷ್ಣಾವತಾರವು** | **161** |
| ಉಪೋದ್ಘಾತ | 161 |
| ಭಗವಂತನ ಗೋಕುಲಕ್ಕೆ ಗಮನವು | 177 |
| ನಂದವಸುದೇವರ ಸಂಗಮ | 181 |
| ಪೂತನಾಸಂಹಾರವು | 182 |
| ಪೂತನಾರಾಕ್ಷಸಿಗೆ ಮೋಕ್ಷವಾಯಿತೇ? | 185 |
| ಶಕಟಾಸುರನ ಸಂಹಾರವು | 191 |
| ತೃಣಾವರ್ತನ ಸಂಹಾರವು | 192 |
| ಕೃಷ್ಣಬಲರಾಮರ ನಾಮಕರಣವು | 194 |
| ಕೃಷ್ಣನ ಬಾಲಕ್ರೀಡೆಗಳು | 196 |
| ಕೃಷ್ಣನನ್ನು ಒರಳಿಗೆ ಕಟ್ಟಿದ್ದು | 199 |
| ನಲಕೂಬರ ಮಣಿಗ್ರೀವರ ವಿಮೋಚನೆ | 201 |
| ವೃಂದಾವನಕ್ಕೆ ಹೋದದ್ದು | 204 |
| ವತ್ಸಾಸುರನ ಸಂಹಾರವು | 206 |
| ಬಕಾಸುರನ ವಧವು | 207 |
| ಧೇನುಕಾಸುರ ಸಂಹಾರವು | 208 |
| ಕಾಲಿಯಮರ್ದನ | 210 |
| ಕಾಲಿಯನು ರಮಣಕ ದೀಪವನ್ನು ಬಿಡಲು ಕಾರಣವು | 214 |
| ಪ್ರಲಂಬಾಸುರವಧ | 216 |
| ಕೃಷ್ಣನು ವನಾಗ್ನಿಯನ್ನು ಪಾನಮಾಡಿದ್ದು | 218 |
| ಗೋಪೀವಸ್ತ್ರಾಪಹಾರವು | 219 |
| ವಿಪ್ರಪತ್ನಿಯರಿಗೆ ಅನುಗ್ರಹವು | 222 |
| ಗೋವರ್ಧನ ಯಾಗವು | 225 |
| ಗೋವರ್ಧನೋದ್ಧಾರವು | 228 |
| ಗೋಪರು ಆಶ್ಚರ್ಯಪಟ್ಟದ್ದು | 231 |

| | | |
|---|---|---|
| | ಗೋವಿಂದನ ಅಭಿಷೇಕ | 232 |
| | ನಂದನನ್ನು ವರುಣದೂತನು ಸೆಳೆದುಕೊಂಡುಹೋದದ್ದು | 234 |
| | ಗೋಪಿಯರೊಡನೆ ಕೃಷ್ಣನ ವಿಹಾರ | 235 |
| | ಗೋಪಿಯರು ಕೃಷ್ಣನನ್ನು ಹುಡುಕಿದ್ದು | 238 |
| | ಗೋಪಿಗೀತೆಯು | 241 |
| | ರಾಸಕ್ರೀಡೆಯು | 244 |
| | ಸುದರ್ಶನನ ಶಾಪಮೋಕ್ಷ | 246 |
| | ಶಂಖಚೂಡನ ಸಂಹಾರವು | 247 |
| | ಯುಗಲಗೀತೆ | 248 |
| | ವೃಷಭಾಸುರನ ಸಂಹಾರವು | 252 |
| | ಕಂಸನು ಗೋಕುಲಕ್ಕೆ ಅಕ್ರೂರನನ್ನು ಕಳುಹಿಸಿದ್ದು | 253 |
| | ಕೇಶಿಯ ವಧವು | 257 |
| | ನಾರದರ ಆಗಮನವು | 258 |
| | ವ್ಯೋಮಾಸುರನ ಸಂಹಾರವು | 259 |
| | ಗೋಕುಲಕ್ಕೆ ಅಕ್ರೂರನ ಆಗಮನ | 260 |
| | ಅಕ್ರೂರನು ಭಗವಂತನನ್ನು ಮಧುರಾಪಟ್ಟಣಕ್ಕೆ ಕರೆದುಕೊಂಡು ಹೋದದ್ದು | 262 |
| | ಕೃಷ್ಣನು ಮಧುರಾ ಪಟ್ಟಣವನ್ನು ನೋಡಲಿಕ್ಕೆ ಹೋದದ್ದು | 266 |
| | ಧನುರ್ಭಂಗವು | 268 |
| | ಕುವಲಯಾಪೀಡದ ಸಂಹಾರವು | 270 |
| | ಚಾಣೂರ ಮುಷ್ಟಿಕರ ಸಂಹಾರವು | 272 |
| | ಕಂಸನ ಸಂಹಾರವು | 273 |
| | ಉಗ್ರಸೇನನ ಪಟ್ಟಾಭಿಷೇಕವು | 275 |
| **13.** | **ಯಶೋದಾನಂದಗೋಪರು ಕೃಷ್ಣನನ್ನು ನೋಡಿದ್ದು** | **277** |
| **14.** | **ಶ್ರೀಕೃಷ್ಣನು ವಿಪ್ರಶಿಶುವನ್ನು ತಂದುಕೊಟ್ಟದು** | **279** |
| **15.** | **ಪಾರಿಜಾತ ವೃಕ್ಷವು** | **285** |
| **16.** | **ಷಟ್ಪುರವಧ** | **307** |
| **17.** | **ಭಾನುಮತೀಹರಣ** | **317** |
| **18.** | **ಧನ್ಯಾಶ್ಚರ್ಯೋಪಾಖ್ಯಾನ** | **322** |
| **19.** | **ನರಕಾಸುರನ ವಧೆ** | **333** |
| **20.** | **ಪಾರಿಜಾತವು** | **338** |

21. ಹಂಸಡಿಭಿಕರ ಜನನ 346
ಹಂಸಾದಿಗಳ ತಪಸ್ಸು 347
ಹಂಸಡಿಭಿಕರು ಮೃಗಬೇಟೆಗೆ ಹೋದದ್ದು 348
ಹಂಸಡಿಭಿಕರು ದುರ್ವಾಸರನ್ನು ಅವಮಾನಮಾಡಿದ್ದು 350
ಕೃಷ್ಣಪರಮಾತ್ಮನು ದುರ್ವಾಸರನ್ನು ಸಮಾಧಾನಪಡಿಸಿದನು 353
ಹಂಸಡಿಭಿಕರು ಜನಾರ್ದನನ್ನು ಕೃಷ್ಣನ ಬಳಿಗೆ ಕಪ್ಪ ಕೇಳಲಿಕ್ಕೆ ಕಳುಹಿಸಿದ್ದು 356
ಜನಾರ್ದನನಿಗೆ ಭಗವಂತನ ಸಂದರ್ಶನವು 357
ಸಾತ್ಯಕಿಯು ಹಂಸಡಿಭಿಕರಿದ್ದಲ್ಲಿಗೆ ಹೋಗಿ ಬಂದದ್ದು 359
ಶ್ರೀಕೃಷ್ಣನು ಯುದ್ಧಕ್ಕೆ ಬಂದುದು 363
ಹಂಸಡಿಭಿಕರು ಯುದ್ಧಕ್ಕೆ ಬಂದುದು 364
ವಿಚಕ್ರನಿಗೂ ಭಗವಂತನಿಗೂ ಯುದ್ಧವು 365
ಹಂಸಬಲರಾಮರ ಯುದ್ಧ 366
ಸಾತ್ಯಕಿ ಡಿಭಿಕರ ಯುದ್ಧ 367
ವಸುದೇವ ಉಗ್ರಸೇನರಿಗೂ ಹಿಡಿಂಬನಿಗೂ ಯುದ್ಧವು 368
ಹಂಸಡಿಭಿಕರ ಮರಣವು 371

22. ಶ್ರೀನಿವಾಸಕಲ್ಯಾಣ 375
ಉಪೋದ್ಘಾತ 375
ನಿಮಿರಾಜನ ಕಥೆ 377
ವೃಷಭಾಚಲದ ಇತರ ನಾಮಗಳು 378
ನಾರಾಯಣಾದ್ರಿ 380
ವೃಷಭಾಚಲ 381
ಅಂಜನಾಚಲ 382
ಶೇಷಾಚಲ 384
ವೇಂಕಟಾಚಲ 386
ಭಗವಂತನ ಸರ್ವೋತ್ತಮತ್ವವು 389
ಭಗವಂತನ ವೆಂಕಟಾಚಲಕ್ಕೆ ಆಗಮನ 392
ಸ್ವಾಮಿಪುಷ್ಕರಿಣಿಯ ಮಹಿಮೆ 393
ಚೋಲರಾಜನಿಗೆ ಶಾಪ 394
ಶ್ರೀನಿವಾಸದೇವರಿಗೆ ವರಾಹದೇವರ ದರ್ಶನ 397
ಶ್ರೀನಿವಾಸದೇವರ ಮೃಗಬೇಟೆ 399

| | | |
|---|---|---|
| | ಪದ್ಮಾವತೀದೇವಿಯರ ಚರಿತ್ರೆ | 402 |
| | ಶ್ರೀನಿವಾಸದೇವರು ಬಕುಳೆಯನ್ನು ಕಳುಹಿಸಿದ್ದು | 405 |
| | ಭಗವಂತನ ಕೊರವಂಜಿರೂಪಧಾರಣೆ | 409 |
| | ಶ್ರೀನಿವಾಸದೇವರ ವಿವಾಹ ನಿರ್ಣಯ | 414 |
| | ಲಗ್ನಪತ್ರಿಕೆಯನ್ನು ಬರೆದುದು | 421 |
| | ಬಕುಳೆಯ ಆಗಮನ | 425 |
| | ದೇವತೆಗಳನ್ನು ಕರೆಯುವುದಕ್ಕೆ ಗರುಡಶೇಷರ ಆಗಮನ | 426 |
| | ಬ್ರಹ್ಮದೇವರ ಆಗಮನ | 427 |
| | ದೇವತೆಗಳ ಆಗಮನ | 431 |
| | ದೇವತೆಗಳನ್ನು ನಾನಾಕಾರ್ಯಗಳಲ್ಲಿ ಆಜ್ಞಾಪಿಸಿದ್ದು | 433 |
| | ರಮಾದೇವಿಯರ ಆಗಮನ | 434 |
| | ಶ್ರೀನಿವಾಸದೇವರ ಮಂಗಳಸ್ನಾನ | 437 |
| | ಕುಲದೇವತಾ ಪ್ರತಿಷ್ಠೆ | 440 |
| | ಕುಲದೇವತಾಸಮಾರಾಧನೆಯು | 441 |
| | ನಾರಾಯಣಪುರಕ್ಕೆ ಪ್ರಯಾಣ | 446 |
| | ಶುಕಾಚಾರ್ಯರ ಆತಿಥ್ಯ | 448 |
| | ವರಪೂಜಾ ಶ್ರೀನಿವಾಸದೇವರ ಮೆರವಣಿಗೆ | 449 |
| | ವರಪೂಜೆ | 452 |
| | ಶ್ರೀನಿವಾಸದೇವರ ಮದುವೆ | 455 |
| | ನಾಕಬಲಿ | 457 |
| | ಉಪಸಂಹಾರ | 459 |
| | ಆಕಾಶರಾಜನ ವೈಕುಂಠಯಾತ್ರೆ | 461 |
| | ತೋಂಡಮಾನ ವಸುದಾನರ ಕಲಹ | 463 |
| | ತೋಂಡಮಾನನ ಚರಿತೆ | 468 |
| | ಶ್ರೀನಿವಾಸದೇವರ ಬ್ರಹ್ಮೋತ್ಸವವು | 471 |
| **23.** | **ಕೂರ್ಮಬ್ರಾಹ್ಮಣನ ಕಥೆ** | **474** |
| **24.** | **ಕುಂಬಾರಭೀಮನ ಕಥೆ** | **479** |
| **25.** | **ಶ್ರೀನಿವಾಸದೇವರ ಮಹಿಮೆ** | **483** |
| **26.** | **ಬುದ್ಧದೇವರ ಕಥೆ** | **485** |
| **27.** | **ಕಲ್ಕಿದೇವರ ಕಥೆ** | **488** |
| **28.** | **ಹರಿಯೇ ಪರದೇವತೆಯು** | **489** |

| | | |
|---|---|---|
| 29. | **ಪರಶುಕ್ಲತ್ರಯರು** | **494** |
| 30. | **ಷಣ್ಮಹಿಷಿಯರು** | **501** |
| | ನೀಲಾದೇವಿಯು | 501 |
| | ಭದ್ರಾದೇವಿಯು | 505 |
| | ಮಿತ್ರವಿಂದಾದೇವಿಯು | 507 |
| | ಕಾಳಿಂದೀದೇವಿಯು | 510 |
| | ಲಕ್ಷಣಾದೇವಿಯು | 512 |
| | ಜಾಂಬವತೀದೇವಿಯು | 515 |
| 31. | **ಗೀತಾಮಹಿಮೆ** | **522** |
| | ಭಗವದ್ಗೀತೆಯ ಪ್ರಥಮಾಧ್ಯಾಯದ ಮಹಿಮೆ | 522 |
| | ಭಗವದ್ಗೀತೆಯ ದ್ವಿತೀಯಾಧ್ಯಾಯದ ಮಹಿಮೆ | 523 |
| | ಭಗವದ್ಗೀತೆಯ ಮೂರನೇ ಅಧ್ಯಾಯದ ಮಹಿಮೆ | 527 |
| | ಭಗವದ್ಗೀತೆಯ ನಾಲ್ಕನೇ ಅಧ್ಯಾಯ ಮಹಿಮೆ | 529 |
| | ಭಗವದ್ಗೀತೆಯ ಐದನೇ ಅಧ್ಯಾಯದ ಮಹಿಮೆ | 531 |
| | ಭಗವದ್ಗೀತೆಯ ಆರನೇ ಅಧ್ಯಾಯದ ಮಹಿಮೆ | 532 |
| | ಭಗವದ್ಗೀತೆಯ ಏಳನೇ ಅಧ್ಯಾಯದ ಮಹಿಮೆ | 534 |
| | ಭಗವದ್ಗೀತೆಯ ಎಂಟನೇ ಅಧ್ಯಾಯ ಮಹಿಮೆ | 536 |
| | ಭಗವದ್ಗೀತೆಯ ಒಂಭತ್ತನೇ ಅಧ್ಯಾಯದ ಮಹಿಮೆ | 538 |
| | ಭಗವದ್ಗೀತೆಯ ಹತ್ತನೇ ಅಧ್ಯಾಯ ಮಹಿಮೆ | 541 |
| | ಭಗವದ್ಗೀತೆಯ ಹನ್ನೊಂದನೇ ಅಧ್ಯಾಯದ ಮಹಿಮೆ | 545 |
| | ಭಗವದ್ಗೀತೆಯ ಹನ್ನೆರಡನೇ ಅಧ್ಯಾಯದ ಮಹಿಮೆ | 550 |
| | ಭಗವದ್ಗೀತೆಯ ಹದಿಮೂರನೇ ಅಧ್ಯಾಯದ ಮಹಿಮೆ | 552 |
| | ಭಗವದ್ಗೀತೆಯ ಹದಿನಾಲ್ಕನೇ ಅಧ್ಯಾಯದ ಮಹಿಮೆ | 554 |
| | ಭಗವದ್ಗೀತೆಯ ಹದಿನೈದನೇ ಅಧ್ಯಾಯದ ಮಹಿಮೆ | 556 |
| | ಭಗವದ್ಗೀತೆಯ ಹದಿನಾರನೇ ಅಧ್ಯಾಯದ ಮಹಿಮೆ | 558 |
| | ಭಗವದ್ಗೀತೆಯ ಹದಿನೇಳನೇ ಅಧ್ಯಾಯದ ಮಹಿಮೆ | 559 |
| | ಭಗವದ್ಗೀತೆಯ ಹದಿನೆಂಟನೇ ಅಧ್ಯಾಯದ ಮಹಿಮೆ | 561 |
| 32. | **(ದೇವತಾ) ತಾರತಮ್ಯವು** | **563** |
| | **ಆಧಾರ ಗ್ರಂಥಗಳು** | **567** |
| | **ನಮ್ಮ ಪ್ರಕಟಣೆಗಳು** | **568** |

# ಸಂಕೇತಾಕ್ಷರಗಳು

| | | |
|---|---|---|
| ಪ.ಪು | : | ಪದ್ಮಪುರಾಣ |
| ಗ.ಪು.ಬ್ರ.ಕಾಂ. | : | ಗರುಡಪುರಾಣ ಬ್ರಹ್ಮಕಾಂಡ |
| ಬ್ರ.ಸೂ.ಭಾ. | : | ಬ್ರಹ್ಮಸೂತ್ರ ಭಾಷ್ಯ |
| ಮ.ತಾ.ನಿ. | : | ಮಹಾಭಾರತ ತಾತ್ಪರ್ಯ ನಿರ್ಣಯ |
| ವ.ಪ. ಅ | : | ವನಪರ್ವ ಅಧ್ಯಾಯ |
| ಭಾ. | : | ಭಾಗವತ |
| ಪ.ಪು.ಪಾ.ಖಂ. | : | ಪದ್ಮಪುರಾಣ ಪಾತಾಳಖಂಡ |
| ಪ.ಪು.ಉ.ಖಂ. | : | ಪದ್ಮಪುರಾಣ ಉತ್ತರಖಂಡ |
| ರು.ವಿ.ಸ. | : | ರುಕ್ಮಿಣೀಶವಿಜಯ ಸರ್ಗ |
| ಹ.ವಂ.ಭ.ಪ. | : | ಹರಿವಂಶ ಭವಿಷ್ಯಪರ್ವ |
| ಹ.ವಂ.ವಿ.ಪ. | : | ಹರಿವಂಶ ವಿಷ್ಣುಪರ್ವ |
| ಹ.ವಂ.ಪ. | : | ಹರಿವಂಶಪರ್ವ |
| ಭ.ಪು. | : | ಭವಿಷ್ಯೋತ್ತರ ಪುರಾಣ |
| ಬ್ರ.ಪು. | : | ಬ್ರಹ್ಮಾಂಡ ಪುರಾಣ |
| ಪು.ನಾ.ಚೂ. | : | ಪುರಾಣನಾಮ ಚೂಡಾಮಣಿ |
| ತ.ಉ.ಭಾ. | : | ತಲವಕಾರ ಉಪನಿಷತ್ ಭಾಷ್ಯ |
| ಛಾಂ.ಭಾ. | : | ಛಾಂದೋಗ್ಯೋಪನಿಷದ್ಭಾಷ್ಯ |
| E.P.W. | : | Encyclopedia of Puranic words. |

## 1000 ಪರಶುಕ್ಲತ್ರಯಪ್ರ

ಪರ ಎಂದರೆ ಪರಮಾತ್ಮನು. ಶುಕ್ಲ ಎಂದರೆ ಶುದ್ಧ ಎಂದು. ಅಂದರೆ ಪರಮಾತ್ಮನ ವಿಷಯದಲ್ಲಿ ಶುದ್ಧರಾದವರು ಪರಶುಕ್ಲರು. ಅಂದರೆ ಪರಮಾತ್ಮನಿಗೆ ಅಪರಾಧವನ್ನು ಮಾಡದೆ ಇರುವವರು. ಅವರು ಮೂರು ಜನರು. ರಮಾದೇವಿಯರು, ವಾಯುದೇವರು, ಭಾರತೀದೇವಿಯರು ಇವರು. ವಾಯುದೇವರನ್ನು ಹೇಳಿದ್ದರಿಂದ ಅವರು ಬ್ರಹ್ಮಪದವಿಗೆ ಬರುವವರಾದ ಕಾರಣ ಬ್ರಹ್ಮದೇವರೂ ಶುದ್ಧರೆಂದಾಯಿತು. ಹಾಗೆಯೇ ಭಾರತೀದೇವಿಯರು ಸರಸ್ವತೀದೇವಿಯರ ಪದವಿಗೆ ಬರುವವರಾದ ಕಾರಣ ಅವರೂ ಶುದ್ಧರೆಂದಾಯಿತು. ಆದುದರಿಂದ ಮೂರು ಜನರೂ ಎಂದು ಹೇಳಿದ್ದರೆ, ರಮಾದೇವಿಯರೂ, ಬ್ರಹ್ಮವಾಯುಗಳೂ, ಭಾರತೀಸರಸ್ವತಿಯರೂ ಪರಮಾತ್ಮನ ವಿಷಯದಲ್ಲಿ ಯಾವ ಅಪರಾಧವನ್ನು ಮಾಡದೆ ಶುದ್ಧರಾಗಿರುವವರು ಎಂದು ಅಭಿಪ್ರಾಯವು.

---

ಕೃಷ್ಣಮೃಗಾಭಿಮಾನಿದೇವತೆಯ ಅವತಾರನಾದ ಸಾತ್ಯಕಿಯು ಅರ್ಜುನನನ್ನು ಕೃಷ್ಣಪರಮಾತ್ಮನಿಗೆ ಸಮಾನನನ್ನಾಗಿ ತಿಳಿಯುತಿದ್ದನು.

ಹೀಗೆ ದೇವತೆಗಳೇ ಶ್ರೀಭಗವಂತನನ್ನು ಕೆಲವು ಕೆಲವು ಸಮಯದಲ್ಲಿ ಅವಮಾನಮಾಡಿರುವಾಗ ಯಕ್ಷರುಗಳು ಗಂಧರ್ವರು ಮನುಷ್ಯರು ಮಾಡಿರುವರು ಎಂದು ಏನು ಹೇಳಬೇಕು. ಆದುದರಿಂದ ರಮಾದೇವಿಯರು ವಾಯುದೇವರು ಭಾರತೀದೇವಿಯರು ಇವರು ಮಾತ್ರ ಪರಮಾತ್ಮನಲ್ಲಿ ಅಪರಾಧವನ್ನು ಮಾಡದೆ ಇರುವವರು. ಪರಶುಕ್ಲತ್ರಯ ಎಂದು ಹೇಳಲ್ಪಡುವರು.

---

ಶ್ರೀಕೃಷ್ಣಾರ್ಪಣಮಸ್ತು

# ಭಗವನ್ನಾಮದ ಮಹಿಮೆಯು [1]

ಒಂದು ಸಮಯದಲ್ಲಿ ನಾರದರು ತಂದೆಯಾದ ಬ್ರಹ್ಮದೇವರನ್ನು ನೋಡಲಿಕ್ಕಾಗಿ ಮೇರುಪರ್ವತದ ಶಿಖರಕ್ಕೆ ಹೋದರು. ಅಲ್ಲಿ ಕೂತಿದ್ದ ಜಗತ್ಸ್ವಾಮಿಯಾದ ಬ್ರಹ್ಮದೇವರಿಗೆ ನಮಸ್ಕರಿಸಿ ನಾರದರು 'ಪೂಜ್ಯರೇ! ಭಗವಂತನ ನಾಮಕ್ಕೆ ಏನು ಶಕ್ತಿಯಿದೆಯೆಂಬುದನ್ನು ಹೇಳಿರಿ. ಭಗವನ್ನಾಮದ ಮಹಿಮೆಯು ಹೇಗೆ ಇರುವುದು? ಕಲಿಯುಗದಲ್ಲಿ ಭಗವಂತನ ಬಂಧಕಶಕ್ತಿಯಿಂದ ಮೋಹಿತರಾಗಿ ಆ ಸರ್ವೋತ್ತಮನಾದ ಭಗವಂತನನ್ನು ಜನರು ಸರಿಯಾಗಿ ತಿಳಿಯದವರಾಗಿದ್ದಾರೆ' ಎಂದು ಕೇಳಿದರು.

ಅದಕ್ಕೆ ಬ್ರಹ್ಮದೇವರು 'ಮಗನೇ! ಈ ಕಲಿಯುಗದಲ್ಲಿ ವಿಶೇಷವಾಗಿ ಭಗವಂತನ ನಾಮವನ್ನು ಉಚ್ಚರಿಸುತ್ತಾ ಭಗವಂತನಲ್ಲಿ ಭಕ್ತಿಯನ್ನು ಮಾಡಬೇಕು. ಪ್ರಾಯಶ್ಚಿತ್ತವನ್ನು ಹೇಳದಿರುವ ಪಾಪಗಳೂ ಪ್ರಯತ್ನಪೂರ್ವಕವಾಗಿ ಭಕ್ತಿಯಿಂದ ಭಗವನ್ನಾಮವು ಸ್ಮರಿಸುವುದರಿಂದ ಪರಿಹೃತವಾಗುವುದು. ಯಾರು ನಿತ್ಯವೂ ಹರಿ ಎಂದು ಎರಡು ಅಕ್ಷರಗಳನ್ನು ಜಪಿಸುವರೋ ಅವರು ಅದರಿಂದಲೇ ಸರ್ವಪಾಪ ರಹಿತರಾಗುವರು. ತಪಸ್ಸೂ ಕರ್ಮವೂ ಮೊದಲಾದ ಎಲ್ಲಾ ಪ್ರಾಯಶ್ಚಿತ್ತಗಳಿಗಿಂತಲೂ ಭಗವಂತನ ಸ್ಮರಣೆಯೇ ಶ್ರೇಷ್ಠವಾದದ್ದು. ಬೆಳಿಗ್ಗೆ ರಾತ್ರಿಯಲ್ಲಿ ಸಾಯಂಕಾಲದಲ್ಲಿ ಮಧ್ಯಾಹ್ನಾದಿಗಳಲ್ಲಿ ನಾರಾಯಣನನ್ನು ಸ್ಮರಿಸುವವನಾಗಿ ಪಾಪರಹಿತನಾಗಿ ಭಗವಂತನನ್ನೇ ಹೊಂದುತ್ತಾನೆ. ವಿಷ್ಣು ಸಂಸ್ಮರಣೆಯಿಂದಲೇ ಸಮಸ್ತ ಪಾಪಪರಿಹಾರವಾಗುವುದು. ಸ್ವರ್ಗವು ಸಿಗುವುದು. ಮೋಕ್ಷವೂ ಸಿಗುವುದು. ಯಾರಿಗೆ ಜಪಹೋಮಾದಿಗಳನ್ನು ಮಾಡುವಾಗ ವಾಸುದೇವನಲ್ಲಿಯೇ ಮನಸ್ಸು

---

1. ಪ.ಪು.ಉ.ಖಂ. ಅ–72

ಇರುವುದೋ ಆ ಜಪಹೋಮಾದಿಗಳು ಅಕ್ಷಯಫಲವುಳ್ಳವುಗಳಾಗುವುವು. ಪುನಃ ಹಿಂದೆ ತಿರುಗಿಬರುವ ಸ್ವರ್ಗವೆಲ್ಲಿ? ಮುಕ್ತಿಗೆ ಕಾರಣವಾದ ಉತ್ತಮವಾದ ವಾಸುದೇವನ ಜಪವೆಲ್ಲಿ? ನಮೋ ನಾರಾಯಣಾಯ ಎಂಬ ಮಾತೆಂಬ ಸರಸ್ವತಿಯು ಎಲ್ಲಿ ಹರಿಯುವುದೋ ಅದು ಉತ್ತಮವಾದ ತೀರ್ಥವು. ಆದುದರಿಂದ ರಾತ್ರಿಹಗಲುಗಳಲ್ಲಿ ವಿಷ್ಣುಸ್ಮರಣೆಯನ್ನು ಮಾಡುವುದರಿಂದ ಸಮಸ್ತಪಾಪಕ್ಷಯವನ್ನು ಹೊಂದಿ ನರಕವನ್ನು ಹೊಂದುವುದಿಲ್ಲ. ದೇವರ ನಾಮೋಚ್ಚಾರಣೆಯಿಂದ ಪಾಪವೆಲ್ಲವೂ ಹೋಗುತ್ತದೆಂದು ಸತ್ಯವಾಗಿಯೂ ಹೇಳುತ್ತೇನೆ. ರಾಮ ರಾಮ ರಾಮ ಎಂದು ಪುನಃ ಪುನಃ ಜಪಿಸುವ ಚಂಡಾಲನೂ ಪವಿತ್ರನಾಗುತ್ತಾನೆ. ಭಗವಂತನ ನಾಮೋಚ್ಚಾರಣೆಯನ್ನು ಮಾಡುವ ಮಾತ್ರದಿಂದ ಕುರುಕ್ಷೇತ್ರ ಕಾಶೀ ಗಯಾ ದ್ವಾರಕಾ ಇತ್ಯಾದಿ ಸಮಸ್ತ ಕ್ಷೇತ್ರ ತೀರ್ಥಗಳಿಗೆ ಹೋದ ಫಲವು ಬರುವುದು. ಯಾರು ಕೃಷ್ಣ ಕೃಷ್ಣ ಎಂದು ಯಾವಾಗಲೂ ಹೇಳುತ್ತಾ ಇರುತ್ತಾನೋ ಅವನು ಈ ಲೋಕವನ್ನು ಬಿಟ್ಟು ಭಗವಂತನ ಸನ್ನಿಧಾನದಲ್ಲಿ ಸಂತೋಷಪಡುತ್ತಾ ಇರುತ್ತಾನೆ. ನರಸಿಂಹ ಎಂದು ಯಾರು ಹೇಳುತ್ತಿರುವನೋ ಅವನು ಕಲಿಯುಗದಲ್ಲಿ ಮಹಾಪಾಪದಿಂದ ರಹಿತ ನಾಗುವನು. ಕೃತಯುಗದಲ್ಲಿ ಭಗವಂತನನ್ನು ಧ್ಯಾನಮಾಡುತ್ತಾ ತ್ರೇತಾಯುಗದಲ್ಲಿ ಜಪಯಾಗಗಳನ್ನು ಮಾಡುತ್ತಾ ದ್ವಾಪರಯುಗದಲ್ಲಿ ಪೂಜೆಯನ್ನು ಮಾಡುತ್ತಾ ಯಾವ ಫಲವನ್ನು ಹೊಂದುವನೋ ಆ ಫಲವನ್ನು ಕಲಿಯುಗದಲ್ಲಿ ಭಗವಂತನನ್ನು ಭಕ್ತಿಯಿಂದ ಸ್ತೋತ್ರಮಾಡಿ ಹೊಂದುವನು. ಮತ್ಸ್ಯ, ಕೂರ್ಮ, ವರಾಹ, ನರಸಿಂಹ, ವಾಮನ, ಪರಶುರಾಮ, ರಾಮ, ಕೃಷ್ಣ, ಬುದ್ಧ, ಕಲ್ಕಿ ಎಂದು ಪರಮಾತ್ಮನ ಹತ್ತು ಅವತಾರಗಳು ಪ್ರಸಿದ್ಧವಾಗಿವೆ. ಈ ಅವತಾರರೂಪಗಳ ನಾಮವನ್ನು ಹೇಳುವ ಮಾತ್ರದಿಂದಲೇ ಬ್ರಹ್ಮಹತ್ಯೆಯನ್ನು ಮಾಡಿದವನೂ ಶುದ್ಧಿಯನ್ನು ಹೊಂದುವನು' ಇತ್ಯಾದಿ ರೀತಿಯಾಗಿ ಹೇಳಿದರು.

ಆಗ ನಾರದರು ಬ್ರಹ್ಮದೇವರೊಡನೆ 'ಸಾವಿರಾರು ದೇವತೆಗಳು ಇರುವರು. ಪಿತೃಗಳು ಯಕ್ಷರೂ ಕಿಂನರರೂ ಭೂತಗಳೂ ಪ್ರೇತಗಳೂ ಪಿಶಾಚಗಳೂ ಇರುವರು. ಅವರ ನಾಮಗಳಿಗೆಲ್ಲಾ ಇಂತಹ ಮಹಿಮೆಯು ಇರುವುದಿಲ್ಲ, ಶ್ರೀಭಗವಂತನ ನಾಮದ ಮಹಿಮೆಯನ್ನು ಕೇಳಿದೆನು. ಆದರೆ ಸ್ಮರಣೆಯಿಂದಲೇ ಪಾಪಪರಿಹಾರವಾಗುವುದು. ತೀರ್ಥಸ್ನಾನ ಮಾಡಬೇಕೆಂದು ಭೂಮಿಯಲ್ಲಿ ಯಾಕೆ ಸಂಚರಿಸಬೇಕು? ಭಗವನ್ನಾಮ ಮಹಿಮೆಯನ್ನು ಕೇಳಿದರೇ ಮೋಕ್ಷವಾಗುವುದು. ಯಾರ ಬಾಯಿಯಲ್ಲಿ ರಾಮ ರಾಮ ಎಂಬ ನಾಮವು ಉಚ್ಚರಿಸಲ್ಪಡುತ್ತಿರುವುದೋ ಆ

ಮುಖವೇ ದೊಡ್ಡ ತೀರ್ಥವು. ಅದೇ ದೊಡ್ಡ ಕ್ಷೇತ್ರವು. ಭಗವಂತನ ಯಾವ ನಾಮ ಗಳನ್ನು ಕೀರ್ತನ ಮಾಡಬೇಕು? ಅದನ್ನು ನನಗೆ ಹೇಳಬೇಕು' ಎಂದು ಕೇಳಿದರು.

ಬ್ರಹ್ಮದೇವರು 'ಶ್ರೀಭಗವಂತನು ಸರ್ವತ್ರ ವ್ಯಾಪ್ತನಾಗಿ ಇರುವನು. ಆದ್ಯಂತ ರಹಿತನು. ಆ ಭಗವಂತನಿಂದಲೇ ನಾನು ಹುಟ್ಟಿರುವೆನು. ಆ ಭಗವಂತನ ನಾಮಗಳನ್ನು ಕೈಲಾಸಾಧಿಪತಿಯಾದ ರುದ್ರದೇವರೊಡನೆ ಕೇಳು. ಅಲ್ಲಿಗೆ ಹೋಗು' ಎಂದು ಹೇಳಿದರು.

ತಂದೆಯ ಮಾತನ್ನು ಕೇಳಿ ನಾರದರು ನಾಮಮಾಹಾತ್ಮ್ಯೆಯನ್ನು ತಿಳಿಯಲು ಕೈಲಾಸಕ್ಕೆ ಹೋದರು. ಕೈಲಾಸಶಿಖರದಲ್ಲಿ ಕೂತಿದ್ದ ಗಣಗಳಿಂದ ಸಹಿತರಾಗಿದ್ದ ರುದ್ರದೇವರನ್ನು ನಾರದರು ನೋಡಿದರು. ಉದ್ದಕ್ಕೆ ನಮಸ್ಕಾರ ಮಾಡಿದರು. ಅವರನ್ನು ನೋಡಿ ರುದ್ರದೇವರು ಆಶ್ಚರ್ಯದಿಂದ ಅರಳಿದ ಕಣ್ಣುಳ್ಳವರಾಗಿ ಇಲ್ಲಿಗೆ ಬರಲಿಕ್ಕೆ ಕಾರಣವೇನೆಂದು ಕೇಳಿದರು.

ನಾರದರು 'ನಾನು ಬ್ರಹ್ಮದೇವರ ಬಳಿಗೆ ಹೋಗಿದ್ದೆನು. ಅಲ್ಲಿ ನಾನು ಪಾಪಪರಿಹಾರಕವಾದ ಭಗವಂತನ ಮಹಿಮೆಯನ್ನು ಕೇಳಿದೆನು. ನಾರಾಯಣನ ನಾಮಕ್ಕೆ ಏನು ಶಕ್ತಿಯಿರುವುದೆಂಬುದನ್ನು ಬ್ರಹ್ಮದೇವರು ವಿವರಿಸಿ ಹೇಳಿದರು. ನಾನು ಕೇಳಿದೆನು. ತರುವಾಯ ಬ್ರಹ್ಮದೇವರೊಡನೆ ನಾರಾಯಣನ ಸಹಸ್ರನಾಮಗಳನ್ನು ಕೇಳಿದೆನು. ಅದಕ್ಕೆ ಅವರು ನಿಮ್ಮ ಹತ್ತಿರ ಕೇಳಿ ತಿಳಿದುಕೊಳ್ಳಬೇಕೆಂದರು. ಆದರಿಂದ ತಮ್ಮ ಬಳಿಗೆ ಬಂದಿರುವೆನು. ಈ ಘೋರವಾದ ಕಲಿಯುಗದಲ್ಲಿ ಜನರು ಅಲ್ಪಾ ಯುಷ್ಯ ಉಳ್ಳವರಾಗಿರುವರು. ಅಧರ್ಮಗಳಲ್ಲಿ ಆಸಕ್ತರಾಗಿರುವರು. ಭಗವಂತನ ನಾಮವನ್ನು ಹೇಳುವವರೇ ಇಲ್ಲ. ಬ್ರಾಹ್ಮಣರು ಪಾಷಂಡಿಗಳಾಗಿರುವರು. ಧರ್ಮಗಳನ್ನು ಬಿಟ್ಟಿರುವರು. ಸಂಧ್ಯಾವಂದನೆಯನ್ನು ಮಾಡದೆ ಇರುವರು. ವ್ರತಭ್ರಷ್ಟರಾಗಿರುವರು. ಬ್ರಾಹ್ಮಣರಂತೆಯೇ ಕ್ಷತ್ರಿಯರೂ ವೈಶ್ಯರೂ ಶೂದ್ರರೂ ಕೆಟ್ಟಿರುವರು. ದೇವರಲ್ಲಿ ಭಕ್ತಿಯುಳ್ಳವರೇ ಇಲ್ಲ. ಒಬ್ಬರೂ ಧರ್ಮ ಅಧರ್ಮಗಳನ್ನು ಹಿತ ಅಹಿತಗಳನ್ನೂ ತಿಳಿಯುವವರು ಇಲ್ಲ. ಇದನ್ನೆಲ್ಲಾ ತಿಳಿದುಕೊಂಡು ನಾನು ನಿಮ್ಮ ಬಳಿಗೆ ಬಂದಿರುವೆನು? ಇತ್ಯಾದಿ ರೀತಿಯಿಂದ ಹೇಳಲು ರುದ್ರದೇವರು ನಾರದರ ವಾಕ್ಯಗಳನ್ನು ಕೇಳಿ ಆಶ್ಚರ್ಯದಿಂದ ಅರಳಿದ ಕಣ್ಣುಳ್ಳವರಾಗಿ ಭಗವಂತನ ನಾಮಗಳನ್ನು ಸ್ಮರಿಸುತ್ತಾ ರೋಮಾಂಚಿತಗಾತ್ರರಾದರು. ''ನಾರದ! ಒಂದು ದಿವಸ ದಲ್ಲಿ ಪಾರ್ವತಿಯು ನನ್ನೊಡನೆ 'ಕೈಲಾಸಾಧಿಪತೇ! ಪರಮೈಶ್ವರ್ಯ ಉಳ್ಳವರಾದ ನೀವು ಏನು ಜಪಿಸುತ್ತಿರುವಿರಿ?' ಎಂದು ಕೇಳಿದಳು. ಆಗ ಪಾರ್ವತಿಗೆ ನಾನು

ಪರಮಾತ್ಮನ ಸಹಸ್ರನಾಮಗಳನ್ನು ಹೇಳಿರುವೆನು. ಅವುಗಳನ್ನು ನಿನಗೆ ಹೇಳುವೆನು'' ಎಂದು ಹೇಳಿ ರುದ್ರದೇವರು ತಾನು ಪಾರ್ವತಿಗೆ ಹೇಳಿದ್ದ ಸಹಸ್ರನಾಮಗಳನ್ನು ನಾರದರಿಗೆ ಹೇಳಿದರು.

ನಾರದರು ಒಂದು ಸಮಯದಲ್ಲಿ ಕೈಲಾಸದಿಂದ ನೈಮಿಷಾರಣ್ಯಕ್ಕೆ ಬಂದರು. ಅಲ್ಲಿ ಇದ್ದ ಎಲ್ಲಾ ಋಷಿಗಳು ನಾರದರನ್ನು ನೋಡಿ ವಿಶೇಷವಾಗಿ ಅವರಿಗೆ ಪೂಜಿಸಿದರು. ಆಶ್ಚರ್ಯದಿಂದ ಅರಳಿದ ಕಣ್ಣುಳ್ಳವರಾಗಿ ವೈಷ್ಣವರಾದ ನಾರದರ ಮೇಲೆ ಹೂವಿನ ಮಳೆಯನ್ನು ಸುರಿಸಿದರು. ಅರ್ಘ್ಯ ಪಾದ್ಯಾದಿಗಳನ್ನು ಕೊಟ್ಟು ಆರತಿಯನ್ನು ಮಾಡಿದರು. ಹಣ್ಣುಗೆಡ್ಡೆಗಳನ್ನು ಸಮರ್ಪಿಸಿ ಉದ್ದಕ್ಕೆ ನಮಸ್ಕರಿಸಿದರು. 'ತಮ್ಮ ದರ್ಶನವಾದ ಕಾರಣ ನಾವು ಕೃತಾರ್ಥರಾದೆವು. ತಮ್ಮ ಅನುಗ್ರಹದಿಂದ ನಾವು ಪುರಾಣಗಳನ್ನು ಕೇಳಿರುವೆವು. ನಮಗೆ ಹೇಗೆ ಸರ್ವಪಾಪಪರಿಹಾರ ವಾಗುವುದು? ದಾನದಿಂದಲೂ ತಪಸ್ಸಿನಿಂದಲೂ ತೀರ್ಥಗಳಿಂದಲೂ ಯಜ್ಞ ಗಳಿಂದಲೂ ಯೋಗಧ್ಯಾನ ಇಂದ್ರಿಯನಿಗ್ರಹಗಳಿಂದಲೂ ಶಾಸ್ತ್ರಸಮೂಹ ಗಳಿಂದಲೂ ರಹಿತನಾದ ಪುರುಷನಿಗೂ ಹೇಗೆ ಉತ್ತಮ ಲೋಕ ಪ್ರಾಪ್ತಿಯಾಗು ವುದು?' ಎಂದು ಕೇಳಿದರು.

ಆಗ ನಾರದರು 'ಕೈಲಾಸ ಶಿಖರದಲ್ಲಿ ಕೂತಿದ್ದ ಜಗತ್ತಿಗೆ ಗುರುವಾದ ರುದ್ರದೇವರಿಗೆ ನಮಸ್ಕರಿಸಿ ಪಾರ್ವತೀದೇವಿಯು 'ಪೂಜ್ಯರೇ! ತಾವು ಉತ್ತಮ ದೇವತೆಯಾಗಿರುವಿರಿ. ಸರ್ವಜ್ಞರಾಗಿರುವಿರಿ. ತಮ್ಮ ಲಿಂಗವನ್ನು ಬೃಹಸ್ಪತ್ಯಾದಿ ದೇವತೆಗಳೇ ಪೂಜಿಸುತ್ತಿರುವರು. ನಿಮ್ಮನ್ನು ಪೂಜಿಸಿದವನು ಅಭೀಷ್ಟಸಿದ್ಧಿಯನ್ನು ಹೊಂದುವನು. ಸರ್ವಶಕ್ತಿಯುಳ್ಳವರಾಗಿರುವಿರಿ. ಹೀಗಿರುವ ನೀವು ದಿಗಂಬರ ರಾಗಿದ್ದುಕೊಂಡು ಯಾವಾಗಲೂ ಯಾರನ್ನೋ ಧ್ಯಾನ ಮಾಡುತ್ತಿರುವಿರಲ್ಲಾ! ನೀವು ಯಾಕೆ ಜಟಾಧಾರಿಯಾಗಿ ಭಸ್ಮವನ್ನು ಹಚ್ಚಿಕೊಂಡು ತಪಸ್ಸನ್ನು ಮಾಡುತ್ತಿರುವಿರಿ? ನೀವು ಯಾವುದನ್ನು ಜಪಿಸುವಿರಿ? ಇದನ್ನು ತಿಳಿದುಕೊಳ್ಳಬೇಕೆಂದು ನನಗೆ ಬಹಳ ಕುತೂಹಲವಿರುವುದು. ನಾನು ತಮ್ಮ ಅನುಗ್ರಹಕ್ಕೆ ಪಾತ್ರಳಾಗಿದ್ದರೆ ಪ್ರಿಯಳಾಗಿದ್ದರೆ ಅದನ್ನು ತಾವು ಹೇಳಬೇಕು' ಎಂದು ಕೇಳಿದರು.

ಆಗ ರುದ್ರದೇವರು 'ಪಾರ್ವತಿ! ಈ ವಿಷಯವನ್ನು ನಾನು ಯಾರಿಗೂ ಹೇಳಿಲ್ಲ. ಇದು ಅತ್ಯಂತ ರಹಸ್ಯವಾದದ್ದು. ನೀನು ನನ್ನ ಭಕ್ತಳಾಗಿಯೂ ಪ್ರಿಯಳಾಗಿಯೂ ಇರುವುದರಿಂದ ಹೇಳುವೆನು. ಪೂರ್ವದಲ್ಲಿ ಕೃತಯುಗದಲ್ಲಿ ಜನರೆಲ್ಲರೂ ವಿಶುದ್ಧಬುದ್ಧಿಯುಳ್ಳವರಾಗಿ ವಿಷ್ಣುವನ್ನೇ ಸರ್ವೋತ್ತಮನೆಂದು ತಿಳಿದುಕೊಂಡು

ಭಜಿಸುತ್ತಿದ್ದರು. ಅದರಿಂದ ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಸಿದ್ಧಿಯನ್ನು ಹೊಂದುತ್ತಿದ್ದರು. ಇತರ ದೇವತೆಗಳನ್ನು ಪೂಜಿಸುತ್ತಿದ್ದಿಲ್ಲ. ತರುವಾಯ ಪರಮಾತ್ಮನು ಒಂದು ಅಂಶದಿಂದ ಅವತರಿಸಿ ಬ್ರಹ್ಮಾದಿದೇವತೆಗಳನ್ನು ಪೂಜಿಸಿ ತೋರಿಸಿದನು. ದೇವತೆಗಳನ್ನು ಪಿತೃಗಳನ್ನೂ ಬ್ರಾಹ್ಮಣರನ್ನು ಭಗವಂತನು ಲೋಕಶಿಕ್ಷೆಗಾಗಿ ಪೂಜಿಸಿದನು. ಆಮೇಲೆ ಜನರು ಬ್ರಹ್ಮಾದಿದೇವತೆಗಳನ್ನೂ ಪಿತೃಗಳನ್ನೂ ಬ್ರಾಹ್ಮಣರನ್ನೂ ಪೂಜಿಸತೊಡಗಿದರು. ಪರಮಾತ್ಮನು ನನ್ನೊಡನೆ 'ರುದ್ರ! ನೀನು ನನ್ನಿಂದ ಹೆಚ್ಚಾಗಿ ಲೋಕದಲ್ಲಿ ಪೂಜಿತನಾಗಬೇಕು. ದ್ವಾಪರಾದಿಯುಗದಲ್ಲಿ ನಾನು ಮನುಷ್ಯಾದಿರೂಪದಿಂದ ಅವತರಿಸಿ ನಿನ್ನನ್ನು ಪೂಜಿಸಿ ನಿನ್ನಿಂದ ವರವನ್ನು ಪಡೆಯುವೆನು. ನಿನ್ನ ಸರ್ವೋತ್ತಮತ್ವವನ್ನು ಹೇಳುವ ಆಗಮಗಳನ್ನು ಮಾಡಿ ಜನರು ನನ್ನಲ್ಲಿ ವಿಮುಖರಾಗುವಂತೆ ಮಾಡು. ಇನ್ನು ಮೇಲೆ ಬರತಕ್ಕ ಅಯೋಗ್ಯ ಜನರು ಅಧಮಲೋಕಕ್ಕೆ ಹೋಗುವಂತೆ ನನ್ನನ್ನು ಅಪ್ರಸಿದ್ಧನನ್ನಾಗಿ ಮಾಡು' ಎಂದು ಹೇಳಿದನು. ಆಗ ನಾನು ಪರಮಾತ್ಮನಿಗೆ ನಮಸ್ಕರಿಸಿ 'ಭಗವಂತನೇ! ಸಹಸ್ರ ಬ್ರಹ್ಮಹತ್ಯೆಗಳ ಪಾಪವಾದರೂ ಪರಿಹೃತವಾಗುವುದು. ಆದರೆ ನಿನ್ನನ್ನು ಅವಮಾನ ಮಾಡಿದ ಪಾಪವು ಮಾತ್ರ ಕೋಟಿ ನೂರು ಕಲ್ಪಗಳಲ್ಲಿಯೂ ಹೋಗಲಾರದಲ್ಲಾ! ಆದುದರಿಂದ ನಾನು ನೀನು ಹೇಳಿದಂತೆ ಮಾಡಿದರೆ ಹೇಗೆ ಪವಿತ್ರವಾಗುವೆನು? ನನಗೆ ಪ್ರಾಯಶ್ಚಿತ್ತವನ್ನು ಹೇಳು' ಎಂದು ಹೇಳಿಕೊಂಡೆನು. ಆಗ ಭಗವಂತನು ಪ್ರಸನ್ನನಾಗಿ ತನ್ನ ತತ್ವವನ್ನು ನನಗೆ ಉಪದೇಶಿಸಿದನು. ಆದರಿಂದ ನಾನು ಅಧಿ ಕನಾಗಿರುವೆನು. ಆ ಭಗವಂತನನ್ನೇ ನಾನು ಯಾವಾಗಲೂ ತಪಸ್ಸು ಮಾಡುವೆನು. ಸ್ತೋತ್ರ ಮಾಡುವೆನು. ಧ್ಯಾನ ಮಾಡುವೆನು. ಆದರಿಂದಲೇ ನಾನು ಜಗತ್ತಿನಲ್ಲಿ ಮಹಾಮಹಿಮೆಯುಳ್ಳವನಾಗಿರುವೆನು' ಎಂದು ಹೇಳಿದರು. ಆಗ ಪಾರ್ವತಿಯು ನನಗೆ ಆ ಭಗವಂತನ ಮಹಿಮೆಯನ್ನು ಹೇಳಬೇಕೆಂದು ಕೇಳಿಕೊಳ್ಳಲು ರುದ್ರ ದೇವರು ವಾಸುದೇವರ ಸಹಸ್ರನಾಮವೆಂದು ಹೆಸರುಳ್ಳ ಪರಮಾತ್ಮನ ಸಾವಿರನಾಮ ಗಳನ್ನು ಹೇಳಿದರು. ಆ ಸಹಸ್ರನಾಮಗಳಲ್ಲಿಯೇ 'ಬ್ರಹ್ಮರುದ್ರಾದ್ಯುತ್ಕೃಷ್ಟ ಚೇತನಃ, ಶಂಭೋಃ ಪಿತಾಮಹಃ, ಬ್ರಹ್ಮಪಿತಾ, ಶಕ್ರಾದ್ಯಧೀಶ್ವರಃ, ರುದ್ರಶೀರ್ಷೈಕನೂಪುರಃ, ಯೋಗಿನೀಗ್ರಸ್ತಗಿರಿಜಾತ್ರಾತಾ, ಮೇಷರೂಪಶಂಕರ ವಾಹನ, ಮೇಷರೂಪ ಶಿವತ್ರಾತಾ, ಗೌರೀಸೌಭಾಗ್ಯದಃ, ಬ್ರಹ್ಮೇಂದ್ರಾದ್ಯಾನತೈಷೀಕಃ, ಸ್ವರ್ನೀತಗರ್ದ ಭಶ್ವಾದಿಃ' ಇತ್ಯಾದಿ ವಿಷ್ಣು ಸರ್ವೋತ್ತಮತ್ವವನ್ನು ಸ್ಥಾಪಿಸುವ ನಾಮಗಳನ್ನು ಹೇಳಿರುವರು. ಇದನ್ನು ಕೇಳಿ ಪಾರ್ವತೀದೇವಿಯರು 'ನಾನು ಧನ್ಯಳಾದೆನು.

ಕೃತಾರ್ಥಳಾದೆನು. ಬಹುಕಷ್ಟ! ಲೋಕದಲ್ಲಿ ಮಹಾಸುಖವನ್ನು ಕೊಡುವ ಭಗವಂತನಿರಲು ಮೂಢರು ಸಂಸಾರದಲ್ಲಿ ಕ್ಲೇಶಪಡುತ್ತಿರುವರು. ಆ ಪರಮಾತ್ಮನಿಂದ ಉತ್ತಮರು ಯಾರಿರುವರು? ನನಗೂ ಇಷ್ಟು ದಿವಸ ಭಗವಂತನ ಮಹಿಮೆಯನ್ನು ತಿಳಿಸದೆ ಮೋಸಮಾಡಿದಿರಿ. ಸರ್ವದೇವೋತ್ತಮನಾದ ಪರಮಾತ್ಮನು ನಿಮಗೆಲ್ಲಾ ಗುರುವಾದವನು ಜನರಿಗೆ ಸಾಮಾನ್ಯರಂತೆ ತಿಳಿಯಲ್ಪಡುವನು. ನಾನೂ ಕೂಡ ಬಾಲ್ಯದಲ್ಲಿ ನೋಡಿರುವೆನು. ನಮ್ಮ ತಂದೆಯ ಪ್ರಜೆಗಳು ಹಸಿವೆಯಿಂದ ಶ್ರಮವುಳ್ಳವರಾಗಲು ಅವರನ್ನು ರಕ್ಷಿಸಲಿಕ್ಕೆ ತಂದೆಗೆ ಸಾಮರ್ಥ್ಯವು ಸಾಕಾಗಲಿಲ್ಲ. ತರುವಾಯ ತಂದೆಯು ಶ್ರೀದೇವಿಯನ್ನು ಆರಾಧನಮಾಡಿ ಅವರ ಅನುಗ್ರಹದಿಂದ ಪೋಷಿಸಿದರು. ಆದೇವಿಯ ಅನುಗ್ರಹದಿಂದಲೇ ನೀವೇ ಮೊದಲಾದವರೂ ಇಂದ್ರಾದಿಗಳೂ ಪ್ರಕಾಶಿಸುತ್ತಿರುವಿರಿ. ಆ ದೇವಿಯರ ಅನುಗ್ರಹವಿಲ್ಲದೆ ದೇವತ್ವವೆಲ್ಲಿ? ಐಶ್ವರ್ಯವೆಲ್ಲಿ? ಅವರ ಅನುಗ್ರಹವಿಲ್ಲದಿದ್ದರೆ ಎಲ್ಲರೂ ನರಕದಲ್ಲಿ ದುಃಖಪಡುವಂತೆ ದುಃಖಪಡಬೇಕಾಗುವುದು. ಆದೇವಿಯ ಅನುಗ್ರಹವಿಲ್ಲದೆ ಧರ್ಮ ಅರ್ಥ ಕಾಮ ಮೋಕ್ಷ ಒಂದೂ ಸಿಗಲಾರದು. ಅಂತಹ ಶ್ರೀದೇವಿಯರು ಯಾವ ಭಗವಂತನ ಅಧೀನರಾಗಿರುವವರೋ ಆ ಪರಮಾತ್ಮನಿಗೆ ಯಾರು ಸಮಾನರಿರುವರು? ಅವನ ಅನುಗ್ರಹವಿಲ್ಲದೆ ಹೋದರೆ ಜಗತ್ತೆಲ್ಲವೂ ನಾಶವನ್ನು ಹೊಂದುವುದು. ಅವನಿಗೆ ಜನ್ಮಮರಣ ಇತ್ಯಾದಿ ಯಾವ ದೋಷಗಳೂ ಇರುವುದಿಲ್ಲ' ಇತ್ಯಾದಿ ರೀತಿಯಿಂದ ಹೇಳಿದರು. ರುದ್ರದೇವರು ರಾಮನಾಮವೊಂದೇ ಸಹಸ್ರನಾಮಗಳಿಗೆ ಸಮಾನವಾಗಿರುವುದೆಂದು ರಾಮನಾಮದ ಮಹಿಮೆಯನ್ನು ಹೇಳಿದರು.



# ಭಗವತ್ಕಥೆಯ ಮಹಿಮೆ [1]

ಪೂರ್ವದಲ್ಲಿ ಕೃತಯುಗದ ಅಂತ್ಯದಲ್ಲಿ ಗಂಗಾನದಿಯ ದಕ್ಷಿಣತೀರದಲ್ಲಿ ಹದಿನೈದು ಮೈಲು ದೂರದಲ್ಲಿ ಸತ್ಯವ್ರತ ಎಂಬ ಪವಿತ್ರವಾದ ಗ್ರಾಮದಲ್ಲಿ ಬೃಹತ್ತಪಸ್ಸು ಎಂಬ ಋಷಿಗಳು ಹುಟ್ಟುಕುರುಡರಾದ ದೀರ್ಘ ತಪಸ್ಸು ಎಂಬ ಋಷಿಗಳಿಗೆ ಕೃಪೆಯಿಂದ ಐವತ್ತು ವರ್ಷ ಭಗವತ್ಕಥೆಯನ್ನು ಅಂದರೆ ದೇವರ ಕಥೆಯನ್ನು ಉಪದೇಶಿಸಿದರು. ಆ ಮಧ್ಯದಲ್ಲಿ ಗಂಗಾಸ್ನಾನವನ್ನು ಮಾಡಲೇ ಇಲ್ಲ. ಆ ಗ್ರಾಮದಲ್ಲಿ ಪುಣ್ಯಧಾಮ ಎಂಬ ಬ್ರಾಹ್ಮಣನಿದ್ದನು. ಅವನೂ ಬೃಹತ್ತಪಸ್ಸು ಋಷಿಗಳು ಹೇಳುವ ಭಗವತ್ಕಥೆಯನ್ನು ಕೇಳುತ್ತಿದ್ದನು. ಪುಣ್ಯಧಾಮನು ದೇವರ ಕಥೆಯನ್ನು ಕೇಳುವುದರಲ್ಲೇ ಆಸೆಯುಳ್ಳವನಾಗಿ ನೂರು ವರ್ಷದವರೆಗೂ ಗಂಗಾಸ್ನಾನವನ್ನು ಮಾಡದೆ ದೀರ್ಘತಪಸ್ಸು ಋಷಿಗಳೊಡನೆ ಕಥೆಯನ್ನು ಕೇಳುತ್ತಲೇ ಇದ್ದನು. ಸಮಸ್ತಕರ್ಮಗಳನ್ನು ಸಂಕೋಚ ಮಾಡಿ ಗುರುಗಳ ಸೇವೆಯನ್ನು ಮಾಡುವನು. ಭಗವತ್ಕಥೆಯನ್ನು ಕೇಳುವನು. ತೀರ್ಥಯಾತ್ರೆಯನ್ನು ಮಾಡುತ್ತಾ ಬರುತ್ತಿರುವ ಜನರಿಗೆ ಆತಿಥ್ಯೋಪಚಾರವನ್ನು ಮಾಡುವನು. ಹೀಗೆಯೇ ಇದ್ದುಕೊಂಡು ಗಂಗಾ ಸ್ನಾನವನ್ನು ಅಪೇಕ್ಷಿಸಲೇ ಇಲ್ಲ. ನೂರು ಕೋಟಿ ಗ್ರಂಥ ಮೂಲ ರಾಮಾಯಣವನ್ನು ಕೇಳಿದನು. ಅಷ್ಟೇ ಸಂಖ್ಯೆಯುಳ್ಳ ಪಂಚರಾತ್ರವನ್ನು ಪುರಾಣಗಳನ್ನು ಭಾರತವನ್ನು ವೇದಗಳನ್ನೂ ಉಪನಿಷತ್ತುಗಳನ್ನೂ ದೀರ್ಘ ತಪಸ್ಸು ಋಷಿಗಳಿಂದ ಕೂಡಿಕೊಂಡು ಕೇಳಿದನು. ಅವನು ನಿತ್ಯವೂ ಹತ್ತೇ ಗಾಯತ್ರೀ ಜಪವನ್ನು ಮಾಡುವನು. ಇತರ ನಿತ್ಯಕರ್ಮಗಳನ್ನು ಸ್ವಲ್ಪವೇ ಮಾಡುವನು. ದಾರಿಯಲ್ಲಿ ಹೋಗುವವರ ಸೇವೆಯೂ ದೇವರಕಥೆಯನ್ನು ಕೇಳುವುದೂ ಎರಡೇ ಪುಣ್ಯಧಾಮದ ಕೆಲಸವಾಗಿತ್ತು.

ಹೀಗೆಯೇ ಇರುತ್ತಿರಲು ಒಂದು ದಿವಸದಲ್ಲಿ ಜ್ಞಾನಸಿಂಧು ಧೃತವ್ರತ ಎಂಬ ಇಬ್ಬರು ಸಾಯಂಕಾಲದಲ್ಲಿ ಬಹುದೂರದಿಂದ ನಡೆದುಕೊಂಡು ಶ್ರಮದಿಂದ ಪುಣ್ಯಧಾಮನ ಮನೆಗೆ ಬಂದರು. ಅದೇ ಸಮಯದಲ್ಲಿ ಪುಣ್ಯಧಾಮನೂ ಬೃಹತ್ತಪಸ್ಸು ಋಷಿಗಳಿಂದ ಭಗವತ್ಕಥೆಯನ್ನು ಕೇಳಿ ಮನೆಗೆ ಬಂದು ಸೇರಿದನು. ಮನೆಗೆ ಬಂದವನು ಆ ಇಬ್ಬರು ಬ್ರಾಹ್ಮಣರನ್ನು ನೋಡಿ ಸಂತೋಷವನ್ನು ಹೊಂದಿದನು. ಇಬ್ಬರಿಗೂ ಉದ್ದಕ್ಕೆ ನಮಸ್ಕರಿಸಿದನು. ಅವರಿಬ್ಬರ ಪಾದಗಳನ್ನು ತೊಳೆದು ನೀರನ್ನು ತಲೆಯ ಮೇಲೆ ಹಾಕಿಕೊಂಡನು. ಆಮೇಲೆ ಬೇಕಾದ ಸತ್ಕಾರಗಳ್ನು ಮಾಡಿ ಭೋಜನ ಮಾಡಿಸಿ ಕುಶಲಪ್ರಶ್ನೆಯನ್ನು ಮಾಡಿದನು. ಬಹಳ

ಸ್ತೋತ್ರವನ್ನು ಮಾಡಿದನು. ಹೆಂಡತಿಯೊಡನೆ ಬೀಸಣಿಗೆಯಿಂದ ಬೀಸಲಿಕ್ಕೆ ಹೇಳಿ ಅವರ ಕಾಲನ್ನು ಒತ್ತಿದನು.

ತರುವಾಯ ಜ್ಞಾನಸಿಂಧು, ಧೃತವ್ರತರು ಪುಣ್ಯಧಾಮನೊಡನೆ 'ನೀನು ಈ ಗ್ರಾಮದಲ್ಲಿ ಏನು ಮಾಡುತ್ತಿರುವಿ? ಏನು ನಿತ್ಯವೂ ಶ್ರವಣ ಮಾಡುತ್ತಿರುವಿ? ಗಂಗೆಯು ಇಲ್ಲಿಂದ ಎಷ್ಟು ದೂರದಲ್ಲಿ ಇದೆ?' ಎಂದು ಕೇಳಿದರು. ಪುಣ್ಯಧಾಮನು ಅವರೊಡನೆ ನಾನು ನೂರು ವರ್ಷಕಾಲ ಮನೆಯಲ್ಲಿಯೇ ಇದ್ದೇನೆ. ಬೃಹತ್ತಪಸ್ಸು ಋಷಿಗಳು ದೀರ್ಘತಪಸ್ಸು ಋಷಿಗಳಿಗೆ ತತ್ತ್ವೋಪದೇಶವನ್ನು ಮಾಡುತ್ತಿರುವರು. ನಾನೂ ಅವರ ಬಳಿಯಲ್ಲಿ ಶ್ರವಣ ಮಾಡುತ್ತಾ ಇದ್ದೇನೆ. ಗಂಗೆಯು ಇಲ್ಲಿಂದ ಎಷ್ಟು ದೂರದಲ್ಲಿ ಇದೆ ಎಂದು ನನಗೆ ತಿಳಿಯದು. ಇಲ್ಲಿಂದ ಹದಿನೈದು ಮೈಲು ದೂರದಲ್ಲಿ ಇದೆಯೆಂದು ಯಾರೋ ಹೇಳುವುದನ್ನು ಕೇಳಿದ್ದೇನಷ್ಟೆ. ನನಗೆ ಎರಡೇ ಕೆಲಸ. ಒಂದು ದೇವರ ಕಥೆಯನ್ನು ಕೇಳುವುದು. ಇನ್ನೊಂದು ದಾರಿಯಲ್ಲಿ ಬರುವವರಿಗೆ ಸತ್ಕರಿಸುವುದು. ಇದು ಹೊರತು ಬೇರೊಂದು ನನ್ನ ಮನಸ್ಸಿಗೆ ರುಚಿಸುವುದಿಲ್ಲ' ಎಂದನು.

ಪುಣ್ಯಧಾಮನ ಮಾತನ್ನು ಕೇಳಿ ಜ್ಞಾನಸಿಂಧು ದೃತವ್ರತರು ಅವನನ್ನು ಚೆನ್ನಾಗಿ ನಿಂದಿಸಿದರು. ಈ ಪಾಪಿಯ ಮನೆಯಲ್ಲಿ ನಾವು ಊಟ ಮಾಡಿದೆವಲ್ಲಾ! ಇವನಿಗೆ ಸಮಾನ ಪಾಪಿಯು ಇನ್ನೊಬ್ಬನಿಲ್ಲ. ಇವನಿನ್ನೂ ಗಂಗಾಸ್ನಾನವನ್ನು ಮಾಡಿಲ್ಲವಂತೆ. ಗಂಗಾ ಗಂಗಾ ಎಂದು ಹೇಳಿದರೆ ಸಾವಿರ ಮೈಲು ದೂರದವರೆಗೆ ಇರುವ ಪಾಪಪರಿಹಾರವಾಗುವುದೆಂದು ಜ್ಞಾನಿಗಳು ಹೇಳುವರು. ಅಂತಹ ಲೋಕವನ್ನೇ ಪವಿತ್ರವನ್ನಾಗಿ ಮಾಡುವ ಗಂಗೆಯಲ್ಲಿ ಇವನೇಕೆ ಸ್ನಾನ ಮಾಡಲಿಲ್ಲ? ಈ ದುರಾತ್ಮನಿಗೆ ಇವನ ಪಿತೃಗಳು ಶಾಪವನ್ನೇಕೆ ಕೊಡಲಿಲ್ಲ? ಭಗವಂತನು ಹೇಗೆ ಅನುಗ್ರಹವನ್ನು ಮಾಡುವನು. ಗಂಗೆಗೆ ಹೋಗುತ್ತೇನೆಂದು ಉತ್ಸಾಹಪಟ್ಟವನೂ ಎಲ್ಲಾ ಕುಲವನ್ನು ಉದ್ಧರಿಸಿ ವಿಷ್ಣುಲೋಕದಲ್ಲಿ ಸತ್ಕೃತನಾಗಿ ಇರುವನೆಂದು ಹೇಳುವರು. ಇವನು ಇಷ್ಟು ಹತ್ತಿರದಲ್ಲಿ ಇದ್ದುಕೊಂಡೇ ಗಂಗೆಗೆ ಹೋಗಲಿಲ್ಲ. ಹತ್ತಿರದಲ್ಲೇ ಇದ್ದುಕೊಂಡು ಯಾರು ಗಂಗೆಯನ್ನು ಸೇವಿಸುವುದಿಲ್ಲವೋ ಪಿತೃದೇವ ಮುನಿಗಳ ಆಶಾಭಂಗವನ್ನು ಮಾಡುವನು ಏನು ಆಶ್ಚರ್ಯ? ಪುಣ್ಯಧಾಮನು ಗಂಗಾಸ್ನಾನವನ್ನು ಮಾಡಿಲ್ಲವಲ್ಲಾ. ಇದು ಯಾವ ಪಾಪಕರ್ಮದ ಫಲವೋ' ಎಂದು ನಾನಾರೀತಿಯಾಗಿ ನಿಂದೆಯನ್ನು ಮಾಡಿ ತಿಳಿಯದೆ ಈ ಪಾಪಿಯ ಸಹವಾಸವನ್ನು ಮಾಡಿದೆವು' ಎಂದು ಹೇಳುತ್ತಾ ರಾತ್ರಿಯಲ್ಲೆ ಅವನ ಮನೆಯನ್ನು ಬಿಟ್ಟು ಬೇರೆ ಮನೆಗೆ ಹೋದರು.

ಮರುದಿನ ಬೆಳಗ್ಗೆ ಬೇಗನೇ ಗಂಗೆಗೆ ಹೋದರು. ಹತ್ತಿರ ಹೋಗಿ ಸಂತೋಷದಿಂದ ಗಂಗೆಗೆ ನಮಸ್ಕರಿಸಿದರು. ಗಂಗೆಯ ಹತ್ತಿರವೇ ಹೋಗಿ ಶುದ್ಧವಾದ ನೀರನ್ನು ನೋಡಲೇ ಇಲ್ಲ. ಎಲ್ಲರೂ ಸ್ನಾನ ಮಾಡುತ್ತಿದ್ದರು. ಇವರ ಕಣ್ಣಿಗೆ ಮಾತ್ರ ನೀರೇ ಕಾಣಿಸಲಿಲ್ಲ. ಸಮುದ್ರದವರೆಗೆ ತೀರದಲ್ಲಿಯೇ ಹೋದರು. ಎಲ್ಲಿ ಹೋದರೂ ಅವರ ಕಣ್ಣಿಗೆ ಗಂಗೆಯಲ್ಲಿ ನೀರು ಕಾಣಿಸಲೇ ಇಲ್ಲ. ಒಂದು ಆಕಳು ಮೆಟ್ಟಿದ ಸ್ಥಳದಲ್ಲಿ ನಿಲ್ಲುವಷ್ಟು ನೀರೂ ಕಾಣಿಸಲಿಲ್ಲ. ಒಂದು ಸಾಸಿವೆ ಕಾಳಿನಷ್ಟೂ ನೀರು ದೊರೆಯಲಿಲ್ಲ. ಆಮೇಲೆ ದುಃಖದಿಂದ ಹಿಮವತ್ಪರ್ವತದ ಉತ್ತರಕ್ಕೆ ಬಂದರು. ಅಲ್ಲಿಯೂ ಒಂದು ಹನಿನೀರನ್ನು ನೋಡಲಿಲ್ಲ. ಅಲ್ಲಿಂದ ಸಮುದ್ರಕ್ಕೆ ಬಂದರು. ಅಲ್ಲಿಯವರೆಗೂ ಗಂಗೆಯಲ್ಲಿ ಎಲ್ಲಿಯೂ ನೀರನ್ನು ನೋಡಲಿಲ್ಲ. ಪುನಃ ಕಾಶಿಗೇ ಒಂದು ದುಃಖದಿಂದ ಕೂಡಿದ ಮನಸ್ಸುಳ್ಳವರಾಗಿ ನಾನಾವಿಧವಾಗಿ ಗಂಗಾದೇವಿಯನ್ನು ಸ್ತೋತ್ರ ಮಾಡಿದರು. 'ಅಮ್ಮ! ರುದ್ರದೇವರೂ ಕೂಡ ಭಗವಂತ ಪಾದದ ಅಂಗುಷ್ಠದಿಂದ ಉದ್ಭವಿಸಿದ ಶಿರಸ್ಸಿನಲ್ಲಿ ಧರಿಸಿ ಪರಮಮಂಗಳರಾದರು. ಸಗರ ರಾಜನ ಮಕ್ಕಳೂ ನಿನ್ನಿಂದ ಪವಿತ್ರರಾದರು. ನಿಮಗೆ ನಮಸ್ಕಾರವು. ಪಾಪಿಗಳಾದ ನಮ್ಮನ್ನು ಪವಿತ್ರರನ್ನಾಗಿ ಮಾಡು. ನೀನು ಎಲ್ಲಾ ಲೋಕಗಳಿಗೂ ತಾಯಿಯು ಗತಿಯು. ಮಗುವು ಅಪರಾಧವನ್ನು ಮಾಡಿದರೆ ತಾಯಿಯು ಅದನ್ನು ಬೆದರಿಸಿ ಅದರ ಅಭೀಷ್ಟವನ್ನು ಕೊಡುವುದಿಲ್ಲವೇ? ಅದನ್ನು ಬಿಟ್ಟುಬಿಡುವಳೇ? ಆದುದರಿಂದ ತಾಯಿ! ನಾವು ಮಾಡಿದ ಅಪರಾಧವನ್ನು ಕ್ಷಮಿಸು' ಎಂದು ಸೋತ್ರ ಮಾಡಿದರು.

ಈರೀತಿಯಾಗಿ ಸ್ತೋತ್ರಮಾಡಲು ಗಂಗಾದೇವಿಯರು ಪ್ರತ್ಯಕ್ಷರಾದರು. ಅವರನ್ನು ನೋಡಿ ಇಬ್ಬರೂ ಉದ್ದಕ್ಕೆ ನಮಸ್ಕರಿಸಿದರು. ಕಣ್ಣೀರು ಸುರಿಸಿದರು. ಆಗ ಗಂಗಾದೇವಿಯರು ಮಂದಹಾಸವನ್ನು ಮಾಡುತ್ತಾ ಮೇಘದಂತೆ ಗಂಭೀರವಾದ ವಾಣಿಯಿಂದ 'ನೀವು ಪುಣ್ಯಧಾಮನನ್ನು ನಿಂದಿಸಿ ಬಂದಿರುವಿರಿ. ಅದರಿಂದ ನಿಮಗೆ ಹೀಗಾಯಿತು. ಪರಮಾತ್ಮನ ಕಥೆಯನ್ನು ಕೇಳುವವರಿಗೆ ಪರಮಾತ್ಮನೇ ಆಶ್ರಯನಾಗಿರುವನು. ಎಲ್ಲಿ ಪರಮಾತ್ಮನ ಕಥೆಯು ನಡೆಯುತ್ತಿರುವುದೋ ಅಲ್ಲಿ ಎಲ್ಲಾ ತೀರ್ಥಗಳ ಸನ್ನಿಧಾನವೂ ಇರುವುದು. ಪರಮಾತ್ಮನ ಕಥೆಯನ್ನು ಕೇಳುವುದೇ ಅತಿಶ್ರೇಷ್ಠವಾದದ್ದು. ಪರಮಾತ್ಮನನ್ನು ಮರೆಯುವುದೇ ಅತಿನೀಚವಾದದ್ದು. ಸಾವಿರ ಬ್ರಹ್ಮಹತ್ಯೆಯನ್ನು ಮಾಡಿದರೂ ಪರಿಹರಿಸಿಕೊಳ್ಳಬಹುದು. ಪರಮಾತ್ಮನ ಭಕ್ತರನ್ನು ನಿಂದಿಸಿದ ಪಾಪವನ್ನು ಪರಿಹರಿಸಿಕೊಳ್ಳಲಿಕ್ಕೆ ಆಗಲಾರದು. ಪರಮಾತ್ಮ ಕಥೆಯು

ಪರಮಾತ್ಮ ಭಕ್ತರ ನಿಂದೆಯಿಂದ ಉಂಟಾಗುವ ಪಾಪವನ್ನು ಪರಿಹರಿಸಿಕೊಳ್ಳಲಿಕ್ಕೇ ಆಗಲಾರದು. ಆದುದರಿಂದ ನೀವು ಈಗ ಪುಣ್ಯಧಾಮನ ಬಳಿಗೆ ಹೋಗಿ ಅವನನ್ನು ಸಂತೋಷಪಡಿಸಿ ಬರುವವರೆಗೆ ಭಗವಂತನ ಆಜ್ಞೆಯಂತೆ ಇರುವ ನಾನು ನಿಮಗೆ ಪ್ರಸನ್ನಳಾಗಲಾರೆನು. ಭಗವಂತನಿಗೂ ಭಗವಂತನ ಭಕ್ತರಿಗೂ ವಿರೋಧ ಮಾಡಿದವರನ್ನು ಬ್ರಹ್ಮರುದ್ರಾದಿದೇವತೆಗಳು ರಕ್ಷಿಸಲಿಕ್ಕೆ ಸಮರ್ಥರಾಗಲಾರರು. ಆದುದಿರಂದ ಅವನನ್ನು ಸಂತೋಷಪಡಿಸಿ ಆಮೇಲೆ ಬನ್ನಿರಿ' ಎಂದು ಹೇಳಿದರು.

ತರುವಾಯ ಅವರು ಸತ್ಯವ್ರತ ಗ್ರಾಮಕ್ಕೆ ಬಂದು ಪುಣ್ಯಧಾಮವನ್ನು ಪ್ರಾರ್ಥಿಸಿದರು. 'ಭಗವತ್ಕಥೆಯ ಮತ್ತು ಭಗವದ್ಭಕ್ತರ ಮಹಿಮೆಯನ್ನು ನೋಡಿದೆನು. ಪಂಡಿತರೆಂದು ಅಹಂಕಾರಿಗಳಾದ ನಾವು ವ್ಯರ್ಥವಾಗಿ ನಿನ್ನನ್ನು ನಿಂದಿಸಿದೆವು. ಕೃಪೆಯಿಂದ ಕ್ಷಮಿಸು. ನಿನ್ನ ತಿರಸ್ಕಾರದಿಂದ ನಮ್ಮನ್ನು ಗಂಗಾದೇವಿಯರು ಶಿಕ್ಷಿಸಿದರು' ಎಂದು ನಡೆದ ವಿಷಯವನ್ನೆಲ್ಲಾ ಹೇಳಿದರು. ಪುಣ್ಯಧಾಮನು ಈ ವಿಷಯವನ್ನು ತನ್ನ ಗುರುಗಳ ಬಳಿಯಲ್ಲಿ ಹೇಳಿದನು.

ಅದನ್ನು ಕೇಳಿ ಬೃಹತ್ತಪಸ್ಸು ಋಷಿಗಳು ಜ್ಞಾನಸಿಂಧು ಧೃತವ್ರತರೊಡನೆ ಪ್ರೀತಿಯಿಂದ 'ನಾವು ಇನ್ನು ಎರಡು ವರ್ಷಗಳು ಮುಗಿದ ಮೇಲೆ ಎಲ್ಲಾ ವಿದ್ಯೆಗಳನ್ನೂ ಮುಗಿಸಿಕೊಂಡು ಗಂಗೆಗೆ ಬರುವೆವು. ಅಷ್ಟರವರೆಗೆ ನೀವು ಶುಭವಾದ ಗಂಗಾತೀರದಲ್ಲಿಯೇ ಇರಿ' ಎಂದರು. ಅದಕ್ಕೆ ಅವರು 'ನಾವು ಅಲ್ಲಿಗೆ ಹೋಗಿ ಏನು ಮಾಡಲಿ ಅಷ್ಟರವರೆಗೆ ನಾವೂ ನಿಮ್ಮ ಸಮೀಪದಲ್ಲಿಯೇ ಇರುವೆವು' ಎಂದು ಹೇಳಿ ಅಲ್ಲಿಯೇ ಇದ್ದರು. ತರುವಾಯ ಎರಡು ವರ್ಷಗಳಾದ ಮೇಲೆ ಬೃಹತ್ತಪಸ್ಸು ಋಷಿಗಳು ಎಲ್ಲಾ ವಿದ್ಯೆಗಳನ್ನೂ ಮುಗಿಸಿ ದೀರ್ಘತಪಸ್ಸು ಪುಣ್ಯಧಾಮ ಎಂಬ ಇಬ್ಬರು ಶಿಷ್ಯರಿಂದಲೂ ಜ್ಞಾನಸಿಂಧು ಧೃತವ್ರತರಿಂದಲೂ ಸಹಿತರಾಗಿ ಗಂಗೆಗೆ ಬಂದರು. ಆಗ ಗಂಗಾದೇವಿಯರು ಮೂರ್ತಿಮತ್ತಾಗಿ ಬಂದು ಸತ್ಕರಿಸಿದರು. ಜ್ಞಾನಸಿಂಧು ಧೃತವ್ರತರು ನೀರಿನಿಂದ ತುಂಬಿರುವ ಗಂಗಾನದಿಯನ್ನು ನೋಡಿ ಬೃಹತ್ತಪಸ್ಸು ಮೊದಲಾದವರ ಆಜ್ಞೆಯನ್ನು ಸ್ವೀಕರಿಸಿ ಅವರೊಡನೆ ಸ್ನಾನ ಮಾಡಿದರು. ಆ ಐದು ಜನರೂ ಸಿದ್ಧಿಯನ್ನು ಹೊಂದಿದರು. ಆದುದರಿಂದ ಸರ್ವವನ್ನು ಬಿಟ್ಟು ಭಗವತ್ಕಥೆಯನ್ನು ಕೇಳುವುದ ರಿಂದ ಸರ್ವಪುರುಷಾರ್ಥವೂ ಸಿದ್ಧಿಸುವುದು.

# ಬ್ರಹ್ಮದೇವರು ಮಾಡಿದ ಸ್ತೋತ್ರ [1]

ಬ್ರಹ್ಮದೇವರು ತಪ ಎಂಬ ಶಬ್ದವನ್ನು ಕೇಳಿ ಪರಮಾತ್ಮನನ್ನು ತಪಸ್ಸು ಮಾಡಿದ ಮೇಲೆ ಶ್ರೀಭಗವಂತನು ಅವರಿಗೆ ಪ್ರತ್ಯಕ್ಷನಾದನು. ಆಗ ಅವರು ಈರೀತಿಯಾಗಿ ಭಗವಂತನನ್ನು ಸ್ತೋತ್ರ ಮಾಡಿದರು.

'ಶ್ರೀಭಗವಂತನೇ! ನಿನ್ನ ಸ್ವರೂಪವನ್ನು ರಮಾದೇವಿಯರೂ ಕೂಡ ನಿನ್ನ ಅನುಗ್ರಹವಿಲ್ಲದೆ ತಿಳಿಯಲಾರರು. ನಿನ್ನ ಅನುಗ್ರಹದಿಂದ ವೇದಗಳಲ್ಲಿ ಹೇಳಿರುವ ಹೇಳದೆ ಇರುವ ಗುಣಗಳನ್ನು ತಿಳಿಯುವರು. ಆದರೂ ಈಗಲೂ ಸಂಪೂರ್ಣ ಗಳಾದ ನಿನ್ನ ಗುಣಗಳು ಅವರು ತಿಳಿದಿಲ್ಲ. ಯದ್ಯಪಿ ಐದು ವೇದಗಳಲ್ಲಿ ಹೇಳದೆ ಇರುವ ವಿಷಯವೇ ಇಲ್ಲ. ಆದರೂ ಸ್ವಲ್ಪ ವಿಶೇಷವಿದೆ. ಋಗ್ವೇದವೇ ಮೊದಲಾದ ನಾಲ್ಕು ವೇದಗಳೂ ಭಾರತಪುರಾಣ ಪಂಚರಾತ್ರಗಳೂ ಐದು ವೇದಗಳು. ಇವುಗಳಲ್ಲಿ ಹೇಳಿರುವ ಸ್ವಯೋಗ್ಯಗುಣಗಳನ್ನು ರಮಾದೇವಿಯರು ತಿಳಿದಿರುವರು. ಸಾಮಾನ್ಯವಾಗಿ ಹೇಳಿರುವ ಎಷ್ಟೋ ಗುಣಗಳನ್ನು ರಮಾದೇವಿಯರೂ ವಿಶೇಷಾಕಾರ ವಾಗಿ ತಿಳಿಯುವುದಿಲ್ಲ. ನಾನು ನಿನ್ನ ಅನುಗ್ರಹದಿಂದಲೂ ರಮಾದೇವಿಯರ ಅನುಗ್ರಹದಿಂದಲೂ ವೇದಗಳಲ್ಲಿ ಹೇಳಿರುವ ನನಗೆ ಯೋಗ್ಯಗಳಾದ ಗುಣಗಳನ್ನು ತಿಳಿದಿರುವೆನು. ಶೇಷದೇವರು ವೇದಗಳಲ್ಲಿ ಹೇಳಿದ ಗುಣಗಳಲ್ಲಿಯೇ ಕೆಲವನ್ನು ತಿಳಿಯುವರು. ಕೆಲವನ್ನು ತಿಳಿಯುವುದಿಲ್ಲ. ಕೆಲವು ತಿಳಿಯದೆ ಇರುವ ಗುಣಗಳನ್ನು ಕಾಲಾಂತರದಲ್ಲಿ ತಿಳಿಯುವರು. ತಿಳಿದ ಗುಣಗಳೇ ದುಷ್ಕರ್ಮಲೇಶದಿಂದ ಮರೆಯಾಗಿ ಪುನಃ ತಿಳಿಯುವರು. ಅದಕ್ಕೆ ತಿರೋಹಿತ ಲಾಭವೆಂದು ಹೆಸರು. ಮೊದಲು ತಿಳಿಯದೆ ಇರುವ ಗುಣಗಳನ್ನು ಭಗವದನುಗ್ರಹದಿಂದ ತಿಳಿಯುವುದಕ್ಕೆ ಅಪ್ರಾಪ್ತಲಾಭವೆಂದು ಹೆಸರು. ನಾನು ಅಪರೋಕ್ಷವಾದ ಗುಣಗಳನ್ನು ಯಾವಾಗಲೂ ನೋಡುವೆನು. ನನಗೆ ಅವು ಮರೆಯಾಗುವುದೇ ಇಲ್ಲ. ಇತರ ದೇವತೆಗಳಿಗೆ ಜ್ಞಾನವಿರುವುದಿಲ್ಲ. ವಿಷಯದಲ್ಲಿ ಆಸಕ್ತಿಯಿರುತ್ತದೆ. ಆದರಿಂದ ಮೋಕ್ಷವನ್ನು ಬಿಟ್ಟು ಇತರ ವಿಷಯದಲ್ಲಿಯೂ ಅವರು ಪ್ರಯತ್ನವನ್ನು ಮಾಡುತ್ತಾರೆ.

ಭಗವಂತನೇ! ನಿನಗೆ ಯಾವಾಗಲೂ ಅಜ್ಞಾನವಿರುವುದಿಲ್ಲ. ಯಾಕೆಂದರೆ ನಿನಗೆ ಯಾವಾಗಲೂ ಪ್ರಾಕೃತದೇಹವಿರುವುದಿಲ್ಲ. ನಿನಗೆ ಪೂರ್ಣಾನಂದ ಜ್ಞಾನ

---

1. ಗ.ಪು.ಬ್ರ.ಕಾಂ. ಅ. 6-12

ರೂಪವಾದ ದೇಹವಿದ್ದರೂ ಪ್ರಾಕೃತ ದೇಹವಿಲ್ಲದಿರುವುದರಿಂದ ಶರೀರರಹಿತ ನೆಂದು ಹೇಳಲ್ಪಡುವಿ. ನನಗೆ ಶರೀರದಲ್ಲಿ ಅಭಿಮಾನವಿಲ್ಲದಿರುವುದರಿಂದ ನಾನೂ ಶರೀರರಹಿತನೆಂದು ಹೇಳಲ್ಪಡುವೆನು. ನಾನು ನನ್ನ ಸ್ತ್ರೀಭೋಗವನ್ನು ಸತ್ಯಲೋಕಾಧಿ ಪತ್ಯ ಇತ್ಯಾದಿಗಳನ್ನು ಅನುಭವಿಸಿದರೂ ಅದರಲ್ಲಿ ಆಸೆಯಿಲ್ಲದವನಾದ ಕಾರಣ ಬಾಹ್ಯಾರ್ಥರಹಿತನೆಂದು ಹೇಳಲ್ಪಡುವೆನು. ರುದ್ರಾದಿಗಳು ಆಸೆಯುಳ್ಳವರಾದ ಕಾರಣ ಬಾಹ್ಯಾರ್ಥವುಳ್ಳವರೆಂದು ಹೇಳಿಸಿಕೊಳ್ಳುವರು. ನಾನು ಪತ್ನೀಭೋಗ ಮೊದಲಾದವನ್ನು ಪರಮಾತ್ಮನ ಪ್ರೀತಿಗಾಗಿಯೇ ಅನುಭವಿಸುವೆನು. ನನ್ನ ಪತ್ನಿಯೂ ಹೀಗೆಯೇ ಇರುವವಳು. ನನಗಿದ್ದಷ್ಟು ಜ್ಞಾನವು ವಾಯುದೇವನಿಗೂ ಇರುವುದು. ವಾಯುದೇವನಿಗೆ ಇದ್ದಷ್ಟು ಜ್ಞಾನವು ಎಲ್ಲಾ ಋಜುಗಳಿಗೂ ಇರುವುದು. (ಬ್ರಹ್ಮ ಪದವಿಗೆ ಬರುವ ನೂರು ಜನರಿಗೆ ಋಜುಗಳೆಂದು ಹೆಸರು) ಋಜುಗಳಿಗೂ ವಾಯುದೇವನಿಗೂ ನನಗೆ ಸರಸ್ವತಿಗೂ ಭಾರತಿಗೂ ಪ್ರಲಯಕಾಲದಲ್ಲಿಯೂ ಜ್ಞಾನನಾಶವಿರುವುದಿಲ್ಲ. ನನಗೆ ಅಜ್ಞಾನವಿರುವಂತೆ ಕಂಡರೆ ಅದು ದೈತ್ಯರ ಮೋಹ ಕ್ಕಾಗಿ ತೋರಿಸುವುದು ಮಾತ್ರ. ಅದರಿಂದ ಭಗವಂತನಿಗೆ ಪ್ರೀತಿಯುಂಟಾಗುವುದು. ದೈತ್ಯರ ಮೋಹಕ್ಕಾಗಿಯೇ ನಾನು ತಿಳಿಯದವರಂತೆ ಪ್ರಶ್ನಾದಿಗಳನ್ನು ಮಾಡುವೆನು. ಸೂರ್ಯನಲ್ಲಿ ಕತ್ತಲೆಯು ಇಲ್ಲದಿರುವಂತೆ ನನ್ನಲ್ಲಿ ಅಜ್ಞಾನವಿರುವುದಿಲ್ಲ. ಆದರೂ ಹರಿಪ್ರೀತಿಗಾಗಿಯೂ ಸಜ್ಜನರ ಶಿಕ್ಷೆಗಾಗಿಯೂ ಯಾವಾಗಲೂ ಶ್ರವಣವನ್ನು ಮಾಡುವೆನು. ಋಜುಗಳಿಗೆ ನೂರುಜನ್ಮಗಳಿಗಿಂತ ಪೂರ್ವದಲ್ಲಿ ಅಪರೋಕ್ಷಜ್ಞಾನ ವಿಲ್ಲದಿರುವುದನ್ನೇ ಅವರಿಗೆ ಅಜ್ಞಾನವೆನ್ನುವರು. ಅವರಿಗೂ ಅಪರೋಕ್ಷಜ್ಞಾನವಾದ ಮೇಲೆ ಅಜ್ಞಾನವಿರುವುದಿಲ್ಲ. ನೂರು ಜನ್ಮದ ಪೂರ್ವದಲ್ಲಿ ಪರೋಕ್ಷಜ್ಞಾನವು ಪೂರ್ಣವಾಗಿಯೇ ಇರುವುದು. ಸರಸ್ವತಿಗೂ ನೂರು ಜನ್ಮಗಳಲ್ಲಿ ಅಜ್ಞಾನವಿರುವು ದಿಲ್ಲ. ಭಾರತೀದೇವಿಗೆ ಅವತಾರಕಾಲದಲ್ಲಿ ಸ್ವಲ್ಪ ಜ್ಞಾನವಿಲ್ಲದಂತೆ ಇರುವುದು. ಭಾರತೀದೇವಿಯೂ ಯಾವಾಗಲೂ ಜ್ಞಾನರೂಪಳೇ. ಯಾವಾಗಲೂ ದುಃಖ ರಹಿತಳೇ. ದೈತ್ಯರ ಮೋಹಕ್ಕಾಗಿ ದುಃಖಪಟ್ಟಂತೆ ತೋರಿಸುವಳು. ಕಲಿಕಾಲದಲ್ಲಿ ಅಪರೋಕ್ಷಜ್ಞಾನವು ಮರೆಯಾದಂತೆ ಇರುತ್ತದೆ. ಅದರಿಂದ ಅವಳಿಗೆ ಅಜ್ಞಾನವಿದೆ ಯೆಂದು ತಿಳಿಯಬಾರದು. ಮೂಲರೂಪದಲ್ಲಿ ಅಜ್ಞಾನವಿಲ್ಲವೇ. ಸರಸ್ವತಿಗೂ ಇಲ್ಲವೇ ಇಲ್ಲ. ಸರಸ್ವತಿಗೂ ನನಗೂ ಅವತಾರವಿರುವುದಿಲ್ಲ. ವಾಯುದೇವನಿಗೆ ಅವತಾರವಿದೆ. ಅವತಾರದಲ್ಲಿಯೂ ಮೂಲರೂಪದಷ್ಟೇ ಬಲಜ್ಞಾನಾದಿಗಳು ಇರುತ್ತವೆ. ಆದರೂ ಯುಗಾನುಸಾರವಾಗಿ ವ್ಯಕ್ತಪಡಿಸುವನು. ವಾಯುದೇವನ

ಅವತಾರರೂಪಗಳಿಗೆ ಬಲಜ್ಞಾನಾದಿಗಳಿಂದ ತಾರತಮ್ಯವನ್ನು ತಿಳಿದುಕೊಂಡರೆ ಅಂಧಂತಮಸ್ಸು ಉಂಟಾಗುವುದು. ಹಾಗೆ ತಿಳಿಯುವವರು ದೈತ್ಯರು.

ಯಾರು ಭಗವಂತನ ನಿಂದೆಯನ್ನು ಮಾಡುವರೋ ಅವರ ನಾಲಿಗೆಯನ್ನು ಕತ್ತರಿಸುವೆನೆಂದು ನನ್ನ ಮತ್ತು ವಾಯುದೇವನ ಪ್ರತಿಜ್ಞೆಯಿರುವುದು. ಅದಕ್ಕಾಗಿಯೇ ಭೂಮಿಯಲ್ಲಿ ವಾಯುದೇವನ ಅವತಾರವು ಆಗುವುದು. ಭಗವಂತನ ನಿಂದೆಯು ಅನೇಕ ಪ್ರಕಾರವಾಗಿ ಇರುವುದು. (1) 'ಗುಣಪೂರ್ಣನಾದ ಭಗವಂತನನ್ನು ನಿರ್ಗುಣನೆಂದು ತಿಳಿಯುವುದೂ, (2)ಜ್ಞಾನಾನಂದಾದಿ ಗುಣಪೂರ್ಣನಾದ ಭಗ ವಂತನೇ ನಾನು ಎಂದು ತಿಳಿಯುವುದೂ, (3)ಜ್ಞಾನಾನಂದಾತ್ಮಕವಾದ ಭಗವಂತನ ದೇಹಕ್ಕೆ ಉತ್ಪತ್ತಿ ನಾಶ ಮೊದಲಾದ ದೋಷವಿದೆಯೆಂದು ತಿಳಿಯುವುದೂ, (4) ನಿತ್ಯಾವಿಯೋಗಿನಿಯರಾದ ರಮಾದೇವಿಯರಿಗೆ ಭಗವಂತನ ವಿಯೋಗವಿದೆ ಯೆಂದು ತಿಳಿಯುವುದೂ, (5) ಅಚ್ಛೇದ್ಯ ಅಭೇದ್ಯವಾದ ಭಗವಂತನ ದೇಹಕ್ಕೆ ಗಾಯ ಇತ್ಯಾದಿಗಳನ್ನು ತಿಳಿಯುವುದೂ, (6) ಕೃಷ್ಣರಾಮಾದಿ ಭಗವಂತನ ರೂಪಗಳಿಗೆ ಪೂರ್ಣಾವತಾರ ಅರ್ಧಾವತಾರ ಇತ್ಯಾದಿ ವ್ಯತ್ಯಾಸವನ್ನು ತಿಳಿಯುವುದೂ, (7) ದುಃಖಾದಿ ರಹಿತನಾದ ಭಗವಂತನಿಗೆ ದುಃಖಾದಿಗಳು ಇವೆಯೆಂದು ತಿಳಿಯುವುದೂ, (8) ಕೃಷ್ಣರಾಮಾದಿ ಭಗವ ದ್ರೂಪಗಳಿಗೆ ಭೇದವನ್ನು ತಿಳಿಯುವುದೂ, (9) ವೇದವ್ಯಾಸ ಪರಶುರಾಮಾದಿಗಳು ಕೇವಲ ಋಷಿಗಳೆಂದು ತಿಳಿಯುವುದೂ, (10) ಕೃಷ್ಣನು ಮಗನಾಗಬೇಕೆಂದು ರುದ್ರದೇವರನ್ನು ಪೂಜಿಸಿದ ನೆಂದು ತಿಳಿಯುವುದೂ, (11) ರಾಮದೇವರು ದುಃಖದಿಂದ ಶಿವಲಿಂಗವನ್ನು ಪ್ರತಿಷ್ಠಾಮಾಡಿದರೆಂದು ತಿಳಿಯುವುದೂ, (12) ಪಂಚಧಾತುಗಳಿಂದ ಮಾಡಿದ ಪ್ರತಿಮೆಯೇ ದೇವರೆಂದು ತಿಳಿಯುವುದೂ, (13) ಸ್ವಯಂವ್ಯಕ್ತ ಪ್ರತಿಮೆಯೇ ಭಗವಂತನ ಜ್ಞಾನಾನಂದಾತ್ಮಕವಾದ ರೂಪವೆಂದು ತಿಳಿಯುವುದೂ, (14) ತಂದೆತಾಯಿಗಳೂ ಬ್ರಾಹ್ಮಣರೂ ಭಗವಂತನ ಸ್ವರೂಪರೆಂದು ತಿಳಿಯುವುದೂ, (15) ರುದ್ರದೇವರಿಗೂ ಸೂರ್ಯಾದಿದೇವತೆಗಳಿಂದಲೂ ಭಗವಂತನಿಗೆ ಐಕ್ಯವಿದೆಯೆಂದು ತಿಳಿಯುವುದೂ, (16) 'ಸೂರ್ಯನೇ ಸರ್ವೋತ್ತಮನು, ವಿಷ್ಣುವೇ ಮೊದಲಾದವರು ಅವನ ಕಿಂಕರರು' ಎಂದು ತಿಳಿಯುವುದೂ ಇವು ಗಳೆಲ್ಲವೂ ಭಗವಂತನ ನಿಂದೆಯೆಂದು ಎನ್ನಿಸುವುವು. (17) ಸ್ವಯಂ ವ್ಯಕ್ತಸ್ಥಳ ದಲ್ಲಿಯೂ, ಅಶ್ವತ್ಥ ತುಲಸೀ ಸಮೀಪದಲ್ಲಿಯೂ ಸಾಲಿಗ್ರಾಮವನ್ನು ಇಡದೆ ಯಾರು ನಮಸ್ಕಾರ ಮಾಡುವರೋ, ಅವರೆಲ್ಲರೂ ಭಗವನ್ನಿಂದೆಯನ್ನು ಮಾಡುವ ಅಧಿಕಾರಿ

ಗಳೇ ಆಗುವರು. ಮೋಕ್ಷಯೋಗ್ಯರಾದವರಾದರೂ ಹಾಗೆ ಮಾಡಿದರೆ ಅವರೂ ಈ ಲೋಕದಲ್ಲಿ ದುಃಖವನ್ನು ಹೊಂದುವರು.

ಮದುವೆಯಾಗದೆ ಇರುವ ಅಶ್ವತ್ಥವೃಕ್ಷಕ್ಕೆ ಯಾರು ನಮಸ್ಕಾರವನ್ನು ಪೂಜೆಯನ್ನು ಮಾಡುತ್ತಾರೋ, ಎರಡು ತಿಂಗಳು ಆಗದೆ ಇರುವ ತುಲಸಿಯನ್ನು, ಕರುಹಾಕದೆ ಇರುವ ಗೋವನ್ನು ಯಾರು ಪೂಜಿಸುತ್ತಾರೋ ಅವರೂ ಅಸುರರೆಂದು ತಿಳಿಯಬೇಕು. ಕಲಿಯೆ ಮೊದಲಾದ ಅಸುರರಿಗೂ ಗಣವಿರುವುದು. ನನ್ನ ನೂರು ವರ್ಷದವರೆಗೆ ಒಬ್ಬನೇ ಕಲಿಯಿರುವನು. ಅಸುರರು ಸಾಧನ ಪೂರ್ತಿಯಾದ ಮೇಲೆ ಅಂಧಂತಮಸ್ಸಿನ ಬಳಿಗೆ ಹೋಗಿ ಕಲಿಯನ್ನು ನಿರೀಕ್ಷಿಸುತ್ತಾ ಇರುವರು. ನನ್ನ ನೂರು ವರ್ಷವಾದ ಮೇಲೆ ವಾಯುದೇವನ ಗದಾಪ್ರಹಾರದಿಂದ ಅವರ ಲಿಂಗದೇಹ ಭಂಗವಾಗುವುದು. ಆಮೇಲೆ ಅಂಧಂತಮಸ್ಸನ್ನು ಪ್ರವೇಶಿಸುವವ ರಾಗಿ ಇಲ್ಲಿ ತಾರತಮ್ಯದಿಂದ ದುಃಖವನ್ನು ಅನುಭವಿಸುತ್ತಾ ಇರುವರು. ಅವರಲ್ಲಿ ಎಲ್ಲರಲ್ಲಿಯೂ ಕಲಿಯೇ ಅಧಿಕನಾದವನು. ಭಗವಂತನನ್ನು ಭಗವಂತನ ಭಕ್ತರನ್ನು ದೂಷಣ ಮಾಡುವ ವಿಷಯದಲ್ಲಿ ಅವನಿಗೆ ಸಮಾನರೇ ಇರುವುದಿಲ್ಲ. ಹಾಗೆಯೇ ವಿಪರೀತ ಜ್ಞಾನ ದುಃಖ ಇತ್ಯಾದಿಗಳಲ್ಲಿಯೂ ಅವನೇ ಅಧಿಕನು. ಅವನೇ ದುರ್ಯೋಧನನಾಗಿ ಹುಟ್ಟಿರುವನು.

ಅವನಿಗಿಂತ ನೂರುಪಾಲು ಕಡಿಮೆ ಅವರ ಹೆಂಡತಿಯು. ಅವಳಿಗೆ ಅಲಕ್ಷ್ಮಿಯೆಂದು ಹೆಸರು. ಅವಳೇ ಭೂಮಿಯಲ್ಲಿ ಮಂಥರೆಯಾಗಿ ಹುಟ್ಟಿದಳು.

ಅವಳಿಂದ ಹತ್ತು ಪಾಲು ಕಡಿಮೆ ವಿಪ್ರಚಿತ್ತಿಯು. ಅವನೇ ಜರಾಸಂಧನಾಗಿ ಹುಟ್ಟಿರುವನು.

ಅವನಿಂದ ನೂರುಪಾಲು ಕಡಿಮೆ ಕಾಲನೇಮಿಯು. ಅವನು ಕಂಸನಾಗಿ ಹುಟ್ಟಿರುವನು.

ಅವನಿಂದ ಐದುಪಾಲು ಕಡಿಮೆ ಮಧುಕೈಟಭರು. ಅವರೇ ಹಂಸಡಿಭಿಕರಾಗಿ ಹುಟ್ಟಿರುವರು. ನರಕಾಸುರನೂ ವಿಪ್ರಚಿತ್ತಿಗೆ ಸಮಾನನು.

ಹಿರಣ್ಯಕಶಿಪುವೆಂಬ ದೈತ್ಯನು ಅವನಿಂದ ಎಂಟುಪಾಲು ಕಡಿಮೆ.

ಅವನಿಂದ ಮೂರುಪಾಲು ಕಡಿಮೆ ಹಿರಣ್ಯಾಕ್ಷನೆಂಬ ಅಸುರನು. ಮಣಿಮಂತನೂ ಅವನಿಗೆ ಸಮಾನನು. ಬಕಾಸುರನು ಅವನಿಂದ ಸ್ವಲ್ಪ ಕಡಿಮೆ ಯಾದವನು.

ತಾರಕಾಸುರನು ಅವನಿಗಿಂತ ಇಪ್ಪತ್ತುಪಾಲು ಕಡಿಮೆಯಾದವನು.

ಶಂಬರಾಸುರನು ಅವನಿಗಿಂತ ಆರುಪಾಲು ಕಡಿಮೆಯಾದವನು.

ಸಾಲ್ವದೈತ್ಯನು ಶಂಬರಾಸುರನಿಗೆ ಸಮಾನನು.

ಹಿಡಿಂಬನು ಶಂಬರನಿಂದ ಅರ್ಧಪಾಲು ಕಡಿಮೆಯಾದವನು.

ಬಾಣಾಸುರನು ಅವನಿಗೆ ಸಮಾನನು. ಅವನೇ ಕೀಚಕನಾಗಿ ಹುಟ್ಟಿರುವನು.

ದ್ವಾಪರ ಎಂಬ ಅಸುರನೂ ಬಾಣಾಸುರನಿಗೆ ಸಮಾನನು. ಅವನಿಗಿಂತ ಹತ್ತುಪಾಲು ಕಡಿಮೆ ನಮುಚಿಯೆಂಬ ಅಸುರನು. ಪಾಕ ಇಲ್ವಲ ಎಂಬ ಇಬ್ಬರು ಅಸುರರೂ ನಮುಚಿಗೆ ಸಮಾನರು.

ಅವರಿಂದ ಮೂರುಪಾಲು ಕಡಿಮೆ ವಾತಾಪಿಯೆಂಬ ದೈತ್ಯನು.

ಅವನಿಗಿಂತ ಒಂದೂವರೆ ಪಾಲು ಕಡಿಮೆ ಧೇನುಕಾಸುರನು.

ಅವನಿಂದ ಅರ್ಧಪಾಲು ಕಡಿಮೆ ಕೇಶಿಯೆಂಬ ಅಸುರನು. ತೃಣಾವರ್ತನು ಕೇಶಿಗೆ ಸಮಾನನು.

ಅವನಿಂದ ಹತ್ತುಪಾಲು ಕಡಿಮೆ ಲವಣಾಸುರನು ಅವನಿಂದ ಐದುಪಾಲು ಕಡಿಮೆ. ಧುಂಧು ಎಂಬ ಅಸುರನು.

ಅವನಿಂದ ಎಂಟುಪಾಲು ಕಡಿಮೆ ಪೌಂಡ್ರಕವಾಸುದೇವನು. ಅವನೇ ಪೂರ್ವಜನ್ಮದಲ್ಲಿ ವೇನರಾಜನಾಗಿದ್ದನು.

ಅವನಿಂದ ಒಂದುಪಾಲು ಕಡಿಮೆ ಕುಂಭಾಂಡ ಕೂಪಕರ್ಣರು.

ದುಃಶಾಸನನು ಜರಾಸಂಧನಿಗೆ ಸಮಾನನು. ವಿಕರ್ಣನು ಕಂಸನಿಗೆ ಸಮಾನನು.

ರುಕ್ಮನು ಕೂಪಕರ್ಣನಿಗಿಂತ ನೂರುಪಾಲು ಕಡಿಮೆಯಾದವನು.

ಅವನಿಂದ ನೂರುಪಾಲು ಕಡಿಮೆ ಶತಧನ್ವನು. ಅವನಿಗೆ ಸಮಾನನು ಕಿರ್ಮೀರನು.

ಕಾಲಕೇಯ ಅಸುರನು ಯಾವಾಗಲೂ ವೇನನಿಗೆ ಸಮಾನನು.

ಅವನಿಗಿಂತ ನೂರು ಪಾಲು ಕಡಿಮೆ, ಚಿತ್ತಕ್ಕೆ ಅಭಿಮಾನಿಯಾದ ಅಸುರನು.

ಅವನಿಗಿಂತ ನೂರುಪಾಲು ಕಡಿಮೆ, ಶರೀರಕ್ಕೆ ಅಭಿಮಾನಿಯಾದ ಅಸುರನು.

ಅವನಿಗಿಂತ ಹತ್ತುಪಾಲು ಕಡಿಮೆ ಹಸ್ತಕ್ಕೆ ಅಭಿಮಾನಿಯಾದ ಅಸುರನು.

ಅವನಿಗಿಂತ ನೂರುಪಾಲು ಕಡಿಮೆ, ಪಾದದ ಅಭಿಮಾನಿಯಾದ ದೈತ್ಯನು.

ಅವನಿಂದ ನೂರುಪಾಲು ಕಡಿಮೆ, ಕಿವಿಗೆ ಅಭಿಮಾನಿಯಾದ ಅಸುರನು.

ಅವನಿಂದ ನೂರುಪಾಲು ಕಡಿಮೆ, ಕಣ್ಣಿಗೆ ಅಭಿಮಾನಿಯಾದ ಅಸುರನು.

ಅವನಿಂದ ನೂರುಪಾಲು ಕಡಿಮೆ, ಸ್ಪರ್ಶಕ್ಕೆ ಅಭಿಮಾನಿಯಾದ ಅಸುರನು.

ಅವನಿಂದ ನೂರುಪಾಲು ಕಡಿಮೆ ವಾಗಭಿಮಾನಿಯಾದ ಅಸುರನು.

ಅವನಿಂದ ನೂರುಪಾಲು ಕಡಿಮೆ ಗುಹ್ಯೇಂದ್ರಿಯಕ್ಕೆ ಅಭಿಮಾನಿಯಾದ ಅಸುರನು.

ಅವನಿಂದ ನೂರುಪಾಲು ಕಡಿಮೆ ಕರ್ಮಾಭಿಮಾನಿಯಾದ ಅಸುರನು.

ಕಲಿಯೇ ಮೊದಲಾದ ಅಸುರರಿಂದ ಪ್ರೇರಿತರಾಗಿ ರುದ್ರಾದಿಗಳೂ ಕೆಲವು ಸಮಯದಲ್ಲಿ ದೇವರಿಗೆ ವಿರುದ್ಧವಾದ ಕಾರ್ಯವನ್ನು ಮಾಡುವುದುಂಟು. ನಾನೂ ವಾಯುದೇವನೂ ಮಾತ್ರ ಯಾವಾಗಲೂ ವಿರುದ್ಧಕಾರ್ಯವನ್ನು ಮಾಡುವುದಿಲ್ಲ. ಆದರಿಂದ ನಮಗೆ ಅಚ್ಛಿನ್ನಭಕ್ತರೆಂದು ಹೆಸರು. ಅಚ್ಛಿನ್ನಭಕ್ತನಾದ ನನ್ನಲ್ಲಿ ಅನುಗ್ರಹ ಮಾಡು' ಎಂದು ಬ್ರಹ್ಮದೇವರು ಸ್ತೋತ್ರಮಾಡಿ ಕೈಮುಗಿದು ನಿಂತುಕೊಂಡರು. ಆಮೇಲೆ ಭಗವಂತನಿಂದ ಆಜ್ಞಪ್ತರಾಗಿ ಅವನ ಪ್ರೇರಣೆಯಿಂದ ಜಗತ್ತನ್ನು ಸೃಷ್ಟಿಮಾಡಿದರು.



# ಭಗವಂತನ ಅವತಾರಗಳು [1]

ಪರಮಾತ್ಮನ ಮೊದಲಿನ ಅವತಾರವು ಪುರುಷಾವತಾರವು. ಪುರುಷ ರೂಪದಿಂದ ಪರಮಾತ್ಮನು ಪ್ರಲಯಕಾಲದ ಕತ್ತಲೆಯನ್ನು ಪಾನಮಾಡಿದನು. ಈ ರೂಪವೇ ಎಲ್ಲಾ ಅವತಾರಗಳಿಗೆ ಬೀಜವಾದದ್ದು. ಈ ಭಗವಂತನೇ ಮಾಯಾದೇವಿಯಲ್ಲಿ ಪುರುಷ ಎಂದು ಹೆಸರುಳ್ಳ ಬ್ರಹ್ಮದೇವರನ್ನು ಸೃಷ್ಟಿ ಮಾಡುವುದಕ್ಕಾಗಿ ವಾಸುದೇವ ಎಂದು ರೂಪವನ್ನು ಧರಿಸಿದನು. ಅವನೇ ಜಯಾದೇವಿಯಲ್ಲಿ ಸೂತ್ರನಾಮಕ ವಾಯುದೇವ ರನ್ನು ಸೃಷ್ಟಿಮಾಡುವುದಕ್ಕಾಗಿ ಸಂಕರ್ಷಣ ಎಂಬ ರೂಪವನ್ನು ಧರಿಸಿದನು. ಆಮೇಲೆ ಅವನೇ ಪ್ರದ್ಯುಮ್ನ ಎಂಬ ರೂಪವನ್ನು ಧರಿಸಿ ಕೃತಿದೇವಿಯಲ್ಲಿ ಸರಸ್ವತೀ ಭಾರತಿಯರನ್ನು ಸೃಷ್ಟಿಮಾಡಿದನು. ತರುವಾಯ ಶ್ರೀಭಗವಂತನು ಅನಿರುದ್ಧ ಎಂಬ ರೂಪವನ್ನು ಧರಿಸಿ ಶಾಂತಿದೇವಿಯಲ್ಲಿ ಬ್ರಹ್ಮಾದಿಸಮಸ್ತದೇವತೆಗಳನ್ನು ಸ್ಥೂಲದೇಹ ದಿಂದ ಸೃಷ್ಟಿಮಾಡಿದನು.

ಆಮೇಲೆ ಶ್ರೀಭಗವಂತನು ಬ್ರಹ್ಮಚರ್ಯಧರ್ಮವನ್ನು ಅನುಷ್ಠಾನ ಮಾಡಿ ತೋರಿಸುವುದಕ್ಕಾಗಿ ಕುಮಾರ ಎಂಬ ಅವತಾರವನ್ನು ಮಾಡಿದನು. ಈ ಕುಮಾರ ರೂಪವು ಬೇರೆ. ಸನತ್ಕುಮಾರರು ಬೇರೆ. ಸನತ್ಕುಮಾರರು ಕಾಮದೇವನ ಅಂಗ. ಈ ಕುಮಾರ ಎನ್ನುವ ರೂಪವು ಭಗವಂತನದ್ದೇ.

ಶ್ರೀಭಗವಂತನು ಭೂಮಿಯನ್ನು ಉದ್ಧಾರ ಮಾಡಲಿಕ್ಕೂ ಹಿರಣ್ಯಾಕ್ಷ ಅಸುರನನ್ನು ಸಂಹರಿಸಲಿಕ್ಕೂ ವರಾಹಾವತಾರವನ್ನು ಮಾಡಿದನು. ತರುವಾಯ ಭಗವಂತನು ವಿಶಾಲ ಎಂಬ ಮುನಿಗಳಿಂದ ಇತರಾದೇವಿಯಲ್ಲಿ ಮಹಿದಾಸ ಎಂಬ ಹೆಸರಿನಿಂದ ಅವತರಿಸಿ ನಾರದರಿಗೆ ಪಂಚರಾತ್ರಾಗಮವನ್ನು ಉಪದೇಶಿಸಿದನು.

ಅದೇ ಭಗವಂತನು ಬದರಿಯಲ್ಲಿ ಯಮದೇವರಿಂದ ಶ್ಯಾಮಲಾದೇವಿಯಲ್ಲಿ ಋಷಿಗಳಿಗೆ ತಪಸ್ಸು ಮಾಡುವ ಕ್ರಮವನ್ನು ತಿಳಿಸುವುದಕ್ಕಾಗಿ ನಾರಾಯಣ ಎಂಬ ಹೆಸರಿನಿಂದ ಅವತರಿಸಿದನು. ತರುವಾಯ ಭಗವಂತನು ಕಪಿಲರೂಪದಿಂದ ಅವತರಿಸಿ ಆಸುರಿಯೆಂಬ ಶಿಷ್ಯನಿಗೆ ಪರಮಸಾಂಖ್ಯಶಾಸ್ತ್ರವನ್ನು ಉಪದೇಶಿಸಿದನು.

ಅದೇ ಭಗವಂತನೇ ಅತ್ರಿಋಷಿಗಳಿಂದ ಅವರ ಪತ್ನಿಯಾದ ಅನಸೂಯಾ ದೇವಿಯಲ್ಲಿ ದತ್ತಾತ್ರೇಯ ಎಂಬ ಹೆಸರಿನಿಂದ ಅವತರಿಸಿದನು. ಆನ್ವೀಕ್ಷಿಕಿಯೆಂಬ ಉತ್ತಮ ತರ್ಕವಿದ್ಯೆಯನ್ನು ಅಲರ್ಕಾದಿ ಶಿಷ್ಯರಿಗೆ ಉಪದೇಶಿಸಿದನು.

---

ಗರುಡ ಪು.ಬ್ರಹ್ಮಕಾಂಡ-ಅ.15

ಆ ಭಗವಂತನೇ ರುಚಿಪ್ರಜೇಶ್ವರರಿಂದ ಆ ಕೂತಿದೇವಿಯಲ್ಲಿ ಯಜ್ಞ ಎಂಬ ಹೆಸರಿನಿಂದ ಅವತರಿಸಿ ಸ್ವಾಯಂಭುವ ಮನ್ವಂತರದಲ್ಲಿ ಇಂದ್ರಪದವಿಯನ್ನು ಆಳುವವನಾದನು.

ಅವನೇ ನಾಭಿರಾಜನಿಂದ ಮೇರುದೇವಿಯಲ್ಲಿ ಋಷಭ ಎಂದು ಹೆಸರಿನಿಂದ ಅವತರಿಸಿ ಪರಮಹಂಸ ಸನ್ಯಾಸಿಗಳ ಧರ್ಮವನ್ನು ಮಾಡಿ ತೋರಿಸಿದನು.

ತರುವಾಯ ಭಗವಂತನು ಮನ್ವಂತರ ಪ್ರಲಯದಲ್ಲಿ ವೈವಸ್ವತಮನುವನ್ನು ರಕ್ಷಿಸುವುದಕ್ಕಾಗಿ ಮತ್ಸ್ಯರೂಪವನ್ನು ಧರಿಸಿದನು. ಆ ರೂಪದಿಂದಲೇ ಹಯಗ್ರೀವಾಸುರನನ್ನು ಸಂಹರಿಸಿ ಬ್ರಹ್ಮದೇವರಿಗೆ ವೇದಗಳನ್ನು ತಂದುಕೊಟ್ಟನು.

ತರುವಾಯ ದೇವತೆಗಳೂ ಅಸುರರೂ ಸೇರಿ ಸಮುದ್ರಮಥನ ಮಾಡುತ್ತಿರುವಾಗ ಮುಳುಗಿಹೋದ ಮಂದರ ಪರ್ವತವನ್ನು ಬೆನ್ನಿನಿಂದ ಎತ್ತಿ ಹಿಡಿಯಲಿಕ್ಕೂ ಬ್ರಹ್ಮಾಂಡವನ್ನೇ ಎತ್ತಿ ಹಿಡಿಯಲಿಕ್ಕೂ ಕೂರ್ಮ ಅವತಾರವನ್ನು ಮಾಡಿದನು.

ಅನಂತರದಲ್ಲಿ ಭಗವಂತನು ಅಪಥ್ಯ ದೋಷವನ್ನು ಪರಿಹರಿಸಲಿಕ್ಕಾಗಿ ಕೈಯಲ್ಲಿ ಅಮೃತ ಕಲಶವನ್ನು ಹಿಡಿದುಕೊಂಡು ಧನ್ವಂತರಿಯೆಂಬ ಹೆಸರಿನಿಂದ ಅವತರಿಸಿದನು.

ಆಮೇಲೆ ಅಸುರರನ್ನು ವಂಚಿಸಿ ದೇವತೆಗಳಿಗೆ ಅಮೃತಪಾನ ಮಾಡಿಸಲು ನಾರಾಯಣಿಯೆಂಬ ಸ್ತ್ರೀರೂಪವನ್ನು ಧರಿಸಿದನು.

ತರುವಾಯ ಭಗವಂತನು ನೃಸಿಂಹಾವತಾರವನ್ನು ಮಾಡಿ ಹಿರಣ್ಯಕಶಿಪುವನ್ನು ಉಗುರಿನಿಂದ ಸೀಳಿ ಸಂಹರಿಸಿದನು.

ಆಮೇಲೆ ಪರಮಾತ್ಮನು ಅದಿತಿದೇವಿಯಲ್ಲಿ ಕಶ್ಯಪರಿಂದ ವಾಮನ ಎಂಬ ಹೆಸರಿನಿಂದ ಅವತರಿಸಿ ಬಲಿಯಿಂದ ಭೂಮಿಯಲ್ಲಿ ಬೇಡಿ ಇಂದ್ರದೇವರಿಗೆ ಕೊಟ್ಟನು.

ತರುವಾಯ ಪರಮಾತ್ಮನು ಜಮದಗ್ನಿಋಷಿಗಳಿಂದ ರೇಣುಕಾದೇವಿಯಲ್ಲಿ ಪರಶುರಾಮ ಎಂಬ ಅವತಾರಮಾಡಿ ಬ್ರಾಹ್ಮಣ ದ್ರೋಹಿಗಳಾದ ದುಷ್ಟಕ್ಷತ್ರಿಯರೆಲ್ಲರನ್ನೂ ಇಪ್ಪತ್ತೊಂದು ಬಾರಿ ಸಂಹರಿಸಿದನು.

ಆಮೇಲೆ ನಾಲ್ಕು ಬಾರಿ ವ್ಯಾಸಾವತಾರವನ್ನು ಮಾಡಿದನು. ಆಮೇಲೆ ಹರಿಯು ಕೌಸಲ್ಯಾದೇವಿಯಲ್ಲಿ ದಶರಥರಾಜನಿಂದ ರಾಮ ಎಂಬ ಹೆಸರಿನಿಂದ ಅವತರಿಸಿ ಸಮುದ್ರನಿಗ್ರಹಾದಿ ಇತರ ಅಸಾಧ್ಯ ಕಾರ್ಯಗಳನ್ನು ಮಾಡಿದನು.

ತರುವಾಯ ಇಪ್ಪತ್ತೆಂಟನೇ ದ್ವಾಪರಾಂತ್ಯದಲ್ಲಿ ಪರಾಶರರಿಂದ ಸತ್ಯವತಿಯಲ್ಲಿ ವೇದವ್ಯಾಸರೂಪದಿಂದ ಅವತರಿಸಿ ವೇದವಿಭಾಗ ಮಾಡಿದರು.

ಆಮೇಲೆ ಭಗವಂತನು ವಸುದೇವನಿಂದ ದೇವಕಿಯಲ್ಲಿ ಕೃಷ್ಣ ಎಂಬ ಹೆಸರಿನಿಂದ ಅವತರಿಸಿ ಕಂಸಾದಿಗಳನ್ನು ನಿಗ್ರಹಿಸಿದನು.

ತರುವಾಯ ಅಸುರರನ್ನು ಮೋಹಿಸುವುದಕ್ಕಾಗಿ ಬುದ್ಧರೂಪವನ್ನು ಧರಿಸಿದನು.

ಕಲಿಯುಗ ಕೃತಯುಗಗಳ ಸಂಧಿಯಲ್ಲಿ ಕಲ್ಕಿರೂಪದಿಂದ ಅವತರಿಸಿ ದುಷ್ಟರಾಜರನ್ನು ಸಂಹರಿಸುವನು. ವಿಷ್ಣುಯಶ ಎಂದು ಹೆಸರುಳ್ಳ ಬ್ರಾಹ್ಮಣನಿಗೆ ಮಗನಾಗಿ ಅವತರಿಸುವನು.

ಹಾಗೆಯೇ ಸ್ವಾರೋಚಿಷ ಮನ್ವಂತರದಲ್ಲಿ ವೇದಶಿರ ಎಂಬ ಋಷಿಗಳಿಂದ ತುಷೀತಾ ಎಂಬ ಅವರ ಪತ್ನಿಯಲ್ಲಿ ವಿಭು ಎಂಬ ಹೆಸರಿನಿಂದ ಅವತರಿಸಿದನು. ಬ್ರಹ್ಮಚಾರಿ ರೂಪವುಳ್ಳ ಆ ಭಗವಂತನಿಂದ ಎಂಭತ್ತೆಂಟು ಸಾವಿರ ಮುನಿಗಳು ಅವನ ವ್ರತವನ್ನು ಅಭ್ಯಾಸ ಮಾಡಿದರು.

ಮೂರನೇದಾದ ಉತ್ತಮನ ಮನ್ವಂತರದಲ್ಲಿ ಧರ್ಮನಿಗೆ ಸೂನೃತಾದೇವಿಯಲ್ಲಿ ಸತ್ಯಸೇನ ಎಂಬ ಹೆಸರಿನಿಂದ ಅವತರಿಸಿದನು. ಆಗಿನ ಇಂದ್ರನಾದ ಸತ್ಯಜಿತನಿಂದ ಸ್ತುತಿಸಲ್ಪಟ್ಟವನಾಗಿ ಅನೇಕ ಯಕ್ಷರಾಕ್ಷಸರನ್ನು ಸಂಹರಿಸಿದನು.

ನಾಲ್ಕನೇ ಮನ್ವಂತರದಲ್ಲಿ ತಾಪಸ ಎಂಬ ಮನುವಾಗಿ ಅವತರಿಸಿ ಗಜೇಂದ್ರನನ್ನು ಮೊಸಳೆಯಿಂದ ಬಿಡಿಸಿದನು.

ಐದನೇ ಮನ್ವಂತರದಲ್ಲಿ ಶುಭ್ರನ ಪತ್ನಿಯಾದ ವಿಕುಂಠಾದೇವಿಯಲ್ಲಿ ವೈಕುಂಠ ಎಂಬ ಹೆಸರಿನಿಂದ ಅವತರಿಸಿದನು. ರಮಾದೇವಿಯರಿಂದ ಪ್ರಾರ್ಥಿತನಾಗಿ ವೈಕುಂಠಲೋಕವನ್ನು ವ್ಯಕ್ತಪಡಿಸಿದನು.

ಆರನೇ ಮನ್ವಂತರದಲ್ಲಿ ವೈರಾಜನಿಗೆ ಸಂಭೂತಿದೇವಿಯಲ್ಲಿ ಅಜಿತ ಎಂಬ ಹೆಸರಿನಿಂದ ಅವತರಿಸಿದನು. ಆ ರೂಪದಿಂದ ದೇವತೆಗಳಿಂದ ಸಮುದ್ರ ಮಥನ ಮಾಡಿಸಿ ಅಮೃತವನ್ನು ಕೊಡಿಸಿದನು.

ಏಳನೇ ಮನ್ವಂತರದಲ್ಲಿಯೇ ಭಗವಂತನು ಕಶ್ಯಪರಿಂದ ಅದಿತಿದೇವಿಯಲ್ಲಿ ವಾಮನ ಎಂಬ ಹೆಸರಿನಿಂದ ಅವತಾರ ಮಾಡಿದನು.

ಎಂಟನೇ ಮನ್ವಂತರದಲ್ಲಿ ದೇವಗುಹ್ಯನಿಂದ ಸರಸ್ವತಿಯಲ್ಲಿ ಸಾರ್ವಭೌಮ

ಎಂಬ ಹೆಸರಿನಿಂದ ಭಗವಂತನು ಅವತರಿಸಿ ಬಲಿಗೆ ಇಂದ್ರಪದವಿಯನ್ನು ಕೊಡುವನು.

ಒಂಭತ್ತನೇ ಮನ್ವಂತರದಲ್ಲಿ ಆಯುಷ್ಮಾನ್ ಎಂಬುವನಿಂದ ಅಂಬುಧಾರೆಯಲ್ಲಿ ಋಷಭ ಎಂಬ ಹೆಸರಿನಿಂದ ಅವತರಿಸುವನು. ಅವನ ಅನುಗ್ರಹದಿಂದ ಆಕಾಲದ ಅದ್ಭುತ ಎಂದು ಹೆಸರುಳ್ಳ ಇಂದ್ರನು ಮೂರುಲೋಕಗಳನ್ನು ರಕ್ಷಿಸುವನು.

ಹತ್ತನೇ ಮನ್ವಂತರದಲ್ಲಿ ಪ್ರಜೇಶ್ವರರ ಪತ್ನಿಯಲ್ಲಿ ಶ್ರೀಮೂರ್ತಿ ಎಂದು ಹೆಸರಿನಿಂದ ಅವತರಿಸಿ ಲೋಕವನ್ನು ಸಂತೋಷಪಡಿಸುವನು.

ಹನ್ನೊಂದನೇ ಮನ್ವಂತರದಲ್ಲಿ ಆರ್ಯಕನಿಗೆ ವೈಧೃತಾದೇವಿಯಲ್ಲಿ ಧರ್ಮ ಸೇತು ಎಂಬ ಹೆಸರಿನಿಂದ ಅವತರಿಸಿ ಮೂರುಲೋಕಗಳನ್ನು ರಕ್ಷಿಸುವನು.

ಹನ್ನೆರಡನೇ ಮನ್ವಂತರದಲ್ಲಿ ಸತ್ಯಮಹ ಎನ್ನುವವರಿಂದ ಸೂನೃತಾದೇವಿಯಲ್ಲಿ ಸ್ವಧಾಮ ಎಂಬ ಹೆಸರಿನಿಂದ ಅವತರಿಸಿ ಆ ಮನ್ವಂತರವನ್ನು ರಕ್ಷಿಸುವನು.

ಹದಿಮೂರನೇ ಮನ್ವಂತರದಲ್ಲಿ ದೇವಹೋತ್ರನಿಗೆ ಬೃಹತೀದೇವಿಯಲ್ಲಿ ಯೋಗೇಶ್ವರ ಎಂಬ ಹೆಸರಿನಿಂದ ಅವತರಿಸಿ ದಿವಸ್ಪತಿ ಎಂದು ಹೆಸರುಳ್ಳ ಆಗಿನ ಇಂದ್ರನಿಗೆ ಸಹಾಯ ಮಾಡುವನು.

ಹದಿನಾಲ್ಕನೇ ಮನ್ವಂತರದಲ್ಲಿ ನಾರಾಯಣ ಎನ್ನುವವನಿಗೆ ವಿತಾನಾ ಎಂಬ ಪತ್ನಿಯಲ್ಲಿ ಬೃಹದ್ಭಾನು ಎಂಬ ಹೆಸರಿನಿಂದ ಅವತರಿಸಿ ಅನೇಕ ಯಜ್ಞಗಳನ್ನು ಮಾಡಿ ತೋರಿಸುವನು.

ಇನ್ನು ಪರಮಾತ್ಮನ ಕೇಶವಾದಿ ಇಪ್ಪತ್ತನಾಲ್ಕು ರೂಪಗಳೂ ವಿಶ್ವಾದಿ ಸಹಸ್ರ ರೂಪಗಳೂ ಪರಾದಿ ಅಮಿತರೂಪಗಳೂ ಹೀಗೆ ಅನಂತರೂಪಗಳು ಇರುವುವು. ಭಗವಂತನ ಅವತಾರರೂಪಗಳನ್ನು ಎಣಿಸಲಿಕ್ಕೇ ಆಗಲಾರದು. ಈ ಎಲ್ಲಾ ರೂಪಗಳಿಗೆ ಮೂಲರೂಪದಿಂದಲೂ ಪರಸ್ಪರವೂ ಸ್ವಲ್ಪವೂ ಭೇದವಿರುವುದಿಲ್ಲ. ಎಲ್ಲಾ ಗುಣಗಳಿಂದಲೂ ಎಲ್ಲಾ ರೂಪಗಳೂ ಸರ್ವಕಾಲದಲ್ಲಿಯೂ ಪೂರ್ಣ ವಾಗಿಯೇ ಇರುವುವು.



# ಉಡುಪಿ ಶ್ರೀಕೃಷ್ಣ[1]

ದ್ವಾರಕಾಪಟ್ಟಣದಲ್ಲಿ ಶ್ರೀಕೃಷ್ಣಪರಮಾತ್ಮನು ವಿರಾಜಿಸುತ್ತಿರಲು ಒಂದು ದಿನದಲ್ಲಿ ದೇವಕೀದೇವಿಯು 'ಭಗವಂತನೇ! ನಾನು ನಿನ್ನ ಬಾಲಕ್ರೀಡೆಯನ್ನು ನೋಡಲು ಬಯಸುವೆನು' ಎಂದು ಭಗವಂತನೊಡನೆ ಕೇಳಿಕೊಂಡಳು. ಆಗ ಪರಮಾತ್ಮನು ಬಾಲರೂಪವನ್ನು ಧರಿಸಿ ಕಡಗೋಲನ್ನು ಕೈಯಲ್ಲಿ ಧರಿಸಿ ಮೊಸರಿನ ಪಾತ್ರೆಯನ್ನು ಒಡೆದು ಬಾಲಕ್ರೀಡೆಯನ್ನು ತೋರಿಸಿದನು. ಅದನ್ನು ನೋಡಿ ದೇವಕೀದೇವಿಯು ಆನಂದ ಸಮುದ್ರದಲ್ಲಿ ಮುಳುಗಿದಳು.

ಇದನ್ನು ದೂರದಲ್ಲಿ ರುಕ್ಮಿಣಿದೇವಿಯರು ನೋಡುತ್ತಿದ್ದರು. ಅವರು ಭಗವಂತನೊಡನೆ 'ಪ್ರಾಣಪ್ರಿಯ! ನನಗೆ ತಮ್ಮ ಬಾಲರೂಪವುಳ್ಳ ಪ್ರತಿಮೆಯನ್ನು ಪೂಜಿಸಲಿಕ್ಕೆ ಮಾಡಿಸಿಕೊಡಬೇಕು' ಎಂದು ಪ್ರಾರ್ಥಿಸಿದರು. ಶ್ರೀಕೃಷ್ಣಪರಮಾತ್ಮ ವಿಶ್ವಕರ್ಮನನ್ನು ಕರೆದು ಅವನಿಂದ ಒಂದುಕೈಯಲ್ಲಿ ಕಡಗೋಲನ್ನೂ ಮತ್ತೊಂದು ಕೈಯಲ್ಲಿ ಹಗ್ಗವನ್ನೂ ಹಿಡಿದುಕೊಂಡಿರುವ ಬಾಲಕೃಷ್ಣನ ಪ್ರತಿಮೆಯನ್ನು ಮಾಡಿಸಿ ಕೊಟ್ಟನು. ಆ ಪ್ರತಿಮೆಯನ್ನು ಭಗವಂತನ ಅಷ್ಟಮಹಿಷಿಯರೂ ಪೂಜಿಸುತ್ತಾ ಇದ್ದರು. ಶ್ರೀಕೃಷ್ಣಪರಮಾತ್ಮನೂ ಅವನ ಮಡದಿಯರೂ ವೈಕುಂಠಲೋಕಕ್ಕೆ ಪ್ರಯಾಣ ಮಾಡಲು ಆ ಪ್ರತಿಮೆಯು ದ್ವಾಪಕಾಪಟ್ಟಣದ ಹತ್ತಿರವೇ ಬಿದ್ದಿತ್ತು. ಅಲ್ಲಿರುವ ಮಣ್ಣಿಂದ ಗೋಪಿಚಂದನದಲ್ಲಿ ಮುಚ್ಚಿಹೋಗಿತ್ತು.

ಹೀಗೆಯೇ ಕೆಲವು ಸಮಯವು ಕಳೆಯಲು ಬ್ರಹ್ಮಾದಿದೇವತೆಗಳಿಂದ ಪ್ರಾರ್ಥಿತನಾದ ಪರಮಾತ್ಮನಿಂದ ಆಜ್ಞಪ್ತರಾದ ಮುಖ್ಯಪ್ರಾಣದೇವರು ಭೂಮಿಯಲ್ಲಿ ಪಾಜಕ ಕ್ಷೇತ್ರದಲ್ಲಿ ಮಧ್ಯಗೇಹಭಟ್ಟರೆಂದು ಪ್ರಸಿದ್ಧರಾದ ನಾರಾಯಣಭಟ್ಟರಿಂದ ವೇದವತೀ ದೇವಿಯಲ್ಲಿ ಅವತರಿಸಿದರು. ಅನಂತರ ಯೋಗ್ಯ ವಯಸ್ಸಿನಲ್ಲಿ ಉಪನಯನವನ್ನು ಹೊಂದಿದವರಾಗಿ ಕ್ರಮದಿಂದ ಅಚ್ಯುತಪ್ರೇಕ್ಷರಿಂದ ಸಂನ್ಯಾಸವನ್ನು ಸ್ವೀಕರಿಸಿದರು. ತರುವಾಯ ಒಂದು ದಿನ ಉಡುಪಿಯಲ್ಲಿ ಇದ್ದ ಪೂರ್ಣಪ್ರಜ್ಞಾ ಚಾರ್ಯರು ಜ್ಞಾನದೃಷ್ಟಿಯಿಂದ ಆ ಕೃಷ್ಣ ಪ್ರತಿಮೆಯಲ್ಲಿ ಸನ್ನಿಹಿತನಾದ ಪರಮಾತ್ಮನು ಬರುತ್ತಿರುವನೆಂದು ತಿಳಿದು ಉಡುಪಿಯ ಹತ್ತರವಿರುವ ಸಮುದ್ರತೀರಕ್ಕೆ ಹೋದರು. ಹೋಗುವಾಗಲೇ ದ್ವಾದಶಸ್ತೋತ್ರವನ್ನು ಮಾಡುತ್ತಲೇ ಹೋದರು.

---

1. ಐತಿಹ್ಯ

ಶ್ರೀಮದಾಚಾರ್ಯರು ಸಮುದ್ರತೀರದಲ್ಲಿ ಕುಳಿತಿದ್ದರು. ಆ ಸಮಯಕ್ಕೆ ಸರಿಯಾಗಿ ಸಮುದ್ರದಲ್ಲಿ ಒಂದು ಹಡುಗು ಗಾಳಿಗೆ ಸಿಕ್ಕಿ, ಆ ಹಡಗಿನಲ್ಲಿದ್ದ ಜನರೆಲ್ಲರೂ ಪ್ರಾಣಭಯದಿಂದ, ದೂರದಲ್ಲಿ ಕಾಣಿಸುತ್ತಿದ್ದ ಶ್ರೀಮದಾಚಾರ್ಯರನ್ನು ಪ್ರಾರ್ಥಿಸಿಕೊಂಡರು. ಆಗ ಆಚಾರ್ಯರು ಕರುಣೆಯುಳ್ಳವರಾಗಿ ಕಾವಿಶಾಟಿಯನ್ನು ಬೀಸಿ ಹಡಗು ಸುರಕ್ಷಿತವಾಗಿ ತೀರಕ್ಕೆ ಬಂದು ಸೇರುವಂತೆ ಮಾಡಿದರು. ಆಗ ಆ ಹಡಗಿನ ಯಜಮಾನನಾದ **ಮೈಸೆಟ್ಟಿ**ಯೆನ್ನುವವನು ಆಚಾರ್ಯರಿಗೆ ಉದ್ದಕ್ಕೆ ನಮಸ್ಕಾರವನ್ನು ಮಾಡಿ, ತಮಗೆ ಪ್ರಾಣಭಯವನ್ನು ಪರಿಹಾರ ಮಾಡಿದ ಪ್ರಯುಕ್ತ ಹಡಗಿನಲ್ಲಿದ್ದ ಎಲ್ಲಾ ಪದಾರ್ಥಗಳನ್ನೂ ಸ್ವೀಕರಿಸಬೇಕೆಂದು ಪ್ರಾರ್ಥಿಸಿದನು. ಆಗ ಆಚಾರ್ಯರು 'ವಿರಕ್ತರಾದ ನಮಗೆ ಮತ್ತೆ ಯಾವುದೂ ಬೇಡ. ಹಡಗಿನಲ್ಲಿ ಮೂರು ಗೋಪಿಗೆಡ್ಡೆಗಳಿವೆ. ಅವುಗಳನ್ನು ಕೊಡಬೇಕೆಂದು ಹೇಳಿದರು. ಹಡಗಿನ ಯಜಮಾನನು ಆನಂದದಿಂದ ಮೂರು ಗೋಪಿಗೆಡ್ಡೆಗಳನ್ನು ಕೊಟ್ಟನು. ಅದರಲ್ಲಿ ಒಂದು ಗೆಡ್ಡೆಯು ಅಲ್ಲಿಯೇ ಒಡೆಯಿತು. ಅದರಲ್ಲಿ ಬಲರಾಮದೇವರ ಪ್ರತಿಮೆಯು ಇತ್ತು. ಅದನ್ನು ಸಮುದ್ರತೀರದಲ್ಲೇ ಪ್ರತಿಷ್ಠಿಸಿದರು. ಅಲ್ಲಿ ಗೋಪಿಗೆಡ್ಡೆಯು ಒಡೆದುಹೋದ ಪ್ರಯುಕ್ತ ಒಡಭಾಂಡೇಶ್ವರ ಎಂದು ಹೆಸರಾಯಿತು. ಮತ್ತೊಂದು ಗೋಪಿಗೆಡ್ಡೆಯಲ್ಲಿ ಪೂರ್ವೋಕ್ತವಾದ ಬಾಲಕೃಷ್ಣ ಪ್ರತಿಮೆಯಿತ್ತು. ಅದನ್ನು ಆಚಾರ್ಯರು ಸ್ವೀಕರಿಸಿದರು. ಇನ್ನೊಂದು ಗೋಪಿಗೆಡ್ಡೆಯಲ್ಲಿ ಜನಾರ್ದನರೂಪಿ ಪರಮಾತ್ಮನ ಪ್ರತಿಮೆಯಿತ್ತು. ಅದನ್ನು ಶ್ರೀಮದಾಚಾರ್ಯರು ಮೈಸೆಟ್ಟಿಗೆ ಕೊಟ್ಟರು. ಅದನನು ಅವನು ಉಡುಪಿಯಿಂದ ಸುಮಾರು ಹತ್ತು ಮೈಲು ದೂರದಲ್ಲಿರುವ 'ಯರ್ಮಾಳು' ಎಂಬ ಸ್ಥಳದಲ್ಲಿ ಪ್ರತಿಷ್ಠಾ ಮಾಡಿಸಿದನು.

ಶ್ರೀಮದಾಚಾರ್ಯರು ಶ್ರೀಕೃಷ್ಣ ಪ್ರತಿಮೆಯನ್ನು ನೋಡುತ್ತಲೇ

**'ದೇವಕೀ ನಂದನ ನಂದಕುಮಾರ ವೃಂದಾವನಾಂಚನ ಗೋಕುಲಚಂದ್ರ'**

ಇತ್ಯಾದಿ ಅವಶಿಷ್ಟ ದ್ವಾದಶಸ್ತೋತ್ರವನ್ನು ಮಾಡುತ್ತಾ ಆ ಪ್ರತಿಮೆಯನ್ನು ಹೊತು ಕೊಂಡು ಉಡುಪಿಗೆ ಹೊರಟುಬಂದರು. ದಾರಿಯಲ್ಲಿ ಉಡುಪಿಯಿಂದ ಒಂದು ಮೈಲು ದೂರದಲ್ಲಿಯೇ ಕೃಷ್ಣಪ್ರತಿಮೆಯ ಪ್ರತಿಷ್ಠೆಯನ್ನು ಮಾಡಲು ಯೋಚಿಸಿದಂತೆ ಶ್ರೀಮದಾಚಾರ್ಯರು ತೋರಿಸಲು ಅಲ್ಲಿಯ ಜನರು ಇಲ್ಲಿ ತುಂಬಾ ಗೋವುಗಳು ಮೇಯುವ ಸ್ಥಳ. ಇಲ್ಲಿ ಬೇಡವೆಂದರು. ಆಚಾರ್ಯರು ಕೃಷ್ಣಪ್ರತಿಷ್ಠಾ ಮಾಡಲು ಯೋಚಿಸಿದಂತೆ ತೋರಿಸಿದ ಆ ಸ್ಥಳಕ್ಕೆ ಆದಿಉಡುಪಿ ಎಂದು ಹೆಸರಾಯಿತು. ಆಮೇಲೆ ಆಚಾರ್ಯರು ಆಪ್ರತಿಮೆಯನ್ನು ಉಡುಪಿಗೆ ತೆಗೆದುಕೊಂಡು ಬಂದರು.

ಉಡುಪಿಯಲ್ಲಿ ಸರೋವರದಲ್ಲಿ ಮೂರುನಾಲ್ಕು ಶಿಷ್ಯರಿಂದ ಆ ಪ್ರತಿಮೆಯನ್ನು ಚೆನ್ನಾಗಿ ಶೋಧನೆಮಾಡಿ ಆಮೇಲೆ ತನ್ನ ಸ್ಪರ್ಶದಿಂದ ಹೆಚ್ಚಾದ ಭಗವಂತನ ಸನ್ನಿಧಾನದಿಂದ 30 ಜನರಿಂದಲೂ ಹೊರಲಿಕ್ಕೆ ಅಶಕ್ಯವಾದ ಆ ಪ್ರತಿಮೆಯನ್ನು ಶ್ರೀಮದಾಚಾರ್ಯರೊಬ್ಬರೇ ಹೊತ್ತುಕೊಂಡು ಮಠಕ್ಕೆ ತೆಗೆದುಕೊಂಡು ಹೋದರು. ಆ ಮಠದಲ್ಲಿ ಅಂದರೆ ಈಗಿರುವ ಕೃಷ್ಣದೇವರ ಗುಡಿಯಲ್ಲಿ ಮೊದಲು ಶಂಕರಾಚಾರ್ಯ ಶಿಷ್ಯನಾದ ಪೂಸ್ತಾಮಲಕ ಎಂಬವನಿಂದ ಪ್ರತಿಷ್ಠಿತವಾದ ಕೊಳಲು ಊದುವ ಕೃಷ್ಣಪ್ರತಿಮೆಯೊಂದಿತ್ತು. ಅದನ್ನು ದೂರದಲ್ಲಿ ಇಟ್ಟು ತಾನು ತಂದಿರುವ ಶ್ರೀಕೃಷ್ಣಪ್ರತಿಮೆಯನ್ನು ಪ್ರತಿಷ್ಠಾಮಾಡಿದರು. ಅಷ್ಟಮಹಿಷಿಯರು ಪೂಜಾ ಮಾಡುತ್ತಾ ಇದ್ದಪ್ರಯುಕ್ತ ಅಷ್ಟಯತಿಗಳನ್ನು ಪೂಜಾಮಾಡಲಿಕ್ಕೆ ನಿಯಮಿಸಿದರು.

ಅಂದರೆ ಪಲಿಮಾರು, ಅಧಮಾರು, ಕೃಷ್ಣಾಪುರ, ಪುತ್ತಿಗೆ, ಶೀರೂರು, ಸೋದೆ, ಕಾಣೆಯೂರು, ಪೇಜಾವರ ಎಂಬ ಎಂಟು ಮಠಗಳನ್ನು ನಿರ್ಮಾಣ ಮಾಡಿದರು. ಪಲಿಮಾರು ಮಠಕ್ಕೆ ಹೃಷೀಕೇಶತೀರ್ಥರೆಂಬ ಯತಿಗಳನ್ನು ನಿಯಮಿಸಿದರು. ಇವರು ಸುಸ್ವರವಾಗಿ ಭಾಗವತನ್ನು ಹೇಳುತ್ತಿದ್ದರು. ಅದರಿಂದಲೇ ಮಧ್ವವಿಜಯದಲ್ಲಿ ವಿಷ್ಣುಮಂಗಲದೇವಾಲಯದಲ್ಲಿ ಶ್ರೀಮದಾಚಾರ್ಯರು ಭಾಗವತಾರ್ಥವನ್ನು ಉಪನ್ಯಾಸ ಮಾಡುವಾಗ ಹೃಷೀಕೇಶತೀರ್ಥರು ಭಾಗವತ ಶ್ಲೋಕವನ್ನು ಸುಸ್ತರವಾಗಿ ಹೇಳಿದರು ಎಂದು ಹೇಳಲಾಗಿದೆ. ಅಧಮಾರುಮಠಕ್ಕೆ ನರಸಿಂಹತೀರ್ಥರು. ಕೃಷ್ಣಾಪುರಮಠಕ್ಕೆ ಜನಾರ್ದನತೀರ್ಥರು, ಪುತ್ತಿಗೆಮಠಕ್ಕೆ ಉಪೇಂದ್ರತೀರ್ಥರು ಆಚಾರ್ಯರಿಂದ ನಿಯುಕ್ತರಾದರು. ಉಪೇಂದ್ರತೀರ್ಥರು ತುಂಬಾ ದೇಹದಾರ್ಢ್ಯ ವುಳ್ಳವರಾಗಿದ್ದರೆಂದು ತಿಳಿಯುತ್ತದೆ. ಒಂದು ಸಂದರ್ಭದಲ್ಲಿ ಸಂಚಾರಮಾಡುವಾಗ ಶ್ರೀಮದಾಚಾರ್ಯರ ಸಮೀಪಕ್ಕೆ ಕೆಲವು ಕಳ್ಳರು ಬರುವ ಸಮಯ ಇವರು ಆಚಾರ್ಯರ ಆಜ್ಞೆಯಿಂದ ಕಳ್ಳರ ಪ್ರಧಾನಪುರುಷನ ಕೈಯಲ್ಲಿ ಇದ್ದ ಕೊಡಲಿಯನ್ನು ಸೆಳೆದುಕೊಂಡು ಹೊಡೆದು, ಎಲ್ಲರನ್ನೂ ಓಡಿಸಿದರು. ಶೀರೂರುಮಠಕ್ಕೆ ವಾಮನತೀರ್ಥರನ್ನು ನಿಯಮಿಸಿದರು. ಸೋದೆಮಠಕ್ಕೆ ವಿಷ್ಣುತೀರ್ಥರು. ಇವರು ಶ್ರೀಮದಾಚಾರ್ಯರ ತಮ್ಮಂದಿರು. ಇವರಿಗೆ ಇಬ್ಬರು ಶಿಷ್ಯರು. ಒಬ್ಬರು ಅನಿರುದ್ಧ ತೀರ್ಥರು. ಮತ್ತೊಬ್ಬರು ವ್ಯಾಸತೀರ್ಥರು. ಅನಿರುದ್ಧತೀರ್ಥರಿಂದ ಸುಬ್ರಹ್ಮಣ್ಯಮಠ ಪರಂಪರೆಯು ಉಂಟಾಯಿತು. ವ್ಯಾಸತೀರ್ಥರಿಂದ ಸೋದಾಮಠದ ಪರಂಪರೆಯು ಬೆಳೆಯಿತು. ಕಾಣೂರು ಮಠಕ್ಕೆ ರಾಮತೀರ್ಥರೆಂಬುವರು ಆಜ್ಞಪ್ತ ರಾದರು. ಪೇಜಾವರಮಠಕ್ಕೆ ಅಧೋಕ್ಷಜತೀರ್ಥರೆಂಬುವರು ನಿಯಮಿಸಲ್ಪಟ್ಟರು.

ಇವರಲ್ಲಿ ಶ್ರೀಮದಾಚಾರ್ಯರು ಫಲಿಮಾರುಮಠದ ಸ್ವಾಮಿಯವರಿಗೆ ರಾಮದೇವರ ಪ್ರತಿಮೆಯನ್ನು ಕೊಟ್ಟರು. ಅಧಮಾರುಮಠದ ಸ್ವಾಮಿಯವರಿಗೆ ಮತ್ತು ಕೃಷ್ಣಾಪುರಮಠದ ಸ್ವಾಮಿಯವರಿಗೆ ಕಾಲೀಯಮಥನ ಕೃಷ್ಣಪರಮಾತ್ಮನ ಪ್ರತಿಮೆಯನ್ನು ಕೊಟ್ಟರು. ಪುತ್ತಿಗೆ, ಶೀರೂರುಮಠದ ಯತಿಗಳಿಗೆ ಶ್ರೀವಿಟ್ಠಲ ಪ್ರತಿಮೆಯನ್ನು ದಯಪಾಲಿಸಿದರು. ಸೋದೆಮಠದ ಸ್ವಾಮಿಯವರಿಗೆ ಭೂವರಾಹ ದೇವರ ಪ್ರತಿಮೆಯನ್ನೂ ಕಾಣೂರುಮಠದ ಸ್ವಾಮಿಯವರಿಗೆ ನರಸಿಂಹದೇವರ ಪ್ರತಿಮೆಯನ್ನೂ, ಪೇಜಾವರಮಠದ ಯತಿಗಳಿಗೆ ವಿಟ್ಠಲ ಪ್ರತಿಮೆಯನ್ನೂ ಕೊಟ್ಟರು. ಮಾತ್ರವಲ್ಲದೆ ಸರ್ವದೇಶದಲ್ಲೂ ಸಂಚಾರಮಾಡುತ್ತಾ ಸಿದ್ಧಾಂತದ ಪ್ರಚಾರ ಮಾಡುವುದಕ್ಕೋಸ್ಕರ ಪದ್ಮನಾಭತೀರ್ಥರೆಂಬ ಯತಿಗಳನ್ನು ನಿಯಮಿಸಿ, ಅವರಿಗೆ ರಾಮದೇವರ ಪ್ರತಿಮೆಯನ್ನು ಕೊಟ್ಟರು.

ಶ್ರೀಮದಾಚಾರ್ಯರು ಎಂಟು ಯತಿಗಳೂ ಉಡುಪಿಯಲ್ಲಿ ಕೃಷ್ಣಮಠದಲ್ಲಿಯೇ ಇರಬೇಕು. ಎರಡು ತಿಂಗಳಿಗೊಮ್ಮೆ ಒಬ್ಬೊಬ್ಬ ಯತಿಗಳು ಕೃಷ್ಣಪರಮಾತ್ಮನಿಗೆ ಮಹಾಪೂಜೆಯನ್ನು ಮಾಡಬೇಕು. ಇತರ ಯತಿಗಳು ಇತರ ಪೂಜೆಯನ್ನು ಮಾಡಬೇಕು. ದಿವಸಕ್ಕೆ ಒಂಭತ್ತುಪೂಜೆಯನ್ನು ಮಾಡಬೇಕು ಎಂದು ನಿಯಮ ಮಾಡಿದ್ದರು.

ಶ್ರೀಮದಾಚಾರ್ಯರು ಬದರಿಕಾಶ್ರಮಕ್ಕೆ ತೆರಳಿದ ಮೇಲೆ ಕ್ರಮದಿಂದ ಎಂಟು ಯತಿಗಳೂ ಉಡುಪಿಯಲ್ಲೇ ಇರಬೇಕಾದ ಪ್ರಯುಕ್ತ ಶ್ರೀಕೃಷ್ಣಪೂಜೆಗೆ ದ್ರವ್ಯದ ಸಹಾಯವು ಕಡಿಮೆಯಾಗಿ ಸ್ವಲ್ಪ ಶ್ರಮವಾಗಹತ್ತಿತ್ತು. ಆಮೇಲೆ ಸೋದೆಮಠದ ಪರಂಪರೆಯಲ್ಲಿ ಬಂದ ಶ್ರೀವಾದಿರಾಜತೀರ್ಥರು ಎರಡು ವರ್ಷಕ್ಕೊಮ್ಮೆ ಪರ್ಯಾಯೋತ್ಸವವನ್ನು ರಚಿಸಿ ಒಬ್ಬೊಬ್ಬ ಯತಿಗಳು ಎರಡು ವರ್ಷಕಾಲ ಶ್ರೀಕೃಷ್ಣಪರಮಾತ್ಮನ ಪೂಜೆಯನ್ನು ಮಾಡಬೇಕು. ಆಸಮಯ ಉಳಿದ ಯತಿಗಳು ಸಂಚಾರಮಾಡುತ್ತಾ ಪೂಜೆಗೆ ಉಪಯುಕ್ತವಾದ ದ್ರವ್ಯವನ್ನು ಸಂಗ್ರಹಿಸಬಹುದು ಎಂಬ ನಿಯಮವನ್ನು ಮಾಡಿದರು. ಆದರಿಂದ ಆಮೇಲೆ ಬಂದ ಯತಿಗಳಿಗೆ ಮಾತ್ರ ಉಡುಪಿಯನ್ನು ಬಿಟ್ಟು ದೂರ ಸಂಚಾರಮಾಡುವ ಅವಕಾಶವು ಒದಗಿತು. ಆಮೇಲೆ ಈಗಿನ ಪರ್ಯಂತವೂ ಯತಿಗಳು ತಮ್ಮ ಪರ್ಯಾಯ ಕಾಲವನ್ನು ಬಿಟ್ಟು ಉಳಿದ ಸಮಯ ಸಂಚಾರಮಾಡುತ್ತಾ ಬರುವ ಸಂಪ್ರದಾಯವು ಬಂದಿದೆ.

ಘೋರವಾದ ಈ ಕಲಿಯುಗದಲ್ಲಿ ಸಂಭವಿಸಬಹುದಾದ ಸತ್ಕಾರ್ಯಗಳ ವಿಘ್ನವು ಉಡುಪಿಯಲ್ಲಿ ಶ್ರೀಮದಾಚಾರ್ಯರಿಂದ ಪ್ರತಿಷ್ಠಿತ ಶ್ರೀಕೃಷ್ಣಮೂರ್ತಿಯ

ಸಂದರ್ಶನದಿಂದ ಪರಿಹೃತವಾಗುವುದೆಂದು ಸುಮಧ್ವವಿಜಯದಲ್ಲಿ ಉಕ್ತವಾಗಿದೆ. ಅದೇ ನಂಬಿಕೆಯಿಂದ ಅದ್ಯಾಪಿ ಅನೇಕಭಕ್ತರು ಬಹುದೂರದಿಂದ ಕೃಷ್ಣಸಂದರ್ಶನಕ್ಕಾಗಿ ಉಡುಪಿಗೆ ಹೋಗುತ್ತಿರುವರು. ಈಗಲೂ ಶ್ರೀಕೃಷ್ಣಮೂರ್ತಿಯು ಭಕ್ತರ ಅಭೀಷ್ಟವನ್ನು ಪೂರೈಯಿಸುತ್ತಾ ವಿರಾಜಿಸುತ್ತಿರುವನು.



# ವೇದವ್ಯಾಸದೇವರು [1]

ಪೂರ್ವದಲ್ಲಿ ಕೃತಯುಗದಲ್ಲಿ ಶ್ರೀಭಗವಂತನಿಂದ ಉಂಟುಮಾಡಿದ ತತ್ವಜ್ಞಾನವು ಜನರಲ್ಲಿ ಹಾಗೆಯೇ ಇದ್ದಿತು. ತ್ರೇತಾಯುಗವು ಬರಲು ಕೆಲವರಿಗೆ ಸಂದೇಹ ವಿಪರೀತಜ್ಞಾನಗಳು ತಲೆದೋರಿದವು. ದ್ವಾಪರಯುಗವು ಬರಲು ಜನರಲ್ಲಿ ಸಂಪೂರ್ಣವಾಗಿ ಜ್ಞಾನಕ್ಕೆ ಲೋಪವು ಏರ್ಪಟ್ಟಿತು. ಕಾಲಗುಣದಿಂದ ಸ್ವಲ್ಪ ಭಾಗವು ಮಾತ್ರ ಲೋಪವಾಗಬೇಕಾಗಿದ್ದರೂ ಗೌತಮಋಷಿಗಳ ಶಾಪವೂ ಸೇರಿದ ಪ್ರಯುಕ್ತ ಸಂಪೂರ್ಣ ಜ್ಞಾನ ಲೋಪವಾಯಿತು. ಗೌತಮರ ಶಾಪದ ಕಾರಣವು ಹೀಗಿದೆ.

ಒಂದು ಸಮಯದಲ್ಲಿ ಹನ್ನೆರಡು ವರ್ಷಕಾಲ ದುರ್ಭಿಕ್ಷೆಯು ಏರ್ಪಟ್ಟಿತು. ಆಗ ಗೌತಮರ ಆಶ್ರಮದಲ್ಲಿ ಮಾತ್ರ ಅವರ ತಪಃಪ್ರಭಾವದಿಂದ ಸುಭಿಕ್ಷೆಯು ಇದ್ದಿತು. ಆದಕಾರಣ ಆಕಾಲದ ಎಲ್ಲಾ ಜ್ಞಾನಿಗಳೂ ಗೌತಮರ ಆಶ್ರಮಕ್ಕೆ ಬಂದು ಅವರಿಂದ ಆದೃತರಾಗಿ ಸುಖದಿಂದ ಇದ್ದರು. ಹನ್ನೆರಡು ವರ್ಷಗಳು ಕಳೆದ ಮೇಲೆ ಎಲ್ಲಾ ಸ್ಥಳಗಳಲ್ಲೂ ಸುಭಿಕ್ಷಯು ಏರ್ಪಟ್ಟಿತು. ಆಗ ಎಲ್ಲರೂ ತಮ್ಮ ತಮ್ಮ ಆಶ್ರಮಕ್ಕೆ ಹೋಗಬೇಕೆಂದು ಅಪೇಕ್ಷಿಸಲು ಗೌತಮರು ಅನುಜ್ಞೆಯನ್ನು ಕೊಡಲಿಲ್ಲ. ಆಗ ಜ್ಞಾನಿಗಳೆಲ್ಲರೂ ಅವರ ಮಾತನ್ನು ಮೀರಿಕೊಂಡು ಹೋಗಲು ಇಷ್ಟವಿಲ್ಲದೆ ಯೋಚಿಸುತ್ತಿದ್ದರು. ಆ ಸಮಯವನ್ನರಿತು ಪಾರ್ವತೀದೇವಿಯರು ರುದ್ರದೇವರ ತಲೆಯಲ್ಲಿ ಇರುವ ಗಂಗೆಯನ್ನು ಹೊರಡಿಸಲು ಉಪಾಯವನ್ನು ಮಾಡೆಂದು

---

1. ಬ್ರ. ಸೂ.ಭಾ. 1-1-1. [1]ಭಾಷ್ಯೋಕ್ತ ಸ್ಕಾಂದಪುರಾಣ ಮತ್ತು ತಾತ್ಪರ್ಯ ನಿರ್ಣಯ
2. ಮ.ತಾ.ನಿ. ಅ-10.
3. ತ.ದೀ.ಬ್ರ.ಸೂ.ಭಾ. I-1-1

ವಿನಾಯಕನ ಹತ್ತಿ ಹೇಳಿದರು. ವಿನಾಯಕನು ಯೋಚಿಸುತ್ತಿರುವ ಪಂಡಿತರೊಡನೆ ಬಂದು 'ನೀವು ನಿಮ್ಮ ಜ್ಞಾನಸಾಮರ್ಥ್ಯದಿಂದ ಒಂದು ಗೋವನ್ನು ನಿರ್ಮಿಸಿರಿ. ಗೌತಮರು ಅದನ್ನು ಸ್ಪರ್ಶಿಸುವ ಮಾತ್ರದಿಂದ ಅದು ಪ್ರಾಣವನ್ನು ಬಿಡಲಿ. ಆಗ ನೀವು ಗೋಹತ್ಯ ಮಾಡಿದವರಾದ ಪ್ರಯುಕ್ತ ನಮಗೆ ಇರಲಿಕ್ಕೆ ಆಗದು ಎಂದು ಕಾರಣವನ್ನು ಹೇಳಿ ಹೊರಟುಹೋಗಿರಿ' ಎಂದು ಹೇಳಿದರು. ಜ್ಞಾನಿಗಳು ಹಾಗೆಯೇ ತಮ್ಮ ಜ್ಞಾನಸಾಮರ್ಥ್ಯದಿಂದ ಗೋವನ್ನು ನಿರ್ಮಿಸಿದರು. ಗೌತಮರು ಧಾನ್ಯವನ್ನು ತಿನ್ನಲು ಬಂದಿರುವ ಆ ಗೋವನ್ನು ಮುಟ್ಟುವ ಮಾತ್ರದಿಂದ ಅದು ಕೆಳಗೆ ಬಿದ್ದು ಪ್ರಾಣವನ್ನು ಬಿಟ್ಟಿತು. ಆಗ ಆಶ್ರಮದಲ್ಲಿ ಜ್ಞಾನಿಗಳೆಲ್ಲರೂ ನೀವು ಗೋಹತ್ಯೆ ಮಾಡಿದವರಾದಿರಿ. ನಾವು ಇನ್ನು ಮುಂದೆ ಇಲ್ಲಿ ಇರಲಾರೆವು ಎಂದು ಹೇಳಿ ಹೊರಟುಹೋದರು. ಆಗ ಗೌತಮರು ರುದ್ರದೇವರನ್ನು ತಪಸ್ಸುಮಾಡಿ ಅವರ ತಲೆಯಲ್ಲಿದ್ದ ಗಂಗೆಯನ್ನು ಕೆಳಗೆ ಇಳಿಸಿ ಆಗ ಗಂಗಾಜಲದಿಂದ ಸತ್ತಗೋವನ್ನು ಬದುಕಿಸಿದರು. ಅದೇ ಗೋದಾವರಿ ನದಿಯು. (ಗೋದಂ ವಾರಿ ಯಸ್ಯಾಃ) ಆದುದರಿಂದಲೇ ವೃದ್ಧಗಂಗೆಯೆಂದೂ ಹೆಸರಿದೆ. ಈ ಪ್ರಕಾರ ಗೋವನ್ನು ಬದುಕಿಸಿದ ಅನಂತರ ಹೀಗೆ ಏಕಾಯಿತೆಂದು ಭಗವದ್ಧ್ಯಾನವನ್ನು ಮಾಡಲು, ಜ್ಞಾನಿಗಳು ಮಾಡಿದ ಕಾರ್ಯವೆಂದು ತಿಳಿದು ಎಲ್ಲರೂ ಜ್ಞಾನಹೀನರಾಗಲಿ ಎಂದು ಶಾಪವನ್ನು ಕೊಟ್ಟರು. ಆಕಾಲದಲ್ಲಿ ಇದ್ದ ಜ್ಞಾನಿಗಳೆಲ್ಲರೂ ಗೌತಮರ ಆಶ್ರಮಕ್ಕೆ ಬಂದಿದ್ದ ಪ್ರಯುಕ್ತ ಎಲ್ಲರೂ ಅವರ ಶಾಪಕ್ಕೆ ವಿಷಯರಾಗಿ ಜ್ಞಾನಹೀನರಾದರು. ಅದರಿಂದ ಉಪದೇಶಕರು ಇಲ್ಲದೆ ಆಕಾಲದ ಎಲ್ಲರೂ, ಆಮೇಲೆ ಬಂದವರೂ ಜ್ಞಾನಹೀನರಾದರು.

ಈ ಪ್ರಕಾರವಾಗಿ ಸಜ್ಜನರೆಲ್ಲರೂ ಜ್ಞಾನಶೂನ್ಯರಾಗಲು, ಸಜ್ಜನರಲ್ಲಿ ದಯಾವುಳ್ಳವರಾಗಿ ಬ್ರಹ್ಮಾದಿದೇವತೆಗಳೆಲ್ಲರೂ ಶ್ರೀಭಗವಂತನಿದ್ದಲ್ಲಿಗೆ ಹೋಗಿ ಪ್ರಾರ್ಥಿಸಿಕೊಂಡರು. 'ಭಗವಂತನೇ! ನೀನೇ ಸರ್ವೋತ್ತಮನು. ಈಗ ಕಲಿಯು ಬ್ರಹ್ಮದೇವರ ವರದಿಂದ ಎಲ್ಲರನ್ನೂ ಪೀಡಿಸುತ್ತಾ ಇದ್ದಾನೆ. ನಿನ್ನ ಆಜ್ಞೆಯಿಂದ ಕಲಿಗೆ ಬ್ರಹ್ಮದೇವರು ವರಕೊಟ್ಟರು. ಆ ಕಲಿಯು ರುದ್ರದೇವರಲ್ಲಿ ಪ್ರವೇಶಿಸಿದ್ದಾನೆ. ಅವನಿಗೆ ಅವಿಷ್ಟರಾಗಿ ರುದ್ರದೇವರು ಪಾಶುಪತಾದಿ ಕುತ್ಸಿತ ಆಗಮಗಳನ್ನು ಮಾಡಿದ್ದಾರೆ. ಅದರಲ್ಲಿ ಹೇಳಿರುವ ಕುಯುಕ್ತಿಗಳನ್ನು ನೀನು ಹೊರತು ಯಾರೂ ನಿರಾಕರಿಸಲು ಸಮರ್ಥರಿಲ್ಲ. ಎಲ್ಲಾ ವೇದಗಳೂ ಶಾಸ್ತ್ರಗಳೂ ಹಾಳಾಗಿವೆ. ಆದುದರಿಂದ ನೀನು ಭೂಮಿಯಲ್ಲಿ ಅವತರಿಸಿ ವೇದಗಳ ಉದ್ಧಾರಮಾಡಿ ಶಾಸ್ತ್ರ

ಗಳನ್ನು ಮಾಡಬೇಕು'. ಈ ರೀತಿಯಾಗಿ ದೇವತೆಗಳು ಪ್ರಾರ್ಥಿಸಲು ಭಗವಂತನು ಭೂಮಿಯಲ್ಲಿ ಅವತರಿಸಿದನು.

ಬ್ರಹ್ಮಪುತ್ರನಾದ ವಸಿಷ್ಠರಿಗೆ ಶಕ್ತಿ ಎಂಬುವರು ಮಗನು. ಅವರ ಮಗನೇ ಪರಾಶರರು. ಆ ಪರಾಶರರು ಪರಮಾತ್ಮನು ತನಗೆ ಮಗನಾಗಬೇಕೆಂದು ಪರಮಾತ್ಮನ ತಪಸ್ಸನ್ನು ಮಾಡಿದರು. ಆಗ ಪರಮಾತ್ಮನು ಪ್ರತ್ಯಕ್ಷನಾಗಿ ವರವನ್ನು ಕೊಟ್ಟನು. ''ಬರ್ಹಿರ್ಷ ಎಂಬ ಪಿತೃಗಳ ಮಾನಸ ಪುತ್ರಿಯು ಅಚ್ಛೋದ ಎಂದು ಹೆಸರುಳ್ಳವಳು. ಅವಳು ತನ್ನ ತಂದೆಯನ್ನು ನೋಡಿದ್ದೇ ಇಲ್ಲ. ಅವಳು ಒಂದುದಿನ ಅದ್ರಿಕಾ ಎಂಬ ಅಪ್ಸರ ಸ್ತ್ರೀಯೊಡನೆ ವಿಮಾನದಲ್ಲಿ ಸಂಚರಿಸುತ್ತಿದ್ದ ವಸು ಎಂಬ ರಾಜನನ್ನು ನೋಡಿ, ಇವನೇ ನನ್ನ ತಂದೆಯೆಂದು ಭಾವಿಸಿದಳು. ಈರೀತಿಯಾದ ಇತರನನ್ನು ತಂದೆಯೆಂದು ಭಾವಿಸಿ ಯೋಗಭ್ರಷ್ಟಳಾಗಿ ಕೆಳಗೆ ಬಿದ್ದಳು. ಕೆಳಗೆ ಬೀಳುವಾಗ ಅತಿಚಿಕ್ಕದಾದ ವಿಮಾನಗಳನ್ನೂ ಅಲ್ಲಿದ್ದ ಪಿತೃಗಳನ್ನೂ ನೋಡಿ, ತನ್ನ ಪಿತೃಗಳೆಂದು ತಿಳಿದು ತನ್ನನ್ನು ರಕ್ಷಿಸಬೇಕೆಂದು ಪ್ರಾರ್ಥಿಸಿದಳು. ಆಗ ಪಿತೃಗಳು 'ನೀನು ಭಯಪಡಬೇಡ. ಅದ್ರಿಕಾ ಎಂಬ ಅಪ್ಸರಸ್ತ್ರೀಯು ಮೀನಾಗಿ ಹುಟ್ಟಿಸುವಳು. ಅವಳಲ್ಲಿ ವಸುರಾಜನ ವೀರ್ಯದಿಂದ ಹುಟ್ಟುವಿ. ನಿನ್ನಲ್ಲಿ ಶ್ರೀಭಗವಂತನು ಅವತರಿಸುವನು' ಎಂದು ಹೇಳಿದರು.

ಒಂದು ದಿನ ವಸುರಾಜನು ಕಾಡಿಗೆ ಮೃಗಬೇಟೆಗೆ ಹೋಗಿದ್ದನು. ಕಾಡಿನಲ್ಲಿ ತನ್ನ ಪತ್ನಿಯ ಸ್ಮರಿಸಲು ಅವನ ವೀರ್ಯವು ಕೆಳಗೆ ಬಿದ್ದಿತು. ಅದನ್ನು ರಾಜನು ಒಂದು ಹದ್ದುಪಕ್ಷಿಯನ್ನು ಕೂಗಿ ತನ್ನ ಹೆಂಡತಿಗೆ ತೆಗೆದುಕೊಂಡು ಹೋಗಿ ಕೊಡುವಂತೆ ಆಜ್ಞಾಪಿಸಿದನು. ಅದು ಆರೀತಿಯಾಗಿ ಅದನ್ನು ಮುಖದಲ್ಲಿ ಕಟ್ಟಿಕೊಂಡು ಹೋಗುವಾಗ ಮತ್ತೊಂದು ಹದ್ದು ಅದರ ಹತ್ತಿರ ಯುದ್ಧಕ್ಕೆ ಬಂದಿತು. ಆಕಾಶದಲ್ಲಿ ಜಗಳವಾಡುವಾಗ ಆ ವೀರ್ಯವು ಕೆಳಗೆ ಇರುವ ಯಮುನಾನದಿಗೆ ಬಿದ್ದಿತು. ಆಗ ಅಲ್ಲಿ ಇದ್ದ ಒಂದು ಮೀನು ಅದನ್ನು ನುಂಗಿತು. ಆಮೀನನ್ನು ಬೆಸ್ತರು ಹಿಡಿದು ಅದನ್ನು ತಮ್ಮ ಯಜಮಾನನಿಗೆ ಕೊಟ್ಟರು. ಅವನು ಆ ಮೀನಿನ ಹೊಟ್ಟೆಯನ್ನು ಸೀಳುವಾಗ ಅದರ ಹೊಟ್ಟೆಯಲ್ಲಿ ಗಂಡುಹೆಣ್ಣು ಎರಡು ಮಕ್ಕಳನ್ನು ನೋಡಿದನು. ಆಮೀನು ಶಾಪಗ್ರಸ್ತಳಾದ ಅದ್ರಿಕಾ ಎಂದು ಅಪ್ಸರಸ್ತ್ರೀಯಳು. ಅವಳು ಈರೀತಿ ಎರಡು ಮಕ್ಕಳನ್ನು ಪಡೆದು ಶಾಪದಿಂದ ಬಿಡುಗಡೆ ಹೊಂದಿದಳು. ಬೆಸ್ತರ ಯಜಮಾನನು ಆ ಎರಡು ಮಕ್ಕಳನ್ನು ತನ್ನ ಪ್ರಭುವಾದ ವಸುರಾಜನಿಗೆ ಒಪ್ಪಿಸಿದನು. ವಸುರಾಜನು ತಾನು ಗಂಡುಮಗನನ್ನು ಇಟ್ಟುಕೊಂಡು ಹೆಣ್ಣುಮಗುವನ್ನು ಬೆಸ್ತರ ಯಜಮಾನನಿಗೆ

ಕೊಟ್ಟನು. ಆ ಗಂಡುಕೂಸೇ ಮತ್ಸ್ಯರಾಜನೆಂದು ಪ್ರಸಿದ್ಧನಾದನು. ಹೆಣ್ಣನ್ನು ಬೆಸ್ತರ ಯಜಮಾನನು ಬೆಳೆಸಿದನು. ಅವಳಿಗೆ ಸತ್ಯವತೀಯೆಂದು ಹೆಸರು. ಮತ್ತು ದೇಹದಲ್ಲಿ ಮೀನಿನ ವಾಸನೆಯಿಂದ ಕಾರಣ ಮತ್ಸ್ಯಗಂಧಿಯೆಂದೂ ಹೆಸರು. ಅವಳಲ್ಲಿ ನಾನು ನಿನಗೆ ಮಗನಾಗಿ ಅವತರಿಸಿ ಸಜ್ಜನರು ಉದ್ಧಾರವನ್ನು ಮಾಡುವೆನು ಎಂದು ಪರಮಾತ್ಮನು ಆಜ್ಞಾಪಿಸಿದನು.

ತರುವಾಯ ಪರಾಶರರು ಯಮುನಾನದಿಗೆ ಹೋದರು. ಆಗ ಮತ್ಸ್ಯ ಗಂಧಿಯು ದೋಣಿಯನ್ನು ನಡಿಸುತ್ತಾ ಇದ್ದಳು. ಪರಾಶರರು ಯಮುನಾ ದ್ವೀಪದಲ್ಲಿ ಆ ಮತ್ಸ್ಯಗಂಧಿಯನ್ನು ವಿವಾಹಮಾಡಿಕೊಂಡರು. ಅಂದರೆ ಅಲ್ಲಿಗೆ ಪಿತೃಗಳು ಬರ್ಹಿಷದ ಎಂಬ ಹೆಸರುಳ್ಳವರೂ ಬಂದಿದ್ದರು. ಅದೇ ರೀತಿಯಾಗಿ ವಸುರಾಜನು ಅಲ್ಲಿಗೆ ಬಂದಿದ್ದನು. ಪಿತೃಗಳ ಆಜ್ಞೆಯಿಂದ ವಸುರಾಜನೇ ಪರಾಶರರಿಗೆ ಕನ್ಯಾದಾನ ವನ್ನು ಮಾಡಿದನು. ಯಾಜ್ಞವಲ್ಕ್ಯರು ಪೌರೋಹಿತ್ಯವನ್ನು ಮಾಡಿದರು. ಅನೇಕ ಋಷಿಗಳು ಬಂದಿದ್ದರು. ವೈಭವದಿಂದ ವಿವಾಹವು ನಡೆಯಿತು. ಪರಾಶರರು ಅವಳ ಮತ್ಸ್ಯಗಂಧವನ್ನು ಪರಿಹರಿಸಿ ಒಳ್ಳೇ ಸುವಾಸನೆಯುಂಟಾಗುವಂತೆ ಮಾಡಿದರು.

ಆದರಿಂದ ಅವಳಿಗೆ **ಯೋಜನಗಂಧಿ**ಯೆಂಬ ಹೆಸರಾಯಿತು. ಅವಳಲ್ಲಿ ಪರಾಶರರಿಂದ ಜನ್ಮರಹಿತನಾದ ಪರಮಾತ್ಮನು **ವೇದವ್ಯಾಸ**[1] ಎಂಬ ಹೆಸರಿನಿಂದ ಅವತಾರ ಮಾಡಿದನು. ಯಮುನಾದ್ವೀಪದಲ್ಲಿ ಅವತಾರಮಾಡಿದವರಾದ ಪ್ರಯುಕ್ತ ದ್ವೈಪಾಯನ ಎಂದು ಹೆಸರುಳ್ಳವರಾದನು. ಲೋಕದ ಧರ್ಮವನ್ನು ಅನುಸರಿಸುವುದಕ್ಕೋಸ್ಕರ ತಂದೆಯಿಂದ ಉಪನಯವನ್ನು ಹೊಂದಿ ತಂದೆಗೆ ಜ್ಞಾನವನ್ನು ಉಪದೇಶಿಸಿದನು. ಸ್ಮರಣೆಮಾಡುವ ಮಾತ್ರದಿಂದಲೇ ತಾನು ಪ್ರತ್ಯಕ್ಷನಾಗುವೆನೆಂದು ತಂದೆತಾಯಿಗಳಿಗೆ ವರವನ್ನು ಕೊಟ್ಟನು.

ಆಮೇಲೆ ವೇದವ್ಯಾಸದೇವರೂ ಮೇರುಪರ್ವತಕ್ಕೆ ಹೋದರು. ಚತು ರ್ಮುಖ ಬ್ರಹ್ಮಾದಿಗಳು ವೇದವ್ಯಾಸದೇವರನ್ನು ಅನುಸರಿಸಿಕೊಂಡು ಹೋದರು. ಸಮಸ್ತವೇದಗಳ ಉದ್ಧಾರಮಾಡಿ ದೇವತೆಗಳಿಗೂ ಋಷಿಗಳಿಗೂ ಉಪದೇಶಿಸಿದರು. ಆದೇರೀ ಸರ್ವಶಾಸ್ತ್ರಗಳನ್ನೂ ಮಾಡಿ, ನಿರ್ಣಾಯಕವಾದ ಬ್ರಹ್ಮಸೂತ್ರವನ್ನು ಮಾಡಿದರು. ಆ ಬ್ರಹ್ಮಸೂತ್ರವನ್ನು ವೇದವ್ಯಾಸರ ಮುಖದಿಂದ ಬ್ರಹ್ಮರುದ್ರಾದಿ ದೇವತೆಗಳೂ ಋಷಿಶ್ರೇಷ್ಠರೂ ಪಾಠ ಕೇಳಿದರು- ಸಮಸ್ತ ಶಾಸ್ತ್ರಾರ್ಥಕ್ಕೂ

---

1. ಮ.ಭಾ.ಆ.ಪ. ಅ–63

ದೃಷ್ಟಾಂತರೂಪವಾದ ವೇದಗಳಲ್ಲಿ ಹೇಳದೆ ಕೇವಲ ಭಗವಂತನ ಪ್ರತ್ಯಕ್ಷಕ್ಕೆ ಮಾತ್ರ ವಿಷಯವಾದ ಪ್ರಮೇಯಗಳನ್ನೂ ಹೇಳಿರುವ ಪ್ರಯುಕ್ತ ವೇದಗಳಿಗಿಂತಲೂ ಉತ್ತಮವಾದ ಮಹಾಭಾರತವೆಂಬ ಗ್ರಂಥವನ್ನು ಮಾಡಿದರು. ಆ ಭಾರತವನ್ನೂ ಬ್ರಹ್ಮರುದ್ರಾದಿದೇವತೆಗಳೂ ವೇದವ್ಯಾಸದೇವರ ಮುಖದಿಂದಲೇ ಕೇಳಿದರು. ರುದ್ರಾದಿಗಳ ಮನಸ್ಸಿನಲ್ಲಿ ಇದ್ದ ಕಲಿಯನ್ನು ವಾಕ್ಯಗಳೆಂಬ ಬಾಣದಿಂದ ಸಂಹರಿಸಿದರು. ಮನುಷ್ಯರಲ್ಲಿಯೂ ಅಸುರರಲ್ಲಿಯೂ ಮಾತ್ರ ಬೇರೆ ರೂಪದಿಂದ ಕಲಿಯು ಇದ್ದನು. ಸಜ್ಜನರಾದ ಮನುಷ್ಯರಲ್ಲಿ ಇದ್ದ ಕಲಿಯನ್ನೂ ನಾಶ ಮಾಡಬೇಕೆಂದು ವೇದವ್ಯಾಸದೇವರು ಅಭಿಪ್ರಾಯಪಟ್ಟರು.

ತರುವಾಯ ಬಾದರಾಯಣರು ಕಾಲಬಲದಿಂದ ಮನುಷ್ಯರ ಆಯುಷ್ಯವೂ ಬುದ್ಧಿಯೂ ಕಡಿಮೆಯಾಗಿರುವುದನ್ನು ನೋಡಿ ವೇದಗಳನ್ನು ವಿಭಾಗಮಾಡಿದರು. ಅಂದರೆ ಮೊದಲು ಮೂಲವೇದವೆಂದು ದೊಡ್ಡರಾಶಿರೂಪವಾಗಿ ವೇದಗಳಿದ್ದವು. ಒಂದು ಅಕ್ಕಿಯ ಮೂಟೆಯಲ್ಲಿ ಭತ್ತವೂ ಕಲ್ಲುಗಳೂ ಬೇಳೆಗಳೂ ಬೆರೆಸಿಹೋಗಿದ್ದರೆ ಅದನ್ನು ಹೆಕ್ಕಿ ಭತ್ತವನ್ನು ಬೇರೆ, ಕಲ್ಲು ಬೇರೆ, ಬೇಳೆಗಳು ಬೇರೆ, ಅಕ್ಕಿ ಬೇರೆ ಮಾಡುವಂತೆ ಆ ದೊಡ್ಡ ರಾಶಿರೂಪವಾದ ವೇದಗಳಿಂದ ಶ್ರೀಭಗವಂತನು ಮೊದಲು ಋಕ್ ನಿಗದ ಸಾಮ ಅಥರ್ವ ಎಂದು ನಾಲ್ಕು ರಾಶಿಯನ್ನಾಗಿ ವಿಭಾಗಮಾಡಿದ್ದನು. ಈಗ ವೇದವ್ಯಾಸರೂಪದಿಂದ ಋಕ್ ಎಂಬ ದೊಡ್ಡರಾಶಿ ಯಿಂದ ಯಾಗಾದಿಗಳಿಗೆ ಉಪಯುಕ್ತವಾದ ಕೆಲವು ಮಂತ್ರಗಳನ್ನು ಜೋಡಿಸಿ ಋಗ್ವೇದವೆಂದು ಮಾಡಿದರು. ಹೇಗೆ ಪಾಠಶಾಲೆಯಲ್ಲಿ ಕುಮಾರಸಂಭವ ಇತ್ಯಾದಿ ಕಾವ್ಯಗಳು ದೊಡ್ಡದಾಗಿದ್ದರೂ ಹುಡುಗರಿಗೆ ವ್ಯುತ್ಪತ್ತಿಯಾಗಲಿಕ್ಕಾಗಿ ಒಂದೆರಡು ಸರ್ಗಗಳನ್ನು ಮಾತ್ರ ಹೇಳಿಕೊಡುವರೋ ಹಾಗೆ ವೇದಗಳನ್ನೂ ಮಾಡಿದರು. ಹಾಗೆಯೇ ನಿಗದ ಎಂಬ ರಾಶಿಯಿಂದ ಕೆಲವು ಮಂತ್ರಗಳನ್ನು ತೆಗೆದು ಯಜುರ್ವೇದ ವನ್ನು ಮಾಡಿದರು. ಅದೇ ರೀತಿ ಸಾಮ ಎಂಬ ರಾಶಿಯಿಂದ ಸಾಮವೇದವನ್ನೂ ಅಥರ್ವರಾಶಿಯಿಂದ ಅಥರ್ವವೇದವನ್ನೂ ಮಾಡಿದರು. ಆಮೇಲೆ ಋಗ್ವೇದವನ್ನು ಇಪ್ಪತ್ತನಾಲ್ಕು ಶಾಖೆಯನ್ನಾಗಿ ವಿಭಾಗಿಸಿದರು. ಯಜುರ್ವೇದವನ್ನು ನೂರಒಂದು ವಿಧವಾಗಿ ವಿಭಾಗಿಸಿದರು. ಸಾಮವೇದವನ್ನು ಸಾವಿರ ವಿಧವಾಗಿಯೂ ಅಥರ್ವವೇದರಾಶಿಗೆ ಹನ್ನೆರಡು ವಿಧವನ್ನಾಗಿ ವಿಭಾಗಿಸಿದರು—ಆ ದೊಡ್ಡ ವೇದರಾಶಿಗೆ ಮೂಲವೇದವೆಂದೂ ಹೆಸರು. ಆಮೇಲಿನ ವಿಭಾಗ ಮಾಡಿದ ಋಕ್, ನಿಗದ ಇತ್ಯಾದಿಗಳಿಗೆ ಉಪವೇದ ಎಂದು ಹೆಸರು. ವೇದವ್ಯಾಸದೇವರು ಮಾಡಿದ

ವಿಭಾಗಗಳಿಗೆ ಅವಾಂತರವೇದಗಳೆಂದು ಹೆಸರು. ಅವುಗಳ ವಿಭಾಗಕ್ಕೆ ಶಾಖಾವೇದ ಗಳೆಂದು ಹೆಸರು. ಅನಂತರ ವೈಷ್ಣವ ಪುರಾಣಗಳನ್ನೂ ಮಾಡಿದರು.

ತರುವಾಯ ಶ್ರೀವೇದವ್ಯಾಸದೇವರು ಸಜ್ಜನರಿಗೆ ಉಪದೇಶ ಮಾಡಿ ಅವರ ಅಜ್ಞಾನವನ್ನು ಪರಿಹರಿಸುತ್ತಾ ಸಂಚರಿಸಿದರು. ಒಂದುದಿನ ದಾರಿಯಲ್ಲಿ ಹೋಗು ತ್ತಿರುವ ಒಂದು ಕ್ರಿಮಿಯನ್ನು ನೋಡಿದರು. ಅದರೊಡನೆ 'ನೀನು ಈ ಹಾಳುದ್ವೇಷ ವನ್ನು ಬಿಡು. ನಿನ್ನನ್ನು ರಾಜನನ್ನಾಗಿ ಮಾಡುವೆನು' ಎಂದು ಪೇಳಿದರು. ಆಗ ಆ ಕ್ರಿಮಿಯು 'ನಾನು ಈ ದೇಹವನ್ನು ಬಿಡಲಾರೆನು. ಹಾಗೆಯೇ ನನ್ನನ್ನು ರಾಜನನ್ನಾಗಿ ಮಾಡಿರಿ' ಎಂದು ಕೇಳಿಕೊಂಡಿತು. ವೇದವ್ಯಾಸದೇವರು ಆ ಕ್ರಿಮಿ ದೇಹದಿಂದಲೇ ರಾಜನನ್ನಾಗಿ ಮಾಡಿದರು. ಆ ವೇದವ್ಯಾಸದೇವರ ಮಹಿಮೆಯಿಂದ ಎಲ್ಲಾ ರಾಜರೂ ವೈಶ್ಯರಂತೆ ಆ ಕ್ರಿಮಿಗೆ ಕಪ್ಪವನ್ನು ಒಪ್ಪಿಸಿದರು. ಆ ಕ್ರಿಮಿಯು ಪೂರ್ವಜನ್ಮದಲ್ಲಿ ಒಬ್ಬ ಶೂದ್ರನಾಗಿತ್ತು. ಪರಮಾತ್ಮನ ಭಕ್ತನಾಗಿತ್ತು. ಆದರೆ ತುಂಬಾ ಲೋಭವುಳ್ಳದ್ದಾಗಿತ್ತು. ಅವನು ಲೋಭದಿಂದ ಕ್ರಿಮಿಯಾಗಿ ಹುಟ್ಟಿ, ವೇದವ್ಯಾಸದೇವರ ಅನುಗ್ರಹದಿಂದ ರಾಜನಾದನು. ಆಮೇಲೆ ವೇದವ್ಯಾಸದೇವರು ಆ ಕ್ರಿಮಿಯೊಡನೆ 'ನಿನಗೆ ಈ ಕ್ಷಣವೇ ನಾನು ಮೋಕ್ಷವನ್ನು ಕೊಡಲಿಕ್ಕೆ ಸಮರ್ಥನು. ಆದರೂ ಸ್ವರೂಪದಿಂದ ಬ್ರಾಹ್ಮಣನಾದವನು ಕೊನೆಯ ಜನ್ಮದಲ್ಲಿ ಬ್ರಾಹ್ಮಣನಾಗಿ ಇದ್ದುಕೊಂಡೇ ಮೋಕ್ಷವನ್ನು ಹೊಂದಬೇಕು ಎಂದು ನಾನೇ ಮಾಡಿರುವ ನಿಯಮವನ್ನು ಅನುಸರಿಸಿ, ಬ್ರಾಹ್ಮಣದೇಹವನ್ನು ಹೊಂದಿ ನನ್ನ ಅನುಗ್ರಹದಿಂದ ಮೋಕ್ಷವನ್ನು ಹೊಂದು' ಎಂದು ಹೇಳಿ, ಅದಕ್ಕೆ ಉತ್ತಮವಾದ ಜ್ಞಾನವನ್ನು ಕೊಟ್ಟರು. ಅವನು ಸಮಸ್ತ ಭೂಮಿಯನ್ನೂ ಆಳಿ, ಕೊನೆಗೆ ದೇಹವನ್ನೂ ಪರಿತ್ಯಜಿಸಿ, ಬ್ರಾಹ್ಮಣದೇಹವನ್ನು ಹೊಂದಿ ತತ್ವಜ್ಞಾನಿ ಯಾಗಿ ಮೋಕ್ಷವನ್ನು ಹೊಂದಿದನು. ಇದೇ ರೀತಿಯಾಗಿ ಬಾದರಾಯಣರು ಅನೇಕರನ್ನು ಸಂಸಾರಬಂಧದಿಂದ ಬಿಡಿಸಿದರು. ಅವರ ಮಹಿಮೆಗಳು ಇತರರಿಂದ ಮಾಡಲಿಕ್ಕೆ ಅಶಕ್ಯಗಳು.

ರುದ್ರದೇವರು ವೇದವ್ಯಾಸದೇವರ ಮಗನಾಗಬೇಕೆಂದು ತಪಸ್ಸು ಮಾಡಿ ದರು. ವೇದವ್ಯಾಸದೇವರು ಅವರಿಗೆ ಹಾಗೆಯೇ ವರವನ್ನು ಕೊಟ್ಟರು. ತಾನೂ ಕೂಡ ಅಸುರಜನರ ಮೋಹವನ್ನು ಉಂಟುಮಾಡುವುದಕ್ಕಾಗಿ ರುದ್ರದೇವರನ್ನು ಮಗನಾಗಿ ಹುಟ್ಟುವಂತೆ ತಪಸ್ಸು ಮಾಡುವಂತೆ ತೋರಿಸಿದರು. ಸರ್ವಶಕ್ತರಾದ ವೇದವ್ಯಾಸದೇವರು ತನ್ನಿಂದ ಅತ್ಯಂತ ಅವರರಾದ ರುದ್ರದೇವರನ್ನು ಕುರಿತು ತಪಸ್ಸು ಮಾಡಿದ್ದು ಕೇವಲ ಅಸುರ ಮೋಹಕ್ಕಾಗಿಯೇ.

ತರುವಾಯ ವೇದವ್ಯಾಸದೇವರು ಅರಣಿಗಳನ್ನು ಹಿಡಿದುಕೊಂಡು ಮಥನ ಮಾಡುತ್ತಿದ್ದರು. ಆ ಸಮಯದಲ್ಲಿ ಘೃತಾಚೀ ಎಂಬ ಅಪ್ಸರಸ್ತ್ರೀಯು ಹೆಣ್ಣುಗಿಳಿಯ ರೂಪವನ್ನು ಧರಿಸಿಕೊಂಡು ಬಂದಳು. ವೇದವ್ಯಾಸದೇವರು ಸರ್ವದೋಷ ರಹಿತರಾದವರು. ಅವಳನ್ನು ನೋಡಿ ಅಸುರಜನರನ್ನು ಮೋಹಿಸುವವರಾಗಿ ತಾನು ಅವಳನ್ನು ಕಾಮಿಸುವಂತೆ ತೋರಿಸಿದರು. ದುಷ್ಟಜನರನ್ನು ಮೋಹಗೊಳಿಸುವುದ ಕ್ಕಾಗಿ ಪ್ರಾಕೃತವಾದ ವೀರ್ಯವನ್ನು ಸೃಷ್ಟಿಮಾಡಿ, ಕೆಳಗೆ ಹಾಕಿದರು. ಕೇವಲ ಅರಣಿಯಿಂದಲೇ ಮಗನನ್ನು ಸೃಷ್ಟಿಮಾಡಿದರು. ಅಯೋಗ್ಯರಾದ ಅಸುರರು 'ವೇದವ್ಯಾಸದೇವರು ಘೃತಾಚಿಯನ್ನು ನೋಡಿ ಮೋಹಿತರಾದರು. ಅದರಿಂದ ಅವರ ವೀರ್ಯವು ಕೆಳಗೆ ಬಿದ್ದಿತು. ಅದರಿಂದ ಮಗನು ಹುಟ್ಟಿದನು' ಎಂದು ವಿಪರೀತವಾಗಿ ತಿಳಿದುಕೊಂಡರು. ವಸ್ತುತಃ ಅರಣಿಯಿಂದಲೇ ವೇದವ್ಯಾಸದೇವರು ಮಗನನ್ನು ಸೃಜಿಸಿದರು. ಅವರಿಗೆ ಕಾಮಾದಿಯಾವದೋಷವೂ ಇರುವುದಿಲ್ಲ. ಘೃತಾಚಿಯು ನಾನು ಬಂದಿರುವ ಕಾಲದಲ್ಲಿ ನೀವು ಮಗನನ್ನು ಸೃಷ್ಟಿಮಾಡಿದ ಕಾರಣ ಮಗನಿಗೆ ನನ್ನ ಹೆಸರನ್ನು ಇಡಬೇಕು ಎಂದು ಬೇಡಿಕೊಂಡಳು. ಆದುದರಿಂದ ವೇದವ್ಯಾಸದೇವರು ಹೆಣ್ಣುಗಿಳಿಯ ರೂಪದಿಂದ ಘೃತಾಚಿಯು ಬಂದಿರುವ ಕಾಲದಲ್ಲಿ ಸೃಷ್ಟಿಮಾಡಿದ ಪ್ರಯುಕ್ತ ಮಗನಿಗೆ ಶುಕ ಎಂದು ಹೆಸರಿಟ್ಟರು. ಈರೀತಿ ರುದ್ರದೇವರು ಶುಕಾಚಾರ್ಯರು ಎಂದು ಹೆಸರಿನಿಂದ ವೇದವ್ಯಾಸದೇವರ ಮಗನಾಗಿ ಹುಟ್ಟಿದರು. (ಮ.ಭಾ.ಶಾಂ.ಪ. ಅ–323, 324)

ಆಗ ವಾಯುದೇವರು ವೇದವ್ಯಾಸದೇವರ ಸೇವಾಮಾಡಬೇಕೆಂದು ಶುಕಾಚಾರ್ಯರನ್ನು ಪ್ರವೇಶಿಸಿದರು. ಆ ಶುಕಾಚಾರ್ಯರಿಗೆ ವ್ಯಾಸರು ವೇದ ಭಾರತ ಪುರಾಣಗಳನ್ನು ಉಪದೇಶಿಸಿದರು. ಶೇಷದೇವರು ಪೈಲ ಎಂಬ ಋಷಿಗಳಲ್ಲಿ ಪ್ರವೇಶಿಸಿದರು. ಗರುಡದೇವರು ವರುಣದೇವರ ಮಗನಾದ ಸುಮಂತು ಎಂಬ ಮುನಿಗಳಲ್ಲಿ ಪ್ರವೇಶಿಸಿದರು. ಬ್ರಹ್ಮದೇವರು ವೈಶಂಪಾಯನರಲ್ಲಿಯೂ ಇಂದ್ರ ದೇವರು ಜೈಮಿನಿ ಋಷಿಗಳಲ್ಲಿಯೂ ಪ್ರವಿಷ್ಟರಾದರು. ಈ ಪ್ರಕಾರವಾಗಿ ವೇದವ್ಯಾಸ ದೇವರ ಸೇವಾ ಮಾಡುವ ಕುತೂಹಲದಿಂದ ದೇವತೆಗಳು ಮುನಿಗಳನ್ನು ಪ್ರವೇಶಿಸಿ ದರು. ಅವರಿಗೆ ವೇದವ್ಯಾಸದೇವರು ಸಮಸ್ತ ವಿದ್ಯೆಗಳನ್ನೂ ಉಪದೇಶಿಸಿ, ಅವುಗಳನ್ನು ಪ್ರಚಾರಮಾಡಲಿಕ್ಕೆ ಆಜ್ಞಾಪಿಸಿದರು.

ಪೈಲ ಋಷಿಗಳನ್ನು ಋಗ್ವೇದ ಪ್ರಚಾರ ಮಾಡಲಿಕ್ಕೆ ಆಜ್ಞಾಪಿಸಿದರು. ವೈಶಂಪಾಯನರನ್ನು ಕೃಷ್ಣಯಜುರ್ವೇದಕ್ಕೆ ಪ್ರವರ್ತಕರನ್ನಾಗಿಯೂ, ಸೂರ್ಯ

ದೇವರನ್ನು ಶುಕ್ಲಯಜುರ್ವೇದಕ್ಕೆ ಪ್ರವರ್ತಕರನ್ನಾಗಿಯೂ ಮಾಡಿದರು. ಜೈಮಿನ್ಯಾಚಾರ್ಯರನ್ನು ಸಾಮವೇದ ಪ್ರಚಾರ ಮಾಡಲಿಕ್ಕೆ ಆಜ್ಞಾಪಿಸಿದರು. ಸುಮಂತ ಋಷಿಗಳನ್ನು ಅಥರ್ವವೇದವನ್ನು ಪ್ರಚಾರ ಮಾಡಲಿಕ್ಕೆ ಹೇಳಿದರು. ವೈಶಂಪಾಯನರನ್ನು ಭಾರತವನ್ನು ಪ್ರಚಾರಮಾಡಲಿಕ್ಕೆ ಆಜ್ಞಾಪಿಸಿದರು. ಪರೀಕ್ಷಿತ್ ಮೊದಲಾದ ಮನುಷ್ಯರೂ ಗಂಧರ್ವಾದಿಗಳೂ ಇವರಲ್ಲಿ ವೇದಾದಿಗಳನ್ನು ಉಪದೇಶಿಸಲು ಮಗನಾದ ಶುಕಾಚಾರ್ಯರಿಗೆ ಆಜ್ಞಾ ಮಾಡಿದರು. ಸ್ವರ್ಗದಲ್ಲಿರುವ ವಾಯು, ಶೇಷ, ಗರುಡ, ಬ್ರಹ್ಮ, ಇಂದ್ರ, ಸೂರ್ಯಾದಿ ದೇವತೆಗಳನ್ನು ಬಿಟ್ಟು, ಇತರ ದೇವತೆಗಳಿಗೆ ವೇದಾದಿಗಳನ್ನು ಉಪದೇಶಿಸುವುದಕ್ಕೆ ನಾರದರಿಗೆ ಉಪದೇಶಮಾಡಿ ಕಳುಹಿಸಿದರು. ಆ ದೇವತೆಗಳು ವೇದವ್ಯಾಸ ದೇವರಿಂದ ಸಾಕ್ಷಾತ್ ಪಾಠಕೇಳಿದ ಋಷಿಗಳಲ್ಲಿ ಪ್ರವೇಶಮಾಡದೆ ಇದ್ದಪ್ರಯುಕ್ತವೂ ತಾವೇ ಸಾಕ್ಷಾತ್ ವೇದವ್ಯಾಸದೇವರ ಮುಖದಿಂದ ಪಾಠವನ್ನು ಕೇಳದೆ ಇದ್ದ ಪ್ರಯುಕ್ತವೂ ನಾರದರನ್ನು ಕಳುಹಿಸಿದರು. ವೇದವ್ಯಾಸದೇವರು ಈ ರೀತಿ ಋಷಿಗಳಿಗೆ ಆಜ್ಞಾಮಾಡಿದ ಮೇಲೆ ರೋಮಾಂಚದಿಂದ **ರೋಮಹರ್ಷಣ** ಎಂಬ ಸೂತಜಾತಿಯ ಋಷಿಗಳನ್ನು ಸೃಷ್ಟಿ ಮಾಡಿದರು. ಅವರಲ್ಲಿ ಮನ್ಮಥನು ಆವಿಷ್ಟನಾದನು. ಆ ರೋಮಹರ್ಷಣರನ್ನು ವೇದಗಳನ್ನು ಬಿಟ್ಟು ಇತರ ಭಾರತಾದಿ ಪೌರುಷೇಯಗ್ರಂಥಗಳನ್ನು ಪ್ರಚಾರ ಮಾಡಲಿಕ್ಕೆ ಆಜ್ಞಾಮಾಡಿದರು. ಅವರಿಗೆ ಜ್ಞಾನೋಪದೇಶವನ್ನು ಮಾಡಿದರು. ಸನತ್ಕುಮಾರಾದಿಗಳನ್ನು ಜ್ಞಾನಯೋಗಕ್ಕೆ ಪ್ರವರ್ತಕರನ್ನಾಗಿಯೂ ಭೃಗುಋಷಿಗಳೇ ಮೊದಲಾದವರನ್ನು ಕರ್ಮಯೋಗಕ್ಕೆ ಪ್ರಚಾರಕರನ್ನಾಗಿಯೂ ಮಾಡಿದರು. ಜೈಮಿನ್ಯಾಚಾರ್ಯರನ್ನು ಕರ್ಮಮೀಮಾಂಸಾ ಶಾಸ್ತ್ರವನ್ನು ಮಾಡಲಿಕ್ಕೆ ಆಜ್ಞಾಪಿಸಿದರು. ದೈವೀಮೀಮಾಂಸಾಶಾಸ್ತ್ರದ ಪ್ರಥಮ ಸೂತ್ರವನ್ನೂ ಕೊನೆಯ ಸೂತ್ರವನ್ನೂ ಮಾಡಿ ಮಧ್ಯಭಾಗವನ್ನು ಮಾಡಲಿಕ್ಕೆ ಪೈಲಋಷಿಗಳಿಗೂ ಶೇಷದೇವರಿಗೂ ಅಪ್ಪಣೆಕೊಟ್ಟರು.

ಅಸುರರ ಮೋಹಕ್ಕೋಸ್ಕರ ಪಾಶುಪತಾಗಮವನ್ನು ಅನುಸರಿಸಿ ಶೈವಪುರಾಣ ಗಳನ್ನು ಮಾಡಿದರು. ಯೋಗ್ಯರಿಗೆ ತತ್ವಜ್ಞಾನ ಸಿದ್ಧಿಗೋಸ್ಕರ ಪಂಚರಾತ್ರಾಗಮ ವನ್ನನುಸರಿಸಿ ವೈಷ್ಣವಪುರಾಣಗಳನ್ನು ಮಾಡಿದರು. ವೇದಗಳಲ್ಲಿ ಮೇಲಾಗಿ (ಮೇಲ್ನೋಟಕ್ಕೆ) ತೋರುವ ಅರ್ಥವನ್ನನುಸರಿಸಿ ಚತುರ್ಮುಖಬ್ರಹ್ಮ ದೇವರು, ಇಂದ್ರದೇವರು, ಸರಸ್ವತೀದೇವಿಯರು ಇತ್ಯಾದಿದೇವತೆಗಳಿಗೆ ಉತ್ತಮತ್ವವನ್ನು ಹೇಳುವ ಪುರಾಣಗಳನ್ನೂ ಮಾಡಿದರು.

ಈರೀತಿಯಾಗಿ ದೇವತೆಗಳೂ ಋಷಿಗಳೂ ಸನತ್ಕುಮಾರಾದಿ ಯೋಗಿಗಳೂ

ಮನುಷ್ಯರೂ ವೇದವ್ಯಾಸದೇವರಿಂದ ಪುನಃ ಜ್ಞಾನವನ್ನು ಹೊಂದಿದರು. ದೇವತೆಗಳು ವೇದವ್ಯಾಸರ ಉಪದೇಶದಿಂದ ಕೆಲವಂಶಗಳನ್ನು ಮೊದಲು ತಿಳಿದುಕೊಂಡಿರುವುದನ್ನು ದೃಢಪಡಿಸಿದರು. ಕೆಲವು ಅಂಶಗಳನ್ನು ಹೊಸತಾಗಿ ತಿಳಿದುಕೊಂಡರು. ಮತ್ತು ಬ್ರಹ್ಮದೇವರನ್ನು ಬಿಟ್ಟು ಇತರ ದೇವತೆಗಳು ಮರೆತುಹೋದ ಭಾಗಗಳನ್ನು ತಿಳಿದುಕೊಂಡರು. ಬ್ರಹ್ಮದೇವರಿಗೆ ಮಾತ್ರ ಮರೆಯೋಣವಿಲ್ಲ. ಆದುದರಿಂದ ತಿಳಿದಂಶವನ್ನು ದೃಢಮಾಡಿಕೊಂಡರು. ಕೆಲವಂಶವನ್ನು ಹೊಸತಾಗಿ ತಿಳಿದುಕೊಂಡರು. ಈರೀತಿಯಾಗಿ ವೇದವ್ಯಾಸದೇವರು ಸಮಸ್ತಸಜ್ಜನರನ್ನೂ ಉದ್ಧಾರಮಾಡುವವರಾಗಿ ದೇವತೆಗಳಿಂದ ಸೇವಿತರಾಗಿ ಮೇರುಪರ್ವತದಲ್ಲಿಯೂ, ಬದರಿಕಾಶ್ರಮದಲ್ಲಿಯೂ ಪ್ರಕಾಶಿಸುತ್ತಾ ಇದ್ದರು. ಈಗಲೂ ಇರುವರು.



# ಮತ್ಸ್ಯಾವತಾರದ ಕಥೆ [1]

ವಿವಸ್ವಾನ್ ಎಂದು ಹೆಸರುಳ್ಳ ಸೂರ್ಯನ ಮಗನಾದ ವೈವಸ್ವಮನುವು ಮಹಾ ತೇಜಸ್ವಿಗಳಾಗಿದ್ದರು. ಮಹಾತಪಸ್ವಿಗಳಾಗಿದ್ದರು. ಅವರು ಬದರಿಯಲ್ಲಿ ಕೈಮೇಲೆ ಎತ್ತಿಕೊಂಡು ಒಂದೇ ಕಾಲಿನಿಂದ ನಿಂತುಕೊಂಡು ಕಠಿಣವಾದ ತಪಸ್ಸು ಮಾಡಿದರು. ಹಾಗೆಯೇ ತಲೆಕೆಳಗೆ ಕಾಲಮೇಲೆ ಮಾಡಿಕೊಂಡು ಕಣ್ಣಿನ ರೆಪ್ಪೆ ಹಾಕದೆ ಹತ್ತುಸಾವಿರ ವರ್ಷ ತಪಸ್ಸು ಮಾಡಿದರು.

ಒಂದು ಸಮಯ ಅವರು ಚೀರಿಣೀ ಎಂಬ ನದಿಯ ತೀರದಲ್ಲಿ ತಪಸ್ಸು ಮಾಡುತ್ತಿದ್ದರು. ಆಗ ಒಂದು ಮೀನು ಸಮೀಪಕ್ಕೆ ಪೂಜ್ಯರೇ! ನಾನೊಬ್ಬ ಚಿಕ್ಕಮೀನಾಗಿದ್ದೇನೆ. ನನಗೆ ಪ್ರಬಲ ಮೀನುಗಳಿಂದ ಭಯವಿದೆ. ನಮ್ಮ ಜಾತಿಯಸ್ವಭಾವವು ದುರ್ಬಲರನ್ನು ಪ್ರಬಲಮೀನುಗಳು ನುಂಗಿಹಾಕುವುದು. ಅಂತಹ ಭಯದಲ್ಲಿ ಮುಳುಗಿರುವ ನನ್ನನ್ನು ರಕ್ಷಿಸಬೇಕು. ಹಾಗೆ ಮಾಡಿದರೆ ನಾನು ಪ್ರತ್ಯುಪಕಾರವನ್ನು ಮಾಡುವೆನು.

ಮನುವು ಮೀನಿನ ಮಾತನ್ನು ಕೇಳಿ ಕರುಣೆಯುಳ್ಳವನಾಗಿ ಆ ಚಿಕ್ಕ ಮೀನನ್ನು ಕೈಯಿಂದ ಎತ್ತಿದನು. ನೀರಿನ ಹತ್ತಿರ ತೆಗೆದುಕೊಂಡು ಹೋಗಿ ಚಂದ್ರನಕಿರಣದಂತೆ ಪ್ರಕಾಶಿಸುವ ಆ ಮೀನನ್ನು ಒಂದು ನೀರಿನಿಂದ ತುಂಬಿದ ಪಾತ್ರೆಯಲ್ಲಿ ಹಾಕಿದನು. ಆ ಮೀನು ನೀರಿನ ಪಾತ್ರೆಯಲ್ಲಿ ಮನುವಿನಿಂದ ಸತ್ಕಾರವನ್ನು ಹೊಂದಿ ಬೆಳೆಯಿತು. ಮಗುವಿನಂತೆ ಆದರಲ್ಲಿ ಮನುವು ಭಾವನೆಯನ್ನು ಮಾಡಿದನು. ಬಹುಕಾಲದ ಮೇಲೆ ಮೀನು ದೊಡ್ಡದಾಯಿತು. ಅದಕ್ಕೆ ಆ ಪಾತ್ರೆಯಲ್ಲಿ ವಾಸಮಾಡಲಿಕ್ಕೆ ಆಗಲಿಲ್ಲ. ತರುವಾಯ ಮೀನು ಮನುವನ್ನು ನೋಡಿ ನನಗೆ ಬೇರೆ ಒಂದು ಸ್ಥಾನವನ್ನು ಕಲ್ಪಿಸು ಎಂದಿತು. ತರುವಾಯ ಮನುವು ಆ ಮೀನನ್ನು ಕೈಯಲ್ಲಿ ಎತ್ತಿಕೊಂಡು ಹೋಗಿ ಒಂದು ದೊಡ್ಡ ಇಳಿಬಾವಿಯಲ್ಲಿ ಹಾಕಿದರು. ಆಮೇಲೆ ಮೀನು ಆ ಭಾವಿಯಲ್ಲಿ ಬಹುಕಾಲ ಬೆಳೆಯಿತು. ಇಪ್ಪತ್ತುಮೈಲು ಅಗಲವಾಗಿ ಇಳಿಭಾವಿಯು ಇತ್ತು. ಮೀನು ಅಷ್ಟು ದೊಡ್ಡದಾಗಿ ಬೆಳೆದು ಅದರಲ್ಲಿ ಇರಲಿಕ್ಕೆ ಆಗಲಿಲ್ಲ. ತರುವಾಯ ಮೀನು ಮನುವನ್ನು ನೋಡಿ 'ಸಾಧುವೇ! ನನಗೆ ಇಲ್ಲಿ ಇರಲಿಕ್ಕೆ ಆಗುವುದಿಲ್ಲ. ನನ್ನನ್ನು ಗಂಗೆಗೆ ಕರೆದುಕೊಂಡು ಹೋಗು. ನಿನ್ನ ಮಾತಿನಂತೆ ನಾನು ಇರಬೇಕಾಗಿದೆ. ಏಕೆಂದರೆ ನಿನ್ನಿಂದಾಗಿ ನಾನು ಇಷ್ಟು ವೃದ್ಧಿಯನ್ನು ಹೊಂದಿದೆನು' ಎಂದಿತು. ಈರೀತಿಯಾಗಿ

1. ವ.ಪ.ಅ. 187

ಹೇಳಲು ಮನುವು ಮೀನನ್ನು ಎತ್ತಿಕೊಂಡುಹೋಗಿ ಗಂಗೆಯಲ್ಲಿ ಬಿಟ್ಟರು. ಕೆಲವು ಸಮಯ ಮೀನು ಗಂಗೆಯಲ್ಲಿ ಬೆಳೆಯಿತು. ಆಮೇಲೆ ಮನುವನ್ನು ನೋಡಿ ನನಗೆ ಗಂಗೆಯಲ್ಲಿಯೂ ಸಂಚರಿಸಲಿಕ್ಕೆ ಆಗಲಿಲ್ಲ. ಅಷ್ಟು ದೊಡ್ಡದಾಗಿ ಬೆಳೆದಿದ್ದೇನೆ. ನನ್ನನ್ನು ಸಮುದ್ರಕ್ಕೆ ಕರೆದುಕೊಂಡು ಹೋಗಿ' ಎಂದಿತು. ಮನುವು ಆ ದೊಡ್ಡ ಮೀನನ್ನು ಗಂಗೆಯಿಂದ ಎತ್ತಿ ಸಮುದ್ರಕ್ಕೆ ತೆಗೆದುಕೊಂಡು ಹೋದರು. ಮೀನು ಅಷ್ಟು ದೊಡ್ಡದಾಗಿದ್ದರೂ ಮನುವಿಗೆ ಎತ್ತಿಕೊಂಡು ಹೋಗಲಿಕ್ಕೆ ಭಾರವಾಗಿರಲಿಲ್ಲ. ಮತ್ತು ಮೀನಿನ ದುರ್ವಾಸನೆಯೂ ಇರಲಿಲ್ಲ. ಕೈಗೆ ಮೃದುವಾಗಿ ಇತ್ತು. ಈರೀತಿಯಾಗಿ ಆ ಮೀನನ್ನು ಎತ್ತಿಕೊಂಡು ಸಮುದ್ರಕ್ಕೆ ಹೋಗಿಬಿಡಲು ಆ ಮೀನಿನ ರೂಪದಿಂದ ಇದ್ದ ಪರಮಾತ್ಮನು ಮಂದಹಾಸವನ್ನು ಮಾಡುತ್ತಾ 'ಪೂಜ್ಯನೇ! ನೀನು ನನ್ನನ್ನು ರಕ್ಷಿಸಿದೆ. ನೀನು ಈಗ ಮಾಡಬೇಕಾದ ಕಾರ್ಯವನ್ನು ಹೇಳುತ್ತೇನೆ, ಕೇಳು. ಬೇಗನೆ ಈ ಸ್ಥಾವರಜಂಗಮ ಜಗತ್ತು ಪ್ರಲಯವು ಹೊಂದುವುದು. ಲೋಕವು ಮುಳುಗುವ ಕಾಲವು ಬಂದಿರು ತ್ತದೆ. ಎಲ್ಲರಿಗೂ ಭಯಂಕರವಾದ ಕಾಲವು ಪ್ರಾಪ್ತವಾಗಿದೆ. ನೀನು ದೊಡ್ಡ ಗಟ್ಟಿ ಯಾದ ಒಂದು ದೋಣಿಯನ್ನು ಮಾಡಿಸಬೇಕು. ಸಪ್ತರ್ಷಿಗಳಿಂದ ಕೂಡಿಕೊಂಡು ಆ ದೋಣಿಯಲ್ಲಿ ಕೂತಿರು. ಎಲ್ಲಾ ಬೀಜಗಳನ್ನೂ ಸುರಕ್ಷಿತವಾಗಿ ಆ ದೋಣಿಯಲ್ಲಿ ಇಟ್ಟಿರು. ಆ ದೋಣಿಯಲ್ಲಿ ಕೂತುಕೊಂಡು ನನ್ನನ್ನು ನಿರೀಕ್ಷಿಸುತ್ತಾ ಇರು. ನಾನು ಕೊಂಬು ಉಳ್ಳವನಾಗಿ ಬರುವೆನು. ಆ ಕೊಂಬಿನಿಂದ ನನ್ನನ್ನು ತಿಳಿಯುವವನಾಗಿ. ಈ ಪ್ರಕಾರವೆಲ್ಲಾ ಮಾಡು. ನಾನು ಈಗ ಹೋಗುತ್ತೇನೆ. ನಾನಿಲ್ಲದೆ ಆ ನೀರಿನಿಂದ ಪಾರಾಗಲಿಕ್ಕೆ ಆಗಲಾರದು. ನನ್ನ ಮಾತಿನಲ್ಲಿ ಸಂದೇಹಪಡಬೇಡ' ಎಂದನು.

ಆಗ ವೈವಸ್ವತಮನುವು ಹಾಗೆಯೇ ಮಾಡುತ್ತೇನೆ ಎಂದನು. ತರುವಾಯ ಇಬ್ಬರೂ ಹೇಳಿಕೊಂಡು ಹೊರಟುಹೋದರು. ತರುವಾಯ ಮನುವು ಮತ್ಸ್ಯರೂಪಿ ಪರಮಾತ್ಮನು ಹೇಳಿದಂತೆ ದೋಣಿಯನ್ನು ಮಾಡಿಸಿ ಅದರಲ್ಲಿ ಎಲ್ಲಾ ಬೀಜಗಳನ್ನೂ ಸಂಗ್ರಹ ಮಾಡಿಕೊಂಡು ಮಹಾಅಲೆಗಳಿಂದ ಕೂಡಿರುವ ಸಮುದ್ರದಲ್ಲಿ ದೋಣಿ ಯಲ್ಲಿ ಕೂತುಕೊಂಡು ಇಳಿದನು. ತರುವಾಯ ಮನುವು ದೋಣಿಯಲ್ಲಿ ಕೂತುಕೊಂಡೇ ಆ ಮೀನಿನ ರೂಪದಿಂದ ಬಂದಿದ್ದ ಪರಮಾತ್ಮನನ್ನು ಸ್ಮರಿಸಿದನು. ಆ ಮನುವು ಸ್ಮರಿಸಿದ್ದನ್ನು ತಿಳಿದುಕೊಂಡು ಒಂದು ಕೊಂಬು ಉಳ್ಳ ಮೀನಿನ ರೂಪದಿಂದ ಭಗವಂತನು ಬೇಗನೇ ಬಂದನು. ಮನುವು ಸಮುದ್ರದಲ್ಲಿ ಬಂದಿರುವ ಪರ್ವತ ದಂತೆ ದೊಡ್ಡದಾಗಿರುವ ಮೀನನ್ನು ನೋಡಿ ದೊಡ್ಡ ಹಗ್ಗದಿಂದ ದೋಣಿಯನ್ನು ಆ

ಭಗವಂತನ ಕೊಂಬಿಗೆ ಕಟ್ಟಿದನು. ಹಗ್ಗದಿಂದ ಕಟ್ಟಲ್ಪಟ್ಟ ಆ ಮೀನಿನ ರೂಪದ ಭಗವಂತನು ವೇಗದಿಂದ ಆ ದೋಣಿಯನ್ನು ಎಳೆಯುತ್ತಾ ಸಮುದ್ರದಲ್ಲಿ ಸಂಚಾರಮಾಡಿದನು. ಮಹಾ ಗಾಳಿಗೆ ಸಮುದ್ರದಲ್ಲಿ ದೋಣಿಯು ಮೇಲೆ ಕೆಳಗೆ ಆಡುತ್ತಿತ್ತು. ಭೂಮಿದಿಕ್ಕು ವಿದಿಕ್ಕು ಒಂದೂ ತೋರುತ್ತಿರಲಿಲ್ಲ. ಎಲ್ಲಿ ನೋಡಿದರೂ ನೀರೂ ಆಕಾಶವೂ ಮಾತ್ರ ತೋರುತ್ತಿತ್ತು. ಈ ಪ್ರಕಾರವಾಗಿರುವ ಸಮಯದಲ್ಲಿ ಮನುವೂ ಸಪ್ತಋಷಿಗಳೂ ಮತ್ಸ್ಯರೂಪಿಯಾದ ಪರಮಾತ್ಮನೂ ಕಾಣಿಸುತ್ತಿದ್ದರು.

ಈರೀತಿಯಾಗಿ ಮೀನಿನ ರೂಪದಿಂದ ಪರಮಾತ್ಮನು ಆಲಸ್ಯವಿಲ್ಲದೆ ಸಮುದ್ರದಲ್ಲಿ ದೋಣಿಯನ್ನು ಸೆಳೆಯುತ್ತಾ ಇದ್ದನು. ತರುವಾಯ ಹಿಮವತ್ಪರ್ವತದ ಒಂದು ಎತ್ತರವಾದ ಶಿಖರವಿದ್ದಲ್ಲಿಗೆ ಭಗವಂತನು ದೋಣಿಯನ್ನು ಎಳೆದುಕೊಂಡು ಹೋದವನಾಗಿ ಸಪ್ತಋಷಿಗಳೊಡನೆ ಮೆಲ್ಲನೆ ನಗುತ್ತಾ ಬೇಗನೆ ಈ ಹಿಮವತ್ಪರ್ವತದ ಶಿಖರಕ್ಕೆ ದೋಣಿಯನ್ನು ಕಟ್ಟಿರಿ' ಎಂದು ಹೇಳಿದನು. ಋಷಿಗಳು ಭಗವಂತನ ಮಾತಿನಂತೆ ಆ ದೋಣಿಯನ್ನು ಹಿಮವತ್ಪರ್ವತದ ಶಿಖರಕ್ಕೆ ಕಟ್ಟಿದರು. ಆ ಶಿಖರವು ಈಗಲೂ ನೌಬಂಧನ ಎಂಬ ಹೆಸರಿನಿಂದ ಪ್ರಖ್ಯಾತವಾಗಿದೆ. ತರುವಾಯ ಮೀನಿನ ರೂಪದಿಂದ ಇದ್ದ ಭಗವಂತನು ಸಪ್ತಋಷಿಗಳೊಡನೆ 'ನಾನು ಭಗವಂತನು. ನಿಮ್ಮನ್ನು ಮೀನಿನ ರೂಪದಿಂದ ಭಯದಿಂದ ಬಿಡಿಸಿದ್ದೇನೆ. ಈ ಮನುವು ಎಲ್ಲಾ ಪ್ರಜೆಗಳನ್ನೂ ಸೃಷ್ಟಿ ಮಾಡಬೇಕು. ತಪಸ್ಸಾಮರ್ಥ್ಯದಿಂದ ಇವನಿಗೆ ಎಲ್ಲೂ ಜ್ಞಾನವೂ ಉಂಟಾಗುತ್ತದೆ ಎಂದು ಮರೆಯಾಗಿ ಹೋದನು. ಆಮೇಲೆ ಮನುವು ಸೃಷ್ಟಿಮಾಡಲಿಕ್ಕೆ ತಿಳಿಯದೆ ಪುನಃ ತಪಸ್ಸುಮಾಡಿ ಪ್ರಜೆಗಳನ್ನೆಲ್ಲಾ ಸೃಷ್ಟಿಮಾಡಿ ದರು. ಈರೀತಿಯಾಗಿ ಮತ್ಸ್ಯರೂಪಿಯಾದ ಭಗವಂತನು ಮನುವನ್ನು ರಕ್ಷಿಸಿದ ಕಥೆಯು. ಭಾಗವತದಲ್ಲಿ ಮನುವಿಗೆ ಪೂರ್ವದಲ್ಲಿ ಎಂದರೆ ಮತ್ಸ್ಯರೂಪಿಯಾದ ಪರಮಾತ್ಮನ ಹತ್ತಿರ ಮಾತಾಡುವಾಗ ಅಂದರೆ ಪೂರ್ವಮನ್ವಂತರದಲ್ಲಿ ಸತ್ಯವ್ರತ ಎಂದು ಹೇಳಿದೆ. ಆವನು ಕೃತಮಾಲಾ ನದಿಯಲ್ಲಿ ತರ್ಪಣ ಬಿಡುವಾಗ ಮೀನಿನ ರೂಪದಿಂದ ಪರಮಾತ್ಮನು ಸಿಕ್ಕಿದನೆಂದು ಹೇಳಿದೆ. ಇದು ಒಂದು ಕಲ್ಪದ ಕಥೆಯು. ಮೀನಿನ ರೂಪಿಯಾದ ಪರಮಾತ್ಮನು ಮನ್ವಂತರಪ್ರಲಯಕಾಲದಲ್ಲಿ ಸತ್ಯವ್ರತನಿಗೆ ಉಪದೇಶಮಾಡಿದ್ದು ಮತ್ಸ್ಯಪುರಾಣವು ಆ ಸತ್ಯವ್ರತನೇ ಈ ಮನ್ವಂತರದಲ್ಲಿ ಸೂರ್ಯದೇವರಿಂದ ಮನುವಾಗಿ ಹುಟ್ಟಿದನ. ಭಗವಂತನು ಈರೀತಿಯಾಗಿ ಮತ್ಸ್ಯ ರೂಪದಿಂದ ಮನುವನ್ನು ರಕ್ಷಿಸಿ, ವೇದಗಳನ್ನು ಅಪಹರಿಸಿದ ಹಯಗ್ರೀವಾಸುರನನ್ನು ಸಂಹರಿಸಿ ಬ್ರಹ್ಮದೇವರಿಗೆ ವೇದಗಳನ್ನೂ ತಂದುಕೊಟ್ಟನು.

# ಅಮೃತಮಥನ [1]

ಒಂದು ಸಮಯದಲ್ಲಿ ಒಬ್ಬ ವಿದ್ಯಾಧರಸ್ತ್ರೀಯು ಒಂದು ಹೂವಿನ ಮಾಲೆಯನ್ನು ಹಿಡಿದುಕೊಂಡಿದ್ದಳು. ಆಗ ದುರ್ವಾಸರು ಅವಳೊಡನೆ ಆ ಮಾಲೆಯನ್ನು ಕೊಡಬೇಕೆಂದು ಕೇಳಿದರು. ಆಗ ಅವಳು ಭಕ್ತಿಯಿಂದ ಅದನ್ನು ಅವರಿಗೆ ಸಮರ್ಪಿಸಿದಳು. ಮಹಾಜ್ಞಾನಿಗಳಾದ ದುರ್ವಾಸರು ಅಜ್ಞರ ದೃಷ್ಟಿಗೆ ಹುಚ್ಚರಂತೆ ಕಾಣುತ್ತಾ ಆ ವಿದ್ಯಾಧರಸ್ತ್ರೀಯು ಕೊಟ್ಟಿರುವ ಹೂವಿನ ಮಾಲೆಯನ್ನು ತಲೆಯಮೇಲೆ ಸುತ್ತಿಕೊಳ್ಳುತ್ತಾ ದಾರಿಯಲ್ಲಿ ಹೋಗುತ್ತಾ ಇದ್ದರು. ಆ ಸಂದರ್ಭದಲ್ಲಿ ಇಂದ್ರದೇವರು ಐರಾವತದಲ್ಲಿ ಕೂತುಕೊಂಡು ವೈಭವದಿಂದ ಬರುತ್ತಿದ್ದರು. ಆಗ ದುರ್ವಾಸರು ತನ್ನ ತಲೆಗೆ ಸುತ್ತಿಕೊಳ್ಳುತ್ತಾ ಇದ್ದ ಮಾಲೆಯನ್ನು ಐರಾವತದ ಮೇಲೆ ಕೂತಿರುವ ಇಂದ್ರದೇವರ ಮೇಲೆ ಬೀಸಿದರು. ಇಂದ್ರದೇವರು ಸ್ವಲ್ಪ ಗರ್ವದಿಂದ ಆಮಾಲೆಯನ್ನು ಆನೆಯ ತಲೆಯ ಮೇಲೆ ಹಾಕಿದರು. ಆನೆಯು ಅದನ್ನು ಸೊಂಡಿಲಿನಿಂದ ಸೆಳೆದು ಹಾಕಿ ಕಾಲಿನಿಂದ ಮೆಟ್ಟಿತು. ಇದನ್ನೆಲ್ಲಾ ದುರ್ವಾಸರು ನೋಡುತ್ತಲೇ ಇದ್ದರು. ಅವರು ಬಹುಕೋಪವನ್ನು ಹೊಂದಿದರು. 'ದೇವೇಂದ್ರ! ನಾನು ಕೊಟ್ಟಿರುವ ಪುಷ್ಪದ ಮಾಲಿಕೆಯನ್ನು ಮಹಾಪ್ರಸಾದವೆಂದು ಸ್ವೀಕರಿಸಿದರೆ ಈರೀತಿಯಾಗಿ ಆನೆಯ ಕಾಲಿನಿಂದ ಒದ್ದಿಸಿದಿಯಾ? ನಿನ್ನ ತ್ರಿಲೋಕಾಧಿಪತ್ಯವು ನಷ್ಟವಾಗಲಿ' ಎಂದು ಶಾಪವನ್ನು ಕೊಟ್ಟರು. ಆಗಲೇ ಇಂದ್ರದೇವರು ಐರಾವತದಿಂದ ಕೆಳಗೆ ಇಳಿದು ಬಂದು ಕ್ಷಮಿಸಬೇಕೆಂದು ಪ್ರಾರ್ಥಿಸಿದರು. ಆಗ ದುರ್ವಾಸರು ಬೃಹಸ್ಪತ್ಯಾಚಾರ್ಯರೇ ಮೊದಲಾದವರಲ್ಲಿ ಮೊದಲು ಅಪರಾಧ ಮಾಡುವುದು ಆಮೇಲೆ ಕ್ಷಮಾ ಕೇಳುವುದು. ಈ ಪ್ರಕಾರ ನಿನಗೆ ಅಭ್ಯಾಸವಾಗಿದೆ. ಕ್ಷಮಿಸುವವರು ಬೇರೆ ಜನರು, ನಾನು ಕೋಪಿಸಿಕೊಳ್ಳುವವನು ಅಲ್ಲದೆ ಕ್ಷಮಿಸುವವನಲ್ಲ. ನಾನು ಮೊದಲು ಹೇಳಿದಂತೆಯೇ ನಡೆಯಬೇಕು ಎಂದು ಹೇಳಿ ಹೊರಟೇ ಹೋದರು.

ಈಪ್ರಕಾರ ಜ್ಞಾನಿಗಳಾದ ದುರ್ವಾಸರ ಶಾಪದಿಂದ ಮೂರುಲೋಕಗಳೂ ಅಮಂಗಳಪ್ರಾಯಗಳಾದವು. ಯಾರೊಬ್ಬರೂ ಯಜ್ಞಾದಿ ಸತ್ಕಾರ್ಯಗಳನ್ನು ಮಾಡಲೊಲ್ಲರು. ದೇವತೆಗಳಿಗೆಲ್ಲಾ ದೌರ್ಬಲ್ಯವು ಏರ್ಪಟ್ಟಿತು. ಈ ಸಮಯವನ್ನು ನೋಡಿ ಬಲಿಯನ್ನು ಮುಂದೆ ಮಾಡಿಕೊಂಡು ಅಸುರರು ಯುದ್ಧಕ್ಕೆ ಬಂದರು.

---

1. ಭಾಗ. VIII-5 ರಿಂದ 8 ; ಮ.ತಾ.ನಿ. ಅ-10

ಯುದ್ಧದಲ್ಲಿ ದೇವತೆಗಳು ಸೋತರು. ಬಲಿಯು ದೇವತೆಗಳನ್ನು ಜಯಿಸಿ, ಇಂದ್ರ ದೇವರ ಸಿಂಹಾಸನವನ್ನು ಏರಿದನು. ದೇವತೆಗಳೆಲ್ಲರೂ ಬ್ರಹ್ಮದೇವರ ಸಮೀಪಕ್ಕೆ ಹೋಗಿ ದೂರಿಕೊಂಡರು. ಬ್ರಹ್ಮದೇವರು ದೇವತೆಗಳನ್ನೆಲ್ಲಾ ಕರೆದುಕೊಂಡು ಶ್ರೀಪರಮಾತ್ಮನಿದ್ದಲ್ಲಿಗೆ ಹೋಗಿ ಪ್ರಾರ್ಥಿಸಿದರು. ಆಗ ಅಜಿತನಾಮಕ ಪರಮಾತ್ಮನು ಹೇಳಿದನು. 'ದೇವತೆಗಳಿರಾ! ನಮ್ಮ ಕಾರ್ಯವಾಗಬೇಕಾದ ಕಾಲದಲ್ಲಿ ಶತ್ರುಗಳ ಹತ್ತಿರವೂ ರಾಜಿಮಾಡಿಕೊಳ್ಳಬೇಕು. ಒಬ್ಬ ಹಾವಾಡಿಗನು ಒಂದು ಹಾವನ್ನು ಪೆಟ್ಟಿಗೆ ಯಲ್ಲಿ ಇಟ್ಟು ಒಂದು ಇಲಿಯನ್ನು ಅದರ ಆಹಾರಕ್ಕಾಗಿ ಹಾಕುವನು. ಆಗ ಆ ಹಾವು ಇಲಿಯ ಹತ್ತಿರ ರಾಜಿಮಾಡಿಕೊಂಡು, ಇಲಿಯನ್ನು ತನ್ನ ಹೆಡೆಯ ಮೇಲೆ ಕೂತು ಕೊಂಡು ಪೆಟ್ಟಿಗೆಯನ್ನು ಕೊರೆದು ದ್ವಾರಮಾಡಲಿಕ್ಕೆ ಹೇಳಿ, ಅದು ದ್ವಾರಮಾಡಿದ ಮೇಲೆ ಹಾವು ಇಲಿಯನ್ನು ತಿಂದು ಹಾಕಿ ಆ ದ್ವಾರದಿಂದ ಹೊರಟು ಹೋಗುವುದು. ಹಾಗೆಯೇ ನೀವೂ ಈಗ ರಾಕ್ಷಸರೊಡನೆ ರಾಜಿ ಮಾಡಿಕೊಂಡು ಇಬ್ಬರೂ ಸೇರಿ ಸಮುದ್ರಮಥನ ಮಾಡಿರಿ. ಕೊನೆಗೆ ಅದರ ಫಲವಾದ ಅಮೃತವನ್ನು ನೀವು ಹೊಂದುವಿರಿ. ಅಸುರರು ಶ್ರಮವನ್ನು ಮಾತ್ರ ಹೊಂದುವರು' ಎಂದು ಈ ಪ್ರಕಾರ ಪರಮಾತ್ಮನ ಮಾತನ್ನು ಕೇಳಿ ಬ್ರಹ್ಮದೇವರೂ ರುದ್ರದೇವರೂ ತಮ್ಮ ಲೋಕಕ್ಕೆ ಹೋದರು. ಇಂದ್ರಾದಿ ದೇವತೆಗಳು ಸ್ವರ್ಗಕ್ಕೆ ಹೋಗಿ ಬಲಿಯೊಡನೆ ರಾಜಿಮಾಡಿಕೊಂಡರು.

ತರುವಾಯ ದೇವತೆಗಳೂ ದೈತ್ಯರೂ ಸೇರಿ ಸಮುದ್ರವನ್ನು ಕಡೆಯಲಿಕ್ಕೆ ಕಡಗೋಲಿನಂತೆ ಮಂದರಪರ್ವತವನ್ನು ಮಾಡಬೇಕೆಂದು ಅದನ್ನು ತರಲಿಕ್ಕೆ ಹೋದರು. ರುದ್ರದೇವರ ವರದಿಂದ ದೇವತೆಗಳೂ ಅಸುರರೂ ಆ ಪರ್ವತವನ್ನು ಕಿತ್ತಿ 'ಅನಂತ' ಎಂದು ಹೆಸರುಳ್ಳ ಗರುಡದೇವರ ಹೆಗಲಲ್ಲಿ ಇಟ್ಟನು. ಆ ಗರುಡದೇವರು ಮಂದರಪರ್ವತವನ್ನೂ ಪರಮಾತ್ಮನನ್ನೂ ಹೊತ್ತುಕೊಂಡು ಬಂದರು. ಆಗ ದಾರಿಯಲ್ಲಿ ದೇವತೆಗಳೂ ಅಸುರರೂ ತಮಗೆ ಹೊರಲಿಕ್ಕೆ ಆಗುತ್ತದೋ ಇಲ್ಲವೋ ಎಂದು ಪರೀಕ್ಷೆ ಮಾಡಬೇಕೆಂಬ ಅಭಿಪ್ರಾಯದಿಂದ ಗರುಡದೇವರ ಹೆಗಲಿನಿಂದ ಎತ್ತಿದರು. ಆಗ ಆ ಪರ್ವತವು ಎಲ್ಲರ ತಲೆಗೂ ಬಿದ್ದು ದೇವತೆಗಳೂ ಅಸುರರೂ ಪುಡಿಪುಡಿಯಾದರು. ಆಮೇಲೆ ಪರಮಾತ್ಮನ ಕೃಪಾಕಟಾಕ್ಷ ದಿಂದ ಅವರೆಲ್ಲರೂ ಎದ್ದರು. ಆಮೇಲೆ ಪರಮಾತ್ಮನು ಮತ್ತೂ ಎಡಕೈಯಿಂದ ಆ ಪರ್ವತವನ್ನು ಗರುಡದೇವರು ಹೆಗಲಮೇಲೆ ಇಟ್ಟು, ತಾನು ಕೂತುಕೊಂಡು ಸಮುದ್ರತೀರಕ್ಕೆ ಹೋದನು.

ಕಶ್ಯಪರ ಮಗನಾದ ವಾಸುಕಿಯನ್ನು ಮಂದರಪರ್ವತದಿಂದ ಸಮುದ್ರವನ್ನು ಕಡೆಯಲು ಹಗ್ಗದಂತೆ ಉಪಯೋಗಿಸಿಕೊಂಡು ದೇವತೆಗಳೂ ಅಸುರರೂ ಪರಮಾತ್ಮನಿಂದ ಸಹಿತರಾಗಿ ಸಮುದ್ರವನ್ನು ಮಥನ ಮಾಡಿದರು. ಆರಂಭದಲ್ಲಿ ಭಗವಂತನು ದೇವತೆಗಳಿಂದ ಸಹಿತನಾಗಿ ಸರ್ಪದ ತಲೆಯನ್ನು ಹಿಡಿದರು. ಆಗ ದೈತ್ಯರು ಹಾವಿನ ಬಾಲವು ಅಮಂಗಲವು ನಾವು ಹಿಡಿಯಲಾರೆವು ಎಂದು ಸುಮ್ಮನೆ ಕೂತರು. ಆಗ ಭಗವಂತನು ಮಂದಹಾಸವನ್ನು ಮಾಡುತ್ತಾ ದೇವತೆಗಳಿಂದ ಕೂಡಿಕೊಂಡು ಬಾಲವನ್ನು ಹಿಡಿದನು. ಅಸುರರು ತಲೆಯನ್ನು ಹಿಡಿದರು. ವಿಷಯುಕ್ತವಾದ ತಲೆಯನ್ನು ಹಿಡಿದ ಪ್ರಯುಕ್ತ ವಿಷದ ಶ್ವಾಸದಿಂದ ಶ್ರಮವುಳ್ಳವರಾದರು. ತರುವಾಯ ಮಂದರಪರ್ವತವು ಅತ್ಯಂತ ಭಾರದಿಂದ ಪಾತಾಲದಲ್ಲಿ ಮುಳುಗಿತು.

ಆಗ ಭಗವಂತನು ಆಮೆಯ ರೂಪವನ್ನು ಧರಿಸಿಕೊಂಡು ಆ ಪರ್ವತವನ್ನು ಎತ್ತಿದನು. ಮೇಲೆ, ಕೆಳಗೆ, ಪರ್ವತದಲ್ಲಿ, ವಾಸುಕಿಯಲ್ಲಿ, ದೇವತೆಗಳಲ್ಲಿ, ಅಸುರರಲ್ಲಿ, ಎಲ್ಲಾ ಪ್ರವೇಶಮಾಡಿ, ಪ್ರತ್ಯೇಕವಾದ ರೂಪದಿಂದ ಇದ್ದುಕೊಂಡು ಭಗವಂತನು ಸಮುದ್ರವನ್ನು ಕಡೆದನು. ದೇವತೆಗಳೂ ಅಸುರರೂ ಶ್ರಮವುಳ್ಳವರಾಗಲು ಪರಮಾತ್ಮನೊಬ್ಬನೇ ಎರಡು ಕೈಗಳಿಂದ ಹಾವಿನ ಬಾಲವನ್ನೂ, ತಲೆಯನ್ನೂ ಹಿಡಿದುಕೊಂಡು ಮಥನಮಾಡಿದನು. ಆಗ ಜಗತ್ತನ್ನೇ ನುಂಗುವ ಕಲಿಯಿಂದ ಅಭಿಮನ್ಯವಾದ ಬ್ರಹ್ಮದೇವರ ವರದಿಂದ ಇತರರಿಂದ ಮುಟ್ಟಲಿಕ್ಕೆ ಅಶಕ್ಯವಾದ ಕಾಲಕೂಟವೆಂಬ ವಿಷವು ಮೇಲೆ ಬಂದಿತು. ವಾಯುದೇವರು ಆ ವಿಷದಲ್ಲಿ ಸ್ವಲ್ಪವನ್ನು ತೆಗೆದು ಕೈಯಲ್ಲಿ ತಿಕ್ಕಿ ಅದರ ಸಾರವನ್ನು ಎಲ್ಲ ತೆಗೆದು ರುದ್ರದೇವರಿಗೆ ಕೊಟ್ಟರು. ರುದ್ರದೇವರು ಅದನ್ನು ಕುಡಿದರು. ಆ ವಿಷವು ಕುತ್ತಿಗೆಯಲ್ಲಿ ಬರಲು, ಮೂರ್ಛಿತರಾಗಿ ಬಿದ್ದರು. ಪರಮಾತ್ಮನ ಕೈಯ ಸ್ಪರ್ಶದಿಂದ ಜ್ಞಾನವನ್ನು ಹೊಂದಿದರು. ಇದರಿಂದ ಅಂದರೆ ವಿಷದಿಂದ ರುದ್ರದೇವರ ಕುತ್ತಿಗೆಯು ನೀಲವಾಯಿತು. ಅವರು ನೀಲಕಂಠ ಎಂದು ಹೆಸರುಳ್ಳವರಾದರು. ಈರೀತಿ ಅತಿಸ್ವಲ್ಪ ವಿಷವನ್ನು ಕುಡಿದಿದ್ದರಿಂದಲೇ ರುದ್ರದೇವರಿಗೆ ತಲೆನೋವು ಆರಂಭವಾಯಿತು. ಅದಕ್ಕಾಗಿಯೇ ತಲೆಯಲ್ಲಿ ಚಂದ್ರನನ್ನು ಧರಿಸಿದರು. 'ಅಭಿಷೇಕಪ್ರಿಯಃ ಶಿವಃ' ಎನ್ನುವಂತೆ ಎಷ್ಟು ಅಭಿಷೇಕ ಮಾಡಿದರೂ ರುದ್ರದೇವರಿಗೆ ಪ್ರಿಯವಾಗುವುದು.

ರುದ್ರದೇವರು ವಿಷವನ್ನು ಕುಡಿದ ಮೇಲೆ ವಾಯುದೇವರು ಭಗವಂತನ ಆಜ್ಞೆಯಿಂದ ಉಳಿದ ಎಲ್ಲಾ ವಿಷವನ್ನೂ ಬಂಗಾರದ ಪಾತ್ರೆಯಲ್ಲಿ ಹಾಕಿಕೊಂಡು ಮಥನ ಮಾಡದೆ ತುಂಬಾ ವೀರ್ಯವುಳ್ಳ ಅದನ್ನು ಕುಡಿದರು. ಆದರೂ ಅದು

ವಾಯುದೇವರಿಗೆ ಜೀರ್ಣವಾಯಿತು. ಭಾಗವತಾದಿ ಪುರಾಣಗಳಲ್ಲಿ ರುದ್ರದೇವರೇ ವಿಷಪಾನವನ್ನು ಮಾಡಿದಂತೆ ಹೇಳಿದ್ದರೂ ವೇದದಲ್ಲಿ ಕೇಶಿಸೂಕ್ತದಲ್ಲಿ ವಾಯು ದೇವರು ವಿಷವನ್ನು ಕುಡಿದ ವಿಷಯವನ್ನು ಹೇಳಿರುತ್ತದೆ. ರುದ್ರದೇವರು ಕುಡಿದು ಕೈಯಲ್ಲಿ ಉಳಿದ ವಿಷವು ಜಗತ್ತಿನಲ್ಲಿ ವ್ಯಾಪ್ತನಾದ ಕಲಿಯಿಂದ ಅಭಿಮನ್ಯ ಮಾನವಾಯಿತು. ಆ ಕಲಿಯ ದೇಹದಿಂದ ಚೇಳು ದುಷ್ಟ ಹಾವುಗಳೂ ದುಷ್ಟ ಮೃಗಗಳೂ ಉಂಟಾದವು.

ಆಮೇಲೆ ಭಗವಂತನು ಸಮುದ್ರಮಥನ ಮಾಡುತ್ತಾ ಇರುವಾಗ ಸುರಾ ಎಂದರೆ ಮದ್ಯಕ್ಕೆ ಅಭಿಮಾನಿಯಾದವಳು ಬಂದಳು. ಅವಳನ್ನು ಅಸುರರು ಹೊಂದಿದರು. ತರುವಾಯ ಉಚ್ಚೈಃಶ್ರವಾ ಎಂಬ ಕುದುರೆಯೂ, ಐರಾವತ ಎಂಬ ಆನೆಯೂ, ಇತರ ದಿಕ್ಪಾಲಕರ ಆನೆಗಳೂ, ಸಹಸ್ರ ಅಪ್ಸರಸ್ತ್ರೀಯರೂ, ದೇವತೆಗಳ ಆಭರಣಗಳೂ, ಆಯುಧಗಳೂ, ಪಾರಿಜಾತವೃಕ್ಷವೂ, ಕಾಮಧೇನುವೂ, ಕೌಸ್ತುಭ ಮಣಿಯೂ, ಬಂದವು (ಉಂಟಾದವು). ಅನಂತರ ನಿತ್ಯದೇಹವುಳ್ಳ ರಮಾ ದೇವಿಯರು ಅಲ್ಲಿ ಒಂದು ರೂಪದಿಂದ ಆವಿರ್ಭವಿಸಿದರು. ತರುವಾಯ ಧನ್ವಂತರಿನಾಮಕ ಪರಮಾತ್ಮನು ಒಂದು ಕೈಯಲ್ಲಿ ಅಮೃತವು ತುಂಬಿದ ಕಲಶವನ್ನೂ ಮತ್ತೊಂದು ಕೈಯಲ್ಲಿ ಅಮೃತಬಡಿಸಲಿಕ್ಕೆ ಪಾತ್ರೆಯನ್ನೂ ಹಿಡಿದುಕೊಂಡು ಮೇಲೆ ಬಂದನು. ಆಗ ಅಸುರರು ಬಂದು ಪರಮಾತ್ಮನ ಕೈಯಿಂದ ಅಮೃತ ತುಂಬಿದ ಕಲಶವನ್ನು ಎಳೆದುಕೊಂಡು ಹೋದರು. ಪರಮಾತ್ಮನು ಸಮರ್ಥನಾದರೂ ಅಸುರರು ಸತ್ಯವಚನವಿಲ್ಲದವರು. ಇಬ್ಬರೂ ಸೇರಿ ಅಮೃತವನ್ನು ಹೊಂದಬೇಕೆಂದು ಮಥನಮಾಡಿದರೂ ತಮಗೇನೇಬೇಕೆಂದು ಅಪಹಾರ ಮಾಡಿದ ಪ್ರಯುಕ್ತ ಅವರ ಅಸತ್ಯ ಲೋಕಕ್ಕೆ ಸ್ಪಷ್ಟವಾಗಲಿ ಎಂಬ ಅಭಿಪ್ರಾಯದಿಂದ ಅಮೃತಕಲಶವನ್ನು ಕೈಬಿಟ್ಟುಬಿಟ್ಟನು. ಇದರಿಂದ ಅಸುರರು ಅಮೃತ ಪಾತ್ರವನ್ನು ಅಪಹಾರ ಮಾಡಿದರು. ಅವರಲ್ಲಿಯೂ ಒಬ್ಬರ ಕೈಯಿಂದ ಮತ್ತೊಬ್ಬರು ಎಳೆದುಕೊಳ್ಳುತ್ತಾ ಜಗಳವಾಡುತ್ತಾ ಇದ್ದರು.

ಆಗ ಪರಮಾತ್ಮನು ದಿವ್ಯಸ್ತ್ರೀರೂಪವನ್ನು ಧರಿಸಿಕೊಂಡು ಬಂದನು. ಅಮೃತನಿಮಿತ್ತವಾಗಿ ಜಗಳವಾಡುತ್ತಾ ಇದ್ದ ಅಸುರರು ಆ ಪರಮಸುಂದರಿಯನ್ನು ನೋಡಿ ಮೋಹಿತರಾಗಿ ಅಮೃತ ಪಾತ್ರವನ್ನು ಆ ಮೋಹಿನಿಯ ಕೈಯಲ್ಲಿ ಕೊಟ್ಟರು. ನಮಗೆ ಸರಿಯಾಗಿ ವಿಭಾಗ ಮಾಡು ಎಂದರು. ಆಗ ಮೋಹಿನಿಯು ನಾನು ಇಚ್ಛಾನುಸಾರವಾಗಿ ವಿಭಾಗ ಮಾಡುವೆನು. ನಿಮಗೆ ಸಮ್ಮತವಾದರೆ ಹೇಳಿರಿ ಎಂದು

ಹೇಳಿದಳು. ಈ ರೀತಿಯಾಗಿ ನಗುತ್ತಾ ಹೇಳಿದ ಮೋಹಿನೀರೂಪಿ ಪರಮಾತ್ಮನ ಮಾತನ್ನು ಕೇಳಿ ಅಸುರರು ಮೋಹಿತರಾಗಿ ಹಾಗೆಯೇ ಆಗಲಿ ಎಂದರು.

ತರುವಾಯ ಮೋಹಿನಿರೂಪಿ ಪರಮಾತ್ಮನು ದೇವತೆಗಳನ್ನೂ, ಅಸುರರನ್ನೂ ಪ್ರತ್ಯೇಕ ಪಂಕ್ತಿಗಳಲ್ಲಿ ಕೂತುಕೊಳ್ಳಿಸಿದನು. ತರುವಾಯ ಮೋಹಿನಿಯು ತನ್ನನ್ನೇ ನೋಡುತ್ತಾ ಇರುವ ಅಸುರರನ್ನು ನೋಡಿ, ನೀವು ಇಷ್ಟು ಜನ ಗಂಡಸರು, ಹೆಂಗಸಾದ ನನ್ನನ್ನೊಬ್ಬಳನ್ನೇ ನೋಡುತ್ತಾ ಇದ್ದರೆ ನನಗೆ ನಾಚಿಕೆಯಾಗುತ್ತದೆ. ಎಲ್ಲರೂ ಕಣ್ಣುಮುಚ್ಚಿರಿ ಎಂದಳು. ಹಾಗೆಯೇ ಎಲ್ಲರೂ ಕಣ್ಣುಮುಚ್ಚಿಕೊಂಡು ತಮ್ಮ ತಮ್ಮ ಸಾಲಿನಲ್ಲಿ ಕೂತಿರಲು 'ಇದೋ! ನಿಮ್ಮ ಹತ್ತಿರ ಈಗಲೇ ಬಂದೆನು' ಎಂದು ಹೇಳುತ್ತಾ ಹೇಳುತ್ತಾ ದೇವತೆಗಳಿಗೆಲ್ಲಾ ಅಮೃತಪಾನವನ್ನು ಮಾಡಿಸಿದಳು. ಆಗ ದೇವತೆಗಳ ಸಾಲಿನಲ್ಲಿ ಕೊನೆಯಲ್ಲಿ ದೇವತೆಗಳ ವೇಷದಿಂದ ಸ್ವರ್ಭಾನು ಎಂಬ ರಾಕ್ಷಸನು ಕೂತಿದ್ದನು. ಅವನು ಸಾವಿರ ಜನ್ಮಗಳಲ್ಲಿ ಅಮೃತವನ್ನು ಕುಡಿಯಬೇಕೆಂದು ತಪಸ್ಸು ಮಾಡಿ ಬ್ರಹ್ಮದೇವರ ವರವನ್ನು ಪಡೆದಿರುವ ಪ್ರಯುಕ್ತ ಸರ್ವಜ್ಞನಾದ ಮೋಹಿನಿರೂಪಿ ಪರಮಾತ್ಮನು ಅವನು ರಾಕ್ಷಸನು ಎಂದು ತಿಳಿದರೂ ಅವನ ಕೈಯಲ್ಲಿ ಅಮೃತಬಿಂದುವನ್ನು ಹಾಕಿದನು. ಆಗ ಚಂದ್ರಸೂರ್ಯರು ಸೂಚನೆ ಮಾಡಿದರು. ಪರಮಾತ್ಮನು ಪುರುಷರೂಪವನ್ನು ಧರಿಸಿ ಸುದರ್ಶನವೆಂದು ಹೆಸರುಳ್ಳ ಚಕ್ರದಿಂದ ಅವನ ತಲೆಯನ್ನು ಕಡಿದನು. ತಲೆಯು ದೇವತೆಗಳಿಂದ ಆವಿಷ್ಟವಾಗಿ ರಾಹು ಎಂಬ ಗ್ರಹವಾಯಿತು. ಮುಂಡವಾದದ್ದು ಶುದ್ಧೋದಕ ಸಮುದ್ರದಲ್ಲಿ ಬಿದ್ದಿತು. ಅದು ಅದ್ಯಾಪಿ ಹಾಗೆಯೇ ಇರುತ್ತದೆ. ತರುವಾಯ ಅಸುರರು ಆಯುಧಗಳನ್ನು ಹಿಡಿದುಕೊಂಡು ಯುದ್ಧಕ್ಕೆ ಬಂದರು. ಭಗವಂತನು ಅವರನ್ನು ಸಂಹರಿಸಿದನು.

ಬ್ರಹ್ಮದೇವರ ವರದಿಂದ ಪರಾಜಯ ರಹಿತನಾದ ಕಲಿಯು ಸರ್ವತ್ರ ವ್ಯಾಪಿಸಿದನು. ಅವನ ಅರ್ಧದೇಹದಿಂದ ಕಲಿಲಕ್ಷ್ಮಿಯು (ಅಲಕ್ಷ್ಮಿಯು) ಅಂದರೆ ಅವನ ಹೆಂಡತಿಯು ಹುಟ್ಟಿದಳು. ದೋಷಗಳ ಅಭಿಮಾನಿಗಳು ಕಲಿಯ ಮಕ್ಕಳಾದರು. ಲಕ್ಷ್ಮೀದೇವಿ ಯರು ಪರಮಾತ್ಮನ ಎದೆಯಲ್ಲಿ ಆಶ್ರಯಿಸಿ ಇದ್ದರು. ಕೌಸ್ತುಭಮಣಿಯನ್ನು ಭಗವಂತನು ಕಂಠದಲ್ಲಿ ಧರಿಸಿದನು. ಆ ಕೌಸ್ತುಭಮಣಿಗೆ ಬ್ರಹ್ಮದೇವರು ಅಭಿಮಾನಿಯು ಮತ್ತು ಅಲ್ಲಿ ಉಂಟಾದ ಪಾರಿಜಾತ ಇತ್ಯಾದಿಗಳನ್ನು ದೇವತೆಗಳಿಗೆ ಭಗವಂತನು ಕೊಟ್ಟನು. ಈರೀತಿಯಾಗಿ ಪರಮಾತ್ಮನು ದೇವತೆಗಳಿಗೆ ಮೋಕ್ಷವನ್ನು ಕೊಡುವೆನು ಎಂದು ತೋರಿಸುವುದಕ್ಕಾಗಿ ಅಮೃತಪಾನವನ್ನು ಮಾಡಿಸಿದನು.

# ರುದ್ರದೇವರು ಮೋಹಿನಿಗೆ ಮೋಹಿತರಾದದ್ದು[1]

ಶ್ರೀಭಗವಂತನು ಮೋಹಿನೀರೂಪದಿಂದ ಅಸುರರನ್ನು ಮೋಹಗೊಳಿಸಿ ದೇವತೆಗಳಿಗೆ ಅಮೃತಪಾನಮಾಡಿಸಿದ ವಿಷಯವನ್ನು ರುದ್ರದೇವರು ಕೇಳಿದರು. ಇಂದ್ರಾದಿದೇವತೆಗಳು ಮಾತ್ರ ಅಮೃತಪಾನಮಾಡಿದ್ದು. ಅವರಿಂದ ಉತ್ತಮರಾದ ರುದ್ರದೇವರೇ ಮೊದಲಾದವರು ಅಮೃತಪಾನಮಾಡಿಲ್ಲ, ಆದುದರಿಂದ ರುದ್ರ ದೇವರು ವಿಷಪಾನಮಾಡಿದ ಮೇಲೆ ಅಲ್ಲಿಂದ ಹೊರಟು ಹೋಗಿದ್ದರು. ಆದಕಾರಣ ರುದ್ರದೇವರು ಭಗವಂತನ ಮೋಹಿನೀರೂಪವನ್ನು ನೋಡಿದ್ದಿಲ್ಲ. ಆ ಮೋಹಿನೀ ರೂಪವನ್ನು ನೋಡಬೇಕೆಂದು ಆಸೆಯಿಂದ ಬಂದಿದ್ದೇನೆ ಎಂದು ಹೇಳಿದರು. ಭಗವಂತನು 'ಅಸುರರು ಅಮೃತಕಲಶವನ್ನು ಅಪಹರಿಸಲು ಅವರಿಗೆ ಕುತೂಹಲ ವನ್ನು ಉಂಟುಮಾಡಲಿಕ್ಕಾಗಿ ನಾನು ಮೋಹಿನೀರೂಪವನ್ನು ಧರಿಸಿದೆನು. ಆರೂಪವು ಸ್ತ್ರೀಯರಿಗೂ ಮೋಹವುಂಟು ಮಾಡತಕ್ಕದ್ದು ಎಂದು ಹೇಳುತ್ತಾ ಮರೆಯಾದನು.

ಈರೀತಿಯಾಗಿ ಭಗವಂತನು ಮರೆಯಾಗಲು, ರುದ್ರದೇವರು ಪರಮಾತ್ಮನು ಎಲ್ಲಿಗೆ ಹೋದನು ಎಂದು ಸುತ್ತಲೂ ನೋಡುತ್ತಾ ನಿಂತರು. ಅಷ್ಟರಲ್ಲಿ ಹತ್ತಿರ ಒಂದು ಸುಂದರವಾದ ಉದ್ಯಾನದಲ್ಲಿ ಹಾಡುಹೇಳುವುದು ಕೇಳಿಸಿತು. ಮಧುರವಾದ ಧ್ವನಿಯನ್ನು ಕೇಳಿ ರುದ್ರದೇವರು ಆ ದಿಕ್ಕಿನಲ್ಲಿ ನೋಡಿದರು. ಅಲ್ಲಿ ಒಬ್ಬಳು ಪರಮಸುಂದರಿಯು ಹಾಡುಹೇಳುತ್ತಾ ಇದ್ದಾಳೆ. ಹಾಡುಹೇಳುತ್ತಾ ಚೆಂಡನ್ನು ಬಡಿಯುತ್ತಾ ಆಡುತ್ತಾ ಇದ್ದಾಳೆ. ರುದ್ರದೇವರು ಆ ಸುಂದರಿಯ ಸೌಂದರ್ಯವನ್ನು ನೋಡಿ ತಾನು ಎಲ್ಲಿದ್ದೇನೆ. ಹತ್ತಿರ ಯಾರು ಇದ್ದಾರೆ? ಎಲ್ಲವನ್ನೂ ಮರೆತರು. ಹತ್ತಿರದಲ್ಲೇ ಪಾರ್ವತಿದೇವಿಯು ಭೂತಗಳೂ ಇದ್ದರೂ ಎಲ್ಲರನ್ನೂ ಬಿಟ್ಟು ಓಡಿದರು. ಆ ಸುಂದರಿಯು ಚೆಂಡು ಆಡುವಾಗ ಗಾಳಿಯು ಬಂದು ಅವಳು ಉಟ್ಟಿರುವ ತೆಳ್ಳಗಿನ ಸೀರೆಯೂ ಹಾರಿ ದೂರಹೋಯಿತು. ಆ ಸುಂದರಿಯ ಸರ್ವಾಂಗವನ್ನು ನೋಡಿ ಹಾಗೆಯೇ ರುದ್ರದೇವರು ಓಡಿದರು. ಆ ಸುಂದರಿಯು ವಸ್ತ್ರವಿಲ್ಲದಿರುವ ಅವಸ್ಥೆಯಲ್ಲಿ ರುದ್ರದೇವರು ಓಡಿಬರುವುದನ್ನು ನೋಡಿ ತಾನೂ ಓಡಿದಳು. ರುದ್ರದೇವರು ಓಡಿಹೋಗಿ ಆ ಸುಂದರಿಯನ್ನು ಹಿಡಿದು ಎರಡು ಕೈಗಳಿಂದ ಕಟ್ಟಿಕೊಂಡರು. ಅಷ್ಟರಲ್ಲಿ ಅವಳು ಆಚೆ ಈಚೆ ಹೊರಳಾಡಿ ಅವರ

1. ಭಾ. VIII ಅ-11

ಕೈಯಿಂದ ತಪ್ಪಿಸಿಕೊಂಡು ಮುಂದೆ ಓಡಿದಳು. ಹಿಂದೆಯೇ ರುದ್ರದೇವರೂ ಓಡಿದರು. ಹಾಗೆ ಕಾಮಮೋಹಿತರಾದ ಅವರ ವೀರ್ಯವು ಕೆಳಗೆ ಬಿದ್ದಿತು. ಅದು ಬಿದ್ದ ಸ್ಥಳಗಳೆಲ್ಲಾ ದೊಡ್ಡ ಕ್ಷೇತ್ರಗಳಾದವು. ಅಲ್ಲಿ ಋಷಿಗಳು ವಾಸಮಾಡಿದರು. ಆ ಸಮಯದಲ್ಲಿ ಆ ಸುಂದರಿಯ ಸ್ಥಾನದಲ್ಲಿ ಚತುರ್ಭುಜವುಳ್ಳ ಪರಮಾತ್ಮನು ನಿಂತಿದ್ದನು. ತರುವಾಯ ಭಗವಂತನು ರುದ್ರದೇವರೊಡನೆ 'ನಿನ್ನನ್ನು ಬಹಳವಾಗಿ ಮೋಹಗೊಳಿಸಿದೆನು. ನೀನು ನನ್ನ ಅನುಗ್ರಹದಿಂದ ನನ್ನ ಬಂಧಶಕ್ತಿಯನ್ನು ಪರಿಹರಿಸಿಕೊಂಡಿರುವಿ' ಇತ್ಯಾದಿ ಹೇಳಿ ಸಮಾಧಾನಪಡಿಸಿದರು. ತರುವಾಯ ರುದ್ರದೇವರು ಭಗವಂತನಿಗೆ ನಮಸ್ಕರಿಸಿ ಪಾರ್ವತಿದೇವಿಯೊಡನೆ ತನ್ನ ಸ್ಥಳಕ್ಕೆ ಹೊರಟುಹೋದರು. ಹೋಗುವಾಗ ಪಾರ್ವತಿದೇವಿಯೊಡನೆ ಶ್ರೀಭಗವಂತನ ಮಹಿಮೆಯನ್ನು ಹೇಳುತ್ತಾ ಹೋದರು.



# ಕಪಿಲದೇವರ ಚರಿತ್ರೆಯು [1]

ಬ್ರಹ್ಮದೇವರ ದೇಹದ ನೆರಳಿನಿಂದ ಕರ್ದಮಪ್ರಜೇಶ್ವರರು ಹುಟ್ಟಿದರು. ಬ್ರಹ್ಮದೇವರು ಮಗನಾದ ಕರ್ದಮರೊಡನೆ ಪ್ರಜೆಗಳನ್ನು ಸೃಷ್ಟಿಮಾಡು ಎಂದು ಆಜ್ಞಾಪಿಸಿದರು. ಕರ್ದಮರು ಸರಸ್ವತೀತೀರದಲ್ಲಿ ಸಾವಿರವರ್ಷಕಾಲ ತಪಸ್ಸು ಮಾಡಿದರು. ಅವರು ತಪಸ್ಸು ಮಾಡಿದ ಸಮಯವು ಕೃತಯುಗವಾಗಿತ್ತು. ಶ್ರೀಭಗವಂತನು ಅವರ ತಪಸ್ಸಿಗೆ ಮೆಚ್ಚಿ ಪ್ರತ್ಯಕ್ಷನಾದನು. ಭಗವಂತನು ಕಿರೀಟ ಕುಂಡಲಾದಿ ಆಭರಣಗಳನ್ನು ಧರಿಸಿಕೊಂಡಿದ್ದನು. ಶಂಖಚಕ್ರಾದಿ ಆಯುಧಧಾರಿ ಯಾಗಿದ್ದನು. ಗರುಡದೇವರ ಮೇಲೆ ಕೂತುಕೊಂಡಿದ್ದನು. ಆಪ್ರಕಾರವಾಗಿ ಆಕಾಶದಲ್ಲಿ ತೋರುತ್ತಿರುವ ಪರಮಾತ್ಮನನ್ನು ನೋಡಿ ಕರ್ದಮರು ಪರಮ ಸಂತೋಷವುಳ್ಳವರಾಗಿ ನೆಲದಮೇಲೆ ಉದ್ದಕ್ಕೆ ನಮಸ್ಕಾರ ಮಾಡಿದರು. ಕೈಮುಗಿದು ಕೊಂಡು ನಾನಾವಿಧವಾಗಿ ಸ್ತೋತ್ರಮಾಡಿ ತಾನು ಯೋಗ್ಯಕನ್ಯೆಯಿಂದ ವಿವಾಹ ವಾಗಲು ಬಯಸುವೆನು ಎಂದು ಸೂಚಿಸಿದರು. ಆಗ ಗರುಡದೇವರ ಮೇಲೆ ಶೋಭಿಸುತ್ತಿದ್ದ ಪರಮಾತ್ಮನು ಮಂದಹಾಸವನ್ನು ಮಾಡುತ್ತಾ 'ನಾನು ನಿನ್ನ ಮನಸ್ಸಿನ ಅಭಿಪ್ರಾಯವನ್ನು ಮೊದಲೇ ತಿಳಿದು ಅದಕ್ಕೆ ಬೇಕಾದ ಏರ್ಪಾಡು ಮಾಡಿದ್ದೇನೆ. ನಿನ್ನಂತಹ ಭಕ್ತರು ಮಾಡಿದ ನನ್ನ ಪೂಜೆಯು ಯಾವಾಗಲೂ ವ್ಯರ್ಥವಾಗಲಾರದು. ಎಲ್ಲಾ ರಾಜರಿಗೂ ಚಕ್ರವರ್ತಿಯಾದ ಬ್ರಹ್ಮಾವರ್ತದಲ್ಲಿ ವಾಸಮಾಡುತ್ತಿರುವ ಸ್ವಾಯಂಭುವ ಮನುವು ನಿನ್ನನ್ನು ನೋಡುವುದಕ್ಕಾಗಿ ನಾಳಿದ್ದು ಬರುವವನಾಗಿ ಸುಂದರಿಯಾದ ತನ್ನ ಮಗಳನ್ನು ನಿನಗೆ ಮದುವೆ ಮಾಡಿಕೊಡುತ್ತಾನೆ. ಅವಳಲ್ಲಿ ನಿನ್ನಿಂದ ಮೊದಲು ಒಂಭತ್ತು ಹೆಣ್ಣುಮಕ್ಕಳು ಹುಟ್ಟುವರು. ಆಮೇಲೆ ನಾನು ನಿನ್ನಲ್ಲಿ ಅವತರಿಸುವೆನು. ನೀನೂ ಸರಿಯಾಗಿ ವೈರಾಗ್ಯವುಳ್ಳವನಾಗಿ ನನ್ನ ಅನುಗ್ರಹದಿಂದ ನನ್ನನ್ನು ಹೊಂದುವಿ' ಈರೀತಿಯಾಗಿ ಹೇಳಿ ಪರಮಾತ್ಮನು ಕರ್ದಮರು ನೋಡುತ್ತಿರುವಂತೆ ಗರುಡದೇವರ ಮೇಲೆ ಕೂತವನಾಗಿಯೇ ಗರುಡದೇವರ ರೆಕ್ಕೆಯಿಂದ ಉಂಟಾಗುವ ಸಾಮಗಾಯನವನ್ನು ಕೇಳುತ್ತಾ ಆ ಬಿಂದುಸರ ಎಂಬ ಸ್ಥಳದಿಂದ ಹೊರಟುಹೋದನು.

ಶ್ರೀಭಗವಂತನು ಹೊರಟುಹೋದ ಮೇಲೆ ಕರ್ದಮರು ದೇವರು ಹೇಳಿದ ಸಮಯವನ್ನು ನಿರೀಕ್ಷಿಸುತ್ತಾ ಬಿಂದು ಸರಸ್ಸಿನಲ್ಲಿಯೇ ಇದ್ದರು. ಸ್ವಾಯಂಭುವ

1.ಭಾ. III. ಅ.22-34

ಮನುವು ಬಂಗಾರದಿಂದ ಅಲಂಕೃತವಾದ ರಥದಲ್ಲಿ ಮಗಳನ್ನು ಹೆಂಡತಿಯನ್ನೂ ಕೂಡಿಸಿಕೊಂಡು ಸಂಚರಿಸುತ್ತಾ ದೇವರು ಹೇಳಿದ ದಿನದಲ್ಲಿಯೇ ಸರಸ್ವತೀನದಿಯ ಬಳಿಯ ಇಲ್ಲಿರುವ ಬಿಂದುಸರಸ್ಸಿಗೆ ಬಂದನು. ಅಲ್ಲಿ ಪೂರ್ವದಲ್ಲಿ ಭಕ್ತನ ಮೇಲಿನ ಪ್ರೇಮದಿಂದ ಪರಮಾತ್ಮನ ಆನಂದಬಾಷ್ಪಗಳ ಬಿಂದುಗಳು ಬಿದ್ದಕಾರಣ ಆ ಸ್ಥಳಕ್ಕೆ ಬಿಂದುಸರಸ್ಸು ಎಂದು ಹೆಸರಾಯಿತು. ಅಲ್ಲಿ ಇರುವ ಕರ್ದಮರ ಆಶ್ರಮಕ್ಕೆ ಮನುವು ಬಂದು ಕರ್ದಮರಿಗೆ ನಮಸ್ಕರಿಸಿದನು. ಕರ್ದಮರು ಮನುವಿಗೆ ಉಚಿತರೀತಿ ಯಿಂದ ಸತ್ಕರಿಸಿದರು. ತಾನು ಮಾಡಿದ ಸತ್ಕಾರವನ್ನು ಸ್ವೀಕರಿಸಿ ಕೂತಿರುವ ಮನುವಿನೊಡನೆ ಕರ್ದಮರು ಭಗವಂತನ ಆಜ್ಞೆಯನ್ನು ಜ್ಞಾಪಿಸಿಕೊಂಡು ಮನುವಿನೊಡನೆ 'ಪೂಜ್ಯರೇ! ನಿಮ್ಮ ಸಂಚಾರವು ಸಜ್ಜನರ ರಕ್ಷಣೆಗಾಗಿಯೂ ಅಸಜ್ಜನರ ಸಂಹಾರಕ್ಕಾಗಿಯೂ ಇರುವುದು. ನಿಮ್ಮಲ್ಲಿ ಪರಮಾತ್ಮನ ಸಾತ್ವಿಕಶಕ್ತಿಯು ಸನ್ನಿಹಿತವಾಗಿರುವುದು. ನೀವು ಈರೀತಿಯಾಗಿ ಸಂಚರಿಸದೆ ಇದ್ದರೆ ದುಷ್ಟರಿಂದ ಧರ್ಮ ಮರ್ಯಾದೆಗಳೆಲ್ಲವೂ ಕೆಟ್ಟು ಹೋಗುವುವು. ಅಧರ್ಮವು ಹೆಚ್ಚುವುದು. ನೀವು ಸುಮ್ಮನೆ ಇದ್ದುಬಿಟ್ಟರೆ ಲೋಕವು ಕಳ್ಳರಿಂದ ತುಂಬಿಹೋಗಿ ನಾಶವನ್ನು ಹೊಂದುವುದು. ಆದರೂ ಪ್ರಕೃತ ನೀವು ಇಲ್ಲಿಗೆ ಬಂದಿರುವ ಕಾರಣವನ್ನು ತಿಳಿಯಬೇಕೆಂದು ಆಸೆಪಡುವೆನು'' ಎಂದು ಹೇಳಿದರು.

ಈರೀತಿಯಾಗಿ ತನ್ನನ್ನು ಸ್ತೋತ್ರ ಮಾಡಿದ್ದನ್ನು ಕೇಳಿ ಸ್ವಾಯಂಭುವ ಮನುವು ಸ್ವಲ್ಪ ಲಜ್ಜೆಯುಳ್ಳವರಾಗಿ 'ಪೂಜ್ಯರೇ! ಬ್ರಹ್ಮ ಎಂದು ಹೆಸರುಳ್ಳ ಭಗವಂತನು ನಮ್ಮಂತಹ ಕ್ಷತ್ರಿಯರನ್ನು ರಕ್ಷಿಸುವುದಕ್ಕಾಗಿ ವೇದಜ್ಞಾನಿಗಳಾದ ತಪಸ್ವಿಗಳಾದ ವಿಷಯಾಸಕ್ತಿರಹಿತರಾದ ನಿಮ್ಮಂತಹ ಬ್ರಾಹ್ಮಣರನ್ನು ಸೃಷ್ಟಿ ಮಾಡಿದನು. ನಿಮ್ಮಂತಹ ಬ್ರಾಹ್ಮಣರ ರಕ್ಷಣೆಗಾಗಿ ತನ್ನ ಸಾವಿರ ಬಾಹುಗಳಿಂದ ಭಗವಂತನು ನಮ್ಮಂತಹ ಕ್ಷತ್ರಿಯರನ್ನು ಸೃಷ್ಟಿಮಾಡಿದನು. ಭಗವಂತನಿಗೆ ಬ್ರಾಹ್ಮಣರು ಅತಿಪ್ರಿಯರು. ಕ್ಷತ್ರಿಯರೂ ಅಂಗದಂತೆ ಇರುವವರು. ಆದುದರಿಂದ ಪರಸ್ಪರವಾಗಿ ಬ್ರಾಹ್ಮಣರನ್ನು ಕ್ಷತ್ರಿಯರೂ, ಕ್ಷತ್ರಿಯರನ್ನು ಬ್ರಾಹ್ಮಣರೂ ರಕ್ಷಿಸುತ್ತಾ ಇದ್ದರೆ ಇಬ್ಬರನ್ನೂ ಭಗವಂತನು ರಕ್ಷಿಸುವನು. ತಮ್ಮನ್ನು ನೋಡಿದ್ದುದರಿಂದಲೇ ನನ್ನ ಮನಸ್ಸಿನಲ್ಲಿ ಇದ್ದ ಸಂದೇಹಗಳೆಲ್ಲವೂ ಪರಿಹೃತಗಳಾದವು. ತಾವೇ ಪ್ರೀತಿಯಿಂದ ಧರ್ಮಗಳನ್ನೆಲ್ಲಾ ಹೇಳೋಣವಾಯಿತು. ಸಾಮಾನ್ಯರಿಂದ ನೋಡಲಿಕ್ಕೆ ಆಗಲಾರದ ತಾವು ನನ್ನ ಅದೃಷ್ಟ ರಿಂದಲೇ ನನಗೆ ಕಾಣಿಸಲ್ಪಟ್ಟಿರಿ. ದೈವೇಚ್ಛೆಯಿಂದಲೇ ತಮ್ಮ ಪಾದಧೂಳಿಯನ್ನು ಶಿರಸ್ಸಿನಲ್ಲಿ ಧರಿಸಿದೆನು. ತಾವು ಪರಮಾನುಗ್ರಹವನ್ನು ಮಾಡೋಣವಾಯಿತು. ತಾವು

ಹೇಳಿದ ಮಾತುಗಳನ್ನೆಲ್ಲಾ ಸರಿಯಾಗಿ ಕೇಳಿದೆನು. ಮಗಳ ಮೇಲಿನ ಸ್ನೇಹದಿಂದ ತುಂಬಾ ಕಷ್ಟಪಟ್ಟಿರುವ ದೀನನಾದ ನಾನು ಹೇಳುವ ಮಾತನ್ನು ತಾವು ಕೃಪೆಯಿಂದ ಕೇಳಬೇಕು. ಇವಳು ನನ್ನ ಮಗಳು ಪ್ರಿಯವ್ರತ ಉತ್ತಾನಪಾದ ಎಂಬ ಇಬ್ಬರಿಗೆ ತಂಗಿಯಾಗಬೇಕು. ಇವಳಿಗೀಗ ಮದುವೆಯ ಕಾಲವು ಪ್ರಾಪ್ತವಾಗಿದೆ. ಇವಳು ಯಾವಾಗ ನಾರದರ ಮುಖದಿಂದ ತಮ್ಮ ಸ್ವಭಾವ ಶಾಸ್ತ್ರಶ್ರವಣರೂಪ ವಯಸ್ಸು ಗುಣ ಇತ್ಯಾದಿಗಳನ್ನು ಕೇಳಿದಳೋ ಆಗಲೇ ನಿಮ್ಮನ್ನು ಮದುವೆಯಾಗಬೇಕೆಂದು ನಿಶ್ಚಯ ಮಾಡುವವಳಾದಳು. ಆದುದರಿಂದ ತಮ್ಮ ಗೃಹಸ್ಥಧರ್ಮಕ್ಕೆ ಸರ್ವಪ್ರಕಾರಗಳಿಂದ ಅನುಕೂಲಳಾಗಿ ಇರುವ ಇವಳನ್ನು ನಾನು ಮದುವೆ ಮಾಡಿಕೊಡುವೆನು. ತಾವು ಅವಶ್ಯವಾಗಿ ಸ್ವೀಕರಿಸಬೇಕು. ತಾವು ವಿವಾಹ ಮಾಡಿಕೊಳ್ಳುವ ಅಭಿಪ್ರಾಯವುಳ್ಳವ ರಾಗಿರುವಿ ಎಂದೂ ಕೇಳಿರುವೆನು. ಆದುದ ರಿಂದ ನನ್ನ ಮಗಳನ್ನು ದಯೆಯಿಂದ ಮದುವೆ ಮಾಡಿಕೊಳ್ಳಬೇಕೆಂದು ಕೇಳಿಕೊಳ್ಳು ತ್ತೇನೆ' ಎಂದು ಹೇಳಿದನು.

ಆದಕ್ಕೆ ಕರ್ದಮರು 'ನೀವು ಹೇಳುವ ಮಾತು ನಿಜ. ನಾನು ಮದುವೆಯಾಗುವ ಅಭಿಪ್ರಾಯದಿಂದ ಇರುವೆನು. ನಿಮ್ಮ ಮಗಳೂ ಪತಿಸೇವೆಯಲ್ಲಿ ಜಾಗರೂಕಳಾಗಿ ಇರುವವಳು. ಆದುದರಿಂದ ನಮಗೆ ಈ ದಿನವೇ ಬ್ರಾಹ್ಮವಿವಾಹ ವಿಧಾನದಿಂದ ಮದುವೆಯಾಗಿ ಬಿಡಲಿ. ವೇದದಲ್ಲಿ ಹೇಳಿರುವ ರೀತಿಯಾಗಿ ನಿಮ್ಮ ಮಗಳಲ್ಲಿ ಹತ್ತು ಮಕ್ಕಳಾಗಲಿ. ಮಹಾಸುಂದರಿಯಾದ ನಿಮ್ಮ ಮಗಳನ್ನು ಯಾರು ಆದರಿಸಲಾರರು? ಪೂರ್ವದಲ್ಲಿ ಅವಳು ಮಹಡಿಯ ಮೇಲೆ ಚೆಂಡಿನಿಂದ ಆಡುತ್ತಿರಲು ಮೇಲೆ ವಿಮಾನದಲ್ಲಿ ಕುಳಿತುಕೊಂಡು ಹೋಗುತ್ತಿದ್ದ ವಿಶ್ವಾವಸು ಎಂಬ ಗಂಧರ್ವನು ಅವಳನ್ನು ನೋಡಿ ಮೋಹಿತನಾಗಿ ವಿಮಾನದಿಂದ ಕೆಳಗೆ ಬಿದ್ದಿರುವನು. ಆದುದರಿಂದ ನಿಮ್ಮ ಮಗಳನ್ನು ನಾನು ಮದುವೆಯಾಗುವೆನು. ಆದರೆ ಹತ್ತು ಮಕ್ಕಳಾಗುವವರೆಗೆ ಅವಳೊಡನೆ ಇರುವೆನು. ಆಮೇಲೆ ಸನ್ಯಾಸಧರ್ಮವನ್ನು ಅನುಷ್ಠಾನ ಮಾಡುವೆನು' ಎಂದು ಹೇಳಿ ಮಂದಹಾಸದಿಂದ ದೇವಹೂತಿಯ ಮನಸ್ಸನ್ನು ಅಪಹರಿಸುತ್ತಾ ಸುಮ್ಮನೆ ಇದ್ದುಬಿಟ್ಟರು.

ತರುವಾಯ ಸ್ವಾಯಂಭುವ ಮನುವು ತನ್ನ ಪತ್ನಿಯ ಮತ್ತು ಮಗಳ ಅಭಿಪ್ರಾಯವನ್ನು ತಿಳಿದುಕೊಂಡು ಸಂತೋಷದಿಂದ ಗುಣವಂತರಾದ ಆ ಕರ್ದಮರಿಗೆ ತನ್ನ ಮಗಳನ್ನು ಮದುವೆ ಮಾಡಿಕೊಟ್ಟನು. ರಾಣಿಯಾದ ಶತರೂಪಾ ದೇವಿಯು ದಂಪತಿಗಳಿಗೆ ಬೇಕಾದ ಪಾತ್ರೆ ಇತ್ಯಾದಿ ಪದಾರ್ಥಗಳನ್ನೆಲ್ಲಾ ಕೊಟ್ಟಳು. ಸ್ವಾಯಂಭುವಮನುವು ಯೋಗ್ಯವರನಿಗೆ ಮಗಳನ್ನು ಕೊಟ್ಟು ಮದುವೆ ಮಾಡಿ

ಆಮೇಲೆ ಅವಳನ್ನು ಬಿಟ್ಟು ಹೋಗಬೇಕಲ್ಲಾ ಎಂಬ ದುಃಖವುಳ್ಳವನಾಗಿ ಅವಳನ್ನು ಎರಡು ಕೈಗಳಿಂದ ಆಲಿಂಗಿಸಿ ಬಿಟ್ಟುಹೋಗಲಿಕ್ಕೇ ಆಗಲಾರದೆ 'ಅಮ್ಮ! ಮಗಳೇ' ಎಂದು ಹೇಳುತ್ತಾ ಕಣ್ಣೀರಿನಿಂದ ಮಗಳ ತಲೆಗೆ ಅಭಿಷೇಕ ಮಾಡುತ್ತಾ ಕರ್ದಮರೊಡನೆ ಅನುಜ್ಞೆಯನ್ನು ಪಡೆದು ಹೆಂಡತಿಯಿಂದಲೂ ಪರಿವಾರದಿಂದಲೂ ಸಹಿತನಾಗಿ ತನ್ನ ರಾಜ್ಯಕ್ಕೆ ಹೋದನು. ಋಷಿಗಳಿಗೆ ಪ್ರಿಯವಾದ ಸರಸ್ವತೀನದಿಯ ಎರಡು ತೀರಗಳಲ್ಲಿಯೂ ಇರುವ ಆಶ್ರಮಗಳನ್ನು ನೋಡುತ್ತಾ ಹೊರಟು ಹೋದನು. ಬ್ರಹ್ಮಾವರ್ತದ ಪ್ರಜೆಗಳೆಲ್ಲರೂ ಅವನು ಬರುತ್ತಿರುವನೆಂದು ಕೇಳಿ ಗಾಯನ ಸ್ತೋತ್ರ ವಾದ್ಯ ಘೋಷಗಳಿಂದ ಎದುರುಗೊಂಡು ಕರಕೊಂಡು ಬಂದರು.

ಸ್ವಾಯಂಭುವ ಮನು ಇರುವ ಸ್ಥಳವು ಬರ್ಹಿಷ್ಮತೀ ಎಂಬ ನಗರವು. ಅದು ಬಹುಸಂಪತ್ತಿನಿಂದ ಯುಕ್ತವಾಗಿದ್ದಿತು. ಪೂರ್ವದಲ್ಲಿ ವರಾಹರೂಪಿಯಾದ ಪರಮಾತ್ಮನು ತನ್ನ ದೇಹವನ್ನು ಝಾಡಿಸುವಾಗ ಕೆಲವು ರೋಮಗಳು ಅಲ್ಲಿ ಬಿದ್ದವು. ಆ ಜ್ಞಾನಾನಂದಾತ್ಮಕ ರೋಮಗಳಿಂದ ದರ್ಭೆಗಳು ಉಂಟಾದವು. ಆ ದರ್ಭೆಗಳಿಂದ ಋಷಿಗಳು ಯಜ್ಞಕ್ಕೆ ವಿಘ್ನಮಾಡುವ ಅಸುರರನ್ನು ಜಯಿಸಿ ಯಜ್ಞವನ್ನು ಮಾಡಿದರು. ದರ್ಭೆಗಳಿಂದ ಕೂಡಿರುವ ಆ ಪಟ್ಟಣದಲ್ಲೇ ಇದ್ದುಕೊಂಡು ಮನುವು ದರ್ಭೆಗಳನ್ನು ಹಾಸಿ ಯಜ್ಞವನ್ನು ಮಾಡಿ ಭಗವಂತನನ್ನು ಆರಾಧಿಸಿ ಅಕ್ಷಯವಾದ ವಿಷ್ಣುಲೋಕವನ್ನು ಪಡೆದರು. ದರ್ಭೆಗಳು ತುಂಬಾ ಇರುವ ಕಾರಣವೇ ಬರ್ಹಿಷ್ಮತೀ ಎಂದು ಹೆಸರುಳ್ಳ ಆ ನಗರದಲ್ಲಿ ಪತ್ನೀಸಹಿತನಾಗಿ ಇದ್ದುಕೊಂಡು ಮನುವು ಪ್ರಜೆಗಳನ್ನು ಪಾಲಿಸುತ್ತಾ ಧರ್ಮಾದಿಗಳಿಗೆ ವಿರೋಧವಿಲ್ಲದಂತೆ ಕಾಮವನ್ನು ಅನುಭವಿಸುತ್ತಿದ್ದನು. ಗಂದರ್ವರೆಲ್ಲರೂ ಸ್ತ್ರೀಯರಿಂದ ಸಹಿತರಾಗಿ ಅವನ ಕೀರ್ತಿಯನ್ನು ಗಾಯನ ಮಾಡುತ್ತಿದ್ದರು. ಪ್ರಾತಃಕಾಲದಲ್ಲಿ ಸ್ನೇಹದಿಂದ ಭಗವತ್ಕಥೆಗಳನ್ನು ಕೇಳುತ್ತಿದ್ದನು. ಪರಮಾತ್ಮನ ಕಥೆಗಳನ್ನು ಕೇಳುತ್ತಾ ಪರಮಾತ್ಮನನ್ನು ಧ್ಯಾನಮಾಡುತ್ತಾ ಪರಮಾತ್ಮನ ಕಥೆಗಳನ್ನು ಹೇಳುತ್ತಾ ಕಾಲವನ್ನೆಲ್ಲಾ ಸಾರ್ಥಕವನ್ನಾಗಿ ಮಾಡಿಕೊಳ್ಳುತ್ತಿದ್ದನು. ಈರೀತಿ ಯಾಗಿ ಪರಮಾತ್ಮನಲ್ಲಿಯೇ ಆಸಕ್ತನಾಗಿ ತನ್ನ ಎಪ್ಪತ್ತೊಂದು ಚತುರ್ಯುಗಗಳನ್ನು ಕಳೆದನು. ಅವನೊಡನೆ ಋಷಿಗಳು ಕೇಳಲು ಧರ್ಮಗಳೆಲ್ಲವನ್ನೂ ಹೇಳಿದನು. ಅವನು ಹೇಳಿದ್ದೇ ಮನುಧರ್ಮಶಾಸ್ತ್ರವಾಯಿತು.

ಇಲ್ಲಿ ಕರ್ದಮರ ಆಶ್ರಮದಲ್ಲಿ ದೇವಹೂತಿಯು ತನ್ನ ತಂದೆತಾಯಿಗಳು ಹೊರಟು ಹೋದಮೇಲೆ ಪತಿಯ ಅಭಿಪ್ರಾಯವನ್ನು ತಿಳಿದುಕೊಂಡು ಪಾರ್ವತೀದೇವಿಯು ರುದ್ರದೇವರನ್ನು ಸೇವಿಸುವಂತೆ, ಪ್ರೀತಿಯಿಂದ ಪತಿಯನ್ನು

ಸೇವಿಸಿದಳು. ಅವಳು ಕಾಮವನ್ನು, ಡಂಭವನ್ನು, ದ್ವೇಷವನ್ನೂ, ಲೋಭವನ್ನೂ, ರಾಜಪುತ್ರಿಯೆಂಬ ಮದವನ್ನು, ಬಿಟ್ಟು ವಿಶ್ವಾಸದಿಂದ ಶುದ್ಧಿಯಿಂದ ಗೌರವದಿಂದ ಇಂದ್ರಿನಿಗ್ರಹದಿಂದ ಮಧುರವಾದ ಮಾತಿನಿಂದ ಸೇವೆಯಿಂದ ಪತಿಯನ್ನು ಸಂತೋಷಪಡಿಸಿದಳು. ಕರ್ದಮರು ತನ್ನನ್ನೇ ಅನುಸರಿಸಿ ಇರುವ ತನ್ನಿಂದಲೇ ಸಮಸ್ತ ಅಭೀಷ್ಟಗಳನ್ನೂ ಹೊಂದಬೇಕೆಂದು ಆಸೆಯಿರುವ ಬಹುಕಾಲ ಸೇವೆಮಾಡಿ ತುಂಬಾ ಕೃಶಳಾಗಿರುವ ದೇವಹೂತಿಯನ್ನು ನೋಡಿ ತುಂಬಾ ಕೃಪೆಯುಳ್ಳವರಾಗಿ 'ಸುಂದರಿ! ನೀನು ಮಾಡಿರುವ ಸೇವೆಯಿಂದ ನಿನ್ನ ಭಕ್ತಿಯಿಂದ ನಾನು ಸಂತುಷ್ಟ ನಾಗಿರುವೆನು. ಜನರಿಗೆಲ್ಲಾ ತಮ್ಮ ದೇಹದ ಮೇಲೆ ವಿಶೇಷವಾದ ಸ್ನೇಹವಿರುವುದು. ಅಂತಹ ದೇಹವನ್ನೂ ಕೂಡ ನೀನು ನನ್ನ ಸೇವೆಗಾಗಿ ಕೃಶವನ್ನಾಗಿ ಮಾಡಿ ಕೊಂಡಿರುವಿ. ಸ್ವಧರ್ಮದಲ್ಲಿ ಆಸಕ್ತನಾದ ನನ್ನ ತಪಸ್ಸು ಸಮಾಧಿಗಳೇ ಮೊದಲಾದ ಸಾಧನಗಳಿಂದ ಉಂಟಾದ ಭಗವದನುಗ್ರಹದಿಂದ ನನಗೆ ಉಂಟಾಗಿರುವ ಭಗವದ್‌ಜ್ಞಾನದ ಪ್ರಭಾವವನ್ನು ನೋಡು. ಸ್ವರ್ಗಾದಿ ಇತರ ಫಲಗಳೆಲ್ಲವೂ ಭಗವಂತನ ಹುಬ್ಬಿನ ವಿಲಾಸದಿಂದ ನಾಶವನ್ನು ಹೊಂದುವುವು. ನನ್ನ ಭಗವದ್ ಜ್ಞಾನ ಸಾಮರ್ಥ್ಯದಿಂದ ಬೇಕಾದ ಫಲಗಳನ್ನು ಅನುಭವಿಸು' ಎಂದು ಹೇಳಿದರು.

ಆದಕ್ಕೆ ದೇವಹೂತಿಯು 'ತಾವು ಹೇಳಿದ ಮಾತೆಲ್ಲವೂ ಸತ್ಯವು ನನಗೆ ತಮ್ಮ ದೇಹದ ಸಂಬಂಧವು ಆಗಬೇಕು. ಪತಿವ್ರತಾಸ್ತ್ರೀಯರಿಗೆ ಗುಣವಂತನಾದ ಪತಿಯ ಸಂಬಂಧವು ಗುಣವಂತನಾದ ಮಗನನ್ನು ಪಡೆಯಲು ಕಾರಣವಾಗುವುದು. ಆದರೆ ದೇಹಸಂಬಂಧದ ವಿಷಯದಲ್ಲಿ ಚಕ್ರವರ್ತಿಯ ಮಗಳಾದ ನನಗೆ ಏನೇನು ಸೌಕರ್ಯವು ಬೇಕೋ ಅದನ್ನೆಲ್ಲಾ ತಾವು ಮಾಡಿಕೊಡಬೇಕು. ಸರಿಯಾದ ಮನೆಯು ಬೇಕು' ಎಂದು ಹೇಳಿದಳು.

ಆಗ ಕರ್ದಮರು ತನ್ನ ಪತ್ನಿಗೆ ಪ್ರಿಯವನ್ನು ಮಾಡುವ ಇಚ್ಛೆಯಿಂದ ಯೋಗಸಾಮರ್ಥ್ಯದಿಂದ ಇಚ್ಛಾನುಸಾರವಾಗಿ ಸಂಚರಿಸುವ ವಿಮಾನವನ್ನು ನಿರ್ಮಿಸಿದರು. ಆದರಲ್ಲಿ ಬೇಕಾದ ಅಭೀಷ್ಟವು ಸಿಗುತ್ತಿತ್ತು. ದಿವ್ಯಸಾಮಗ್ರಿಗಳಿಂದ ಯುಕ್ತವಾಗಿತ್ತು. ಹೂವಿನ ಮಾಲೆಗಳು ಮತ್ತು ರತ್ನ ಇತ್ಯಾದಿ ಸಮಸ್ತಗಳೂ ಇದ್ದವು. ಹಂಸಪಾರಿವಾಳಾದಿ ಪಕ್ಷಿಗಳಿದ್ದವು. ವಿಹಾರಮಾಡುವ ಸ್ಥಳ ಮಲಗುವ ಸ್ಥಳ ಇತ್ಯಾದಿ ಅನೇಕ ಪ್ರದೇಶಗಳಿಂದ ಕೂಡಿದ್ದು. ಈರೀತಿಯಾದ ಮನೆಯನ್ನು ನೋಡಿ ದೇವಹೂತಿಯು ಇಷ್ಟು ದೊಡ್ಡಮನೆಯಲ್ಲಿ ನಾನೊಬ್ಬಳೇ ಇರಬೇಕಲ್ಲಾ! ನನಗೆ ಸಹಾಯಮಾಡಲಿಕ್ಕೆ ದಾಸಿಯರು ಯಾರೂ ಇಲ್ಲವಲ್ಲಾ ಎಂಬ ಅಭಿಪ್ರಾಯದಿಂದ

ಅತಿಪ್ರೀತಿರಹಿತವಾದ ಮನಸ್ಸಿನಿಂದ ನೋಡುತ್ತಿದ್ದಳು. ಅದನ್ನು ನೋಡಿ ಸರ್ವರ ಅಭಿಪ್ರಾಯವನ್ನು ತಿಳಿದವರಾದ ಕರ್ದಮರು 'ಸುಂದರಿ! ಈ ಮಡುವಿನಲ್ಲಿ ಮುಳುಗಿ ಮನೆಯ ಆಕಾಶವುಳ್ಳ ಈ ವಿಮಾನವನ್ನು ಏರು. ಇದು ಜನರ ಅಭೀಷ್ಟಸಿದ್ಧಿಗಾಗಿ ಭಗವಂತನಿಂದ ರಚಿತವಾದ ತೀರ್ಥವಾಗಿರುವುದು' ಎಂದು ಹೇಳಿದರು. ಅದನ್ನು ಕೇಳಿ ದೇವಹೂತಿದೇವಿಯು ಧೂಳಿಯಿಂದ ಯುಕ್ತವಾದ ಸೀರೆಯನ್ನು ಧರಿಸಿಕೊಂಡು ಜಡೆಕಟ್ಟಿ ಹೋದ ಕೂದಲುಗಳನ್ನು ಮಣ್ಣು ಹಿಡಿದು ಹೋದ ಕೃಶವಾದ ದೇಹವನ್ನು ಧರಿಸಿದ್ದವಳು. ಆ ಸರಸ್ವತೀ ನದಿಯ ಮಡುವನ್ನು ಪ್ರವೇಶಿಸಿದಳು. ಅವಳು ಮಡುವಿನ ಒಳಗೆ ಮನೆಯಲ್ಲಿ ಇದ್ದ ಸಾವಿರಸ್ತ್ರೀಯರನ್ನು ನೋಡಿದಳು. ಅವರೆಲ್ಲರೂ ಹದಿನಾರು ವರ್ಷದವರಾಗಿದ್ದರು. ಉತ್ಪಲಪುಷ್ಪದ ವಾಸನೆಯಂತೆ ಅವರ ದೇಹದಿಂದ ವಾಸನೆಯು ಬರುತ್ತಿತ್ತು. ಅವರು ದೇವಹೂತಿಯನ್ನು ನೋಡಿ ಎದ್ದು ನಿಂತವರಾಗಿ ಕೈಮುಗಿದುಕೊಂಡು ನಾವೆಲ್ಲರೂ ನಿನ್ನ ಸೇವಾ ಮಾಡುವ ದಾಸಿಯರು. ನಾವೀಗ ಏನು ಸೇವೆಯಲ್ಲಿ ಮಾಡಲಿ?' ಎಂದರು.

ಆಮೇಲೆ ಅವರು ದೇಹಹೂತಿಗೆ ಮಂಗಳಸ್ನಾನವನ್ನು ಮಾಡಿಸಿದರು. ನಿರ್ಮಲಗಳಾದ ಎರಡು ಪಟ್ಟೆ ಸೀರೆಗಳನ್ನು ಅವಳಿಗೆ ಕೊಟ್ಟರು. ಬೆಲೆಬಾಳುವ ಆಭರಣಗಳಿಂದ ಅಲಂಕರಿಸಿದರು. ಉತ್ತಮವಾಗಿ ಭೋಜನ ಮಾಡಿಸಿದರು. ಅಮೃತದಂತೆ ಇರುವ ಮದ್ಯವನ್ನು ಪಾನಮಾಡಿಸಿದರು. ತರುವಾಯ ದೇವಹೂತಿಯು ಕನ್ನಡಿಯಲ್ಲಿ ತನ್ನ ಸೌಂದರ್ಯವನ್ನು ನೋಡಿಕೊಂಡು ತಾನೀಗ ಪತಿಯ ಸಮೀಪದಲ್ಲಿ ಇರಬೇಕೆಂದು ಯೋಚಿಸಿದಳು. ಆಗಲೇ ತಾನು ತನ್ನ ದಾಸಿಯರಿಂದ ಕೂಡಿಕೊಂಡು ಕರ್ದಮರ ಸಮೀಪದಲ್ಲಿಯೇ ಇದ್ದಳು. ಗಂಡನ ಮುಂಭಾಗದಲ್ಲಿ ಸಾವಿರಾರು ದಾಸಿಯರಿಂದ ಸೇವಿತಳಾದ ತನ್ನನ್ನು ನೋಡಿಕೊಂಡು ಗಂಡನ ಯೋಗಸಾಮರ್ಥ್ಯವನ್ನು ಕುರಿತು ಆಶ್ಚರ್ಯ ಹೊಂದಿದಳು. ತರುವಾಯ ಕರ್ದಮರು ವಿಹಾರ ಮಾಡಬೇಕೆಂದು ದೇವಹೂತಿಯನ್ನು ವಿಮಾನದಲ್ಲಿ ಕೂಡಿಸಿಕೊಂಡರು. ಅಲ್ಲಿ ವಿದ್ಯಾಧರಸ್ತ್ರೀಯರಿಂದ ಉಪಚರಿಸಲ್ಪಟ್ಟವರಾಗಿ ಹದಿನಾರು ವರ್ಷದ ಪ್ರಾಯವುಳ್ಳವರಂತೆ ಇದ್ದುಕೊಂಡು ನಕ್ಷತ್ರಗಳಿಂದ ಶೋಭಿತನಾದ ಚಂದ್ರನಂತೆ ಪ್ರಕಾಶಿಸಿದರು. ಆ ವಿಮಾನದಲ್ಲಿ ಕೂತುಕೊಂಡು ಸಂಚರಿಸುತ್ತಾ ಅಷ್ಟಲೋಕಪಾಲಕರು ವಿಹಾರ ಮಾಡುವ ಒಳ್ಳೇ ಗಾಳಿ ಬೀಸುತ್ತಿರುವ ಗಂಗಾಜಲವು ಬೀಳುವ ಶಬ್ದದಿಂದ ಕೂಡಿರುವ ಕುಲಪರ್ವತಗಳ ಪ್ರದೇಶಗಳಲ್ಲಿ ಸ್ತ್ರೀಯರಿಂದ

ಕೂಡಿಕೊಂಡು ಕುಬೇರನಂತೆ ಬಹುಕಾಲ ವಿಹಾರವನ್ನು ಮಾಡಿದರು. ವೈಸ್ರಂಭಕ ನಂದನ ಪುಷ್ಪಭದ್ರಕ ಮಾನಸ ಚೈತ್ರರಥ ಎಂಬ ವನಗಳಲ್ಲಿ ಪತ್ನಿಯೊಡನೆ ವಿಹಾರವನ್ನು ಮಾಡಿದರು. ಪ್ರಕಾಶಮಾನವಾದ ಇಚ್ಛಾನುಸಾರವಾಗಿ ಸಂಚರಿಸುವ ಮಹತ್ತಾದ ವಿಮಾನದಿಂದ ಸಂಚರಿಸುತ್ತಾ ವಿಮಾನದಲ್ಲಿ ಸಂಚರಿಸುವವರೆಲ್ಲರೂ ಅತಿಕ್ರಮಿಸಿದರು. ಕರ್ದಮರು ವಿಮಾನದಿಂದ ಸಂಚರಿಸುತ್ತಾ ಪತ್ನಿಗೆ ಸಮಸ್ತ ಭೂಮಂಡಲವನ್ನೂ ತೋರಿಸುವವರಾಗಿ ಬಹು ಆಶ್ಚರ್ಯವನ್ನು ತೋರಿಸಿ ತನ್ನ ಆಶ್ರಮಕ್ಕೇ ಬಂದರು. ತಾನು ಯೋಗಸಾಮರ್ಥ್ಯದಿಂದ ಒಂಭತ್ತು ರೂಪಗಳನ್ನು ಧರಿಸಿ ದೇವಹೂತಿಯನ್ನೂ ಒಂಭತ್ತು ರೂಪಧರಿಸುವಂತೆ ಮಾಡಿ ಬಹುವರ್ಷ ಕಾಲವನ್ನು ಒಂದು ಮುಹೂರ್ತದಂತೆ ವಿಹರಿಸಿದರು. ಹದಿನಾರುವರ್ಷ ಪ್ರಾಯದಂತೆ ಇರುವ ತನ್ನ ಗಂಡನೊಡನೆ ಆ ವಿಮಾನದಲ್ಲಿ ಆನಂದವನ್ನು ಅನುಭವಿಸುತ್ತಿದ್ದ ದೇವಹೂತಿಯು ಬಹುಕಾಲ ಹೋದದ್ದನ್ನು ತಿಳಿಯಲೇ ಇಲ್ಲ. ಈರೀತಿಯಾಗಿ ಕಾಮದಲ್ಲಿ ಆಸಕ್ತರಾದ ಆ ದಂಪತಿಗಳು ಯೋಗಸಾಮರ್ಥ್ಯದಿಂದ ವಿಹರಿಸುತ್ತಿರಲು ನೂರುವರ್ಷಗಳು ಕಳೆದವು. ತರುವಾಯ ದೇವಹೂತಿಯು ಗರ್ಭಿಣಿಯಾಗಿ ಒಂಬತ್ತು ಹೆಣ್ಣು ಮಕ್ಕಳನ್ನು ಹಡೆದಳು.

ತರುವಾಯ ದೇವಹೂತಿದೇವಿಯು ಕರ್ದಮರು ಸನ್ಯಾಸವನ್ನು ಸ್ವೀಕರಿಸುವಂತೆ ಇರುವುದನ್ನು ನೋಡಿ ಒಬ್ಬ ಮಗನನ್ನು ಪಡೆಯಬೇಕೆಂಬ ಆಸೆಯುಳ್ಳವಳಾಗಿ ಮುಖವನ್ನು ತಗ್ಗಿಸಿಕೊಂಡು ಪಾದದ ಬೆರಳಿನಿಂದ ಭೂಮಿಯನ್ನು ಕೆರೆಯುತ್ತಾ ಕಣ್ಣಿನಲ್ಲಿ ಬರುವ ನೀರನ್ನು ತಡೆದುಕೊಂಡು ಮೆಲ್ಲನೆ ಕರ್ದಮರೊಡನೆ 'ತಾವು ಪ್ರತಿಜ್ಞೆಮಾಡಿದಂತೆ ಎಲ್ಲಾ ಉಪಕಾರವನ್ನೂ ನನಗೆ ಮಾಡಿದ್ದಾಯಿತು. ಆದರೂ ನನಗೆ ತಾವು ಅಭಯಪ್ರದಾನ ಮಾಡಬೇಕು. ತಮ್ಮ ಹೆಣ್ಣು ಮಕ್ಕಳಿಗೆ ಯೋಗ್ಯವರರನ್ನು ಹುಡುಕಿ ಮದುವೆ ಮಾಡಿಕೊಡಬೇಕು. ತಾವು ಸನ್ಯಾಸವನ್ನು ಸ್ವೀಕರಿಸಿ ವನಕ್ಕೆ ಹೋದಾಗ ನನಗೆ ಶೋಕವನ್ನು ಪರಿಹರಿಸಲಿಕ್ಕೆ ಒಬ್ಬ ಮಗನಿರಬೇಕು. ಇಷ್ಟುಕಾಲ ನಾನು ವ್ಯರ್ಥವಾಗಿ ತಮ್ಮೊಡನೆ ವಿಷಯದಲ್ಲಿಯೇ ಆಸಕ್ತಳಾದೆನು. ಮೋಕ್ಷಕ್ಕೆ ಕಾರಣರಾದ ತಮ್ಮಂತಹ ದೊಡ್ಡವರನ್ನು ಹೊಂದಿಯೂ ಕೂಡ ನಾನು ಸಂಸಾರದಿಂದ ಬಿಡುಗಡೆಗೆ ಬೇಕಾದ ಪ್ರಯತ್ನ ಮಾಡಲಿಲ್ಲ. ನಾನು ನಿಶ್ಚಯವಾಗಿಯೂ ಭಗವಂತನ ಇಚ್ಛೆಯಿಂದ ಮೋಸ ಹೋಗಿದ್ದೇನೆ' ಎಂದು ಹೇಳಿದಳು.

ಈರೀತಿಯಾಗಿ ವೈರಾಗ್ಯದಿಂದ ಮಾತಾಡುತ್ತಿದ್ದ ದೇವಹೂತಿಯನ್ನು ನೋಡಿ ಕರ್ದಮರು ದಯಾವುಳ್ಳವರಾಗಿ ಭಗವಂತನ ಮಾತನ್ನು ಸ್ಮರಿಸಿಕೊಂಡು 'ರಾಜಪುತ್ರಿ!

ಈ ಪ್ರಕಾರವಾಗಿ ನೀನು ಖೇದವನ್ನು ಹೊಂದಬೇಡ. ಭಗವಂತನು ಬೇಗನೆ ನಿನ್ನ ಗರ್ಭವನ್ನು ಹೊಂದುವನು. ನೀನು ಉತ್ತಮವ್ರತವುಳ್ಳವಳಾಗಿರುವಿ. ಶ್ರದ್ಧೆಯಿಂದ ಪರಮಾತ್ಮನನ್ನು ಭಜಿಸು. ನಿನ್ನಿಂದ ಆರಾಧಿತನಾಗಿ ಆ ಪರಮಾತ್ಮನು ನಿನ್ನಿಂದ ಅವತರಿಸಿ ನನ್ನ ಕೀರ್ತಿಯನ್ನು ವಿಸ್ತರಿಸುವವನಾಗಿ ನಿನ್ನ ಅಜ್ಞಾನವನ್ನೂ ಉಪದೇಶದಿಂದ ಪರಿಹರಿಸುವನು' ಎಂದು ಹೇಳಿದರು. ದೇವಹೂತಿಯು ಕರ್ದಮರ ಮೇಲೆ ಗೌರವದಿಂದ ಅವರು ಹೇಳಿದಂತೆ ಭಗವಂತನನ್ನು ಆರಾಧಿಸಿದಳು. ಸ್ವಲ್ಪ ಸಮಯವಾದ ಮೇಲೆ ದೇವಹೂತಿಯಲ್ಲಿ ಭಗವಂತನು ಅವತರಿಸಿದನು. ಆ ಸಮಯದಲ್ಲಿ ಆಕಾಶದಲ್ಲಿ ದೇವತೆಗಳು ವಾದ್ಯಗಳನ್ನು ಬಾರಿಸಿದರು. ಮೇಘಗಳು ಗರ್ಜನೆ ಮಾಡಿದವು. ಗಂಧರ್ವರು ಗಾಯನ ಮಾಡಿದರು. ಅಪ್ಸರಸ್ತ್ರೀಯರು ನರ್ತನ ಮಾಡಿದರು. ದೇವತೆಗಳು ಸುರಿಸಿದ ಪುಷ್ಪದ ಮಳೆಗಳು ಬಿದ್ದವು. ದಿಕ್ಕುಗಳೆಲ್ಲವೂ ನಿರ್ಮಲವಾಗಿ ಇದ್ದವು. ಎಲ್ಲಾ ನದ್ಯಾದಿಗಳ ನೀರು ನಿರ್ಮಲ ವಾಗಿತ್ತು. ಸಜ್ಜನರ ಮನಸ್ಸು ನಿರ್ಮಲವಾಗಿ ಇದ್ದಿತು. ಸುತ್ತಲೂ ಸರಸ್ವತೀನದಿಯಿಂದ ಕೂಡಿದ ಆ ಕರ್ದಮರ ಆಶ್ರಮಕ್ಕೆ ಬ್ರಹ್ಮದೇವರು ಮರೀಚಿಯೇ ಮೊದಲಾದ ಋಷಿಗಳಿಂದ ಸಹಿತರಾಗಿ ಬಂದರು. ಇಪ್ಪತ್ತನಾಲ್ಕು ತತ್ವಗಳ ಸ್ವರೂಪವನ್ನು ಸಜ್ಜನರಿಗೆ ತಿಳಿಸುವುದಕ್ಕಾಗಿ ಭಗವಂತನೇ ಅವತರಿಸಿರುವನು ಎಂದು ತಿಳಿದ ಬ್ರಹ್ಮದೇವರು ಭಗವಂತನು ಮಾಡಲಿಕ್ಕೆ ಹೊರಟ ಕಾರ್ಯವನ್ನು ಮನಸ್ಸಿನಲ್ಲಿಯೇ ಪ್ರಶಂಸ ಮಾಡುತ್ತಾ ಸಂತೋಷವುಳ್ಳವರಾಗಿ ಕರ್ದಮರೊಡನೆ 'ಮಗ! ನೀನು ನನ್ನ ಆಜ್ಞೆಯಂತೆ ನಡೆದವನಾದ ಕಾರಣ ಸರಿಯಾಗಿ ನನಗೆ ಪೂಜೆಯನ್ನು ಮಾಡಿದಿ. ತಂದೆಯು ಒಂದು ಮಾತನ್ನು ಹೇಳಿದರೆ ಮಕ್ಕಳು ಗೌರವದಿಂದ ಹಾಗೆಯೇ ಆಗಲಿ ಎಂದು ಅಂಗೀಕರಿಸಬೇಕು. ಇದೇ ಮಕ್ಕಳು ತಂದೆಗೆ ಮಾಡುವ ಪೂಜೆಯು. ನಿನ್ನ ಈ ಹೆಣ್ಣುಮಕ್ಕಳು ಪತಿವ್ರತೆಯರು. ಸುಂದರಿಯರು. ಇವರು ಸೃಷ್ಟಿಯ ವಿಸ್ತಾರಕ್ಕೆ ಕಾರಣರಾಗುವರು. ಆದುದರಿಂದ ಇವರು ಮರೀಚಿಯೇ ಮೊದಲಾದ ಋಷಿಗಳಿಗೆ ನಿನ್ನ ಇಷ್ಟದಂತೆ ಮದುವೆ ಮಾಡಿಕೊಡು. ನಿನ್ನ ಕೀರ್ತಿಯನ್ನು ಲೋಕದಲ್ಲಿ ವಿಸ್ತಾರ ಮಾಡಿಕೊಳ್ಳುವವನಾಗು. ಆದಿಪುರುಷನಾದ ಪೂರ್ಣಷಡ್ಗುಣನಾದ ಎಲ್ಲರಿಗೂ ಆಶ್ರಯನಾದ ಪರಮಾತ್ಮನು ಕಪಿಲ ಎಂಬ ಹೆಸರಿನಿಂದ ಅವತರಿಸಿರುವುದನ್ನು ನಾನು ತಿಳಿದಿರುವೆನು. ಈ ಭಗವಂತನು ಸಾಮಾನ್ಯಜ್ಞಾನ ವಿಶೇಷಜ್ಞಾನಗಳಿಂದ ಕರ್ಮಸ್ವರೂಪವನ್ನು ಉದ್ಧರಿಸುವವನಾಗಿ ಕಾಲಕ್ರಮದಿಂದ ಮರೆಯಾಗಿರುವ ಸಾಂಖ್ಯಶಾಸ್ತ್ರವನ್ನು ಅಸುರಿಯೆಂಬ ಶಿಷ್ಯನಿಗೆ ಹೇಳುವನು. ಮನುಪುತ್ರಿಯಾದ

ದೇವಹೂತಿಯೇ! ನಿನ್ನ ಗರ್ಭದಿಂದ ಅವತರಿಸಿದ ಭಗವಂತನು ನಿನಗೆ ತತ್ತ್ವೋಪದೇಶವನ್ನು ಮಾಡಿ ಅಜ್ಞಾನವನ್ನು ಪರಿಹರಿಸಿ ಭೂಮಿಯಲ್ಲಿ ಸಂಚಾರ ಮಾಡುವನು. ಈ ಮಹಾನುಭಾವನು ಸಿದ್ಧರಿಗೆ ಅಧೀಶ್ವರನು. ಅಂದರೆ ಮುಕ್ತರಿಗೆ ಸ್ವಾಮಿಯು. ತಾನು ಸಾಂಖ್ಯಶಾಸ್ತ್ರವನ್ನು ಮಾಡಿ ಅದನ್ನು ಪ್ರಚಾರ ಮಾಡುವ ಆಚಾರ್ಯರಿಗೆ ಪರಮಗುರುವೆಂದು ಸಮ್ಮತನಾಗುವನು. ಲೋಕದಲ್ಲಿ ದೇವರು ಇಲ್ಲ ಎನ್ನುವ ನಿರೀಶ್ವರಸಾಂಖ್ಯಶಾಸ್ತ್ರಕ್ಕಿಂತ ಬೇರೆಯಾದ ಪರಮಾತ್ಮನ ಸರ್ವೋತ್ತಮತ್ವವನ್ನು ಪ್ರತಿಪಾದನ ಮಾಡುವ ಪರಮಸಾಂಖ್ಯಶಾಸ್ತ್ರವನ್ನು ಮಾಡಿ ನಿನ್ನ ಕೀರ್ತಿಯನ್ನು ಹೆಚ್ಚಿಸುವನು. ಲೋಕದಲ್ಲಿ ಕಪಿಲ ಎಂದು ಹೆಸರಿನಿಂದ ಪ್ರಸಿದ್ಧಿಯನ್ನು ಹೊಂದುವನು' ಎಂದು ಹೇಳಿ ಕರ್ದಮದೇವಹೂತಿಯರನ್ನು ಸಮಾಧಾನಪಡಿಸಿ ನಾರದರಿಂದ ಕೂಡಿಕೊಂಡು ಸನಕಾದಿ ತನ್ನ ಮಕ್ಕಳಿಂದಲೂ ಕೂಡಿಕೊಂಡು ತನ್ನ ಸ್ಥಾನಕ್ಕೆ ಹೊರಟುಹೋದರು.

ಬ್ರಹ್ಮದೇವರು ಹೊರಟುಹೋದ ಮೇಲೆ ಕರ್ದಮ ಪ್ರಜೇಶ್ವರರು ಮರೀಚಿ ಋಷಿಗಳಿಗೆ ಕಲಾ ಎಂಬ ಮಗಳನ್ನು ಅತ್ರಿಋಷಿಗಳಿಗೆ ಅನುಸೂಯೆಯನ್ನೂ, ಅಂಗೀರಋಷಿಗಳಿಗೆ ಶ್ರದ್ಧೆಯನ್ನೂ, ಪುಲಸ್ತ್ಯರಿಗೆ ಹವಿರ್ಭೂವನ್ನೂ, ಪುಲಹರಿಗೆ ಗತಿಯನ್ನೂ, ಕ್ರತುಋಷಿಗಳಿಗೆ ಕ್ರಿಯೆಯನ್ನೂ, ಭೃಗುಋಷಿಗಳಿಗೆ ಖ್ಯಾತಿಯನ್ನೂ, ವಸಿಷ್ಠರಿಗೆ ಅರುಂಧತಿಯನ್ನೂ, ಅಥರ್ವಋಷಿಗಳಿಗೆ ಶಾಂತಿಯನ್ನೂ ಕೊಟ್ಟು ಮದುವೆ ಮಾಡಿದರು. ಅಳಿಯಂದಿರಿಗೆ ಬೇಕಾದ ಸತ್ಕಾರವನ್ನು ಮಾಡಿದರು. ಅವರೆಲ್ಲರೂ ಕರ್ದಮರ ಅನುಮತಿಯನ್ನು ಪಡೆದು ಪತ್ನಿಯರನ್ನು ಕರೆದುಕೊಂಡು ಸಂತೋಷದಿಂದ ತಮ್ಮ ಆಶ್ರಮಕ್ಕೆ ಹೋದರು.

ತರುವಾಯ ಕರ್ದಮರು ಏಕಾಂತದಲ್ಲಿ ಕಪಿಲ ಭಗವಂತನ ಬಳಿಗೆ ಹೋಗಿ ನಮಸ್ಕರಿಸಿ ಸ್ತೋತ್ರಮಾಡಿ ತಾನು ಸನ್ಯಾಸವನ್ನು ಸ್ವೀಕರಿಸಿ ಭಗವದಾರಾಧನೆಯನ್ನು ಮಾಡುತ್ತಿರುವೆನು ಎಂದು ಪ್ರಾರ್ಥಿಸಲು ಕಪಿಲದೇವರು ಅವರಿಗೆ ಅನುಜ್ಞೆಯನ್ನು ತಾನು ತಾಯಿಗೆ ತತ್ತ್ವೋಪದೇಶವನ್ನು ಮಾಡಿ ತಾಯಿಯನ್ನು ಉದ್ಧಾರ ಮಾಡುವೆನೆಂದೂ ಹೇಳಿದರು. ಕರ್ದಮರು ಭಗವಂತನ ಅನುಮತಿಯಿಂದ ಸನ್ಯಾಸವನ್ನು ಸ್ವೀಕರಿಸಿ ವನವನ್ನು ಪ್ರವೇಶಿಸಿ ಸಂಚರಿಸುತ್ತಾ ಪರಮಾತ್ಮನಲ್ಲಿ ವಿಶೇಷವಾದ ಭಕ್ತಿಯನ್ನು ಮಾಡಿ ಭಗವಂತನನ್ನೇ ಹೊಂದಿದರು.

ಕರ್ದಮರು ಹೊರಟುಹೋದಮೇಲೆ ಒಂದು ದಿನದಲ್ಲಿ ದೇವಹೂತಿಯು ಬ್ರಹ್ಮದೇವರು ಹೇಳಿದ ಮಾತನ್ನು ಸ್ಮರಿಸಿಕೊಂಡು ಕಪಿಲದೇವರು ಕೂತಿದ್ದಲ್ಲಿಗೆ

ಬಂದು ತನಗೆ ತತ್ತ್ವೋಪದೇಶವನ್ನು ಮಾಡಿ ಅಜ್ಞಾನವನ್ನು ಪರಿಹರಿಸಬೇಕೆಂದು ಕೇಳಿಕೊಂಡಳು. ಆಗ ಕಪಿಲದೇವರು ಅವಳಿಗೆ 'ಮನಸ್ಸನ್ನು ನಿಗ್ರಹಿಸುವುದು ಅವಶ್ಯ. ಸಜ್ಜನರ ಸಹವಾಸವು ಮುಖ್ಯಸಾಧನವು' ಎಂದು ಹೇಳಿ ಸಜ್ಜನರ ಲಕ್ಷಣವನ್ನು, ಭಕ್ತಿಯ ಲಕ್ಷಣವನ್ನು, ಜಗತ್ತಿನ ಸೃಷ್ಟಿಯ ಕ್ರಮವನ್ನೂ, ತತ್ತ್ವಾಭಿಮಾನಿದೇವತೆಗಳ ವಿವಾದದಿಂದ ವಾಯುದೇವರ ಉತ್ತಮತ್ವವು ವ್ಯಕ್ತವಾದ ವಿಷಯವನ್ನೂ, ವೈರಾಗ್ಯದ ಆವಶ್ಯಕತೆಯನ್ನು, ಭಗವಂತನ ಪಾದವನ್ನು ಆರಂಭಿಸಿ ಧ್ಯಾನಮಾಡುವ ಕ್ರಮವನ್ನೂ ತಾರತಮ್ಯಜ್ಞಾನದ ಆವಶ್ಯಕತೆಯನ್ನು ತತ್ವಗಳ ಲಕ್ಷಣವನ್ನೂ, ವೈರಾಗ್ಯಕ್ಕಾಗಿ ಪುರುಷನು ಸಂಸಾರದಲ್ಲಿ ಹೊಂದುವ ದುಃಖವನ್ನೂ ಗರ್ಭವಾಸ ದುಃಖವನ್ನೂ, ದೇವಯಾನ ಪಿತೃಯಾನ ಮಾರ್ಗದಿಂದ ಹೋಗುವ ಕ್ರಮವನ್ನು ವಿಸ್ತಾರವಾಗಿ ಉಪದೇಶಿಸಿ ದೇವಹೂತಿದೇವಿಯಿಂದ ಸ್ತೋತ್ರ ಮಾಡಲ್ಪಟ್ಟವನಾಗಿ ಅವಳಿಂದ ಅನುಮತಿಯನ್ನು ಪಡೆದು ಹೊರಟುಹೋದರು. ಅವರು ಪೂರ್ವೋತ್ತರ ದಿಕ್ಕಿಗೆ ಹೋದರು. ಅವರನ್ನು ಸಿದ್ಧರೂ ಚಾರಣರೂ ಗಂಧರ್ವರೂ ಅಪ್ಸರಸ್ತ್ರೀಯರೂ ಸ್ತೋತ್ರ ಮಾಡಿದರು. ಸಮುದ್ರರಾಜನು ಪೂಜೆಯನ್ನು ಮಾಡಿ ವಾಸಮಾಡಲಿಕ್ಕೆ ಸ್ಥಾನವನ್ನು ಕೊಟ್ಟನು. ಲೋಕದ ಮಂಗಳಕ್ಕಾಗಿ ಕಪಿಲದೇವರು ಸಮುದ್ರರಾಜನು ಕೊಟ್ಟ ಸ್ಥಳದಲ್ಲಿ ಸಾಂಖ್ಯಾಚಾರ್ಯರಿಂದ ಸ್ತೋತ್ರ ಮಾಡಲ್ಪಡುತ್ತಾ ಇರತಕ್ಕವರಾದರು. ದೇವಹೂತಿದೇವಿಯರು ಕಪಿಲದೇವರು ಹೊರಟುಹೋದ ಕಾರಣ ಸ್ವಲ್ಪ ದುಃಖವುಳ್ಳವಳಾದಳು. ಆದರೂ ಅವರು ಉಪದೇಶ ಮಾಡಿದಂತೆ ಭಗವಂತನನ್ನು ಧ್ಯಾನಮಾಡಿ ಪರಮಾತ್ಮನನ್ನೇ ಹೊಂದಿದರು. ದೇವಹೂತಿಯು ತಪಸ್ಸು ಮಾಡಿ ಸಿದ್ಧಿಯನ್ನು ಹೊಂದಿದ ಆ ಸ್ಥಳವು ಸಿದ್ಧಕ್ಷೇತ್ರವೆಂದು ಪ್ರಸಿದ್ಧವಾಯಿತು. ಅವಳ ದೇಹವು ಕಪಿಲಾ ಎಂಬ ನದಿಯಾಗಿ ಹರಿದುಕೊಂಡು ಹೋಯಿತು.



# ರಾಮಾಶ್ವಮೇಧ [1]

## ಸುಬಾಹುರಾಜನ ಯುದ್ಧ

### ಪ್ರತಾಪಾಗ್ರ್ಯನ ಪರಾಜಯ

ರಾಮದೇವರ ಅಶ್ವಮೇಧಯಾಗದ ಕುದುರೆಯು ಭೂಮಿಯಲ್ಲಿ ವಾಯುವೇಗದಿಂದ ಸಂಚರಿಸುತ್ತಾ ಚಕ್ರನಗರಿಗೆ ಹೋಯಿತು. ಅಲ್ಲಿಗೆ ಸುಬಾಹುವೆಂಬ ರಾಜನಿದ್ದನು. ಅವನ ಮಗನಾದ ದಮನನು ಮೃಗಬೇಟೆಗೆ ಬಂದಿದ್ದನು. ಅವನು ಹಣೆಯಲ್ಲಿ ಪತ್ರಿಕೆಯನ್ನು ಧರಿಸಿದ್ದ ಆ ಕುದುರೆಯನ್ನು ನೋಡಿದನು. ಸೇವಕನೊಡನೆ ಆ ಕುದುರೆಯನ್ನು ಹತ್ತಿರಕ್ಕೆ ತರಲಿಕ್ಕೆ ಹೇಳಿದನು. ಸೇವಕನು ಅದರ ಕೂದಲಿನಲ್ಲಿ ಹಿಡಿದುಕೊಂಡು ಕರಕೊಂಡು ಬಂದು ರಾಜಪುತ್ರನ ಮುಂದೆ ನಿಲ್ಲಿಸಿದನು. ರಾಜಪುತ್ರನು ಕುದುರೆಯ ಹಣೆಯಲ್ಲಿ ಬರೆದಿದ್ದನ್ನು ಓದಿದನು. 'ರಾಮನೊಬ್ಬನೇ ಧನುರ್ಧಾರಿಯಾ? ನಾವು ಕ್ಷತ್ರಿಯರಲ್ಲವಾ? ನನ್ನ ತಂದೆಯು ಭೂಮಿಯಲ್ಲಿ ಇರುತ್ತಿರುವಾಗ ಏನು ಧೈರ್ಯವು? ಗರ್ವದ ಫಲವನ್ನು ನಾನು ಬಿಟ್ಟ ಬಾಣಗಳಿಂದ ಹೊಂದುವನು. ಭಟರೆಲ್ಲರೂ ನನ್ನ ನೂರಾರು ಬಾಣಗಳನ್ನು ನೋಡಲಿ. ಭಯಂಕರವಾದ ಯುದ್ಧವು ನಡೆಯಲಿ'. ಈಪ್ರಕಾರವಾಗಿ ರಾಜಪುತ್ರನಾದ ದಮನನು ಹೇಳಿ ಕುದುರೆಯನ್ನು ಸಂತೋಷದಿಂದ ಊರಿಗೆ ಕಳುಹಿಸಿದನು. ಸೇನಾಪತಿಯೊಡನೆ ಸೈನ್ಯವನ್ನು ಸಿದ್ಧಪಡಿಸಲಿಕ್ಕೆ ಹೇಳಿದನು.

ಅಷ್ಟರಲ್ಲಿ ಕುದುರೆಯ ಹಿಂದೆ ರಕ್ಷಣ ಮಾಡುವವರು. 'ಎಲ್ಲಿ ಕುದುರೆಯು? ಎಲ್ಲಿ ಕುದುರೆಯು?' ಎಂದು ಹೇಳುತ್ತಾ ಬಂದರು. ಅಷ್ಟರಲ್ಲಿಯೇ ಪ್ರತಾಪಾಗ್ರ್ಯನು ಮುಂದೆ ಸಿದ್ಧವಾಗಿ ನಿಂತಿದ್ದ ವೀರರ ಕೋಲಾಹಲದಿಂದ ಯುಕ್ತವಾದ ಸೈನ್ಯವನ್ನು ನೋಡಿದನು. ಆಗ ಕುದುರೆಯ ರಕ್ಷಕರು ದೂರದಲ್ಲಿ ಇದ್ದ ದಮನನನ್ನು ತೋರಿಸಿ 'ಇವನೇ ಕುದುರೆಯನ್ನು ಅಪಹರಿಸಿರಬೇಕು. ಇಲ್ಲದಿದ್ದರೆ ಇಷ್ಟು ಸೈನ್ಯ ಸಹಿತವಾಗಿ ಇಲ್ಲಿ ಏಕೆ ನಿಂತಿರುವನು?' ಎಂದು ಹೇಳಿದರು. ಅದನ್ನು ಕೇಳಿ ಪ್ರತಾಪಾಗ್ರ್ಯನು ತನ್ನ ಸೇವಕನನ್ನು ಕಳುಹಿಸಿದನು. ಅವನು ಹೋಗಿ 'ರಾಮದೇವರ ಕುದುರೆಯನ್ನು ಯಾರು ಅಪಹರಿಸಿದನು? ಯಾವ ದುರ್ಬುದ್ಧಿಯುಳ್ಳವನು ರಾಮದೇವರನ್ನು ತಿಳಿಯದೆ ಇರುವನು? ಯಾವ ರಾಮದೇವರಿಗೆ ರುದ್ರದೇವರೇ ಮೊದಲಾದ

1. ಪ.ಪು.ಪಾಂ. ಖಂ. ಅ-23

ದೇವತೆಗಳ ಪೂಜೆಯನ್ನು ಮಾಡುವರು' ಇತ್ಯಾದಿ ಮಾತುಗಳನ್ನು ಹೇಳಲು ಆ ದಮನನು ಅವನನ್ನು ಮಾತುಗಳಿಂದ ಧಿಕ್ಕರಿಸಿದನು. 'ನಾನು ಯಾಗದ ಕುದುರೆಯನ್ನು ಅಪಹರಿಸಿರುವೆನು. ಯಾರು ಶೂರರಿರುವರೋ ಅವರು ಬಂದು ನನ್ನಿಂದ ಕುದುರೆಯನ್ನು ಬಿಡಿಸಲಿ' ಎಂದು ಹೇಳಿದನು. ಸೇವಕನು ಆ ಮಾತನ್ನು ಕೇಳಿ ಹಾಗೆಯೇ ಪ್ರತಾಪಾಗ್ರ್ಯನೊಡನೆ ತಿಳಿಸಿದನು.

ಅದನ್ನು ಕೇಳಿ ಮಹಾಬಲಿಷ್ಠನಾದ ಪ್ರತಾಪಾಗ್ರ್ಯನು ರೋಷದಿಂದ ಕೆಂಪಾದ ಕಣ್ಣುಳ್ಳವನಾಗಿ ರಥದಲ್ಲಿ ಕೂತುಕೊಂಡು ಯುದ್ಧಕ್ಕೆ ಹೋದನು. ಸೈನಿಕರಿಗೆ ಭಯಂಕರವಾದ ಯುದ್ಧವು ನಡೆಯಿತು. ಅನೇಕರು ಸತ್ತರು. ಪ್ರತಾಪಾಗ್ರ್ಯನು ಸಾರಥಿಯೊಡನೆ ದಮನನಿದ್ದಲ್ಲಿಗೆ ರಥವನ್ನು ಓಡಿಸಲಿಕ್ಕೆ ಹೇಳಿದನು. ಅಲ್ಲಿಗೆ ಹೋಗಿ ಪ್ರತಾಪಾಗ್ರ್ಯನು ಯುದ್ಧದಲ್ಲಿ ಉದ್ಯುಕ್ತನಾದ ರಾಜಪುತ್ರನಾದ ದಮನನನ್ನು ಯುದ್ಧಕ್ಕೆ ಕರೆದನು. 'ಬಾಲಕನೇ! ರಾಮದೇವರ ಕುದುರೆಯನ್ನು ಕಟ್ಟಿಹಾಕಿರುವಿ. ಅವರ ಸಾಮರ್ಥ್ಯವನ್ನು ನೀನು ತಿಳಿಯಲಿಲ್ಲ. ಅವರ ಪ್ರತಾಪವನ್ನು ದೈತ್ಯಶ್ರೇಷ್ಠನಾದ ರಾವಣನೇ ಸಹಿಸಲಿಕ್ಕೆ ಸಮರ್ಥನಾಗಲಿಲ್ಲ. ಅಂತಹವರ ಕುದುರೆಯನ್ನು ತೆಗೆದು ಕೊಂಡು ಊರಿಗೆ ಹೋಗಿರುವಿ. ನಾನು ಯಮನ ರೂಪದಿಂದ ಬಂದಿರುವೆನೆಂದು ತಿಳಿ. ಹುಡುಗನೇ! ಕುದುರೆಯ ಬಿಟ್ಟುಬಿಡುವವನಾಗಿ ಆಟವಾಡುತ್ತಾ ಇರು. ನೀನು ಯಾರ ಮಗನು? ಎಲ್ಲಿ ಇರುವವನು? ನಿನಗೆ ಯಾಕೆ ಹೀಗೆ ದೀರ್ಘಾಲೋಚನೆ ಯಿಲ್ಲದೆ ಹೋಯಿತು? ಹುಡುಗನಾದ ನಿನ್ನನ್ನು ನೋಡಿ ನನಗೆ ದಯೆಯುಂಟಾಗು ತ್ತದೆ' ಎಂದು ಹೇಳಿದನು.

ಆ ಮಾತನ್ನು ಕೇಳಿ ದಮನನು ಮಂದಹಾಸವನ್ನು ಮಾಡಿದನು. ಪ್ರತಾಪಾಗ್ರ್ಯನನ್ನು ತೃಣಪ್ರಾಯನನ್ನಾಗಿ ಮಾಡುತ್ತಾ 'ನಾನೇ ಕುದುರೆಯನ್ನು ಕಟ್ಟಿರುವೆನು. ಊರಿಗೆ ಕಳುಹಿಸಿರುವೆನು. ನಾನು ದೇಹದಲ್ಲಿ ಪ್ರಾಣವಿರುವವರೆಗೆ ಕುದುರೆಯನ್ನು ಬಿಟ್ಟುಕೊಡಲಾರೆನು. ಯುದ್ಧವನ್ನು ಮಾಡು. ನನ್ನನ್ನು ಹುಡುಗನು ಆಟವಾಡು ಎಂದು ಹೇಳಿದಿಯಲ್ಲಾ! ಯುದ್ಧದಲ್ಲಿ ಆಟವಾಡುವುದನ್ನು ನೋಡು ಎಂದು ಹೇಳಿದನು. ತರುವಾಯ ಇಬ್ಬರಿಗೂ ಭಯಂಕರವಾದ ಯುದ್ಧವು ನಡೆಯಿತು. ಕೊನೆಗೆ ಪ್ರತಾಪಾಗ್ರ್ಯನು ಸಾವಿರಾರು ಬಾಣಗಳನ್ನು ಬಿಡುತ್ತಾ ದಮನನ ರಥವನ್ನು ಪುಡಿಮಾಡಿದನು. ನಾಲ್ಕು ಬಾಣಗಳಿಂದ ನಾಲ್ಕು ಕುದುರೆಗಳನ್ನು ಕೊಂದನು. ಎರಡು ಬಾಣಗಳಿಂದ ಧ್ವಜವನ್ನು ಬೀಳಿಸಿದನು. ಒಂದು ಬಾಣದಿಂದ ಸಾರಥಿಯ ತಲೆಯನ್ನು ಕಡಿದುಹಾಕಿದನು. ನಾಲ್ಕು ಬಾಣಗಳಿಂದ ದಮನವನ್ನೇ

ಬಡಿದನು. ಆಗಲೇ ದಮನನು ಬೇರೊಂದು ಧನುಸ್ಸನ್ನು ತೆಗೆದುಕೊಂಡು ಬೇರೊಂದು ರಥವನ್ನು ಏರಿದವನಾಗಿ 'ನನ್ನ ಪರಾಕ್ರಮವನ್ನು ನೋಡು' ಎಂದು ಹೇಳುವವನಾಗಿ ನಾಲ್ಕುಬಾಣಗಳಿಂದ ನಾಲ್ಕು ಕುದುರೆಗಳನ್ನು ಸಂಹರಿಸಿದನು. ನಾಲ್ಕು ಬಾಣಗಳಿಂದ ರಥವನ್ನು ಪುಡಿಪುಡಿ ಮಾಡಿ ಒಂದು ಬಾಣವನ್ನು ಸಾರಥಿಗೆ ಬಿಟ್ಟು ಮತ್ತೊಂದು ಬಾಣವನ್ನು ಪ್ರತಾಪಾಗ್ರ್ಯನ ಎದೆಗೇ ಬಿಟ್ಟನು. ಗಟ್ಟಿಯಾಗಿ ಶಂಖವನ್ನು ಊದಿದನು. ಎಲ್ಲಾ ವೀರರೂ ಅವನು ಮಾಡಿದ ಕರ್ಮವನ್ನು ನೋಡಿ 'ಸರಿ. ಸರಿ' ಎಂದು ಪ್ರಶಂಸಿಸಿದರು.

ಈಪ್ರಕಾರವಾದ ದಮನನ ಪರಾಕ್ರಮವನ್ನು ನೋಡಿ ಪ್ರತಾಪಾಗ್ರ್ಯನು ರೋಷವುಳ್ಳವನಾಗಿ ಬೇರೊಂದು ರಥದಲ್ಲಿ ಕೂತುಕೊಂಡು ರಾಜಪುತ್ರನೊಡನೆ ಯುದ್ಧಕ್ಕೆ ಹೋದನು. ದಮನನ ಮೈಯ ಮೇಲೆ ಎಲ್ಲಾ ಬಾಣಗಳನ್ನು ಬಿಟ್ಟನು. ಆಗ ದಮನನು ರೋಷದಿಂದ ಅಸ್ತ್ರಶಸ್ತ್ರಗಳನ್ನು ಕತ್ತರಿಸಿ ಕಣ್ಣುಕೆಂಪಗೆ ಮಾಡಿಕೊಂಡು ಅನೇಕ ಬಾಣಗಳನ್ನು ಬಿಟ್ಟನು. 'ನೀನು ಶೂರನಾಗಿದ್ದರೆ ನನ್ನ ಒಂದು ಬಾಣವನ್ನು ಸಹಿಸಿಕೊ. ನಾನು ಈ ಬಾಣದಿಂದ ನಿನ್ನನ್ನು ಕೆಳಗೆ ಬೀಳಿಸದೆ ಇದ್ದರೆ ನಾನು ಪ್ರತಿಜ್ಞೆಯನ್ನು ಮಾಡುವುದನ್ನು ಕೇಳು. ಯಾವ ಮನುಷ್ಯರು ಕುಯುಕ್ತಿಗಳಲ್ಲಿ ಆಸಕ್ತರಾಗಿ ವೇದವನ್ನು ನಿಂದಿಸುವರೋ ಅವರಿಗೆ ಬರುವ ನರಕಕ್ಕೆ ಕಾರಣವಾದ ಮಹಾಪಾಪವು ನನಗೆ ಬರಲಿ' ಎಂದು ಹೇಳಿ ಯಮನಂತೆ ಇರುವ ಜ್ವಾಲಾಮಾಲೆ ಯಿಂದ ಕೂಡಿರುವ ತೀಕ್ಷ್ಣವಾದ ಬಾಣವನ್ನು ಪ್ರತಾಪಾಗ್ರ್ಯನ ಎದೆಯನ್ನು ಗುರಿನೋಡಿಬಿಟ್ಟನು. ಪ್ರದಾಪಾಗ್ರ್ಯನು ತನ್ನ ಬಳಿಗೆ ಬರುತ್ತಿರುವ ಬಾಣವನ್ನು ನೋಡಿ ಅದನ್ನು ಕತ್ತರಿಸುವುದಕ್ಕಾಗಿ ಅನೇಕ ಬಾಣಗಳನ್ನು ಬಿಟ್ಟನು. ದಮನನು ಬಿಟ್ಟ ಬಾಣವು ಆ ಎಲ್ಲಾ ಬಾಣಗಳನ್ನೂ ಕತ್ತರಿಸುತ್ತಾ ಬೇಗನೇ ಬಂದು ಪ್ರತಾಪಾಗ್ರ್ಯನ ಎದೆಯೊಳಗೆ ಪ್ರವೇಶಿಸಿತು. ಮೂರ್ಛಿತನಾಗಿ ಪ್ರತಾಪಾಗ್ರ್ಯನು ಕೆಳಗೆ ಬಿದ್ದನು. ಸಾರಥಿಯು ಮೂರ್ಛಿತನಾದ ಅವನನ್ನು ರಥದಲ್ಲಿ ಹಾಕಿಕೊಂಡು ಶತ್ರುಘ್ನನಿದ್ದಲ್ಲಿಗೆ ಕರೆದುಕೊಂಡು ಹೋದನು. ದಮನನು ಈರೀತಿ ಪ್ರತಾಪಾಗ್ರ್ಯನನ್ನು ಜಯಿಸಿ ಶತ್ರುಘ್ನನನ್ನು ಎದುರುನೋಡುತ್ತಾ ಇದ್ದನು.



# ಸುಬಾಹುರಾಜನ ಯುದ್ಧ ದಮನನ ಪರಾಜಯ[1]

## (ರಾಮಾಶ್ವಮೇಧ)

ಪ್ರತಾಪಾಗ್ರ್ಯನು ಮೂರ್ಛಿತನಾಗಿ ಬಂದದ್ದನ್ನು ನೋಡಿ ಶತ್ರುಘ್ನನಿಗೆ ಬಹಳ ಕೋಪವು ಬಂದಿತು. ಹಲ್ಲನ್ನು ಕಡಿಯುತ್ತಾ ತುಟಿಯನ್ನು ನೆಕ್ಕುತ್ತಾ ಪುನಃ ಪುನಃ 'ಯಾರು ನನ್ನ ಕುದುರೆಯನ್ನು ತೆಗೆದುಕೊಂಡು ಹೋದರು? ಶೂರಶಿರೋಮಣಿ ಯಾದ ಪ್ರತಾಪಾಗ್ರ್ಯನನ್ನು ಯಾರು ಜಯಿಸಿದರು?' ಎಂದು ಕೇಳಿದನು. ಆಗ ಸೇವಕರು 'ಸುಬಾಹುರಾಜನ ಮಗನಾದ ದಮನನೆಂಬುವನು ಪ್ರತಾಪಾಗ್ರ್ಯನನ್ನು ಜಯಿಸಿದನು. ಕುದುರೆಯನ್ನು ಅಪಹರಿಸಿದನು' ಎಂದು ಹೇಳಿದರು. ಅದನ್ನು ಕೇಳಿ ಶತ್ರುಘ್ನನು ವೇಗದಿಂದ ಯುದ್ಧರಂಗಕ್ಕೆ ನಡೆದನು. ಅಲ್ಲಿ ಪರ್ವತಾಕಾರವಾಗಿ ಸತ್ತುಬಿದ್ದಿದ್ದ ಆನೆ ಕುದುರೆ ಇತ್ಯಾದಿಗಳನ್ನು ನೋಡಿದನು. ಅತ್ಯಂತ ಕೋಪಿಸಿ ಕೊಂಡನು. ತನ್ನ ಸೈನ್ಯವನ್ನು ಅಲಕ್ಷ್ಯಮಾಡಿ ಸೈನ್ಯಸಹಿತವಾಗಿ ನಿಂತಿದ್ದ ಕುದುರೆಯನ್ನು ಅಪಹರಿಸಿದ್ದ ದಮನನ್ನು ನೋಡಿ ಕೋಪವುಳ್ಳವನಾಗಿ 'ನಮ್ಮಲ್ಲಿ ಯಾರು ದಮನನನ್ನು ಜಯಿಸುವರು? ಯುದ್ಧಕರ್ಮದಲ್ಲಿ ಪಂಡಿತನಾದ ಈ ರಾಜಪುತ್ರನನ್ನು ಯಾರು ಜಯಿಸುವರೋ ಅವರು ಯುದ್ಧಕ್ಕೆ ಸಿದ್ಧರಾಗಿರಿ' ಎಂದು ಹೇಳಿದನು.

ಆ ಮಾತನ್ನು ಕೇಳಿ ಪರಾಕ್ರಮಶಾಲಿಯಾದ ಪುಷ್ಕಲನು ದಮನನನ್ನು ಜಯಿಸಲಿಕ್ಕೆ ಉದ್ಯುಕ್ತನಾಗಿ 'ಸ್ವಾಮಿ! ಈ ದಮನನು ಎಷ್ಟರವನು? ಈ ಅಲ್ಪವಾದ ಬಲವು ಎಷ್ಟರದ್ದು? ನಾನು ಇವನನ್ನು ಜಯಿಸುವೆನು. ಶ್ರೀರಾಮಚಂದ್ರದೇವರ ಪ್ರತಾಪವು ಸರ್ವಕಾರ್ಯವನ್ನು ಸಾಧಿಸುವುದು. ನಾನು ಮಾಡುವ ಪ್ರತಿಜ್ಞೆಯನ್ನು ಕೇಳಬೇಕು. ಯುದ್ಧದಲ್ಲಿ ಪಂಡಿತನಾದ ದಮನನನ್ನು ನಾನು ಜಯಿಸದೆ ಇದ್ದರೆ ಶ್ರೀರಾಮಚಂದ್ರದೇವರ ಪಾದಕಮಲದ ಮಹಿಮೆಯನ್ನು ಕೇಳದೆ ಇದ್ದವರಿಗೆ ಏನು ಪಾಪವು ಬರುವುದೋ ಆ ಪಾಪವು ಬರಲಿ. ಪುತ್ರನು ತಾಯಿಗಿಂತಲೂ ಪವಿತ್ರವಾದ ವಸ್ತುವಿದೆಯೆಂದು ಭಾವಿಸಿಕೊಂಡು ತಾಯಿಯೊಡನೆ ಜಗಳವನ್ನು ಮಾಡುವನೋ ಅವನಿಗೆ ಬರುವ ಪಾಪವು ನನಗೆ ಬರಲಿ' ಎಂದು ಹೇಳಿದನು. ಈರೀತಿಯಾದ ಪುಷ್ಕಲನ ಮಾತನ್ನು ಕೇಳಿ ಶತ್ರುಘ್ನನು ಸಂತೋಷವುಳ್ಳವನಾಗಿ ಅವನನ್ನು ಯುದ್ಧಕ್ಕೆ ಆಜ್ಞಾಪಿಸಿದನು. ತರುವಾಯ ಪುಷ್ಕಲನು ಬಹುಸೈನಿಕರಿಂದ ಸಹಿತನಾಗಿ ದಮನನು ಇದ್ದಲ್ಲಿಗೆ ಹೋದನು. ದಮನನು ಬರುತ್ತಿದ್ದ ಪುಷ್ಕಲನನ್ನು ನೋಡಿ ತನ್ನ ಸೈನ್ಯಸಹಿತನಾಗಿ ತಾನೂ ಯುದ್ಧಕ್ಕೆ ಎದುರಾಗಿ ಬಂದನು. ಇಬ್ಬರೂ ಒಟ್ಟಿಗೆ

ಸೇರಿದರು. ಪುಷ್ಕಲನು ದಮನನೊಡನೆ 'ರಾಜಪುತ್ರನಾದ ದಮನನೇ! ನಾನು ಪ್ರತಿಜ್ಞೆಯನ್ನು ಮಾಡಿ ನಿನ್ನೊಡನೆ ಯುದ್ಧಕ್ಕೆ ಬಂದಿರುವೆನೆಂದು ತಿಳಿ. ನಾನು ಭರತನ ಮಗನು. ಪುಷ್ಕಲ ಎಂಬ ಹೆಸರುಳ್ಳವನು. ರಾಮಚಂದ್ರರ ಪಾದಕಮಲವನ್ನು ಯಾವಾಗಲೂ ಸೇವಿಸುವವನು. ನಿನ್ನನ್ನು ನಾನು ಅಸ್ತ್ರಶಸ್ತ್ರಗಳಿಂದ ಜಯಿಸುವೆನು. ನೀನು ಸಿದ್ಧನಾಗಿರು' ಎಂದು ಹೇಳಿದನು.

ಈರೀತಿಯಾದ ಮಾತನ್ನು ಕೇಳಿ ದಮನನು ಭಯವಿಲ್ಲದೆ 'ನಾನು ಸುಬಾಹುರಾಜನ, ಮಗನಾದ ದಮನನು. ಪಿತೃಭಕ್ತಿಯಿಂದ ಪಾಪವನ್ನು ಪರಿಹರಿಸಿಕೊಂಡವನು. ಶತ್ರುಘ್ನರಾಜನ ಕುದುರೆಯನ್ನು ನಾನೇ ಅಪಹಾರ ಮಾಡಿದವನೆಂದು ತಿಳಿಯುವವನಾಗು. ಯಾರಿಗೆ ದೈವೇಚ್ಛೆಯಿದೆಯೋ ಅವರಿಗೆ ಜಯವಾಗುವುದು. ಆದರೆ ಯುದ್ಧರಂಗದಲ್ಲಿ ನನ್ನ ಸಾಮರ್ಥ್ಯವನ್ನು ನೋಡು' ಎಂದು ಹೇಳಿ ಬಾಣಗಳನ್ನು ಬಿಟ್ಟನು. ಇಬ್ಬರಿಗೂ ಭಯಂಕರವಾದ ಯುದ್ಧವು ನಡೆಯಿತು. ಪುಷ್ಕಲನು ಅಗ್ನ್ಯಸ್ತ್ರವನ್ನು ಬಿಟ್ಟು ಪರಸೈನ್ಯವನ್ನು ಸುಟ್ಟನು. ಅದನ್ನು ನೋಡಿ ದಮನನು ಅಗ್ನಿಯನ್ನು ಶಾಂತಮಾಡುವುದಕ್ಕಾಗಿ ವಾರುಣಾಸ್ತ್ರವನ್ನು ಬಿಟ್ಟನು. ಆದರಿಂದ ಶತ್ರುಸೈನ್ಯವನ್ನು ನೀರಿನಿಂದ ತೇಲಿಸಿದನು. ಅಗ್ನಿಯು ಆರಿಹೋಯಿತು. ಶತ್ರುಸೈನಿಕರೆಲ್ಲರೂ ಛಳಿಯಿಂದ ನಡುಗಿದರು. ಅದನ್ನು ನೋಡಿ ಪುಷ್ಕಲನು ಕೋಪದಿಂದ ವಾಯವ್ಯಾಸ್ತ್ರವನ್ನು ಬಿಟ್ಟನು. ಅದರಿಂದ ದೊಡ್ಡಗಾಳಿಯು ಉಂಟಾಗಿ ನೀರನ್ನು ಸುರಿಸುತ್ತಾ ಇದ್ದ ಮೇಘಗಳನ್ನೆಲ್ಲಾ ಓಡಿಸಿಬಿಟ್ಟಿತು. ಶತ್ರುಪಕ್ಷ ದವರೆಲ್ಲರೂ ಗಾಳಿಗೆ ಬಿದ್ದರು. ಅದನ್ನು ನೋಡಿ ದಮನನು ಪರ್ವತಾಸ್ತ್ರವನ್ನು ಬಿಟ್ಟನು. ಅದರಿಂದ ಗಾಳಿಯು ನಿಂತುಹೋಯಿತು. ಎಲ್ಲರಮೇಲೆ ಪರ್ವತಗಳು ಬೀಳತೊಡಗಿದವು. ಆಗ ಪುಷ್ಕಲನು ವಜ್ರಾಸ್ತ್ರವನ್ನು ಬಿಟ್ಟನು. ಅದರಿಂದ ಪರ್ವತಗಳೆಲ್ಲವೂ ಪುಡಿಪುಡಿ ಯಾದವು. ಮತ್ತೂ ಆ ವಜ್ರಾಸ್ತ್ರವು ಹೋಗಿ ದಮನನ ಎದೆಗೆ ಬಿದ್ದಿತು. ಅದರಿಂದ ವೀರನಾದ ದಮನನು ಮೂರ್ಛೆಯನ್ನು ಹೊಂದಿ ಬಿದ್ದನು. ಸಾರಥಿಯು ಮೂರ್ಛಿತನಾದ ಅವನನ್ನು ಯುದ್ಧರಂಗದಿಂದ ಕರೆದು ಕೊಂಡು ಹೋದನು.

ತರುವಾಯ ದಮನನ ಕಡೆಯ ಸೈನಿಕರ ಸೈನಿಕರು ಓಡಿಹೋದರು. ಸುಬಾಹುರಾಜನ ಬಳಿಗೆ ಹೋಗಿ ದಮನನು ಮೂರ್ಛೆಯನ್ನು ಹೊಂದಿದ ವಿಷಯವನ್ನು ಹೇಳಿದರು. ಈರೀತಿಯಾಗಿ ಪುಷ್ಕಲನು ಯುದ್ಧರಂಗದಲ್ಲಿ ಜಯವನ್ನು ಹೊಂದಿದನು. ರಾಮದೇವರ ಮಾತನ್ನು ಸ್ಮರಿಸಿಕೊಂಡು ಓಡಿಹೋಗು ತ್ತಿದ್ದ ಸೈನಿಕರನ್ನು ಸಂಹರಿಸಲಿಲ್ಲ. ಜಯಶೀಲನಾದ ಪುಷ್ಕಲನನ್ನು ನೋಡಿ ವಾದ್ಯ

ಬಾರಿಸಿದರು. ಜಯಜಯವೆಂದರು. ಸಾಧು ಸಾಧು ಎಂದರು. ಶತ್ರುಘ್ನನು ಜಯವನ್ನು ಹೊಂದಿದ ಪುಷ್ಕಲನನ್ನು ನೋಡಿ ಸಂತೋಷವನ್ನು ಹೊಂದಿದನು. ಅವನನ್ನು ಹೊಗಳಿದನು.



## ಸುಬಾಹುರಾಜನು ಯುದ್ಧಕ್ಕೆ ಬಂದದ್ದು [1]

ಸುಬಾಹುರಾಜನು ಮೈಯೆಲ್ಲಾ ರಕ್ತವನ್ನು ಮಾಡಿಕೊಂಡು ಬಂದಿರುವ ಸೈನಿಕರನ್ನು ನೋಡಿ ದುಃಖವನ್ನು ಹೊಂದಿದನು. ಮಗನ ವಿಷಯವನ್ನು ಕೇಳಿದನು. 'ದಮನನ ವೃತ್ತಾಂತವನ್ನು ಹೇಳಿರಿ. ಅವನು ಹೇಗೆ ಕುದುರೆಯನ್ನು ಅಪಹರಿಸಿದನು? ಎಷ್ಟು ಜನರು ಯುದ್ಧಕ್ಕೆ ಬಂದಿದ್ದರು?' ಎಲ್ಲಾ ವಿಷಯವನ್ನು ಹೇಳಿರಿ'' ಎಂದು ಕೇಳಿದನು. ಆಗ ಅವರು 'ರಾಜನೇ! ಹಣೆಯಲ್ಲಿ ಪತ್ರದಿಂದ ಸಹಿತವಾದ ಕುದುರೆಯನ್ನು ನೋಡಿ ನಿಮ್ಮ ಮಗನು ಕುದುರೆಯನ್ನು ಕಟ್ಟಿಸಿದನು. ತರುವಾಯ ಅಲ್ಪಸೈನ್ಯದಿಂದ ಸಹಿತನಾಗಿ ಆ ಕುದುರೆಯನ್ನು ರಕ್ಷಿಸುವವನೊಬ್ಬನು ಯುದ್ಧಕ್ಕೆ ಬಂದನು. ಅವನೊಡನೆ ಭಯಂಕರವಾದ ಯುದ್ಧವು ನಡೆಯಿತು. ನಿಮ್ಮ ಮಗನ ಬಾಣಗಳಿಂದ ಅವನು ಮೂರ್ಛಿತನಾದನು. ಇಷ್ಟರಲ್ಲಿ ಸೈನ್ಯಸಹಿತನಾಗಿ ಶತ್ರುಘ್ನನು ಬಂದನು. ಆಮೇಲೆ ಭಯಂಕರವಾದ ಯುದ್ಧವು ನಡೆಯಿತು. ತಮ್ಮ ಮಗನು ಬಹಳವಾಗಿ ಜಯವನ್ನು ಹೊಂದಿದನು. ಈಗ ಮಾತ್ರ ಮೂರ್ಛಿತನಾಗಿ ಬಿದ್ದಿರುವನು' ಎಂದು ಹೇಳಿದರು.

ಇದನ್ನು ಕೇಳಿ ರಾಜನಿಗೆ ರೋಷ ಶೋಕಗಳುಂಟಾದವು. ಸ್ವಲ್ಪ ಹೊತ್ತು ಏನು ಮಾಡಬೇಕೆಂದು ತೋರಲಿಲ್ಲ. ಆಮೇಲೆ ರೋಷದಿಂದ ತುಟಿಯನ್ನು ನಡುಗಿಸುತ್ತಾ ಹಲ್ಲುಗಳನ್ನು ಕಡಿಯುತ್ತಾ ಸೇನಾಪತಿಯೊಡನೆ 'ಸೇನಾಪತಿಯೇ! ನನ್ನ ಸೈನ್ಯವನ್ನು ಸಿದ್ಧಪಡಿಸು. ನನ್ನ ಮಗನನ್ನು ಹಿಂಸಿಸಿರುವ ರಾಮನ ಭಟರೊಡನೆ ನಾನೀಗ ಯುದ್ಧಮಾಡುವೆನು. ನನ್ನ ಮಗನಿಗೆ ದುಃಖವುಂಟು ಮಾಡಿದವನನ್ನು ರುದ್ರದೇವರೇ ರಕ್ಷಣೆ ಮಾಡಿದರೂ ನಾನು ಸೀಳಿಹಾಕುವೆನು' ಎಂದು ಹೇಳಿದನು. ಸೇನಾಪತಿಯು ಹಾಗೆಯೇ ಸೈನ್ಯವನ್ನು ಸಿದ್ಧಪಡಿಸಿದನು. ಸೈನ್ಯವು ಸಿದ್ಧವಾಗಿದೆಯೆಂದು ತಿಳಿಸಿದನು. ಸುಬಾಹುವು ಸೈನ್ಯಸಹಿತನಾಗಿ ಶತ್ರುಘ್ನನಿದ್ದಲ್ಲಿಗೆ ಯುದ್ಧಕ್ಕಾಗಿ ಹೋದನು. ಆನೆ ಕುದುರೆ ರಥ ಮೊದಲಾದ ಅವನ ಸೈನ್ಯವು ಬರುವಾಗ ಭೂಮಿಯೇ ನಡುಗಿತು. ಸುಬಾಹುರಾಜನು ಬಂಗಾರದ ರಥದಲ್ಲಿ ಕೂತುಕೊಂಡು ಯುದ್ಧಕ್ಕೆ ಹೊರಟದ್ದನ್ನು

ನೋಡಿ ಗದಾಯುದ್ಧದಲ್ಲಿ ಪಂಡಿತನಾದ ಅವನ ತಮ್ಮನಾದ ಸುಕೇತುವು ರಥದಲ್ಲಿ ಕೂತುಕೊಂಡು ಹೋದನು.

ಆದೇರೀತಿಯಾಗಿ ಸುಬಾಹುವಿನ ಮಗನಾದ ಸರ್ವಯುದ್ಧದಲ್ಲಿಯೂ ಪಂಡಿತನಾದ ಚಿತ್ರಾಂಗನು ರಥದಲ್ಲಿ ಕೂತುಕೊಂಡು ಯುದ್ಧಕ್ಕೆ ಹೋದನು. ತರುವಾಯ ಅವನ ತಮ್ಮನಾದ ವಿಚಿತ್ರನೂ ಯುದ್ಧಕ್ಕೆ ಹೋದನು. ಇತರ ಪರಾಕ್ರಮಶಾಲಿಗಳೂ ಯುದ್ಧಕ್ಕೆ ಹೋದರು ರಾಜನಾದ ಸುಬಾಹುವು ರೋಷದಿಂದ ಯುದ್ಧರಂಗಕ್ಕೆ ಹೋದನು. ಬಾಣದಿಂದ ಮೂರ್ಛಿತ ರಥದ ಮೇಲೆ ಬಿದ್ದಿರುವ ತನ್ನ ಮಗನಾದ ದಮನನ್ನು ನೋಡಿ ಬಹಳ ದುಃಖವನ್ನು ಹೊಂದಿದನು. ಮೈಮೇಲೆ ನೀರನ್ನು ಹಾಕಿ ಗಾಳಿ ಹಾಕಿದನು. ಮೆಲ್ಲನೆ ದಮನನು ಮೂರ್ಛೆಯಿಂದ ಎದ್ದನು. 'ನನ್ನ ಧನುಸ್ಸು ಎಲ್ಲಿ? ಆ ಪುಷ್ಕಲನು ಎಲ್ಲಿ? ನನ್ನ ಬಾಣದಿಂದ ಗಾಯವುಳ್ಳವನಾಗಿ ಯುದ್ಧರಂಗವನ್ನು ಬಿಟ್ಟು ಎಲ್ಲಿಗೆ ಹೋದನು?' ಎಂದು ಹೇಳುತ್ತಲೇ ಎದ್ದನು. ಮಗನನ್ನು ಆಲಿಂಗಿಸಿದನು. ದಮನನು ತಂದೆಯನ್ನು ನೋಡಿ ಕಾಲಿಗೆ ಬಿದ್ದು ನಮಸ್ಕರಿಸಿದನು. ರಾಜನು ಮಗನನ್ನು ರಥದಲ್ಲಿ ಕೂತುಕೊಳ್ಳಿಸಿ ಸೇನಾಪತಿಯೊಡನೆ ವ್ಯೂಹವನ್ನು ಮಾಡಲಿಕ್ಕೆ ಹೇಳಿದನು. ಅವನು ಕ್ರೌಂಚವ್ಯೂಹವನ್ನು ಮಾಡಿದನು. ವ್ಯೂಹದ ಮುಖದಲ್ಲಿ ಸುಕೇತುವು ನಿಂತಿದ್ದನು. ಎರಡೂ ಪಾರ್ಶ್ವದಲ್ಲಿ ಇಬ್ಬರು ರಾಜಪುತ್ರರೂ, ಹಿಂದಿನ ಪಾರ್ಶ್ವದಲ್ಲಿ ರಾಜನೇ ನಿಂತಿದ್ದನು. ಮಧ್ಯದಲ್ಲಿ ಮಹಾ ಸೈನ್ಯವು ನಿಂತಿದ್ದಿತು. ರಾಜನು ಆ ವ್ಯೂಹವನ್ನು ನೋಡಿ ಶತ್ರುಘ್ನನ ಸೈನ್ಯದೊಡನೆ ಯುದ್ಧ ಮಾಡಲಿಕ್ಕೆ ಅಭಿಪ್ರಾಯಪಟ್ಟನು.



## ಸುಕೇತು ಲಕ್ಷ್ಮೀನಿಧಿಗಳ ಯುದ್ಧ[1]

ಶತ್ರುಘ್ನನು ಭಯಂಕರವಾದ ಸುಬಾಹುವಿನ ಸೈನ್ಯವನ್ನು ನೋಡಿ ಸುಮತಿಯೊಡನೆ 'ಸುಮತಿಯೇ! ಈಗ ಯಾರ ನಗರಕ್ಕೆ ನಮ್ಮ ಕುದುರೆಯು ಬಂದಿರುತ್ತದೆ? ಸಮುದ್ರದಂತೆ ಬರುತ್ತಿರುವ ಈ ಸೈನ್ಯವು ಯಾರದ್ದು? ಎಲ್ಲವನ್ನೂ ತಿಳಿಸು. ಎಲ್ಲವನ್ನೂ ತಿಳಿದಮೇಲೆ ಯುದ್ಧಕ್ಕಾಗಿ ನಮ್ಮ ಭಟರನ್ನು ಕಳುಹಿಸುವೆನು' ಎಂದು ಹೇಳಿದನು. ಸುಮತಿಯು 'ಇದು ಚಕ್ರಾಂಕ ನಗರಿಯು. ಇಲ್ಲಿ ವಿಷ್ಣುಭಕ್ತಿಯಿಂದ ಪಾಪರಹಿತರಾದ

1. ಪ.ಪು.ಪಾ.ಖಂ. ಅ–26

ಜನರು ಇರುವರು. ಈ ನಗರದ ರಾಜನಾದ ಸುಬಾಹು ಎಂಬುವನು ಮಕ್ಕಳು ಮೊಮ್ಮಕ್ಕಳಿಂದ ಕೂಡಿಕೊಂಡು ನಿಮ್ಮ ಮುಂಭಾಗದಲ್ಲಿ ಪ್ರಕಾಶಿಸುತ್ತಿರುವನು. ಇವನು ತನ್ನ ಸ್ತ್ರೀಯಲ್ಲೇ ಆಸಕ್ತನಾಗಿರುವನು. ಇನ್ನೊಬ್ಬರ ಸ್ತ್ರೀಯರನ್ನು ನೋಡುವವನಲ್ಲ. ಯಾವಾಗಲೂ ಪರಮಾತ್ಮನ ಕಥೆಯನ್ನು ಕೇಳುತ್ತಿರುವನು. ಪ್ರಜೆಗಳ ಸೊತ್ತನ್ನು ಆರನೇ ಒಂದು ಭಾಗಕ್ಕಿಂತ ಹೆಚ್ಚಾಗಿ ಸ್ವೀಕರಿಸುವುದಿಲ್ಲ. ಬ್ರಾಹ್ಮಣರನ್ನು ಪರಮಾತ್ಮನ ಮೇಲಿನ ಭಕ್ತಿಯಿಂದ ಪೂಜೆ ಮಾಡುವನು. ಇವನು ಸ್ವಧರ್ಮದಲ್ಲಿ ಆಸಕ್ತನು. ಪರಧರ್ಮವನ್ನು ಅನುಸರಿಸುವವನಲ್ಲ. ಇವನ ಬಲಕ್ಕೆ ಸಮಾನವಾದ ಬಲವು ಇನ್ನು ಯಾರಿಗೂ ಇಲ್ಲ. ಇವನು ತನ್ನ ಮಗನು ಮೂರ್ಛಿತನಾಗಿ ಬಿದ್ದದ್ದನ್ನು ಕೇಳಿ ರೋಷಶೋಕವುಳ್ಳವನಾಗಿ ಚತುರಂಗಸೈನ್ಯಸಹಿತನಾಗಿ ಯುದ್ಧಕ್ಕೆ ಬಂದಿರುವನು. ನಿನ್ನ ಪಕ್ಷದಲ್ಲಿ ಇರುವ ಲಕ್ಷ್ಮೀನಿಧಿಯೇ ಮೊದಲಾದವರು ಶತ್ರುಗಳನ್ನು ಜಯಿಸುವರು. ಅವರಿಗೆ ಆಜ್ಞೆಯನ್ನು ಮಾಡು' ಎಂದು ಹೇಳಿದನು.

ಶತ್ರುಘ್ನನು ಆ ಮಾತನ್ನು ಕೇಳಿ 'ಸುಬಾಹುವಿನ ಸೈನಿಕರು ಕ್ರೌಂಚವ್ಯೂಹವನ್ನು ರಚಿಸಿರುವರು. ಯಾರು ಈ ವ್ಯೂಹವನ್ನು ಭೇದಿಸಲಿಕ್ಕೆ ಶಕ್ತಿಯುಳ್ಳವರಾಗಿರುವರೋ ಅವರು ಬಂದು ನನ್ನ ಕೈಯಿಂದ ತಾಂಬೂಲವನ್ನು ಸ್ವೀಕರಿಸಲಿ' ಎಂದು ಹೇಳಿದನು. ಆಗ ಲಕ್ಷ್ಮೀನಿಧಿಯು ಸರ್ವಶಸ್ತ್ರ ಅಸ್ತ್ರಗಳನ್ನು ತಿಳಿದಿದ್ದ ಅನೇಕ ವೀರರಿಂದ ಕೂಡಿಕೊಂಡು 'ನಾನು ಕ್ರೌಂಚವ್ಯೂಹವನ್ನು ಭೇದಿಸುವೆನು. ಪೂರ್ವದಲ್ಲಿ ಪರಶುರಾಮದೇವರು ಕ್ರೌಂಚವ್ಯೂಹವನ್ನು ಭೇದಿಸಿರುವರು. ಹಾಗೆಯೇ ನಾನು ಭೇದಿಸುವೆನು' ಎಂದು ಹೇಳಿದನು. ಆಮೇಲೆ ಶತ್ರುಘ್ನನು 'ಇವನೊಟ್ಟಿಗೆ ಇನ್ನು ಯಾರು ಯುದ್ಧಕ್ಕೆ ಹೋಗುವಿರಿ?' ಎಂದು ಕೇಳಿದನು. ಪುಷ್ಕಲನು ತಾನು ಹೋಗುವೆನೆಂದನು. ಹಾಗೆಯೇ ರಿಪುತಾಪನೂ, ನೀಲರತ್ನನೂ, ಉಗ್ರಾಶ್ವನೂ, ಎಲ್ಲರೂ ಶತ್ರುಘ್ನನ ಆಜ್ಞೆಯಿಂದ ಕ್ರೌಂಚವ್ಯೂಹವನ್ನು ಭೇದಿಸಲಿಕ್ಕೆ ಹೋದರು. ಶತ್ರುಘ್ನನೂ ರಥದಲ್ಲಿ ಕೂತುಕೊಂಡು ಬಹುಸೈನಿಕರಿಂದ ಸಹಿತನಾಗಿ ಹಿಂದೆಯೇ ಹೋದನು.

ಎರಡು ಸೈನ್ಯಗಳೂ ಯುದ್ಧಕ್ಕೆ ಸಿದ್ಧವಾದವು. ಎರಡು ಸೈನ್ಯಗಳಲ್ಲಿ ಭೇರಿಗಳನ್ನು ಬಡಿದರು. ಶಂಖಧ್ವನಿಯನ್ನು ಮಾಡಿದರು. ಆನೆಗಳೂ ಕುದುರೆಗಳೂ ಗರ್ಜನೆ ಮಾಡಿದವು. ಪದಾತಿಗಳು ಗರ್ಜನೆ ಮಾಡಿದರು. ತಮ್ಮ ಬಾಹುಬಲದಿಂದ ದರ್ಪವುಳ್ಳವರಾದ ಶೂರರು ಹೊಡಿ, ಬಡಿ, ಕಡಿ ಎಂದು ಹೇಳುತ್ತಾ ಬಂದರು. ಈರೀತಿಯಾಗಿ ಸೈನ್ಯಗಳು ಯುದ್ಧಕ್ಕೆ ಸಿದ್ಧವಾಗಲು ವ್ಯೂಹದ ದ್ವಾರದಲ್ಲಿ ನಿಂತಿದ್ದ ಸುಕೇತುವಿನೊಡನೆ ಲಕ್ಷ್ಮೀನಿಧಿಯು 'ನಾನು ಜನಕರಾಜನ ಮಗನು. ನನ್ನ ಹೆಸರು

ಲಕ್ಷ್ಮೀನಿಧಿಯೆಂದು. ನಾನು ಸರ್ವಶಸ್ತ್ರಾಸ್ತ್ರಗಳಲ್ಲಿ ಪಂಡಿತನಾಗಿರುವೆನು. ಸರ್ವದಾನವರನ್ನು ಸಂಹರಿಸುವ ರಾಮಚಂದ್ರದೇವರ ಕುದುರೆಯನ್ನು ಬಿಟ್ಟುಬಿಡು. ಇಲ್ಲದಿದ್ದರೆ ನನ್ನ ಬಾಣಗಳಿಂದ ಸೀಳಲ್ಪಟ್ಟವನಾಗಿ ಯಮಲೋಕವನ್ನು ಹೊಂದುವಿ' ಎಂದು ಹೇಳಲು ಸುಕೇತುವು ಧನುಸ್ಸಿನಿಂದ ಅನೇಕ ಬಾಣಗಳನ್ನು ಬಿಟ್ಟನು. ಲಕ್ಷ್ಮೀನಿಧಿಯು ಆ ಬಾಣಗಳನ್ನು ಕತ್ತರಿಸಿ ತಾನೂ ಬಾಣಗಳನ್ನು ಬಿಟ್ಟನು. ಭಯಂಕರವಾದ ಯುದ್ಧವು ನಡೆಯಿತು. ಕೊನೆಗೆ ವೀರನಾದ ಲಕ್ಷ್ಮೀನಿಧಿಯು ನಾಲ್ಕು ಬಾಣಗಳಿಂದ ಸುಕೇತುವಿನ ಕುದುರೆಗಳನ್ನು ಕೊಂದನು. ಒಂದು ಬಾಣದಿಂದ ಧ್ವಜವನ್ನು ಕತ್ತರಿಸಿದನು. ಮತ್ತೊಂದು ಬಾಣದಿಂದ ಸಾರಥಿಯ ತಲೆಯನ್ನು ಕತ್ತರಿಸಿ ಭೂಮಿಗೆ ಬೀಳಿಸಿದನು. ಇನ್ನೊಂದು ಬಾಣದಿಂದ ಧನುಸ್ಸನ್ನು ಕತ್ತರಿಸಿದನು. ಮತ್ತೊಂದು ಬಾಣದಿಂದ ಸುಕೇತುವಿನ ಎದೆಗೆ ಬಡೆದನು. ಅವನು ಮಾಡಿದ ಅದ್ಭುತವಾದ ಕರ್ಮವನ್ನು ನೋಡಿ ವೀರರೆಲ್ಲರೂ ಆಶ್ಚರ್ಯವನ್ನು ಹೊಂದಿದರು.

ಆಗ ಸುಕೇತುವು ದೊಡ್ಡಗದೆ ಯನ್ನು ಹಿಡಿದುಕೊಂಡು ಯುದ್ಧಕ್ಕೆ ಬಂದನು. ಬರುತ್ತಿರುವ ಗದಾಯುದ್ಧದಲ್ಲಿ ಪಂಡಿತನಾದ ಸುಕೇತುವನ್ನು ನೋಡಿ ಲಕ್ಷ್ಮೀನಿಧಿಯೂ ದೊಡ್ಡ ಗದೆಯನ್ನು ಹಿಡಿದುಕೊಂಡು ರಥದಿಂದ ಕೆಳಗೆ ಇಳಿದನು. ಇಬ್ಬರೂ ಗದೆಯಿಂದ ಚೆನ್ನಾಗಿ ಯುದ್ಧ ಮಾಡಿಕೊಂಡರು. ಕೊನೆಗೆ ಲಕ್ಷ್ಮೀನಿಧಿಯು ಸುಕೇತುವಿನ ಮೇಲೆ ತನ್ನ ಗದೆಯನ್ನು ಬಿಸಾಡಲು ಸುಕೇತುವು ಆ ಗದೆಯನ್ನು ತಾನು ಕೈಯಲ್ಲಿ ಹಿಡಿದು ಅದರಿಂದಲೇ ಲಕ್ಷ್ಮೀನಿಧಿಯನ್ನು ಬಡೆದನು. ಲಕ್ಷ್ಮೀನಿಧಿಯು ತನ್ನ ಗದೆಯನ್ನು ಅವನು ಅಪಹರಿ ಸಿದ್ದನ್ನು ನೋಡಿ ತಾನು ಬಾಹು ಯುದ್ಧವನ್ನು ಮಾಡಲಿಕ್ಕೆ ಇಚ್ಛಿಸಿದನು. ತರುವಾಯ ಇಬ್ಬರೂ ಬಾಹುಯುದ್ಧವನ್ನು ಮಾಡಿಕೊಂಡರು. ಲಕ್ಷ್ಮೀನಿಧಿಯು ಸುಕೇತುವಿನ ಎದೆಗೆ ಮುಷ್ಟಿಯಿಂದ ಬಡೆದನು. ಸುಕೇತುವು ಲಕ್ಷ್ಮೀನಿಧಿಯ ತಲೆಗೆ ಬಡೆದನು. ಇಬ್ಬರೂ ವಜ್ರಕ್ಕೆ ಸಮಾನವಾದ ಮುಷ್ಟಿಯಿಂದ ಬಡೆದುಕೊಂಡರು. ಮುಷ್ಟಿಯಿಂದ ಬಡಿದುಕೊಂಡರು. ಹಲ್ಲಿನಿಂದ ಕಚ್ಚಿಕೊಂಡರು. ತಲೆಕೂದಲನ್ನು ಹಿಡಿದು ಸೆಳೆದು ಕೊಂಡರು. ಆಗ ಸುಕೇತವು ಕೋಪಿಸಿಕೊಂಡು ಲಕ್ಷ್ಮೀನಿಧಿಯ ಕಾಲು ಹಿಡಿದು ತಿರುಗಿಸಿ ನೆಲದಮೇಲೆ ಬಡೆದು ಲಕ್ಷ್ಮೀನಿಧಿಯೂ ಸುಕೇತುವಿನ ಕೈಹಿಡಿದು ನೂರು ಸುತ್ತು ತಿರುಗಿಸಿ ನೆಲದಮೇಲೆ ಬಡೆದನು. ಇಬ್ಬರೂ ಭಯಂಕರವಾಗಿ ಯುದ್ಧವನ್ನು ಮಾಡಿದರು. ಅದನ್ನು ನೋಡಿ ಎಲ್ಲಾ ವೀರರೂ ಆಶ್ಚರ್ಯವನ್ನು ಹೊಂದಿದರು. ಲಕ್ಷ್ಮೀನಿಧಿಯು ಧನ್ಯನು! ಸುಕೇತುವು ಧನ್ಯನು' ಎಂದು ಹೇಳಿಕೊಂಡರು.

# ಚಿತ್ರಾಂಗನ ಮರಣ [1]

ಕ್ರೌಂಚವ್ಯೂಹದ ಕಂಠಸ್ಥಾನದಲ್ಲಿ ನಿಂತಿದ್ದ ಚಿತ್ರಾಂಗನು ಧನುಸ್ಸನ್ನು ಧರಿಸಿಕೊಂಡು ಶತ್ರುಸೈನ್ಯವನ್ನು ಪ್ರವೇಶಿಸಿದನು. ಅವನು ಅನೇಕ ಬಾಣಗಳನ್ನು ಬಿಡುತ್ತಾ ಅನೇಕ ಭಟರನ್ನು ಸಂಹರಿಸಿದನು. ಅದನ್ನು ನೋಡಿ ಪುಷ್ಕಲನು ಧನುರ್ಧಾರಿಯಾಗಿ ರಥದಲ್ಲಿ ಕೂತುಕೊಂಡು ಅವನನ್ನು ಎದುರಿಸಿಕೊಂಡು ಹೋದನು. ಪರಸ್ಪರವಾಗಿ ಬಾಣವನ್ನು ಬಿಟ್ಟುಕೊಂಡು ಯುದ್ಧವನ್ನು ಮಾಡಿಕೊಂಡರು. ಚಿತ್ರಾಂಗನು ಪುಷ್ಕಲನ ಬಾಣಗಳನ್ನೆಲ್ಲಾ ಕತ್ತರಿಸಿದನು. ಆಗ ಪುಷ್ಕಲನು ಭ್ರಾಮಕಾಸ್ತ್ರದಿಂದ ಚಿತ್ರಾಂಗನ ರಥವನ್ನು ಆಕಾಶದಲ್ಲಿ ತಿರುಗಿಸಿದನು. ಅದನ್ನು ನೋಡಿ ಎಲ್ಲರಿಗೂ ಆಶ್ಚರ್ಯವಾಯಿತು.

ತರುವಾಯ ಚಿತ್ರಾಂಗನು ತನ್ನ ರಥವನ್ನು ಸರಿಮಾಡಿಕೊಂಡು ಕೋಪವುಳ್ಳವನಾಗಿ ಪುಷ್ಕಲನೊಡನೆ 'ನೀನು ಸರಿಯಾದ ಕರ್ಮವನ್ನು ಮಾಡಿದೆ. ನನ್ನ ಪರಾಕ್ರಮವನ್ನು ನೋಡು. ನೀನು ದೇವತೆಗಳಿಂದ ಪೂಜ್ಯನಾಗಿ ಆಕಾಶದಲ್ಲಿ ಸಂಚರಿಸುವವನಾಗು' ಎಂದು ಹೇಳಿ ಭಯಂಕರವಾದ ಅಸ್ತ್ರವನ್ನು ಬಿಟ್ಟನು. ಆ ಬಾಣದಿಂದ ಪುಷ್ಕಲನ ರಥವು ಕುದುರೆಯಿಂದ ಸಹಿತವಾಗಿ ತಿರುಗಿತು. ಆಮೇಲೆ ಅದು ಸರಿಯಾಗಿ ಭೂಮಿಯಲ್ಲಿ ನಿಲ್ಲುತ್ತಿರಲು ಚಿತ್ರಾಂಗನು ಪುನಃ ಅದೇ ಅಸ್ತ್ರವನ್ನು ಬಿಟ್ಟನು. ಪುನಃ ಹಾಗೆಯೇ ರಥವು ತಿರುಗಿತು. ತರುವಾಯ ಪುಷ್ಕಲನು ಸರಿಮಾಡಿಕೊಂಡು ಕೋಪದಿಂದ, ಬಾಣದಿಂದ ಚಿತ್ರಾಂಗನ ರಥವನ್ನು ಕುದುರೆಗಳನ್ನು ಸಾರಥಿಯನ್ನೂ ನಾಶಮಾಡಿದನು. ಅವನು ಮತ್ತೊಂದು ರಥವನ್ನು ಏರಿಕೊಂಡು ಬಂದನು. ಪುಷ್ಕಲನು ಆ ರಥವನ್ನು ಪುಡಿ ಮಾಡಿದನು. ಹೀಗೆಯೇ ಪುಷ್ಕಲನು ಚಿತ್ರಾಂಗನ ಹತ್ತು ರಥಗಳನ್ನು ಪುಡಿಮಾಡಿದನು. ಆಮೇಲೆ ಚಿತ್ರಾಂಗನು ಬೇರೊಂದು ರಥದಲ್ಲಿ ಕೂತುಕೊಂಡು ಯುದ್ಧಕ್ಕೆ ಬಂದನು. ಆಮೇಲೆ ಭಯಂಕರವಾದ ಯುದ್ಧವಾಯಿತು.

ಕೊನೆಗೆ ಪುಷ್ಕಲನು ಚಿತ್ರಾಂಗನೊಡನೆ 'ರಾಜ ಪುತ್ರನೇ! ನಿನ್ನನ್ನು ಸಂಹರಿಸುವ ವಿಷಯದಲ್ಲಿ ನಾನು ಮಾಡುವ ಪ್ರತಿಜ್ಞೆಯನ್ನು ಕೇಳು. ನಾನು ಈ ಬಾಣದಿಂದ ನಿನ್ನನ್ನು ಸಂಹರಿಸಿದೆ ಇದ್ದರೆ ಸದಾಚಾರ ಸಂಪನ್ನಳಾದ ಪತಿವ್ರತೆಯಾದ ಸ್ತ್ರೀಯನ್ನು ದೂಷಿಸಿದರೆ ಏನು ಪಾಪವು ಸಂಭವಿಸುವುದೋ ಆ ಪಾಪವು ನನಗೆ ಬರಲಿ' ಎಂದು

---

1. ಪ.ಪು.ಪಾ.ಖಂ. ಅ–27

ಪ್ರತಿಜ್ಞೆಯನ್ನು ಮಾಡಿದನು. ಅದನ್ನು ಕೇಳಿ ಚಿತ್ರಾಂಗನು ನಗುತ್ತಾ 'ಶೂರ ಶ್ರೇಷ್ಠನೇ! ಎಲ್ಲಾ ಪ್ರಾಣಿಗಳಿಗೂ ಮರಣವು ಸಹಜವು. ಆದುದರಿಂದ ನಾನು ಸಾಯುತ್ತೇನೆ ಎಂದು ನನಗೆ ದುಃಖವಿಲ್ಲ. ನಾನು ಮಾಡುವ ಪ್ರತಿಜ್ಞೆಯನ್ನು ಕೇಳು. ನನ್ನನ್ನು ಸಂಹರಿಸಲಿಕ್ಕೆ ನೀನು ಬಿಟ್ಟ ಬಾಣವನ್ನು ನಾನು ಕತ್ತರಿಸದೆ ಇದ್ದರೆ ತೀರ್ಥಯಾತ್ರೆಯನ್ನು ಮಾಡಲಿಕ್ಕೆ ಹೊರಟವನಿಗೆ ಯಾರು ದಾರಿಯನ್ನು ತಡೆಯುವನೋ, ಏಕಾದಶೀವ್ರತಕ್ಕಿಂತ ದೊಡ್ಡ ವ್ರತವಿದೆಯೆಂದು ಯಾರು ತಿಳಿಯುವನೋ ಅವನಿಗೆ ಬರುವ ಪಾಪವು ನನಗೆ ಬರಲಿ' ಎಂದು ಹೇಳಿದನು—

ತರುವಾಯ ಪುಷ್ಕಲನು ಬಾಣವನ್ನು ತೆಗೆದು 'ನಾನು ರಾಮದೇವರ ಪಾದವನ್ನು ನಿಷ್ಕಪಟ ಮನಸ್ಸಿನಿಂದ ಸೇವಿಸಿದವನಾಗಿದ್ದರೆ ನನ್ನ ಪ್ರತಿಜ್ಞೆಯು ಸತ್ಯವಾಗಲಿ. ನಾನು ನನ್ನ ಪತ್ನಿಯನ್ನು ಹೊರತು ಇತರರಾದ ಸ್ತ್ರೀಯರನ್ನು ಮನಸ್ಸಿನಿಂದಲಾದರೂ ಭಾವನಾಮಾಡದೆ ಇದ್ದವನಾದರೆ ನನ್ನ ಮಾತು ಸತ್ಯವಾಗಲಿ' ಎಂದು ಹೇಳಿ ಪ್ರಲಯಕಾಲದ ಅಗ್ನಿಯಂತೆ ಭಯಂಕರವಾದ ಆ ಬಾಣವನ್ನು ಬಿಟ್ಟನು. ಅದನ್ನು ನೋಡಿ ಚಿತ್ರಾಂಗನೂ ಭಯಂಕರವಾದ ಬಾಣವನ್ನು ಬಿಟ್ಟನು. ಆ ಬಾಣದಿಂದ ಪುಷ್ಕಲನು ಬಿಟ್ಟ ಬಾಣವು ಎರಡು ತುಂಡಾಯಿತು. ಅದನ್ನು ನೋಡಿ ಎಲ್ಲರೂ ಹಾಹಾಕಾರವನ್ನು ಮಾಡಿದರು. ಪುಷ್ಕಲನ ಬಾಣದ ಹಿಂದಿನ ಭಾಗವು ತುಂಡಾಗಿ ಕೆಳಗೆ ಬಿದ್ದಿತು. ಆದರೆ ಶಿರೋಭಾಗವು ಹೋಗಿ ಚಿತ್ರಾಂಗನ ತಲೆಯನ್ನು ಕತ್ತರಿಸಿತು. ಶತ್ರುಸೈನಿಕರು ಅದನ್ನು ನೋಡಿ ಹಾಹಾಕಾರವನ್ನು ಮಾಡುತ್ತಾ ಓಡಿದರು. ಚಿತ್ರಾಂಗನ ತಲೆಯು ಭೂಮಿಯಮೇಲೆ ಬಿದ್ದುಕೊಂಡು ಭೂಮಿಗೆ ಬಂದ ಚಂದ್ರಮಂಡಲದಂತೆ ಶೋಭಿಸಿತು. ಅದನ್ನು ನೋಡಿ ಪುಷ್ಕಲನು ವೀರರಿಂದ ಅಲಂಕೃತವಾದ ಸೈನ್ಯವನ್ನು ಪ್ರವೇಶಿಸಿದನು.



## ಸುಬಾಹುರಾಜನ ಪರಾಜಯವು [1]

ತೆರುವಾಯ ಸುಬಾಹುರಾಜನು ಮಗನಾದ ಚಿತ್ರಾಂಗನು ಸತ್ತು ಬಿದ್ದಿರುವುದನ್ನು ನೋಡಿ ದುಃಖದಿಂದ ಬಹಳ ವಿಲಾಪವನ್ನು ಮಾಡಿದನು. ಬಿದ್ದಿದ್ದ ತಲೆಯನ್ನು ಎತ್ತಿಕೊಂಡು ಬಹಳ ಅಳುವವನಾಗಿ ತನ್ನ ಎದೆಯನ್ನು ಬಡೆದುಕೊಳ್ಳುವನಾದನು. ಆಗ ವಿಚಿತ್ರ, ದಮನ ಎಂಬ ಇಬ್ಬರು ಮಕ್ಕಳು ತಂದೆಯ ಪಾದಕ್ಕೆ ನಮಸ್ಕರಿಸಿ 'ರಾಜನೇ! ನಾವು ಬದುಕಿರುವಾಗ ಯಾಕೆ ದುಃಖವನ್ನು ಹೊಂದುವಿರಿ? ವೀರರಿಗೆ

ಯುದ್ಧರಂಗದಲ್ಲಿ ಸಾವು ಅಪೇಕ್ಷಿತವಾದದ್ದು. ಚಿತ್ರಾಂಗನು ಧನ್ಯನು. ಹಲ್ಲು ಕಚ್ಚಿಕೊಂಡು ಯುದ್ಧರಂಗದಲ್ಲಿ ಶೋಭಿಸುತ್ತಿರುವನು. ನಾವು ಏನು ಮಾಡಬೇಕೆಂದು ಬೇಗನೇ ಹೇಳಿರಿ. ನಾವು ಸೈನ್ಯವನ್ನೆಲ್ಲಾ ನಾಶಮಾಡುವೆವು. ಈಗಲೇ ನಮ್ಮ ಸಹೋದರನನ್ನು ಸಂಹರಿಸಿರುವ ಪುಷ್ಕಲನ ತಲೆಯನ್ನು ಕಡಿದು ಭೂಮಿಯಲ್ಲಿ ಹಾಕುವೆವು. ದುಃಖವನ್ನು ಬಿಡಿರಿ. ನಮಗೆ ಆಜ್ಞೆಯನ್ನು ಮಾಡಿ. ನೀವೂ ಯುದ್ಧವನ್ನು ಮಾಡಿರಿ' ಎಂದು ಹೇಳಿದರು. ಈರೀತಿಯಾಗಿ ವೀರರಾದ ಮಕ್ಕಳ ಮಾತನ್ನು ಕೇಳಿ ರಾಜನು ಶೋಕವನ್ನು ಬಿಟ್ಟು ಯುದ್ಧವನ್ನು ಮಾಡಲಿಕ್ಕೆ ಮನಸ್ಸು ಮಾಡಿದನು. ರಿಪುತಾಪನೊಡನೆ ಯುದ್ಧಮಾಡಲಿಕ್ಕೆ ದಮನನೂ ನೀಲರತ್ನರಾಜನೊಡನೆ ಯುದ್ಧವನ್ನು ಮಾಡಲಿಕ್ಕೆ ವಿಚಿತ್ರನೂ ಹೋದರು– ಸುಬಾಹುರಾಜನು ಬಂಗಾರದ ರಥದಲ್ಲಿ ಕೂತುಕೊಂಡು ಮಹಾವೀರರನ್ನೂ ತಿರಸ್ಕಾರ ಮಾಡುತ್ತಾ ಕೋಟಿವೀರ ರಿಂದ ಸಹಿತನಾದ ಶತ್ರುಘ್ನನೊಡನೆ ಯುದ್ಧವನ್ನು ಮಾಡಲಿಕ್ಕೆ ಹೋದನು. ಪುತ್ರರೋಷದಿಂದ ಯುದ್ಧಕ್ಕೆ ಬಂದಿರುವ ಪುತ್ರನಾಶದಿಂದ ಸೈನ್ಯವನ್ನೆಲ್ಲಾ ನಾಶ ಮಾಡುತ್ತಿರುವ ಸುಬಾಹುರಾಜನನ್ನು ನೋಡಿ ರೋಷವುಳ್ಳವನಾಗಿ 'ನನ್ನ ಮಗನನ್ನು ಕೊಂದವನು ಎಲ್ಲಿಗೆ ಹೋದನು? ಅವನ ತಲೆಯನ್ನು ಕಡಿದು ಭೂಮಿಯಲ್ಲಿ ಬೀಳಿಸುವೆನು. ನಿಮ್ಮ ಸೇನೆಯನ್ನು ರಕ್ಷಿಸುವ ಶತ್ರುಘ್ನನೆಲ್ಲಿ? ರಾಮನು ಎಲ್ಲಿರುವನು? ಭಟರು ಎಲ್ಲಿ ಇರುವರು? ಪ್ರಾಣವನ್ನು ತೆಗೆಯಲಿಕ್ಕೆ ಬರುತ್ತಿರುವ ನನ್ನನ್ನು ಎಲ್ಲರೂ ನೋಡಲಿ' ಎಂದು ಹೇಳಿದನು. ಅದನ್ನು ಕೇಳಿ ಹನುಮಂತದೇವರು 'ಲವಣಾಸುರ ನನ್ನು ಸಂಹರಿಸಿರುವ ಶತ್ರುಘ್ನನು ಸೈನ್ಯರಕ್ಷಕನಾಗಿರುವನು. ನಾವೆಲ್ಲರೂ ಇರುವಾಗ ಅವನು ಯಾಕೆ ಯುದ್ಧಕ್ಕೆ ಬರುವನು? ನನ್ನನ್ನು ಜಯಿಸಿ ಆಮೇಲೆ ಶತ್ರುಘ್ನನ ಬಳಿಗೆ ಹೋಗು' ಎಂದು ಹೇಳಿದರು.

ಆಗ ರಾಜನು ಹನುಮಂತದೇವರ ಮೇಲೆ ಬಾಣಗಳನ್ನು ಬಿಟ್ಟನು. ಹನುಮಂತದೇವರು ಆ ಬಾಣಗಳನ್ನೆಲ್ಲಾ ಕೈಯಲ್ಲಿ ಹಿಡಿದು ಪುಡಿಪುಡಿ ಮಾಡಿದರು. ತನ್ನ ಬಾಲದಿಂದ ರಾಜನ ರಥವನ್ನು ಸುತ್ತಿ ಆಕಾಶದಲ್ಲಿ ಎತ್ತಿ ಹಿಡಿದರು. ಆಗ ರಾಜನು ಹನುಮಂತದೇವರ ಬಾಲಕ್ಕೆ ಬಾಣವನ್ನು ಬಿಟ್ಟನು. ಆಮೇಲೆ ಹನುಮಂತದೇವರು ಆ ರಥವನ್ನು ಬಿಟ್ಟುಬಿಟ್ಟರು. ಹನುಮಂತದೇವರು ಕೋಪವುಳ್ಳವರಾಗಿ ಕುದುರೆ ಯಿಂದ ಸಹಿತವಾದ ರಥವನ್ನು ಕೋರೆಹಲ್ಲುಗಳಿಂದ ಕಚ್ಚಿ ಪುಡಿಪುಡಿ ಮಾಡಿದರು. ಆಗ ಸುಬಾಹುವು ಹನುಮಂತದೇವರ ಮುಖಕ್ಕೂ ಬಾಲಕ್ಕೂ ಎದೆಗೂ ಕಾಲು ಗಳಿಗೂ ಬಾಣಗಳನ್ನು ಬಿಟ್ಟನು. ಆಗ ಹನುಮಂತದೇವರು ಕೋಪವುಳ್ಳವರಾಗಿ ತನ್ನ

ಪ್ರತಿಜ್ಞೆಯನ್ನು ಮಾಡಿದನು. ಅದನ್ನು ಕೇಳಿ ಚಿತ್ರಾಂಗನು ನಗುತ್ತಾ 'ಶೂರ ಶ್ರೇಷ್ಠನೇ! ಎಲ್ಲಾ ಪ್ರಾಣಿಗಳಿಗೂ ಮರಣವು ಸಹಜವು. ಆದುದರಿಂದ ನಾನು ಸಾಯುತ್ತೇನೆ ಎಂದು ನನಗೆ ದುಃಖವಿಲ್ಲ. ನಾನು ಮಾಡುವ ಪ್ರತಿಜ್ಞೆಯನ್ನು ಕೇಳು. ನನ್ನನ್ನು ಸಂಹರಿಸಲಿಕ್ಕೆ ನೀನು ಬಿಟ್ಟ ಬಾಣವನ್ನು ನಾನು ಕತ್ತರಿಸದೆ ಇದ್ದರೆ ತೀರ್ಥಯಾತ್ರೆಯನ್ನು ಮಾಡಲಿಕ್ಕೆ ಹೊರಟವನಿಗೆ ಯಾರು ದಾರಿಯನ್ನು ತಡೆಯುವನೋ, ಏಕಾದಶೀವ್ರತಕ್ಕಿಂತ ದೊಡ್ಡ ವ್ರತವಿದೆಯೆಂದು ಯಾರು ತಿಳಿಯುವನೋ ಅವನಿಗೆ ಬರುವ ಪಾಪವು ನನಗೆ ಬರಲಿ' ಎಂದು ಹೇಳಿದನು—

ತರುವಾಯ ಪುಷ್ಕಲನು ಬಾಣವನ್ನು ತೆಗೆದು 'ನಾನು ರಾಮದೇವರ ಪಾದವನ್ನು ನಿಷ್ಕಪಟ ಮನಸ್ಸಿನಿಂದ ಸೇವಿಸಿದವನಾಗಿದ್ದರೆ ನನ್ನ ಪ್ರತಿಜ್ಞೆಯು ಸತ್ಯವಾಗಲಿ. ನಾನು ನನ್ನ ಪತ್ನಿಯನ್ನು ಹೊರತು ಇತರರಾದ ಸ್ತ್ರೀಯರನ್ನು ಮನಸ್ಸಿನಿಂದಲಾದರೂ ಭಾವನಾಮಾಡದೆ ಇದ್ದವನಾದರೆ ನನ್ನ ಮಾತು ಸತ್ಯವಾಗಲಿ' ಎಂದು ಹೇಳಿ ಪ್ರಲಯಕಾಲದ ಅಗ್ನಿಯಂತೆ ಭಯಂಕರವಾದ ಆ ಬಾಣವನ್ನು ಬಿಟ್ಟನು. ಅದನ್ನು ನೋಡಿ ಚಿತ್ರಾಂಗನೂ ಭಯಂಕರವಾದ ಬಾಣವನ್ನು ಬಿಟ್ಟನು. ಆ ಬಾಣದಿಂದ ಪುಷ್ಕಲನು ಬಿಟ್ಟ ಬಾಣವು ಎರಡು ತುಂಡಾಯಿತು. ಅದನ್ನು ನೋಡಿ ಎಲ್ಲರೂ ಹಾಹಾಕಾರವನ್ನು ಮಾಡಿದರು. ಪುಷ್ಕಲನ ಬಾಣದ ಹಿಂದಿನ ಭಾಗವು ತುಂಡಾಗಿ ಕೆಳಗೆ ಬಿದ್ದಿತು. ಆದರೆ ಶಿರೋಭಾಗವು ಹೋಗಿ ಚಿತ್ರಾಂಗನ ತಲೆಯನ್ನು ಕತ್ತರಿಸಿತು. ಶತ್ರುಸೈನಿಕರು ಅದನ್ನು ನೋಡಿ ಹಾಹಾಕಾರವನ್ನು ಮಾಡುತ್ತಾ ಓಡಿದರು. ಚಿತ್ರಾಂಗನ ತಲೆಯು ಭೂಮಿಯಮೇಲೆ ಬಿದ್ದುಕೊಂಡು ಭೂಮಿಗೆ ಬಂದ ಚಂದ್ರಮಂಡಲದಂತೆ ಶೋಭಿಸಿತು. ಅದನ್ನು ನೋಡಿ ಪುಷ್ಕಲನು ವೀರರಿಂದ ಅಲಂಕೃತವಾದ ಸೈನ್ಯವನ್ನು ಪ್ರವೇಶಿಸಿದನು.



## ಸುಬಾಹುರಾಜನ ಪರಾಜಯವು [1]

ತರುವಾಯ ಸುಬಾಹುರಾಜನು ಮಗನಾದ ಚಿತ್ರಾಂಗನು ಸತ್ತು ಬಿದ್ದಿರುವುದನ್ನು ನೋಡಿ ದುಃಖದಿಂದ ಬಹಳ ವಿಲಾಪವನ್ನು ಮಾಡಿದನು. ಬಿದ್ದಿದ್ದ ತಲೆಯನ್ನು ಎತ್ತಿಕೊಂಡು ಬಹಳ ಅಳುವವನಾಗಿ ತನ್ನ ಎದೆಯನ್ನು ಬಡೆದುಕೊಳ್ಳುವನಾದನು. ಆಗ ವಿಚಿತ್ರ ದಮನ ಎಂಬ ಇಬ್ಬರು ಮಕ್ಕಳು ತಂದೆಯ ಪಾದಕ್ಕೆ ನಮಸ್ಕರಿಸಿ 'ರಾಜನೇ! ನಾವು ಬದುಕಿರುವಾಗ ಯಾಕೆ ದುಃಖವನ್ನು ಹೊಂದುವಿರಿ? ವೀರರಿಗೆ

ಯುದ್ಧರಂಗದಲ್ಲಿ ಸಾವು ಅಪೇಕ್ಷಿತವಾದದ್ದು. ಚಿತ್ರಾಂಗನು ಧನ್ಯನು. ಹಲ್ಲು ಕಚ್ಚಿಕೊಂಡು ಯುದ್ಧರಂಗದಲ್ಲಿ ಶೋಭಿಸುತ್ತಿರುವನು. ನಾವು ಏನು ಮಾಡಬೇಕೆಂದು ಬೇಗನೇ ಹೇಳಿರಿ. ನಾವು ಸೈನ್ಯವನ್ನೆಲ್ಲಾ ನಾಶಮಾಡುವೆವು. ಈಗಲೇ ನಮ್ಮ ಸಹೋದರನನ್ನು ಸಂಹರಿಸಿರುವ ಪುಷ್ಕಲನ ತಲೆಯನ್ನು ಕಡಿದು ಭೂಮಿಯಲ್ಲಿ ಹಾಕುವೆವು. ದುಃಖವನ್ನು ಬಿಡಿರಿ. ನಮಗೆ ಆಜ್ಞೆಯನ್ನು ಮಾಡಿ. ನೀವೂ ಯುದ್ಧವನ್ನು ಮಾಡಿರಿ' ಎಂದು ಹೇಳಿದರು. ಈರೀತಿಯಾಗಿ ವೀರರಾದ ಮಕ್ಕಳ ಮಾತನ್ನು ಕೇಳಿ ರಾಜನು ಶೋಕವನ್ನು ಬಿಟ್ಟು ಯುದ್ಧವನ್ನು ಮಾಡಲಿಕ್ಕೆ ಮನಸ್ಸು ಮಾಡಿದನು. ರಿಪುತಾಪನೊಡನೆ ಯುದ್ಧಮಾಡಲಿಕ್ಕೆ ದಮನನೂ ನೀಲರತ್ನರಾಜನೊಡನೆ ಯುದ್ಧವನ್ನು ಮಾಡಲಿಕ್ಕೆ ವಿಚಿತ್ರನೂ ಹೋದರು– ಸುಬಾಹುರಾಜನು ಬಂಗಾರದ ರಥದಲ್ಲಿ ಕೂತುಕೊಂಡು ಮಹಾವೀರರನ್ನೂ ತಿರಸ್ಕಾರ ಮಾಡುತ್ತಾ ಕೋಟಿವೀರ ರಿಂದ ಸಹಿತನಾದ ಶತ್ರುಘ್ನನೊಡನೆ ಯುದ್ಧವನ್ನು ಮಾಡಲಿಕ್ಕೆ ಹೋದನು. ಪುತ್ರರೋಷದಿಂದ ಯುದ್ಧಕ್ಕೆ ಬಂದಿರುವ ಪುತ್ರನಾಶದಿಂದ ಸೈನ್ಯವನ್ನೆಲ್ಲಾ ನಾಶ ಮಾಡುತ್ತಿರುವ ಸುಬಾಹುರಾಜನನ್ನು ನೋಡಿ ರೋಷವುಳ್ಳವನಾಗಿ 'ನನ್ನ ಮಗನನ್ನು ಕೊಂದವನು ಎಲ್ಲಿಗೆ ಹೋದನು? ಅವನ ತಲೆಯನ್ನು ಕಡಿದು ಭೂಮಿಯಲ್ಲಿ ಬೀಳಿಸುವೆನು. ನಿಮ್ಮ ಸೇನೆಯನ್ನು ರಕ್ಷಿಸುವ ಶತ್ರುಘ್ನನೆಲ್ಲಿ? ರಾಮನು ಎಲ್ಲಿರುವನು? ಭಟರು ಎಲ್ಲಿ ಇರುವರು? ಪ್ರಾಣವನ್ನು ತೆಗೆಯಲಿಕ್ಕೆ ಬರುತ್ತಿರುವ ನನ್ನನ್ನು ಎಲ್ಲರೂ ನೋಡಲಿ' ಎಂದು ಹೇಳಿದನು. ಅದನ್ನು ಕೇಳಿ ಹನುಮಂತದೇವರು 'ಲವಣಾಸುರ ನನ್ನು ಸಂಹರಿಸಿರುವ ಶತ್ರುಘ್ನನು ಸೈನ್ಯರಕ್ಷಕನಾಗಿರುವನು. ನಾವೆಲ್ಲರೂ ಇರುವಾಗ ಅವನು ಯಾಕೆ ಯುದ್ಧಕ್ಕೆ ಬರುವನು? ನನ್ನನ್ನು ಜಯಿಸಿ ಆಮೇಲೆ ಶತ್ರುಘ್ನನ ಬಳಿಗೆ ಹೋಗು' ಎಂದು ಹೇಳಿದರು.

ಆಗ ರಾಜನು ಹನುಮಂತದೇವರ ಮೇಲೆ ಬಾಣಗಳನ್ನು ಬಿಟ್ಟನು. ಹನುಮಂತದೇವರು ಆ ಬಾಣಗಳನ್ನೆಲ್ಲಾ ಕೈಯಲ್ಲಿ ಹಿಡಿದು ಪುಡಿಪುಡಿ ಮಾಡಿದರು. ತನ್ನ ಬಾಲದಿಂದ ರಾಜನ ರಥವನ್ನು ಸುತ್ತಿ ಆಕಾಶದಲ್ಲಿ ಎತ್ತಿ ಹಿಡಿದರು. ಆಗ ರಾಜನು ಹನುಮಂತದೇವರ ಬಾಲಕ್ಕೆ ಬಾಣವನ್ನು ಬಿಟ್ಟನು. ಆಮೇಲೆ ಹನುಮಂತದೇವರು ಆ ರಥವನ್ನು ಬಿಟ್ಟುಬಿಟ್ಟರು. ಹನುಮಂತದೇವರು ಕೋಪವುಳ್ಳವರಾಗಿ ಕುದುರೆ ಯಿಂದ ಸಹಿತವಾದ ರಥವನ್ನು ಕೋರೆಹಲ್ಲುಗಳಿಂದ ಕಚ್ಚಿ ಪುಡಿಪುಡಿ ಮಾಡಿದರು. ಆಗ ಸುಬಾಹುವು ಹನುಮಂತದೇವರ ಮುಖಕ್ಕೂ ಬಾಲಕ್ಕೂ ಎದೆಗೂ ಕಾಲು ಗಳಿಗೂ ಬಾಣಗಳನ್ನು ಬಿಟ್ಟನು. ಆಗ ಹನುಮಂತದೇವರು ಕೋಪವುಳ್ಳವರಾಗಿ ತನ್ನ

ಪಾದದಿಂದ ಸುಬಾಹುವಿನ ಎದೆಗೆ ಒಡೆದರು. ಅದರಿಂದ ರಾಜನು ಬಾಯಿಯಿಂದ ಬಿಸಿಯಾದ ರಕ್ತವನ್ನು ಕಾರುತ್ತಾ ಮೂರ್ಛಿತನಾಗಿ ಭೂಮಿ ಯಲ್ಲಿ ಬಿದ್ದನು. ತರುವಾಯ ಹನುಮಂತದೇವರು ಆನೆ ಕುದುರೆ ಇತ್ಯಾದಿಗಳನ್ನು ನಾಶಮಾಡಿದರು. ಆಗ ಮೂರ್ಛಿತರಾಗಿದ್ದ ಸುಕೇತುವೂ ಲಕ್ಷ್ಮೀನಿಧಿಯೂ ಎದ್ದು ಯುದ್ಧವನ್ನು ಮಾಡಿಕೊಂಡರು. ಸುಬಾಹುರಾಜನು ಮೂರ್ಛಿತ ನಾಗಿರುವುದನ್ನು ನೋಡಿ ಜನರೆಲ್ಲರೂ ಓಡಲಿಕ್ಕೆ ಆರಂಭಿಸಿದರು. ಪುಷ್ಕಲನೂ ಎಲ್ಲರನ್ನೂ ಬಡಿಯುವವನಾದನು. ಓಡುತ್ತಿರುವ ತನ್ನ ಸೈನ್ಯವನ್ನು ದಮನನು ನಿಲ್ಲಿಸಿದನು.



## ಸುಬಾಹುವು ಶರಣಾಗತನಾದದ್ದು [1]

ಯುದ್ಧರಂಗದ ಮಧ್ಯದಲ್ಲಿ ಹನುಮಂತದೇವರ ಪಾದಪ್ರಹಾರದಿಂದ ಮೂರ್ಛಿತನಾಗಿ ಬಿದ್ದಿದ್ದ ಸುಬಾಹುರಾಜನು ಒಂದು ಸ್ವಪ್ನವನ್ನು ನೋಡಿದನು. ಆ ಸ್ವಪ್ನವು ಹೀಗಿದ್ದಿತು. 'ಅಯೋಧ್ಯೆಯಲ್ಲಿ ಸರಯೂ ನದಿಯ ತೀರದಲ್ಲಿ ಮಂಟಪದಲ್ಲಿ ಯಾಜ್ಞಿಕಶ್ರೇಷ್ಠರಾದ ಅನೇಕ ಬ್ರಾಹ್ಮಣರಿಂದ ಕೂಡಿಕೊಂಡು ರಾಮಚಂದ್ರದೇವರು ಕೂತಿದ್ದರು. ಅಲ್ಲಿ ಬ್ರಹ್ಮಾದಿದೇವತೆಗಳೂ ಕೈಮುಗಿದುಕೊಂಡು ಅವರನ್ನು ಪುನಃಪುನಃ ಸ್ತೋತ್ರ ಮಾಡುತ್ತಿದ್ದರು. ನೀಲವರ್ಣವುಳ್ಳವರಾದ ಜಂಕೆಯ ಕೊಂಬನ್ನು ಹಿಡಿದು ಕೊಂಡಿರುವ ಆ ರಾಮದೇವರನ್ನು ನಾರದಾದಿಗಳು ವೀಣೆಯನ್ನು ಬಾರಿಸುತ್ತಾ ಗಾಯನ ಮಾಡುತ್ತಿದ್ದರು. ಘೃತಾಚೀ ಮೇನಕಾ ಮೊದಲಾದ ಅಪ್ಸರಸ್ತ್ರೀಯರು ನರ್ತನ ಮಾಡುತ್ತಿದ್ದರು. ವೇದಾಭಿಮಾನಿ ದೇವತೆಗಳು ಮೂರ್ತಿಮತ್ತಾಗಿ ಬಂದು ರಾಮದೇವರನ್ನು ಸೇವಿಸುತ್ತಿದ್ದರು. ರಾಮದೇವರು ಎಲ್ಲರಿಗೂ ಬೇಕಾದದ್ದನ್ನು ಕೊಡುತ್ತಿದ್ದರು'. ಇತ್ಯಾದಿ ವಿಷಯವನ್ನೆಲ್ಲಾ ಸುಬಾಹುವು ಸ್ವಪ್ನದಲ್ಲಿ ನೋಡಿ ಎಚ್ಚರಗೊಂಡನು.

ಆಮೇಲೆ ಅವನು ಎದ್ದು ಎಲ್ಲಾ ಭೃತ್ಯರಿಂದಲೂ ಕೂಡಿಕೊಂಡು ಶತ್ರುಘ್ನನ ಸಮೀಪಕ್ಕೆ ಹೋದನು. ಯುದ್ಧವನ್ನು ಮಾಡಲಿಕ್ಕೆ ಉದ್ಯುಕ್ತರಾದ ಸುಕೇತು ವಿಚಿತ್ರ ದಮನರನ್ನು ತಡೆದನು. 'ಮಕ್ಕಳೇ! ನನ್ನ ಮಾತನ್ನು ಕೇಳಿ. ಯುದ್ಧವನ್ನು ಮಾಡಬೇಡಿರಿ. ನಾವು ಮಾಡಿದ್ದು ಬಹಳ ಅನ್ಯಾಯವಾಯಿತು. ರಾಮದೇವರ ಕುದುರೆಯನ್ನು ದಮನನು ಕಟ್ಟಿದ್ದು ತಪ್ಪಾಯಿತು. ರಾಮದೇವರು ಸಕಲಜಗತ್ತಿಗೂ ಸ್ವಾಮಿಯಾದ ಪರಬ್ರಹ್ಮನು ನನಗೆ ಮೊದಲು ಆ ಜ್ಞಾನವಿರಲಿಲ್ಲ. ಪೂರ್ವದಲ್ಲಿ

ಅಸಿತಾಂಗ ಋಷಿಗಳ ಶಾಪದಿಂದ ಜ್ಞಾನಹೀನನಾಗಿದ್ದೆನು. ನಾನು ಪೂರ್ವದಲ್ಲಿ ತೀರ್ಥಯಾತ್ರೆಗೆ ಹೋಗಿದ್ದೆನು. ಅಲ್ಲಿ ಅನೇಕ ಧರ್ಮವನ್ನು ತಿಳಿದವರಾದ ಮುನಿಗಳೊಡನೆ ಧರ್ಮದ ವಿಷಯವಾಗಿ ಪ್ರಶ್ನೆಯನ್ನು ಮಾಡಿದೆನು. ಹಾಗೆಯೇ ಅಸಿತಾಂಗ ಎಂಬ ಮುನಿಗಳ ಬಳಿಗೂ ಹೋದೆನು. ಅವರು ನನ್ನ ಮೇಲೆ ಕೃಪೆಯನ್ನು ಮಾಡಿ 'ಈಗ ಅಯೋಧ್ಯೆಗೆ ಅಧಿಪತಿಯಾಗಿರುವ ರಾಮದೇವರೇ ಪರಬ್ರಹ್ಮನು. ಅವರ ಪತ್ನಿಯಾದ ಜಾನಕೀದೇವಿಯೇ ಸಾಕ್ಷಾತ್ ರಮಾದೇವಿಯರು. ಈರೀತಿಯಾಗಿಯೇ ಸಂಸಾರಸಮುದ್ರವನ್ನು ದಾಟಲು ಇಚ್ಚಿಸುವ ಯೋಗಿಗಳು ರಾಮದೇವರನ್ನು ಉಪಾಸನೆ ಮಾಡುವರು. ರಾಮದೇವರನ್ನು ಸ್ಮರಿಸುವ ಮಾತ್ರದಿಂದಲೇ ಪಾಪವೆಲ್ಲವೂ ಪರಿಹೃತವಾಗುವುದು. ಯಾರು ರಾಮದೇವರನ್ನು ಸೇವಿಸುವರೋ ಅವರು ಸಂಸಾರವನ್ನು ದಾಟುವರು' ಎಂದು ಹೇಳಿದರು. ಅದನ್ನು ಕೇಳಿ ನಾನು ನಗುವವನಾದೆನು. 'ಈ ರಾಮನು ಮನುಷ್ಯನು ಹರ್ಷಶೋಕದಿಂದ ಕೂಡಿದ ಸೀತೆಯೆಲ್ಲಿ? ರಮಾದೇವಿಯರೆಲ್ಲಿ? ಜನ್ಮರಹಿತನಾದ ಪರಮಾತ್ಮನಿಗೆ ಜನ್ಮದುಃಖಾದಿಗಳನ್ನು ಹೇಳುವಿರಲ್ಲಾ!' ಎಂದು ನಾನು ಹೇಳಿದೆನು.

ಅದನ್ನು ಕೇಳಿ ಆಮುನೀಶ್ವರರು ಕೋಪವುಳ್ಳರಾಗಿ 'ಅಧಮನೇ! ಆ ರಾಮಚಂದ್ರದೇವರ ಸ್ವರೂಪವನ್ನು ತಿಳಿಯದೆ ಪ್ರತಿಮಾತನ್ನು ಆಡಿದವನಾಗಿರಲು ಈರೀತಿಯಾಗಿ ರಾಮದೇವರನ್ನು ಅವಮಾನ ಮಾಡಿ ಮನುಷ್ಯನೆಂದು ಹೇಳಿರುವಿ. ಆದುದರಿಂದ ನೀನು ತತ್ವಜ್ಞಾನಹೀನನಾಗುವಿ' ಎಂದು ಶಾಪವನ್ನು ಕೊಟ್ಟರು. ಆಗ ನಾನು ಅವರ ಕಾಲಿಗೆ ಅಡ್ಡಬಿದ್ದೆನು. ನನ್ನ ವಿನಯವನ್ನು ನೋಡಿ ಕರುಣೆಯುಳ್ಳವರಾಗಿ 'ನೀನು ರಾಮದೇವರಿಗೆ ಅವಿನಯವನ್ನು ಮಾಡಿದಾಗ ಹನುಮಂತದೇವರು ವೇಗದಿಂದ ನಿನ್ನ ಎದೆಗೆ ಒದೆಯುವರು. ಆಗ ನೀನು ರಾಮದೇವರ ಮಹಿಮೆಯನ್ನು ತಿಳಿಯುವಿ' ಎಂದು ಹೇಳಿದರು. ಹಾಗೆಯೇ ಈಗ ಹನುಮಂತದೇವರು ನನ್ನನ್ನು ಒದೆಯಲು ನಾನು ಸ್ವಪ್ನದಲ್ಲಿ ಪರಬ್ರಹ್ಮರೂಪಿಯಾದ ರಾಮದೇವರನ್ನು ನೋಡಿದೆನು. ಆದುದರಿಂದ ರಾಮದೇವರ ಕುದುರೆಯನ್ನು ತನ್ನಿರಿ. ಹಣವನ್ನು ರಾಜ್ಯವನ್ನು ಎಲ್ಲವನ್ನೂ ರಾಮದೇವರಿಗೆ ಸಮರ್ಪಿಸಿ ಅತಿಪವಿತ್ರವಾದ ಅಶ್ವಮೇಧಯಾಗದಲ್ಲಿ ರಾಮದೇವರನ್ನು ನೋಡಿ ಕೃತಾರ್ಥನಾಗುವೆನು. ಕುದುರೆಯನ್ನು ಹಿಂದೆ ಒಪ್ಪಿಸುವುದೇ ನನ್ನ ಇಷ್ಟವಾಗಿದೆ' ಎಂದು ಹೇಳಿದನು.

ಅದನ್ನು ಕೇಳಿ ಅವರೆಲ್ಲರೂ ಸಂತೋಷವುಳ್ಳವರಾಗಿ ರಾಮದೇವರನ್ನು ನೋಡಬೇಕೆಂದು ಆಸೆಯುಳ್ಳವನಾದ ರಾಜನೊಡನೆ 'ರಾಜನೇ! ನಮಗೆ ನಿಮ್ಮ

ಪಾದಕಮಲವನ್ನು ಬಿಟ್ಟು ಮತ್ತೆ ಒಂದೂ ತಿಳಿಯಲಾರದು. ತಮ್ಮ ಮನಸ್ಸಿಗೆ ತೋರಿದಂತೆ ಬೇಗನೆ ಆಗಲಿ. ರತ್ನಮಾಲೆಯಿಂದ ಅಲಂಕೃತವಾಗಿರುವ ಈ ಕುದುರೆಯನ್ನು ತೆಗೆದುಕೊಂಡು ಹೋಗುವ. ಮುತ್ತುರತ್ನಾದಿಗಳಿಂದ ಕೂಡಿದ ಸಮಸ್ತರಾಜ್ಯವನ್ನು ಮಕ್ಕಳಾದ ನಮ್ಮನ್ನು ಎಲ್ಲರನ್ನೂ ರಾಮದೇವರಿಗೆ ಸಮರ್ಪಿಸಿರಿ. ಸಿಂಹಾಸನವನ್ನೇ ಅವರ ಅಧೀನಮಾಡಿರಿ' ಎಂದು ಹೇಳಿದನು.

ಸುಬಾಹುರಾಜನು 'ಬೇಗನೇ ಕುದುರೆಯನ್ನು ತೆಗೆದುಕೊಂಡು ಬನ್ನಿರಿ. ಆಮೇಲೆ ನಾನು ಶತ್ರುಘ್ನನಿದ್ದಲ್ಲಿಗೆ ಹೋಗುವೆನು' ಎಂದು ಹೇಳಿದನು. ರಾಜನ ಮಾತನ್ನು ಕೇಳಿ ವಿಚಿತ್ರನೂ ದಮನನೂ ಸುಕೇತುವೂ ಊರಿಗೆ ಹೋಗಿ ಕುದುರೆಯನ್ನು ಅಲಂಕರಿಸಿ ಕರಕೊಂಡು ಬಂದರು. ತರುವಾಯ ಸುಬಾಹುರಾಜನು ಮಹಾವೈಭವದಿಂದ ಮಕ್ಕಳು ಮೊಮ್ಮಕ್ಕಳಿಂದ ಸಹಿತನಾಗಿ ಕಾಲುನಡೆಯಿಂದಲೇ ಶತ್ರುಘ್ನನಿದ್ದಲ್ಲಿಗೆ ಹೋದನು. ಶತ್ರುಘ್ನನನ್ನು ನೋಡಿ ಧನ್ಯನಾದೆನು ಎಂದು ಹೇಳುತ್ತಾ ರಾಮದೇವರಲ್ಲಿಯೇ ಮನಸ್ಸುಳ್ಳವನಾಗಿ ಶತ್ರುಘ್ನನ ಪಾದಗಳಿಗೆ ನಮಸ್ಕರಿಸಿದನು. ಶತ್ರುಘ್ನನು ನಮಸ್ಕರಿಸಿದ ರಾಜನನ್ನು ಎಬ್ಬಿಸಿ ಎರಡು ಕೈಗಳಿಂದ ಆಲಿಂಗನ ಮಾಡಿದನು. ಸುಬಾಹುರಾಜನೂ ಶತ್ರುಘ್ನನನ್ನು ಗಾಢಾಲಿಂಗನ ಮಾಡಿ ಪರಮಸಂತೋಷವುಳ್ಳವನಾಗಿ ಗದ್ಗದಸ್ವರದಿಂದ 'ನಾನು ಈಗ ಸಕುಟುಂಬನಾಗಿ ಧನ್ಯನಾಗಿರುವೆನು. ನಿಮ್ಮ ಪಾದದರ್ಶನವನ್ನು ಮಾಡಿದೆನು. ಅಜ್ಞಾನಿಯಾದ ನನ್ನ ಮಗನು ಈ ಕುದುರೆಯನ್ನು ಕಟ್ಟಿಹಾಕಿದನು. ನನ್ನ ಅಪರಾಧವನ್ನು ಕ್ಷಮಿಸಬೇಕು. ಶ್ರೀರಾಮದೇವರು ಜಗತ್ತಿನ ಸೃಷ್ಟಿಸಂಹಾರಾದಿಗಳನ್ನು ಮಾಡುವ ಪರಬ್ರಹ್ಮನೆಂದು ತಿಳಿದಿರುವೆನು. ಈ ಸಮೃದ್ಧವಾದ ರಾಜ್ಯವು ಈ ಕೋಶಗಳು ನಾವು ಎಲ್ಲರೂ ರಾಮದೇವರಿಗೆ ಸೇರಿದವರು. ರಾಮದೇವರ ದಾಸರು. ಇವುಗಳೆಲ್ಲವನ್ನೂ ಸ್ವೀಕರಿಸಬೇಕು. ಹನುಮಂತದೇವರು ಎಲ್ಲಿ ಇರುವರು? ಅವರ ಅನುಗ್ರಹದಿಂದ ನಾನು ಶ್ರೀರಾಮದೇವರ ದರ್ಶನವನ್ನು ಹೊಂದುವೆನು. ನನ್ನ ಜನ್ಮವನ್ನು ಸಫಲ ವನ್ನಾಗಿ ಮಾಡಿಕೊಳ್ಳುವೆನು. ರಾಮದೇವರನ್ನು ನೋಡದೆಯೇ ನನ್ನ ಆಯುಷ್ಯವು ಬಹಳವಾದದ್ದು ಕಳೆದುಹೋಯಿತು. ಸ್ವಲ್ಪ ಮಾತ್ರವೇ ಉಳಿದಿರುವುದು' ಇತ್ಯಾದಿ ರೀತಿಯಿಂದ ಹೇಳಿ ಸರ್ವವನ್ನು ಸಮರ್ಪಿಸಿ ಮಾತನ್ನು ಕೇಳಿ 'ಮಹಾರಾಜನೇ! ಯಾಕೆ ಈ ಮಾತನ್ನು ಹೇಳುವಿ? ನೀನು ವೃದ್ಧನು. ಪೂಜ್ಯನು. ನಿನ್ನ ರಾಜ್ಯವು ನಿನ್ನದೇ ದಮನನು ರಾಜ್ಯಭಾರವನ್ನು ಮಾಡಲಿ. ಯುದ್ಧಮಾಡುವುದು ಕ್ಷತ್ರಿಯ ಧರ್ಮವು. ಅದರಲ್ಲಿ ತಪ್ಪೇನೂ ಇರುವುದಿಲ್ಲ. ಸರ್ವರಾಜ್ಯ ಹಣವೂ ನನ್ನ ಆಜ್ಞೆಯಿಂದ

ಹಿಂದೆಯೇ ಹೋಗಲಿ. ರಾಮದೇವರು ನನಗೆ ಹೇಗೆ ಪೂಜ್ಯರೋ ಹಾಗೆ ನೀನೂ ಪೂಜ್ಯನಾಗಿಯೇ ಕಾಣಿಸುವಿ. ನೀನು ನಮ್ಮ ಕುದುರೆಯ ಹಿಂದೆಯೇ ಬರಲಿಕ್ಕೆ ಸಿದ್ಧನಾಗು' ಎಂದು ಹೇಳಿದನು.

ಸುಬಾಹುವು ಶತ್ರುಘ್ನನ ಮಾತನ್ನು ಕೇಳಿ ದಮನನಿಗೆ ರಾಜ್ಯದಲ್ಲಿ ಪಟ್ಟಾಭಿಷೇಕವನ್ನು ಮಾಡಿದನು. ಯುದ್ಧರಂಗದಲ್ಲಿ ಪುಷ್ಕರನಿಂದ ಮೃತನಾದ ಚಿತ್ರಾಂಗನಿಗೆ ಉತ್ತರ ಕಾರ್ಯವನ್ನು ಮಾಡಿದನು. ಸ್ವಲ್ಪ ಹೊತ್ತು ದುಃಖಪಟ್ಟನು. ತರುವಾಯ ರಾಮದೇವರ ಪಾದಸ್ಮರಣೆಯಿಂದ ದುಃಖವನ್ನು ಅಡಗಿಸಿಕೊಂಡನು. ಶತ್ರುಘ್ನನಿದ್ದಲ್ಲಿಗೆ ಪರಿವಾರ ಸಹಿತನಾಗಿ ಬಂದನು. ತರುವಾಯ ಕುದುರೆಯನ್ನು ಬಿಟ್ಟರು. ಎಲ್ಲರೂ ಅದರ ಹಿಂದೆಯೇ ಹೋದರು. ಕುದುರೆಯು ಬ್ರಹ್ಮಾವರ್ತದಲ್ಲಿ ಬಹುಪ್ರದೇಶಗಳನ್ನು ಸಂಚರಿಸಿತು. ಅಲ್ಲಿರುವ ರಾಜರೆಲ್ಲರೂ ರಾಮದೇವರ ಮೇಲಿನ ಭಕ್ತಿಯಿಂದ ಕುದುರೆಯನ್ನು ನೋಡಿ ನಮಸ್ಕರಿಸಿದರು. ಒಬ್ಬರೂ ಕುದುರೆಯನ್ನು ಕಟ್ಟಲಿಲ್ಲ. ವಿಚಿತ್ರಗಳಾದ ವಸ್ತುಗಳು ಆಭರಣಗಳು ತಮ್ಮ ರಾಜ್ಯ ಇತ್ಯಾದಿಗಳನ್ನು ಒಪ್ಪಿಸಿ ನಮಸ್ಕರಿಸಿದರು.



## ಸತ್ಯವಂತನ ಕಥೆಯು [1]

ತರುವಾಯ ರಾಮದೇವರ ಕುದುರೆಯ ತೇಜಃಪುರಕ್ಕೆ ಹೋಯಿತು. ಅಲ್ಲಿ ಸತ್ಯವಂತನೆಂಬ ರಾಜನು ಆಳುತ್ತಿದ್ದನು. ಶತ್ರುಘ್ನನು ಕುದುರೆಯ ಹಿಂದೆಯೇ ಹೋಗುತ್ತಾ ಅತಿಮನೋಹರವಾದ ಆ ಪಟ್ಟಣವನ್ನು ನೋಡಿದನು. ಅಲ್ಲಿ ಅಲ್ಲಲ್ಲಿ ಬಂಗಾರದ ಕಲಶಗಳನ್ನು ಇಟ್ಟಿದ್ದರು. ಸಾವಿರಾರು ದೇವಾಲಯಗಳು ಇದ್ದವು. ಅನೇಕ ಯತಿಗಳ ಮಠಗಳು ಅನೇಕ ಯತಿಗಳಿಂದ ಶೋಭಿಸುತ್ತಿದ್ದವು. ಅಲ್ಲಿ ಗಂಗೆಯು ಹರಿಯುತ್ತಿತ್ತು. ಬ್ರಾಹ್ಮಣರ ಅಗ್ರಹಾರಗಳಲ್ಲಿ ಅಗ್ನಿಹೋತ್ರದಿಂದ ಉಂಟಾದ ಹೊಗೆಯು ಜನರ ಪಾಪವನ್ನೆಲ್ಲಾ ಪರಿಹರಿಸುತ್ತಿದ್ದಿತು. ಶತ್ರುಘ್ನನು ಆ ಪಟ್ಟಣವನ್ನು ನೋಡಿ ಸಂತೋಷವುಳ್ಳವನಾಗಿ ಮಂತ್ರಿಯಾದ ಸುಮತಿಯೊಡನೆ ಈ ಆಶ್ಚರ್ಯಕರವಾದ ಪಟ್ಟಣವು ಯಾರಿಗೆ ಸೇರಿದ್ದು ಎಂದು ಕೇಳಿದನು.

ಆಗ ಸುಮತಿಯು ಶತ್ರುಘ್ನನೊಡನೆ ''ಈ ರಾಜ್ಯದಲ್ಲಿ ರಾಮದೇವರ ಭಕ್ತನಾದ

1. ಪ.ಪು.ಪಾ.ಖಂ. ಅ–32

ಸತ್ಯವಂತನೆಂಬ ರಾಜನಾಗಿರುವನು. ಋತಂಭರ ಎಂದು ಹೆಸರುಳ್ಳ ಅವನ ತಂದೆಯು ನಾನಾ ವ್ರತಗಳಿಂದ ಗೋವನ್ನು ಆರಾಧಿಸಿ ಅವನನ್ನು ಪಡೆದಿರುವನು.

ಪೂರ್ವದಲ್ಲಿ ಋತಂಭರನೆಂಬ ರಾಜನಿದ್ದನು. ಅವನಿಗೆ ಅನೇಕ ಹೆಂಡತಿಯರು. ಆದರೆ ಅವನಿಗೆ ಮಕ್ಕಳಿರಲಿಲ್ಲ. ಅವನು ದೈವೇಚ್ಛೆಯಿಂದ ಮನೆಗೆ ಬಂದಿದ್ದ ಜಾಬಾಲಿ ಋಷಿಗಳನ್ನು ಸತ್ಕರಿಸಿ 'ನಾನು ದಾನವನ್ನೋ, ವ್ರತವನ್ನೋ, ತೀರ್ಥಯಾತ್ರೆಯನ್ನೋ, ಯಾಗವನ್ನೋ, ಮಾಡಿದರೆ ಮಕ್ಕಳಾಗುವುದೋ ಅದನ್ನು ಹೇಳಿ. ನನಗೆ ಮಕ್ಕಳೇ ಇಲ್ಲ' ಎಂದು ಹೇಳಿದನು. ಆಗ ಜಾಬಾಲಿಋಷಿಗಳು ಮಕ್ಕಳಾಗಲಿಕ್ಕೆ ಭಗವಂತನ ಅನುಗ್ರಹ, ಗೋವಿನ ಅನುಗ್ರಹ, ರುದ್ರದೇವರ ಅನುಗ್ರಹ ಎಂದು ಮೂರು ಉಪಾಯಗಳಿರುವುವು. ನೀನು ಗೋವಿನ ಪೂಜೆಯನ್ನು ಮಾಡು. ಗೋವಿನ ದೇಹದಲ್ಲಿ ಎಲ್ಲಾ ದೇವತೆಗಳೂ ಇರುವರು. ಅದರ ಬಾಲ ದಲ್ಲಿಯೂ, ಮುಖದಲ್ಲಿಯೂ, ಕೊಂಬಿನಲ್ಲಿಯೂ, ಬೆನ್ನಿನಲ್ಲಿಯೂ, ದೇವತೆಗಳು ಇರುವರು. ಆ ಗೋವು ಸಂತುಷ್ಟವಾದರೆ ಸರ್ವಾಭೀಷ್ಟವನ್ನು ಕೊಡುವುದು–ಹೀಗೆ ತಿಳಿದುಕೊಂಡು ಗೋವಿನ ಪೂಜೆಯನ್ನು ಮಾಡು. ಯಾರು ನಿತ್ಯವೂ ಮನೆಯಲ್ಲಿ ಆಹಾರಾದಿಗಳಿಂದ ಗೋವನ್ನು ಪೂಜಿಸುವನೋ ಅವನಿಗೆ ದೇವತೆಗಳೂ ಪಿತೃಗಳೂ ಅನುಗ್ರಹಮಾಡುವರು. ಯಾರು ನಿಯಮದಿಂದ ಗೋವಿಗೆ ಆಹಾರವನ್ನು ಕೊಡುವನೋ ಅವನ ಎಲ್ಲಾ ಅಭೀಷ್ಟವೂ ಸಿದ್ಧಿಸುವುದು. ಯಾರ ಮನೆಯಲ್ಲಿ ದನವು ನೀರಡಿಕೆಯಿಂದ ಶ್ರಮಪಡುತ್ತಿರುವುದೋ ರಜಸ್ವಲೆಯಾದ ಮೇಲೂ ಮದುವೆ ಯಾಗದ ಹುಡುಗಿಯು ಇರುವಳೋ ದೇವರ ಪ್ರತಿಮೆಯ ಮೇಲೆಯೇ ಸಾಲಿಗ್ರಾಮದ ಮೇಲೆಯೋ ನಿರ್ಮಾಲ್ಯ ಹೂ ತುಳಸಿಗಳು ಇರುವುವೋ ಅವನು ಪೂರ್ವದಲ್ಲಿ ಮೇಯುತ್ತಿರುವ ಗೋವನ್ನು ಹೋಗಿ ತಡೆಯುವರೋ ಅವನ ಪಿತೃಗಳು ತಾವು ನರಕಕ್ಕೆ ಬೀಳುವೆವೆಂದು ನಡುಗುತ್ತಿರುವರು. ಯಾರು ದನಕ್ಕೆ ಕೋಲಿನಿಂದ ಬಡೆಯುವನೋ ಅವನು ಸುಲಭವಾಗಿ ಶಿಕ್ಷೆಯನ್ನು ಅನುಭವಿಸಲಿಕ್ಕೆ ಯಮಲೋಕಕ್ಕೆ ಹೋಗುವನು.

ಯಾರು ದನಗಳ ಮೇಲೆ ಕೂತುಕೊಳ್ಳುವ ಸೊಳ್ಳೆಗಳನ್ನು ಓಡಿಸುವನೋ ಅವನ ಪಿತೃಗಳು ನರಕದಲ್ಲಿ ಇದ್ದವರು ನಮ್ಮನ್ನು ನಮ್ಮ ಮಗನು ನರಕದಿಂದ ಉದ್ಧರ ಮಾಡುವನೆಂದು ಕುಣಿಯುವರು. ಮಹಾಜ್ಞಾನಿಯಾದ ಜನಕ ರಾಜನೂ ಒಂದುದಿನದಲ್ಲಿ ಸಂಚರಿಸುತ್ತಿದ್ದ ಒಂದು ಗೋವನ್ನು ತಡೆದಕಾರಣ ಅವನಿಗೆ ನರಕದರ್ಶನವಾಯಿತು. ಆದುದರಿಂದ ಗೋವನ್ನು ಯಾವಾಗಲೂ ಪೂಜಿಸಬೇಕು.

ಮನಸ್ಸಿನಿಂದಲೂ ನಿಂದಿಸಬಾರದು. ನಿಂದಿಸಿದರೆ ನರಕವನ್ನು ಹೊಂದುವನು. ಆದುದರಿಂದ ನೀನು ಗೋಪೂಜೆಯನ್ನು ಮಾಡು. ಅದರಿಂದ ಗೋವು ಸಂತುಷ್ಟವಾಗಿ ನಿನಗೆ ಮಗನನ್ನು ಕೊಡುತ್ತದೆ' ಎಂದು ಹೇಳಲು ಋತಂಭರನು ಗೋಪೂಜೆಯನ್ನು ಹೇಗೆ ಮಾಡಬೇಕೆಂದು ಕೇಳಿದನು. ಅದಕ್ಕೆ ಜಾಬಾಲಋಷಿಗಳು 'ನಿತ್ಯವೂ ಗೋವನ್ನು ಮೇಯಿಸಲಿಕ್ಕೆ ವನಕ್ಕೆ ಹೋಗಬೇಕು. ಗೋವಿಗೆ ಯಾವ ಧಾನ್ಯವನ್ನು ತಿನ್ನಲಿಕ್ಕೆ ಕೊಟ್ಟು ಅದರ ಸೆಗಣಿಯಲ್ಲಿ ಬರುವ ಆ ಧಾನ್ಯವನ್ನು ಭಕ್ಷಿಸಬೇಕು. ಹಾಗಾದರೆ ಮಕ್ಕಳಾಗುವುದು. ದನವು ಯಾವಾಗ ನೀರನ್ನು ಕುಡಿಯುವುದೋ ಆಗಲೇ ನೀವೂ ಅಶುದ್ಧವಾದ ನೀರನ್ನು ಕುಡಿಯುವವನಾಗು. ಅದು ಎತ್ತರದಲ್ಲಿ ಇರುವಾಗ ನೀನು ತಗ್ಗಾದ ಸ್ಥಳದಲ್ಲಿ ಇರು. ನಿತ್ಯವೂ ಅದರ ಮೈಮೇಲೆ ಕೂತುಕೊಳ್ಳುವ ಸೊಳ್ಳೆಗಳನ್ನು ಓಡಿಸು. ಆಹಾರವನ್ನು ಹಾಕು. ಹೀಗೆ ಮಾಡುವ ನಿನಗೆ ಗೋವು ಧರ್ಮಿಷ್ಠನಾದ ಮಗನನ್ನು ಕೊಡುವುದು' ಎಂದು ಹೇಳಿ ಹೋದರು. ಋತಂಭರರಾಜನು ಅವರು ಹೇಳಿದಂತೆ ಗೋಪೂಜೆಯನ್ನು ಮಾಡಿದನು. ಹೀಗೆಯೇ ಗೋಪೂಜೆಯನ್ನು ಮಾಡುತ್ತಾ ಬಹಳ ದಿವಸಗಳು ಕಳೆದುಹೋದವು. ವನಮಧ್ಯದಲ್ಲಿ ಗೋವು ಹುಲ್ಲನ್ನು ಮೇಯುತ್ತಾ ನಿರ್ಭಯವಾಗಿ ಸಂಚರಿಸಿತ್ತಿತ್ತು.

ಒಂದು ದಿನದಲ್ಲಿ ರಾಜನು ವನಶೋಭೆಯನ್ನು ನೋಡುತ್ತಾ ಗೋಪುರನ್ನು ಬಿಟ್ಟು ಸ್ವಲ್ಪದೂರಕ್ಕೆ ಹೋದನು. ಅಷ್ಟರಲ್ಲಿ ಕಾಡಿನ ಮಧ್ಯದಿಂದ ಒಂದು ಸಿಂಹವು ಬಂದು ಆ ಗೋವಿನ ಮೇಲೆ ಬಿದ್ದಿತು. ಸಿಂಹದ ಭಾರದಿಂದ ದುಃಖಯುಕ್ತನಾಗಿದ್ದು ಬಹಳ ಕೂಗುತ್ತಿದ್ದ ಗೋವನ್ನು ಕೇಳಿ ಓಡಿ ಬಂದು, ಸಿಂಹದಿಂದ ಸತ್ತು ಬಿದ್ದಿರುವ ಆ ಗೋವನ್ನು ನೋಡಿದನು. ಅದನ್ನು ನೋಡಿ ರಾಜನು ದುಃಖಪರವಶನಾಗಿ ಅಳುವವನಾದನು. ದುಃಖದಿಂದ ಜಾಬಾಲಿಋಷಿಗಳ ಬಳಿಗೆ ಬಂದು 'ಸ್ವಾಮಿ! ತಮ್ಮ ಆಜ್ಞೆಯಂತೆ ಗೋವನ್ನು ರಕ್ಷಿಸುತ್ತಾ ವನದಲ್ಲಿ ಇದ್ದೆನು. ಆಗ ಎಲ್ಲಿಂದಲೋ ಒಂದು ಸಿಂಹವು ಬಂದು ಆ ದನವನ್ನು ಕೊಂದುಬಿಟ್ಟಿತು. ಆ ಪಾಪಕ್ಕೆ ನಾನು ಏನು ಪ್ರಾಯಶ್ಚಿತ್ತಮಾಡಲಿ? ನನಗೆ ಮಕ್ಕಳಾಗಲಿಕ್ಕೆ ವ್ರತವು ಹೇಗೆ ಸಂಪೂರ್ಣ ವಾಗುವುದು?' ಎಂದು ಕೇಳಿದನು. ಅದಕ್ಕೆ ಜಾಬಾಲಿಋಷಿಗಳು 'ಪಾಪಪರಿಹಾರಕ್ಕೆ ಉಪಾಯಗಳಿವೆ. ಬ್ರಹ್ಮಹತ್ಯೆ, ಕೃತಘ್ನತೆ, ಸುರಾಪಾನ ಇತ್ಯಾದಿ ಪಾಪಗಳು, ಕೃಚ್ಛ್ರಚಾಂದ್ರಾಯಣ ದಾನ ಇತ್ಯಾದಿ ವ್ರತಗಳಿಂದ ಪರಿಹೃತವಾಗುವುವು. **ಎರಡು ಪಾಪಗಳಿಗೆ ಮಾತ್ರ ಪ್ರಾಯಶ್ಚಿತ್ತವೇ ಇರುವುದಿಲ್ಲ. ಬುದ್ಧಿಪೂರ್ವಕವಾಗಿ**

**ಗೋಹತ್ಯೆಯನ್ನು ಮಾಡುವುದು, ನಾರಾಯಣನನ್ನು ನಿಂದಿಸುವುದು ಈ ಎರಡು ಪಾಪಗಳಿಗೆ ಪ್ರಾಯಶ್ಚಿತ್ತವೇ ಇಲ್ಲ.** ಯಾರು ಗೋವಿಗೆ ಮನಸ್ಸಿನಿಂದಲಾದರೂ ಕೆಡುಕನ್ನು ಎಣಿಸುವನೋ ಅವನು ಹದಿನಾಲ್ಕು ಇಂದ್ರರು ಇರುವವರೆಗೆ ನರಕದಲ್ಲಿ ಇರುವರು. ಯಾವಾತನು ಒಂದು ಬಾರಿ ಪರಮಾತ್ಮನನ್ನು ನಿಂದಿಸುವನೋ ಅವನು ಮಕ್ಕಳು ಮೊಮ್ಮಕ್ಕಳಿಂದ ಸಹಿತನಾಗಿ ನರಕಕ್ಕೆ ಹೋಗುವನು. ಆದುದರಿಂದ ಪರಮಾತ್ಮನನ್ನು ನಿಂದಿಸುವವನೂ, ಗೋವಿಗೆ ದುಃಖವನ್ನು ಉಂಟುಮಾಡುವವನೂ, ನರಕದಿಂದ ಬಿಡುಗಡೆಯನ್ನು ಹೊಂದುವುದಿಲ್ಲ. ನಿನಗೆ ತಿಳಿಯದೆ ಗೋಹತ್ಯೆಯು ಏರ್ಪಟ್ಟಿತು. ಅದಕ್ಕೆ ಪ್ರಾಯಶ್ಚಿತ್ತವಿದೆ. ರಾಮಭಕ್ತನಾದ ಜ್ಞಾನಿಯಾದ ಋತುಪರ್ಣನೊಡನೆ ಕೇಳು. ಅವನು ಬೇಗನೇ ನಿನಗೆ ಗೋಹತ್ಯೆಯ ಪ್ರಾಯಶ್ಚಿತ್ತವನ್ನು ಹೇಳುವನು. ನೀನು ಅವನ ದೇಶವನ್ನು ಅಪಹರಿಸುವಿ. ಆದರೂ ನೀನು ವೈರಭಾವವನ್ನು ಬಿಟ್ಟು ಋತುಪರ್ಣನಿದ್ದಲ್ಲಿಗೆ ಹೋಗು. ಅವನು ಹೇಗೆ ಹೇಳುವನೋ ಹಾಗೆಯೇ ಬೇಗನೇ ಮಾಡು. ನೀನು ಮಾಡಿದ ಪಾಪವು ಪರಿಹೃತವಾಗುವುದು' ಎಂದು ಹೇಳಿದರು.

ಋತಂಭರನು ಆ ಮಾತನ್ನು ಕೇಳಿ ರಾಮದೇವರ ಭಕ್ತನಾದ, ಶತ್ರುಮಿತ್ರರಲ್ಲಿ ಸಮಬುದ್ಧಿಯುಳ್ಳ, ಋತುಪರ್ಣನ ಬಳಿಗೆ ಹೋಗಿ ತನಗೆ ಸಂಭವಿಸಿದ ಗೋವಧೆಯನ್ನು ಹೇಳಿಕೊಂಡನು. ಅದಕ್ಕೆ ಪ್ರಾಯಶ್ಚಿತ್ತವನ್ನು ಹೇಳಬೇಕೆಂದನು. ಆಗ ಋತುಪರ್ಣನು ನಗುತ್ತಾ ಶಾಸ್ತ್ರವನ್ನು ತಿಳಿದಿರುವ ಮುನಿಗಳೆಲ್ಲರೂ ಇರುತ್ತಿರುವಾಗ ನಾನು ಎಷ್ಟರವನು? ಅವರನ್ನೆಲ್ಲಾ ಬಿಟ್ಟು ಮೂರ್ಖನಾದ ನನ್ನ ಬಳಿಗೆ ಏಕೆ ಬಂದಿರುವಿ? ನಿನಗೆ ನನ್ನ ಮಾತಿನಲ್ಲಿ ವಿಶ್ವಾಸವಿದ್ದರೆ ಹೇಳುತ್ತೇನೆ. ಕೇಳು. ಕರ್ಮದಿಂದಲೂ ಮನಸ್ಸಿನಿಂದಲೂ ಮಾತಿ ನಿಂದಲೂ ರಾಮಚಂದ್ರದೇವರನ್ನು ಭಜಿಸು. ಕಪಟವಿಲ್ಲದೆ ಆ ಲೋಕಪ್ರಭುವನ್ನು ಸಂತೋಷಪಡಿಸು. ಅವರು ನಿನ್ನ ಮನಸ್ಸಿನಲ್ಲಿರುವ ಅಭೀಷ್ಟವನ್ನು ಕೊಡುವರು. ತಿಳಿಯದೆ ಸಂಭವಿಸಿದ ಗೋಹತ್ಯೆಯಿಂದ ಉಂಟಾದ ಪಾಪವನ್ನು ಪರಿಹರಿಸುವರು. ರಾಮದೇವರ ಸ್ಮರಣೆಯಿಂದ ಪವಿತ್ರನಾಗಿ ಬಂಗಾರದ ಸಹಿತವಾಗಿ ಗೋವನ್ನು ಒಬ್ಬ ಬ್ರಾಹ್ಮಣನಿಗೆ ದಾನಮಾಡು. ಇದರಿಂದ ನಿನ್ನ ಪಾಪವು ಪರಿಹೃತವಾಗುವುದು' ಎಂದು ಹೇಳಿದನು.

ಋತಂಭರರಾಜನು ಈ ಮಾತನ್ನು ಕೇಳಿ ಹಾಗೆಯೇ ರಾಮದೇವರ ಸ್ಮರಣೆಯನ್ನು ಮಾಡಿ ಋತುಪರ್ಣನು ಹೇಳಿದಂತೆ ವ್ರತವನ್ನು ಮಾಡಿದನು. ಆಮೇಲೆ ಗೋವನ್ನು ರಕ್ಷಿಸುತ್ತಾ ವನಕ್ಕೆ ಹೋದನು. ರಾಮನಾಮವನ್ನು ಸ್ಮರಿಸುತ್ತಾ ಇದ್ದನು.

ಆಗ ಕಾಮಧೇನುವು ಸಂತುಷ್ಟವಾಗಿ ನಿನಗೆ ಬೇಕಾದ ವರವನ್ನು ಕೇಳಿಕೊ ಎಂದಿತು. ಆಗ ರಾಜನು 'ನನಗೆ ಮನೋಹರನಾದ ರಾಮದೇವರ ಭಕ್ತನಾದ ಪಿತೃಭಕ್ತನಾದ ಸ್ವಧರ್ಮವನ್ನು ಪರಿಪಾಲಿಸುವ ಮಗನನ್ನು ಕೊಡಬೇಕೆಂದು ಹೇಳಿಕೊಂಡನು. ಆಗ ಕಾಮಧೇನುವು ಹಾಗೆಯೇ ಆಗಲಿ ಎಂದು ಹೇಳಿ ಮರೆಯಾಯಿತು. ಆಮೇಲೆ ಕಾಲಕ್ರಮದಿಂದ ಋತಂಭರನು ರಾಮದೇವರ ಭಕ್ತನಾದ ಮಗನನ್ನು ಪಡೆದನು. ಅವನಿಗೆ ಸತ್ಯವಂತನೆಂದು ಹೆಸರನ್ನಿಟ್ಟನು. ಪಿತೃಭಕ್ತನಾದ ಸತ್ಯವಂತನನ್ನು ಪಡೆದು ಬಹಳ ಸಂತೋಷವನ್ನು ಹೊಂದಿದನು. ವಯಸ್ಸಾದ ಮೇಲೆ ಋತಂಭರನು ರಾಜ್ಯವನ್ನು ಮಗನಲ್ಲಿ ಒಪ್ಪಿಸಿ ತಪಸ್ಸಿಗೆ ವನಕ್ಕೆ ಹೋದನು. ಅಲ್ಲಿ ಪರಮಾತ್ಮನನ್ನು ಭಕ್ತಿಯಿಂದ ಆರಾಧಿಸಿ ಉತ್ತಮವಾದ ಲೋಕವನ್ನು ಹೊಂದಿದನು.

ಈಗ ಈ ರಾಜ್ಯಕ್ಕೆ ಸತ್ಯವಂತನು ರಾಜನಾಗಿರುವನು. ಅವನು ನಿಜಧರ್ಮ ದಿಂದ ರಾಮದೇವರನ್ನು ಭಜನೆ ಮಾಡಿರುವನು. ಅವನಿಗೆ ಸಂತುಷ್ಟರಾಗಿ ರಾಮದೇವರು ತನ್ನಲ್ಲಿ ಭಕ್ತಿಯನ್ನು ಕೊಟ್ಟಿರುವರು. ಸತ್ಯವಂತನು ನಿತ್ಯವೂ ರಾಮದೇವರ ಕಥೆಯಲ್ಲಿಯೇ ಆಸಕ್ತರಾಗಿ ಸರ್ವಲೋಕವನ್ನು ಪವಿತ್ರವನ್ನಾಗಿ ಮಾಡುತ್ತಿರುವನು. ಅವನು ತನ್ನ ರಾಜ್ಯದಲ್ಲಿ ಯಾರು ರಾಮದೇವರ ಪೂಜೆಯನ್ನು ಮಾಡುವುದಿಲ್ಲವೋ ಅವರಿಗೆ ಯಮದೇವರಿಗೂ ಭಯಂಕರವಾದ ಶಿಕ್ಷೆಯನ್ನು ಮಾಡಿಸುವನು. ಎಂಟು ವರ್ಷ ಮೇಲೆ ಎಂಭತ್ತು ವರ್ಷದ ಒಳಗಿನ ಪ್ರತಿಯೊಬ್ಬ ರಿಂದಲೂ ಏಕಾದಶೀ ಉಪವಾಸವನ್ನು ಮಾಡಿಸುತ್ತಿರುವನು. ಯಾವಾಗಲೂ ತಲೆಯಲ್ಲಿ ತುಳಸಿಯನ್ನು ಧರಿಸಿಕೊಂಡಿರುವನು. ಸತ್ಯವಂತನು ಋಷಿಗಳಿಗೂ ಪೂಜ್ಯ ನಾಗಿರುವನು. ರಾಮದೇವರ ಸ್ಮರಣೆಯನ್ನು ಮಾಡಿ ಸರ್ವಪಾಪರಹಿತನಾಗಿರುವನು. ರಾಮದೇವರ ಕುದುರೆಯು ಬಂದಿರುವ ವಿಷಯವನ್ನು ತಿಳಿದಕೂಡಲೇ ಬಂದು ನಿನಗೆ ರಾಜ್ಯವನ್ನೇ ಒಪ್ಪಿಸುವನು' ಎಂದು ಹೇಳಿದನು.

ತರುವಾಯ ಕುದುರೆಯು ಸತ್ಯವಂತನ ರಾಜ್ಯವನ್ನು ಪ್ರವೇಶಿಸಿತು. ಅದನ್ನು ನೋಡಿ ಜನರು ಹೋಗಿ ರಾಜನೊಡನೆ 'ಯಾವುದೋ ಒಂದು ಬಿಳಿಯಾದ ಕುದುರೆಯು ಹಣೆಯಲ್ಲಿ ಪತ್ರದಿಂದ ಸಹಿತವಾಗಿ ಬಂದಿರುವುದು' ಎಂದು ಹೇಳಿದರು. ಅದನ್ನು ಕೇಳಿ ಸತ್ಯವಂತನು ನಗುತ್ತಾ ಅದು ಯಾರ ಕುದುರೆಯೆಂದು ನೋಡಿ ಬನ್ನಿರಿ ಎಂದನು. ಅವರು 'ಶತ್ರುಘ್ನನಿಂದ ರಕ್ಷಿತವಾಗಿ ರಾಮದೇವರ ಕುದುರೆಯು ಬರುತ್ತಿರುವುದು' ಎಂದರು. ಆ 'ರಾಮ' ಎಂಬ ಎರಡು ಅಕ್ಷರಗಳನ್ನು ಕೇಳಿದ ಕೂಡಲೇ ಸತ್ಯವಂತನಿಗೆ ಬಹುಸಂತೋಷವಾಯಿತು. 'ನಾನು ನಿತ್ಯವೂ

ಹೃದಯದಲ್ಲಿ ಯಾವ ರಾಮದೇವ ರನ್ನು ಧ್ಯಾನಮಾಡುತ್ತಾ ಇರುವನೋ ಆ ರಾಮದೇವರ ಕುದುರೆಯು ಶತ್ರುಘ್ನನಿಂದ ಸಹಿತವಾಗಿ ನನ್ನ ರಾಜ್ಯಕ್ಕೆ ಬಂದಿತೇ? ಹಾಗಾದರೆ ಯಾವಾಗಲೂ ಮನಸ್ಸಿನಲ್ಲಿ ರಾಮದೇವರನ್ನು ಮರೆಯದೆ ಇರುವ ಹನುಮಂತದೇವರೂ ಬಂದಿರುವರು. ಶತ್ರುಘ್ನನೂ ಹನುಮಂತದೇವರೂ ಇತರ ರಾಮದೇವರ ಭಕ್ತರೂ ಇರುವ ಸ್ಥಳಕ್ಕೆ ಹೋಗುವೆನು' ಎಂದು ಸತ್ಯವಂತನು ಹೇಳಿಕೊಂಡು ಎಲ್ಲಾ ಮಂತ್ರಿಗಳೊಡನೆ ಸಮಸ್ತ ರಾಜಧನವನ್ನು ಹಿಡಿದುಕೊಂಡು ನನ್ನೊಡನೆ ಬೇಗನೇ ಬನ್ನಿರಿ. ನಾನು ರಾಮದೇವರ ಕುದುರೆಯನ್ನು ಪರಿಪಾಲನೆ ಮಾಡಲಿಕ್ಕೆ ಹೋಗುವೆನು. ರಾಮದೇವರ ಪಾದಸೇವೆಯನ್ನು ಮಾಡಲಿಕ್ಕೆ ಹೋಗುವೆನು? ಈರೀತಿಯಾಗಿ ಹೇಳಿ ಸೈನಿಕರಿಂದ ಸಹಿತನಾಗಿ ಶತ್ರುಘ್ನನ ಬಳಿಗೆ ಹೋದನು.

ಆಗ ಶತ್ರುಘ್ನನೂ ಸೈನ್ಯಸಹಿತನಾಗಿ ರಾಜ್ಯದ ಒಳಗೆ ಬಂದನು. ವೀರರೆಲ್ಲರೂ ಗರ್ಜನೆ ಮಾಡುತ್ತಾ ಬರುತ್ತಿದ್ದರು. ಆಗ ಸತ್ಯವಂತನು ಮಂತ್ರಿಗಳಿಂದ ಸಹಿತನಾಗಿ ಬಂದು ಶತ್ರುಘ್ನನ ಕಾಲಿಗೆ ಬಿದ್ದು ರಾಜ್ಯವನ್ನು ಒಪ್ಪಿಸಿದನು. ಶತ್ರುಘ್ನನು ಆ ರಾಜನು ರಾಮದೇವರ ಭಕ್ತನೆಂದು ತಿಳಿದುಕೊಂಡು ಅವನು ರಾಜ್ಯವನ್ನು ಅವನ ಮಗನಾದ ರುಕ್ಮ ಎಂಬುವನಿಗೆ ಕೊಟ್ಟನು. ಸತ್ಯವಂತನು ಹನುಮಂತದೇವರನ್ನು ಆಲಿಂಗಿಸಿ, ರಾಮದೇವರ ಇತರ ಭಕ್ತರನ್ನೆಲ್ಲಾ ಆಲಿಂಗಿಸಿ ತಾನು ಕೃತಾರ್ಥನಾದೆನೆಂದು ಭಾವಿಸಿದನು. ಮನಸ್ಸಿನಲ್ಲಿಯೇ ಬಹುಸಂತೋಷವನ್ನು ಹೊಂದಿದನು. ತರುವಾಯ ಕುದುರೆಯು ಮುಂದೆ ಹೋಯಿತು. ಶತ್ರುಘ್ನನು ಸತ್ಯವಂತನಿಂದ ಸಹಿತನಾಗಿ ವೀರರಿಂದ ಕೂಡಿಕೊಂಡು ಕುದುರೆಯನ್ನು ಅನುಸರಿಸಿಕೊಂಡು ಹೋದನು.



## ಗೋವನ್ನು ಹಿಂಸಿಸಬಾರದು

ಒಂದು ಸಮಯದಲ್ಲಿ ಜನಕರಾಜನು ಯೋಗಸಾಮರ್ಥ್ಯದಿಂದ ಪ್ರಾಣಪರಿತ್ಯಾಗವನ್ನು ಮಾಡಿದನು. ಆಗ ಅವನಿಗೆ ಗಂಟೆಗಳಿಂದ ಅಲಂಕೃತವಾದ ವಿಮಾನವು ಬಂದಿತು. ಆಗ ಜನಕರಾಜನು ಆ ವಿಮಾನವನ್ನು ಏರಿದವನಾಗಿ ಯಮದೇವರ ಸಂಯಮನೀ ನಗರದ ಸಮೀಪವಾಗಿ ಹೋದನು. ಆಗ ಅಲ್ಲಿ ಅನೇಕ ಕೋಟಿ ನರಕಗಳಲ್ಲಿ ಪಾಪಿಗಳು ಪೀಡಿಸಲ್ಪಡುತ್ತಿದ್ದರು. ಅವರೆಲ್ಲರಿಗೂ ಜನಕರಾಜನ ಮೈಗೆ ತಾಗಿದ ಗಾಳಿಯು ಬೀಸಲು ಅವರೆಲ್ಲರೂ ಸೌಖ್ಯವನ್ನು

ಹೊಂದಿದರು. ಜನಕರಾಜನ ಮೈಗೆ ತಾಗಿದ ಗಾಳಿಯಿಂದ ಅವರ ಮಹಾದುಃಖವು ನಷ್ಟವಾಯಿತು. ಆಮೇಲೆ ಜನಕರಾಜನು ಅಲ್ಲಿಂದ ಮುಂದೆ ಹೋಗುವುದನ್ನು ನೋಡಿ ಅಲ್ಲಿದ್ದ ಪಾಪಿಗಳೆಲ್ಲರೂ ಅವನ ವಿಯೋಗವನ್ನು ಇಚ್ಛಿಸದೆ ಅತ್ಯಂತ ಕೂಗಿಕೊಂಡರು. ಅವರೆಲ್ಲರೂ ಕರುಣೆಯುಂಟಾಗುವಂತೆ 'ಪುಣ್ಯವಂತನೇ! ಹೋಗಬೇಡ. ನಿನ್ನ ಮೈಗೆ ತಾಗಿದ ಗಾಳಿಯು ಬರುವುದರಿಂದ ಪೀಡಿತರಾಗಿರುವ ನಮಗೆ ಸುಖವಾಗುತ್ತಿದೆ' ಎಂದು ಹೇಳಿದರು.

ಈ ಮಾತನ್ನು ಕೇಳಿ ಪರಮಧರ್ಮಿಷ್ಠನಾದ ಜನಕರಾಜನು ಕರುಣೆಯುಳ್ಳವನಾಗಿ 'ನನ್ನಿಂದಾಗಿ ಇಷ್ಟು ಜನರಿಗೆ ಸಂತೋಷವಾಗುವುದಾದರೆ ನಾನು ಇಲ್ಲಿಯೇ ಇದ್ದು ಬಿಡುವೆನು. ಇದೇ ನನಗೆ ಮನೋಹರವಾದ ಸ್ವರ್ಗವು' ಎಂದು ಹೇಳಿ ನರಕದ ಬಳಿಯಲ್ಲಿಯೇ ಇದ್ದುಬಿಟ್ಟನು. ದಯೆಯಿಂದ ಪ್ರಾಣಿಗಳಿಗೆಲ್ಲಾ ಸುಖವನ್ನು ಉಂಟುಮಾಡಿದನು. ಆ ಸಮಯದಲ್ಲಿ ಪಾಪಮಾಡಿದವರಿಗೆ ತೀವ್ರದುಃಖವನ್ನು ಉಂಟುಮಾಡುವ ಯಮದೇವರು ನರಕದ್ವಾರಕ್ಕೆ ಬಂದರು. ಆಗ ಅಲ್ಲಿ ಪ್ರಾಣಿಗಳ ಮೇಲೆ ದಯೆಯುಳ್ಳವನಾದ ವಿಮಾನದಲ್ಲಿ ಕೂತಿದ್ದ ಮಹಾಪುಣ್ಯವಂತನಾದ ಅಲಂಕೃತನಾದ ಜನಕರಾಜನನ್ನು ನೋಡಿದರು. ಅವನನ್ನು ನೋಡಿ ಯಮದೇವರು ಜನಕರಾಜ ನೊಡನೆ 'ರಾಜನೇ! ಸರ್ವಧರ್ಮಿಷ್ಠರಲ್ಲಿ ಶ್ರೇಷ್ಠನಾದ ನೀನೇಕೆ ಇಲ್ಲಿಗೆ ಬಂದಿರುವಿ? ಇದು ದುಷ್ಟರಾದ ಪ್ರಾಣಿಹಿಂಸಕರಾದ ಪಾಪಿಗಳು ಬರುವ ಸ್ಥಳವು. ಇಲ್ಲಿಗೆ ನಿನ್ನಂತಹ ಪುಣ್ಯಮಾಡುವವರು ಬರುವುದಿಲ್ಲ. ಇನ್ನೊಬ್ಬರ ನಿಂದೆಯಲ್ಲಿ ಆಸಕ್ತರಾದವರೂ ಇನ್ನೊಬ್ಬರ ದ್ರೋಹವನ್ನು ಮಾಡುವವರೂ ಇನ್ನೊಬ್ಬರ ದ್ರವ್ಯವನ್ನು ಅಪಹರಿಸು ವವರೂ ಇಲ್ಲಿಗೆ ಬರುವರು. ಯಾರು ಧರ್ಮದಿಂದ ಇರುವ ತನ್ನ ಸೇವೆಯನ್ನು ಮಾಡುತ್ತಿರುವ ಪತ್ನಿಯನ್ನು ಅಪರಾಧವಿಲ್ಲದೆ ಪರಿತ್ಯಜಿಸುವನೋ ಆ ಪುರುಷನು ಇಲ್ಲಿಗೆ ಬಂದು ಸೇರುವನು. ಯಾರು ಹಣ ಲೋಭದಿಂದ ಮಿತ್ರನನ್ನು ವಂಚಿಸುವನೋ ಅವನು ಇಲ್ಲಿಗೆ ಬಂದು ನನ್ನಿಂದ ಪೀಡೆಯನ್ನು ಹೊಂದುವನು. ಯಾರು ರಾಮದೇವರನ್ನು ಸ್ಮರಿಸುವುದಿಲ್ಲವೋ ಅವನನ್ನು ಕಟ್ಟಿಹಾಕುವೆನು. ನೀರಿನಲ್ಲಿ ಮುಳುಗಿಸುವೆನು. ನುಂಗಿ ಹಾಕುವೆನು. ಯಾರು ನರಕದುಃಖವನ್ನು ಪರಿಹರಿಸುವ ರಾಮದೇವರನ್ನು ಸ್ಮರಿಸುವನೋ ಅವನಿಗೆ ರಾಮದೇವರ ನಾಮವನ್ನು ನಾಲಿಗೆಯಲ್ಲಿ ಉಚ್ಚರಿಸುವವರೆಗೆ ಮಾತ್ರ ಅವನ ಅಂಗದಲ್ಲಿ ಪಾಪವಿರುವುದು. ಮಹಾಪಾಪಿಗಳನ್ನು ಯಾರು ಸೇವಿಸುವರೋ ಅವರನ್ನು ನನ್ನ ಭಟರು ಇಲ್ಲಿಗೆ ಕರೆತರುವರು. ನಿನ್ನಂತವರನ್ನು ನೋಡಲು ಅಸಮರ್ಥರು. ಮಹಾರಾಜನೇ! ಆದುದರಿಂದ ನೀನು

ಇಲ್ಲಿಂದ ಹೋಗು. ಬೇಕಾದ ಭೋಗಗಳನ್ನು ಅನುಭವಿಸು. ಈ ವಿಮಾನವನ್ನು ಏರಿಕೊಂಡು ಹೋಗಿ ಪುಣ್ಯದ ಫಲವನ್ನು ಅನುಭವಿಸು' ಎಂದು ಹೇಳಿದರು. ಈರೀತಿಯಾಗಿ ಯಮದೇವರ ಮಾತನ್ನು ಕೇಳಿ ಜನಕರಾಜನು ಕರುಣೆಯುಳ್ಳವನಾಗಿ 'ಸ್ವಾಮಿ! ನಾನು ಕರುಣೆಯುಳ್ಳವನಾಗಿ ಇಲ್ಲಿಂದ ಹೊರಟುಹೋಗುವುದೇ ಇಲ್ಲ. ಇಲ್ಲಿರುವವರೆಲ್ಲರೂ ನನ್ನ ಮೈಗೆ ತಾಗಿ ಬರುವ ಗಾಳಿಯಿಂದ ಸಂತೋಷವನ್ನು ಹೊಂದುತ್ತಿರುವರು. ಇವರನ್ನು ನರಕದಿಂದ ಬಿಡಿಸುವಿಯಾದರೆ ನಾನು ಸುಖವಾಗಿ ಪುಣ್ಯವಂತರು ಇರುವ ಸ್ವರ್ಗಕ್ಕೆ ಹೋಗುವೆನು' ಎಂದು ಹೇಳಿದನು. ಆಗ ಯಮದೇವರು ನರಕದಲ್ಲಿರುವ ಅನೇಕ ಜೀವರನ್ನು ಪ್ರತ್ಯೇಕ ಪ್ರತ್ಯೇಕವಾಗಿ ತೋರಿಸುತ್ತಾ 'ಇವನು ವಿಶ್ವಾಸದಿಂದ ಇದ್ದ ಮಿತ್ರನ ಹೆಂಡತಿಯನ್ನು ಅಪಹರಿಸಿದನು. ಆದರಿಂದ ಇವನು ಲೋಹಶಂಕುವೆಂಬ ನರಕದಲ್ಲಿ ಹತ್ತು ಸಾವಿರ ವರ್ಷ ದುಃಖವನ್ನು ಅನುಭವಿಸುತ್ತಿರುವನು. ಆಮೇಲೆ ಇವನನ್ನು ಹಂದಿಯಾಗಿ ಹುಟ್ಟುವಂತೆ ಮಾಡುವೆನು. ಆಮೇಲೆ ಇವನು ಮನುಷ್ಯನಾಗಿ ಹುಟ್ಟಿದಾಗ ಅಂಗಹೀನನಾಗಿ ಹುಟ್ಟುವನು. ಇವನು ಪರಸ್ತ್ರೀಯರನ್ನು ಬಲಾತ್ಕಾರದಿಂದ ಪುನಃಪುನಃ ಆಲಿಂಗನ ಮಾಡಿರುವನು. ಅದುದರಿಂದ ಇವನು ರೌರವ ನರಕದಲ್ಲಿ ನೂರು ವರ್ಷದಿಂದ ದುಃಖವನ್ನು ಅನುಭವಿಸುತ್ತಿರುವನು. ಇವನು ಇನ್ನೊಬ್ಬರ ಸೊತ್ತನ್ನು ಅಪಹರಿಸಿರುವನು. ಆದುದರಿಂದ ಇವನ ಕೈಯನ್ನು ಕಡಿದು ಕೀವುರಕ್ತದಿಂದ ಕೂಡಿದ ನರಕದಲ್ಲಿ ಹಾಕಿರುವೆನು. ಇವನು ಸಾಯಂಕಾಲದಲ್ಲಿ ಹಸಿವೆಯಿಂದ ಪೀಡಿತನಾಗಿ ಬಂದ ಅತಿಥಿಯನ್ನು ಬಾಯಿಮಾತಿನಿಂದಲಾದರೂ ಪೂಜಿಸಲಿಲ್ಲ. ಬರಬೇಕೆಂದು ಹೇಳಲಿಲ್ಲ. ಆದುದರಿಂದ ಇವನನ್ನು ತಾಮಿಸ್ರ ಎಂಬ ನರಕದಲ್ಲಿ ಹಾಕಿರುವೆನು. ಇವನನ್ನು ಭ್ರಮರಗಳು ಕಚ್ಚುತ್ತಿರುವುವು. ಹೀಗೆಯೇ ನೂರುವರ್ಷಗಳಿಂದ ಅನುಭವಿಸುತ್ತಿರುವನು. ಇವನು ಇನ್ನೊಬ್ಬರ ನಿಂದೆಯನ್ನು ಲಜ್ಜೆಯಿಲ್ಲದೆ ಚೆನ್ನಾಗಿ ಮಾಡುತ್ತಿದ್ದನು. ಇವನು ಅವನನ್ನು ಮತ್ತಷ್ಟು ಪ್ರೇರಿಸುತ್ತಾ ಚೆನ್ನಾಗಿ ಕೇಳುತ್ತಿದ್ದನು. ಆದುದರಿಂದ ಇವರಿಬ್ಬರೂ ಅಂಧಕೂಪವೆಂಬ ನರಕದಲ್ಲಿ ಬಿದ್ದಿರುವರು. ಬಹುದುಃಖಪಡುತ್ತಿರುವರು. ಇವನು ಮಿತ್ರದ್ರೋಹಿಯು. ರೌರವ ನರಕವನ್ನು ಅನುಭವಿಸುತ್ತಿರುವನು. ಆದುದರಿಂದ ಇವರನ್ನೆಲ್ಲಾ ಪಾಪದ ಫಲವನ್ನು ಅನುಭವಿಸಿದ ಮೇಲೆ ಬಿಡುತ್ತೇನೆ. ಪುಣ್ಯರಾಶಿಯನ್ನು ಮಾಡಿರುವ ನೀನು ಹೊರಟುಹೋಗು' ಎಂದು ಹೇಳಿದರು.

ಆಗ ರಾಮಭಕ್ತನಾದ ಜನಕರಾಜನು ಕರುಣಾಯುಕ್ತನಾಗಿ 'ಇವರಿಗೆ ನರಕದುಃಖದಿಂದ ಹೇಗೆ ಬಿಡುಗಡೆಯಾಗುವುದು? ಏನನ್ನು ಮಾಡಿದರೆ ಇವರು

ಸುಖವನ್ನು ಹೊಂದುವರು ಎಂದು ಬೇಗನೇ ಹೇಳಬೇಕು' ಎಂದು ಹೇಳಿದನು. ಅದಕ್ಕೆ ಯಮದೇವರು 'ಇವರು ಭಗವಂತನನ್ನು ಆರಾಧಿಸಲಿಲ್ಲ, ಇವರು ಭಗವಂತನ ಕಥೆಯನ್ನು ಕೇಳಲಿಲ್ಲ. ಈ ಪಾಪಿಗಳಿಗೆ ನರಕದಿಂದ ಹೇಗೆ ಬಿಡುಗಡೆಯಾಗಬೇಕು? ನೀನು ಮಹಾಪಾಪ ಮಾಡಿದ ಇವರಲ್ಲಿಯೂ ಕರುಣೆಯನ್ನು ತೋರಿಸುವ ಪಕ್ಷದಲ್ಲಿ ನೀನು ಒಂದುದಿನ ಪ್ರಾತಃಕಾಲದಲ್ಲಿ ಮಹಾಪಾಪವನ್ನು ಪರಿಹರಿಸುವ ಹೆಸರುಳ್ಳ ರಾಮದೇವರನ್ನು ಧ್ಯಾನಮಾಡಿ ಭಕ್ತಿಯಿಂದ ರಾಮರಾಮ ಎಂದು ಹೇಳಿದ್ದರಿಂದ ಉಂಟಾದ ಪುಣ್ಯವನ್ನು ಇವರಿಗೆ ಕೊಡು. ಅದರಿಂದ ಇವರಿಗೆ ನರಕದಿಂದ ಬಿಡುಗಡೆ ಯಾಗುವುದು' ಎಂದು ಹೇಳಿದರು.

ಈರೀತಿಯಾಗಿ ಯಮದೇವರ ಮಾತನ್ನು ಕೇಳಿ ಜನಕರಾಜನು ಆ ಪುಣ್ಯವನ್ನು ಕೊಟ್ಟು ಇವರಿಗೆಲ್ಲಾ ನರಕದಿಂದ ಬಿಡುಗಡೆಯಾಗಲಿ ಎಂದು ಹೇಳಿದನು. ನರಕದಲ್ಲಿ ಇದ್ದವರೆಲ್ಲರೂ ಆ ಕ್ಷಣದಲ್ಲಿಯೇ ನರಕದಿಂದ ಬಿಡುಗಡೆ ಹೊಂದಿದವರಾಗಿ ದಿವ್ಯರೂಪವುಳ್ಳವರಾಗಿ ಜನಕರಾಜನೊಡನೆ 'ಮಹಾರಾಜ! ನಿನ್ನ ಅನುಗ್ರಹದಿಂದ ನಾವು ಮಹಾದುಃಖಕರವಾದ ಈ ನರಕದಿಂದ ಬಿಡುಗಡೆಯನ್ನು ಹೊಂದಿ ಉತ್ತಮಲೋಕಕ್ಕೆ ಹೋಗುತ್ತಿರುವೆವು' ಎಂದು ಹೇಳಿ ಹೋದರು. ಜನಕರಾಜನು ಸೂರ್ಯನಂತೆ ಪ್ರಕಾಶಮಾನವಾಗಿ ನರಕದಿಂದ ಹೋಗುವ ಅವರನ್ನು ನೋಡಿ ಮನಸ್ಸಿನಲ್ಲಿ ಬಹುಸಂತೋಷವನ್ನು ಹೊಂದಿದನು. ಎಲ್ಲಾ ನರಕದವರೂ ಜನಕರಾಜನನ್ನು ಸ್ತುತಿಸುತ್ತಾ ಸ್ವರ್ಗಲೋಕಕ್ಕೆ ಹೋದರು.

ಈರೀತಿಯಾಗಿ ನರಕದಲ್ಲಿ ಇದ್ದವರೆಲ್ಲರೂ ಸ್ವರ್ಗಕ್ಕೆ ಹೋದಮೇಲೆ ಜನಕರಾಜನು ಯಮದೇವರೊಡನೆ 'ಧರ್ಮರಾಜ ಪಾಪವನ್ನು ಮಾಡಿದ ಜನರು ಇಲ್ಲಿಗೆ ಬರುವರು. ಪುಣ್ಯವನ್ನು ಮಾಡಿದವರು ಇಲ್ಲಿಗೆ ಬರುವುದಿಲ್ಲ ಎಂದು ಹೇಳಿದಿರಲ್ಲಾ! ನನ್ನ ಆಗಮನವು ಇಲ್ಲಿಗೆ ಯಾವ ಪಾಪದಿಂದ ಆಯಿತು? ನಾನು ಯಾವ ಪಾಪವನ್ನು ಮಾಡಿರುವೆನು? ಹೇಳಬೇಕು' ಎಂದು ಹೇಳಿದನು. ಅದಕ್ಕೆ ಯಮದೇವರು 'ರಾಜನೇ! ನೀನು ಮಹಾಪುಣ್ಯವನ್ನು ಮಾಡಿರುವಿ. ಇಂತಹ ಪುಣ್ಯವು ಯಾರಲ್ಲಿಯೂ ಕಾಣಿಸುವುದಿಲ್ಲ, ಶ್ರೀರಾದೇವರ ಪಾದಕಮಲದಲ್ಲಿ ಭ್ರಮರದಂತೆ ಇರುವಿ. ನಿನ್ನ ಕೀರ್ತಿಯು ಎಲ್ಲಾ ಪಾಪಿಗಳನ್ನು ಪವಿತ್ರವನ್ನಾಗಿ ಮಾಡುವುದು. ಆದರೂ ನಿನ್ನಲ್ಲಿ ಪಾಪಲೇಶವಿರುವುದು. ಅದುದರಿಂದ ನೀನು ಸಂಯಮನೀನಗರದ ಬಳಿಗೆ ಬಂದಿರುವಿ. ಒಂದುದಿನದಲ್ಲಿ ನೀನು ನರಕದ

ಬಾಗಿಲಿಗೆ ದರ್ಶನವಾಯಿತು. ಈಗ ನೀನು ಆ ಪಾಪದಿಂದ ರಹಿತನಾಗಿರುವಿ. ಬಹುಪುಣ್ಯವುಳ್ಳವನಾಗಿರುವಿ. ಪುಣ್ಯದ ಫಲಗಳನ್ನು ಅನುಭವಿಸು. ನೀನು ಈ ಮಾರ್ಗದಲ್ಲಿ ಬರದೆ ಇದ್ದರೆ ಈ ನರಕದಲ್ಲಿದ್ದವರಿಗೆ ಬಿಡುಗಡೆಯಾಗುತ್ತಿರಲಿಲ್ಲ. ಅವರ ಭಾಗ್ಯದಿಂದಲೂ ನೀನು ಇಲ್ಲಿಗೆ ಬಂದಿರುವಿ. ರಾಮದೇವರ ಅನುಗ್ರಹವು ಅವರಿಗೆ ಆಗಬೇಕಾಗಿದ್ದಿತು. ನಿನ್ನಂತಹ ಕರುಣಾಶೀಲರು ಪ್ರಾಣಿಗಳ ದುಃಖವನ್ನು ಪರಿಹರಿಸುವ ಸ್ವಭಾವ ವುಳ್ಳವರು' ಎಂದು ಹೇಳಲು ಜನಕರಾಜನು ಯಮದೇವರಿಗೆ ನಮಸ್ಕರಿಸಿ ಅಪ್ಸರಸ್ತ್ರೀಯರಿಂದ ಶೋಭಿತವಾದ ವಿಮಾನದಲ್ಲಿ ಕೂತುಕೊಂಡು ಹೊರಟು ಹೋದನು. ಆದುದರಿಂದ ಗೋವುಗಳನ್ನು ಹಿಂಸಾಮಾಡಬಾರದು.

ಈರೀತಿಯಾಗಿ ಜಾಬಾಲಿ ಋಷಿಗಳು ಋತಂಭರರಾಜನಿಗೆ ಹೇಳಿದ ಕಥೆಯನ್ನು ಸುಮತಿಯೆಂಬ ಮಂತ್ರಿಯು ಶತ್ರುಘ್ನನೊಡನೆ ತಿಳಿಸಿದನು.



## ವಿದ್ಯುನ್ಮಾಲಿಯ ವಧೆ [1]

ತೇಜಃಪುರದಿಂದ ಹೊರಟ ಕುದುರೆಯು ಮುಂದೆ ಹೋಗುತ್ತಿತ್ತು. ಹಿಂದಿನಿಂದ ಶತ್ರುಘ್ನನೇ ಮೊದಲಾದ ಸಾವಿರಾರು ಜನ ರಥಿಕರು ಹೋಗುತ್ತಿದ್ದರು. ಅಕಸ್ಮಾತ್ತಾಗಿ ಮಧ್ಯಮಾರ್ಗದಲ್ಲಿ ಭಯಂಕರವಾದ ಕತ್ತಲೆಯಾಯಿತು. ತಮ್ಮವರು ಯಾರು ಪರಕೀಯರು ಯಾರು ಎಂದೂ ಕತ್ತಲೆಯಲ್ಲಿ ತಿಳಿಯದೆ ಹೋಯಿತು. ಆಕಾಶವೆಲ್ಲಾ ಧೂಳಿಯಿಂದ ಮುಚ್ಚಿಹೋಯಿತು. ಮಿಂಚು ಉಂಟಾಯಿತು. ಗುಡುಗಿನ ಶಬ್ದವು ಕೇಳಿಸಿತು. ಮೇಘಗಳು ರಕ್ತವನ್ನು ಕೀವನ್ನು ಮಲವನ್ನೂ ಮಳೆಯನ್ನಾಗಿ ಸುರಿಸಿದವು. ಎಲ್ಲರೂ ಇದೇನು ಏನು ಎಂದು ಭಯಪಟ್ಟರು. ಅಂತಹ ಸಮಯದಲ್ಲಿ ಪಾತಾಳದಲ್ಲಿ ವಾಸಮಾಡುತ್ತಿದ್ದ ರಾವಣನ ಮಿತ್ರನಾದ ವಿದ್ಯುನ್ಮಾಲಿ ಎಂಬ ಪ್ರಸಿದ್ಧನಾದ ರಾಕ್ಷಸನು ಅನೇಕ ರಾಕ್ಷಸಮೂಹದಿಂದ ಸಹಿತನಾಗಿ ಇಚ್ಛಾನುಸಾರವಾಗಿ ಸಂಚರಿಸುವ ವಿಮಾನದಲ್ಲಿ ಕೂತುಕೊಂಡು ಬಂದು ಎಲ್ಲಾ ವೀರರಿಗೂ ಭಯವನ್ನು ಉಂಟುಮಾಡುತ್ತಾ ಆ ಕುದುರೆಯನ್ನು ಅಪಹರಿಸಿದನು. ಒಂದು ಮುಹೂರ್ತವಾದ ಮೇಲೆ ಕತ್ತಲೆಯೆಲ್ಲವೂ ಹೊರಟುಹೋಯತು. ಆಕಾಶವು ನಿರ್ಮಲವಾಗಿ ಶೋಭಿಸಿತು. ಶತ್ರುಘ್ನನೇ ಮೊದಲಾದ ವೀರರು ಕುದುರೆಯೆಲ್ಲಿ ಎಂದು ಸುತ್ತಲೂ ನೋಡಿಕೊಂಡರು. ಕುದುರೆಯು ಕಾಣಿಸಲಿಲ್ಲ. ಹಾಹಾಕಾರವುಂಟಾಯಿತು. 'ಯಾವ

1. ಪ.ಪು.ಪಾ.ಖಂ. ಅ–33, 34

ದುರ್ಬುದ್ಧಿಯುಳ್ಳವನು ಕುದುರೆಯನ್ನು ಅಪಹರಿಸಿದನು? ಕುದುರೆಯು ಎಲ್ಲಿಗೆ ಹೋಯಿತು' ಎಂದು ಎಲ್ಲರೂ ಹೇಳಿಕೊಂಡರು.

ಆ ಸಮಯದಲ್ಲಿ ವಿಮಾನದಲ್ಲಿ ಕೂತಿದ್ದ ಅನೇಕ ರಾಕ್ಷಸರಿಂದ ಸಹಿತನಾಗಿದ್ದ ಆ ವಿದ್ಯುನ್ಮಾಲಿಯೆಂಬ ರಾಕ್ಷಸನು ಎಲ್ಲರಿಗೂ ಕಾಣಿಸಿದನು. ಕುದುರೆಯನ್ನು ಅಪಹರಿಸಿದ ಭಯಂಕರವಾದ ಆ ರಾಕ್ಷಸರು ಕಾಣಿಸಿದರು. ಆಗ ಜನರೆಲ್ಲರೂ ಶತ್ರುಘ್ನನ ಬಳಿಗೆ ಬಂದು 'ಆಕಾಶದಲ್ಲಿ ವಿಮಾನದಲ್ಲಿ ಕೂತಿರುವ ಒಬ್ಬ ಪುರುಷನು ಕತ್ತಲೆಯನ್ನು ಉಂಟುಮಾಡಿ ಕುದುರೆಯನ್ನು ಅಪಹರಿಸಿಕೊಂಡು ಹೋಗಿರುವನು. ಕುದುರೆಯನ್ನು ತರುವುದಕ್ಕಾಗಿ ಮಾಡಬೇಕಾದ ಕಾರ್ಯವನ್ನು ಮಾಡು' ಎಂದು ಹೇಳಿದರು. ಶತ್ರುಘ್ನನು ಆ ಮಾತನ್ನು ಕೇಳಿ ಮಹಾರೋಷವುಳ್ಳವನಾಗಿ 'ಯಾವ ರಾಕ್ಷಸನು ನನ್ನ ಕುದುರೆಯನ್ನು ಅಪಹರಿಸಿಕೊಂಡು ಹೋದನು? ನನ್ನ ಬಾಣಗಳಿಂದ ಬಡಿಯಲ್ಪಟ್ಟು ಅವನ ವಿಮಾನವು ಕೆಳಗೆ ಬೀಳಲು. ಅವನ ತಲೆಯು ನನ್ನ ಬಾಣಗಳಿಂದ ಭೂಮಿಗೆ ಬೀಳಲಿ. ಎಲ್ಲಾ ರಥಿಕರು ಸಿದ್ಧರಾಗಿರಿ. ನನ್ನ ಕುದುರೆಯನ್ನು ಅಪಹರಿಸಿರುವ ಆ ಪುರಷನನ್ನು ಸಂಹರಿಸಲಿಕ್ಕೆ ಎಲ್ಲರೂ ಹೋಗಿರಿ' ಈಪ್ರಕಾರವಾಗಿ ರೋಷದಿಂದ ಕೆಂಪಾದ ಕಣ್ಣುಳ್ಳವನಾಗಿ ಹೇಳಿ ಆಮೇಲೆ ನೀತಿಯನ್ನು ತಿಳಿದವನಾದ ಮಂತ್ರಿಯಾದ ಸುಮತಿಯೊಡನೆ 'ರಾಕ್ಷಸರನ್ನು ಕೊಲ್ಲಲಿಕ್ಕೆ ಯಾರನ್ನು ಕಳುಹಿಸಬೇಕು? ಬೇಗನೇ ಹೇಳು. ನೀನು ಹೇಳಿದಂತೆ ಮಾಡುವೆನು' ಎಂದು ಕೇಳಲು ಮಂತ್ರಿಯು 'ರಾಕ್ಷಸನನ್ನು ಜಯಿಸಲಿಕ್ಕೆ ಮಹಾಅಸ್ತ್ರ ಶಸ್ತ್ರಗಳಿಂದ ಉದ್ಯುಕ್ತನಾಗಿ ಪುಷ್ಕಲನು ಹೋಗಲಿ. ಹಾಗೆಯೇ ಲಕ್ಷ್ಮೀನಿಧಿಯೂ ಹೋಗಲಿ. ತೀಕ್ಷ್ಣಬಾಣಗಳಿಂದ ಅವನ ವಿಮಾನವನ್ನು ಪುಡಿಮಾಡಲಿ. ಹಾಗೆಯೇ ಸಮರ್ಥರಾದ ಹನುಮಂತದೇವರೂ ಹೋಗಲಿ. ಎಲ್ಲಾ ಶೂರರೂ ಹೋಗಲಿ. ಸುಮದ, ಸುಬಾಹು ಪ್ರತಾಪಾಗ್ರ್ಯ ಎಲ್ಲರೂ ರಾಕ್ಷಸರೊಡನೆ ಯುದ್ಧಮಾಡಲಿಕ್ಕೆ ಹೋಗಲಿ ಎಂದು ಹೇಳಲು ಶತ್ರುಘ್ನನು 'ಪುಷ್ಕಲನೇ ಮೊದಲಾದ ವೀರರೆಲ್ಲರೂ ರಾಕ್ಷಸರನ್ನು ಸಂಹರಿಸುವ ವಿಷಯದಲ್ಲಿ ನನ್ನ ಮುಂಭಾಗದಲ್ಲಿ ಪ್ರತಿಜ್ಞೆಯನ್ನು ಮಾಡಿರಿ. ನಿಮ್ಮ ನಿಮ್ಮ ಪರಾಕ್ರಮವನ್ನು ಸೂಚಿಸುವ ಪ್ರತಿಜ್ಞೆಯನ್ನು ಮಾಡಿ ಎಲ್ಲರೂ ಯುದ್ಧಕ್ಕೆ ಹೋಗಿರಿ' ಎಂದು ಹೇಳಿದನು.

ಈರೀತಿಯಾಗಿ ಶತ್ರುಘ್ನನ ಮಾತನ್ನು ಕೇಳಿ ಎಲ್ಲರೂ ತಮ್ಮ ತಮ್ಮ ಪ್ರತಿಜ್ಞೆಯನ್ನು ಮಾಡಿದರು. ಮೊದಲು ಪುಷ್ಕಲನು ಶತ್ರುಘ್ನನ ಮಾತನ್ನು ಕೇಳಿ ಪರಮ ಉತ್ಸಾಹದಿಂದ ಕೂಡಿದ ಮನಸ್ಸಿನಿಂದ 'ರಾಜಶ್ರೇಷ್ಠನೇ! ನಾನು ಪ್ರತಿಜ್ಞೆಯನ್ನು ಮಾಡುವುದನ್ನು ಕೇಳಬೇಕು. ನಾನು ತೀಕ್ಷ್ಣಬಾಣಗಳಿಂದ ದೈತ್ಯನನ್ನು ಮೂರ್ಛಿತ

ನನ್ನಾಗಿ ಮಾಡದೆ ಇದ್ದರೆ ಕನ್ಯೆಯ ಸೊತ್ತನ್ನು ಅನುಭವಿಸುವವನಿಗೆ ದೇವರನ್ನು ನಿಂದಿಸುವವನಿಗೆ ಏನು ಪಾಪವು ಬರುವುದೋ ಆ ಪಾಪವು ನನಗೆ ಬರಲಿ' ಇತ್ಯಾದಿ ಪ್ರತಿಜ್ಞೆಯನ್ನು ಮಾಡಿದನು.

ಆಗ ಲಕ್ಷ್ಮೀನಿಧಿಯು 'ಒಬ್ಬರು ವೇದಗಳನ್ನು ನಿಂದೆಯನ್ನು ಮಾಡುವುದನ್ನು ಕೇಳಿಯೂ ಯಾರು ಅಲ್ಲಿಯೇ ಇರುವನೋ, ಮನಸ್ಸಿನಲ್ಲಿ ವೇದಗಳ ನಿಂದೆಯನ್ನು ಮಾಡಿದ್ದೇ ಸರಿಯೆಂದು ತಿಳಿದಿರುವನೋ, ಬ್ರಾಹ್ಮಣನು ದುರಾಚಾರಿಯಾಗಿ ಅರಗನ್ನು ಮಾರುವನೋ, ಹಣದ ಲೋಭದಿಂದ ದನವನ್ನು ಮಾರುವನೋ, ಮ್ಲೇಚ್ಛರ ಭಾವಿಯ ನೀರನ್ನು ಕುಡಿದೂ ಪ್ರಾಯಶ್ಚಿತ್ತ ಮಾಡಿಕೊಳ್ಳುವುದಿಲ್ಲವೋ, ಇವರಿಗೆಲ್ಲ ಬರುವ ಪಾಪವು ನಾನು ಯುದ್ಧದಲ್ಲಿ ಪರಾಙ್ಮುಖನಾದರೆ ನನಗೆ ಬರಲಿ' ಎಂದು ಹೇಳಿದನು. ಹನಮಂತದೇವರೂ ಎಲ್ಲಾ ಜನರಂತೆ ಪ್ರತಿಜ್ಞೆ ಮಾಡಿದರು. 'ರಾಮದೇವರ ಸೀತಾದೇವಿಯರ ಪರಮಾನುಗ್ರಹದಿಂದ ಯಾವ ಅಸುರರನ್ನು ಸಂಹರಿಸುವೆನು. ನನ್ನ ಮಾತು ಸುಳ್ಳಾಗುವುದಾದರೆ ರಾಮದೇವರ ಭಕ್ತಿಯು ದೂರವಾಗಲಿ. ಹಾಲು ಕುಡಿಯುವುದಕ್ಕಾಗಿ ಶೂದ್ರನು ಕಪಿಲಾಗೋವನ್ನು ಸಾಕಿದರೆ ಅವನಿಗೆ ಬರುವ ಪಾಪವು ನನಗೆ ಬರಲಿ. ಶೂದ್ರನು ಕಾಮಮೋಹಿತನಾಗಿ ಬ್ರಾಹ್ಮಣಸ್ತ್ರೀಯನ್ನು ಹೊಂದಿದರೆ ಅವನಿಗೆ ಬರುವ ಪಾಪವು ನನಗೆ ಬರಲಿ. ಮದ್ಯಪಾನ ಮಾಡಿದವರಿಗೆ ಬರುವ ಪಾಪವು ಬರಲಿ' ಇತ್ಯಾದಿ ರೀತಿಯಾಗಿ ಪ್ರತಿಜ್ಞೆಯನ್ನು ಮಾಡಿದರು. ತರುವಾಯ ಹೀಗೆಯೇ ಎಲ್ಲಾ ವೀರರೂ ಪ್ರತಿಜ್ಞೆಯನ್ನು ಮಾಡಿದರು. ಆಮೇಲೆ ಶತ್ರುಘ್ನನು ಎಲ್ಲರನ್ನೂ ಸ್ತೋತ್ರಮಾಡಿ 'ನಾನು ಬಾಣಗಳಿಂದ ಆ ರಾಕ್ಷಸನ ತಲೆಯನ್ನು ಕತ್ತರಿಸಿ ಬೀಳಿಸದೆ ಇದ್ದರೆ ಸುಳ್ಳು ಸಾಕ್ಷಿಯನ್ನು ಹೇಳುವವನಿಗೆ ಬರುವ ಪಾಪವೂ, ಬಂಗಾರವನ್ನು ಕದಿಯುವವರಿಗೆ ಬರುವ ಪಾಪವೂ, ಬ್ರಾಹ್ಮಣರನ್ನು ನಿಂದಿಸುವವರಿಗೆ ಬರುವ ಪಾಪವೂ ಬರಲಿ' ಎಂದು ಹೇಳಿದನು.

ಈರೀತಿಯಾಗಿ ಶತ್ರುಘ್ನನು ಪ್ರತಿಜ್ಞೆಯನ್ನು ಮಾಡಿದ್ದನ್ನು ಕೇಳಿ ಜನರೆಲ್ಲರೂ 'ರಾಮದೇವರ ತಮ್ಮನಾದ ಶತ್ರುಘ್ನನೇ! ನೀನು ಪರಮಧನ್ಯನಾಗಿರುವಿ. ನಿನಗಿಂತ ಉತ್ತಮರು ಯಾರಿರುವರು? ಮಹಾಬಲಿಷ್ಠನಾದ ಲವಣಾಸುರನನ್ನು ಸಂಹರಿಸಿರುವಿ. ಈ ದುಷ್ಟನಾದ ರಾಕ್ಷಸನೆಲ್ಲಿ? ಅವನ ಅಲ್ಪಬಲವೆಲ್ಲಿ? ಒಂದೇ ಕ್ಷಣದಲ್ಲಿ ಅವನ ನಾಶವನ್ನು ಮಾಡುವಿ' ಎಂದು ಹೇಳಿದವರಾಗಿ ತಮ್ಮತಮ್ಮ ಪ್ರತಿಜ್ಞೆಯನ್ನು ಸತ್ಯವನ್ನಾಗಿ ಮಾಡುವುದಕ್ಕಾಗಿ ರಾಕ್ಷಸನೊಡನೆ ಯುದ್ಧವನ್ನು ಮಾಡಲಿಕ್ಕೆ ಹೋದರು. ಅವರೆಲ್ಲರನ್ನೂ ನೋಡಿ ವಿಮಾನದಲ್ಲಿ ಕೂತಿದ್ದ ರಾಕ್ಷಸನು ಮೇಘದಂತೆ

ಗಂಭೀರವಾದ ವಾಣಿಯಿಂದ ಬೆದರಿಸುತ್ತಾ 'ಭಟರೆಲ್ಲರೂ ನನ್ನೊಡನೆ ಯುದ್ಧಕ್ಕೆ ಬರಬೇಡಿರಿ. ನಿಮ್ಮ ನಿಮ್ಮ ಮನೆಗೆ ಹೋಗಿರಿ. ನಿಮ್ಮ ಪ್ರಾಣವನ್ನು ಬಿಡಬೇಡಿರಿ. ನಾನು ಕುದುರೆಯನ್ನು ಬಿಡಲಾರೆನು. ನಾನು ವಿದ್ಯುನ್ಮಾಲಿ ಎಂದು ಪ್ರಸಿದ್ಧನಾದವನು. ರಾವಣನ ಸ್ನೇಹಿತನು. ನನ್ನ ಮಿತ್ರನನ್ನು ಕೊಂದಿರುವ ಬಲಿಷ್ಠನಾದ ಆ ರಾಮದೇವನೆಲ್ಲಿ? ಅವನ ತಮ್ಮನಾದ ಲಕ್ಷ್ಮಣನೆಲ್ಲಿ? ಆ ರಾಮನನ್ನು ಅವನ ತಮ್ಮನನ್ನು ಕೊಂದು ಅವರ ಕಂಠನಾಲದ ರಕ್ತವನ್ನು ಕುಡಿಯುವೆನು' ಇತ್ಯಾದಿ ಮಾತುಗಳನ್ನು ಹೇಳಿದನು.

ಅದನ್ನು ಕೇಳಿ ಪುಷ್ಕಲನು 'ಯುದ್ಧದಲ್ಲಿ ಉತ್ತಮ ಭಟನು ತನ್ನನ್ನು ಹೊಗಳಿಕೊಳ್ಳಬಾರದು. ಅಸ್ತ್ರಶಸ್ತ್ರಗಳಿಂದ ಪರಾಕ್ರಮವನ್ನು ತೋರಿಸಬೇಕು. ಯಾರಿಂದ ಸ್ವಕೀಯರಿಂದ ಸಹಿತನಾದ ರಾವಣನು ಸಂಹೃತನಾದನೋ ಅಂತಹ ರಾಮದೇವರ ಕುದುರೆಯನ್ನು ಅಪಹರಿಸಿಕೊಂಡು ಎಲ್ಲಿಗೆ ಹೋಗುವಿ? ಶತ್ರುಘ್ನನ ಬಾಣಗಳಿಂದ ಕೆಳಗೆ ಬೀಳುವಿ. ನಿನ್ನ ಹೆಣವನ್ನು ನರಿಗಳು ತಿಂದುಹಾಕುವುವು. ರಾಮದೇವರ ಸೇವಕನಾದ ನಾನು ಇರಲು ನೀನು ಗರ್ಜನೆಯನ್ನು ಮಾಡಬೇಡ. ಭಟರು ಶತ್ರುಗಳನ್ನು ಜಯಿಸಿ ಗರ್ಜನೆ ಮಾಡಬೇಕು' ಎಂದು ಹೇಳಿದನು.

ತರುವಾಯ ರಾಕ್ಷಸನಿಗೂ ಪುಷ್ಕಲನಿಗೂ ಭಯಂಕರವಾದ ಯುದ್ಧವು ನಡೆಯಿತು. ಕೊನೆಗೆ ರಾಕ್ಷಸನು ಪುಷ್ಕರನನ್ನು ಕೊಲ್ಲಬೇಕೆಂದು ಘೋರವಾದ ಮುದ್ಗರವೆಂಬ ಆಯುಧವನ್ನು ಬಿಟ್ಟನು. ಅದು ಬಂದು ಪುಷ್ಕಲನ ಎದೆಗೆ ತಾಗಲು ಅವನು ಮೂರ್ಛಿತನಾಗಿ ಬಿದ್ದನು. ಆಮೇಲೆ ವಿದ್ಯುನ್ಮಾಲಿಯ ತಮ್ಮನಾದ ಉಗ್ರದಂಷ್ಟನಿಗೂ ಲಕ್ಷ್ಮೀನಿಧಿಗೂ ಭಯಂಕರವಾದ ಯುದ್ಧವು ನಡೆಯಿತು. ಆಗಲೇ ಪುಷ್ಕಲನು ಮೂರ್ಛೆಯಿಂದ ಏಳುವವನಾಗಿ 'ರಾಕ್ಷಸಶ್ರೇಷ್ಠನೇ1 ಧನ್ಯನಾಗಿರುವಿ. ನಿನ್ನ ಪರಾಕ್ರಮವು ಮಹತ್ತಾದದ್ದು. ಈಗ ನನ್ನ ಪ್ರತಿಜ್ಞೆಯನ್ನು ಕೇಳು. ನಿನ್ನನ್ನು ತೀಕ್ಷ್ಣಬಾಣಗಳಿಂದ ಭೂಮಿಗೆ ಬೀಳಿಸುವೆನು' ಈ ಪ್ರಕಾರವಾಗಿ ಹೇಳಿ ಅಗ್ನಿಯಂತೆ ಜ್ವಲಿಸುವ ಬಾಣವನ್ನು ಬಿಟ್ಟನು. ಅದಕ್ಕೆ ಪ್ರತೀಕಾರವನ್ನು ಮಾಡಲಿಕ್ಕೆ ರಾಕ್ಷಸನು ಉದ್ಯುಕ್ತನಾಗುವಷ್ಟರಲ್ಲಿಯೇ ಆ ಬಾಣವು ರಾಕ್ಷಸನ ಎದೆಗೆ ಬಂದು ತಾಗಿತು. ಅದರಿಂದ ಮೂರ್ಛಿತನಾಗಿ ರಾಕ್ಷಸನು ವಿಮಾನದಿಂದ ಕೆಳಗೆ ಬಿದ್ದನು. ಆಗಲೇ ಅವನ ತಮ್ಮನಾದ ಉಗ್ರದಂಷ್ಟನು ಅವನನ್ನು ಎತ್ತಿಕೊಂಡು ವಿಮಾನಕ್ಕೆ ತೆಗೆದುಕೊಂಡು ಹೋದನು. ವಜ್ರದಂಷ್ಟನು ಮಹಾರೋಪದಿಂದ ಪುಷ್ಕಲನೊಡನೆ 'ನನ್ನ ಅಣ್ಣನನ್ನು ಬೀಳಿಸಿ ಎಲ್ಲಿಗೆ ಹೋಗುವಿ? ನನ್ನನ್ನು ಜಯಿಸಿ ಜಯವನ್ನು ಹೊಂದು.

'ನಾನು ಇರುವಾಗ ಮನಸ್ಸಿನಲ್ಲಿರುವ ಜಯದ ಆಸೆಯನ್ನು ಬಿಟ್ಟುಬಿಡು' ಎಂದು ಹೇಳಿದನು.

ಆಗ ಪುಷ್ಕಲನು ರೋಷದಿಂದ ಅವನ ಎದೆಗೆ ಹತ್ತು ಬಾಣಗಳನ್ನು ಬಿಟ್ಟನು. ರಾಕ್ಷಸನು ಕೋಪಿಸಿಕೊಂಡು ಬಂದು ಪುಷ್ಕಲನನ್ನು ಮುಷ್ಟಿಯಿಂದ ಬಡೆದನು. ಪುಷ್ಕಲನು ವತ್ಸದಂತ ಎಂಬ ತೀಕ್ಷ್ಣಬಾಣಗಳನ್ನು ಬಿಟ್ಟನು. ಆಗ ರಾಕ್ಷಸನು ಶೂಲದಿಂದ ಪುಷ್ಕಲನನ್ನು ಬಡಿದನು. ಅದರಿಂದ ಪುಷ್ಕಲನು ಮೂರ್ಛೆಯನ್ನು ಹೊಂದಿದನು. ಆಗ ಹನುಮಂತದೇವರು ಕೋಪಿಸಿಕೊಂಡು ಬಂದು ಆಕಾಶಕ್ಕೆ ಹೋಗಿ ವಿಮಾನದಲ್ಲಿ ಇದ್ದ ರಾಕ್ಷಸರನ್ನೆಲ್ಲಾ ಉಗುರಿನಿಂದ ಸೀಳಿದರು. ಕೆಲವರನ್ನು ಬಾಲದಿಂದ ಬಡಿದರು. ಕೆಲವರನ್ನು ಕೈಯಿಂದ ಬಡಿದರು. ಕೆಲವರು ರಾಕ್ಷಸರು ಹನುಮಂತದೇವರಿಂದ ಸತ್ತುಬಿದ್ದರು. ಕೆಲವರು ಮೂರ್ಛಿತರಾದರು. ಇನ್ನು ಕೆಲವರು ಪೆಟ್ಟುತಿಂದು ಭಯದಿಂದ ಓಡಿಹೋದರು. ಎಲ್ಲೆಲ್ಲಿ ವಿಮಾನವು ಕಾಣಿಸಿತೋ ಅಲ್ಲಲ್ಲಿ ಹೋಗಿ ಬಡಿದರು. ವಜ್ರದಂಷ್ಟನು ಹನುಮಂತದೇವರ ಮೇಲೆ ಶೂಲದಿಂದ ಬಡಿದನು. ಹನುಮಂತದೇವರು ಶೂಲವನ್ನು ಬಾಯಿಯಿಂದ ಕಟ್ಟಿ ತುಂಡು ಮಾಡಿದರು. ಹನುಮಂತದೇವರು ವಜ್ರದಂಷ್ಟನಿಗೆ ಕಪೋಲಕ್ಕೆ ಬಡಿದರು. ಆಗ ವಜ್ರದಂಷ್ಟನು ಮಾಯೆಯನ್ನು ಸೃಜಿಸಿದನು. ಆಗ ಭಯಂಕರವಾದ ಕತ್ತಲೆಯಾಯಿತು. ಸೈನಿಕರಿಗೆ ತಮ್ಮವರು ಯಾರು? ಪರಕೀಯರು ಯಾರು ಎಂದು ತಿಳಿಯುತ್ತಿದ್ದಿಲ್ಲ. ಭಟರ ಮೇಲೆ ಪರ್ವತಶಿಖರಗಳಂತೆ ಇರುವ ಕಲ್ಲುಗಳು ಬೀಳತೊಡಗಿದವು. ಅದರಿಂದ ಜನರೆಲ್ಲರೂ ಭಯವನ್ನೂ ಹೊಂದಿದರು. ಆಮೇಲೆ ಮಿಂಚುಬಂದಿತು. ಮೇಘಗಳು ರಕ್ತವನ್ನು ಕೀವನ್ನೂ ಮಳೆಯಾಗಿ ಸುರಿಸಿದವು. ಆಕಾಶದಿಂದ ಅನೇಕ ತಲೆಯಿಲ್ಲದ ಮುಂಡಗಳು ಬೀಳತೊಡಗಿದವು. ವಸ್ತ್ರಹೀನರಾದ ರೂಪಿಗಳಾದ ಅನೇಕ ದೈತ್ಯರು ಕಾಣಿಸಿಕೊಂಡರು. ಆಗ ಶತ್ರುಘ್ನನ ಸೈನಿಕರೆಲ್ಲರೂ ಭಯಪಟ್ಟು ಓಡಲಾರಂಭಿಸಿ ದರು. ಆಗ ಶತ್ರುಘ್ನನ ಸೇನಾಪತಿಯು ಶ್ರೀರಾಮದೇವರನ್ನು ಸ್ಮರಿಸುತ್ತಾ ಬಾಣವನ್ನು ಬಿಡುವನಾದನು. ರಾಕ್ಷಸನ ಮಾಯೆಯನ್ನು ನಾಶಮಾಡಿ ಮೋಹನಾಸ್ತ್ರವನ್ನು ಬಿಟ್ಟನು.

ಆಗ ದಿಕ್ಕುಗಳು ಕಾಣಿಸಿದವು. ಮೇಘಗಳು ಹೊರಟುಹೋದವು. ಪುಷ್ಕಲನು ಶಾಂತಿಯನ್ನು ಹೊಂದಿದನು. ಆಗ ರಾಕ್ಷಸರಿಂದ ಕೂಡಿದ ವಿಮಾನವು ಮುಂಭಾಗದಲ್ಲಿ ಕಾಣಿಸಿಕೊಂಡಿತು. ರಾಕ್ಷಸರು ಕಡಿ, ಬಡಿ, ಹೊಡಿ ಎಂದು ಹೇಳುತ್ತಿದ್ದರು. ವಿಮಾನದ ಮೇಲೆ ಬಾಣಗಳು ಬಿದ್ದು ವಿಮಾನವು ಮುರಿಯುವಂತೆ

ಆಯಿತು. ಆಗ ದೈತ್ಯನು ಕೋಪಿಸಿಕೊಂಡು ನೂರಾರು ಬಾಣಗಳನ್ನು ಬಿಟ್ಟನು. ಆಗ ಶತ್ರುಘ್ನನು ವಾಯವ್ಯಾಸ್ತ್ರವನ್ನು ಬಿಟ್ಟನು. ಆ ಅಸ್ತ್ರದಿಂದ ವಿಮಾನದಲ್ಲಿ ಇದ್ದ ರಾಕ್ಷಸರೆಲ್ಲರೂ ತಲೆಬಿಚ್ಚಿಕೊಂಡು ಕೆಳಗೆ ಬಿದ್ದರು. ಶತ್ರುಘ್ನನು ವಾಯವ್ಯಾಸ್ತ್ರವನ್ನು ಬಿಟ್ಟದ್ದನ್ನು ನೋಡಿ ಆ ರಾಕ್ಷಸನು ಪಾಶುಪತಾಸ್ತ್ರವನ್ನು ಬಿಟ್ಟನು. ಅದರಿಂದ ಅನೇಕ ಭೂತಪ್ರೇತಗಳು ಎಲ್ಲರ ರಕ್ತಪಾನಮಾಡಲಿಕ್ಕೆ ಆರಂಭಿಸಿದವು. ಅದನ್ನು ನೋಡಿ ಶತ್ರುಘ್ನನು ನಾರಯಣಾಸ್ತ್ರವನ್ನು ಬಿಟ್ಟನು. ಅದರಿಂದ ಭೂತಾದಿಗಳನ್ನು ನಾಶಮಾಡಿದನು. ಆಗ ವಿದ್ಯುನ್ಮಾಲಿಯು ಕೋಪಿಸಿಕೊಂಡು ಶತ್ರುಘ್ನನನ್ನು ಕೊಲ್ಲಲಿಕ್ಕೆ ತ್ರಿಶೂಲವನ್ನು ಹಿಡಿದುಕೊಂಡು ಬಂದನು. ಆಗ ಶತ್ರುಘ್ನನು ಬಾಣಗಳನ್ನು ಬಿಟ್ಟು ಅವನ ಎರಡು ಕೈಗಳನ್ನು ಕತ್ತರಿಸಿದನು. 'ಶತ್ರುಘ್ನ! ಹೋಗಬೇಡ. ಎಲ್ಲಿಗೆ ಹೋಗುವೆ?' ಎಂದು ಹೇಳುತ್ತಾ ತಲೆಯಿಂದ ಸಂಹರಿಸಲಿಕ್ಕೆ ಬಂದನು. ಅವನ ತಲೆಯನ್ನು ಶತ್ರುಘ್ನನು ಕತ್ತರಿಸಿದನು. ಅದನ್ನು ನೋಡಿ ವಜ್ರದಂಷ್ಟ್ರನು ಮುಷ್ಟಿಯಿಂದ ಗುದ್ದಲಿಕ್ಕೆ ಆರಂಭಿಸಿದನು. ಶತ್ರುಘ್ನನು ಬಾಣದಿಂದ ಅವನ ತಲೆಯನ್ನೂ ಅಪಹರಿಸಿದನು. ಸತ್ತು ಉಳಿದ ರಾಕ್ಷಸರು ಶತ್ರುಘ್ನನಿಗೆ ನಮಸ್ಕರಿಸಿ ಕುದುರೆಯನ್ನು ತಂದುಕೊಟ್ಟರು.

ತರುವಾಯ ಶತ್ರುಘ್ನನ ಪಕ್ಷದ ಶೂರರೆಲ್ಲರೂ ಗರ್ಜನೆ ಮಾಡಿದರು. ರಾಕ್ಷಸರಿಂದ ಅಪಹೃತವಾದ ಕುದುರೆಯನ್ನು ಹೊಂದಿ ಶತ್ರುಘ್ನನು ಬಹಳ ಸಂತೋಷವನ್ನು ಹೊಂದಿದನು. ಲಕ್ಷ್ಮೀನಿಧಿಯೇ ಮೊದಲಾದವರೆಲ್ಲರೂ ಶತ್ರುಘ್ನನನ್ನು ಸ್ತೋತ್ರ ಮಾಡಿದರು. ಆ ವಿದ್ಯುನ್ಮಾಲಿಯೆಂಬ ಅಸುರನು ಸಾಯಲು ದೇವತೆಗಳೆಲ್ಲರೂ ಭಯವನ್ನು ಬಿಟ್ಟು ಸಂತೋಷವನ್ನು ಹೊಂದಿದರು. ತರುವಾಯ ವೀರರೆಲ್ಲರೂ ಶತ್ರುಘ್ನನನ್ನು ಹೊಗಳಿ ಕುದುರೆಯನ್ನು ಮುಂದೆ ಬಿಡಲಿಕ್ಕೆ ಹೇಳಿದರು. ತರುವಾಯ ಕುದುರೆಯು ಮುಂದೆ ಹೋಯಿತು. ಅದರ ಹಿಂದೆಯೇ ಎಲ್ಲರೂ ಹೋದರು.



# ಆರಣ್ಯಕಮುನಿಯ ಕಥೆ [1]

ರಾಮದೇವರ ಕುದುರೆಯು ಮುಂದೆ ವೇಗದಿಂದ ಉತ್ತರದಿಕ್ಕಿಗೆ ಹೋಯಿತು. ಮುನಿಗಳ ಸಮೂಹದಿಂದ ಸೇವಿತವಾದ ರೇವಾನದಿಯ ತೀರಕ್ಕೆ ಬಂದಿತು. ಶತ್ರುಘ್ನನು ಅಲ್ಲಿದ್ದ ಮುನಿಗಳನ್ನು ನಮಸ್ಕರಿಸುತ್ತಾ ವೇಗದಿಂದ ಹೋಗುತ್ತಿದ್ದ ಕುದುರೆಯ ಹಿಂದೆಯೇ ಹೋದನು. ರೇವಾ ತೀರದಲ್ಲಿಯೇ ಇದ್ದ ಜೀರ್ಣವಾದ ಪರ್ಣಾಶ್ರಮವನ್ನು ನೋಡಿ ಶತ್ರುಘ್ನನು ಸುಮತಿಯೊಡನೆ ಇದು ಯಾರ ಆಶ್ರಮವೆಂದು ಕೇಳಿದನು. ಅದಕ್ಕೆ ಸುಮತಿಯು 'ಇಲ್ಲಿ ಇರುವ ಮುನಿಗಳನ್ನು ನೋಡಿ ನಾವು ಪಾಪರಹಿತರಾಗುವೆವು. ಆದುದರಿಂದ ಸರ್ವಶಾಸ್ತ್ರಪಾರಂಗತರಾದ ಅವರನ್ನು ನಮಸ್ಕರಿಸಿ ಅವರೊಡನೆ ಕೇಳು. ಅವರೆಲ್ಲವನ್ನು ಹೇಳುವರು. ಅವರು ಆರಣ್ಯಕ ಎಂದು ಪ್ರಸಿದ್ಧರಾದ ಮುನಿಗಳೂ ರಾಮದೇವರ ಪಾದದಲ್ಲಿ ಭಕ್ತಿಯುಳ್ಳವರು' ಎಂದು ಹೇಳಲು ಶತ್ರುಘ್ನನು ಹನುಮಂತದೇವರಿಂದಲೂ, ಪುಷ್ಕಲನಿಂದಲೂ, ಸುಮತಿಯಿಂದಲೂ, ಲಕ್ಷ್ಮೀನಿಧಿಯಿಂದಲೂ, ಪ್ರತಾಪಾಗ್ರ್ಯನಿಂದಲೂ, ಸುಬಾಹುವಿನಿಂದಲೂ, ಸುಮದನಿಂದಲೂ, ಕೂಡಿಕೊಂಡು ಆರಣ್ಯಕಮುನಿಗಳ ಸಮೀಪಕ್ಕೆ ಹೋಗಿ ನಮಸ್ಕರಿಸಿದನು.

ಅವರನ್ನು ನೋಡಿ ಆರಣ್ಯಕಮುನಿಗಳು ಅವರಿಗೆ ಅರ್ಘ್ಯಪಾದ್ಯಾದಿ ಉಪಚಾರಗಳನ್ನು ಮಾಡಿದರು. ನೀವೆಲ್ಲರೂ ಎಲ್ಲಿಂದ ಬಂದಿರಿ? ಹೇಗೆ ಬಂದಿರಿ ಇತ್ಯಾದಿಗಳನ್ನು ತಿಳಿಸಿರಿ ಎಂದು ಕೇಳಿದರು. ಅದಕ್ಕೆ ಸುಮತಿಯು 'ರಘುವಂಶದ ರಾಜನ ಯಾಗದ ಕುದುರೆಯು ಬರುತ್ತದೆ. ಅದನ್ನು ನಾವೆಲ್ಲರೂ ರಕ್ಷಿಸುತ್ತಾ ಬರುತ್ತಿದ್ದೇವೆ. ಆ ಮಹಾರಾಜನು ಯಾಗವನ್ನು ಮಾಡುವನು' ಎಂದು ಹೇಳಿದನು. ಅದನ್ನು ಕೇಳಿ ಆರಣ್ಯಕಮುನಿಗಳು ನಗುತ್ತಾ ಹೇಳಿದರು. 'ಸ್ವಲ್ಪ ಪುಣ್ಯವನ್ನು ಉಂಟುಮಾಡುವ ನಶ್ವರವಾದ ಫಲಕ್ಕೆ ಕಾರಣವಾದ ಯಾಗಗಳಿಂದ ಏನು ಫಲವಿದೆ? ಲೋಕದಲ್ಲಿ ಮೂರ್ಖನಾದವನು ಸ್ಥಿರವಾದ ಐಶ್ವರ್ಯವನ್ನು ಕೊಡುವ ದೇವತೆಯಾದ ಶ್ರೀರಾಮಚಂದ್ರದೇವರ ಪೂಜೆಯನ್ನು ಬಿಟ್ಟು ಇತರ ಪೂಜೆಯನ್ನು ಮಾಡುವನು. ಯಾವ ರಾಮದೇವರನ್ನು ಸ್ಮರಣೆ ಮಾಡುವ ಮಾತ್ರದಿಂದಲೇ ಎಲ್ಲಾ ಪಾಪಗಳೂ ಪರಿಹೃತವಾಗುವುವೋ ಅಂತಹ ರಾಮದೇವರನ್ನು ಬಿಟ್ಟು ಮೂರ್ಖನಾದವನು ಯಾಗಾದಿಗಳಿಂದ ಕ್ಲೇಶವನ್ನು ಹೊಂದುವನು. ಸುಲಭವಾದ

1. ಪ.ಪು.ಪಾ.ಖಂ. ಅ–35

ರಾಮಭಜನವನ್ನು ಬಿಟ್ಟು ದುರ್ಲಭವಾದ ಕಾರ್ಯವನ್ನು ಮಾಡುವರು. ನಾನು ಪೂರ್ವದಲ್ಲಿ ತತ್ವಜ್ಞಾನವನ್ನು ಹೊಂದಬೇಕೆಂದು ಅನೇಕ ತೀರ್ಥಗಳಲ್ಲಿ ಸಂಚರಿಸಿದೆನು. ನನಗೆ ಒಬ್ಬರೂ ಸರಿಯಾಗಿ ಉಪದೇಶಿಸಲಿಲ್ಲ.

ತರುವಾಯ ಮಹಾಭಾಗ್ಯದಿಂದ ಸ್ವರ್ಗಲೋಕದಿಂದ ತೀರ್ಥಯಾತ್ರೆಗಾಗಿ ಬರುತ್ತಿದ್ದ ಲೋಮಶಮುನಿಗಳನ್ನು ನೋಡಿದೆನು. ನಾನು ಬೇಗನೇ ಅವರಿಗೆ ನಮಸ್ಕರಿಸಿ ಸಂಸಾರವನ್ನು ದಾಟುವ ಉಪಾಯವನ್ನು ಉಪದೇಶಿಸಬೇಕೆಂದು ಹೇಳಿಕೊಂಡೆನು. ಅದಕ್ಕೆ ಅವರು 'ಸ್ವರ್ಗಕ್ಕೆ ಕಾರಣವಾದ ಅನೇಕ ದಾನಗಳೂ ವ್ರತಗಳೂ ಇವೆ. ಆದರೆ ನಾನು ಪರಮರಹಸ್ಯವನ್ನು ಹೇಳುತ್ತೇನೆ. ಸದಾ ಸಂಸಾರ ಸಮುದ್ರದಿಂದ ಬಿಡುಗಡೆ ಮಾಡುವ ಆ ವಿಷಯವನ್ನು ಕೇಳು. ಅದನ್ನು ನಾಸ್ತಿಕರಿಗೆ, ಶ್ರದ್ದೆಯಿಲ್ಲದವರಿಗೆ, ನಿಂದಾಮಾಡುವವರಿಗೆ, ವಂಚಕರಿಗೆ, ಭಕ್ತಿಯಲ್ಲಿ ವೈರವುಳ್ಳವರಿಗೆ, ಹೇಳಲೇಬಾರದು. ರಾಮದೇವರಲ್ಲಿ ಭಕ್ತಿಯುಳ್ಳವರಿಗೆ, ಶಾಂತರಾದವರಿಗೆ, ಕಾಮಕ್ರೋಧ ರಹಿತರಿಗೆ, ಹೇಳಬೇಕು. ರಾಮದೇವರಿಗಿಂತ ಉತ್ತಮದೇವತೆಯಿರುವುದಿಲ್ಲ. ರಾಮದೇವರಿಂದ ಉತ್ತಮ ವ್ರತವಿರುವುದಿಲ್ಲ. ರಾಮದೇವರಿಗಿಂತ ಉತ್ತಮವಾದ ಯೋಗವಿರುವುದಿಲ್ಲ. ರಾಮದೇವರಿಗಿಂತ ಉತ್ತಮವಾದ ಯಾಗವಿರುವುದಿಲ್ಲ. ಅಂತಹ ರಾಮದೇವರನ್ನು ಸ್ಮರಿಸಿ, ರಾಮದೇವರನ್ನು ಜಪಿಸಿ, ರಾಮದೇವರನ್ನು ಪೂಜಿಸಿ ಈ ಲೋಕದಲ್ಲಿಯೂ, ಪರಲೋಕದಲ್ಲಿಯೂ, ಬೇಕಾದ ಅಭೀಷ್ಟವನ್ನು ಹೊಂದುವನು. ರಾಮದೇವರನ್ನು ಧ್ಯಾನಮಾಡಿದರೆ ಉತ್ತಮವಾದ ಭಕ್ತಿಯನ್ನು ಕೊಡುವರು. ಚಂಡಾಲನಾದರೂ ರಾಮದೇವರನ್ನು ಸ್ಮರಿಸಿದರೆ ಉತ್ತಮವಾದ ಗತಿಯನ್ನು ಹೊಂದುವನು. ವೇದಶಾಸ್ತ್ರಪಾರಂಗತರಾದವರು ರಾಮದೇವರನ್ನು ಸ್ಮರಿಸಿದರೆ ಅವರಿಗೆ ಉತ್ತಮವಾದ ಗತಿಯಾಗುವುದೆಂದು ಹೇಳಬೇಕಾಗಿಯೇ ಇಲ್ಲ. ಸರ್ವವೇದಶಾಸ್ತ್ರಗಳ ರಹಸ್ಯವನ್ನು ಹೇಳುವೆನು. ರಾಮದೇವರೇ ಸರ್ವೋತ್ತಮ ದೇವತೆಯು. ರಾಮದೇವರನ್ನು ಪೂಜಿಸುವುದೇ ಉತ್ತಮವಾದ ವ್ರತವು. ರಾಮದೇವರ ನಾಮವೇ ಉತ್ತಮವಾದ ಮಂತ್ರವು. ರಾಮದೇವರ ಸ್ಮರಣೆಯೇ ಉತ್ತಮವಾದ ಶಾಸ್ತ್ರವು. ಆದುದರಿಂದ ಸರ್ವಪ್ರಕಾರದಿಂದ ರಾಮದೇವರನ್ನು ಭಜಿಸು. ಆಗ ಸಂಸಾರ ಸಮುದ್ರವು ದನದ ಹೆಜ್ಜೆಯಿಂದ ಆದ ತಗ್ಗುಪ್ರದೇಶದಷ್ಟು ಸುಲಭವಾಗಿ ದಾಟಲಿಕ್ಕೆ ಸಾಧ್ಯವಾಗುವುದು' ಎಂದು ಹೇಳಿದರು.

ಅದನ್ನು ಕೇಳಿ ನಾನು ರಾಮದೇವರನ್ನು ಹೇಗೆ ಧ್ಯಾನಮಾಡಬೇಕು ಎಂದು

ಕೇಳಿದೆನು. ಆಗ ಲೋಮಶಮುನಿಗಳು ವಿಚಾರಮಾಡಿ 'ರಾಮದೇವರು ಸಂತೋಷ ಪಡುವಂತೆ ಹೇಗೆ ಧ್ಯಾನ ಮಾಡಬೇಕೆಂಬುದನ್ನು ಹೇಳುತ್ತೇನೆ ಕೇಳು. ಅಯೋಧ್ಯಾಪಟ್ಟಣದಲ್ಲಿ ಕಲ್ಪವೃಕ್ಷದ ಬುಡದಲ್ಲಿ ಸುಂದರವಾದ ಮಂಟಪದಲ್ಲಿ ಮರಕತ ಮೊದಲಾದ ರತ್ನದಿಂದಲೂ ಬಂಗಾರದಿಂದಲೂ ಮಾಡಿದ ಸಿಂಹಾಸನದಲ್ಲಿ ಕೂತಿರುವ ಗರಿಕೆಹುಲ್ಲಿನಂತೆ ನೀಲನಾಗಿರುವ ಹುಣ್ಣಿಮೆಯ ಚಂದ್ರನನ್ನು ಧಿಕ್ಕರಿಸುವ ಮುಖವುಳ್ಳ ಅಷ್ಟಮೀಚಂದ್ರನಂತೆ ಹಣೆಯುಳ್ಳ ನೀಲಕೂದಲಿನ ಕಾಂತಿಯಿಂದ ಕೂಡಿದ ಕಿರೀಟದಿಂದ ಅಲಂಕೃತರಾದ ಮಕರಕುಂಡಲಗಳನ್ನು ಧರಿಸಿರುವ ಹವಳದಂತೆ ಕೆಂಪಾದ ತುಟಿಯುಳ್ಳ ನಕ್ಷತ್ರಗಳಂತೆ ಪ್ರಕಾಶಿಸುವ ಹಲ್ಲುಗಳುಳ್ಳ ಸರ್ವಾಂಗಸುಂದರ ರಾದ ಸರ್ವಾಭರಣಭೂಷಿತರಾದ ರಾಮದೇವರನ್ನು ಧ್ಯಾನಮಾಡಬೇಕೆಂದು ಹೇಳಿದರು. ಅದಕ್ಕೆ ನಾನು 'ರಾಮದೇವರು ಯಾರು? ಅವರ ಕಥೆಯನ್ನು ನನಗೆ ಹೇಳಬೇಕು' ಎಂದು ಕೇಳಿಕೊಂಡೆನು.

ಆಗ ಲೋಮಶರು 'ಶ್ರೀಪರಮಾತ್ಮನೇ ಸಜ್ಜನರನ್ನು ಉದ್ಧಾರ ಮಾಡುವುದಕ್ಕಾಗಿ ಸೂರ್ಯವಂಶದಲ್ಲಿ ರಾಮ ಎಂಬ ಹೆಸರಿನಿಂದ ಅವತರಿಸುವನು. ರಾಮದೇವರು ತಮ್ಮನಾದ ಲಕ್ಷ್ಮಣನಿಂದ ಕೂಡಿಕೊಂಡು ವಿಶ್ವಾಮಿತ್ರರ ಯಜ್ಞವನ್ನು ರಕ್ಷಿಸಲಿಕ್ಕೆ ಹೋಗುವರು. ರಾಮದೇವರು ಕಾಡಿನಲ್ಲಿ ತಾಟಕೆಯೆಂಬ ರಾಕ್ಷಸಿಯನ್ನು ಸಂಹರಿಸಿ ವಿಶ್ವಾಮಿತ್ರರ ಯಾಗವನ್ನು ರಕ್ಷಿಸಿದರು. ಅಹಲ್ಯೆಯನ್ನು ಶಾಪದಿಂದ ಬಿಡಿಸಿದರು. **ಆಮೇಲೆ ರಾಮದೇವರು ಮಿಥಿಲಾನಗರಿಗೆ ಹೋಗಿ ಹದಿನೈದನೇ ವರ್ಷದವರು ಆರುವರ್ಷ ವಯಸ್ಸಿನ ಸೀತಾದೇವಿಯರನ್ನು ಮದುವೆಯಾಗುವರು.** ಆಮೇಲೆ ರಾಜ್ಯಕ್ಕೆ ಬಂದು ರಾಮದೇವರು ಸೀತಾದೇವಿಯರೊಡನೆ ಹನ್ನೆರಡು ವರ್ಷ ಸಂತೋಷದಿಂದ ಇರುವರು. ರಾಮದೇವರ ಇಪ್ಪತ್ತೇಳನೇ ವರ್ಷದಲ್ಲಿ ಯೌವರಾಜ್ಯದಲ್ಲಿ ಪಟ್ಟಾಭಿಷೇಕ ಮಾಡಬೇಕೆಂದು ದಶರಥನು ಯೋಚನೆ ಮಾಡಿದನು. ಆಗ ಕೈಕೇಯಿಯು ದಶರಥನೊಡನೆ ರಾಮದೇವರು ಹದಿನಾಲ್ಕು ವರ್ಷ ವನವಾಸ ಮಾಡಬೇಕೆಂದು ತನ್ನ ಮಗನಾದ ಭರತನಿಗೆ ರಾಜ್ಯದಲ್ಲಿ ಪಟ್ಟಾಭಿಷೇಕವಾಗಬೇಕೆಂದೂ ವರವನ್ನು ಕೇಳಿಕೊಂಡಳು.

ತರುವಾಯ ರಾಮದೇವರು ಸೀತಾದೇವಿಯರಿಂದಲೂ ಲಕ್ಷ್ಮಣನಿಂದಲೂ ಸಹಿತನಾಗಿ ವನಕ್ಕೆ ಹೋಗುವರು. ಅವರು ಮೂರು ದಿನ ನೀರೇ ಆಹಾರವುಳ್ಳವರಾಗುವರು. ನಾಲ್ಕನೇ ದಿನದಲ್ಲಿ ಹಣ್ಣುಗಳನ್ನು ತಿನ್ನುವರು. ಐದನೇ ದಿನದಲ್ಲಿ ಚಿತ್ರಕೂಟ ಪರ್ವತಕ್ಕೆ ಹೋಗಿ ವಾಸಮಾಡಿದರು. ತರುವಾಯ ಹದಿಮೂರನೇ

ವರ್ಷದಲ್ಲಿ ಪಂಚವಟಿಯಲ್ಲಿ ರಾಮದೇವರು ಲಕ್ಷ್ಮಣನಿಂದ ಶೂರ್ಪಣಖೆಯ ಕಿವಿಯನ್ನೂ ಮೂಗನ್ನು ಕೊಯಿಸಿದರು. ಮಾಘಮಾಸದ ಶುಕ್ಲಪಕ್ಷದ ಅಷ್ಟಮೀದಿನದಲ್ಲಿ ರಾವಣನು ಸೀತಾಕೃತಿಯನ್ನು ಅಪಹರಿಸಿಕೊಂಡು ಹೋದನು. ದಾರಿಯಲ್ಲಿ ರಾವಣನು ಜಟಾಯುವನ್ನು ಸಂಹರಿಸಿ ಲಂಕೆಗೆ ಹೊರಟುಹೋದನು. ಮಾರ್ಗಶಿರ ಶುಕ್ಲ ನವಮಿಯಲ್ಲಿ ಹತ್ತನೇ ತಿಂಗಳಲ್ಲಿ ರಾವಣನ ಅಶೋಕವನದಲ್ಲಿ ಕೂತಿದ್ದ ಸೀತಾಕೃತಿಯನ್ನು ನೋಡಿ ಸಂಪಾತಿಯು ಹೇಳಿದನು. ಆಮೇಲೆ ಏಕಾದಶಿಯಲ್ಲಿ ಹನುಮಂತದೇವರು ಮಹೇಂದ್ರಪರ್ವತದಿಂದ ಹಾರಿದರು.

ಅದೇದಿನ ರಾತ್ರಿ ಶೇಷದಿಂದ ಲಂಕೆಯಲ್ಲಿ ಸೀತಾಕೃತಿಯನ್ನು ನೋಡಿದರು. ದ್ವಾದಶಿಯಲ್ಲಿ ಹನುಮಂತದೇವರು ಶಿಂಶುಪಾವೃಕ್ಷದಲ್ಲಿ ಹತ್ತಿ ಇರುವರು. ಅದೇ ರಾತ್ರಿಯಲ್ಲಿ ಸೀತಾದೇವಿಯೊಡನೆ ಸಂಭಾಷಣೆ ಮಾಡುವರು. ತ್ರಯೋದಶಿದಿನದಲ್ಲಿ ಅಕ್ಷಕುಮಾರಾದಿಗಳೊಡನೆ ಯುದ್ಧವನ್ನು ಮಾಡುವರು. ಚತುರ್ದಶಿ ದಿನದಲ್ಲಿ ಇಂದ್ರಜಿತುವು ಹನುಮಂತದೇವರನ್ನು ಬ್ರಹ್ಮಾಸ್ತ್ರದಿಂದ ಕಟ್ಟಿಹಾಕುವನು. ಆಮೇಲೆ ಹನುಮಂತದೇವರು ಬಾಲದ ಬೆಂಕಿಯಿಂದ ಲಂಕಾಪಟ್ಟಣವನ್ನು ಸುಟ್ಟು ಹುಣ್ಣಿಮೆ ದಿನದಲ್ಲಿ ಮಹೇಂದ್ರಪರ್ವತಕ್ಕೆ ಪುನಃ ಬಂದುಸೇರುವರು. ಮಾರ್ಗಶಿರಮಾಸದ ಕೃಷ್ಣಪಕ್ಷದ ಪಾಡ್ಯವನ್ನು ಆರಂಭಿಸಿ ಐದು ದಿವಸಗಳಲ್ಲಿ ಕಪಿಗಳು ಹಿಂದಿರುಗಿ ಬಂದು ಷಷ್ಠಿದಿನದಲ್ಲಿ ಮಧುವನ್ನು ಧ್ವಂಸ ಮಾಡಿದರು. ಸಪ್ತಮೀದಿನದಲ್ಲಿ ಹನುಮಂತ ದೇವರು ಸೀತಾದೇವಿಯರು ಕೊಟ್ಟ ಶಿರೋರತ್ನವು ರಾಮದೇವರಿಗೆ ಒಪ್ಪಿಸಿದರು. ಅಷ್ಟಮೀದಿನದಲ್ಲಿ ರಾಮದೇವರು ರಾವಣನನ್ನು ಸಂಹರಿಸಲು ಪ್ರತಿಜ್ಞೆಯನ್ನು ಮಾಡಿ ಹೊರಡುವರು. ಏಳು ದಿವಸಗಳಲ್ಲಿ ಕಪಿಸೇನೆಯು ಸಮುದ್ರದ ತೀರಕ್ಕೆ ಹೋಗಿ ನಿಲ್ಲುವುದು. ಪುಷ್ಯಶುಕ್ಲ ಪಾಡ್ಯದಿಂದ ತದಿಗೆಯವರೆಗೆ ರಾಜನೀತಿಯನ್ನು ತೋರಿಸುವುದಕ್ಕಾಗಿ ರಾಮದೇವರು ಸಮುದ್ರರಾಜನಿಂದ ದಾರಿಯನ್ನು ಕೇಳಲಿಕ್ಕಾಗಿ ಮಲಗುವರು. ಚತುರ್ಥಿದಿನದಲ್ಲಿ ವಿಭೀಷಣನು ಬಂದು ರಾಮದೇವರನ್ನು ಸೇರಿಕೊಳ್ಳುವನು.

ಸಮುದ್ರವನ್ನು ದಾಟಲಿಕ್ಕೆ ಪಂಚಮೀದಿನದಲ್ಲಿ ಯೋಚನೆ ಮಾಡುವರು. ರಾಮದೇವರು ಆಮೇಲೆ ನಾಲ್ಕು ದಿವಸ ಸಮುದ್ರರಾಜನನ್ನು ಎದುರು ನೋಡಿದರು. ಸಮುದ್ರರಾಜನು ಬಂದು ಭಗವಂತನನ್ನು ಪ್ರಾರ್ಥಿಸಿ ಸೇತುವೆಯನ್ನು ಮಾಡುವಂತೆ ಪ್ರಾರ್ಥಿಸಿಕೊಂಡನು. ದಶಮಿಯನ್ನು ಆರಂಭಿಸಿ ತ್ರಯೋದಶಿಯ ವರೆಗೆ ಸೇತುವೆಯನ್ನು ಮಾಡಿ ಮುಗಿಸುವರು. ಚತುರ್ದಶಿಯಲ್ಲಿ ರಾಮದೇವರು

ಸುವೇಲಪರ್ವತದಲ್ಲಿ ಕಪಿಸೈನ್ಯವನ್ನು ನಿಲ್ಲಿಸುವರು. ಹುಣ್ಣಿಮೆಯಿಂದ ದ್ವಿತೀಯ ಪರ್ಯಂತವಾಗಿ ಮೂರುದಿವಸಗಳಲ್ಲಿ ಸೈನ್ಯವು ಹೋಗುವುದು. ಹೋಗಿ ಲಂಕೆಯನ್ನು ಮುತ್ತಿಗೆ ಹಾಕುವುದು. ತದಿಗೆಯನ್ನು ಆರಂಭಿಸಿದ ಶಮೀಪರ್ಯಂತ ಯುದ್ಧಕ್ಕೆ ಸನ್ನಾಹ ಮಾಡುವುದು. ಏಕಾದಶೀ ದಿನದಲ್ಲಿ ಅಲ್ಲಿಗೆ ಶುಕಸಾರಣರು ಬರುವರು. ದ್ವಾದಶೀದಿನದಲ್ಲಿ ಶಾರ್ದೂಲನೆಂಬ ರಾಕ್ಷಸನು ಕಪಿಸೈನ್ಯವನ್ನು ಎಣಿಸಿದನು. ತ್ರಯೋದಶಿಯಿಂದ ಅಮಾವಾಸ್ಯೆಯವರೆಗೆ ಸೈನ್ಯವನ್ನು ಎಣಿಸಿ ರಾವಣನು ಯುದ್ಧಕ್ಕೆ ಉತ್ಸಾಹವನ್ನು ಮಾಡುವನು. ಮಾಘಶುಕ್ಲ ಪಾಡ್ಯದಿನದಲ್ಲಿ ಸೀತಾಕೃತಿಗೆ ಮಾಯೆಯಿಂದ ರಾಮದೇವರ ಶಿರಸ್ಸನ್ನು ತೋರಿಸುವುದು. ಬಿದಿಗೆಯನ್ನು ಆರಂಭಿಸಿ ಎಂಟುದಿನಗಳಲ್ಲಿ ರಾಕ್ಷಸರಿಗೂ ಕಪಿಗಳಿಗೂ ಯುದ್ಧವು ನಡೆಯುವುದು. ಮಾಘಶುಕ್ಲ ನವಮೀ ದಿನದಲ್ಲಿ ರಾತ್ರಿಯಲ್ಲಿ ಇಂದ್ರಜಿತುವು ನಾಗಪಾಶದಿಂದ ಕಟ್ಟಿದನು. ಏಕಾದಶೀ ದಿನದಲ್ಲಿ ಗರುಡದೇವರು ಬಂದರು. ದ್ವಾದಶೀದಿನದಲ್ಲಿ ಧೂಮ್ರಾಕ್ಷನ ವಧೆಯಾಗುವುದು. ತ್ರಯೋದಶೀದಿನದಲ್ಲಿ ಕಂಪನ ಎಂಬ ರಾಕ್ಷಸನು ಸಾಯುವನು. ಚತುರ್ದಶೀದಿನದಲ್ಲಿ ಆರಂಭಿಸಿ ಕೃಷ್ಣಪಕ್ಷದ ಪಾಡ್ಯದವರೆಗೆ ಪ್ರಹಸ್ತನನ್ನು ನೀಲವನ್ನು ಸಂಹರಿಸಿದನು. ಮಾಘಕೃಷ್ಣ ಬಿದಿಗೆ ಆರಂಭಿಸಿ ಚೌತಿಯವರೆಗೆ ಮೂರುದಿವಸಗಳ ಯುದ್ಧದಲ್ಲಿ ರಾಮದೇವರು ರಾವಣನನ್ನು ಪರಾಜಯಗೊಳಿಸಿದರು. ಪಂಚಮಿಯನ್ನು ಆರಂಭಿಸಿ ಅಷ್ಟಮಿಯ ವರೆಗೆ ಕುಂಭಕರ್ಣನನ್ನು ಎಬ್ಬಿಸುವವರಾದರು. ಕುಂಭಕರ್ಣನು ಆಹಾರವನ್ನು ಸ್ವೀಕರಿಸಿದನು.

ಕುಂಭಕರ್ಣನು ನವಮಿಯಿಂದ ಚತುರ್ದಶಿಯವರೆಗೆ ಯುದ್ಧವನ್ನು ಮಾಡಿ ರಾಮದೇವರಿಂದ ಸಾಯುವನು. ಅಮಾವಾಸ್ಯೆಯಲ್ಲಿ ದುಃಖದಿಂದ ಯುದ್ಧವು ನಡೆಯಲಿಲ್ಲ. ಫಾಲ್ಗುನ ಮಾಸದ ಶುಕ್ಲಪಾಡ್ಯವನ್ನು ಆರಂಭಿಸಿ ಚೌತಿಯವರೆಗೆ ನಾಲ್ಕು ದಿನಗಳಲ್ಲಿ ಇಂದ್ರಜಿತ್ ಮೊದಲಾದ ಅಸುರರು ಸಾಯುವರು. ಪಂಚಮಿಯಿಂದ ಸಪ್ತಮಿಯವರೆಗೆ ಅತಿಕಾಯನ ಸಂಹಾರವು. ಅಷ್ಟಮಿಯಿಂದ ದ್ವಾದಶಿಯವರೆಗೆ ನಿಕುಂಭ ಕುಂಭರು ಸಾಯುವವರಾದರು. ಆಮೇಲೆ ಮೂರುದಿವಸಗಳಲ್ಲಿ ಮಕರಾಕ್ಷನು ಮೃತನಾದನು. ಪಾಲ್ಗುನ ಕೃಷ್ಣ ದ್ವಿತೀಯಾದಿನದಲ್ಲಿ ಇಂದ್ರಜಿತ್ ಜಯಿಸಿದನು. ತದಿಗೆಯನ್ನು ಆರಂಭಿಸಿ ಸಪ್ತಮಿಯವರೆಗೆ ಐದುದಿನಗಳಲ್ಲಿ ಯುದ್ಧದಲ್ಲಿ ಇಂದ್ರಜಿತ್ ಲಕ್ಷ್ಮಣನಿಂದ ಸಾಯುವವನಾದನು. ಚತುರ್ದಶಿಯಲ್ಲಿ ರಾವಣನು ದೀಕ್ಷೆಯನ್ನು ಹೊಂದಿದನು. ಅಮಾವಾಸ್ಯೆಯಲ್ಲಿ ಯುದ್ಧಕ್ಕೆ ಹೋದನು.

ಚೈತ್ರ ಶುಕ್ಲಪಾಡ್ಯವನ್ನು ಆರಂಭಿಸಿ ಪಾಡ್ಯದವರೆಗೆ ರಾವಣನು ಯುದ್ಧ ಮಾಡುತ್ತಿರಲು ಅನೇಕ ರಾಕ್ಷಸರು ಮೃತರಾದರು. ಚೈತ್ರಷಷ್ಠಿಯನ್ನು ಆರಂಭಿಸಿ ಅಷ್ಟಮಿಯವರೆಗೆ ಮಹಾಪಾರ್ಶ್ವಾದಿ ರಾಕ್ಷಸರ ಸಂಹಾರವಾಗುವುದು. ಚೈತ್ರಶುಕ್ಲ ನವಮೀಯ ದಿನದಲ್ಲಿ ಲಕ್ಷ್ಮಣನನ್ನು ಶಕ್ತಿಯಿಂದ ಭೇದಿಸಿದ್ದು ಕೋಪದಿಂದ ರಾಮದೇವರು ರಾವಣನನ್ನು ಓಡಿಸಿದರು. ಲಕ್ಷ್ಮಣನಿಗಾಗಿ ಗಂಧಮಾದನಪರ್ವತವನ್ನು ತರುವರು. ದಶಮಿ ದಿನದಲ್ಲಿ ಯುದ್ಧವು ನಡೆಯಲಿಲ್ಲ. ಏಕಾದಶಿಯಲ್ಲಿ ರಾಮದೇವರಿಗೆ ಮಾತಲಿಯು ಇಂದ್ರದೇವರ ರಥವನ್ನು ತಂದನು. ಆಮೇಲೆ ದ್ವಾದಶಿಯಿಂದ ಕೃಷ್ಣಪಕ್ಷದ ಚತುರ್ದಶಿಯವರೆಗೆ ಹದಿನೆಂಟು ದಿವಸಗಳಲ್ಲಿ ರಾಮದೇವರು ರಾವಣನೊಡನೆ ಯುದ್ಧವನ್ನು ಮಾಡುವರು. ರಾಮದೇವರು ಯುದ್ಧದಲ್ಲಿ ಜಯವನ್ನು ಹೊಂದುವರು. ಒಟ್ಟಿಗೆ ಮಾಘಪಕ್ಷ ಬಿದಿಗೆಯನ್ನು ಆರಂಭಿಸಿ ಚೈತ್ರಶುಕ್ಲ ಚತುರ್ದಶಿಯವರೆಗೆ ಎಪ್ಪತ್ತು ದಿವಸ ಯುದ್ಧ. ಅವುಗಳಲ್ಲಿ ಮಧ್ಯದಲ್ಲಿ ಹದಿನೈದು ದಿವಸ ಯುದ್ಧವು ನಡೆಯಲಿಲ್ಲ. ಅಮಾವಾಸ್ಯೆಯಲ್ಲಿ ರಾವಣಾದಿಗಳಿಗೆ ಸಂಸ್ಕಾರವಾಯಿತು. ವೈಶಾಖ ಶುಕ್ಲ ಪಾಡ್ಯದಲ್ಲಿ ರಾಮದೇವರು ಯುದ್ಧಭೂಮಿಯಲ್ಲಿಯೇ ವಾಸಮಾಡಿದರು.

ಬಿದಿಗೆದಿನದಲ್ಲಿ ಲಂಕಾರಾಜ್ಯದಲ್ಲಿ ವಿಭೀಷಣನು ಪಟ್ಟಾಭಿಷೇಕವನ್ನು ಹೊಂದುವನು. ತದಿಗೆಯಲ್ಲಿ ದೇವತೆಗಳು ಬರುವರು. ರಾಮದೇವರು ಸೀತಾದೇವಿರನ್ನು ಲೋಕ ದೃಷ್ಟಿಯಿಂದ ಹೊಂದುವರು. ಚೌತಿಯ ದಿವಸದಲ್ಲಿ ರಾಮದೇವರು ಪುಷ್ಪಕವಿಮಾನದಲ್ಲಿ ಕೂತುಕೊಂಡು ಅಯೋಧ್ಯಾಪಟ್ಟಣಕ್ಕೆ ಹೋದರು. ಹದಿನಾಲ್ಕು ವರ್ಷ ಸಂಪೂರ್ಣವಾಗಲು ವೈಶಾಖಮಾಸದ ಪಂಚಮಿಯಲ್ಲಿ ರಾಮದೇವರು ಅಯೋಧ್ಯೆಯಲ್ಲಿ ಪಟ್ಟಾಭಿಷೇಕವನ್ನು ಹೊಂದಿದರು. ಹತ್ತುತಿಂಗಳೂ ಹದಿನಾಲ್ಕು ದಿವಸಗಳಲ್ಲಿ ರಾವಣನ ಮನೆಯಲ್ಲಿ ಸೀತಾಕೃತಿಯು ಇರುವವರಾದರು.

ನಾಲ್ವತ್ತೆರಡನೇ ವರ್ಷದಲ್ಲಿ ರಾಮದೇವರು ರಾಜ್ಯಭಾರವನ್ನು ಮಾಡುವರು. ಸೀತಾದೇವಿಯರಿಗೆ ಆಗ ಮೂವತ್ತಮೂರು ವರ್ಷಗಳಾಗಿದ್ದವು. ರಾಮದೇವರು ಹದಿನಾಲ್ಕು ವರ್ಷವಾದ ಮೇಲೆ ಸಂತೋಷದಿಂದ ತಮ್ಮಂದಿರಿಂದ ಕೂಡಿಕೊಂಡು ರಾಜ್ಯಭಾರವನ್ನು ಮಾಡುವರು. ಆಮೇಲೆ ಅಗಸ್ತ್ಯರ ಮಾತಿನಿಂದ ಅಶ್ವಮೇಧ ಯಾಗವನ್ನು ಮಾಡುವರು. ಅವರ ಕುದುರೆಯು ನಿನ್ನ ಆಶ್ರಮಕ್ಕೆ ಬರುವುದು. ಅವರ ಸೈನಿಕರು ಸಂತೋಷದಿಂದ ನಿನ್ನ ಆಶ್ರಮಕ್ಕೆ ಬರುವರು. ಅವರ ಮಧ್ಯದಲ್ಲಿ ರಾಮದೇವರ ಕಥೆಯನ್ನು ಹೇಳುವರು. ಅವರೊಡನೆ ನೀನು ಅಯೋಧ್ಯೆಗೆ

ಹೋಗುವಿ. ಅಯೋಧ್ಯೆಯಲ್ಲಿ ರಾಮದೇವರ ದರ್ಶನವನ್ನು ಮಾಡಿ ಸಂಸಾರ ಸಮುದ್ರವನ್ನು ದಾಟುವಿ? ಈ ಪ್ರಕಾರವಾಗಿ ಲೋಮಶಮುನಿಗಳು ಹೇಳಿ ನಿನಗೆ ಇನ್ನೇನು ಹೇಳಬೇಕು ಎಂದು ಕೇಳಿದರು. ಆಗ ನಾನು 'ತಮ್ಮ ಕೃಪೆಯಿಂದ ಅದ್ಭುತ ವಾದ ರಾಮದೇವರ ಚರಿತ್ರೆಯನ್ನು ಕೇಳಿದೆನು. ನಿಮ್ಮ ಅನುಗ್ರಹದಿಂದ ರಾಮ ದೇವರ ಪಾದವನ್ನು ಹೊಂದುವೆನು' ಎಂದು ಹೇಳಿ ನಮಸ್ಕಾರವನ್ನು ಮಾಡಿದೆನು.

ತರುವಾಯ ಅವರು ಹೊರಟುಹೋದರು. ನಾನು ಪುನಃ ಪುನಃ ರಾಮದೇವರ ಪಾದವನ್ನು ಸ್ಮರಿಸುತ್ತಾ ಇರುವೆನು. ರಾಮದೇವರ ಚರಿತ್ರೆಯನ್ನೇ ಗಾಯನ ಮಾಡುತ್ತಿರುವೆನು. ರಾಮದೇವರ ಗಾನದಿಂದ ಜನರನ್ನು ಪವಿತ್ರರನ್ನಾಗಿ ಮಾಡುತ್ತಿರುವೆನು. ಲೋಮಶರ ಮಾತನ್ನು ಜ್ಞಾಪಿಸಿಕೊಂಡು ಪುನಃ ಪುನಃ ಸಂತೋಷಪಡುತ್ತಿರುವೆನು. ರಾಮದೇವರ ಪಾದವನ್ನು ನೋಡಬೇಕೆಂದು ಬಹಳ ಆಸೆಯಾಗಿದೆ. ನಾನು ಪರಮಧನ್ಯನು. ಆದುದರಿಂದ ಸರ್ವಪ್ರಕಾರದಿಂದ ರಾಮದೇವರನ್ನೇ ಭಜನೆ ಮಾಡಬೇಕು. ನಮಸ್ಕಾರ ಮಾಡಬೇಕು. ಸೇವಾ ಮಾಡಬೇಕು. ಆದುದರಿಂದ ನೀವು ಯಾವುದಕ್ಕಾಗಿ ಬಂದಿರುವಿರಿ? ಯಾವ ರಾಜನು ಅಶ್ವಮೇಧಯಾಗವನ್ನು ಮಾಡುವನು? ಎಂಬುದನ್ನು ಹೇಳಿರಿ. ಕುದುರೆಯನ್ನು ರಕ್ಷಣೆ ಮಾಡಿಕೊಂಡು ಹೋಗಿರಿ. ರಾಮದೇವರ ಪಾದವನ್ನು ಪುನಃ ಪುನಃ ಸ್ಮರಣೆ ಮಾಡಿರಿ' ಎಂದು ಹೇಳಿದರು.

ಈರೀತಿಯಾಗಿ ಆರಣ್ಯಕಮುನಿಗಳು ಹೇಳಿದ ಮಾತನ್ನು ಕೇಳಿ ಎಲ್ಲರೂ ಅಶ್ಚರ್ಯವುಳ್ಳವರಾಗಿ ರಾಮದೇವರನ್ನು ಸ್ಮರಿಸುತ್ತಾ ತಾವು ಪರಮಧನ್ಯರಾದೆವೆಂದು ಭಾವಿಸುತ್ತಾ ಆರಣ್ಯಕಮುನಿಗಳೊಡನೆ 'ರಾಮದೇವರ ಕಥೆಯನ್ನು ಹೇಳಿ ನಮ್ಮನ್ನು ಪವಿತ್ರರನ್ನಾಗಿ ಮಾಡಿದಿರಿ. ನೀವು ಕೇಳಿದ ವಿಷಯವನ್ನು ನಾವು ಹೇಳುವೆವು. ಕೇಳಬೇಕು. ಅಗಸ್ತ್ಯರ ಮಾತಿನಿಂದ ರಾಮದೇವರು ಅಶ್ವಮೇಧಯಾಗವನ್ನು ಮಾಡುತ್ತಿರುವರು. ಅವರ ಕುದುರೆಯನ್ನು ರಕ್ಷಿಸುತ್ತಾ ನಾವು ಕುದುರೆಯಿಂದ ಸಹಿತರಾಗಿ ನಿಮ್ಮ ಆಶ್ರಮಕ್ಕೆ ಬಂದಿರುವೆವು' ಎಂದು ಹೇಳಿದರು. ಮನೋಹರವಾದ ಆ ಮಾತನ್ನು ಕೇಳಿ ರಾಮದೇವರಲ್ಲಿ ಭಕ್ತಿಯುಳ್ಳ ಆ ಮುನಿಗಳು ಅತ್ಯಂತ ಸಂತೋಷವನ್ನು ಹೊಂದಿದರು. 'ಈಗ ನನ್ನ ಮನೋರಥವು ಫಲಿಸಿತು. ನನ್ನನ್ನು ಹಡೆದ ತಾಯಿಯು ಪರಮಧನ್ಯಳಾದಳು. ಇಷ್ಟರವರೆಗೆ ಧ್ಯಾನಮಾಡುತ್ತಿದ್ದ ರಾಮದೇವರನ್ನು ನೋಡುವೆನು. ಹನುಮಂತದೇವರು ನನ್ನನ್ನು ಆಲಿಂಗಿಸಿ ಕುಶಲಪ್ರಶ್ನೆಯನ್ನು ಮಾಡುವರು. ರಾಮದೇವರಲ್ಲಿ ನನಗೆ ಇರುವ ಭಕ್ತಿಯನ್ನು

ನೋಡಿ ಸಂತೋಷಪಡುವರು' ಎಂದು ಹೇಳಿದರು.

ಈ ಮಾತನ್ನು ಕೇಳಿ ಹನುಮಂತ ದೇವರು ಬಂದು ನಾನು ರಾಮದೇವರ ಪಾದಧೂಳಿಗೆ ಸಮಾನನಾದವನು ಎಂದುಕೊಂಡರು. ಆರಣ್ಯಕರು ರಾಮಭಕ್ತರಾದ ಹನುಮಂತದೇವರನ್ನು ಆಲಿಂಗಿಸಿ ದರು. ಇಬ್ಬರೂ ಕೂತುಕೊಂಡು ಅನೇಕ ಕಥೆಗಳನ್ನು ಆಡಿಕೊಂಡರು. ತರುವಾಯ ಹನುಮಂತದೇವರು ಆರಣ್ಯಕಋಷಿಗಳೊಡನೆ 'ಇವನು ಲವಣಾಸುರನನ್ನು ಸಂಹರಿಸಿದ ರಾಮದೇವರ ತಮ್ಮನಾದ ಶತ್ರುಘ್ನನು. ಇವನು ಭರತನ ಮಗನಾದ ಪುಷ್ಕಲನು. ಅನೇಕ ವೀರರನ್ನು ಯುದ್ಧದಲ್ಲಿ ಜಯಿಸಿರುವನು. ಇವನು ರಾಮದೇವರ ಮಂತ್ರಿಯು ಇವನು ರಾಮದೇವರ ಪಾದಾವಲಂಬಿಯಾದ ಸುಬಾಹುರಾಜನು. ಇವನು ಸುಮುದ ಎಂಬ ರಾಜನು ರಾಮದೇವರ ಭಕ್ತನು. ಇವನು ಸತ್ಯವಂತನೆಂಬ ರಾಜನು. ರಾಮದೇವರ ಕುದುರೆಯು ಬಂದಿತೆಂದು ತಿಳಿದು ತನ್ನ ರಾಜ್ಯವನ್ನೇ ಒಪ್ಪಿಸಿರುವನು' ಎಂದು ಹೇಳಿದರು.

ಆರಣ್ಯಕಋಷಿಗಳು ಎಲ್ಲರನ್ನು ಆಲಿಂಗಿಸಿ ಹಣ್ಣು ಇತ್ಯಾದಿಗಳಿಂದ ಸತ್ಕರಿಸಿದರು. ಎಲ್ಲರೂ ಸಂತೋಷದಿಂದ ಆ ಆಶ್ರಮದಲ್ಲಿಯೇ ವಾಸಮಾಡಿದರು. ಮರುದಿನ ಬೆಳಿಗ್ಗೆ ಎಲ್ಲರೂ ರೇವಾನದಿಯಲ್ಲಿ ಪ್ರಾತಃಕಾಲದ ಕಾರ್ಯವನ್ನು ಮಾಡಿ ಶತ್ರುಘ್ನನು ಸೇವಕರಿಂದ ಸಹಿತರಾದ ಆರಣ್ಯಕಮುನಿಗಳನ್ನು ಮೇನೆಯಲ್ಲಿ ಕೂತುಕೊಳ್ಳಿಸಿ ಅಯೋಧ್ಯೆಗೆ ಕಳುಹಿಸಿದನು. ಆರಣ್ಯಕರು ಸರಯೂ ನದಿಯ ತೀರದಲ್ಲಿ ಮಂಟಪದಿಂದ ಅಲಂಕೃತವಾದ ಸ್ಥಳದಲ್ಲಿ ಕಟಿಪ್ರದೇಶದಲ್ಲಿ ಜಿಂಕೆಯ ಕೊಂಬನ್ನು ಧರಿಸಿಕೊಂಡು ಇರುವ ಋಷಿಸಮೂಹದಿಂದ ಸೇವಿತರಾದ ಭರತಲಕ್ಷ್ಮಣರಿಂದ ಸಹಿತರಾದ ದೀನರಿಗೆ ಬೇಕಾದ ದಾನಗಳನ್ನು ಕೊಡುತ್ತಿದ್ದ ಶ್ರೀರಾಮದೇವರನ್ನು ನೋಡಿದರು. ಆರಣ್ಯಕರು ರಾಮದೇವರನ್ನು ನೋಡಿ ನಾನು ಪರಮಧನ್ಯನಾದೆನು ಎಂದು ಭಾವಿಸಿಕೊಂಡರು. ರಾಮದೇವರ ಸಮೀಪಕ್ಕೆ ಬಂದರು. ರಾಮದೇವರು ಆ ಬ್ರಾಹ್ಮಣರನ್ನು ನೋಡಿ ಲೋಕಶಿಕ್ಷೆಗಾಗಿ ಎದ್ದುನಿಂತು ಅವರಿಗೆ ನಮಸ್ಕರಿಸಿದರು. ಆಗ ಆರಣ್ಯಕರು ರಾಮದೇವರನ್ನು ಎಬ್ಬಿಸಿ ಆಲಿಂಗಿಸಿದರು ರಾಮದೇವರು ಆರಣ್ಯಕರನ್ನು ಆಸನದಲ್ಲಿ ಕೂತುಕೊಳ್ಳಿಸಿ ಅವರ ಕಾಲನ್ನು ತೊಳೆದು ಆ ನೀರನ್ನು ಶಿರಸ್ಸಿನಲ್ಲಿ ಧರಿಸಿ ಸಕುಟುಂಬನಾದ ಸಪರಿವಾರನಾದ ನಾನು ಪವಿತ್ರನಾದೆನು ಎಂದು ಹೇಳಿಕೊಂಡರು. ಆಮೇಲೆ ಆರಣ್ಯಕರಿಗೆ ಗಂಧವನ್ನು ಹಚ್ಚಿ ಗೋವನ್ನು ಕೊಟ್ಟರು. 'ತಾವು ಬಂದದ್ದರಿಂದ ನನ್ನ ಅಶ್ವಮೇಧಯಾಗವು ಸಂಪೂರ್ಣವಾಗುವುದು. ಬ್ರಹ್ಮಹತ್ಯೆಯು ಪರಿಹೃತವಾಗುವುದು' ಎಂದು ಉಪಚಾರ ಮಾತುಗಳನ್ನು ಹೇಳಿದರು.

ಆಗ ಆರಣ್ಯಕರು ರಾಮದೇವರೊಡನೆ 'ಬ್ರಾಹ್ಮಣರಲ್ಲಿ ಪ್ರೀತಿಯುಳ್ಳವರಾದ ತಾವು ಈ ಪ್ರಕಾರವಾಗಿ ಹೇಳುವುದು ಉಚಿತವಾಗಿದೆ. ನೀವು ಬ್ರಾಹ್ಮಣರನ್ನು ಪೂಜಿಸಿದರೆ ಎಲ್ಲಾ ರಾಜರೂ ಪೂಜಿಸುವರು. ಬ್ರಾಹ್ಮಣರು ತಮ್ಮ ಸನ್ನಿಧಾನಪಾತ್ರರು. ನೀವು ಬ್ರಹ್ಮಹತ್ಯಾಪರಿಹಾರಕ್ಕಾಗಿ ಅಶ್ವಮೇಧಯಾಗವನ್ನು ಮಾಡುತ್ತಿರುವೆನೆಂದು ಹೇಳಿದ ಮಾತು ಅತ್ಯಂತ ಹಾಸ್ಯಾಸ್ಪದವಾಗಿರುವುದು. ಸರ್ವಶಾಸ್ತ್ರವನ್ನು ಓದದ ಮೂಢನೂ ಯಾವ ನಿಮ್ಮ ನಾಮವನ್ನು ಭಕ್ತಿಯಿಂದ ಹೇಳಿದವನಾದರೆ ಅವನು ಉತ್ತಮಗತಿಯನ್ನು ಹೊಂದುವನು. ರಾಮನಾಮ ಸ್ಮರಣೆಯನ್ನು ಮಾಡುವವರೆಗೆ ಮಾತ್ರ ಬ್ರಹ್ಮಹತ್ಯಾ ಸಮಾನ ಪಾಪಾಭಿಮಾನಿಗಳು ಗರ್ಜನೆ ಮಾಡುವರು. ತಮ್ಮ ನಾಮಗರ್ಜನೆಯನ್ನು ಕೇಳಿ ಮಹಾಪಾಪಗಳೆಂಬ ಆನೆಗಳು ಎಲ್ಲಿಯೋ ಓಡಿಹೋಗುತ್ತವೆ. ಹಾಗೆ ಇರುವ ತಮಗೆ ಬ್ರಹ್ಮಹತ್ಯಾ ದೋಷವು ಹೇಗೆ ಬರಬೇಕು? ನಾವು ಪೂರ್ವದಲ್ಲಿ ಕೃತಯುಗದಲ್ಲಿ ಗಂಗಾತೀರದಲ್ಲಿ ವಾಸಮಾಡುವ ಮುನಿಗಳ ಮುಖದಿಂದ ಈ ವಿಷಯವನ್ನೆಲ್ಲಾ ಕೇಳಿರುವೆನು. ಆದುದರಿಂದ ಈಗ ತಮ್ಮ ದರ್ಶನದಿಂದ ನಾನು ಪರಮಧನ್ಯನಾದೆನು'. ಎಂದು ಹೇಳಲು ಅಲ್ಲಿದ್ದ ಎಲ್ಲಾ ಮುನಿಗಳೂ ಸಾಧು ಸಾಧು ಎಂದು ಹೇಳಿದರು.

ಅಷ್ಟರಲ್ಲಿ ಅಲ್ಲಿ ಒಂದು ಆಶ್ಚರ್ಯಕರವಾದ ವಿಷಯವು ನಡೆಯಿತು. ಆರಣ್ಯಕರು ತಾನು ಧ್ಯಾನ ಮಾಡುತ್ತಿದ್ದ ಮೂರ್ತಿಯಂತೆಯೇ ಇದ್ದ ರಾಮದೇವರನ್ನು ನೋಡಿ ಅತಿಸಂತೋಷವುಳ್ಳವರಾಗಿ 'ಮುನೀಶ್ವರರೇ! ನನ್ನ ಮಾತನ್ನು ಕೇಳಿರಿ. ನನ್ನಂತೆ ಅತ್ಯಂತ ಭಾಗ್ಯವಂತನಾಗಿರುವವನ್ನು ಯಾರು ಇರುವನು? ನನಗೆ ಸಮಾನರು ಯಾರೂ ಇಷ್ಟರವರೆಗೆ ಇಲ್ಲ, ಇನ್ನು ಮುಂದೆ ಬರಲಾರರು. ಏಕೆಂದರೆ ರಾಮದೇವರೇ ನನಗೆ ಸತ್ಕಾರವನ್ನು ಮಾಡಿದರು' ಎಂದು ಹೇಳುತ್ತಿರುವಾಗಲೇ ಅವರ ತಲೆಯು ಒಡೆದುಹೋಗಿ ಅಲ್ಲಿಂದ ಒಂದು ತೇಜಸ್ಸು ಹೊರಟು ಎಲ್ಲರೂ ನೋಡುತ್ತಿರುವಂತೆ ರಾಮದೇವರ ದೇಹದಲ್ಲಿ ಪ್ರವೇಶಿಸಿತು. ಆಕಾಶದಲ್ಲಿ ವಾದ್ಯಘೋಷವಾಯಿತು. ವೀಣಾನಾದವಾಯಿತು. ಎಲ್ಲರೂ ನೋಡುವಂತೆ ಅದ್ಭುತವಾಗಿ ಹೂವಿನ ಮಳೆಯು ಸುರಿಯಿತು. ಮುನಿಗಳೆಲ್ಲರೂ ಆರಣ್ಯಕರನ್ನು ಪ್ರಶಂಸಿದರು.



# ಯೋಗಿನಿಯ ದರ್ಶನ

ಮುನಿಗಳ ಸಮೂಹದಿಂದ ಸೇವಿತವಾದ ರೇವಾನದಿಯ ತೀರದಲ್ಲಿಯೇ ರಾಮದೇವರ ಕುದುರೆಯು ಬಹುಸೈನಿಕರಿಂದ ಕೂಡಿಕೊಂಡು ಮುಂದೆ ಹೋಯಿತು. ಸೈನಿಕರೆಲ್ಲರೂ ಕುದುರೆಯು ಹೋಗುವ ಮಾರ್ಗವನ್ನೇ ನೋಡುತ್ತಾ ಹೋಗುತ್ತಿದ್ದರು. ಕುದುರೆಯು ರೇವಾನದಿಯ ಆಳವಾದ ನೀರಿನಲ್ಲಿ ಇಳಿದು ಮುಳುಗಿ ಹೋಯಿತು. ಆಗ ಎಲ್ಲಾ ಶೂರರೂ ಆಶ್ಚರ್ಯವನ್ನು ಹೊಂದಿದರು. ಅವರು ಪರಸ್ಪರವಾಗಿ 'ಕುದುರೆಯು ಹೇಗೆ ಸಿಗುವುದು? ಯಾರು ಕುದುರೆಯನ್ನು ತರಲಿಕ್ಕೆ ಹೋಗುವನು' ಎಂದು ಮಾತಾಡಿಕೊಂಡರು. ಅವರು ಹೀಗೆ ಯೋಚನೆ ಮಾಡುತ್ತಿರುವಾಗ ಅಲ್ಲಿಗೆ ಶತ್ರುಘ್ನನು ಬಂದನು. ಮುಖವನ್ನು ಬಾಡಿಸಿಕೊಂಡು ಇರುವ ಅವರನ್ನು ನೋಡಿ ಮೇಘದಂತೆ ಗಂಭೀರವಾದ ವಾಣಿಯಿಂದ ಶತ್ರುಘ್ನನು 'ನೀವೇಕೆ ಗುಂಪಾಗಿ ನೀರಿನ ಬಳಿಯಲ್ಲಿ ನಿಂತಿರುವಿರಿ? ಬಂಗಾರದ ಪತ್ರದಿಂದ ಅಲಂಕೃತವಾದ ರಾಮದೇವರ ಕುದುರೆಯೆಲ್ಲಿ? ಅದು ನೀರಿನಲ್ಲಿ ಮುಳುಗಿ ಹೋಯಿತೋ? ಅಥವಾ ಯಾರಾದರೂ ಅದನ್ನು ಅಪಹರಿಸಿದರೋ? ಬೇಗನೇ ಹೇಳಿರಿ' ಎಂದು ಕೇಳಿದನು.

ಆಗ ಜನರು 'ಸ್ವಾಮಿ! ನಮಗೊಂದೂ ತಿಳಿಯಲಿಲ್ಲ. ಒಂದು ಮುಹೂರ್ತಕಾಲ ನೀರಿನಲ್ಲಿ ಕುದುರೆಯಿದ್ದಿತು. ಆಮೇಲೆ ಅದು ಮುಳುಗಿತು. ಮೇಲೆ ಬರಲೇ ಇಲ್ಲ. ನೀವೇ ಹೋಗಿ ಬೇಗನೆ ಕುದುರೆಯನ್ನು ತರಬೇಕು' ಎಂದು ಹೇಳಲು ಆ ಮಾತನ್ನು ಕೇಳಿ ಶತ್ರುಘ್ನನು ಖೇದವನ್ನು ಹೊಂದಿದನು— ಮಂತ್ರಿಯೊಡನೆ ಏನು ಮಾಡಬೇಕೆಂದು ಕೇಳಿದನು. ಅದಕ್ಕೆ ಮಂತ್ರಿಯು 'ಸ್ವಾಮಿನ್! ನಿನಗೆ ರಾಮದೇವರಲ್ಲಿ ಭಕ್ತಿಯಿದೆ. ನೀರಿನ ಮಧ್ಯದಿಂದ ಪಾತಾಳಕ್ಕೆ ಹೋಗಲಿಕ್ಕೆ ಶಕ್ತಿಯಿದೆ. ಪುಷ್ಕಲನಿಗೂ ಶಕ್ತಿಯಿದೆ. ಹನುಮಂತ ದೇವರಿಗಂತೂ ಇದ್ದೇ ಇದೆ. ಆದುದರಿಂದ ನೀವು ಮೂವರು ಜನರು ರಾಮದೇವರ ಕುದುರೆಯು ಇರುವಲ್ಲಿಗೆ ಹೋಗಿ ತೆಗೆದುಕೊಂಡು ಬನ್ನಿರಿ' ಎಂದು ಹೇಳಿದನು. ಮಂತ್ರಿಯ ಮಾತನ್ನು ಕೇಳಿ ಶತ್ರುಘ್ನನು ಹನುಮಂತದೇವರಿಂದಲೂ ಪುಷ್ಕಲನಿಂದಲೂ ಕೂಡಿಕೊಂಡು ನೀರಿನೊಳಗೆ ಪ್ರವೇಶಿಸಿದನು.

ಅಷ್ಟರಲ್ಲಿಯೇ ಅನೇಕ ಉದ್ಯಾನಗಳಿಂದ ಕೂಡಿದ ಒಂದು ಪಟ್ಟಣವು ಕಾಣಿಸಿತು. ಅಲ್ಲಿ ಮಾಣಿಕ್ಯ ಮಣಿಯಿಂದ ಖಚಿತವಾದ ಬಂಗಾರದ ಕಂಬದಲ್ಲಿ

ಕಟ್ಟಲ್ಪಟ್ಟಿದ್ದ ರಾಮದೇವರ ಕುದುರೆಯನ್ನು ನೋಡಿದನು. ಅಲ್ಲಿ ಸುಂದರಿಯರಾದ ಅನೇಕ ಸ್ತ್ರೀಯರು ಮಂಚದಲ್ಲಿ ಸುಖವಾಗಿ ಕೂತಿದ್ದ ಒಬ್ಬ ಸುಂದರಿಯನ್ನು ಸೇವಿಸುತ್ತಿದ್ದರು. ಬಂದಿರುವ ಮೂರುಜನರನ್ನು ನೋಡಿ ಆ ಹೆಂಗಸರು ತಮ್ಮ ಸ್ವಾಮಿನಿಯೊಡನೆ ಈ ಅಲ್ಪಾಯುಷ್ಯವಂತರಾದ ಮಾಂಸದಿಂದ ಪುಷ್ಟವಾದ ಶರೀರವುಳ್ಳ ಈ ಮೂರು ಜನರು ನಿನಗೆ ಶ್ರೇಷ್ಠ ಆಹಾರರಾಗುವರು. ಇವರ ರಕ್ತವು ರುಚಿಕರವಾಗಿ ಇರುವುದು ಎಂದು ಹೇಳಿದರು. ಆ ಮಾತನ್ನು ಕೇಳಿ ಆ ಸುಂದರಿಯು ಸ್ವಲ್ಪ ಹುಬ್ಬಿನ ವಿಲಾಸವನ್ನು ಮಾಡಿ ಮಂದಹಾಸವನ್ನು ಮಾಡಿದಳು. ಹನುಮಂತದೇವರಿಂದ ಸಹಿತರಾಗಿ ಬಂದ ಶತ್ರುಘ್ನ ಪುಷ್ಕಲರು ಅಲ್ಲಿದ್ದ ಹೆಂಗಸರನ್ನು ನೋಡಿ ಆಶ್ಚರ್ಯಪಟ್ಟರು. ಆ ಸುಂದರಿಗೆ ನಮಸ್ಕರಿಸಿದರು. ಅವರನ್ನು ನೋಡಿ ಆ ಸುಂದರಿಯು 'ನೀವು ಯಾರು? ಧನುರ್ಧಾರಿಗಳಾಗಿ ಇಲ್ಲಿಗೆ ಹೇಗೆ ಬಂದಿರಿ? ನನ್ನ ಸ್ಥಳವು ಸಾಮಾನ್ಯ ದೇವತೆಗಳಿಗೂ ಬರಲಿಕ್ಕೆ ಆಗಲಾರದ್ದು. ಇಲ್ಲಿಗೆ ಬಂದವರು ಪುನಃ ಹಿಂದಿರುಗಿ ಹೋಗುವವರೂ ಅಲ್ಲ. ಬಂಗಾರದ ಪತ್ರದಿಂದ ಅಲಂಕೃತವಾದ ಈ ಕುದುರೆಯು ಯಾವ ರಾಜನಿಗೆ ಸೇರಿದ್ದು? ನನ್ನ ಹತ್ತಿರ ತಿಳಿಸಿರಿ' ಎಂದು ಕೇಳಿದಳು.

ಆಗ ಭಯರಹಿತರಾದ ಹನುಮಂತದೇವರು ಮಂದಹಾಸವನ್ನು ಮಾಡುತ್ತಾ 'ನಾವು ಮೂರುಲೋಕಗಳಿಗೂ ಪ್ರಭುಗಳಾದ ಶ್ರೀರಾಮಚಂದ್ರದೇವರ ಸೇವಕರು. ಸರ್ವದೇವತೆಗಳಿಗೂ ಶ್ರೇಷ್ಠರಾದ ಯಾವ ರಾಮದೇವರಿಗೆ ಮೂರುಲೋಕವೂ ನಮಸ್ಕರಿಸುವುದೋ ಅಂತಹ ರಾಮದೇವರ ಕುದುರೆಯು ಇದು. ಈ ಕುದುರೆಯನ್ನು ಬಿಟ್ಟುಬಿಡು. ಇದನ್ನು ಹೇಗೆ ಕಟ್ಟಿಹಾಕಿರುವಿ? ನಾವು ಸರ್ವಾಸ್ತ್ರಗಳಲ್ಲಿ ಪಂಡಿತರು. ಸರ್ವಶಾಸ್ತ್ರಗಳನ್ನು ತಿಳಿದವರು. ಈ ಕುದುರೆಯನ್ನು ತಡೆಯಲಿಕ್ಕೆ ಬರುವವರನ್ನು ಕೊಂದುಹಾಕಿ ಈ ಕುದುರೆಯನ್ನು ತೆಗೆದುಕೊಂಡು ಹೋಗುವೆವು' ಎಂದು ಹೇಳಿದರು.

ಹನುಮಂತದೇವರ ಮಾತನ್ನು ಕೇಳಿ ತಲೆಯನ್ನು ಬಗ್ಗಿಸಿ ನಗುತ್ತಾ 'ನಾನು ತಂದಿರುವ ಕುದುರೆಯನ್ನು ಯಾರೂ ಬಿಡಿಸಿಕೊಂಡು ಹೋಗಲಾರರು. ಆದರೆ ನಾನೂ ಪೂರ್ವದಲ್ಲಿ ರಾಮದೇವರ ಪಾದಕಮಲದ ದಾನಿಯು. ಆದುದರಿಂದ ಶ್ರೀರಾಮದೇವರ ಕುದುರೆಯನ್ನು ನಾನು ಅಪಹರಿಸುವುದಿಲ್ಲ. ರಾಮದೇವರ ಕುದುರೆಯನ್ನು ಇಲ್ಲಿಗೆ ತಂದದ್ದರಿಂದ ಬಹಳ ಅವಿನಯವಾಯಿತು. ರಾಮದೇವರು ನನ್ನನ್ನು ಕ್ಷಮಿಸಬೇಕು. ಯಾಗವನ್ನು ಮಾಡುವ ರಾಮದೇವರ ಭೃತ್ಯರಾದ ನೀವು ಕುದುರೆಗಾಗಿ ಬಹಳ ಶ್ರಮಪಟ್ಟಿರಿ. ರಾಮದೇವರು ನನ್ನಲ್ಲಿ ಕ್ಷಮಾಮಾಡುವಂತೆ ನೀವು

ಬೇಕಾದ ವರವನ್ನು ಕೇಳಿರಿ' ಎಂದು ಹೇಳಿದಳು. ಅದಕ್ಕೆ ಹನುಮಂತದೇವರು 'ನಮಗೆ ರಾಮದೇವರ ಅನುಗ್ರಹದಿಂದ ಒಂದೂ ಕಡಿಮೆಯಿಲ್ಲ. ನಮಗೆ ರಾಮದೇವರ ಸೇವೆಯೇ ಮುಖ್ಯವಾದದ್ದು' ಎಂದರು. ಆಗ ಆ ಸ್ತ್ರೀಯು 'ನೀವು ರಾಮದೇವರ ಸೇವೆಯಿಂದಲೇ ಸಂತುಷ್ಟರಾಗಿರುವಿರಿ. ಆದರೂ ನಾನು ರಾಮದೇವರ ಅನುಗ್ರಹವನ್ನು ಪಡೆಯುವುದಕ್ಕಾಗಿ ಒಂದು ವರವನ್ನು ಕೊಡುವೆನು. ನಿಮ್ಮ ಕುದುರೆಯು ಮುಂದೆ ಹೋಗಲು ರುದ್ರದೇವರಿಂದ ರಕ್ಷಿತನಾದ ವೀರಮಣಿ ಎಂಬ ರಾಜನು ಕುದುರೆಯನ್ನು ಕಟ್ಟುವನು. ಅವನ ಜಯಕ್ಕಾಗಿ ನಾನೊಂದು ಅಸ್ತ್ರವನ್ನು ಕೊಡುವೆನು ಸ್ವೀಕರಿಸಿರಿ. ದ್ವಂದ್ವಯುದ್ಧದಲ್ಲಿ ಶತ್ರುಘ್ನನು ಅವನನ್ನು ಸೋಲಿಸಬೇಕು. ನಾನು ಕೊಡುವ ಅಸ್ತ್ರವನ್ನು ಶತ್ರುಘ್ನನು ಆ ರಾಜನಿಗೆ ಬಿಟ್ಟರೆ ಅವನು ಶುದ್ಧನಾಗಿ ರಾಮದೇವರ ಸ್ವರೂಪವನ್ನು ತಿಳಿಯುವವನಾಗಿ ಕುದುರೆಯನ್ನು ಬಿಟ್ಟು ಕಾಲಿಗೆ ಬೀಳುವನು. ಆದುದರಿಂದ ಈ ಅಸ್ತ್ರವನ್ನು ಸ್ವೀಕರಿಸಿ' ಎಂದು ಹೇಳಲು ಶತ್ರುಘ್ನನು ಉತ್ತರಾಭಿಮುಖವಾಗಿ ಇದ್ದು ಅವಳು ಕೊಟ್ಟ ಯೋಗಿನೀ ಅಸ್ತ್ರವನ್ನು ಸ್ವೀಕರಿಸಿದನು. ಆಮೇಲೆ ಆ ಯೋಗಿನಿಗೆ ನಮಸ್ಕರಿಸಿ ಹನುಮಂತದೇವರಿಂದ ಪುಷ್ಕಲನಿಂದಲೂ ಸಹಿತನಾಗಿ ಶತ್ರುಘ್ನನು ಕುದುರೆಯನ್ನು ಹಿಡಿದುಕೊಂಡು ನೀರಿನ ಮೇಲಕ್ಕೆ ಬಂದನು. ಸೈನಿಕರೆಲ್ಲರೂ ಸಂತೋಷದಿಂದ ಹನುಮಂತದೇವರು ಆ ಯೋಗಿನೀ ಎಂಬ ಸ್ತ್ರೀಯಿಂದ ಅಸ್ತ್ರವನ್ನು ಪಡೆದುದನ್ನು ಹೇಳಿ ಅಲ್ಲಿ ನಡೆದ ವಿಷಯವನ್ನೆಲ್ಲಾ ಹೇಳಿದರು. ಅದನ್ನು ಕೇಳಿ ಎಲ್ಲರೂ ಸಂತೋಷಪಟ್ಟರು.



## ವೀರಮಣಿಯ ಮಗನಾದ ರುಕ್ಮಾಂಗದನು ಕುದುರೆಯನ್ನು ಕಟ್ಟಿದ್ದು

ಆಮೇಲೆ ವಾದ್ಯಘೋಷವನ್ನು ಮಾಡಿದರು. ಕುದುರೆಯನ್ನು ಮುಂದೆ ಬಿಟ್ಟರು. ಕುದುರೆಯು ಅಲ್ಲಿಂದ ದೇವಪುರಕ್ಕೆ ಹೋಯಿತು. ದೇವಪುರವು ಸಕಲ ಸೌಭಾಗ್ಯಗಳಿಂದ ಕೂಡಿದ ಶ್ರೇಷ್ಠವಾದ ರಾಜ್ಯವು. ಅಲ್ಲಿ ಧಾರ್ಮಿಕರಲ್ಲಿ ಶ್ರೇಷ್ಠನಾದ ವೀರಮಣಿಯೆಂದು ಹೆಸರುಳ್ಳ ರಾಜನು ಧರ್ಮದಿಂದ ರಾಜ್ಯಭಾರವನ್ನು ಮಾಡುತ್ತಿದ್ದನು. ಅವನ ಮಗನಾದ ಮಹಾಪರಾಕ್ರಮಶಾಲಿಯಾದ ಬಲಿಷ್ಠನಾದ ರುಕ್ಮಾಂಗದನೆಂಬವನು ಪರಮಸುಂದರಿಯರಾದ ಸ್ತ್ರೀಯರಿಂದ ಕೂಡಿಕೊಂಡು

ವನಕ್ರೀಡೆಯನ್ನು ಮಾಡಲಿಕ್ಕೆ ನಾನಾವಿಧಗಳಾದ ಮರಗಳಿಂದ ಕೂಡಿದ ವನಕ್ಕೆ ಹೋದನು. ಹೆಂಗಸರು ಕೆಲವರು ಹಾಡು ಹೇಳಿದರು. ಕೆಲವು ವೇದಿಕೆ ಮಾತುಗಳನ್ನು ಆಡಿದರು. ಇನ್ನು ಕೆಲವರು ಹುಬ್ಬಿನ ವಿಲಾಸ ಮಾಡಿದರು. ಮತ್ತೂ ಕೆಲವರು ಆಲಿಂಗಿಸಿದರು. ಹೀಗೆಲ್ಲಾ ಆ ಹೆಂಗಸರು ರಾಜಪುತ್ರನನ್ನು ಸಂತೋಷಪಡಿಸುತ್ತಿದ್ದರು. ರಾಜಪುತ್ರನು ಹೂವುಗಳನ್ನು ಕೊಯಿದು ಅವರಿಗೆಲ್ಲಾ ಮುಡಿಸಿದನು. ಮೃದುವಾಣಿಯಿಂದ ಅವರನ್ನು ಪ್ರಶಂಸಮಾಡುತ್ತಾ ಸಂತೋಷ ಪಡಿಸಿದನು.

ಈರೀತಿಯಾಗಿ ಅವರು ವಿಹರಿಸುತ್ತಿರಲು ಆ ಪ್ರದೇಶಕ್ಕೆ ಹಣೆಯಲ್ಲಿ ಬಂಗಾರದ ಪತ್ರವನ್ನು ಧರಿಸಿಕೊಂಡು ರಾಮದೇವರ ಕುದುರೆಯು ಬಂದಿತು. ಅದನ್ನು ನೋಡಿ ಹೆಂಗಸರು 'ಕಾಂತ! ಬಂಗಾರ ಪತ್ರದಿಂದ ಶೋಭಿಸುತ್ತಿರುವ ಈ ಕುದುರೆಯು ಯಾವುದು? ಯಾರದ್ದು? ನೀವು ಇದನ್ನು ಬಲಾತ್ಕಾರವಾಗಿ ಹಿಡಿಯಿರಿ' ಎಂದು ಹೇಳಿದರು. ಅದನ್ನು ಕೇಳಿ ರುಕ್ಮಾಂಗದನು ಹೋಗಿ ಒಂದು ಕೈಯಿಂದ ಆ ಕುದುರೆಯನ್ನು ಹಿಡಿದನು. ಕುದುರೆಯ ಹಣೆಯಲ್ಲಿದ್ದ ಬಂಗಾರದ ಪತ್ರದಲ್ಲಿ ಬರೆದದ್ದನ್ನು ನೋಡಿ ರುಕ್ಮಾಂಗದನು ಹೆಂಗಸರ ಮಧ್ಯದಲ್ಲಿ ನಗುವವನಾದನು. 'ಭೂಮಿಯಲ್ಲಿ ಪರಾಕ್ರಮ ಸಂಪತ್ತುಗಳಲ್ಲಿ ನನ್ನತಂದೆಗೆ ಸಮಾರಾದವರು ಒಬ್ಬರೂ ಇರುವುದಿಲ್ಲ. ಅಂತಹ ನನ್ನ ತಂದೆಯು ಬದುಕಿರುತ್ತಿರಲು ಆ ರಾಮಭದ್ರನೆಂಬ ರಾಜನು ಹೇಗೆ ಯಜ್ಞಮಾಡಲಿಕ್ಕೆ ಉದ್ಯುಕ್ತನಾದನು. ಯಾವ ನನ್ನ ತಂದೆಗೆ ರುದ್ರ ದೇವರೇ ರಕ್ಷಕರಾಗಿದ್ದಾರೆ. ಯಾವ ರುದ್ರದೇವರಿಗೆ ದೇವತೆಗಳೂ ನಮಸ್ಕರಿಸು ವರು. ನನ್ನ ತಂದೆಯೇ ಅಶ್ವಮೇಧ ಯಾಗವನ್ನು ಮಾಡಲಿ. ಈ ಕುದುರೆಯನ್ನು ನಮ್ಮ ಕುದುರೆಯ ಶಾಲೆಗೆ ತೆಗೆದುಕೊಂಡು ಹೋಗಿರಿ' ಎಂದನು. ಈರೀತಿಯಾಗಿ ಅವನು ಹೇಳಲು ಹೆಂಗಸರೆಲ್ಲರೂ ಸಂತೋಷದಿಂದ ಅವನನ್ನು ಆಲಿಂಗಿಸಿದರು.

ರಾಜನ ಮಗನಾದ ರುಕ್ಮಾಂಗದನು ಪತ್ನಿಯರೊಡನೆ ಕೂಡಿಕೊಂಡು, ಮಹಾ ಉತ್ಸಾಹವುಳ್ಳ ಪಟ್ಟಣಕ್ಕೆ ಪ್ರವೇಶಿಸಿದನು. ರುಕ್ಮಾಂಗದನು ತಂದೆಯ ಬಳಿಗೆ ಬಂದು ಎಲ್ಲಾ ವಿಷಯವನ್ನು ತಿಳಿಸಿದನು. ಅಶ್ವಮೇಧಕ್ಕೆ ಕುದುರೆಯನ್ನು ಬಿಟ್ಟು ಶತ್ರುಘ್ನನು ಅನುಸರಿಸಿ ಬರುತ್ತಿರುವ ಕುದುರೆಯನ್ನು ಕಟ್ಟಿಹಾಕಿರುವೆನು' ಎಂದು ಹೇಳಿದನು. ರಾಜಮಣಿಯು ತನ್ನ ಮಗನು ಯುದ್ಧವನ್ನು ಮಾಡದೆ ಕಳ್ಳನಂತೆ ಕುದುರೆಯನ್ನು ಓಡಿದುಕೊಂಡು ಬಂದನು ಎಂದು ಅವನನ್ನು ಪ್ರಶಂಸಾಮಾಡಲಿಲ್ಲ. ತನ್ನ ಅಳಿಯನಾಗಿದ್ದ ಅದ್ಭುತಕರ್ಮವುಳ್ಳ ಅರ್ಧದೇಹದಲ್ಲಿ ಸ್ತ್ರೀಯನ್ನು ಧರಿಸಿದ್ದ

ಚಂದ್ರಧಾರಿಯಾದ ರುದ್ರದೇವರೊಡನೆ ಈ ವಿಷಯವನ್ನು ಹೇಳಿದನು. ಅವರೊಡನೆ ವಿಚಾರಮಾಡಿದನು.

ಆಗ ರುದ್ರದೇವರು 'ರಾಜನೇ! ನಿನ್ನ ಮಗನು ಅದ್ಭುತವಾದ ಕರ್ಮವನ್ನು ಮಾಡಿರುವನು. ರಾಮದೇವರ ಕುದುರೆಯನ್ನು ಅಪಹರಿಸಿರುವನು. ಇದರಿಂದ ಈಗ ದೇವಾಸುರರಿಗೆ ಮೋಹಕವಾದ ಯುದ್ಧವು ನಡೆಯುವುದು. ಕೋಟಿ ವೀರರಿಂದ ಸಹಿತನಾಗಿ ಶತ್ರುಘ್ನನು ಯುದ್ಧಕ್ಕೆ ಬರುವನು. ನಾನು ಯಾವಾಗಲೂ ಮನಸ್ಸಿನಲ್ಲಿ ಯಾರನ್ನು ಧ್ಯಾನ ಮಾಡುತ್ತಿರುವೆನೋ ಬಾಯಿಯಲ್ಲಿ ಯಾರ ಹೆಸರನ್ನು ಹೇಳುತ್ತಿರುವೆನೋ ಆ ರಾಮದೇವರ ಕುದುರೆ ಯನ್ನು ನಿನ್ನ ಮಗನು ಕಟ್ಟಿಹಾಕಿರುವನು. ಯುದ್ಧರಂಗದಲ್ಲಿ ನಮಗೆ ಪರಮಲಾಭ ವುಂಟಾಗುತ್ತದೆ. ರಾಮದೇವರ ಪಾದಕಮಲವನ್ನು ನಾವೆಲ್ಲರೂ ನೋಡುವೆವು. ಕುದುರೆಯನ್ನು ರಕ್ಷಿಸುವ ವಿಷಯದಲ್ಲಿ ಬಹಳ ಪ್ರಯತ್ನವನ್ನು ಮಾಡಬೇಕು. ನಾನು ರಕ್ಷಣೆ ಮಾಡುತ್ತಿದ್ದರೂ ಕುದುರೆಯನ್ನು ಬಲಾತ್ಕಾರದಿಂದ ಅಪಹರಿಸುವರು' ಇತ್ಯಾದಿ ರೀತಿಯಿಂದ ರುದ್ರದೇವರು ಹೇಳಿದ ಮಾತನ್ನು ಕೇಳಿ ವೀರಮಣಿ ರಾಜನು ರುದ್ರದೇವರೊಡನೆ 'ತಮ್ಮ ಪ್ರತಾಪವನ್ನು ರಕ್ಷಿಸಿಕೊಳ್ಳುವುದು ಕ್ಷತ್ರಿಯಧರ್ಮವು. ಈ ಯಾಗದ ಕುದುರೆಯಿಂದ ನಮ್ಮ ಪ್ರತಾಪವು ನಷ್ಟವಾಗುವ ಸಂದರ್ಭವು ಬಂದಿದೆ.

ಆದುದರಿಂದ ಹೇಗಾದರೂ ಯಾರಾದರೂ ಪ್ರತಾಪವನ್ನು ರಕ್ಷಿಸಿಕೊಳ್ಳಬೇಕು. ನಾನು ಏನೇನು ಮಾಡಲಿಕ್ಕೆ ಶಕ್ಯವಾಗುತ್ತದೋ ಅಷ್ಟು ಮಾಡಬೇಕು. ನನ್ನ ಮಗನು ರಾಮದೇವರಿಗೆ ಕೋಪಬರುವಂತೆ ಮಾಡಿರುವನು. ಕಾಲೋಚಿತವಾದ ಕಾರ್ಯ ವನ್ನು ಮಾಡಬೇಕು. ಅಂಜಿಕೆಯಿಂದ ಶತ್ರುವಿನ ಬಳಿಗೆ ಹೋಗಿ ಪಾದಕ್ಕೆ ನಮಸ್ಕರಿಸುವುದು ಕ್ಷತ್ರಿಯರ ಧರ್ಮವಲ್ಲ. ಹಾಗೆ ಮಾಡಿದರೆ ಶತ್ರುಗಳೆಲ್ಲರೂ ನಗುವರು. ಆದುದರಿಂದ ಈಗ ಯುದ್ಧವು ಸಮೀಪಿಸಿರುವ ಸಮಯದಲ್ಲಿ ಹೇಗೆ ಭಕ್ತರಕ್ಷಣೆಯನ್ನು ಮಾಡಬೇಕೋ ಹಾಗೆ ತಾವು ಮಾಡಬೇಕು' ಎಂದು ಹೇಳಲು ರುದ್ರದೇವರು ನಗುತ್ತಾ—

'ನಾನು ನಿನ್ನನ್ನು ರಕ್ಷಿಸುತ್ತಿರುವಾಗ ಮೂವತ್ತಮೂರು ಕೋಟಿ ದೇವತೆಗಳು ಬಂದರೂ ಯಾರು ನಿನ್ನ ಕುದುರೆಯನ್ನು ಅಪಹರಿಸುವರೆಂದು ನೋಡುತ್ತೇನೆ. ರಾಮದೇವರೇ ಬಂದು ತನ್ನ ದರ್ಶನವನ್ನು ಕೊಟ್ಟರೆ ಮಾತ್ರ ನಾನು ಅವರ ಪಾದಗಳಿಗೆ ನಮಸ್ಕರಿಸುವೆನು. ಸ್ವಾಮಿಯೊಡನೆ ನಾನು ಯುದ್ಧವನ್ನು ಮಾಡ ಲಾರೆನು. ಅದು ಮಹಾ ಅನ್ಯಾಯವಾಗುವುದು. ಇತರ ವೀರರು ತೃಣಪ್ರಾಯರು.

ಒಂದನ್ನು ಮಾಡಲಿಕ್ಕೆ ಸಮರ್ಥರಲ್ಲ. ಆದುದರಿಂದ 'ರಾಜನೇ! ನಾನು ನಿನಗೆ ರಕ್ಷಕನಾಗಿರುವೆನು. ನೀನು ಯುದ್ಧಮಾಡು. ಮೂರುಲೋಕವೇ ಬಂದರೂ ಯಾರೂ ಬಲಾತ್ಕಾರದಿಂದ ಕುದುರೆಯನ್ನು ಅಪಹರಿಸುವರು? ನೋಡುತ್ತೇನೆ' ಎಂದು ಹೇಳಿದರು. ಆ ಮಾತನ್ನು ಕೇಳಿ ವೀರಮಣಿರಾಜನು ಸಂತೋಷವನ್ನು ಹೊಂದಿದನು.



## ವೀರಮಣಿಯು ಯುದ್ಧಕ್ಕೆ ಬಂದದ್ದು

ತೆರುವಾಯ ಶತ್ರುಘ್ನನ ಸೈನಿಕರು 'ಕುದುರೆಯನ್ನು ಯಾರು ತೆಗೆದುಕೊಂಡು ಹೋದರು? ಕಾಣಿಸುವುದಿಲ್ಲವಲ್ಲಾ. ಯಾವ ಮಂದಬುದ್ಧಿಯು ಕುದುರೆಯನ್ನು ಅಪಹರಿಸಿ ಯಮಲೋಕಕ್ಕೆ ಹೋಲು ಸಿದ್ಧನಾಗಿರುವನು?' ಎಂದು ವಿಚಾರಿಸುತ್ತಿದ್ದರು. ಅಷ್ಟರಲ್ಲಿಯೇ ಶತ್ರುಘ್ನನೂ ಮಹಾಸೈನ್ಯಸಹಿತನಾಗಿ ಬಂದನು. ಸೇವಕರೊಡನೆ 'ನಮ್ಮ ಕುದುರೆಯು ಎಲ್ಲಿಗೆ ಹೋಯಿತು? ಕಾಣಿಸುವುದಿಲ್ಲವಲ್ಲಾ' ಎಂದು ಕೇಳಿದನು. ಆಗ ಸೇವಕರು 'ವನದಲ್ಲಿ ಮನೋವೇಗದಿಂದ ಯಾರೋ ಕುದುರೆಯನ್ನು ಅಪಹರಿಸಿದರು. ನಮಗೆ ಯಾರು ಅಪಹರಿಸಿದರೆಂದು ತಿಳಿಯಲಿಲ್ಲ. ಆದುದರಿಂದ ಕುದುರೆಯನ್ನು ಪಡೆಯುವ ವಿಷಯದಲ್ಲಿ ಪ್ರಯತ್ನವನ್ನು ಮಾಡಬೇಕು' ಎಂದು ಹೇಳಿದರು.

ಅವರ ಮಾತನ್ನು ಕೇಳಿ ಶತ್ರುಘ್ನನು ಸುಮತಿಯೊಡನೆ 'ಈ ರಾಜ್ಯದಲ್ಲಿ ಯಾವ ರಾಜನು ವಾಸ ಮಾಡುತ್ತಿರುವನು. ನಮಗೆ ಕುದುರೆಯು ಹೇಗೆ ಸಿಗುವುದು' ಎಂದು ಹೇಳಿದನು. ಅದಕ್ಕೆ ಸುಮತಿಯು 'ರಾಜನೇ! ಇದು ದೇವಪುರವೆಂಬ ರಾಜ್ಯವು. ಇದು ಕೈಲಾಸದಂತೆ ಶತ್ರುಗಳಿಂದ ಹೊಂದಲಿಕ್ಕೆ ಅಶಕ್ಯವಾದದ್ದು. ಇಲ್ಲಿ ಪ್ರತಾಪಶಾಲಿಯಾದ ವೀರಮಣಿಯೆಂಬ ರಾಜನು ರುದ್ರದೇವರಿಂದ ಭಕ್ತನಾದ ಈ ರಾಜನ ವಶರಾಗಿ ಇಲ್ಲಿ ವಾಸಮಾಡು ತ್ತಿರುವರು. ಇಲ್ಲಿ ಕುದುರೆಯನ್ನು ಹಿಡಿದಿದ್ದರೆ ಮಹಾಯುದ್ಧವು ನಡೆಯುವುದು. ಬಹಳ ಜಾಗ್ರತೆಯಿಂದ ಕುದುರೆಯನ್ನು ರಕ್ಷಿಸಬೇಕು' ಎಂದು ಹೇಳಲು ಶತ್ರುಘ್ನನು ಸೈನ್ಯವನ್ನು ವ್ಯೂಹವನ್ನು ಮಾಡಿ ಇರುವವನಾದನು.

ಶತ್ರುಘ್ನನು ಸುಖವಾಗಿ ಕೂತುಕೊಂಡು ಸುಮತಿಯೊಡನೆ ಯೋಚನೆ ಮಾಡುತ್ತಿರಲು ಯುದ್ಧವನ್ನು ನೋಡುವ ಕುತೂಹಲದಿಂದ ಅಲ್ಲಿಗೆ ನಾರದರು

ಬಂದರು. ಶತ್ರುಘ್ನನು ಬಂದಿರುವ ನಾರದರನ್ನು ನೋಡಿ ಎದ್ದುನಿಂತು ಅವರನ್ನು ಆಸನದಲ್ಲಿ ಕೂತುಕೊಳ್ಳಿಸಿ ಸತ್ಕಾರವನ್ನು ಮಾಡಿ ಮಧುರವಾದ ವಾಣಿಯಿಂದ ಅವರನ್ನು ಸಂತೋಷಪಡಿಸುತ್ತಾ 'ಪೂಜ್ಯರೇ! ನನ್ನ ಕುದುರೆಯು ಎಲ್ಲಿಗೆ ಹೋಯಿತು? ಸೇವಕರಿಗೊಬ್ಬರಿಗೂ ಎಲ್ಲಿಗೆ ಹೋಯಿತೆಂದು ತಿಳಿಯಲಿಲ್ಲ. ಯಾವ ಕ್ಷತ್ರಿಯನು ಅದನ್ನು ಅಪಹರಿಸಿದನು ಎಂಬುದನ್ನು ಹೇಳಿರಿ. ನಮಗೆ ಹೇಗೆ ಕುದುರೆಯು ಸಿಗುವುದು?' ಎಂದು ಕೇಳಿದನು. ಅದಕ್ಕೆ ನಾರದರು 'ಇದು ದೇವಪುರವು. ಇಲ್ಲಿ ವೀರಮಣಿಯೆಂಬ ರಾಜನಿರುವನು. ವನದಲ್ಲಿ ಇದ್ದ ಅವನ ಮಗನು ನಿನ್ನ ಕುದುರೆಯನ್ನು ಹಿಡಿದಿರುವನು. ಇಲ್ಲಿ ಭಯಂಕರವಾದ ಮಹಾಯುದ್ಧವು ನಡೆಯುವುದು. ಯುದ್ಧದಲ್ಲಿ ಬಹುಜನ ಪರಾಕ್ರಮಶಾಲಿಗಳು ಬೀಳುವರು. ಆದುದರಿಂದ ಇಲ್ಲಿ ಮಹಾಪ್ರಯತ್ನದಿಂದ ಇರಬೇಕು. ವ್ಯೂಹವನ್ನು ಮಾಡು. ಬಹುಕಷ್ಟದಿಂದ ಕೊನೆಗೆ ನಿನಗೇ ಜಯವು ಏರ್ಪಡುವುದು. ಸಮಸ್ತಲೋಕಗಳಲ್ಲಿಯೂ ರಾಮದೇವರನ್ನು ಯಾರು ಜಯಿಸು ವರು?' ಎಂದು ಹೇಳಿ ಮರೆಯಾಗಿ ಹೋಗಿ ಆಕಾಶಮಾರ್ಗದಲ್ಲಿ ಯುದ್ಧವನ್ನು ನೋಡಲಿಕ್ಕಾಗಿ ನಿಂತುಕೊಂಡರು.

ಇಲ್ಲಿ ವೀರಮಣಿರಾಜನು ರಾಜ್ಯದ ಮಧ್ಯದಲ್ಲಿ ಯುದ್ಧಸೂಚಕವಾದ ಭೇರಿಯ ಧ್ವನಿಯನ್ನು ಮಾಡಿಸಿದನು. ರಿಪುವಾರನೆಂದು ಹೆಸರುಳ್ಳ ಸೇನಾಪತಿಯನ್ನು ಕರೆದು 'ಸೇನಾಪತಿಯೇ! ನಮ್ಮ ರಾಜ್ಯದಲ್ಲಿ ಇರುವ ಎಲ್ಲರಿಗೂ ಶತ್ರುಘ್ನನೊಡನೆ ಯುದ್ಧಕ್ಕೆ ಬರುವಂತೆ ತಿಳಿಸು' ಎಂದು ಹೇಳಿದನು. ಸೇನಾಪತಿಯು ಹಾಗೆಯೇ ತಿಳಿಸಿದನು. ಒಂದೊಂದು ಮನೆಯ ಹತ್ತಿರವೂ ಹೋಗಿ ಡಂಗುರ ಸಾರಿಸಿದರು. ನಮ್ಮ ರಾಜ್ಯದಲ್ಲಿ ಇರುವ ಎಲ್ಲರೂ ಶತ್ರುಘ್ನನೊಡನೆ ಯುದ್ಧಮಾಡಲಿಕ್ಕೆ ಬರಬೇಕು. ಯಾರು ರಾಜಾಜ್ಞೆಯನ್ನು ಮೀರುವರೋ ಅವರು ಮಕ್ಕಳಾಗಲೀ ಸಹೋದರರಾಗಿರಲಿ ಯಾರಾದರೂ ರಾಜಾಜ್ಞೆಯಿಂದ ವಧ್ಯರಾಗುವರು' ಎಂದು ತಿಳಿಸಿದನು. ಅದನ್ನು ಕೇಳಿ ಎಲ್ಲರೂ ಯುದ್ಧದ ವೃತ್ತಾಂತವನ್ನು ಕೇಳಿ ಸಂತೋಷವುಳ್ಳವರಾಗಿ ಹೋದರು. ಕವಚ ಇತ್ಯಾದಿಗಳನ್ನು ಧರಿಸಿಕೊಂಡು ರಥ ಆನೆ ಕುದುರೆ ಇತ್ಯಾದಿಗಳಲ್ಲಿ ಕೂತುಕೊಂಡು ಆಯುಧಧಾರಿಗಳಾಗಿ ಹೋದರು. ರಾಜನ ಮಗನಾದ ರುಕ್ಮಾಂಗದನೂ ರಥದಲ್ಲಿ ಕೂತುಕೊಂಡು ಯುದ್ಧಕ್ಕೆ ಹೋದನು. ಅವನ ತಮ್ಮನಾದ ಶುಭಾಂಗದನೂ ಯುದ್ಧಕ್ಕೆ ಹೋದನು. ರಾಜನ ತಮ್ಮನಾದ ವೀರಸಿಂಹನೂ ಸಹೋದರಿಯ ಮಗನಾದ ಬಲಮಿತ್ರನೂ ಯುದ್ಧಕ್ಕೆ ಹೋದರು. ಸೇನಾಪತಿಯಾದ

ರಿಪುವಾರನು ಚತುರಂಗಸೈನ್ಯವನ್ನು ಸಿದ್ಧಪಡಿಸಿ ರಾಜನೊಡನೆ ತಿಳಿಸಿದನು. ತರುವಾಯ ವೀರಮಣಿರಾಜನು ಶಸ್ತ್ರಾಸ್ತ್ರಗಳಿಂದ ತುಂಬಿದ ರಥದಲ್ಲಿ ಕೂತುಕೊಂಡು ಯುದ್ಧಕ್ಕೆ ಹೊರಟನು. ಭೇರಿ ಮೊದಲಾದ ವಾದ್ಯಗಳ ಘೋಷವಾಯಿತು. ಮಹಾಯುದ್ಧದ ಉತ್ಸಾಹದಿಂದ ರಾಜನು ಹೋದನು.

ಆಗ ಬಂದಿರುವ ಮಹಾಸೈನ್ಯವನ್ನು ನೋಡಿ ಶತ್ರುಘ್ನನು ಸುಮತಿಯೊಡನೆ 'ನಮ್ಮ ಕುದುರೆಯನ್ನು ಅಪಹರಿಸಿದ ಬಲಿಷ್ಠನಾದ ವೀರಮಣಿರಾಜನು ಯುದ್ಧವನ್ನು ಮಾಡುವುದಕ್ಕಾಗಿ ಚತುರಂಗ ಸೈನ್ಯದಿಂದ ಸಹಿತನಾಗಿ ಬಂದಿರುವನು. ಹೇಗೆ ಯುದ್ಧವನ್ನು ಮಾಡಬೇಕು? ಯಾರು ಯುದ್ಧ ಮಾಡುವರು? ನಮಗೆ ಹೇಗೆ ಜಯವಾಗುವುದು?' ಎಂದು ಕೇಳಿದನು. ಅದಕ್ಕೆ ಸುಮತಿಯು 'ಶಿವಭಕ್ತನಾದ ರಾಜನು ಮಹಾಸೈನ್ಯವುಳ್ಳವನಾಗಿ ಯುದ್ಧಕ್ಕೆ ಬಂದಿರುವನು. ಈಗ ಪುಷ್ಕಲನು ಯುದ್ಧವನ್ನು ಮಾಡಲಿ. ನೀಲರತ್ನನೇ ಮೊದಲಾದ ಇತರ ರಾಜರೂ ಯುದ್ಧಮಾಡಲಿ. ರುದ್ರದೇವರೊಡನೆಯೇ ವೀರಮಣಿ ರಾಜನೊಡನೆಯೇ ನೀನೇ ಯುದ್ಧಮಾಡಬೇಕು. ಹೀಗೆ ಮಾಡಿದರೆ ಜಯವು ಸಿಗುವುದು. ಅಥವಾ ನಿನ್ನ ಮನಸ್ಸಿಗೆ ಹೇಗೆ ತೋರುತ್ತದೋ ಹಾಗೆ ಮಾಡು' ಎಂದು ಹೇಳಿದನು. ಅದನ್ನು ಕೇಳಿ ಶತ್ರುಘ್ನನು 'ಎಲ್ಲರೂ ಸೇರಿ ನಮಗೆ ಜಯವಾಗುವಂತೆ ಪ್ರಯತ್ನ ಮಾಡಬೇಕು' ಎಂದು ಹೇಳಿದನು. ಎಲ್ಲರೂ ಯುದ್ಧಮಾಡಲಿಕ್ಕೆ ಮಹಾಉತ್ಸಾಹವುಳ್ಳವರಾಗಿದ್ದರು.



## ರುಕ್ಮಾಂಗದನ ಪರಾಜಯವು [1]

ತರುವಾಯ ಶತ್ರುಘ್ನನ ಸೈನಿಕರು ವೀರಮಣಿಯ ಸೈನ್ಯದೊಡನೆ ಯುದ್ಧಕ್ಕೆ ಉತ್ಸಾಹದಿಂದ ಹೋದರು. ಭಯಂಕರ ಯುದ್ಧವಾಯಿತು. ಅನೇಕ ವೀರರು ಮೃತರಾದರು. ಅದನ್ನು ನೋಡಿ ಬಲಿಷ್ಠನಾದ ರುಕ್ಮಾಂಗದನು ರತ್ನಮಯವಾದ ರಥದಲ್ಲಿ ಕೂತುಕೊಂಡು ಸೈನಿಕರೊಡನೆ ಯುದ್ಧಮಾಡಲಿಕ್ಕೆ ಹೋದನು. ಕಣ್ಣು ಕೆಂಪಗೆ ಮಾಡಿಕೊಂಡು ಬಾಣಗಳಿಂದ ಸಾವಿರಾರು ಜನರಿಗೆ ಹಾಹಾಕಾರವನ್ನು ಉಂಟುಮಾಡುತ್ತಾ ಹೋದನು. ಅವನು ಬಲದಿಂದಲೂ ಕೀರ್ತಿಯಿಂದಲೂ ಕಾಂತಿಯಿಂದಲೂ ತನಗೆ ಸದೃಶನಾದ ಶತ್ರುಘ್ನನನ್ನೂ ಭರತನ ಮಗನಾದ

1. ಪ.ಪು.ಪಾ.ಖಂ. ಅ–41, 42

ಪುಷ್ಕಲನನ್ನೂ ಯುದ್ಧಕ್ಕೆ ಕೂಗಿದನು. ಆಗ ಪುಷ್ಕಲನು ನಗುತ್ತಾ ಅವನ ಎದೆಗೆ ಬಾಣವನ್ನು ಬಿಟ್ಟನು. ಅದನ್ನು ಸಹಿಸದೆ ರುಕ್ಮಾಂಗದನು ಹತ್ತು ಬಾಣಗಳನ್ನು ಪುಷ್ಕಲನ ಎದೆಯ ಮಧ್ಯಕ್ಕೆ ಬಿಟ್ಟನು. ಇಬ್ಬರೂ ಕೋಪದಿಂದ ಭಯಂಕರವಾಗಿ ಯುದ್ಧವನ್ನು ಮಾಡಿಕೊಂಡರು. ಪುಷ್ಕಲನು ನಾಲ್ಕು ಬಾಣಗಳಿಂದ ನಾಲ್ಕು ಕುದುರೆಗಳನ್ನು ಸಂಹರಿಸಿದನು. ಎರಡು ಬಾಣಗಳಿಂದ ಸಾರಥಿಯನ್ನು ಬೀಳಿಸಿದನು. ಒಂದು ಬಾಣದಿಂದ ಧ್ವಜವನ್ನು ಕತ್ತರಿಸಿದನು. ಎರಡು ಬಾಣಗಳಿಂದ ರಥವನ್ನು ರಕ್ಷಿಸುವವರನ್ನು ಕೊಂದುಹಾಕಿದನು. ಒಂದು ಬಾಣವನ್ನು ಅವನ ಎದೆಯ ಮಧ್ಯಕ್ಕೆ ಬಿಟ್ಟನು. ಈ ಅದ್ಭುತವಾದ ಕರ್ಮವನ್ನು ನೋಡಿ ಎಲ್ಲಾ ವೀರರೂ ಸಂತೋಷಪಟ್ಟರು. ರುಕ್ಮಾಂಗದನ ಧನುಸ್ಸು ಮುರಿದುಹೋಗಿ ರಥವೂ ಪುಡಿಯಾಗಲು ಅತ್ಯಂತ ಕೋಪವುಳ್ಳವನಾಗಿ ಬೇರೊಂದು ರಥದಲ್ಲಿ ಕೂತುಕೊಂಡು ಬೇರೊಂದು ಧನುಸ್ಸನ್ನು ತೆಗೆದು ಪುಷ್ಕಲನೊಡನೆ 'ನೀನು ಪರಾಕ್ರಮವನ್ನು ತೋರಿಸಿ ಎಲ್ಲಿಗೆ ಹೋಗುವಿ? ಈಗ ನನ್ನ ಪರಾಕ್ರಮವನ್ನು ನೋಡು. ಪ್ರಯತ್ನವಾಗಿ ನಿಂತಿರು. ನಿನ್ನನ್ನು ಈಗ ಆಕಾಶಕ್ಕೆ ಕಳುಹಿಸುತ್ತೇನೆ' ಎಂದು ಹೇಳಿ ಅತಿ ಉಗ್ರವಾದ ಬಾಣವನ್ನು ತೆಗೆದು ಭ್ರಾಮಕ ಅಸ್ತ್ರಮಂತ್ರವನ್ನು ಅಭಿಮಂತ್ರಿಸಿ ಪುಷ್ಕಲನ ರಥದ ಮೇಲೆ ಬಿಡುವವನಾದನು.

ಆ ಬಾಣದಿಂದ ಪುಷ್ಕಲನ ರಥವು ಹತ್ತುಮೈಲು ದೂರ ಹೋಯಿತು. ಸಾರಥಿಯು ಬಹು ಕಷ್ಟದಿಂದ ರಥವನ್ನು ಸೆಳೆದು ನಿಲ್ಲಿಸಿದನು. ಅದು ಭೂಮಿಯಲ್ಲಿಯೇ ಸುತ್ತಿತು. ತರುವಾಯ ಪರಮಾಸ್ತ್ರಜ್ಞಾನಿಯಾದ ಪುಷ್ಕಲನು ಬಹುಕಷ್ಟದಿಂದ ತನ್ನ ಸ್ಥಾನವನ್ನು ಹೊಂದಿ ಧನುಸ್ಸಿಗೆ ಬಾಣವನ್ನು ಜೋಡಿಸಿ, 'ವೀರಶ್ರೇಷ್ಠನೇ! ನೀನು ಎಲ್ಲಾ ದೇವತೆಗಳಿಂದ ಸೇವಿತವಾದ ಸ್ವರ್ಗಕ್ಕೆ ಹೋಗು. ನಿನ್ನಂತಹ ಇಂದ್ರದೇವರಿಗೆ ಸಮಾನರಾದವರು ಭೂಮಿಯಲ್ಲಿ ಇರಲಿಕ್ಕೆ ಯೋಗ್ಯರಾಗುವುದಿಲ್ಲ. ದೇವಲೋಕಕ್ಕೆ ಹೋಗುವವನಾಗು' ಎಂದು ಹೇಳಿ ರಥವನ್ನು ಆಕಾಶಕ್ಕೆ ಹಾರಿಸುವ ಅಸ್ತ್ರಮಂತ್ರದಿಂದ ಅಭಿಮಂತ್ರಿಸಿಬಿಟ್ಟನು. ಆ ಬಾಣದಿಂದ ರುಕ್ಮಾಂಗದ ರಥವು ಆಕಾಶದಲ್ಲಿ ಮೇಲೆ ಹೋಯಿತು. ಸೂರ್ಯಮಂಡಲದ ಬಳಿಗೆ ಹೋಯಿತು. ಸೂರ್ಯನ ಜ್ವಾಲೆ ಯಿಂದ ರಥವು ಸುಟ್ಟುಹೋಯಿತು. ಸೂರ್ಯನ ಕಿರಣಗಳಿಂದ ಅವನ ದೇಹದಲ್ಲಿ ಅನೇಕ ಭಾಗವೂ ಸುಟ್ಟುಹೋಯಿತು. ಅತ್ಯಂತ ದುಃಖವುಳ್ಳವನಾಗಿ ಭೂಮಿಗೆ ಬಿದ್ದು ಮೂರ್ಛಿತನಾದನು. ಈರೀತಿಯಾಗಿ ರಾಜಪುತ್ರನು ಮೂರ್ಛಿತನಾಗಿ ಬೀಳಲು ಯುದ್ಧರಂಗದಲ್ಲಿ ಮಹತ್ತಾದ ಹಾಹಾಕಾರವುಂಟಾಯಿತು. ಪುಷ್ಕಲನೇ ಮೊದಲಾದ

ವರಿಗೆ ಜಯಲಕ್ಷ್ಮಿಯು ಒಲಿದಳು. ಶತ್ರುಗಳು ಓಡಲಿಕ್ಕೆ ಆರಂಭಿಸಿದರು. ಆಗ ವೀರಮಣಿಯು ಮಗನು ಮೂರ್ಛಿತನಾಗಿ ಬಿದ್ದಿದ್ದನ್ನು ನೋಡಿ ಕೋಪವುಳ್ಳವನಾಗಿ ರಥದಲ್ಲಿ ಇದ್ದ ಪುಷ್ಕಲನ ಬಳಿಗೆ ಯುದ್ಧಕ್ಕೆ ಬಂದನು. ಆಗ ಭೂಮಿಯೇ ನಡುಗಿತು. ಶೂರರು ಸಂತೋಷವನ್ನು ಹೊಂದಿದರು. ವೀರಮಣಿಯು ರೋಷದಿಂದ ಪುಷ್ಕಲನನ್ನು ಯುದ್ಧಕ್ಕೆ ಕೂಗಿದನು.



## ವೀರಮಣಿಯ ಪರಾಜಯವು [1]

ಆಮೇಲೆ ಪುಷ್ಕಲನು ವೀರಮಣಿಯ ಬಳಿಗೆ ಯುದ್ಧ ಮಾಡಲಿಕ್ಕೆ ಸಿದ್ಧನಾಗಿ ಮಹಾಸೈನ್ಯವನ್ನೇ ಯುದ್ಧಕ್ಕೆ ಕೂಗುತ್ತಿದ್ದನು. ಆಗ ಹನುಮಂತದೇವರು ಬಾಲವನ್ನು ಎತ್ತಿಕೊಂಡು ವೀರಮಣಿಯೊಡನೆ ಯುದ್ಧಕ್ಕೆ ಹೋಗುವ ಅಭಿಪ್ರಾಯದಿಂದ ಪುಷ್ಕಲನ ಬಳಿಗೆ ಬಂದರು. ಆಗ ಪುಷ್ಕಲನು ತನಗೆ ಯುದ್ಧ ಮಾಡಬೇಕೆಂಬ ಕುತೂಹಲದಿಂದ—

'ನೀವು ಯಾಕೆ ಯುದ್ಧಕ್ಕೆ ಬಂದಿರುವಿರಿ. ವೀರಮಣಿಗೆ ಏನು ಬಲವಿದೆ? ಮೂರುಲೋಕವೂ ಒಟ್ಟಾಗಿ ಬಂದರೆ ಆಗ ನೀವು ಯುದ್ಧಕ್ಕೆ ಬರಬೇಕಾಗುತ್ತದೋ ಏನೋ? ಈ ವೀರಮಣಿಯು ಎಷ್ಟರವನು? ಅವನಿಗೆ ಏನು ಬಲವಿದೆ? ಅವನ ಹತ್ತಿರ ಯುದ್ಧಕ್ಕೆ ನೀವು ಬರಬೇಕಾಗಿಲ್ಲ. ಶ್ರೀರಾಮದೇವರ ಪಾದಕಮಲದ ಭಕ್ತಿಯಿಂದ ಒಂದೇ ಕ್ಷಣದಲ್ಲಿಯೇ ಬಿಡುವೆನು. ನನ್ನ ಪ್ರಾರ್ಥನೆಯನ್ನು ಕೇಳಿರಿ. ನೀವು ಶ್ರೀರಾಮದೇವರ ಪರಮಾನುಗ್ರಹದಿಂದ ರಾಕ್ಷಸನೆಂಬ ಸಮುದ್ರವನ್ನು ಅನಾಯಾಸದಿಂದ ದಾಟಿರುವಿರಿ. ನಾನೂ ರಾಮದೇವರನ್ನು ಸ್ಮರಿಸಿ ಈ ಸೈನ್ಯವೆಂಬ ಸಮುದ್ರವನ್ನು ದಾಟುವೆನು. ಯಾರು ಶ್ರೀರಾಮದೇವರನ್ನು ಸ್ಮರಿಸುವರೋ ಅವರ ದುಃಖಸಮುದ್ರವು ಆರಿಹೋಗುವುದು. ಆದುದರಿಂದ ನೀವು ಶತ್ರುಘ್ನನ ಬಳಿಗೇ ಹೋಗಿರಿ. ನಾನು ಒಂದೇ ಕ್ಷಣದಲ್ಲಿ ವೀರಮಣಿಯನ್ನು ಜಯಿಸಿ ಬರುತ್ತೇನೆ' ಎಂದು ಹೇಳಲು—

ಹನುಮಂತದೇವರು 'ಮಗು! ವೀರಮಣಿಯೊಡನೆ ಸಾಹಸಕಾರ್ಯವನ್ನು ಮಾಡದಿರು. ಈ ರಾಜನು ಮಹಾಬಲಿಷ್ಠನು. ಪರಾಕ್ರಮಶಾಲಿಯು. ನೀನು

1. ಪ.ಪೂ.ಪಾ.ಖಂ. ಅ–40

ಚಿಕ್ಕಹುಡುಗನು. ಇವನು ವಯಸ್ಸಾದವನು. ಎಲ್ಲಾ ಅಸ್ತ್ರಶಸ್ತ್ರಗಳನ್ನೂ ತಿಳಿದವನು. ಅನೇಕ ವೀರರನ್ನು ಅವನು ಜಯಿಸಿದವನು. ಅವನ ಸಮೀಪದಲ್ಲಿಯೇ ಅವನ ಭಕ್ತಿಗೆ ವಶರಾಗಿ ರುದ್ರದೇವರು ಇರುವರು. ಆದುದರಿಂದ ನಾನೇ ಇವನೊಡನೆ ಯುದ್ಧವನ್ನು ಮಾಡುತ್ತೇನೆ. ನೀನು ಇತರರೊಡನೆ ಯುದ್ಧವನ್ನು ಮಾಡು' ಎಂದು ಹೇಳಿದರು. ಅದಕ್ಕೆ ಪುಷ್ಕಲನು 'ರುದ್ರದೇವರನ್ನು ಭಕ್ತಿಯಿಂದ ವಶಮಾಡಿಕೊಂಡು ಊರಿನಲ್ಲಿ ಇಟ್ಟುಕೊಂಡಿದ್ದರೆ ಇವನ ಹೃದಯದಲ್ಲಿ ಇರುವುದಿಲ್ಲ. ಈ ರುದ್ರದೇವರು ಯಾರನ್ನು ಆರಾಧಿಸಿ ಉತ್ತಮವಾದ ಸ್ಥಾನವನ್ನು ಪಡೆದಿರುವರೋ ಅಂತಹ ರಾಮದೇವರು ಯಾವಾಗಲೂ ನನ್ನ ಮನಸ್ಸಿನಲ್ಲಿ ಇರುವರು. ರಾಮದೇವರು ಇರುವಲ್ಲಿ ಎಲ್ಲರೂ ಇರುವರು. ಆದುದರಿಂದ ನಾನು ಯುದ್ಧದಲ್ಲಿ ವೀರಮಣಿಯನ್ನು ಜಯಿಸುವೆನು. ನೀವು ವೀರಸಿಂಹ ಮೊದಲಾದರೊಡನೆ ಯುದ್ಧಕ್ಕೆ ಹೋಗಿರಿ' ಎಂದು ಹೇಳಲು—

ಹನುಮಂತದೇವರು ವೀರಮಣಿಯ ತಮ್ಮನಾದ ವೀರಸಿಂಹನೊಡನೆ ಯುದ್ಧ ಮಾಡಲಿಕ್ಕೆ ಹೋದರು. ಲಕ್ಷ್ಮೀನಿಧಿಯು ವೀರಮಣಿಯ ಮಗನಾದ ಶುಭಾಂಗದ ನೊಡನೆ ಯುದ್ಧಮಾಡಿದನು. ತನ್ನನ್ನು ಯುದ್ಧಕ್ಕೆ ಕೂಗುತ್ತಿರುವ ವೀರಮಣಿರಾಜನನ್ನು ನೋಡಿ ಪುಷ್ಕಲನು ಬಂಗಾರದ ರಥದಲ್ಲಿ ಕೂತುಕೊಂಡು ಅವನೊಡನೆ ಯುದ್ಧಕ್ಕೆ ಹೋದನು. ಆಗ ವೀರಮಣಿಯು ಪುಷ್ಕಲನನ್ನು ನೋಡಿ ಭಯರಹಿತವಾದ ವಾಣಿಯಿಂದ 'ಬಾಲನೇ! ಯುದ್ಧರಂಗದಲ್ಲಿ ಕೋಪಿಸಿಕೊಂಡು ಇರುವ ಮಹಾಕೋಪಶಾಲಿಯಾದ ನನ್ನ ಎದುರಿಗೆ ಬರಬೇಡ. ಪ್ರಾಣರಕ್ಷಣೆ ಮಾಡಿಕೊ. ನನ್ನ ಹತ್ತಿರ ಯುದ್ಧಮಾಡಬೇಡ. ನನ್ನಂತಹ ರಾಜರು ನಿನ್ನಂತಹ ಬಾಲಕರನ್ನು ನೋಡಿ ದಯೆಯನ್ನು ತೋರಿಸುತ್ತಾರೆ. ಇಂತಹ ಬಾಲಕರಿಗೆ ಬಡಿಯಲಾರರು. ಯುದ್ಧವನ್ನು ಬಿಟ್ಟುಹೋಗು. ನಿನ್ನನ್ನು ನೋಡುವವರೆಗೆ ನಿನ್ನೊಡನೆ ಯುದ್ಧವನ್ನು ಮಾಡಬೇಕೆಂಬ ಅಭಿಪ್ರಾಯವುಳ್ಳವನಾಗಿದ್ದೆನು. ಈಗ ನಿನ್ನನ್ನು ನೋಡಿದ ಮೇಲೆ ನಿನ್ನನ್ನು ಬಡಿಯಲಿಕ್ಕೆ ನನಗೆ ಮನಸ್ಸು ಬರುವುದಿಲ್ಲ. ನೀನು ನನ್ನ ಮಗನನ್ನು ಮೂರ್ಛೆಪಡಿಸಿದನಾಗಿರುವಿ. ಆದರೂ ನಾನು ಅದನ್ನೆಲ್ಲಾ ಕ್ಷಮಿಸಿರುವೆನು' ಎಂದು ಹೇಳಿದನು.

ಅದನ್ನು ಕೇಳಿ ಪುಷ್ಕಲನು 'ನಾನು ಹುಡುಗನು. ನೀನು ಸರ್ವಶಸ್ತ್ರಾಸ್ತ್ರಗಳನ್ನು ತಿಳಿದ ವಯಸ್ಸಾದವ ನಾಗಿರುವಿ. ಆದರೆ ಕ್ಷತ್ರಿಯರಲ್ಲಿ ಯಾರು ಬಲಿಷ್ಠರಾಗಿರುವರೋ ಅವರೇ ವೃದ್ಧರು. ಬರೇ ವಯಸ್ಸಾದವರು ವೃದ್ಧರೆನಿಸುವುದಿಲ್ಲ. ಬಲಪರಾಕ್ರಮದಿಂದ ಗರ್ವಪಟ್ಟ ನಿನ್ನ ಮಗನನ್ನು ಮೂರ್ಛಾಗೊಳಿಸಿರುವೆನು. ಈಗ ನಿನ್ನನ್ನೇ

ತೀಕ್ಷ್ಣಬಾಣಗಳಿಂದ ಬೀಳಿಸುವೆನು. ಆದುದರಿಂದ ನೀನು ಯುದ್ಧರಂಗದಲ್ಲಿ ಪ್ರಯತ್ನಪೂರ್ವಕವಾಗಿ ನಿಲ್ಲು. ರಾಮದೇವರ ಭಕ್ತನಾದ ನನ್ನನ್ನು ಯಾರೊಬ್ಬರೂ ಜಯಿಸಲಾರರು' ಎಂದು ಹೇಳಲು ಆ ಮಾತನ್ನು ಕೇಳಿ ರಾಜಮಣಿಯು ಅವನನ್ನು ನೋಡಿ ನಗುವವನಾದನು. ಆಮೇಲೆ ಕೋಪವನ್ನು ಧರಿಸಿದನು. ಕೋಪವುಳ್ಳ ಅವನನ್ನು ನೋಡಿ ಪುಷ್ಕಲನು ರಾಜನ ಎದೆಗೆ ಇಪ್ಪತ್ತು ಬಾಣಗಳಿಂದ ಬಡಿದನು. ರಾಜನು ಅದನ್ನು ನೋಡಿ ಕೋಪಿಸಿಕೊಂಡು ಮೂರು ಬಾಣಗಳಿಂದ ಪುಷ್ಕಲನ ಎದೆಗೆ ಒಡೆದನು. ಹೀಗೆಯೇ ಭಯಂಕರವಾದ ಯುದ್ಧವಾಯಿತು. ಕೊನೆಗೆ ಪುಷ್ಕಲನು ರಾಜಮಣಿಯ ರಥವನ್ನು ಪುಡಿಮಾಡಿದನು. ಮೈಯೆಲ್ಲಾ ಗಾಯಮಾಡಿದನು.

ರಾಜಮಣಿಯು ಬೇರೊಂದು ರಥವನ್ನು ಏರುವವನಾಗಿ 'ರಾಮದೇವರ ಪಾದಕಮಲದಲ್ಲಿ ಭ್ರಮರದಂತೆ ಇರುವವನೇ! ವೀರನೇ! ಧನ್ಯನಾಗಿರುವಿ. ನನ್ನ ರಥವನ್ನು ಪುಡಿಮಾಡಿದ ಕಾರಣದಿಂದ ಮಹಾಕಾರ್ಯವನ್ನೇ ಮಾಡಿರುವಿರಿ. ಈಗ ನಾನು ಯುದ್ಧ ಮಾಡುವೆನು. ನಿನ್ನ ಪ್ರಾಣವನ್ನು ರಕ್ಷಿಸಿಕೊ. ಯಮನಂತೆ ಇರುವ ನಾನು ಇರುವಾಗ ನಿನ್ನ ಪ್ರಾಣಗಳು ಸುಲಭವಲ್ಲ! ಹೀಗೆಂದು ಹೇಳಿ ಬಾಣಗಳ ಮಳೆಯನ್ನು ಸುರಿಸಿದನು. ಎಲ್ಲರ ತಲೆಯಮೇಲೆ ರಥದ ಮೇಲೆ ವಾಹನದ ಮೇಲೆ ಎಲ್ಲಿ ನೋಡಿದರೂ ಬಾಣಗಳು ಕಾಣಿಸಿದವು. ಬಹುಜನರು ಸಾಯುವವರಾದರು. ಪಿಶಾಚಿಗಳು ಬಂದು ರಕ್ತವನ್ನು ಪಾನಮಾಡಿ ಕುಣಿಯುತ್ತಿದ್ದವು. ನರಿಗಳೂ ಮಾಂಸವನ್ನು ತಿಂದು ಕೂಗತೊಡಗಿದವು. ಈ ಯುದ್ಧವನ್ನು ನೋಡಿ ಪುಷ್ಕಲನು ಭಯಂಕರವಾದ ಯುದ್ಧವನ್ನು ಮಾಡಿದನು. ಅನೇಕ ಶತ್ರುಪಕ್ಷದವರು ಸತ್ತರು. ಆ ಸಮಯದಲ್ಲಿ ವೀರಮಣಿಯು ಕೋಪವುಳ್ಳವನಾಗಿ ಬಹುಬಾಣಗಳನ್ನು ಬಿಟ್ಟನು. ಪುಷ್ಕಲನು ವೀರಮಣಿಯ ಬಾಣಗಳ ಮಧ್ಯದಲ್ಲಿ ಪಂಜರದಲ್ಲಿ ಸಿಕ್ಕಿದಂತೆ ಸಿಕ್ಕಿಕೊಂಡನು. ತಾನು ಬಾಣಗಳನ್ನು ಬಿಡಲಿಕ್ಕೆ ಅಸಮರ್ಥನಾದನು. ತರುವಾಯ ರಾಮದೇವರನ್ನು ಸ್ಮರಿಸಿಕೊಂಡು ತೀಕ್ಷ್ಣಬಾಣಗಳನ್ನು ಬಿಟ್ಟನು. ಆ ಬಾಣಗಳಿಂದ ವೀರಮಣಿಯು ಬಿಟ್ಟ ಬಾಣಗಳನ್ನೆಲ್ಲಾ ಕತ್ತರಿಸಿ ಶಂಖವನ್ನು ಊದುವವನಾಗಿ ಭಯರಹಿತನಾಗಿ 'ನನ್ನನ್ನು ಬಾಣದ ಪಂಜರದಲ್ಲಿ ಕಟ್ಟಿಹಾಕಿ ಮಹಾಕಾರ್ಯವನ್ನು ಮಾಡಿದಿ. ವಯಸ್ಸಾದವನಾದ ಕಾರಣ ನೀನು, ಬಹುಮಾನಕ್ಕೆ ಅರ್ಹನಾಗಿರುವಿ. ಈಗ ನನ್ನ ಪರಾಕ್ರಮವನ್ನು ನೋಡು. ನಿನ್ನನ್ನು ಮೂರು ಬಾಣಗಳಿಂದ ಮೂರ್ಛಾಗೊಳಿಸದಿದ್ದರೆ ನಾನು ಮಾಡುವ ಪ್ರತಿಜ್ಞೆಯನ್ನು ಕೇಳು.

ಯಾರು ಗಂಗೆಗೆ ಹೋಗಿಯೂ, ಗಂಗೆಯು ಪಾಪಪನ್ನು ಪರಿಹರಿಸುವಳು ಎಂದು ತಿಳಿದೂ ಯಾರು ಗಂಗೆಯಲ್ಲಿ ಸ್ನಾನಮಾಡುವು ದಿಲ್ಲವೋ ಅವನಿಗೆ ಬರುವ ಪಾಪವು ನಿನ್ನನ್ನು ಮೂರ್ಛಾಗೊಳಿಸದಿದ್ದರೆ ನನಗೆ ಬರಲಿ. ಯುದ್ಧಕ್ಕೆ ಸಿದ್ಧನಾಗು' ಎಂದನು. ಈ ಪ್ರಕಾರವಾದ ಪುಷ್ಕಲನ ಮಾತನ್ನು ಕೇಳಿ ರಾಜನು ಬಹಳ ಕೋಪಿಸಿಕೊಂಡನು. ತೀಕ್ಷ್ಣಬಾಣಗಳನ್ನು ಬಿಟ್ಟನು. ಆ ಬಾಣಗಳು ಪುಷ್ಕಲನ ಎದೆಯನ್ನು ಸೀಳಿಕೊಂಡು ಹೋದವು. ತರುವಾಯ ಪುಷ್ಕಲನು ಅಗ್ನಿಯಂತೆ ಪ್ರಕಾಶಮಾನವಾದ ಬಾಣವನ್ನು ರಾಜನ ಎದೆಗೆ ಬಿಟ್ಟನು. ಆಗ ರಾಜಮಣಿಯು ಆ ಬಾಣವನ್ನು ಎರಡಾಗಿ ಕತ್ತರಿಸಿದನು. ರಥಮಧ್ಯದಲ್ಲಿ ಸೂರ್ಯ ನಂತೆ ಪ್ರಕಾಶಿಸುತ್ತಾ ಬಾಣವು ಬಿದ್ದಿತು. ತರುವಾಯ ಪುಷ್ಕಲನು ಮಾತೃಭಕ್ತಿಯಿಂದ ಉಂಟಾದ ಪುಣ್ಯವನ್ನು ಇಟ್ಟು ಬಾಣವನ್ನು ಬಿಟ್ಟನು. ಅದನ್ನೂ ರಾಜನು ಕತ್ತರಿಸಿದನು. ಆಗ ಪುಷ್ಕಲನು ಏನು ಮಾಡಲಿ ಎಂದು ಯೋಚಿಸುವವನಾಗಿ ತನ್ನ ದುಃಖವನ್ನು ಪರಿಹರಿಸುವ ರಾಮದೇವರನ್ನು ಸ್ಮರಿಸುತ್ತಾ ಬಾಣವನ್ನು ಬಿಟ್ಟನು. ಹಾವಿನಂತೆ ಆ ಬಾಣವು ಬಂದು ರಾಜನ ಎದೆಗೆ ತಾಗಿತು. ರಾಜನು ಹಾಗೆಯೇ ಮೂರ್ಛೆಯನ್ನು ಹೊಂದಿದನು. ತರುವಾಯ ಅವನ ಪಕ್ಷದವರೆಲ್ಲರೂ ಹಾಹಾಕಾರವನ್ನು ಮಾಡುತ್ತಾ ಓಡಲಿಕ್ಕೆ ಆರಂಭಿಸಿದರು. ಪುಷ್ಕಲನು ಜಯಿಸಿದನು.



## ಪುಷ್ಕಲನ ಮರಣ [1]

ಹನುಮಂತದೇವರು ವೀರಸಿಂಹನೊಡನೆ ಭಯಂಕರವಾದ ಯುದ್ಧವನ್ನು ಮಾಡಿದರು. ವೀರಸಿಂಹನು ಅನೇಕ ತೀಕ್ಷ್ಣಬಾಣಗಳನ್ನು ಬಿಟ್ಟನು. ಅದನ್ನು ನೋಡಿ ಹನುಮಂತದೇವರು ಕೋಪಿಸಿಕೊಂಡರು. ಮುಷ್ಟಿಯಿಂದ ಅವನ ಎದೆಗೆ ಗುದ್ದಿದರು. ವೀರಸಿಂಹನು ಮೂರ್ಛಿತನಾಗಿ ಬಿದ್ದನು. ಅದನ್ನು ನೋಡಿ ಶುಭಾಂಗದನೂ ಮೂರ್ಛೆಯಿಂದ ಎದ್ದು ರುಕ್ಮಾಂಗದನೂ ಬಾಣಗಳನ್ನು ಸುರಿಸುತ್ತಾ ಬಂದರು. ಹನುಮಂತದೇವರಿಗೆ ಹತ್ತಿರ ಬಂದರು. ಹನುಮಂತದೇವರು ಯುದ್ಧಮಾಡಲಿಕ್ಕೆ ಬಂದಿರುವ ಅವರಿಬ್ಬರನ್ನು ನೋಡಿ ಅವರ ರಥಗಳನ್ನು ಬಾಲದಿಂದ ಸುತ್ತಿ ಭೂಮಿಗೆ ಬಡಿದರು. ಅದರಿಂದ ಆಕ್ಷಣ ಅವರಿಬ್ಬರೂ ಮೂರ್ಛಿತರಾದರು. ಬಲಮಿತ್ರನು

1. ಪ.ಪು.ಪಾ.ಖಂ. ಅ–43

ಸುಮದನೊಡನೆ ಬಹುಹೊತ್ತು ಯುದ್ಧಮಾಡಿ ಅವನನ್ನು ಮೂರ್ಛಾಗೊಳಿಸಿದನು. ಆಕ್ಷಣದಲ್ಲಿ ಪುಷ್ಕಲನು ಅವನನ್ನು ಮೂರ್ಛಾಗೊಳಿಸಿದನು.

ಆ ಸಮಯದಲ್ಲಿ ರುದ್ರದೇವರು ರಥದಲ್ಲಿ ಕೂತುಕೊಂಡು ಧನುಸ್ಸಿನ ಶಬ್ದವನ್ನು ಮಾಡುತ್ತಾ ಮೂರ್ಛಿತರಾದ ಸ್ವಕೀಯರನ್ನು ನೋಡಿ ಶತ್ರುಘ್ನನ ಸೈನ್ಯದೊಡನೆ ಯುದ್ಧಕ್ಕೆ ಬಂದರು. ಬಹುಜನರು ಮೃತರಾಗಿರುವುದನ್ನು ನೋಡಿ ಕಣ್ಣುಕೆಂಪಗೆ ಮಾಡಿಕೊಂಡು ಬಂದರು. ಬಂದಿರುವ ರುದ್ರದೇವರನ್ನು ನೋಡಿ ಶತ್ರುಘ್ನನು ಅವರೊಡನೆ ಯುದ್ಧಕ್ಕೆ ಹೋದನು. ಗಣಗಳಿಂದ ಸಹಿತರಾಗಿ ಯುದ್ಧಕ್ಕೆ ಬಂದಿದ್ದ ರುದ್ರದೇವರು ಶತ್ರುಘ್ನನನ್ನು ನೋಡಿ ಬಹಳ ಕೋಪವುಳ್ಳವರಾಗಿ 'ರಾಮದೇವರ ಪಾದಸೇವಕನಾದ ಪುಷ್ಕಲನು ನನ್ನ ಭಕ್ತನನ್ನು ಯುದ್ಧದಲ್ಲಿ ಹಿಂಸಿಸಿ ಮಹಾಕಾರ್ಯವನ್ನು ಮಾಡಿದನು. ಈಗ ಆ ವೀರನಾದ ಪುಷ್ಕಲನು ಎಲ್ಲಿ ಇರುವನು? ಅವನನ್ನು ಕೊಂದು ನಾನು ಸುಖವನ್ನು ಹೊಂದುವೆನು' ಎಂದು ಹೇಳಿ ಪುಷ್ಕಲನೊಡನೆ ಯುದ್ಧ ಮಾಡಲು ನಂದಿಯನ್ನು ಕಳುಹಿಸಿದನು. ಕುಶಧ್ವಜನೊಡನೆ ಯುದ್ಧಮಾಡಲು ಪ್ರಚಂಡನನ್ನು ಸುಬಾಹುವಿನೊಡನೆ ಯುದ್ಧಮಾಡಲಿಕ್ಕೆ ಭೃಂಗಿಯನ್ನು ದಮನನೊಡನೆ ಯುದ್ಧಮಾಡಲು ಚಂಡ ಎಂಬ ಗಣನನ್ನು ಆಜ್ಞಾಪಿಸಿದರು.

ಪುಷ್ಕಲನು ತನ್ನೊಡನೆ ಯುದ್ಧಕ್ಕೆ ಬಂದಿರುವ ವೀರಭದ್ರನನ್ನು ನೋಡಿ ಐದು ಬಾಣಗಳಿಂದ ಅವನನ್ನು ಬಡೆದನು. ವೀರಭದ್ರನು ಶೂಲವನ್ನು ಬಿಸಾಡಿದನು. ಪುಷ್ಕಲನು ಶೂಲವನ್ನು ಕತ್ತರಿಸಿ ಗರ್ಜಿಸಿದನು. ವೀರಭದ್ರನು ಖಟ್ವಾಂಗವೆಂಬ ಆಯುಧದಿಂದ ಪುಷ್ಕಲನ ತಲೆಗೆ ಬಡಿದನು. ಅದರಿಂದ ಪುಷ್ಕಲನು ಮೂರ್ಛೆಯನ್ನು ಹೊಂದಿದನು. ಆಮೇಲೆ ಎದ್ದು ವೀರಭದ್ರನ ಕೈಯಲ್ಲಿ ಇದ್ದ ಖಟ್ವಾಂಗವನ್ನೇ ಕತ್ತರಿಸಿದನು. ವೀರಭದ್ರನು ಕೋಪದಿಂದ ಪುಷ್ಕಲನ ರಥವನ್ನೇ ಪುಡಿಮಾಡಿದನು. ಪುಷ್ಕಲನು ರಥವನ್ನು ಬಿಟ್ಟು ವೀರಭದ್ರನನ್ನು ಮುಷ್ಟಿಯಿಂದ ಗುದ್ದಿದನು. ಇಬ್ಬರೂ ಮುಷ್ಟಿಗಳಿಂದ ಗುದ್ದಿಕೊಂಡರು. ತೊಡೆಗಳಿಂದ ಮೊಳಕಾಲುಗಳಿಂದ ಬಡಿದುಕೊಂಡರು.

ಈರೀತಿಯಾಗಿ ನಾಲ್ಕು ದಿವಸಗಳವರೆಗೆ ರಾತ್ರಿಹಗಲು ಯುದ್ಧವು ನಡೆಯಿತು. ಒಬ್ಬರಿಗೂ ಜಯವೂ ಪರಾಜಯವೂ ಆಗಲಿಲ್ಲ. ಐದನೇ ದಿವಸದಲ್ಲಿ ಮಹಾಬಲಿಷ್ಠನಾದ ವೀರಭದ್ರನು ಪುಷ್ಕಲನನ್ನು ಎತ್ತಿಕೊಂಡು ಆಕಾಶಕ್ಕೆ ಹೋದನು. ಅಲ್ಲಿಯೇ ಅವರಿಬ್ಬರಿಗೂ ದೇವಾಸುರನನ್ನು ಮೋಹಗೊಳಿಸುವ ಯುದ್ಧವು ನಡೆಯಿತು. ಮುಷ್ಟಿಯಿಂದ ಪಾದದಿಂದ ಕೈಗಳಿಂದ ಯುದ್ಧವು ನಡೆಯಿತು. ಆಗ

ಪುಷ್ಕಲನು ಅತ್ಯಂತ ಕೋಪವುಳ್ಳವನಾಗಿ ವೀರಭದ್ರನ ಕುತ್ತಿಗೆಗೇ ಬಡಿದನು. ಆದರಿಂದ ವೀರಭದ್ರನು ವ್ಯಥೆಯುಳ್ಳವನಾಗಿ ಪುಷ್ಕಲನ ಕಾಲಿನಲ್ಲಿ ಹಿಡಿದು ಬಡಿದು ತ್ರಿಶೂಲದಿಂದ ಪುಷ್ಕಲನ ತಲೆಯನ್ನು ಕತ್ತರಿಸಿದನು. ಪುಷ್ಕಲನನ್ನು ಸಂಹರಿಸಿ ಗರ್ಜನೆ ಮಾಡಿದನು. ಪುಷ್ಕಲನು ಮರಣವನ್ನು ಹೊಂದಲು ಹಾಹಾಕಾರವುಂಟಾಯಿತು. ಯುದ್ಧರಂಗದಲ್ಲಿ ಜನರೆಲ್ಲರೂ ಭಯವನ್ನು ಹೊಂದಿದರು.



## ಶತ್ರುಘ್ನನ ಪರಾಜಯ [1]

ಜನರು ಶತ್ರುಘ್ನನ ಬಳಿಗೆ ಹೋಗಿ ಪುಷ್ಕಲನು ವೀರಭದ್ರನಿಂದ ಮೃತನಾದನೆಂದು ತಿಳಿಸಿದರು. ಅದನ್ನು ಕೇಳಿ ಶತ್ರುಘ್ನನು ಬಹಳ ದುಃಖವನ್ನು ಹೊಂದಿದನು. ದುಃಖವುಳ್ಳ ಶತ್ರುಘ್ನನನ್ನು ನೋಡಿ ರುದ್ರದೇವರು 'ಶತ್ರುಘ್ನನೇ! ದುಃಖಪಡಬೇಡ. ವೀರರಿಗೆ ಯುದ್ಧದಲ್ಲಿ ಸಾಯುವುದು ಕೀರ್ತಿಗೇ ಕಾರಣವು. ಪುಷ್ಕಲನು ಪರಮಧನ್ಯನು. ಐದು ದಿವಸ ಯುದ್ಧ ಮಾಡಿ ವೀರಭದ್ರನಿಂದ ಪ್ರಾಣಬಿಟ್ಟನು. ಯಾವ ವೀರಭದ್ರನು ಒಂದೇ ಕ್ಷಣದಲ್ಲಿ ದಕ್ಷನನ್ನು ಸಂಹರಿಸಿರುವನು. ಅಂತಹನೊಡನೆ ಐದುದಿನ ಯುದ್ಧ ಮಾಡಿದನು. ಆದುದರಿಂದ ಶೋಕವನ್ನು ಬಿಟ್ಟು ಯುದ್ಧವನ್ನು ಮಾಡು. ಪ್ರಯತ್ನಪೂರ್ವಕವಾಗಿ ಯುದ್ಧಕ್ಕೆ ನಿಲ್ಲು' ಎಂದು ಹೇಳಿದನು. ಆಗ ಶತ್ರುಘ್ನನು ದುಃಖವನ್ನು ಬಿಟ್ಟು ಕೋಪವನ್ನು ಹೊಂದಿದನು. ಬಾಣಗಳಿಂದ ರುದ್ರದೇವರನ್ನು ಮರೆಮಾಡಿದನು. ಆ ಬಾಣಗಳು ರುದ್ರದೇವರ ಮೈಯಲ್ಲಿ ಗಾಯಗಳನ್ನು ಉಂಟುಮಾಡಿದವು. ರುದ್ರದೇವರೂ ಬಾಣಗಳನ್ನು ಬಿಟ್ಟರು. ಅವರಿಬ್ಬರ ಬಾಣಗಳು ಆಕಾಶದಲ್ಲಿ ವ್ಯಾಪಿಸಿ ಹೋದವು. ಆ ಯುದ್ಧವನ್ನು ನೋಡಿ ಎಲ್ಲರೂ ಪ್ರಲಯವೇ ಬಂದಿತೆಂದು ತಿಳಿದುಕೊಂಡರು. ದೇವತೆಗಳೆಲ್ಲರೂ ವಿಮಾನದಲ್ಲಿ ಕೂತುಕೊಂಡು ಬಂದು ಯುದ್ಧವನ್ನು ನೋಡುತ್ತಾ 'ಇವರು ಮೂರು ಲೋಕಗಳನ್ನು ನಾಶಮಾಡುವವರು. ಇವನು ರಾಮದೇವರ ತಮ್ಮನು. ಏನಾಗುತ್ತದೋ? ಯಾರು ಜಯಿಸುತ್ತಾರೋ? ಯಾರು ಪರಾಜಯವನ್ನು ಹೊಂದುತ್ತಾರೋ?' ಎಂದು ಮಾತಾಡುತ್ತಿದ್ದರು.

ಹೀಗೆ ಹನ್ನೊಂದು ದಿನ ಯುದ್ಧವು ನಡೆ ಯಿತು. ಹನ್ನೆರಡನೆಯ ದಿವಸದಲ್ಲಿ

1. ಪ.ಪು.ಪಾ.ಖಂ. ಅ-44

ಸುಮದನೊಡನೆ ಬಹುಹೊತ್ತು ಯುದ್ಧಮಾಡಿ ಅವನನ್ನು ಮೂರ್ಛಾಗೊಳಿಸಿದನು. ಆಕ್ಷಣದಲ್ಲಿ ಪುಷ್ಕಲನು ಅವನನ್ನು ಮೂರ್ಛಾಗೊಳಿಸಿದನು.

ಆ ಸಮಯದಲ್ಲಿ ರುದ್ರದೇವರು ರಥದಲ್ಲಿ ಕೂತುಕೊಂಡು ಧನುಸ್ಸಿನ ಶಬ್ದವನ್ನು ಮಾಡುತ್ತಾ ಮೂರ್ಛಿತರಾದ ಸ್ವಕೀಯರನ್ನು ನೋಡಿ ಶತ್ರುಘ್ನನ ಸೈನ್ಯದೊಡನೆ ಯುದ್ಧಕ್ಕೆ ಬಂದರು. ಬಹುಜನರು ಮೃತರಾಗಿರುವುದನ್ನು ನೋಡಿ ಕಣ್ಣುಕೆಂಪಗೆ ಮಾಡಿಕೊಂಡು ಬಂದರು. ಬಂದಿರುವ ರುದ್ರದೇವರನ್ನು ನೋಡಿ ಶತ್ರುಘ್ನನು ಅವರೊಡನೆ ಯುದ್ಧಕ್ಕೆ ಹೋದನು. ಗಣಗಳಿಂದ ಸಹಿತರಾಗಿ ಯುದ್ಧಕ್ಕೆ ಬಂದಿದ್ದ ರುದ್ರದೇವರು ಶತ್ರುಘ್ನನನ್ನು ನೋಡಿ ಬಹಳ ಕೋಪವುಳ್ಳವರಾಗಿ 'ರಾಮದೇವರ ಪಾದಸೇವಕನಾದ ಪುಷ್ಕಲನು ನನ್ನ ಭಕ್ತನನ್ನು ಯುದ್ಧದಲ್ಲಿ ಹಿಂಸಿಸಿ ಮಹಾಕಾರ್ಯವನ್ನು ಮಾಡಿದನು. ಈಗ ಆ ವೀರನಾದ ಪುಷ್ಕಲನು ಎಲ್ಲಿ ಇರುವನು? ಅವನನ್ನು ಕೊಂದು ನಾನು ಸುಖವನ್ನು ಹೊಂದುವೆನು' ಎಂದು ಹೇಳಿ ಪುಷ್ಕಲನೊಡನೆ ಯುದ್ಧ ಮಾಡಲು ನಂದಿಯನ್ನು ಕಳುಹಿಸಿದನು. ಕುಶಧ್ವಜನೊಡನೆ ಯುದ್ಧಮಾಡಲು ಪ್ರಚಂಡನನ್ನು ಸುಬಾಹುವಿನೊಡನೆ ಯುದ್ಧಮಾಡಲಿಕ್ಕೆ ಭೃಂಗಿಯನ್ನು ದಮನನೊಡನೆ ಯುದ್ಧಮಾಡಲು ಚಂಡ ಎಂಬ ಗಣನನ್ನು ಆಜ್ಞಾಪಿಸಿದರು.

ಪುಷ್ಕಲನು ತನ್ನೊಡನೆ ಯುದ್ಧಕ್ಕೆ ಬಂದಿರುವ ವೀರಭದ್ರನನ್ನು ನೋಡಿ ಐದು ಬಾಣಗಳಿಂದ ಅವನನ್ನು ಬಡೆದನು. ವೀರಭದ್ರನು ಶೂಲವನ್ನು ಬಿಸಾಡಿದನು. ಪುಷ್ಕಲನು ಶೂಲವನ್ನು ಕತ್ತರಿಸಿ ಗರ್ಜಿಸಿದನು. ವೀರಭದ್ರನು ಖಟ್ವಾಂಗವೆಂಬ ಆಯುಧದಿಂದ ಪುಷ್ಕಲನ ತಲೆಗೆ ಬಡಿದನು. ಅದರಿಂದ ಪುಷ್ಕಲನು ಮೂರ್ಛೆಯನ್ನು ಹೊಂದಿದನು. ಆಮೇಲೆ ಎದ್ದು ವೀರಭದ್ರನ ಕೈಯಲ್ಲಿ ಇದ್ದ ಖಟ್ವಾಂಗವನ್ನೇ ಕತ್ತರಿಸಿದನು. ವೀರಭದ್ರನು ಕೋಪದಿಂದ ಪುಷ್ಕಲನ ರಥವನ್ನೇ ಪುಡಿಮಾಡಿದನು. ಪುಷ್ಕಲನು ರಥವನ್ನು ಬಿಟ್ಟು ವೀರಭದ್ರನನ್ನು ಮುಷ್ಟಿಯಿಂದ ಗುದ್ದಿದನು. ಇಬ್ಬರೂ ಮುಷ್ಟಿಗಳಿಂದ ಗುದ್ದಿಕೊಂಡರು. ತೊಡೆಗಳಿಂದ ಮೊಳಕಾಲುಗಳಿಂದ ಬಡಿದು ಕೊಂಡರು.

ಈರೀತಿಯಾಗಿ ನಾಲ್ಕು ದಿವಸಗಳವರೆಗೆ ರಾತ್ರಿಹಗಲು ಯುದ್ಧವು ನಡೆಯಿತು. ಒಬ್ಬರಿಗೊ ಜಯವೂ ಪರಾಜಯವೂ ಆಗಲಿಲ್ಲ. ಐದನೇ ದಿವಸದಲ್ಲಿ ಮಹಾಬಲಿಷ್ಠನಾದ ವೀರಭದ್ರನು ಪುಷ್ಕಲನನ್ನು ಎತ್ತಿಕೊಂಡು ಆಕಾಶಕ್ಕೆ ಹೋದನು. ಅಲ್ಲಿಯೇ ಅವರಿಬ್ಬರಿಗೂ ದೇವಾಸುರನನ್ನು ಮೋಹಗೊಳಿಸುವ ಯುದ್ಧವು ನಡೆಯಿತು. ಮುಷ್ಟಿಯಿಂದ ಪಾದದಿಂದ ಕೈಗಳಿಂದ ಯುದ್ಧವು ನಡೆಯಿತು. ಆಗ

ಪುಷ್ಕಲನು ಅತ್ಯಂತ ಕೋಪವುಳ್ಳವನಾಗಿ ವೀರಭದ್ರನ ಕುತ್ತಿಗೆಗೇ ಬಡಿದನು. ಅದರಿಂದ ವೀರಭದ್ರನು ವ್ಯಥೆಯುಳ್ಳವನಾಗಿ ಪುಷ್ಕಲನ ಕಾಲಿನಲ್ಲಿ ಹಿಡಿದು ಬಡಿದು ತ್ರಿಶೂಲದಿಂದ ಪುಷ್ಕಲನ ತಲೆಯನ್ನು ಕತ್ತರಿಸಿದನು. ಪುಷ್ಕಲನನ್ನು ಸಂಹರಿಸಿ ಗರ್ಜನೆ ಮಾಡಿದನು. ಪುಷ್ಕಲನು ಮರಣವನ್ನು ಹೊಂದಲು ಹಾಹಾಕಾರವುಂಟಾಯಿತು. ಯುದ್ಧರಂಗದಲ್ಲಿ ಜನರೆಲ್ಲರೂ ಭಯವನ್ನು ಹೊಂದಿದರು.



## ಶತ್ರುಘ್ನನ ಪರಾಜಯ [1]

ಜನರು ಶತ್ರುಘ್ನನ ಬಳಿಗೆ ಹೋಗಿ ಪುಷ್ಕಲನು ವೀರಭದ್ರನಿಂದ ಮೃತನಾದನೆಂದು ತಿಳಿಸಿದರು. ಅದನ್ನು ಕೇಳಿ ಶತ್ರುಘ್ನನು ಬಹಳ ದುಃಖವನ್ನು ಹೊಂದಿದನು. ದುಃಖವುಳ್ಳ ಶತ್ರುಘ್ನನನ್ನು ನೋಡಿ ರುದ್ರದೇವರು 'ಶತ್ರುಘ್ನನೇ! ದುಃಖಪಡಬೇಡ. ವೀರರಿಗೆ ಯುದ್ಧದಲ್ಲಿ ಸಾಯುವುದು ಕೀರ್ತಿಗೇ ಕಾರಣವು. ಪುಷ್ಕಲನು ಪರಮಧನ್ಯನು. ಐದು ದಿವಸ ಯುದ್ಧ ಮಾಡಿ ವೀರಭದ್ರನಿಂದ ಪ್ರಾಣಬಿಟ್ಟನು. ಯಾವ ವೀರಭದ್ರನು ಒಂದೇ ಕ್ಷಣದಲ್ಲಿ ದಕ್ಷನನ್ನು ಸಂಹರಿಸಿರುವನು. ಅಂತಹನೊಡನೆ ಐದುದಿನ ಯುದ್ಧ ಮಾಡಿದನು. ಆದುದರಿಂದ ಶೋಕವನ್ನು ಬಿಟ್ಟು ಯುದ್ಧವನ್ನು ಮಾಡು. ಪ್ರಯತ್ನಪೂರ್ವಕವಾಗಿ ಯುದ್ಧಕ್ಕೆ ನಿಲ್ಲು' ಎಂದು ಹೇಳಿದನು. ಆಗ ಶತ್ರುಘ್ನನು ದುಃಖವನ್ನು ಬಿಟ್ಟು ಕೋಪವನ್ನು ಹೊಂದಿದನು. ಬಾಣಗಳಿಂದ ರುದ್ರದೇವರನ್ನು ಮರೆಮಾಡಿದನು. ಆ ಬಾಣಗಳು ರುದ್ರದೇವರ ಮೈಯಲ್ಲಿ ಗಾಯಗಳನ್ನು ಉಂಟುಮಾಡಿದವು. ರುದ್ರದೇವರೂ ಬಾಣಗಳನ್ನು ಬಿಟ್ಟರು. ಅವರಿಬ್ಬರ ಬಾಣಗಳು ಆಕಾಶದಲ್ಲಿ ವ್ಯಾಪಿಸಿ ಹೋದವು. ಆ ಯುದ್ಧವನ್ನು ನೋಡಿ ಎಲ್ಲರೂ ಪ್ರಲಯವೇ ಬಂದಿತೆಂದು ತಿಳಿದುಕೊಂಡರು. ದೇವತೆಗಳೆಲ್ಲರೂ ವಿಮಾನದಲ್ಲಿ ಕೂತುಕೊಂಡು ಬಂದು ಯುದ್ಧವನ್ನು ನೋಡುತ್ತಾ 'ಇವರು ಮೂರು ಲೋಕಗಳನ್ನು ನಾಶಮಾಡುವವರು. ಇವನು ರಾಮದೇವರ ತಮ್ಮನು. ಏನಾಗು ತ್ತದೋ? ಯಾರು ಜಯಿಸುತ್ತಾರೋ? ಯಾರು ಪರಾಜಯವನ್ನು ಹೊಂದು ತ್ತಾರೋ?' ಎಂದು ಮಾತಾಡುತ್ತಿದ್ದರು.

ಹೀಗೆ ಹನ್ನೊಂದು ದಿನ ಯುದ್ಧವು ನಡೆ ಯಿತು. ಹನ್ನೆರಡನೆಯ ದಿವಸದಲ್ಲಿ

1. ಪ.ಪು.ಪಾ.ಖಂ. ಅ–44

ಶತ್ರುಘ್ನನು ಕೋಪವುಳ್ಳವನಾಗಿ ರುದ್ರದೇವರನ್ನು ಸಂಹಾರ ಮಾಡಬೇಕೆಂದು ಬ್ರಹ್ಮಾಸ್ತ್ರವನ್ನು ಬಿಟ್ಟನು. ಅದನ್ನು ನೋಡಿ ರುದ್ರದೇವರೂ ನಗುತ್ತಾ ಬ್ರಹ್ಮಾಸ್ತ್ರವನ್ನು ಬಿಟ್ಟರು. ಆಗ ಶತ್ರುಘ್ನನು ಅತ್ಯಂತ ಆಶ್ಚರ್ಯವನ್ನು ಹೊಂದುವವನಾಗಿ ಇನ್ನು ಮುಂದೆ ಏನು ಮಾಡಲಿ ಎಂದು ಯೋಚಿಸುತ್ತಿರಲು ರುದ್ರದೇವರು ಅವನ ಎದೆಗೇ ಬಾಣವನ್ನು ಬಿಟ್ಟರು. ಅದರಿಂದ ಶತ್ರುಘ್ನನು ಮೂರ್ಛಿತನಾಗಿ ಯುದ್ಧರಂಗದಲ್ಲಿ ಬಿದ್ದನು. ಎಲ್ಲರೂ ಹಾಹಾಕಾರವನ್ನು ಮಾಡಿದರು. ಸುಬಾಹು ದಮನ ಮೊದಲಾದ ವೀರರೆಲ್ಲರೂ ರುದ್ರದೇವರ ಬಾಣಗಳಿಂದ ಬಿದ್ದರು. ಆಗ ಹನುಮಂತದೇವರು ಯುದ್ಧಕ್ಕೆ ಬಂದರು.



## ಹನುಮಂತದೇವರ ಪರಾಕ್ರಮ [1]

ತೆರುವಾಯ ಹನುಮಂತದೇವರು ರುದ್ರದೇವರನ್ನು ಸಂಹರಿಸಲಿಕ್ಕೆ ಇಚ್ಛೆಯುಳ್ಳವ ರಂತೆ ತೋರಿಸುತ್ತಾ ರುದ್ರದೇವರ ಬಳಿಗೆ ಬಂದು 'ರುದ್ರನೇ! ನೀನು ಧರ್ಮಕ್ಕೆ ವಿರುದ್ಧವಾದ ಕಾರ್ಯವನ್ನು ಮಾಡಿದಿಯಾದ ಕಾರಣ ನಿನ್ನನ್ನು ಶಿಕ್ಷಿಸಲಿಕ್ಕೆ ಇಚ್ಛೆ ಯುಳ್ಳವನಾಗಿರುವೆನು. ರಾಮದೇರ ಭಕ್ತನನ್ನು ಕೊಲ್ಲಲಿಕ್ಕೆ ಉದ್ಯುಕ್ತನಾಗಿರುವೆಯಾ? ನಾನು ಪೂರ್ವದಲ್ಲಿ ರುದ್ರನು ಯಾವಾಗಲೂ ರಾಮದೇವರ ಪಾದವನ್ನು ಸ್ಮರಿಸುತ್ತಿರುವನು ಎಂದು ಕೇಳಿರುವೆನು. ನೀನು ಶತ್ರುಘ್ನನೊಡನೆ ಯುದ್ಧವನ್ನು ಮಾಡಿದಿಯಾದ ಕಾರಣ ಅದೆಲ್ಲವೂ ಸುಳ್ಳಾಯಿತು. ನನ್ನ ಪುಷ್ಕಲನು ಸತ್ತನು. ಶತ್ರುಘ್ನನು ಮೂರ್ಛಿತನಾದನು. ಆದುದರಿಂದ ನಿನ್ನನ್ನು ಬೀಳಿಸುವೆನು. ರಾಮ ದೇವರ ಭಕ್ತಿಯಿಂದ ಪರಾಙ್ಮುಖನಾಗಿರುವಿ. ಪ್ರಯತ್ನದಿಂದ ನಿಲ್ಲು! ಎಂದು ಹೇಳಿದರು. ಅದನ್ನು ಕೇಳಿ ರುದ್ರದೇವರು 'ವೀರಶ್ರೇಷ್ಠನೇ! ನೀನು ಧನ್ಯನಾಗಿರುವಿ. ನೀನು ಹೇಳುವ ಮಾತು ಸುಳ್ಳಲ್ಲ. ದೇವಾಸುರರಿಂದ ನಮಸ್ಕೃತರಾದ ರಾಮದೇವರು ನನ್ನ ಸ್ವಾಮಿಯು. ರಾಮದೇವರ ಕುದುರೆಯು ಈ ರಾಜನ ಮಗನು ತೆಗೆದುಕೊಂಡು ಬಂದನು. ಆದುದರಿಂದ ಈ ರಾಜನ ರಕ್ಷಣೆಗಾಗಿ ನಾನು ಬಂದಿರುವೆನು. ಇವನ ಭಕ್ತಿಯ ವಶನಾಗಿ ಇವನ ಊರಲ್ಲೇ ವಾಸಮಾಡುತ್ತಿರುವೆನು. ಹೇಗಾದರೂ ಮಾಡಿ ನನ್ನ ಭಕ್ತನನ್ನು ರಕ್ಷಿಸಬೇಕು. ಶ್ರೀರಾಮದೇವರು ಕೃಪೆಯನ್ನು ಮಾಡಿ ಲಜ್ಜಾಹೀನನಾದ ದುಃಖದಿಂದ ಶೋಕವುಳ್ಳ ತನ್ನ ಭಕ್ತನಾದ ನನ್ನನ್ನು ನೋಡಲಿ' ಎಂದು ಹೇಳಿದರು.

1. ಪ.ಪು.ಪಾ.ಖಂ. ಅ–44

ಈರೀತಿಯಾಗಿ ರುದ್ರದೇವರು ಹೇಳುತ್ತಿರಲು ಹನುಮಂತದೇವರು ಕೋಪವುಳ್ಳವರಾಗಿ ಒಂದು ಕಲ್ಲನ್ನು ತೆಗೆದು ಅದರಿಂದ ಬಡೆದರು. ಕಲ್ಲಿನಿಂದ ಬಡಿಯಲ್ಪಟ್ಟ ರುದ್ರದೇವರ ರಥವು ಪುಡಿಪುಡಿಯಾಯಿತು. ಸಾರಥಿಯೂ ಕುದುರೆಗಳೂ ಧ್ವಜವೂ ಕೂಡ ಪುಡಿಯಾದವು. ಆಕಾಶದಲ್ಲಿ ಇದ್ದ ದೇವತೆಗಳೆಲ್ಲರೂ ಹನುಮಂತದೇವರನ್ನು 'ಕಪಿಶ್ರೇಷ್ಠರೇ ಧನ್ಯರಾಗಿರುವಿರಿ. ಮಹಾಕಾರ್ಯವನ್ನು ಮಾಡಿರುವಿರಿ' ಎಂದು ಸ್ತೋತ್ರ ಮಾಡಿದರು. ರಥರಹಿತರಾದ ರುದ್ರದೇವರನ್ನು ನೋಡಿ ನಂದಿಯು ನೋಡಿ ಓಡಿಬಂದು ತನ್ನ ಬೆನ್ನಿನ ಮೇಲೆ ಕೂತುಕೊಳ್ಳಬೇಕೆಂದು ಹೇಳಿಕೊಂಡನು—ವೃಷಭದ ಮೇಲೆ ಕೂತಿದ್ದ ರುದ್ರದೇವರನ್ನು ನೋಡಿ ಹನುಮಂತದೇವರು ಕೋಪವುಳ್ಳವರಾಗಿ ಪರ್ವತಶಿಖರದಿಂದ ಅವರ ತಲೆಯ ಮೇಲೆಬಡಿದರು. ಆಗ ರುದ್ರದೇವರು ಶೂಲವನ್ನು ತೆಗೆದು ಬಿಸಾಡಿದರು. ಬರುತ್ತಿದ್ದ ಶೂಲವನ್ನು ನೋಡಿ ಹನುಮಂತದೇವರು ಅದನ್ನು ಕೈಯಲ್ಲಿ ಹಿಡಿದು ಚೂರುಚೂರು ಮಾಡಿದರು. ತ್ರಿಶೂಲವು ಮುರಿಯೋಣ ಆಗಲೇ ರುದ್ರದೇವರು ಶಕ್ತಿಯೆಂಬ ಆಯುಧವನ್ನು ಬಿಟ್ಟರು. ಹನುಮಂತದೇವರು ಆ ಆಯುಧಕ್ಕೆ ಸ್ವಲ್ಪ ಮರ್ಯಾದೆಯನ್ನು ಕೊಟ್ಟು ಒಂದು ಮರವನ್ನು ತೆಗೆದು ಅದರಿಂದ ರುದ್ರದೇವರ ಎದೆಗೆ ಬಡಿದರು.

ಈರೀತಿಯಾಗಿ ಹನುಮಂತದೇವರು ಬಡಿಯಲು ರುದ್ರದೇವರು ಧರಿಸಿದ್ದ ಸರ್ಪಗಳು ಓಡಿಹೋದವು. ತರುವಾಯ ರುದ್ರದೇವರು ಕೋಪಿಸಿ ಕೊಂಡು ಘೋರವಾದ ಮುಸಲಾಯುಧವನ್ನು ಬಿಟ್ಟರು. ಅದನ್ನು ಹನುಮಂತ ದೇವರು ತಪ್ಪಿಸಿಕೊಂಡರು. ಅದರಿಂದ ರುದ್ರದೇವರು ಬಿಸಾಡಿದ ಮುಸಲವು ಭೂಮಿಯನ್ನು ಸೀಳಿಕೊಂಡು ರಸಾತಲಕ್ಕೆ ಹೋಯಿತು. ಆಗ ಹನುಮಂತದೇವರು ಕೋಪಿಸಿ ಕೊಂಡು ಪರ್ವತವನ್ನು ತೆಗೆದು ರುದ್ರದೇವರ ಎದೆಗೆ ಬಡಿದರು. ರುದ್ರದೇವರು ಪರ್ವತವನ್ನು ಪುಡಿಮಾಡಬೇಕೆಂದು ಯೋಚಿಸುವಷ್ಟರಲ್ಲಿಯೇ ಹನುಮಂತ ದೇವರು ಕಲ್ಲಿನಿಂದ ಬಡಿದರು. ಆ ಕಲ್ಲನ್ನು ಪುಡಿಮಾಡಬೇಕೆಂದು ಯೋಚಿಸು ವಷ್ಟರಲ್ಲಿಯೇ ಹನುಮಂತದೇವರು ದೊಡ್ಡಮರದಿಂದ ಬಡಿದರು. ಅದನ್ನೂ ಮುರಿಯಬೇಕೆಂದು ರುದ್ರದೇವರು ಯೋಚಿಸುತ್ತಿರುವಾಗ ಹನುಮಂತ ದೇವರು ಕಲ್ಲಿನಿಂದ ಬಡಿದರು. ಆ ಕಲ್ಲನ್ನು ಪುಡಿಮಾಡಲು ರುದ್ರದೇವರು ಯೋಚಿಸು ವಷ್ಟರಲ್ಲಿಯೇ ಹನುಮಂತದೇವರು ಕಲ್ಲುಗಳ ಮರಗಳ ಪರ್ವತಗಳ ಮಳೆಯನ್ನೇ ಸುರಿಸಿದರು. ತನ್ನ ದೊಡ್ಡ ಬಾಲದಿಂದ ಭಯಪಡಿಸಿದರು. ಹನುಮಂತದೇವರ

ಕಲ್ಲುಗಳಿಂದಲೂ, ಪರ್ವತಗಳಿಂದಲೂ, ಮರಗಳಿಂದಲೂ, ನಂದಿಯು ಬಹು ಭಯಪಟ್ಟನು. ಕೋಪಶೀಲರಾದ ರುದ್ರದೇವರು ಅತ್ಯಂತ ಪರವಶರಾದರು. ಒಂದೊಂದು ಕ್ಷಣಕ್ಕೂ ಪೆಟ್ಟಿನಿಂದ ಪರವಶನನ್ನಾಗಿ ಮಾಡುತ್ತಿದ್ದ ಹನುಮಂತ ದೇವರನ್ನು ನೋಡಿ ರುದ್ರದೇವರು ಸ್ವಲ್ಪ ಅಸುರಾವೇಶದಿಂದ 'ಕಪಿಶ್ರೇಷ್ಠನೇ! ಪರಮಧನ್ಯನಾಗಿರುವಿ. ನೀನು ಮಹಾಕಾರ್ಯವನ್ನು ಮಾಡಿರುವಿ. ನನಗೆ ಸಂತೋಷವಾಯಿತು. ಬೇಕಾದ ವರವನ್ನು ಕೇಳಿಕೊ' ಎಂದು ಹೇಳಿದರು.

ಅದಕ್ಕೆ ಹನುಮಂತದೇವರು ನಗುತ್ತಾ ಭಯವಿಲ್ಲದೆ 'ರಾಮದೇವರ ಅನುಗ್ರಹದಿಂದ ನನಗೆ ಎಲ್ಲವೂ ಇದೆ. ಆದರೂ ಈಗ ಪುಷ್ಕಲನು ಯುದ್ಧದಲ್ಲಿ ಮೃತನಾಗಿರುವನು. ಶತ್ರುಘ್ನನು ಮೂರ್ಛಿತನಾಗಿರುವನು. ಇನ್ನು ಅನೇಕರು ಗಾಯವನ್ನು ಹೊಂದಿ ಬಿದ್ದಿರುವರು. ಕೆಲವರು ಮೂರ್ಛಿತರಾಗಿರುವರು. ಇವರನ್ನೆಲ್ಲಾ ಭೂತಪ್ರೇತ ಪಿಶಾಚಿಗಳು ತಿನ್ನದಂತೆ ನೋಡಿಕೊ. ನಾನು ಹೋಗಿ ಇಂದ್ರನನ್ನು ಜಯಿಸಿ ದ್ರೋಣಪರ್ವತವನ್ನು ತರುವೆನು. ಅದರಲ್ಲಿ ಇರುವ ಔಷಧಿಗಳು ಎಲ್ಲರನ್ನೂ ಬದುಕಿಸುವೆನು. ಅಷ್ಟರವರೆಗೆ ನೀನು ರಕ್ಷಿಸುತ್ತಿರು. ನಾನೀಗಲೇ ಆ ಔಷಧಗಳಿರುವ ದ್ರೋಣಪರ್ವತವನ್ನು ತರಲಿಕ್ಕೆ ಹೋಗುವೆನು' ಎಂದರು. ಅದನ್ನು ಕೇಳಿ ರುದ್ರದೇವರು ಹಾಗೆಯೇ ಆಗಲಿ ಎಂದರು. 'ನೀನು ಪರ್ವತವನ್ನು ತರಲಿಕ್ಕೆ ಹೋಗು. ನಾನು ಮೃತರಾದವರ ದೇಹಗಳನ್ನು ರಕ್ಷಿಸಿಕೊಂಡು ಇರುವೆನು' ಎಂದು ಹೇಳಿದರು. ಹನುಮಂತದೇವರು ದ್ರೋಣಪರ್ವತವನ್ನು ತರಲಿಕ್ಕೆ ಹೋದರು. ರುದ್ರದೇವರು ಯುದ್ಧರಂಗದಲ್ಲಿಯೇ ರಕ್ಷಿಸುತ್ತಾ ಇದ್ದರು.



## ಹನುಮಂತದೇವರು ಪುಷ್ಕಲಾದಿಗಳನ್ನು ಬದುಕಿಸಿದ್ದು [1]

ಹನುಮಂತದೇವರು ದ್ರೋಣಪರ್ವತವಿದ್ದಲ್ಲಿಗೆ ಹೋಗಿ ಅದನ್ನು ತರಬೇಕೆಂದು ಉದ್ಯುಕ್ತರಾದರು. ಆಗ ಆ ಪರ್ವತವು ನಡುಗಿತು. ಅದನ್ನು ನೋಡಿ ಅದನ್ನು ರಕ್ಷಿಸುತ್ತಿದ್ದ ದೇವತೆಗಳು ಹಾಹಾಕಾರವನ್ನು ಮಾಡುತ್ತಾ 'ಏನಿದು? ಯಾವ ಬಲಿಷ್ಠನು ಈ ಪರ್ವತವನ್ನು ತೆಗೆದುಕೊಂಡು ಹೋಗುವನು' ಎಂದು ಹೇಳುತ್ತಾ ಬಂದರು. ಬಂದು ಹನುಮಂತದೇವರನ್ನು ನೋಡಿ ಪರ್ವತವನ್ನು ಬಿಡು ಎಂದು ಹೇಳಿ ಅನೇಕ ಶಸ್ತ್ರಾಸ್ತ್ರಗಳಿಂದ ಬಡಿದರು. ಬಡಿಯುತ್ತಿರುವ ಅವರೆಲ್ಲರನ್ನೂ ನೋಡಿ ಹನುಮಂತದೇವರು ಒಂದೇಕ್ಷಣದಲ್ಲಿ ಬಡಿದುಹಾಕಿದರು. ಕೆಲವರನ್ನು ಕಾಲಿನಿಂದ

ಮೆಟ್ಟಿದರು. ಕೆಲವರನ್ನು ಕೈಯಿಂದ ಬಡಿದರು. ಕೆಲವರನ್ನು ಬಾಲದಿಂದ ಬಡಿದರು. ಇನ್ನು ಕೆಲವರನ್ನು ಪರ್ವತದ ಶಿಖರದಿಂದ ಬಡಿದರು. ಎಲ್ಲರೂ ರಕ್ತವನ್ನು ಕಾರುತ್ತಾ ಕೆಳಗೆ ಬಿದ್ದರು. ಕೆಲವರು ಹನುಮಂತದೇವರಿಂದ ಭಯವನ್ನು ಹೊಂದಿ ಮೈಯೆಲ್ಲಾ ರಕ್ತವುಳ್ಳವರಾಗಿ ಇಂದ್ರದೇವರಿದ್ದಲ್ಲಿಗೆ ಓಡಿದರು. ಭಯದಿಂದ ಬಂದಿರುವ ಅವರನ್ನು ನೋಡಿ ಇಂದ್ರದೇವರು 'ನೀವು ಯಾಕೆ ಭಯದಿಂದ ಓಡಿಬಂದಿರುವಿರಿ? ಯಾವ ದೈತ್ಯನು ನಿನ್ನನ್ನು ಬಡೆದಿರುವನು? ಎಲ್ಲವನ್ನು ಹೇಳಿರಿ' ಎಂದು ಕೇಳಲು ಅವರು 'ಯಾರು ಎಂದು ನಮಗೆ ತಿಳಿಯಲಿಲ್ಲ. ಯಾರೋ ಒಬ್ಬ ಕಪಿಯು ಬಂದು ತನ್ನ ಬಾಲದಲ್ಲಿ ಇಟ್ಟುಕೊಂಡ ದ್ರೋಣಪರ್ವತವನ್ನು ತೆಗೆದುಕೊಂಡು ಹೋಗಲಿಕ್ಕೆ ಉದ್ಯುಕ್ತನಾಗಿರುವನು. ಅದನ್ನು ನೋಡಿ ನಾವೆಲ್ಲರೂ ಸೇರಿ ಯುದ್ಧ ಮಾಡಿದೆವು. ಅನೇಕರು ಅಲ್ಲಿಯೇ ಬಿದ್ದಿರುವರು. ನಾವು ಪೂರ್ವಪುಣ್ಯದಿಂದ ತಪ್ಪಿಸಿಕೊಂಡು ಇಲ್ಲಿಗೆ ಬಂದಿರುವೆವು' ಎಂದು ಹೇಳಿದರು.

ಆಗ ಇಂದ್ರದೇವರು ಅಸುರಾವೇಶ ವುಳ್ಳವರಾಗಿ 'ಆ ಕಪಿಯನ್ನು ಕಟ್ಟಿಕೊಂಡು ತನ್ನಿರಿ' ಎಂದು ದೇವತೆಗಳನ್ನು ಕಳುಹಿಸಿದರು. ಆಗ ಆ ದೇವತೆಗಳು ಹನುಮಂತ ದೇವರಿದ್ದಲ್ಲಿಗೆ ಹೋಗಿ ಮಹಾ ಬಲಿಷ್ಠರಾದ ಹನುಮಂತದೇವರಿಗೆ ಬಡಿದರು. ಆಗ ಹನುಮಂತದೇವರು ಎಲ್ಲರನ್ನೂ ಮುಷ್ಟಿಯಿಂದ ಅಂಗೈಯಿಂದ ಬಡಿದರು. ಅನೇಕರು ರಕ್ತವನ್ನು ಕಾರುತ್ತಾ ಅಲ್ಲಿಯೇ ಬಿದ್ದರು. ಇನ್ನು ಅನೇಕರು ಓಡಿಹೋದರು. ಇಂದ್ರದೇವರ ಹತ್ತಿರ ತಿಳಿಸಿದರು. ಅದನ್ನು ಕೇಳಿ ಇಂದ್ರದೇವರು ಮತ್ತೂ ಅಸುರಾವೇಶದಿಂದ ಎಲ್ಲಾ ದೇವತಾವೀರರನ್ನೂ ಹನುಮಂತದೇವರ ಬಳಿಗೆ ಕಳುಹಿಸಿದರು. ಅವರೆಲ್ಲರೂ ಯುದ್ಧಕ್ಕೆ ಬಂದಿರುವುದನ್ನು ನೋಡಿ ಹನುಮಂತ ದೇವರು 'ಎಲ್ಲಾ ವೀರರೇ! ನನ್ನ ಬಳಿಗೆ ಬರಬೇಡಿರಿ. ಬಂದರೆ ಎಲ್ಲರನ್ನೂ ಯಮಲೋಕಕ್ಕೆ ಕಳುಹಿಸುವೆನು' ಎಂದು ಗರ್ಜಿಸಿದರು. ಆದರೂ ದೇವತೆಗಳು ಅಸುರಾವೇಶದಿಂದ ಹನುಮಂತದೇವರನ್ನು ಅನೇಕ ಶಸ್ತ್ರಾಸ್ತ್ರಗಳಿಂದ ಬಡಿದರು. ಕೆಲವರು ಶೂಲಗಳಿಂದ ಕೆಲವರು ಕೊಡಲಿಗಳಿಂದ ಇನ್ನು ಕೆಲವರು ಖಡ್ಗಗಳಿಂದ ಪಟ್ಟಿಶಗಳಿಂದ ಮುಸಲ ಶಕ್ತಿ ಇತ್ಯಾದಿ ಆಯುಧಗಳಿಂದ ಬಡಿದರು. ಹನುಮಂತ ದೇವರು ಅವರೆಲ್ಲರನ್ನು ಕಲ್ಲಿನಿಂದ ಬಡಿದರು. ಕೆಲವರು ಓಡಿಬಂದು ಇಂದ್ರದೇವರೊಡನೆ ತಿಳಿಸಿದರು. ಅದನ್ನು ಕೇಳಿ ಇಂದ್ರದೇವರು ಭಯವನ್ನು ಹೊಂದಿದರು.

ಅವರು ಬೃಹಸ್ಪತ್ಯಾಚಾರ್ಯರೊಡನೆ 'ನಮ್ಮ ದೇವತೆಗಳನ್ನು ಬಡಿದು ಹಾಕಿದ

ದ್ರೋಣಪರ್ವತವನ್ನು ತೆಗೆದುಕೊಂಡು ಹೋಗಲಿಕ್ಕೆ ಬಂದಿರುವ ಆ ಕಪಿಯು ಯಾರಿರಬಹುದು?' ಎಂದು ಕೇಳಿದರು. ಅದಕ್ಕೆ ಬೃಹಸ್ಪತ್ಯಾಚಾರ್ಯರು 'ಯುದ್ಧದಲ್ಲಿ ರಾವಣಕುಂಭಕರ್ಣರನ್ನು ಬಡೆದು ಹಾಕಿರುವ, ವೈರಿಗಳನ್ನೆಲ್ಲಾ ಸಂಹರಿಸಿರುವ, ಲಂಕಾಪಟ್ಟಣವನ್ನು ಬಾಲದ ಬೆಂಕಿಯಿಂದ ಸುಟ್ಟ, ಅಕ್ಷಕುಮಾರನನ್ನು ಕೊಂದಿರುವ ಹನುಮಂತದೇವರು ಬಂದಿರುವರು. ಅವರು ದ್ರೋಣಪರ್ವತವನ್ನು ತೆಗೆದು ಕೊಂಡು ಹೋಗಲಿಕ್ಕೆ ಬಂದಿರುವರು. ಶ್ರೀರಾಮದೇವರು ಅಶ್ವಮೇಧಯಾಗವನ್ನು ಮಾಡುತ್ತಿರುವರು. ಅವರ ಕುದುರೆ ಯನ್ನು ಶಿವಭಕ್ತನಾದ ವೀರಮಣಿಯೆಂಬ ರಾಜನು ಅಪಹರಿಸಿರುವನು. ಅಲ್ಲಿ ಭಯಂಕರವಾದ ಯುದ್ಧವು ನಡೆದಿರುವುದು. ಆದರಲ್ಲಿ ರುದ್ರದೇವರು ಅನೇಕ ರಾಮದೇವರ ಭಟರನ್ನು ಕೊಂದಿರುವರು. ಅವರನ್ನು ಬದುಕಿಸುವುದಕ್ಕಾಗಿ ಹನುಮಂತದೇವರು ದ್ರೋಣಪರ್ವತವನ್ನು ತೆಗೆದುಕೊಂಡು ಹೋಗಬೇಕೆಂದು ಬಂದಿರುವರು. ಹನುಮಂತದೇವರೊಡನೆ ಎಷ್ಟು ನೂರು ವರ್ಷ ಯುದ್ಧ ಮಾಡಿದರೂ ಅವರನ್ನು ಜಯಿಸಲಿಕ್ಕೆ ಆಗಲಾರದು. ಆದುದರಿಂದ ಹನುಮಂತ ದೇವರಿಗೆ ಆ ಪರ್ವತದಲ್ಲಿರುವ ಸತ್ತವರನ್ನು ಬದುಕಿಸುವ ಔಷಧವನ್ನು ಕೊಟ್ಟು ಅವರ ಹತ್ತಿರ ಕ್ಷಮೆಯನ್ನು ಕೇಳಿಕೊ' ಎಂದು ಹೇಳಿದರು.

ಗುರುಗಳ ಮಾತನ್ನು ಕೇಳಿ ಇಂದ್ರದೇವರು ರಾಮದೇವರ ಕಾರ್ಯಕ್ಕಾಗಿ ಹನುಮಂತದೇವರು ಬಂದಿರುವರೆಂದು ತಿಳಿದು ಅಸುರರು ಬಂದರೆಂಬ ಭ್ರಾಂತಿಯಿಂದ ಉಂಟಾದ ಭಯವನ್ನು ಬಿಟ್ಟರು. ಬೃಹಸ್ಪತ್ಯಾಚಾರ್ಯರೊಡನೆ 'ನಾವೀಗ ಏನು ಮಾಡಬೇಕು? ದ್ರೋಣಪರ್ವತವನ್ನು ತೆಗೆದುಕೊಂಡು ಹೋದರೆ ದೇವತೆಗಳ ಜೀವನವೇ ನಡೆಯಲಾರದಲ್ಲಾ! ಈಗ ಹನುಮಂತದೇವರನ್ನು ಸಂತೋಷಪಡಿಸಿರಿ. ಇದರಿಂದ ರಾಮದೇವರೂ ಪ್ರೀತರಾಗುವರು. ದೇವತೆಗಳಿಗೂ ಸುಖವಾಗುವುದು' ಎಂದು ಹೇಳಿದರು. ಇಂದ್ರದೇವರ ಮಾತನ್ನು ಕೇಳಿ ಬೃಹಸ್ಪತ್ಯಾಚಾರ್ಯರು ಸರ್ವದೇವತೆಗಳಿಂದ ಸಹಿತರಾದ ಇಂದ್ರದೇವರನ್ನು ಮುಂದೆ ಮಾಡಿಕೊಂಡು ಎಲ್ಲಾ ದೇವತೆಗಳನ್ನೂ ಜಯಿಸಿ ಗರ್ಜನೆ ಮಾಡುತ್ತಾ ಕೂತಿರುವ ಹನುಮಂದತೇವರ ಬಳಿಗೆ ಹೋದರು. ಎಲ್ಲರೂ ಹನುಮಂತದೇವರ ಪಾದಗಳಿಗೆ ನಮಸ್ಕರಿಸಿದರು. ಇಂದ್ರದೇವರಿಂದ ಪ್ರೇರಿತರಾದ ಬೃಹಸ್ಪತ್ಯಾ ಚಾರ್ಯರು ಹನುಮಂತದೇವರೊಡನೆ 'ದೇವತೆಗಳೆಲ್ಲರೂ ತಮ್ಮ ಪರಾಕ್ರಮವನ್ನು ತಿಳಿಯದೆ ಅಪರಾಧವನ್ನು ಮಾಡಿದರು. ಕ್ಷಮಿಸಬೇಕು. ತಾವು ಶ್ರೀರಾಮದೇವರ ದಾಸರು. ತಾವು ಇಲ್ಲಿಗೆ ಬಂದಿರುವ ಕಾರಣವೇನು? ತಾವು ಹೇಳಿದ ರೀತಿಯಾಗಿ

ನಾವು ನಡೆದುಕೊಳ್ಳುತ್ತೇವೆ. ತಾವು ರೋಷವನ್ನು ಬಿಟ್ಟು ಎಲ್ಲರ ಮೇಲೆ ಕೃಪೆಯನ್ನು ತೋರಿಸಬೇಕು' ಎಂದು ಹೇಳಿದರು.

ಅದನ್ನು ಕೇಳಿ ಹನುಮಂತದೇವರು 'ವೀರಮಣಿರಾಜನ ಯುದ್ಧದಲ್ಲಿ ಶಿವನು ಎಲ್ಲಾ ರಾಮದೇವರ ಭಟರನ್ನು ಕೊಂದಿರುವನು. ಆ ರಾಮಭಟರನ್ನು ಬದುಕಿಸಲಿಕ್ಕಾಗಿ ಈ ಪರ್ವತವನ್ನು ತೆಗೆದು ಕೊಂಡು ಹೋಗುವೆನು. ಇದಕ್ಕೆ ಯಾರು ತಡೆಯಲಿಕ್ಕೆ ಬರುವರೋ ಅವರನ್ನು ಒಂದೇ ಕ್ಷಣದಲ್ಲಿ ಯಮಲೋಕಕ್ಕೆ ಕಳುಹಿಸುವೆನು. ಆದುದರಿಂದ ಈಗ ಸತ್ತವರನ್ನು ಬದುಕಿಸಲಿಕ್ಕೆ ದ್ರೋಣಪರ್ವತವನ್ನೋ ಅಥವಾ ಅದರಲ್ಲಿರುವ ಸಂಜೀವನ ಔಷಧವನ್ನೋ ಕೊಡಿರಿ' ಎಂದು ಹೇಳಿದರು. ಅದನ್ನು ಕೇಳಿ ದೇವತೆಗಳೆಲ್ಲರೂ ನಮಸ್ಕರಿಸಿ ಸಂಜೀವನೌಷಧವನ್ನು ಕೊಟ್ಟರು. ದೇವತೆಗಳೆಲ್ಲರೂ ಭಯರಹಿತರಾಗಿ ಸಂತೋಷವುಳ್ಳವರಾಗಿ ಇಂದ್ರದೇವರನ್ನು ಮುಂದೆ ಮಾಡಿಕೊಂಡು ಸ್ವರ್ಗಕ್ಕೆ ಹೋದರು. ಹನುಮಂತದೇವರು ಆ ಔಷಧ ವನ್ನು ಹಿಡಿದುಕೊಂಡು ಯುದ್ಧರಂಗಕ್ಕೆ ಹೋಗಿ ಸುಮತಿಯೆಂಬ ಮಂತ್ರಿಯನ್ನು ಕೂಗಿ 'ಯುದ್ಧರಂಗದಲ್ಲಿ ಇರುವ ಎಲ್ಲಾ ವೀರರನ್ನು ಬದುಕಿಸುವೆನು' ಎಂದು ಹೇಳಿ 'ನಾನು ಮನಸ್ಸಿನಿಂದಲೂ ವಚನ ದಿಂದಲೂ ಕರ್ಮದಿಂದಲೂ ರಾಮದೇವರ ದಾಸನಾಗಿದ್ದರೆ ಈ ಔಷಧದಿಂದ ಎಲ್ಲರೂ ಬದುಕಲಿ' ಎಂದು ಹೇಳಿದರು. ಪುಷ್ಕಲನ ತಲೆಯನ್ನು ಜೋಡಿಸಿ ಅವನ ಎದೆಯ ಮೇಲೆ ಔಷಧವನ್ನು ಇಟ್ಟರು. ಆಗಲೇ ಪುಷ್ಕಲನು ರೋಷದಿಂದ ಹಲ್ಲು ಕಡಿಯುತ್ತಾ 'ನನ್ನನ್ನು ಮೂರ್ಛಾಗೊಳಿಸಿದ ವೀರಭದ್ರನು ಎಲ್ಲಿಗೆ ಹೋದನು? ಅವನನ್ನು ಈಗಲೇ ಬೀಳಿಸುವೆನು. ನನ್ನ ಧನುಸ್ಸು ಎಲ್ಲಿದೆ?' ಎಂದು ಹೇಳುತ್ತಾ ಎದ್ದನು. ಹನುಮಂತದೇವರು ಅವರನೊಡನೆ 'ಈರೀತಿಯಾಗಿ ವೀರವಾದವನ್ನು ಹೇಳುತ್ತಿರುವ ನೀನು ಪರಮಧನ್ಯನು. ನೀನು ವೀರಭದ್ರನಿಂದ ಯುದ್ಧದಲ್ಲಿ ಮೃತನಾದಿ. ಶ್ರೀರಾಮದೇವರ ಅನುಗ್ರಹದಿಂದ ಬದುಕುವವನಾದಿ. ಬಾ ಮೂರ್ಛಿತನಾಗಿರುವ ಶತ್ರುಘ್ನನ ಬಳಿಗೆ ಹೋಗುವ' ಎಂದು ಹೇಳಿ ಶತ್ರುಘ್ನನ ಬಳಿಗೆ ಹೋಗಿ ಅವನ ಎದೆಯಲ್ಲಿ ಔಷಧವನ್ನು ಇಟ್ಟು ಶತ್ರುಘ್ನನನ್ನು ಎಬ್ಬಿಸಿದರು. 'ಶಿವನು ಎಲ್ಲಿ?' ಎಂದು ಹೇಳುತ್ತಾ ಎದ್ದನು. ಹೀಗೆಯೇ ರುದ್ರದೇವರಿಂದ ಮೂರ್ಛಿತ ರಾದವರನ್ನೆಲ್ಲರನ್ನೂ ಹನುಮಂತದೇವರು ಬದುಕಿಸಿದರು.



# ಶ್ರೀರಾಮದೇವರ ಆಗಮನ [1]

ತರುವಾಯ ಎಲ್ಲರೂ ರೋಷವುಳ್ಳವರಾಗಿ ಎಲ್ಲರು ತಮ್ಮ ತಮ್ಮ ರಥಗಳಲ್ಲಿ ಕೂತುಕೊಂಡವರಾಗಿ ಯುದ್ಧಕ್ಕೆ ಹೋದರು. ಪುಷ್ಕಲನು ವೀರಭದ್ರನೊಡನೆಯೂ, ಹನುಮಂತದೇವರು ನಂದಿಯೊಡನೆಯೂ ಶತ್ರುಘ್ನನು ರುದ್ರದೇವರೊಡನೆಯೂ ಯುದ್ಧಮಾಡಿದರು. ಧನುಸ್ಸಿನ ಶಬ್ದವನ್ನು ಮಾಡುತ್ತಾ ರುದ್ರದೇವರನ್ನು ಯುದ್ಧಕ್ಕೆ ಕೂಗಿ ನಿಂತಿರುವ ಶತ್ರುಘ್ನನೊಡನೆ ರಾಜನಾದ ವೀರಮಣಿಯು ಯುದ್ಧಕ್ಕೆ ಹೋದನು. ಇಬ್ಬರೂ ಆಶ್ಚರ್ಯಕರವಾಗಿ ಯುದ್ಧವನ್ನು ಮಾಡಿಕೊಂಡರು.

ವೀರಮಣಿಯು ಶತ್ರುಘ್ನನ ನೂರಾರು ಆನೆಗಳನ್ನೂ ಕುದುರೆಗಳನ್ನೂ ರಥಗಳನ್ನೂ ಪುಡಿಮಾಡಿದನು. ಆಗ ಶತ್ರುಘ್ನನು ಅತ್ಯಂತ ಕೋಪವುಳ್ಳವನಾಗಿ ವೀರಮಣಿಯ ಸೈನ್ಯವನ್ನು ಸುಟ್ಟುಹಾಕಲಿಕ್ಕೆ ಆಗ್ನೇಯಾಸ್ತ್ರವನ್ನು ಬಿಟ್ಟನು. ಅದನ್ನು ನೋಡಿ ಅತ್ಯಂತ ಕೋಪವುಳ್ಳವನಾಗಿ ವೀರಮಣಿಯು ವಾರುಣಾಸ್ತ್ರವನ್ನು ಬಿಟ್ಟನು. ಅದಕ್ಕೆ ಶತ್ರುಘ್ನನು ವಾಯವ್ಯಾಸ್ತ್ರವನ್ನು ಬಿಟ್ಟನು ವೀರಮಣಿಯು ಆ ವಾಯುವಿನ ನಾಶಕ್ಕಾಗಿ ಪರ್ವತಾಸ್ತ್ರವನ್ನು ಬಿಟ್ಟನು. ಅದನ್ನು ನೋಡಿ ಶತ್ರುಘ್ನನು ವಜ್ರಾಸ್ತ್ರವನ್ನು ಬಿಟ್ಟನು. ಆಗ ವೀರಮಣಿಯು ಕೋಪಿಸಿಕೊಂಡು ಬ್ರಹ್ಮಾಸ್ತ್ರವನ್ನು ಬಿಟ್ಟನು. ಆಗ ಶತ್ರುಘ್ನನು ಯೋಗಿನಿಯು ಕೊಟ್ಟಿರುವ ಮೋಹನಾಸ್ತ್ರವನ್ನು ಬಿಟ್ಟನು. ಮೋಹನಾಸ್ತ್ರದಿಂದ ಬ್ರಹ್ಮಾಸ್ತ್ರವು ಎರಡು ತುಂಡಾಯಿತು. ಆ ಮೋಹನಾಸ್ತ್ರವು ವೀರಮಣಿಯ ಎದೆಗೆ ತಾಗಿ ಅವನನ್ನು ಮೂರ್ಛಾಗೊಳಿಸಿತು. ಶತ್ರುಘ್ನನು ನೂರಾರು ಬಾಣಗಳನ್ನು ಬಿಟ್ಟನು. ರುದ್ರದೇವರ ಗಣಗಳು ಇತರರು ಎಲ್ಲರೂ ಶತ್ರುಘ್ನನ ಬಾಣಗಳಿಂದ ಮೂರ್ಛೆಯನ್ನು ಹೊಂದಿದರು. ರುದ್ರದೇವರೊಬ್ಬರನ್ನು ಬಿಟ್ಟು ಎಲ್ಲರೂ ಮೂರ್ಛೆಯನ್ನು ಹೊಂದಿದರು.

ಆಗ ರುದ್ರದೇವರು ರಥದಲ್ಲಿ ಇದ್ದುಕೊಂಡು ಶತ್ರುಘ್ನನೊಡನೆ ಯುದ್ಧಕ್ಕೆ ಹೋದರು. ತರುವಾಯ ಶತ್ರುಘ್ನನಿಗೂ ರುದ್ರದೇವರಿಗೂ ಭಯಂಕರವಾದ ಯುದ್ಧವು ನಡೆಯಿತು. ದೇವಾಸುರರಿಗೂ ಪೂರ್ವದಲ್ಲಿ ಅಂತಹ ಯುದ್ಧವು ನಡೆದಿರಲಿಲ್ಲ. ಅಂತಹ ಭಯಂಕರವಾದ ಯುದ್ಧದಲ್ಲಿ ಶತ್ರುಘ್ನನು ವ್ಯಾಕುಲನಾಗಿ ಹನುಮಂತದೇವರ ಉಪದೇಶದಿಂದ 'ಹಾ! ಅಗ್ರಜನಾದ ರಾಮಚಂದ್ರ! ಯುದ್ಧದಲ್ಲಿ ರುದ್ರದೇವರು ಧನುಸ್ಸನ್ನು ಧರಿಸಿ ಪ್ರಾಣವನ್ನು ತೆಗೆಯುತ್ತಿರುವರು. ನಿಮ್ಮ

1. ಪ.ಪು.ಪಾ.ಖಂ. ಅ–44

ನಾಮಸ್ಮರಣೆಯಿಂದ ಅನೇಕ ದುಃಖಸಮುದ್ರಗಳನ್ನು ದಾಟಿದೆನು. ಕೃಪಾನಿಧೇ! ರಾಮಚಂದ್ರ! ದುಃಖದಲ್ಲಿ ಮುಳುಗಿರುವ ನನ್ನನ್ನು ಉದ್ಧಾರಮಾಡು' ಎಂದು ಶ್ರೀರಾಮದೇವರನ್ನು ಸ್ಮರಣೆ ಮಾಡಿದನು. ಅಷ್ಟರಲ್ಲಿಯೇ ಯುದ್ಧರಂಗದಲ್ಲಿ ನೀಲೋತ್ಪಲಪುಷ್ಪದಂತೆ ನೀಲವರ್ಣರಾದ ತಾವರೆ ಹೂವಿನಂತೆ ಕಣ್ಣುಗಳುಳ್ಳ ಸೊಂಟದಲ್ಲಿ ಜಿಂಕೆಯ ಕೊಂಬನ್ನು ಧರಿಸಿದ್ದ ದೀಕ್ಷಿತವೇಷವನ್ನು ಧರಿಸಿದ್ದ ಶ್ರೀರಾಮದೇವರು ಕಾಣಿಸಿಕೊಂಡರು. ಶತ್ರುಘ್ನನು ಅವರನ್ನು ನೋಡಿ ಬಹಳ ಆಶ್ಚರ್ಯವನ್ನು ಹೊಂದಿದನು.



## ವೀರಮಣಿಯ ಶರಣಾಗತಿ [1]

ಶತ್ರುಘ್ನನು ಬಂದಿರುವ ಶ್ರೀರಾಮದೇವರನ್ನು ನೋಡಿ ಸಕಲ ದುಃಖದಿಂದ ರಹಿತನಾದನು. ಹನುಮಂತದೇವರು ಭಕ್ತರಕ್ಷೆಗೆ ಬಂದಿರುವ ರಾಮದೇವರ ಪಾದಗಳಿಗೆ ಭಕ್ತಿಯಿಂದ ನಮಸ್ಕರಿಸಿದರು. 'ಸ್ವಾಮಿ! ಭಕ್ತರನ್ನು ಪರಿಪಾಲಿಸುವುದು ತಮಗೆ ಉಚಿತವಾದದ್ದು. ತಮ್ಮ ಪಾದವನ್ನು ನೋಡಿರುವ ನಾವು ಧನ್ಯರು. ತಮ್ಮ ಅನುಗ್ರಹದಿಂದ ಶತ್ರುಗಳಲ್ಲಿ ಕ್ಷಣದಲ್ಲಿಯೇ ಜಯಿಸುವೆವು' ಎಂದು ಹೇಳಿದರು.

ಆಗ ರುದ್ರದೇವರು ಬಂದಿರುವ ರಾಮದೇವರನ್ನು ನೋಡಿ ಅವರ ಪಾದಗಳಿಗೆ ನಮಸ್ಕಾರಮಾಡಿ ವಿಶೇಷವಾಗಿ ಸ್ತೋತ್ರಮಾಡಿ 'ಪ್ರಭೋ! ಸರ್ವೋತ್ತಮರಾದ ತಾವು ಬ್ರಹ್ಮಹತ್ಯಾ ಪರಿಹಾರಕ್ಕಾಗಿ ಅಶ್ವಮೇಧಯಾಗವನ್ನು ಮಾಡುವುದೆಂಬುದು ಕೇವಲ ಲೋಕವಿಡಂಬನೆಯು ತಮ್ಮ ಪಾದೋದಕವಾದ ನಿರ್ಮಲವಾದ ಗಂಗಾಜಲವನ್ನು ಪಾಪಪರಿಹಾರಕ್ಕಾಗಿ ನಾನು ಶಿರಸ್ಸಿನಲ್ಲಿ ಧರಿಸಿರುವಾಗ ತಮಗೆ ಬ್ರಹ್ಮಹತ್ಯಾಪಾಪವು ಎಲ್ಲಿಂದ ಬರಬೇಕು? ನಾನು ತಮ್ಮ ಅಪಕಾರಕ್ಕಾಗಿ ಬಹಳ ಕರ್ಮಗಳನ್ನು ಮಾಡಿದೆನು. ತಾವು ಕ್ಷಮಿಸಬೇಕು. ನಾನು ಏನು ಮಾಡಲಿ? ನನ್ನ ಮಾತನ್ನು ಸತ್ಯಮಾಡಿಕೊಳ್ಳುವುದಕ್ಕಾಗಿ ಹೀಗೆ ಮಾಡಬೇಕಾಯಿತು.

ಪೂರ್ವದಲ್ಲಿ ಈ ರಾಜಮಣಿಯು ಉಜ್ಜಯಿನಿಯಲ್ಲಿ ಮಹಾಕಾಲ ಎಂಬ ಸ್ಥಾನದಲ್ಲಿ ಕಪೋತ ಸರೋವರದಲ್ಲಿ ಸ್ನಾನಮಾಡಿ ಅದ್ಭುತವಾದ ತಪಸ್ಸನ್ನು ಮಾಡಿದನು. ಆಗ ನಾನು ಪ್ರಸನ್ನನಾಗಿ ಪ್ರತ್ಯಕ್ಷನಾಗಿ ಬೇಕಾದ ವರವನ್ನು ಕೇಳಿಕೊಳ್ಳುವಂತೆ ಹೇಳಿದೆನು. ಆಗ ಅವನು ಅದ್ಭುತವಾದ ರಾಜ್ಯವನ್ನು ಕೇಳಿಕೊಂಡನು. ಅದಕ್ಕೆ ನಾನು

'ನಿನಗೆ ದೇವಪುರದಲ್ಲಿ ರಾಜ್ಯವಾಗುವುದು. ರಾಮದೇವರ ಅಶ್ವಮೇಧಯಾಗದ ಕುದುರೆಯು ಬರುವವರೆಗೆ ನಾನು ನಿನ್ನ ರಕ್ಷಣೆಗಾಗಿ ಇರುವೆನು' ಎಂದು ವರವನ್ನು ಕೊಟ್ಟೆನು. ಆದುದರಿಂದ ನಾನು ಹೀಗೆ ಮಾಡಬೇಕಾಯಿತು. ಈಗ ರಾಜಮಣಿಯು ತಮಗೆ ಕುದುರೆಯನ್ನು ಸಮರ್ಪಿಸಿ ಎಲ್ಲರಿಂದ ಸಹಿತನಾಗಿ ತಮ್ಮ ಸೇವೆಯನ್ನು ಮಾಡುವನು' ಎಂದು ಹೇಳಿದರು. ಅದನ್ನು ಕೇಳಿ ರಾಮದೇವರು 'ದೇವತೆಗಳಿಗೆ ಭಕ್ತರನ್ನು ಪರಿಪಾಲಿಸುವುದು ಧರ್ಮವಾಗಿರುವುದು. ನೀನು ಮಾಡಿದ ಕಾರ್ಯವು ಯುಕ್ತವಾಗಿರುವುದು. ನಿನಗೂ ನನಗೂ ವಿರೋಧವಿರುವುದಿಲ್ಲ'. ಇತ್ಯಾದಿ ಮಾತುಗಳನ್ನು ಹೇಳಲು ರುದ್ರದೇವರು ಮೂರ್ಛಿತನಾದ ವೀರಮಣಿಯನ್ನು ಹಸ್ತಸ್ಪರ್ಶದಿಂದ ಎಬ್ಬಿಸಿದರು. ಮೂರ್ಛಿತರಾದ ಇತರರನ್ನೂ ಎಬ್ಬಿಸಿದರು.

ತರುವಾಯ ಮಕ್ಕಳು ಮೊಮ್ಮಕ್ಕಳಿಂದ ಕೂಡಿದ ವೀರಮಣಿಯನ್ನು ರಾಮ ದೇವರಿಗೆ ನಮಸ್ಕಾರ ಮಾಡಿಸಿದರು. ಅವರೆಲ್ಲರೂ ರಾಮದೇವರಿಗೆ ನಮಸ್ಕಾರವನ್ನು ಮಾಡಿ ಬ್ರಹ್ಮಾದಿದೇವತೆಗಳಿಂದಲೂ ಸತ್ಕೃತರಾದರು. ತರುವಾಯ ವೀರಮಣಿ ರಾಜನು ರುದ್ರದೇವರಿಂದ ಪ್ರೇರಿತನಾಗಿ ಮಕ್ಕಳಿಂದಲೂ ಬಂಧುಗಳಿಂದಲೂ ಸಹಿತನಾಗಿ ಹನುಮಂತದೇವರಿಂದ ಶತ್ರುಘ್ನ ಪುಷ್ಕಲ ಮೊದಲಾದವರಿಂದ ಸಹಿತರಾದ ರಾಮದೇವರಿಗೆ ರಾಜ್ಯದಿಂದ ಸಹಿತವಾಗಿ ಕುದುರೆಯನ್ನು ಸಮರ್ಪಿಸಿದನು. ತರುವಾಯ ರಾಮದೇವರು ಎಲ್ಲರೂ ನೋಡುತ್ತಿರುವಂತೆ ಮಣಿಮಯವಾದ ರಥದಲ್ಲಿ ಕೂತುಕೊಂಡು ಮರೆಯಾಗಿ ಹೋದರು. ಆಗ ಎಲ್ಲರೂ ಆಶ್ಚರ್ಯವನ್ನು ಹೊಂದಿದರು. ತರುವಾಯ ವೀರರೆಲ್ಲರೂ ಪರಸ್ಪರ ಸಂತೋಷದಿಂದ ಆಲಿಂಗನ ಮಾಡಿಕೊಂಡರು. ಅಲ್ಲಿ ದೊಡ್ಡ ಉತ್ಸವವು ನಡೆಯಿತು. ತರುವಾಯ ಕುದುರೆಯು ಎಲ್ಲರಿಂದಲೂ ಸಹಿತವಾಗಿ ಮುಂದೆ ಹೋಯಿತು. ರುದ್ರದೇವರು ತನ್ನ ಪ್ರತಿಜ್ಞೆಯನ್ನು ಸತ್ಯಮಾಡಿ ವೀರಮಣಿಯೊಡನೆ ಶ್ರೀರಾಮ ದೇವರನ್ನು ಮರೆಹೊಂದಿಕೊಂಡು ಇರುವಂತೆ ಹೇಳಿ ಅಲ್ಲಿಯೇ ಮರೆಯಾದವರಾಗಿ ಸೇವಕರಿಂದ ಕೂಡಿಕೊಂಡು ಕೈಲಾಸಪರ್ವತಕ್ಕೆ ಹೋದರು. ವೀರಮಣಿರಾಜನು ರಾಮದೇವರ ಪಾದಗಳನ್ನು ಸ್ಮರಿಸುತ್ತಾ ಶತ್ರುಘ್ನನೊಡನೆ ಸೈನ್ಯಸಹಿತನಾಗಿ ಕುದುರೆಯ ಹಿಂದೆಯೇ ಹೋದನು.

# ಸಾತ್ವಿಕ ಬ್ರಾಹ್ಮಣನ ಕಥೆ [1]

ಕುದುರೆಯು ಮುಂದೆ ಹೋಗುತ್ತಾ ಅನೇಕ ಭಟರಿಂದ ರಕ್ಷಿತರಾಗಿ ಬಂಗಾರಬೆಳ್ಳಿಯ ಶಿಖರಗಳಿಂದ ಪ್ರಕಾಶಮಾನವಾದ ಹೇಮಕೂಟ ಪರ್ವತಕ್ಕೆ ಹೋಯಿತು. ಅಲ್ಲಿ ಅನೇಕ ಮರಗಳಿಂದ ಶೋಭಿತವಾದ, ಅನೇಕ ಪಕ್ಷಿಗಳ ಧ್ವನಿಯಿಂದ ಕೂಡಿದ, ಭ್ರಮರಶಬ್ದಗಳಿಂದ ಯುಕ್ತವಾದ, ನವಿಲು ಪಕ್ಷಿಗಳ ಧ್ವನಿಯಿಂದ ಶೋಭಿತವಾದ, ವನವನ್ನು ಹಣೆಯಿಂದ ಬಂಗಾರದ ಪತ್ರವನ್ನು ಧರಿಸಿಕೊಂಡು ರಾಮದೇವರ ಕುದುರೆಯು ಪ್ರವೇಶಿಸಿತು. ಹಿಂದೆಯೇ ಶತ್ರುಘ್ನನೂ ಸೈನ್ಯಸಹಿತನಾಗಿ ಹೋದನು. ಅಲ್ಲಿ ಹೋಗುತ್ತಲೇ ಕುದುರೆಯು ನಿಂತುಬಿಟ್ಟಿತು. ಆಗ ರಕ್ಷಕರು ಕುದುರೆಗೆ ಚಾಟುವಾರಿಯಿಂದ ಬಡೆದರು. ಆದರೂ ಕುದುರೆಯು ಕದಲಲಿಲ್ಲ.

ತರುವಾಯ ಕುದುರೆಯ ರಕ್ಷಕರು ಶತ್ರುಘ್ನನ ಬಳಿಗೆ ಹೋಗಿ 'ಸ್ವಾಮಿನ್! ನಮ್ಮ ಕುದುರೆಗೆ ಏನಾಯಿತೆಂದು ತಿಳಿಯಲಿಲ್ಲ. ವಾಯುವೇಗದಿಂದ ಓಡುತ್ತಿದ್ದ ಕುದುರೆಯು ಇದ್ದಕ್ಕಿದ್ದಂತೆ ನಿಂತು ಹೋಯಿತು. ನಾವು ಚಾಟುವಾರಿಯಿಂದ ಬಡೆದವು. ಆದರೂ ಅದು ಒಂದು ಹೆಜ್ಜೆಯೂ ಕದಲಲಿಲ್ಲ. ವಿಚಾರಮಾಡಿ ಮುಂದೆ ಮಾಡುವ ಕಾರ್ಯ ವನ್ನು ಮಾಡಬೇಕು' ಎಂದು ಹೇಳಿದರು. ಆಗ ಶತ್ರುಘ್ನನು ಆಶ್ಚರ್ಯವುಳ್ಳವನಾಗಿ ಎಲ್ಲಾ ಸೈನಿಕರೊಡನೆ ಕುದುರೆಯ ಬಳಿಗೆ ಹೋದನು. ಪುಷ್ಕಲನು ಕುದುರೆಯ ಕಾಲುಗಳನ್ನು ಹಿಡಿದು ಎತ್ತಿದನು. ಆದರೂ ಕುದುರೆಯು ಕದಲಲಿಲ್ಲ. ತರುವಾಯ ಹನುಮಂತದೇವರು ತನ್ನ ಬಾಲದಿಂದ ಸುತ್ತಿ ಕುದುರೆಯನ್ನು ಸೆಳೆದರು. ಆದರೂ ಕುದುರೆಯು ಕದಲಲಿಲ್ಲ. ಯದ್ಯಪಿ ಹನುಮಂತದೇವರು ಅತಿಮಹಾಸಮರ್ಥರು ಅವರಿಂದ ಆಗದ ಕಾರ್ಯವೇ ಇಲ್ಲ. ಅವರಿಗೆ ಅಷ್ಟು ಭಗವಂತನ ಅನುಗ್ರಹವಿದೆ. ಆದರೂ ಪರಮಾತ್ಮನು ಬ್ರಾಹ್ಮಣರು ಯಾರಿಗಾದರೂ ಶಾಪವನ್ನು ಕೊಟ್ಟರೆ ಅದನ್ನು ಎಲ್ಲರೂ ಅಂಗೀಕರಿಸಬೇಕೆಂದು ಆಜ್ಞೆಯನ್ನು ಮಾಡಿರುವನು. ಆದುದರಿಂದ ಹನುಮಂತದೇವರು ಋಷಿಗಳ ಮಾತಿಗೆ ಗೌರವವನ್ನು ಕೊಡುವುದಕ್ಕಾಗಿ ತನಗೆ ಶಕ್ತಿಯು ಸಾಲದಂತೆ ತೋರಿಸಿಕೊಂಡರು. ಹನುಮಂತದೇವರು ತಾನು ಅಶಕ್ತರಾದಂತೆ ತೋರಿಸುತ್ತಾ ತುಂಬಾ ಆಶ್ಚರ್ಯವನ್ನು ಪ್ರದರ್ಶನಮಾಡುತ್ತಾ ಶತ್ರುಘ್ನನೊಡನೆ 'ನಾನು ದ್ರೋಣಪರ್ವತವನ್ನು ಬಾಲದಿಂದ ಹಿಡಿದು ಅನಾಯಾಸದಿಂದ ಕಿತ್ತಿರುವೆನು. ಕುದುರೆಯನ್ನು ಎಷ್ಟು ಸೆಳೆದರೂ ಬರುವುದೇ ಇಲ್ಲ. ಅತಿ ಆಶ್ಚರ್ಯವಾಗಿದೆಯಲ್ಲಾ! ಏನೋ ಕಾರಣ ವಿಶೇಷ ವಿರಬಹುದು' ಎಂದು ಹೇಳಿದರು.

ಶತ್ರುಘ್ನನು ಅತ್ಯಂತ ಆಶ್ಚರ್ಯವುಳ್ಳವನಾಗಿ ಮಂತ್ರಿಯಾದ ಸುಮತಿಯೊಡನೆ 'ಮಂತ್ರಿಯೇ! ಇದೇಕೆ ಹೀಗೆ ಕುದುರೆಯು ನಿಂತುಹೋಯಿತು. ಕುದುರೆಯು ಚಲಿಸುವಂತೆ ಮಾಡಲು ಯಾವ ಉಪಾಯವನ್ನು ಮಾಡಲಿ' ಎಂದು ಕೇಳಿದನು. ಅದಕ್ಕೆ ಅವನು 'ಸ್ವಾಮೀ! ನನಗೆಯೂ ತಿಳಿಯದು. ನಾನು ದೇಶಗಳ ವಿಷಯಗಳನ್ನೆಲ್ಲಾ ತಿಳಿದಿರುವೆನಲ್ಲದೆ ಪರೋಕ್ಷ ವಿಷಯವನ್ನು ತಿಳಿಯಲಾರೆನು' ಎಂದು ಹೇಳಿದನು. ತರುವಾಯ ಶತ್ರುಘ್ನನು ಹತ್ತಿರದಲ್ಲಿ ಯಾರಾದರೂ ಋಷಿಗಳು ಇರುವರೋ ಎಂದು ಸೇವಕರಿಂದ ಹುಡುಕಿಸಿದನು. ಎಲ್ಲರೂ ಹೋಗಿ ಒಬ್ಬ ಮುನಿಯನ್ನೂ ನೋಡಲಿಲ್ಲ. ಒಬ್ಬ ಸೇವಕನು ಮಾತ್ರ ಪೂರ್ವದಲ್ಲಿ ಒಂದು ಯೋಜನದೂರ ಹೋಗುವವನಾಗಿ ಅಲ್ಲಿ ಒಂದು ದೊಡ್ಡ ಆಶ್ರಮವನ್ನು ನೋಡಿದನು. ಅಲ್ಲಿ ಪ್ರಾಣಿಗಳಿಗೆ ವೈರವೇ ಇರಲಿಲ್ಲ. ಎಲ್ಲರೂ ಗಂಗಾಸ್ನಾನಮಾಡಿ ಪಾಪರಹಿತರಾಗಿ ಇದ್ದರು. ಅಲ್ಲಿ ಕೆಲವರು ಎಲೆಗಳನ್ನು ತಿನ್ನುತ್ತಾ ತಲೆಕೆಳಗಾಗಿ ಜೋಲುತ್ತಾ ಹೊಗೆಯನ್ನು ಪಾನಮಾಡುತ್ತಾ ತಪಸ್ಸು ಮಾಡುತ್ತಿದ್ದರು. ಕೆಲವರು ಗಾಳಿಯೇ ಆಹಾರವುಳ್ಳವರಾಗಿ ತಪಸ್ಸನ್ನು ಮಾಡುತ್ತಿದ್ದರು. ಅಲ್ಲಿ ಅಗ್ನಿಹೋತ್ರದ ಹೊಗೆಯು ಎಲ್ಲರನ್ನೂ ಪವಿತ್ರರನ್ನಾಗಿ ಮಾಡುತ್ತಿದ್ದಿತು. ಅಲ್ಲಿ ಅನೇಕ ಮುನಿಗಳು ಇದ್ದರು. ಅದು ಶೌನಕಮುನಿಗಳ ಆಶ್ರಮವೆಂದು ತಿಳಿದು ಆ ಸೇವಕನು ಬಂದು ಶತ್ರುಘ್ನನೊಡನೆ ತಿಳಿಸಿದನು.

ಶತ್ರುಘ್ನನು ಅದನ್ನು ಕೇಳಿ ಅತ್ಯಂತ ಸಂತೋಷವುಳ್ಳವನಾಗಿ ಸೇವಕರಿಂದಲೂ, ಹನುಮಂತದೇವರಿಂದಲೂ ಪುಷ್ಕಲಾದಿಗಳಿಂದಲೂ ಸಹಿತನಾಗಿ ಆ ಆಶ್ರಮಕ್ಕೆ ಹೋದನು. ಅಲ್ಲಿ ಅಗ್ನಿಹೋತ್ರವನ್ನು ಮಾಡಿ ಕುಳಿತಿರುವ ಶೌನಕರಿಗೆ ಶತ್ರುಘ್ನನು ಉದ್ದವಾಗಿ ನಮಸ್ಕಾರ ಮಾಡಿದನು. ಶೌನಕರಿಗೆ ಬಂದಿರುವ ಶತೃಘ್ನನಿಗೆ ಅರ್ಘ್ಯ ಪಾದ್ಯಾದಿ ಪೂಜೆಯನ್ನು ಮಾಡಿದರು. ಶತ್ರುಘ್ನನ ದರ್ಶನದಿಂದ ಬಹಳ ಸಂತೋಷ ವನ್ನು ಹೊಂದಿದರು. ಶ್ರಮಪರಿಹಾರಮಾಡಿಕೊಂಡು ಸುಖವಾಗಿ ಕೂತಿರುವ ಶತ್ರುಘ್ನ ನೊಡನೆ 'ಮಹಾರಾಜ! ನೀನು ಬಂದ ಕಾರಣವೇನು? ನಿನ್ನಂತಹ ಮಹಾರಾಜರು ಭೂಮಿಯಲ್ಲಿ ಸಂಚರಿಸದೆ ಇರುವುದಾದರೆ ದುಷ್ಟಜನರೆಲ್ಲರೂ ಸಜ್ಜನರನ್ನು ಪೀಡಿಸು ವರು. ಪ್ರಕೃತಬಂದ ಕಾರಣವನ್ನು ತಿಳಿಸು' ಎಂದು ಹೇಳಿದರು. ಅದಕ್ಕೆ ಶತ್ರುಘ್ನನು ಅಕಸ್ಮಾತ್ತಾಗಿ ಸಮೀಪದಲ್ಲಿಯೇ ನಿಮ್ಮ ವನದಲ್ಲಿ ರಾಮದೇವರ ಅಶ್ವಮೇಧದ ಕುದುರೆಯು ನಿಂತುಹೋಯಿತು. ಅದನ್ನು ಯಾರಿಂದಲೂ ಕದಲಿಸಲಿಕ್ಕೆ ಆಗಲಿಲ್ಲ. ಅದಕ್ಕೆ ಕಾರಣವೇನೆಂದು ತಾವು ತಿಳಿಸಬೇಕು' ಎಂದು ಕೇಳಿಕೊಂಡನು.

ಆಗ ಶೌನಕರು ಒಂದುಕ್ಷಣ ಧ್ಯಾನ ಮಾಡಿದರು. ಆಮೇಲೆ ಅದರ ಕಾರಣವನ್ನು ತಿಳಿದು 'ರಾಜನೇ! ಅದಕ್ಕೆ ಕಾರಣವನ್ನು ಹೇಳುವೆನು. ಗೌಡದೇಶದಲ್ಲಿ ಕಾವೇರಿ ತೀರದಲ್ಲಿ ಒಂದು ಮಹಾರಣ್ಯದಲ್ಲಿ ಸಾತ್ವಿಕ ಎಂದು ಹೆಸರುಳ್ಳ ಬ್ರಾಹ್ಮಣನು ತಪಸ್ಸನ್ನು ಮಾಡುತ್ತಿದ್ದನು. ಒಂದು ದಿನ ನೀರು ಕುಡಿಯುವನು ಮತ್ತೊಂದು ದಿನ ಗಾಳಿ ಮಾತ್ರ ಆಹಾರವುಳ್ಳವನಾಗುವನು. ಮತ್ತೊಂದು ದಿನ ಗಾಳಿಯನ್ನು ಸ್ವೀಕರಿಸಲಾರನು. ಈಪ್ರಕಾರವಾಗಿ ವ್ರತವನ್ನು ಮಾಡುತ್ತಾ ತಪಸ್ಸನ್ನು ಮಾಡುತ್ತಿದ್ದನು. ಕೆಲವು ಸಮಯದ ಮೇಲೆ ಅವನು ದೇಹಪರಿತ್ಯಾಗವನ್ನು ಮಾಡಿದನು. ರತ್ನಗಳಿಂದ ಅಲಂಕೃತವಾದ ಅತ್ಯಂತಶೋಭಿತವಾದ ವಿಮಾನದಲ್ಲಿ ಕೂತುಕೊಂಡು ಅಪ್ಸರ ಸ್ತ್ರೀಯರೊಡನೆ ಕ್ರೀಡೆಯನ್ನು ಮಾಡುತ್ತಾ ಮೇರುಪರ್ವತದ ಶಿಖರಕ್ಕೆ ಹೋದನು. ಅಲ್ಲಿ ಒಂದು ಜಂಬುನೇರಳೆಯ ಮರವಿದ್ದಿತು. ಅಲ್ಲಿಯೇ ಬಂಗಾರದ ನೀರಿನಿಂದ ಕೂಡಿದ ಜಂಬಾವತೀ ಎಂಬ ನದಿಯೂ ಇದ್ದಿತು. ಆ ನದಿಯಲ್ಲಿ ಅನೇಕ ತಪಸ್ಸನ್ನು ಮಾಡಿ ಪುಣ್ಯವನ್ನು ಸಂಪಾದಿಸಿದ್ದ ಮುನಿಗಳು ಕುತೂಹಲದಿಂದ ಇಚ್ಛಾನುಸಾರವಾಗಿ ಕ್ರೀಡೆಯನ್ನು ಮಾಡುತ್ತಿದ್ದರು. ಅಲ್ಲಿ ಇವನು ಅಪ್ಸರಸ್ತ್ರೀಯರಿಂದ ಕೂಡಿಕೊಂಡು ಇಚ್ಛಾನುಸಾರವಾಗಿ ಕ್ರೀಡೆಯನ್ನು ಮಾಡುತ್ತಾ ಆ ಮುನಿಗಳಿಗೆ ವಿಘ್ನವನ್ನು ಮಾಡಿದನು. ಅದರಿಂದ ಮುನಿಗಳು ಕುಪಿತರಾಗಿ ನೀನು ರಾಕ್ಷಸನಾಗು ಎಂದು ಶಾಪವನ್ನು ಕೊಟ್ಟರು. ಆಗ ಅವನು ಅವರಿಗೆಲ್ಲರಿಗೂ ನಮಸ್ಕರಿಸಿ ತನಗೆ ಅನುಗ್ರಹಮಾಡಬೇಕೆಂದು ಪ್ರಾರ್ಥಿಸಿಕೊಂಡನು.

ಅದಕ್ಕೆ ಅವರು 'ನೀನು ಯಾವಾಗ ರಾಮದೇವರ ಕುದುರೆಯನ್ನು ಸ್ತಂಭನ ಮಾಡುವಿಯೋ ಆಗ ನಿನಗೆ ರಾಮದೇವರ ಕಥಾಶ್ರವಣವಾಗುವುದು. ಅನಂತರ ದಲ್ಲಿ ನಿನಗೆ ಈ ಶಾಪದಿಂದ ಬಿಡುಗಡೆಯಾಗುವುದು ಎಂದು ಹೇಳಿದರು. ತರುವಾಯ ಶತ್ರುಘ್ನನು ಶೌನಕರ ಮುಖದಿಂದ ಅನೇಕ ಧರ್ಮಗಳನ್ನು ಕೇಳಿ ಸಂತೋಷವುಳ್ಳವನಾಗಿ ಶೌನಕರಿಗೆ ಪ್ರದಕ್ಷಿಣೆ ಬಂದು ನಮಸ್ಕಾರವನ್ನು ಮಾಡಿ ಸೇವಕರಿಂದ ಸಹಿತನಾಗಿ ಆ ಕುದುರೆಯ ಬಳಿಗೆ ಹೋದನು. ಅಲ್ಲಿ ಹನುಮಂತ ದೇವರು ಮಹಾದುರ್ಗತಿಯನ್ನು ಪರಿಹರಿಸುವ ಶ್ರೀರಾಮದೇವರ ಚರಿತ್ರೆಯನ್ನು ಹೇಳಿದರು. 'ಎಲಾ ದೇವತೆಯೇ! ಶ್ರೀರಾಮ ದೇವರ ಕೀರ್ತನವನ್ನು ಕೇಳಿದ ಪುಣ್ಯದಿಂದ ದುಷ್ಟ ಯೋನಿಯಿಂದ ಬಿಡುಗಡೆಯನ್ನು ಹೊಂದಿದವನಾಗಿ ವಿಮಾನ ದಲ್ಲಿ ಕೂತುಕೊಂಡು ಇಚ್ಛಾನುಸಾರವಾಗಿ ಸ್ವರ್ಗದಲ್ಲಿ ಸಂಚರಿಸುತ್ತಿರು' ಎಂದು ಹೇಳಿದರು. ಅಷ್ಟರಲ್ಲಿ ಶತ್ರುಘ್ನನು ಒಂದು ನಿರ್ಮಲವಾದ ವಿಮಾನವನ್ನು

ನೋಡಿದನು. ಅದರಲ್ಲಿ ಕೂತಿರುವವನು 'ನಾನು ರಾಮದೇವರ ಕೀರ್ತನೆಯನ್ನು ಕೇಳಿದ್ದರಿಂದ ಬಿಡುಗಡೆಯನ್ನು ಹೊಂದಿರುವೆನು. ನಾನು ನನ್ನ ಸ್ಥಾನಕ್ಕೆ ಹೋಗುವೆನು. ರಾಜನೇ! ನನಗೆ ಅನುಜ್ಞೆಯನ್ನು ಕೊಡು' ಎಂದು ಹೇಳುತ್ತಾ ವಿಮಾನದಲ್ಲಿ ಕೂತುಕೊಂಡು ಹೊರಟುಹೋದನು. ಅದನ್ನು ನೋಡಿ ಶತ್ರುಘ್ನನೂ ಅವನ ಸೇವಕರೂ ಆಶ್ಚರ್ಯವನ್ನು ಹೊಂದಿದರು. ತರುವಾಯ ಕುದುರೆಯು ವನದಲ್ಲಿ ಎಲ್ಲಾ ಸ್ಥಳದಲ್ಲಿಯೂ ಸಂಚರಿಸುತ್ತಾ ಮುಂದೆ ಹೋಯಿತು.



## ಪಾಪಕರ್ಮಗಳ ಫಲವು [1]

ಶತ್ರುಘ್ನನು ಶೌನಕರೊಡನೆ 'ಪುರುಷನು ಯಾವ ಕರ್ಮದಿಂದ ಯಾವ ನರಕವನ್ನು ಹೊಂದುವನು' ಎಂದು ಕೇಳಿದನು. ಅದಕ್ಕೆ ಶೌನಕರು 'ರಘುವಂಶದಲ್ಲಿ ಶ್ರೇಷ್ಠನಾದವನೇ! ನಿನ್ನ ಮನಸ್ಸು ಮಂಗಲವಾಗಿರುವುದು. ನೀನು ತಿಳಿದವನಾದರೂ ಜನರ ಹಿತಕ್ಕಾಗಿ ಈರೀತಿಯಾಗಿ ಕೇಳುತ್ತಿರುವಿ. ನಿನಗೆ ವಿಚಿತ್ರಕರ್ಮಗಳ ನಾನಾವಿಧ ಫಲಗಳನ್ನು ಹೇಳುವೆನು.

ಯಾರು ಇನ್ನೊಬ್ಬರ ಹಣವನ್ನು ಮಕ್ಕಳನ್ನೂ ಸ್ತ್ರೀಯರನ್ನೂ ಅಪಹರಿಸುವನೋ ಅವನು ಯಮದೂತರು ತಾಮಿಸ್ರ ಎಂಬ ನರಕದಲ್ಲಿ ಹಾಕುವರು. ಪಾಪದ ಫಲವನ್ನು ಅನುಭವಿಸಿ ಪಾಪಶೇಷದಿಂದ ಹಂದಿಯಾಗಿ ಹುಟ್ಟುವನು. ಹಂದಿಯ ಜನ್ಮದಲ್ಲಿ ಮಹಾದುಃಖವನ್ನು ಅನುಭವಿಸಿ ಮನುಷ್ಯನಾಗಿ ಹುಟ್ಟುವನು. ಅಲ್ಲಿ ನಾನಾರೋಗ ಗಳಿಂದ ಶ್ರಮಪಡುವನು.

ಯಾರು ಇತರರ ದ್ರೋಹವನ್ನು ಮಾಡಿಯೇ ತನ್ನ ಕುಟುಂಬವನ್ನು ಪೋಷಿಸುವನೋ ಅವನು ಅಂಧತಾಮಿಸ್ರ ಎಂಬ ನರಕದಲ್ಲಿ ಬೀಳುವನು.

ಯಾರು ವ್ಯರ್ಥವಾಗಿ ಪ್ರಾಣಿಗಳನ್ನು ಕೊಲ್ಲುವರೋ ಅವರು ರೌರವ ಎಂಬ ನರಕದಲ್ಲಿ ಬೀಳುವರು. ಅಲ್ಲಿ ರುರು ಎಂಬ ಸರ್ಪಕ್ಕಿಂತಲೂ ಅತಿಕ್ರೂರಪ್ರಾಣಿಗಳು ಅವನನ್ನು ಹಿಂಸಿಸುವುವು.

ಯಾರು ತನ್ನ ಹೊಟ್ಟೆ ತುಂಬಿಸಿಕೊಳ್ಳುವುದಕ್ಕಾಗಿ ಪ್ರಾಣಿಗಳನ್ನು ಸಂಹರಿಸು ವನೋ ಅವನು ಯಾವ ದೇವರ ಆಜ್ಞೆಯಿಂದ ಮಹಾರೌರವ ಎಂಬ ನರಕದಲ್ಲಿ ಬೀಳುವನು.

ಯಾರು ತನ್ನ ತಂದೆಯನ್ನು ಬ್ರಾಹ್ಮಣನನ್ನು ದ್ವೇಷಿಸುವವನೋ ಅವನು ಹತ್ತುಸಾವಿರ ಯೋಜನ ವಿಶಾಲವಾದ ಕಾಲಸೂತ್ರ ಎಂಬ ನರಕದಲ್ಲಿ ಬೀಳುವನು. ಗೋವುಗಳ ದ್ವೇಷಮಾಡಿದವನು ಗೋವುಗಳ ನರಕದಲ್ಲಿ ಬೀಳುವನು. ಗೋವುಗಳ ದ್ವೇಷಮಾಡಿದವನು ಗೋವುಗಳ ಮೈಯಲ್ಲಿ ಎಷ್ಟು ರೋಮಗಳಿರುವುವೋ ಅಷ್ಟು ಸಾವಿರವರ್ಷ ಈನರಕದಲ್ಲಿ ಅನುಭವಿಸುವನು.

ಯಾರು ಭೂಮಿಯಲ್ಲಿ ರಾಜನಾಗಿದ್ದುಕೊಂಡು ತಪ್ಪು ಮಾಡದೆ ಇದ್ದವರಿಗೆ ಶಿಕ್ಷೆಯನ್ನು ಮಾಡುವನೋ ಬ್ರಾಹ್ಮಣನಿಗೆ ದೇಹಶಿಕ್ಷೆಯನ್ನು ಮಾಡುವನೋ ಅವನನ್ನು ಯಮದೂತರು ಸೂತಕಮುಖವೆಂಬ ನರಕದಲ್ಲಿ ಪೀಡಿಸುವರು.

ಯಾರು ಬ್ರಾಹ್ಮಣರ ಗೋವುಗಳ ದ್ರವ್ಯವನ್ನು ಜೀವನೋಪಾಯವನ್ನೋ ಅಪಹರಿಸುತ್ತಾರೋ ಅವರನ್ನು ಅಂಧಕೂಪ ಅಂದರೆ ಕತ್ತಲೆಯ ಭಾವಿಯೆಂಬ ನರಕದಲ್ಲಿ ಹಾಕುತ್ತಾರೆ.

ಯಾರು ಮಧುರವಾದ ವಸ್ತುವನ್ನು ದೇವರಿಗೆ ಸಮರ್ಪಿಸದೆ ಮಿತ್ರರಿಗೂ ಕೊಡದೆ ತಾನೊಬ್ಬನೇ ತಿನ್ನುವನೋ ಅವನು ಕೃಮಿಭೋಜನ ಎಂಬ ನರಕದಲ್ಲಿ ಬೀಳುವನು.

ಯಾರು ಆಪತ್ತು ಇಲ್ಲದಿರುವ ಸಮಯದಲ್ಲಿ ಇನ್ನೊಬ್ಬರ ಬಂಗಾರವನ್ನು ಅಪಹರಿಸುವನೋ ಬ್ರಾಹ್ಮಣರ ಸೊತ್ತನ್ನು ಅಪಹರಿಸುವನೋ ಅವನು ಸಂದಂಶ ಎಂಬ ನರಕವನ್ನು ಹೊಂದುವನು.

ಯಾರು ತನ್ನ ಹೊಟ್ಟೆಯನ್ನು ತುಂಬಿಸಿಕೊಂಡು ಮಾತ್ರ ಇರುತ್ತಾನೋ ಬೇರೆ ಯಾವ ಧರ್ಮಕಾರ್ಯವನ್ನು ಮಾಡುವುದಿಲ್ಲವೋ ಅವನನ್ನು ಕುಂಭೀಪಾಕ ಎಂಬ ನರಕದಲ್ಲಿ ಕುದಿಯುವ ಎಣ್ಣೆಯಲ್ಲಿ ಹಾಕುವರು.

ಯಾರು ಪರಸ್ತ್ರೀಯನ್ನು ಹೊಂದುವನೋ ಅವನನ್ನು ಯಮದೂತರು ಬೆಂಕಿಯಿಂದ ಕಾದು ಕೆಂಪಾಗಿರುವ ಕಬ್ಬಿಣಗೊಂಬೆಯ ಆಲಿಂಗನ ಮಾಡಿಸುವರು.

ಯಾರು ಬಲತ್ಕಾರದಿಂದ ವೇದಮರ್ಯಾದೆಯನ್ನು ಕೆಡಿಸುವರೋ ಅವರು ವೈತರಣಿಯಲ್ಲಿ ಬಿದ್ದು ಮಾಂಸರಕ್ತಗಳನ್ನು ಭಕ್ಷಣೆ ಮಾಡುತ್ತಿರುವರು.

ಯಾರು ಶೂದ್ರಸ್ತ್ರೀಯನ್ನು ಅಥವಾ ಪ್ರೌಢೆಯಾದ ಸ್ತ್ರೀಯನ್ನು ಮದುವೆಯಾಗಿ ಅವಳೊಡನೆ ಗೃಹಸ್ಥಧರ್ಮವನ್ನು ಮಾಡುವನೋ ಪೂಯೋದ ಎಂದರೆ ಕೀವಿನಿಂದ ತುಂಬಿರುವ ನರಕದಲ್ಲಿ ಬೀಳುವನು.

ಯಾರು ಡಂಭದಿಂದ ಜನರನ್ನು ಮೋಸಗೊಳಿಸುವರೋ ಅವರನ್ನು ವೈಶಸ ಎಂಬ ನರಕದಲ್ಲಿ ಹಾಕುವರು.

ಯಾರು ಸಮಾನಜಾತಿಯ ಪರಸ್ತ್ರೀಯನ್ನು ಹೊಂದುವನೋ ಅವನು ರೇತಃ ಕುಲ್ಯಾ ಎಂಬ ನರಕದಲ್ಲಿ ಬಿದ್ದು ರೇತಃಸ್ಸನ್ನು ಪಾನಮಾಡುವನು.

ಯಾರು ಕಳ್ಳತನವನ್ನು ಮಾಡುವರೋ ಮನೆಗೆ ಬೆಂಕಿಯನ್ನು ಕೊಡುವರೋ ವಿಷವನ್ನು ಹಾಕುವರೋ ಗ್ರಾಮವನ್ನು ಹಾಳುಮಾಡುವರೋ, ಸಾರಮೇಯಾದನ ಎಂಬ ನರಕದಲ್ಲಿ ಅವರನ್ನು ಹಾಕುವರು.

ಯಾರು ಸುಳ್ಳು ಸಾಕ್ಷ್ಯವನ್ನು ಹೇಳುವರೋ ಪರಕೀಯದ್ರವ್ಯವನ್ನು ಬಲಾತ್ಕಾರದಿಂದ ಅಪಹರಿಸುವರೋ ಅವನನ್ನು ಅವೀಚಿ ಎಂಬ ನರಕದಲ್ಲಿ ತಲೆಕೆಳಗಾಗಿ ಹಾಕುವನು. ಅಲ್ಲಿ ಮಹಾದುಃಖವನ್ನು ಅನುಭವಿಸಿ ಪಾಪಕರವಾದ ಯೋನಿಯನ್ನು ಹೊಂದುವನು.

ಯಾರು ನಾಲಿಗೆಯ ರುಚಿಗಾಗಿ ಮದ್ಯಪಾನ ಮಾಡುವರೋ ಅವರಿಗೆ ಯಮದೂತರು ಕಾಸಿದ ಲೋಹದ ರಸವನ್ನು ಪಾನಮಾಡಿಸುವರು.

ವಿದ್ಯಾವಂತರಾದ ಆಚಾರವಂತರಾದ ಗುರುಗಳನ್ನು ಯಾರು ಅವಮಾನ ಮಾಡುವರೋ ಅವರನ್ನು ಕ್ಷಾರಕರ್ದಮ ಎಂಬ ನರಕದಲ್ಲಿ ತಲೆಕೆಳಗಾಗಿ ಹಾಕುವರು.

ಯಾರು ವಿಶ್ವಾಸಘಾತವನ್ನು ಮಾಡುವರೋ ಅವರನ್ನು ಶೂಲಪ್ರೋತ ಎಂಬ ನರಕದಲ್ಲಿ ಹಾಕುತ್ತಾರೆ.

ಯಾರು ಚಾಡಿಹೇಳಿಕೊಡುತ್ತಾ ಜನರನ್ನೆಲ್ಲರನ್ನೂ ಭಯಪಡಿಸುವರೋ ಅವರನ್ನು ದಂದಶೂಕವೆಂಬ ನರಕದಲ್ಲಿ ಹಾಕುವರು. ಅಲ್ಲಿ ಹಾವುಗಳು ಇವರನ್ನು ಕಚ್ಚುತ್ತಿರುವುವು.

ಈಪ್ರಕಾರವಾಗಿ ಅನೇಕ ನರಕಗಳಿರುವುವು. ಪಾಪವನ್ನು ಮಾಡಿದವರು ಇಂತಹ ನರಕಗಳಲ್ಲಿ ಪೀಡೆಯನ್ನು ಹೊಂದುವರು. ಯಾರು ರಾಮದೇವರ ಕಥೆಯನ್ನು ಕೇಳಿರುವುದಿಲ್ಲವೋ ರಾಮದೇವರ ನಾಮವನ್ನು ಹೇಳಿರುವುದಿಲ್ಲವೋ ಅವರಿಗೆ ನರಕಗಳಲ್ಲಿ ಎಲ್ಲಾ ದುಃಖಗಳೂ ಉಂಟಾಗುವುವು. ಇಲ್ಲಿ ಯಾರು ಸುಖವನ್ನು ಹೊಂದುವರೋ ಅವರು ಸ್ವರ್ಗದಿಂದ ಬಂದವರು. ಯಾರು ದುಃಖವನ್ನು ಅನುಭವಿಸುವರೋ ಅವರು ನರಕದಿಂದ ಬಂದವರು.

ಮದ್ಯಪಾನ ಮಾಡಿದವನು ನರಕವನ್ನು ಅನುಭವಿಸಿ ಆದಮೇಲೆ ಕಪ್ಪಾದ ಹಲ್ಲುಗಳುಳ್ಳವನಾಗಿ ಹುಟ್ಟುವನು.

ನಿಷಿದ್ಧ ಪದಾರ್ಥವನ್ನು ತಿಂದವನು ಗುಲ್ಮ ಎಂಬ ರೋಗವುಳ್ಳವನಾಗುವನು.

ಮುಟ್ಟಾದವಳು ನೋಡಿದ ಪದಾರ್ಥವನ್ನು ತಿಂದರೆ ಹೊಟ್ಟೆಯಲ್ಲಿ ಕೃಮಿಯಾಗುವ ರೋಗವನ್ನು ಹೊಂದುವನು.

ನಾಯಿ ಬೆಕ್ಕು ಮೊದಲಾದ ಪ್ರಾಣಿಗಳನ್ನು ಮುಟ್ಟಿದ್ದನ್ನು ತಿಂದರೆ ಕಂಪು ಉಳ್ಳವನಾಗಿ ಹುಟ್ಟುವನು.

ದೇವರಿಗೆ ಸಮರ್ಪಣೆ ಮಾಡದೆ ಭೋಜನ ಮಾಡುವವನು ಹೊಟ್ಟೆಯ ರೋಗವುಳ್ಳವನಾಗುವನು.

ಪರಾನ್ನಭೋಜನ ಮಾಡುವವನು ಅಜೀರ್ತಿ ರೋಗವುಳ್ಳವನಾಗುವನು.

ಬ್ರಾಹ್ಮಣರಿಗೆ ಕದನ್ನವನ್ನು ಹಾಕುವವನು ಅಲ್ಪವಾದ ಜಾಠರಾಗ್ನಿಯುಳ್ಳವ ನಾಗುವನು.

ವಿಷವನ್ನು ಹಾಕಿದವನು ವಾಂತಿರೋಗವುಳ್ಳವನಾಗುವನು.

ದಾರಿಯನ್ನು ಹಾಳು ಮಾಡುವವನು ಪಾದರೋಗವುಳ್ಳವನಾಗುವನು.

ಚಾಡಿ ಹೇಳುವವನು ಉಬ್ಬಸ ರೋಗವುಳ್ಳವನಾಗುವನು.

ವಂಚಕನು ಅಪಸ್ಮಾರ ರೋಗವುಳ್ಳವನಾಗುವನು.

ಇನ್ನೊಬ್ಬರಿಗೆ ಹೊಟ್ಟೆ ಉರಿಸುವವನು ಶೂಲ ಎಂಬ ರೋಗವುಳ್ಳವ ನಾಗುವನು.

ಕಾಡಿಗೆ ಬೆಂಕಿ ಕೊಡುವವನು ರಕ್ತಭೇದಿಯೆಂಬ ರೋಗವುಳ್ಳವನಾಗುವನು.

ದೇವಾಲಯದಲ್ಲಿಯೇ ನೀರಿನಲ್ಲಿಯೇ ಮಲವಿಸರ್ಜನೆ ಮಾಡುವವನು ಮೂಲ ಉಪದ್ರವವುಳ್ಳವನಾಗುವನು.

ಗರ್ಭಪಾತ ಮಾಡಿದವರು ಕ್ಷಯ, ಮೇಹ, ಜಲೋದರ, ಎಂಬ ರೋಗವುಳ್ಳವರಾಗುವರು.

ಪ್ರತಿಮೆಯನ್ನು ನಾಶಮಾಡಿದವನಿಗೆ ಇರಲಿಕ್ಕೆ ಸರಿಯಾದ ಸ್ಥಳವು ಸಿಗಲಾರದು.

ಇನ್ನೊಬ್ಬರನ್ನು ನಿಂದಿಸುವವನಿಗೆ ತಲೆಯಲ್ಲಿ ಕೂದಲು ಇರುವುದಿಲ್ಲ.

ಸಭೆಯಲ್ಲಿ ಪಕ್ಷಪಾತವುಳ್ಳವನು ಪಕ್ಷಘಾತ ಎಂಬ ರೋಗವುಳ್ಳವನಾಗುವನು.

ಇನ್ನೊಬ್ಬರು ಹೇಳಿದ್ದನ್ನು ಅಪಹಾಸ ಮಾಡುವವನು ಅಂಗಹೀನನಾಗುವನು.

ಇನ್ನೊಬ್ಬರ ಬಂಗಾರವನ್ನು ಕದ್ದವನು ಕಪ್ಪಾದ ಉಗುರು ಉಳ್ಳವನಾಗುವನು.

ಕಬ್ಬಿಣವನ್ನು ಕದ್ದವನು, ಉದುಂಬರ ಎಂಬ ರೋಗವುಳ್ಳವನಾಗಿಯೂ,

ಕಂಚನ್ನು ಕದ್ದವನು ಪುಂಡರೀಕ ಎಂಬ ರೋಗವುಳ್ಳವನಾಗಿಯೂ,

ಒಬ್ಬರ ಮಕ್ಕಳನ್ನು ಅಪಹರಿಸಿದವನು ಪಿಂಗಲ ವರ್ಣದ ಕೂದಲುವುಳ್ಳವ ನಾಗಿಯೂ,

ಒಬ್ಬರ ಶಿಷ್ಯನನ್ನು ಅಪಹರಿಸಿದವನು ತಲೆವೇದನೆಯುಳ್ಳವನಾಗಿಯೂ,

ತುಪ್ಪವನ್ನು ಕದ್ದುಕೊಂಡವನು ಕಣ್ಣುನೋವು ಉಳ್ಳವನಾಗಿಯೂ,

ಲೋಹವನ್ನು ಕದ್ದವನು ವರಟಾದ ದೇಹವುಳ್ಳವನೂ, ಚರ್ಮವನ್ನು ಅಪಹರಿಸಿದವನು ತುಂಬಾ ಮೇದಸ್ಸು ಉಳ್ಳವನೂ,

ಜೇನನ್ನು ಕದ್ದವನು ಕಟಿಯಲ್ಲಿ ಕಂಪುಉಳ್ಳವನೂ,

ಎಣ್ಣೆಯನ್ನು ಕದ್ದವನು ಕಂಧಾಡು ಎಂಬ ರೋಗದಿಂದ ಪೀಡಿತನಾಗಿಯೂ,

ಅಕ್ಕಿಬೇಳೆಗಳನ್ನು ಕದ್ದವನು ಹಲ್ಲುಗಳಿಲ್ಲದವನಾಗಿಯೂ,

ಪಕ್ವಾನ್ನವನ್ನು ಅಪಹರಿಸಿದವನು ನಾಲಿಗೆ ರೋಗವುಳ್ಳವನಾಗಿಯೂ,

ಮಾತೃಗಮನ ಮಾಡಿದ ಪುರುಷನು ಲಿಂಗರಹಿತನಾಗಿಯೂ,

ಗುರುಸ್ತ್ರೀಗಮನ ಮಾಡಿದವನು ಮೂತ್ರರೋಗವುಳ್ಳವನಾಗಿಯೂ,

ತನ್ನ ಪುತ್ರಿಯನ್ನೇ ಹೊಂದಿದವನು ರಕ್ತಕುಷ್ಠರೋಗವುಳ್ಳವನಾಗಿಯೂ,

ಸಹೋದರರ ಪತ್ನಿಯನ್ನು ಹೊಂದಿದವನು ಗುಲ್ಮಕುಷ್ಠ ಎಂಬ ರೋಗವುಳ್ಳವ ನಾಗಿಯೂ,

ಸ್ವಾಮಿಯ ಸ್ತ್ರೀಯನ್ನು ಹೊಂದುವುದರಿಂದ ಗಂಡಮಂಡಲ ಎಂಬ ರೋಗವುಳ್ಳವನಾಗಿಯೂ,

ವಿಶ್ವಾಸವುಳ್ಳವನ ಸ್ತ್ರೀಯನ್ನು ಹೊಂದಿದವನು ಗಜಚರ್ಮ ಎಂಬ ರೋಗವುಳ್ಳವನೂ,

ಸೋದರ ಅತ್ತೆಯನ್ನು ಹೊಂದಿದವನು ಬಲಭಾಗದಲ್ಲಿ ಹುಣ್ಣು(ವ್ರಣ)ವುಳ್ಳವ ನಾಗಿಯೂ,

ಸೋದರಮಾವನ ಹೆಂಡತಿಯನ್ನು ಹೊಂದಿದರೆ ಎಡಪಾರ್ಶ್ವದಲ್ಲಿ ಹುಣ್ಣು ಉಳ್ಳವನಾಗಿಯೂ,

ದೊಡ್ಡ ತಂದೆ ಚಿಕ್ಕ ತಂದೆಯರ ಪತ್ನಿಯರನ್ನು ಹೊಂದಿದರೆ ಕಟಿಪ್ರದೇಶದಲ್ಲಿ ಕುಷ್ಠರೋಗವುಳ್ಳವನಾಗಿಯೂ,

ಮಿತ್ರರ ಪತ್ನಿಯನ್ನು ಹೊಂದಿದರೆ ಪತ್ನಿಯ ಮರಣವುಳ್ಳವನಾಗಿಯೂ

ತನ್ನ ಗೋತ್ರದ ಸ್ತ್ರೀಯನ್ನು ಹೊಂದಿದವವನು ಭಗಂದರ ರೋಗವುಳ್ಳವ ನಾಗಿಯೂ,

ತಪಸ್ಸು ಮಾಡುವ ಸ್ತ್ರೀಯನ್ನು ಹೊಂದುವುದರಿಂದ ಪ್ರಮೇಹ ರೋಗವುಳ್ಳವ ನಾಗಿಯೂ,

ಶ್ರೋತ್ರಿಯನ ಸ್ತ್ರೀಯನ್ನು ಹೊಂದುವವನು ಮೂಗಿನಲ್ಲಿ ಹುಣ್ಣುಳ್ಳವ ನಾಗಿಯೂ,

ದೀಕ್ಷಿತನ ಪತ್ನಿಯನ್ನು ಹೊಂದುವನು. ದುಷ್ಟರಕ್ತವುಳ್ಳವನಾಗಿಯೂ,

ತನ್ನ ಜಾತಿಯ ಸ್ತ್ರೀಯನ್ನು ಹೊಂದಿದರೆ ಎದೆಯಲ್ಲಿ ಹುಣ್ಣು ಉಳ್ಳವನಾಗಿಯೂ,

ಉತ್ತಮಜಾತಿಯ ಸ್ತ್ರೀಯನ್ನು ಹೊಂದಿದರೆ ತಲೆಯಲ್ಲಿ ಹುಣ್ಣು ಉಳ್ಳವ ನಾಗಿಯೂ,

ಪಶುಯೋನಿಯಲ್ಲಿ ಗಮನದಿಂದ ಮೂತ್ರಪ್ರತಿಬಂಧವುಳ್ಳವನಾಗಿಯೂ ಆಗುವನು. ಆವಾವ ಪುರುಷರ ಸಂಬಂಧದಿಂದ ಸ್ತ್ರೀಯರಿಗೂ ಇಂತಹ ರೋಗಗಳು ಬರುವುವು.

ದಾನದಿಂದ ಉಂಟಾಗುವ ಪುಣ್ಯದಿಂದ ತೀರ್ಥಯಾತ್ರೆಯಿಂದ ರಾಮದೇವರ ಚರಿತ್ರೆಯ ಶ್ರವಣದಿಂದ, ತಪಸ್ಸಿನಿಂದ ಪಾಪದ ಪರಿಹಾರವಾಗುವುದು. ಯಾರು ಪರಮಾತ್ಮನನ್ನು ತಿಳಿಯುವುದಿಲ್ಲವೋ ಅವನನ್ನು ಯಾಗವೂ ತೀರ್ಥಗಳೂ ಪವಿತ್ರವನ್ನಾಗಿ ಮಾಡಲು ಸಮರ್ಥಗಳಾಗವು. ಪರಮಾತ್ಮನ ಕೀರ್ತಿಯೆಂಬ ನದಿಯು ಎಲ್ಲಾ ಪಾಪಗಳನ್ನೂ ಪರಿಹರಿಸುವುದು. ಪರಮಾತ್ಮನ ಚರಿತ್ರೆಯನ್ನು ಹೇಳುತ್ತಿರುವಾಗ ಯಾರು ಅಪಹಾಸವನ್ನು ಮಾಡುವರೋ ಅವನಿಗೆ ಯಾವಾಗಲೂ ನರಕದಿಂದ ಬಿಡುಗಡೆಯಾಗಲಾರದು' ಎಂದು ಹೇಳಿದರು.



# ಕುಂಡಲನಗರಕ್ಕೆ ಕುದುರೆಯ ಪ್ರವೇಶ [1]

ತೆರುವಾಯ ಕುದುರೆಯು ಅಯೋಧ್ಯೆಯಿಂದ ಹೊರಟು ಏಳು ತಿಂಗಳಾದವು. ಅನೇಕ ರಾಜರಿಂದ ತುಂಬಿದ ಭಾರತವರ್ಷದಲ್ಲಿ ಕುದುರೆಯು ಸಂಚರಿಸಿತು. ರಾಜರೆಲ್ಲರಿಂದಲೂ ಸತ್ಕೃತವಾಗಿ ಶತ್ರುಘ್ನನೇ ಮೊದಲಾದ ಭಟರಿಂದ ಸಹಿತವಾಗಿ ಹಿಮಾಲಯದ ಸಮೀಪದಲ್ಲಿ ಬಹುದೇಶಗಳಲ್ಲಿ ಕುದುರೆಯು ಸಂಚರಿಸಿತು. ಶ್ರೀರಾಮದೇವರನ್ನು ಬಲವನ್ನು ಸ್ಮರಿಸಿಕೊಂಡು ಒಬ್ಬರೂ ಕುದುರೆಯನ್ನು ಕಟ್ಟಲಿಲ್ಲ. ಅಂಗವಂಗಕಲಿಂಗ ದೇಶಗಳ ರಾಜರಿಂದ ಸ್ತುತಿಸಲ್ಪಡುವುದಾಗಿ ಸುರಥನೆಬ ರಾಜನ ಕುಂಡಲ ಎಂಬ ನಗರಕ್ಕೆ ಹೋಯಿತು. ಅದಿತಿದೇವಿಯ ತೋಡು ಕಿವಿಯಿಂದ ಭೂಮಿಗೆ ಅಲ್ಲಿ ಬಿದ್ದಕಾರಣ ಆದೇಶಕ್ಕೆ ಕುಂಡಲದೇಶವೆಂಬ ಹೆಸರಾಯಿತು. ಆ ದೇಶದಲ್ಲಿ ಒಬ್ಬರೂ ಧರ್ಮವನ್ನು ಮೀರುವವರೇ ಇಲ್ಲ. ಎಲ್ಲಾ ಜನರೂ ನಿತ್ಯವೂ ಶ್ರೀರಾಮದೇವರನ್ನು ಸ್ಮರಿಸುತ್ತಿದ್ದರು. ಅಲ್ಲಿ ಅಶ್ವತ್ಥಪೂಜೆಯನ್ನು ಮಾಡುವರು. ತುಲಸೀಪೂಜೆಯನ್ನು ಮಾಡುವರು. ದೇವಾಲಯಗಳಲ್ಲಿ ರಾಮದೇವರ ಪ್ರತಿಮೆ ಗಳನ್ನು ಮಾಡಿ ಇಟ್ಟಿದ್ದರು. ನಿತ್ಯವೂ ಜನರು ಕಪಟವಿಲ್ಲದೆ ರಾಮದೇವರನ್ನು ಪೂಜಿಸುತ್ತಿದ್ದರು. ಅಲ್ಲಿ ಎಲ್ಲರ ಬಾಯಿಯಲ್ಲಿಯೂ ಭಗವಂತನ ನಾಮವೇ ಇರುವುದು. ಕಲಹ ಮಾಡುವವರು ಅಲ್ಲಿ ಇರಲಿಲ್ಲ. ಎಲ್ಲರೂ ಹೃದಯದಲ್ಲಿ ಭಗವಂತನ ಧ್ಯಾನವನ್ನು ಮಾಡುತ್ತಿರುವರು. ಯಾವ ಫಲವನ್ನು ಅಪೇಕ್ಷಿಸುತ್ತಿರಲಿಲ್ಲ. ಅಂತಹ ದೇಶದಲ್ಲಿ ಧರ್ಮಿಷ್ಠನಾದ, ಸತ್ಯವಂತನಾದ, ಬಲಿಷ್ಠನಾದ, ರಾಮದೇವರ ಪಾದಸ್ಮರಣೆಯನ್ನು ಮಾಡುತ್ತಾ ಸಂತೋಷಪಡುತ್ತಿದ್ದ ಸುರಥನೆಂಬ ರಾಜನಿದ್ದನು.

ರಾಮದೇವರ ಸೇವಕನಾದ ಆ ರಾಜನ ಸಮಸ್ತಗುಣಗಳೂ ಭೂಮಿಯಲ್ಲಿ ವ್ಯಾಪಿಸಿಕೊಂಡು ಜನರನ್ನು ಪವಿತ್ರರನ್ನಾಗಿ ಮಾಡುತ್ತಿದ್ದವು. ಆ ರಾಜನ ಸೇವಕರು ಸಂಚರಿಸುತ್ತಾ ರಾಮದೇವರ ಅಶ್ವಮೇಧಯಾಗದ ಕುದುರೆಯನ್ನು ನೋಡಿದರು. ಅವರು ಆಶ್ಚರ್ಯವನ್ನು ಹೊಂದುತ್ತಾ ಆ ಕುದುರೆಯ ಹಣೆಯಲ್ಲಿ ಇದ್ದ ಬಂಗಾರದ ಪತ್ರವನ್ನು ನೋಡಿದರು. ಪತ್ರವನ್ನು ಓದಿ ರಾಮದೇವರು ಬಿಟ್ಟಿರುವ ಕುದುರೆ ಯೆಂದು ತಿಳಿದು ಸಂತೋಷವುಳ್ಳವರಾಗಿ ರಾಜನೊಡನೆ ತಿಳಿಸಿದರು. 'ಅಯೋಧ್ಯಾಧಿಪತಿಯಾದ ರಾಮದೇವರು ಬಿಟ್ಟಿರುವ ಅಶ್ವಮೇಧಯಾಗದ ಕುದುರೆಯು ಸಂಚರಿಸುತ್ತಾ ಸೇವಕರಿಂದ ಸಹಿತವಾಗಿ ನಿಮ್ಮ ನಗರದ ಸಮೀಪಕ್ಕೆ

---

1. ಪ.ಪು.ಪಾ.ಖಂ. ಅ-49

ಬಂದಿರುತ್ತದೆ. ಮಹಾರಾಜರೇ! ನೀವು ಆ ಅತಿಮನೋಹರವಾದ ಕುದುರೆಯನ್ನು ಹಿಡಿಯಿರಿ' ಎಂದು ಹೇಳಿದರು.

ಅದನ್ನು ಕೇಳಿ ಸುರಥನು 'ನಾವು ಪರಮಧನ್ಯರಾದೆವು. ಶ್ರೀರಾಮದೇವರ ಮುಖವನ್ನು ನೋಡುವೆವು. ಕೋಟಿ ಭಟರಿಂದ ಕೂಡಿದ ರಾಮದೇವರ ಕುದುರೆಯನ್ನು ಕಟ್ಟುವೆನು. ಬಹುಕಾಲ ಧ್ಯಾನ ಮಾಡುತ್ತಿರುವ ಭಕ್ತನಾದ ನನ್ನ ಮೇಲೆ ಕೃಪೆಯಿಂದ ರಾಮದೇವರೇ ಇಲ್ಲಿಗೆ ಬಂದಾಗ ನಾನು ಹೇಗೆ ತಾನೇ ಬಿಡುವೆನು? ಎಂದು ಹೇಳಿ 'ಕುದುರೆಯನ್ನು ಕಟ್ಟಿ ಹಾಕಿರಿ. ಬಿಡಬೇಡಿರಿ. ಇದರಿಂದ ಮಹಾಲಾಭವು ಆಗುವುದು. ಶ್ರೀರಾಮದೇವರ ಪಾದಗಳನ್ನು ನೋಡುವೆನು. ಯಾರಿಂದ ರಾಮದೇವರ ಸಮಾಗಮವು ಏರ್ಪಡುವುದೋ ಅಂತಹ ಸ್ವಜನನೋ ಮಗನೋ ಬಂಧುವೋ ಪಶುವೋ ಧನ್ಯರು. ಆದುದರಿಂದ ಆ ಕುದುರೆಯನ್ನು ನಮ್ಮ ಕುದುರೆ ಶಾಲೆಯಲ್ಲಿ ಕಟ್ಟಿಹಾಕಿರಿ' ಎಂದು ಹೇಳಿದನು. ತರುವಾಯ ಸೇವಕರು ಹೋಗಿ ಆ ಕುದುರೆಯನ್ನು ಕಟ್ಟಿ ತಂದು ಕೊಟ್ಟರು. ರಾಜನು ಆ ಕುದುರೆಯನ್ನು ಹೊಂದಿ ಸಂತೋಷವನ್ನು ಹೊಂದಿದನು.

ಆ ರಾಜನ ರಾಜ್ಯದಲ್ಲಿ ಪರಸ್ತ್ರೀಯರಲ್ಲಿ ಆಸಕ್ತರಾದವರು ಇರಲಿಲ್ಲ. ಪರದ್ರವ್ಯದಲ್ಲಿ ಆಸಕ್ತರೂ ಇರಲಿಲ್ಲ. ಎಲ್ಲರ ನಾಲಿಗೆಯೂ ರಾಮದೇವರ ನಾಮವನ್ನೇ ಕೀರ್ತನೆ ಮಾಡುತ್ತಿತ್ತು. ರಾಜನು ತನ್ನ ಸೇವೆಗೆ ಬಂದ ಜನರೊಡನೆ 'ನಿಮ್ಮ ವ್ಯಾಪಾರವನ್ನು ತಿಳಿಸಿರಿ. ಯಾರು ಏಕಪತ್ನೀವ್ರತವುಳ್ಳವರಾಗಿರುವರೋ ಪರದ್ರವ್ಯದಲ್ಲಿ ಆಸಕ್ತ ರಾಗಿರುವುದಿಲ್ಲವೋ ವೇದಮಾರ್ಗವನ್ನು ಬಿಡುವುದಿಲ್ಲವೋ ಪ್ರತಿನಿತ್ಯವೂ ಶ್ರೀರಾಮದೇವರ ಸ್ಮರಮೆಯನ್ನು ಮಾಡುವರೋ ಅಂತಹ ಜನರನ್ನು ನನ್ನ ಸೇವೆಗಾಗಿ ರಕ್ಷಿಸುವೆನು. ಇದಕ್ಕೆ ವಿರುದ್ಧ ಧರ್ಮವುಳ್ಳವರಾಗಿರುವ ಪಾಪ ವುಳ್ಳವರಾದ ದುರ್ಬುದ್ಧಿಯುಳ್ಳವರಾದವರನ್ನು ನನ್ನ ದೇಶದಲ್ಲಿ ವಾಸಗೊಳಿಸುವು ದಿಲ್ಲ' ಎಂದು ಹೇಳಿದನು. ಆ ರಾಜನ ದೇಶದಲ್ಲಿ ಜನರು ಮನಸ್ಸಿನಿಂದಲೂ ಪಾಪವನ್ನು ಮಾಡುತ್ತಿರಲಿಲ್ಲ. ಪರಮಾತ್ಮನ ಧ್ಯಾನದಿಂದ ಪಾಪರಹಿತರಾಗಿ ಸಂತೋಷಯುಕ್ತರಾಗಿದ್ದರು. ರಾಜನಿಂದ ಆ ಊರ ಜನರೆಲ್ಲರೂ ಧರ್ಮವನ್ನು ಮಾಡಿ ಎಲ್ಲರೂ ಮೃತರಾದವರು ಸ್ವರ್ಗವನ್ನು ಹೊಂದಿದರು. ಯಮದೂತರಿಗೆ ಆ ರಾಜ್ಯದಲ್ಲಿ ಪ್ರವೇಶವೇ ಇರಲಿಲ್ಲ. ಆಗ ಯಮದೇವರು ಮರದ ತೊಗಲನ್ನು ವಸ್ತ್ರದಂತೆ ಧರಿಸಿಕೊಂಡು ಜಟೆಯನ್ನು ಧರಿಸಿಕೊಂಡು ಮುನಿಯ ರೂಪವನ್ನು ಧರಿಸಿಕೊಂಡು ಸಭಾಮಧ್ಯದಲ್ಲಿ ಹರಿಸೇವಕನಾದ ಸುರಥನನ್ನು ನೋಡಿದನು.

ಅವನು ತಲೆಯಲ್ಲಿ ತುಳಸೀದಲವನ್ನು ಇಟ್ಟುಕೊಂಡಿದ್ದನು. ಬಾಯಿಯಲ್ಲಿ ಪರಮಾತ್ಮನ ನಾಮವನ್ನು ಹೇಳುತ್ತಿದ್ದನು. ತನ್ನ ಜನರಿಗೆ ಸದ್ಧರ್ಮ ವಿಷಯಕವಾದ ವೃತ್ತಾಂತವನ್ನೇ ಹೇಳುತ್ತಿದ್ದನು. ರಾಜನು ಮುನಿರೂಪದಿಂದ ಬಂದಿರುವ ಯಮದೇವರನ್ನು ನೋಡಿ ಅವರ ಪಾದಗಳಿಗೆ ನಮಸ್ಕರಿಸಿದನು. ಶ್ರಮವನ್ನು ಪರಿಹರಿಸಿಕೊಂಡು ಸುಖವಾಗಿ ಕುಳಿತಿದ್ದ ಆ ಮುನಿಗಳೊಡನೆ 'ನನ್ನ ಜನ್ಮವು ಸಾರ್ಥಕವಾಯಿತು. ನನ್ನ ಮನೆಯು ಸಾರ್ಥಕವಾಯಿತು. ನನಗೆ ಶ್ರೇಷ್ಠವಾದ ರಾಮ ದೇವರ ಕಥೆಯನ್ನು ಹೇಳಿರಿ. ಆ ಕಥೆಯನ್ನು ಕೇಳುವವರಿಗೆ ಪಾಪಪರಿಹಾರ ವಾಗುವುದು' ಎಂದು ಕೇಳಿದನು. ರಾಜನ ಮಾತನ್ನು ಕೇಳಿ ಹಲ್ಲುಗಳನ್ನು ತೋರಿಸುತ್ತಾ ಮುನಿರೂಪವುಳ್ಳ ಯಮದೇವರು ನಗುವವರಾದರು. ಅದನ್ನು ನೋಡಿ ರಾಜನು ತಾವು ನಗಲಿಕ್ಕೆ ಕಾರಣವೇನೆಂದು ದಯೆಯಿಂದ ತಿಳಿಸಬೇಕೆಂದು ಕೇಳಿಕೊಂಡನು.

ಅದಕ್ಕೆ ಮುನಿರೂಪವುಳ್ಳ ಯಮದೇವರು 'ನಾನು ನಗಲಿಕ್ಕೆ ಕಾರಣವನ್ನು ಹೇಳುತ್ತೇನೆ. ನನ್ನ ಮುಂದೆ ಹರಿಯ ಕೀರ್ತಿಯನ್ನು ಹೇಳಬೇಕೆಂದು ಹೇಳಿದಿಯಲ್ಲಾ! ಆ ಹರಿಯು ಯಾವಾತನು? ಅವನ ಕೀರ್ತಿಯೇನು? ಎಲ್ಲರೂ ಕರ್ಮವಶ ರಾಗಿರುವರು. ಕರ್ಮದಿಂದಲೇ ಸ್ವರ್ಗವು ಸಿಗುವುದು. ಕರ್ಮದಿಂದಲೇ ನರಕವು ಬರುವುದು. ಕರ್ಮದಿಂದಲೇ ಮಕ್ಕಳು ಮೊಮ್ಮಕ್ಕಳು ಮೊದಲಾದವರು ಬರುವರು. ಇಂದ್ರದೇವರು ನೂರು ಯಾಗಗಳನ್ನು ಮಾಡಿ ಇಂದ್ರಪದವಿಯನ್ನು ಹೊಂದಿರು ವರು. ಬ್ರಹ್ಮದೇವರೂ ಕರ್ಮದಿಂದಲೇ ಸತ್ಯಲೋಕವನ್ನು ಹೊಂದಿರುವರು. ಆದುದರಿಂದ ಯಜ್ಞಾದಿಕರ್ಮಗಳನ್ನು ಮಾಡು. ನಿನ್ನ ಕೀರ್ತಿಯು ನಿರ್ಮಲವಾಗಿ ಆಗುವುದು' ಎಂದು ಹೇಳಲು ಅದನ್ನು ಕೇಳಿ ರಾಮದೇವರಲ್ಲಿಯೇ ಮನಸ್ಸುಳ್ಳ ಆ ರಾಜನು ಕೋಪವುಳ್ಳವನಾಗಿ ನಶ್ವರವಾದ ಫಲಕ್ಕೆ ಕಾರಣವಾದ ಕರ್ಮದ ವಿಷಯವನ್ನು ನನ್ನೊಡನೆ ಹೇಳಬೇಡಿ. ನೀವು ಲೋಕನಿಂದ್ಯರು. ನನ್ನ ರಾಜ್ಯವನ್ನು ಬಿಟ್ಟು ಹೋಗಿರಿ. ಇಂದ್ರಾದಿಪದವಿಗಳಿಗೆಲ್ಲಾ ಹಾನಿಯಿರುವುದು. ರಾಮದೇವರ ಭಕ್ತರು ತಮ್ಮ ಸ್ಥಾನದಿಂದ ಬೀಳುವುದಿಲ್ಲ. ಧ್ರುವ ಪ್ರಹ್ಲಾದ ವಿಭೀಷಣಾದಿಗಳನ್ನು ನೋಡಿ. ಯಾರು ರಾಮದೇವರ ಭಕ್ತರು ಇತರರೂ ಇರುವರೋ ಅವರೂ ಅಧಃಪಾತವನ್ನು ಹೊಂದುವುದಿಲ್ಲ. ಯಾರು ರಾಮದೇವರ ನಿಂದೆಯನ್ನು ಮಾಡುವರೋ ಅವರಿಗೆ ಯಮದೂತರು ಪಾಶಗಳಿಂದ ಕಟ್ಟಿಹಾಕಿ ಲೋಹದ ಮುದ್ಗರ ಎಂಬ ಆಯುಧಗಳಿಂದ ಬಡಿಯುವರು. ಬ್ರಾಹ್ಮಣಾಧಮ! ಬ್ರಾಹ್ಮಣನಾದ ಕಾರಣ ದೇಹಶಿಕ್ಷೆಯನ್ನು ಮಾಡುವುದಿಲ್ಲ. ನನ್ನ ಕಣ್ಣೆದುರಿನಿಂದ ಹೊರಟುಹೋಗಿ.

ಇಲ್ಲದಿದ್ದರೆ ನನ್ನ ಭೃತ್ಯರು ಬಡಿದುಹಾಕುವರು' ಎಂದು ಹೇಳುವವನಾದನು.

ಕೂಡಲೇ ರಾಜಭೃತ್ಯರು ಬಂದು ಯಮದೇವರನ್ನು ಕೈಹಿಡಿದು ಸೆಳೆದು ಹಾಕುವವರಿದ್ದರು. ಅಷ್ಟರಲ್ಲಿ ಯಮದೇವರು ತನ್ನ ರೂಪವನ್ನು ತೋರಿಸಿದರು. 'ಹರಿಭಕ್ತನಾದ ರಾಜನೇ! ಸಂತೋಷವುಳ್ಳವನಾಗಿರುವೆನು. ಬೇಕಾದ ವರವನ್ನು ಕೇಳಿಕೊ. ನಾನು ಎಷ್ಟು ಮೋಹಗೊಳಿಸಿದರೂ ನೀನು ರಾಮದೇವರ ಸೇವೆಯನ್ನು ಬಿಡಲಿಲ್ಲ' ಎಂದು ಹೇಳಲು ರಾಜನು ಸಂತುಷ್ಟರಾದ ಯಮದೇವರನ್ನು ನೋಡಿ 'ತಾವು ಸಂತುಷ್ಟರಾಗಿರುವ ಪಕ್ಷದಲ್ಲಿ ರಾಮದೇವರ ಸಮಾಗಮವಾಗುವವರೆಗೆ ನನಗೆ ಮರಣವುಂಟಾಗಬಾರದು' ಎಂದು ಹೇಳಿದನು. ಅದಕ್ಕೆ ಯಮದೇವರು 'ಹಾಗೆಯೇ ಆಗುವುದು. ಭಗವಂತನು ನಿನ್ನ ಅಭೀಷ್ಟವನ್ನು ಸತ್ಯವನ್ನಾಗಿ ಮಾಡುವನು' ಎಂದು ಹೇಳಿ ಮರೆಯಾದರು. ಅಂತಹ ಧಾರ್ಮಿಕನಾದ ರಾಮದೇವರ ಸೇವಕನಾದ ರಾಜನು ತನ್ನ ಸೇವಕರೊಡನೆ 'ನಾನು ರಾಮದೇವರ ಕುದುರೆಯನ್ನು ಹಿಡಿದಿರುವೆನು. ಎಲ್ಲರೂ ಯುದ್ಧಕ್ಕೆ ಸಿದ್ಧರಾಗಿರಿ' ಎಂದು ಹೇಳಿದನು. ಎಲ್ಲರೂ ಸೇವಕರೂ ಯುದ್ಧಕ್ಕೆ ಸಿದ್ಧರಾದರು. ಮತ್ತೂ ಚಂಪಕ, ಮೋಹಕ, ರಿಪುಂಜಯ, ದುರ್ವಾರ, ಪ್ರತಾಪಿ, ಬಲಮೋಕ, ಹರ್ಯಕ್ಷ, ಸಹದೇವ, ಭೂರಿದೇವ, ಸುತಾಪನ ಎಂಬ ಹತ್ತು ಜನ ಮಕ್ಕಳೂ ಯುದ್ಧಕ್ಕೆ ಸಿದ್ಧರಾದರು. ಸಭೆಯಲ್ಲಿ ರಾಜನು ಎಲ್ಲರನ್ನೂ ಯುದ್ಧಕ್ಕೆ ಆಜ್ಞಾಪಿಸುತ್ತಾ ಇದ್ದನು.



## ಅಂಗದನ ದೌತ್ಯ [1]

ತರುವಾಯ ಶತ್ರುಘ್ನನು ವೇಗದಿಂದ ಬಂದು ತನ್ನ ಸೇವಕರೊಡನೆ ತನ್ನ ಕುದುರೆಯು ಎಲ್ಲಿಗೆ ಹೋಯಿತು ಎಂದು ಕೇಳಿದನು. ಅದಕ್ಕೆ ಸೇವಕರು 'ಯಾರೋ ಕೆಲವು ಭಟರು ಬಂದು ನಮ್ಮನ್ನು ಧಿಕ್ಕಾರಮಾಡಿ ಕುದುರೆಯನ್ನು ಹಿಡಿದುಕೊಂಡು ಹೋದರು. ಇನ್ನು ಮುಂದೆ ಏನು ಮಾಡಬೇಕೋ ಅದನ್ನು ತಾವೇ ಮಾಡಬೇಕು' ಎಂದು ಹೇಳಿದರು. ಅವರ ಮಾತನ್ನು ಕೇಳಿ ಶತ್ರುಘ್ನನು ಅತ್ಯಂತ ಕೋಪವುಳ್ಳವನಾಗಿ ರೋಷದಿಂದ ಹಲ್ಲುಗಳನ್ನು ಕಡಿಯುತ್ತಾ 'ನನ್ನ ಕುದುರೆಯನ್ನು ಅಪಹರಿಸಿಕೊಂಡು ಎಲ್ಲಿಗೆ ಹೋಗುವನು? ಈಗಲೇ ಬಾಣಗಳಿಂದ ಜನರಿಂದ ಸಹಿತವಾದ ಊರನ್ನೇ

1. ಪ.ಪು.ಪಾ.ಖಂ. ಅ–50

ಬೀಳಿಸುತ್ತೇನೆ' ಎಂದು ಹೇಳಿ ಸುಮತಿಯೊಡನೆ 'ಇದು ಯಾವ ರಾಜ್ಯವು. ಇಲ್ಲಿ ಯಾರು ರಾಜನು?' ಎಂದು ಕೇಳಿದನು.

ಅದಕ್ಕೆ ಸುಮತಿಯು 'ಇದಕ್ಕೆ ಕುಂಡಲನಗರವೆಂದು ಹೆಸರು ಇದರಲ್ಲಿ ಧರ್ಮಿಷ್ಠನಾದ ಬಲಿಷ್ಠನಾದ ಸುರಥ ಎಂಬ ರಾಜನು ಆಳುತ್ತಿರುವನು. ಅವನು ರಾಮದೇವರ ಭಕ್ತನು ಅವನ ಅನೇಕ ಚರಿತ್ರೆಗಳಿವೆ. ಮಹಾಸೈನ್ಯ ಸಹಿತನಾಗಿರುವನು. ಅವನು ಕುದುರೆಯನ್ನು ಅಪಹರಿಸಿದ್ದರೆ ಮಹಾಯುದ್ಧವು ನಡೆಯುವುದು. ಅನೇಕ ವೀರರು ಬೀಳುವರು' ಎಂದು ಹೇಳಿದನು. ಶತ್ರುಘ್ನನು 'ನಾವೀಗ ಏನು ಮಾಡಲಿ' ಆ ರಾಜನು ಕುದುರೆಯನ್ನು ತೆಗೆದುಕೊಂಡು ಹೋದನಷ್ಟೆ. ಇನ್ನೂ ಯುದ್ಧಕ್ಕೆ ಬರಲಿಲ್ಲವಲ್ಲಾ' ಎಂದು ಹೇಳಿದನು. ಅದಕ್ಕೆ ಸುಮತಿಯು 'ರಾಜನ ಬಳಿಗೆ ಚೆನ್ನಾಗಿ ಮಾತಾಡುವ ದೂತನನ್ನು ಕಳುಹಿಸಬೇಕು. ಅವನ ಮಾತಿನಿಂದ ಬಲಿಷ್ಠನಾದ ರಾಜನು ಬರುವನು. ಅಥವಾ ಯಾರಾದರೂ ತಿಳಿಯದೆ ಕುದುರೆಯನ್ನು ಕಟ್ಟಿಹಾಕಿದ್ದರೆ ಅವನು ಕುದುರೆಯನ್ನು ನಮಗೆ ಕೊಟ್ಟುಬಿಡುವನು' ಎಂದು ಹೇಳಿದನು. ಅದನ್ನು ಕೇಳಿ ಶತ್ರುಘ್ನನು ಅಂಗದನೊಡನೆ 'ನೀನು ಸುರಥನ ನಗರಿಗೆ ದೂತನಾಗಿ ಹೋಗಬೇಕು. ಅಲ್ಲಿಗೆ ಹೋಗಿ ನೀನು ತಿಳಿದೋ ತಿಳಿಯದೆಯೋ ರಾಮದೇವರ ಕುದುರೆಯನ್ನು ಕಟ್ಟಿ ಹಾಕಿರುವಿ. ಅದನ್ನು ನಮಗೆ ಕೊಟ್ಟುಬಿಡು. ಅಥವಾ ವೀರರಿಂದ ಕೂಡಿಕೊಂಡು ಯುದ್ಧಕ್ಕೆ ಬಾ ಎಂದು ಹೇಳಬೇಕು. ಲಂಕಾಪಟ್ಟಣದಲ್ಲಿ ರಾವಣನನ್ನು ಕುರಿತು ರಾಮದೇವರ ದೌತ್ಯವನ್ನು ಹೇಗೆ ಮಾಡಿರುವಿಯೋ ಅದೇ ಪ್ರಕಾರವಾಗಿ ಮಾಡಬೇಕು' ಎಂದು ಹೇಳಿದನು.

ಈ ಮಾತನ್ನು ಕೇಳಿ ವೀರನಾದ ಅಂಗದನು 'ಹಾಗೆಯೇ ಆಗಲಿ' ಎಂದು ಹೇಳಿ ವೀರರ ಪಂಕ್ತಿಯಿಂದ ಕೂಡಿದ ಸಭೆಯ ಮಧ್ಯದಲ್ಲಿ ಕೂತಿರುವ ತಲೆಯಲ್ಲಿ ತುಳಸೀದಳವನ್ನು ಧರಿಸಿರುವ ನಾಲಿಗೆಯಿಂದ ರಾಮದೇವರ ನಾಮವನ್ನು ಹೇಳುತ್ತಿರುವ ಸುರಥ ರಾಜನನ್ನು ನೋಡಿದನು. ಸುರಥನೂ ಮನೋಹರವಾದ ರೂಪವುಳ್ಳ ಅಂಗದನನ್ನು ನೋಡಿ ಶತ್ರುಘ್ನನ ದೂತನೆಂದು ತಿಳಿದುಕೊಂಡು 'ಕಪಿಶ್ರೇಷ್ಠನೇ! ನೀನು ಇಲ್ಲಿಗೆ ಏಕೆ ಹೇಗೆ ಬಂದಿರುವಿ? ಕಾರಣವನ್ನೆಲ್ಲಾ ಹೇಳು. ಅದನ್ನು ಕೇಳಿ ನಾನು ಹೇಗೆ ಮಾಡಬೇಕೋ ಹಾಗೆ ಮಾಡುವೆನು' ಎಂದು ಹೇಳಿದನು. ಅದನ್ನು ಕೇಳಿ ಅಂಗದನು ಮನಸ್ಸಿನಲ್ಲಿ ಆಶ್ಚರ್ಯಪಡುತ್ತಾ 'ನಾನು ವಾಲಿಯಮಗನು. ರಾಮದೇವರಿಗೆ ಪ್ರಿಯನಾದವನು. ಶತ್ರುಘ್ನನು ನನ್ನನ್ನು ನಿನ್ನ ಬಳಿಗೆ ದೂತನನ್ನಾಗಿ ಕಳುಹಿಸಿರುವೆನು. ಕೆಲವು ನಿನ್ನ ಸೇವಕರು ತಿಳಿಯದೆ ಮಹಾ

ಅನ್ಯಾಯವನ್ನು ಮಾಡುವವರಾಗಿ ನನ್ನ ಕುದುರೆಯನ್ನು ಹಿಡಿದುಕೊಂಡು ಹೋದರು. ಆ ಕುದುರೆಯನ್ನು ನೀನು ಮಕ್ಕಳಿಂದ ಸಹಿತನಾಗಿ ಶತ್ರುಘ್ನನ ಕಾಲಿಗೆ ಬಿದ್ದು ಸಮರ್ಪಿಸು. ಇಲ್ಲದಿದ್ದರೆ ಶತ್ರುಘ್ನನು ಬಿಟ್ಟ ಬಾಣಗಳಿಂದ ಮೈಯಲ್ಲಿ ಗಾಯಗಳನ್ನು ಹೊಂದಿದವನಾಗಿ ಭೂಮಿಯಲ್ಲಿ ಮಲಗುವಿ. ಯಾವ ರಾಮದೇವರಿಂದ ಮಹಾಸಮರ್ಥನಾದ ರಾವಣನೇ ಸಂಹೃತನಾದನೋ ಅಂತಹ ರಾಮದೇವರ ಯಾಗಕ್ಕೆ ಯೋಗ್ಯವಾದ ಕುದುರೆಯನ್ನು ಅಪಹರಿಸಿ ಎಲ್ಲಿಗೆ ಹೋಗುವಿ?' ಎಂದು ಹೇಳಲು,

ಸುರಥನು 'ನೀನು ಹೇಳಿದ ಮಾತುಗಳೆಲ್ಲವೂ ಸತ್ಯವು. ಒಂದು ಮಾತೂ ಸುಳ್ಳಲ್ಲ. ನಾನು ಹೇಳುವ ಮಾತನ್ನು ಕೇಳು. ನಾನು ರಾಮದೇವರ ಕುದುರೆಯನ್ನು ಕಟ್ಟಿಹಾಕಿರುವೆನು. ಶತ್ರುಘ್ನನ ಭಯದಿಂದ ನಾನು ಎಷ್ಟು ಮಾತ್ರವೂ ಕುದುರೆಯನ್ನು ಬಿಟ್ಟುಬಿಡಲಾರೆನು. ರಾಮದೇವರೇ ಬಂದು ನನಗೆ ದರ್ಶನವನ್ನು ಕೊಡುವುದಾದರೆ ಎಲ್ಲಾ ರಾಜ್ಯವನ್ನು ಕುಟುಂಬವನ್ನೂ ಧನಧಾನ್ಯವನ್ನೂ ಸೈನ್ಯವನ್ನು ಅವರ ಪಾದಗಳಿಗೆ ನಮಸ್ಕಾರ ಮಾಡಿ ಒಪ್ಪಿಸುವೆನು. ಯುದ್ಧಮಾಡುವುದು ಕ್ಷತ್ರಿಯ ಧರ್ಮವು. ರಾಮದೇವರನ್ನು ಇಚ್ಛಿಸುವವನು ಧರ್ಮಯುದ್ಧವನ್ನು ಮಾಡಬೇಕು. ರಾಮ ದೇವರು ಬಾರದೆ ಇರುವುದಾದರೆ ಶತ್ರುಘ್ನಾದಿವೀರರನ್ನು ಎಲ್ಲರನ್ನೂ ಈ ಕ್ಷಣದಲ್ಲಿ ಜಯಿಸಿ ನಮ್ಮ ಮನೆಯಲ್ಲಿ ಬಂಧನದಲ್ಲಿ ಇಡುವೆನು' ಎಂದು ಹೇಳಲು ಅದನ್ನು ಕೇಳಿ ಅಂಗದನು ನಗುವವ ನಾದನು. ಆಮೇಲೆ ಧೈರ್ಯಶಾಲಿಯಾದ ಆ ರಾಜನೊಡನೆ 'ನೀನು ಬುದ್ಧಿಯಿಲ್ಲದೆ ಮಾತಾಡುವಿ. ಯಾವ ಶತ್ರುಘ್ನನು ಲವಣಾಸುರನನ್ನು ಅನಾಯಾಸದಿಂದ ಸಂಹರಿಸಿರುವನು. ಯುದ್ಧದಲ್ಲಿ ಅನೇಕ ಶತ್ರುಗಳನ್ನು ಜಯಿಸಿರುವನು. ವಿದ್ಯುನ್ಮಾಲೀ ಎಂಬ ರಾಕ್ಷಸನನ್ನು ಕೊಂದಿರುವನು. ಅವನನ್ನು ನೀನು ಕಟ್ಟಿ ಹಾಕುವಿಯಾ? ಬುದ್ಧಿಹೀನನಾಗಿ ನನಗೆ ಕಾಣಿಸುವಿ. ಅವನ ಅಣ್ಣನ ಮಗನಾದ ಪುಷ್ಕಲನೂ ಪರಮ ಅಸ್ತ್ರಜ್ಞಾನಿಯಾಗಿರುವನು. ಅವನು ಯುದ್ಧದಲ್ಲಿ ವೀರಭದ್ರನನ್ನು ಸಂತೋಷಪಡಿಸಿರು ವನು. ಮಾತ್ರವಲ್ಲದೆ ಹನುಮಂತದೇವರು ಇರುವರು. ಅವರು ಮಾಡಿದ ಅನೇಕ ಕರ್ಮಗಳನ್ನು ನೀನು ಕೇಳಿರುವಿ. ರಾಕ್ಷಸರಿಂದ ತುಂಬಿದ ಲಂಕಾಪಟ್ಟಣವನ್ನು ಸುಟ್ಟು ಹಾಕಿರುವರು. ದುರ್ಬುದ್ಧಿಯುಳ್ಳ ರಾವಣನ ಮಗನಾದ ಅಕ್ಷಕುಮಾರನನ್ನು ಕೊಂದಿರುವರು. ದ್ರೋಣ ಎಂಬ ಪರ್ವತವನ್ನು ಬಾಲದಿಂದ ಸುತ್ತಿ ಸೆಳೆದಿರುವರು. ಸುಗ್ರೀವಾದಿಗಳೂ ಪ್ರಸಿದ್ಧರಾದವರು. ಶತ್ರುಘ್ನನ ಸಮೀಪದಲ್ಲಿ ಇರುವರು. ಕುಶಧ್ವಜ, ನೀಲರತ್ನ, ರಿಪುತಾಪ, ಪ್ರತಾಪಾಗ್ರ್ಯ,

ಸುಬಾಹು, ವಿಮಲ, ಸುಮದ, ವೀರಮಣಿ ಇನ್ನೂ ಅನೇಕ ರಾಜರು ಶತ್ರುಘ್ನನನ್ನು ಸೇವಿಸುತ್ತಿರುವರು. ಅಂತಹ ಸೈನ್ಯಸಮುದ್ರದಲ್ಲಿ ಸೊಳ್ಳೆಯಂತೆ ಇರುವ ನೀನು ಎಷ್ಟರವನು?

ಆದುದರಿಂದ ಯೋಚನೆಮಾಡಿ ಮಕ್ಕಳಿಂದ ಕೂಡಿಕೊಂಡು ಕುದುರೆಯನ್ನು ಬಿಟ್ಟು ಕುದುರೆಯನ್ನು ಸಮರ್ಪಿಸಿ ರಾಮದೇವರ ದರ್ಶನವನ್ನು ಮಾಡಿ ಜನ್ಮವನ್ನು ಸಾರ್ಥಕಮಾಡಿಕೊ' ಎಂದು ಹೇಳಿದನು. ಅದಕ್ಕೆ ರಾಜನು 'ನನಗೆ ಅವರನ್ನೆಲ್ಲಾ ತೋರಿಸು. ನಾನು ಯುದ್ಧ ಮಾಡುವೆನು. ನಾನು ಮನಸ್ಸಿನಿಂದಲೂ ಕರ್ಮದಿಂದಲೂ ಮಾತಿನಿಂದಲೂ ರಾಮದೇವರನ್ನು ಭಜಿಸುವವನಾದರೆ ನನಗೆ ರಾಮದೇವರು ಬಂದು ದರ್ಶನ ಕೊಡುವರು. ನೀನು ಹೋಗಿ ಶತ್ರುಘ್ನನೊಡನೆ ನಾನು ಹೇಳಿದ ಮಾತನ್ನು ಹೇಳು. ಎಲ್ಲ ಭಟರೂ ಯುದ್ಧಕ್ಕೆ ಸಿದ್ಧರಾಗಿರಲಿ. ನಾನು ಯುದ್ಧಕ್ಕೆ ಬರುವೆನು' ಎಂದು ಹೇಳಿದನು. ಆಮಾತನ್ನು ಕೇಳಿ ಅಂಗದನು ಮಂದಹಾಸವನ್ನು ಮಾಡಿ ಅಲ್ಲಿಂದ ಶತ್ರುಘ್ನನ ಬಳಿಗೆ ಹೋಗಿ ಎಲ್ಲವನ್ನೂ ತಿಳಿಸಿದನು.



## ಚಂಪಕನ ಪರಾಕ್ರಮ [1]

ಅಂಗದನ ಮೂಲಕ ಸುರಥನು ಹೇಳಿಕಳುಹಿಸಿರುವುದನ್ನು ಕೇಳಿ ಭಟರೆಲ್ಲರೂ ಯುದ್ಧಕ್ಕೆ ಸಿದ್ಧರಾದರು. ನಾನಾವಾದ್ಯಗಳನ್ನು ಬಾರಿಸಿದರು. ಎಲ್ಲರೂ ಗರ್ಜನೆಯನ್ನು ಮಾಡಿದರು. ಈರೀತಿಯಾಗಿ ಕೋಲಾಹಲವು ನಡೆಯುತ್ತಿರುವಾಗ ಸುರಥನು ತನ್ನ ಮಕ್ಕಳಿಂದಲೂ ಸೈನ್ಯದಿಂದಲೂ ಸಹಿತನಾಗಿ ಯುದ್ಧಕ್ಕೆ ಬಂದನು. ಅವನನ್ನು ನೋಡಿ ಶತ್ರುಘ್ನನು 'ರಾಜನು ಮಹಾಸೈನ್ಯವುಳ್ಳವನಾಗಿ ಯುದ್ಧಕ್ಕೆ ಬರುತ್ತಿರುವನು. ಈಗ ನಾವು ಏನು ಮಾಡಬೇಕು ಎಂಬುದನ್ನು ತಿಳಿಸು' ಎಂದು ಹೇಳಿದನು. ಅದಕ್ಕೆ ಸುಮತಿಯು 'ಪುಷ್ಕಲಾದಿಗಳು ಎಲ್ಲರೂ ಯುದ್ಧವನ್ನು ಮಾಡಬೇಕು. ರಾಜನೊಡನೆ ಹನುಮಂತದೇವರು ಯುದ್ಧಮಾಡಲಿ' ಎಂದು ಹೇಳಿದನು. ಅಷ್ಟರಲ್ಲಿಯೇ ಎಲ್ಲಾ ಭಟರೂ ಯುದ್ಧಕ್ಕೆ ಬಂದು ಸೇರಿದರು. ಪುಷ್ಕಲಾದಿಗಳು, ಅವರನ್ನು ಎದುರಿಸಿ ಕೊಂಡು ಹೋದರು. ಪುಷ್ಕಲನು ಚಂಪಕನೊಡನೆ ಯುದ್ಧಕ್ಕೆ ಹೋದನು. ಮೋಹಕ

1. ಪ.ಪು.ಪಾ.ಖಂ. ಅ–51

ನೊಡನೆ ಲಕ್ಷ್ಮೀನಿಧಿಯೂ, ಕಶಧ್ವಜನೂ ಯುದ್ಧ ಮಾಡಿದನು. ರಿಪುಂಜಯನೊಡನೆ ವಿಮಲನೂ, ದುರ್ವಾರನೊಡನೆ ಸುಬಾಹುವೂ, ಪ್ರತಾಪಿಯೊಡನೆ ಪ್ರತಾಪಗ್ರ್ಯನೂ, ಬಲಮೋದನೊಡನೆ ಅಂಗದನೂ, ಹರ್ಯಕ್ಷನೊಡನೆ ನೀಲರತ್ನನೂ, ಸಹದೇವ 'ನೊಡನೆ ಅಂಗದನೂ, ಹರ್ಯಕ್ಷನೊಡನೆ ನೀಲರತ್ನನೂ, ಸಹದೇವನೊಡನೆ ಸತ್ಯವಂತನೂ, ಭೂರಿದೇವನೊಡನೆ ವೀರಮಣಿಯೂ, ಸಂತಾಪನನೊಡನೆ ಉಗ್ರಾಶ್ವನೂ, ಯುದ್ಧಮಾಡಿದರು. ಭಯಂಕರವಾದ ಯುದ್ಧವು ನಡೆಯಿತು. ಪುಷ್ಕಲನು ಚಂಪಕನೊಡನೆ 'ರಾಜಪುತ್ರನೇ! ನಿನ್ನ ಹೆಸರೇನು. ನನ್ನೊಡನೆ ಯುದ್ಧಕ್ಕೆ ಬಂದಿರುವ ನೀನು ಪರಮಧನ್ಯನು. ಈಗ ನಿಲ್ಲು, ಎಲ್ಲಿಗೆ ಹೋಗುವಿ? ನಿನ್ನ ಜೀವವು ಹೇಗೆ ಉಳಿಯುವುದು? ನನ್ನೊಡನೆ ಯುದ್ಧವನ್ನು ಮಾಡು' ಎಂದು ಹೇಳಿದನು.

ಆಗ ಚಂಪಕನು ಮೇಘದಂತೆ ಗಂಭೀರವಾದ ವಾಣಿಯಿಂದ 'ಇಲ್ಲಿ ಹೆಸರಿನಿಂದ ಕುಲದಿಂದ ಯುದ್ಧವು ನಡೆಯುವುದಲ್ಲ, ಆದರೂ ಹೇಳುತ್ತೇನೆ. ನನ್ನ ತಾಯಿಯು ರಾಮದೇವರು, ತಂದೆಯು ರಾಮದೇವರು, ನನ್ನ ಬಂಧುವೂ ರಾಮದೇವರು ನನ್ನ ಸ್ವಜನರು ರಾಮದೇವರು. ನನ್ನ ಹೆಸರು ರಾಮದಾಸ ಎಂದು ಯಾವಾಗಲೂ ರಾಮದೇವರ ಸೇವಕನು ಭಕ್ತರಲ್ಲಿ ಕೃಪೆಯುಳ್ಳ ರಾಮದೇವರು ಯುದ್ಧದಲ್ಲಿ ನನ್ನನ್ನು ಉದ್ಧರಿಸುವರು. ಇನ್ನು ಲೋಕದ ರೀತಿಯನ್ನು ಅನುಸರಿಸಿ ಹೇಳುವುದಾದರೆ ಸುರಥರಾಜನ ಮಗನು. ವೀರವತಿಯೆಂಬವಳು ನನ್ನ ತಾಯಿಯು. ಚೈತ್ರಮಾಸದಲ್ಲಿ ಯಾವ ಪುಷ್ಪವು ಅತ್ಯಂತ ಶೋಭಿಸುತ್ತಿರುವುದೋ ಯಾವ ಪುಷ್ಪದಲ್ಲಿ ಭ್ರಮರವು ಮಧುವನ್ನು ಪಾನಮಾಡುವುದಿಲ್ಲವೋ ಬಂಗಾರದ ಬಣ್ಣವಿರುವುದೋ ಮಧ್ಯದಲ್ಲಿ ಲಿಂಗಾಕಾರವಿರುವುದೋ ಆ ಪುಷ್ಪದ (ಸಂಪಿಗೆ ಹೂವು, ಚಂಪಕ) ಹೆಸರು ನನಗೆ ಎಂದು ತಿಳಿಯುವವನಾಗು. ಬಾಣಗಳಿಂದ ಯುದ್ಧವನ್ನು ಮಾಡು. ನನ್ನನ್ನು ಜಯಿಸಲಿಕ್ಕೆ ಯಾರು ಸಮರ್ಥರಿರುವರು? ಈಗ ಅದ್ಭುತವಾದ ನನ್ನ ಪರಾಕ್ರಮವನ್ನು ತಿಳಿಸುವೆನು' ಎಂದು ಹೇಳಲು ಪುಷ್ಕಲನು ಮನಸ್ಸಿನಲ್ಲಿಯೇ ಸಂತೋಷವನ್ನು ಹೊಂದಿದನು. ಅವನನ್ನು ಜಯಿಸುವುದು ಶ್ರಮಸಾಧ್ಯವೆಂದು ತಿಳಿದುಕೊಂಡು ಬಾಣವನ್ನು ಬಿಟ್ಟನು. ಚಂಪಕನೂ ಬಾಣಗಳನ್ನು ಬಿಟ್ಟನು. ಬಾಣಗಳನ್ನು ಒಬ್ಬೊಬ್ಬರು ಕತ್ತರಿಸಿಕೊಂಡರು. ಚಂಪಕನು ಪುಷ್ಕಲನ ಎದೆಗೆ ಬಾಣಗಳನ್ನು ಬಿಟ್ಟನು. ಆ ಬಾಣಗಳು ಪುಷ್ಕಲನ ಎದೆಯನ್ನು ಸೀಳಿಕೊಂಡು ಹೋದವು. ಅದರಿಂದ ತುಂಬಾ ವ್ಯಥೆಯುಳ್ಳವನಾಗಿ ಪುಷ್ಕಲನು ಚಂಪಕನಿಗೆ ಐದು ಬಾಣಗಳನ್ನು ಬಿಟ್ಟನು. ಅವುಗಳನ್ನು ಚಂಪಕನು ಕತ್ತರಿಸಿದನು.

ಹೀಗೆಯೇ ಭಯಂಕರವಾದ ಯುದ್ಧವು ನಡೆಯಿತು. ಪುಷ್ಕಲನು ಕೊನೆಗೆ ಬ್ರಹ್ಮಾಸ್ತ್ರವನ್ನು ಬಿಟ್ಟನು. ಚಂಪಕನು ಅದನ್ನು ನೋಡಿ ತಾನೂ ಅದೇ ಅಸ್ತ್ರವನ್ನು ಬಿಟ್ಟನು. ಎರಡು ಅಸ್ತ್ರಗಳ ತೇಜಸ್ಸೂ ಒಟ್ಟಿಗೆ ಸೇರಿತು. ಅದನ್ನು ನೋಡಿ ಜನರು ಪ್ರಲಯವು ಬಂದಿತೆಂದು ತಿಳಿದುಕೊಂಡರು. ತರುವಾಯ ಚಂಪಕನು ಆ ಅಸ್ತ್ರವನ್ನು ಉಪಸಂಹಾರ ಮಾಡಿದನು. ಅವನ ಅದ್ಭುತವಾದ ಕರ್ಮವನ್ನು ನೋಡಿ ಪುಷ್ಕಲನು ಕೋಪದಿಂದ ಚಂಪಕನಿಗೆ ಬಾಣಗಳನ್ನು ಬಿಟ್ಟನು. ಚಂಪಕನು ಕೋಪದಿಂದ ಅವುಗಳನ್ನು ಲಕ್ಷ್ಯಮಾಡದೆ ಪುಷ್ಕಲನನ್ನು ಕುರಿತು ಭಯಂಕರವಾದ ರಾಮಾಸ್ತ್ರವನ್ನು ಬಿಟ್ಟನು. ಆ ಅಸ್ತ್ರವನ್ನು ನೋಡಿ ಪುಷ್ಕಲನು ಕತ್ತರಿಸಬೇಕೆಂದು ಮನಸ್ಸನ್ನು ಮಾಡುವಷ್ಟರಲ್ಲಿಯೇ ಆ ಬಾಣದಿಂದ ಬಡೆಯಲ್ಪಟ್ಟನು. ಚಂಪಕನು ಪುಷ್ಕಲನನ್ನು ಕಟ್ಟಿಹಾಕಿ ತನ್ನ ರಥದಲ್ಲಿ ಇಟ್ಟುಕೊಂಡನು. ತನ್ನ ಊರಿಗೆ ಕರಕೊಂಡು ಹೋಗಲಿಕ್ಕೆ ಅಭಿಪ್ರಾಯಪಟ್ಟನು.



## ಚಂಪಕನ ಪರಾಜಯ [1]

ಚಂಪಕನು ಪುಷ್ಕಲನನ್ನು ಕಟ್ಟಿಹಾಕಲು ಮಹತ್ತಾದ ಹಾಹಾಕಾರವು ಉಂಟಾಯಿತು. ಸೈನಿಕರೆಲ್ಲರೂ ಓಡುತ್ತಾ ಶತ್ರುಘ್ನನಿದ್ದಲ್ಲಿಗೆ ಹೋದರು. ಭಗ್ನರಾದ ಅವರನ್ನು ನೋಡಿ ಶತ್ರುಘ್ನನು ಹನುಮಂತದೇವರೊಡನೆ ವೀರರಿಂದ ಅಲಂಕೃತವಾದ ನಮ್ಮ ಸೈನ್ಯವು ಯಾರಿಂದ ಭಂಗವನ್ನು ಹೊಂದಿತು ಎಂದು ಕೇಳಿದನು. ಹನುಮಂತದೇವರು 'ಮದಭರಿತನಾದ ರಾಜಪುತ್ರನಾದ ಚಂಪಕನು ಪುಷ್ಕಲನನ್ನು ಕಟ್ಟಿ ತೆಗೆದುಕೊಂಡು ಹೋಗುತ್ತಾ ಇದ್ದಾನೆ' ಎಂದು ಹೇಳಲು ಶತ್ರುಘ್ನನು ಅದನ್ನು ಕೇಳಿ ಕೋಪವುಳ್ಳವನಾಗಿ ಹನುಮಂತದೇವರೊಡನೆ 'ಯಾರು ಪುಷ್ಕಲನನ್ನು ಕಟ್ಟಿಹಾಕಿದನೋ ಅವನಿಂದ ಪುಷ್ಕಲನನ್ನು ಬಿಡಿಸಿರಿ. ನೀವು ಯಾಕೆ ಸುಮ್ಮನೆ ನಿಂತಿರುವಿರಿ?' ಎಂದನು. ಆಗಲಿ ಎಂದು ಹೇಳಿ ಹನುಮಂತದೇವರು ಚಂಪಕನಿಂದ ಪುಷ್ಕಲನನ್ನು ಬಿಡಿಸಲಿಕ್ಕೆ ಹೋದರು. ಬಿಡಿಸಲಿಕ್ಕೆ ಬಂದಿರುವ ಹನುಮಂತದೇವರನ್ನು ನೋಡಿ ಚಂಪಕನು ಅನೇಕ ಬಾಣಗಳನ್ನು ಬಿಟ್ಟನು. ಹನುಮಂತದೇವರು ಅವುಗಳನ್ನು ಕೈಯಿಂದ ಪುಡಿಮಾಡಿದರು. ಮರವನ್ನು ಅವನ ಮೇಲೆ ಬಿಟ್ಟರು. ಆನೆಯನ್ನು ಹಾಕಿದರು. ಕಲ್ಲುಗಳನ್ನು ಹಾಕಿದರು. ಎಲ್ಲವನ್ನು ಚಂಪಕನು ಪುಡಿಮಾಡಿದನು.

1. ಪ.ಪು.ಪಾ.ಖಂ. ಅ–51

ಆಗ ಹನುಮಂತದೇವರು ಅವನನ್ನು ಕೈಯಲ್ಲಿ ಹಿಡಿದುಕೊಂಡು ಆಕಾಶಕ್ಕೆ ಹೋದರು. ಆಕಾಶದಲ್ಲಿ ಇಬ್ಬರಿಗೂ ಯುದ್ಧವು ನಡೆಯಿತು. ಬಾಹುಯುದ್ಧವು ನಡೆಯಿತು. ಹನುಮಂತದೇವರು ಚಂಪಕನ ಕಾಲು ಹಿಡಿದು ಬಡೆದರು. ಅವನು ಆಕ್ಷಣ ಏಳುವವನಾಗಿ ಹನುಮಂತದೇವರ ಬಾಲವನ್ನು ಹಿಡಿದು ತಿರುಗಿಸುವವ ನಾದನು. ಆಗ ಹನುಮಂತದೇವರು ಅವನ ಬಲವನ್ನು ನೋಡಿ ನಗುತ್ತಾ ಚಂಪಕನ ಕಾಲನ್ನು ಹಿಡಿದರು. ನೂರು ಸುತ್ತು ತಿರುಗಿಸಿ ನೆಲದಮೇಲೆ ಹಾಕಿದರು. ಇದರಿಂದ ಬಲಿಷ್ಠನಾದ ಆ ರಾಜಪುತ್ರನು ಆ ಭಯಂಕರ ಯುದ್ಧದಲ್ಲಿ ಮೂರ್ಛಿತನಾದನು. ಆಗ ಎಲ್ಲರೂ ಹಾಹಾಕಾರವನ್ನು ಮಾಡಿದರು. ಹನುಮಂತದೇವರು ಪುಷ್ಕಲನನ್ನು ಬಿಡಿಸಿದರು.



## ಸುರಥನ ಪರಾಕ್ರಮ [1]

ಚಂಪಕನನು ಬಿದ್ದಿರುವುದನ್ನು ನೋಡಿ ಪುತ್ರಶೋಕದಿಂದ ಕೂಡಿದವನಾಗಿ ಸುರಥನು ರಥದಲ್ಲಿ ಕೂತುಕೊಂಡು ಬಂದನು. ದೀರ್ಘಶ್ವಾಸವನ್ನು ಬಿಡುತ್ತಾ ಕೋಪವುಳ್ಳವನಾಗಿ ಹನುಮಂತದೇವರನ್ನು ಯುದ್ಧಕ್ಕೆ ಕೂಗಿದನು. ಹನುಮಂತ ದೇವರು ಮಹಾವೇಗದಿಂದ ಯುದ್ಧಕ್ಕೆ ಬಂದರು. ಸುರಥನು ಅವರನ್ನು ಲಕ್ಷ್ಯ ಮಾಡದೆ 'ಕಪಿಶ್ರೇಷ್ಠನೇ! ನೀನು ಪರಮಧನ್ಯನು. ಲಂಕಾನಗರದಲ್ಲಿ ರಾಮದೇವರ ಮಹಾಕಾರ್ಯವನ್ನು ಮಾಡಿರುವಿ. ನೀನು ರಾಮದೇವರ ಪಾದಭಕ್ತನಾಗಿರುವಿ. ನಿನ್ನಿಂದ ನನ್ನ ಮಗನಾದ ಚಂಪಕನು ಬಿದ್ದಿರುವನು. ಈಗ ನಿನ್ನನ್ನು ಕಟ್ಟಿಹಾಕಿ ನಾನು ನಗರಕ್ಕೆ ಕರೆದುಕೊಂಡು ಹೋಗುವೆನು' ಎಂದು ಹೇಳಲು ಹನುಮಂತದೇವರು 'ನೀನೂ ರಾಮದೇವರ ಪಾದಗಳನ್ನು ಸ್ಮರಿಸುವವನು. ನಾವೂ ರಾಮದೇವರ ಸೇವಕರು. ನೀನು ನನ್ನನ್ನು ಕಟ್ಟಿಹಾಕಿದರೆ ರಾಮದೇವರು ಬಂದು ಬಿಡಿಸುವರು. ರಾಮದೇವರನ್ನು ಸ್ಮರಿಸಿಕೊಂಡು ನಿನ್ನ ಪ್ರತಿಜ್ಞೆಯನ್ನು ಸತ್ಯಮಾಡು. ರಾಮದೇವರನ್ನು ಸ್ಮರಿಸುವವರಿಗೆ ದುಃಖವಿಲ್ಲವೆಂದು ವೇದಗಳು ಹೇಳುತ್ತವೆ' ಎಂದು ಹೇಳಿದರು.

ಈಪ್ರಕಾರವಾಗಿ ಹೇಳಿದ ಹನುಮಂತದೇವರನ್ನು ಸುರಥನು ಪ್ರಶಂಸಾಮಾಡಿ ಅನೇಕ ಬಾಣಗಳಿಂದ ಬಡೆದನು. ಅವುಗಳನ್ನು ಲಕ್ಷ್ಯಮಾಡದೆ ಹನುಮಂತದೇವರು

1. ಪ.ಪು.ಪಾ.ಖಂ. ಅ–52

ಧನುಸ್ಸನ್ನು ಹಿಡಿದ ಮುರಿದು ಹಾಕಿದರು. ಚೀತ್ಕಾರವನ್ನು ಮಾಡುತ್ತಾ ಉಗುರುಗಳಿಂದ ಭಟರನ್ನು ಸೀಳಿ ಹಾಕಿದರು. ಸುರಥನು ಬೇರೊಂದು ಧನುಸ್ಸನ್ನು ತೆಗೆದನು. ಹನುಮಂತದೇವರು ಅದನ್ನು ಮುರಿದರು. ಹೀಗೆಯೇ ಹನುಮಂತ ದೇವರು ರಾಜನ ಎಂಭತ್ತು ಧನುಸ್ಸುಗಳನ್ನು ಮುರಿದರು. ಆಗ ಸುರಥನು ಅತ್ಯಂತ ಕೋಪವುಳ್ಳವನಾಗಿ ಉಗ್ರವಾದ ಶಕ್ತಿಯಿಂದ ಬಡೆದನು. ಅದರಿಂದ ಹನುಮಂತ ದೇವರು ಒಂದುಕ್ಷಣ ಬಿದ್ದಂತೆ ತೋರಿಸಿ ಆಮೇಲೆ ಎದ್ದು ಅವನ ರಥವನ್ನು ಹಿಡಿದುಕೊಂಡು ಎದೆಗೆ ಪರಿಘ ಎಂಬ ಆಯುಧಗಳಿಂದ ಬಡಿದನು. ಹನುಮಂತದೇವರು ಮೇಲಿನಿಂದ ರಥವನ್ನು ಬಿಟ್ಟುಬಿಟ್ಟರು. ಅದು ಕೆಳಗೆ ಬಿದ್ದು ಪುಡಿಯಾಯಿತು. ಸುರಥನು ಇನ್ನೊಂದು ರಥವನ್ನು ಏರಿ ವೇಗದಿಂದ ಹನುಮಂತದೇವರು ಇದ್ದಲ್ಲಿಗೆ ಹೋದನು. ಹನುಮಂತದೇವರು ಆ ರಥವನ್ನು ಪುಡಿಮಾಡಿದರು. ಹೀಗೇ ನಾಲ್ವತ್ತಒಂಭತ್ತು (49) ರಥಗಳನ್ನು ಪುಡಿಮಾಡಿದರು.

ಹನುಮಂತದೇವರ ಪರಾಕ್ರಮವನ್ನು ನೋಡಿ ರಾಜನೂ ಸೈನಿಕರೂ ಆಶ್ಚರ್ಯ ಪಟ್ಟರು. ಸುರಥನು ಕೋಪಿಸಿಕೊಂಡು 'ಕಪಿಶ್ರೇಷ್ಠ! ಪರಮಧನ್ಯನಾಗಿರುವಿ. ಒಂದುಕ್ಷಣ ಸಹಿಸು. ನಾನು ಧನುಸ್ಸಿಗೆ ಹಗ್ಗವನ್ನು ಬಿಗಿಯುವೆನು' ಎಂದು ಹೇಳಿ ಧನುಸ್ಸಿನ ಹಗ್ಗವನ್ನು ಕಟ್ಟಿ ಪಾಶುಪತಾಸ್ತ್ರವನ್ನು ಬಿಟ್ಟನು. ಹನುಮಂತದೇವರು ಅದರಿಂದ ಬಿಡಿಸಿಕೊಂಡರು. ಆಮೇಲೆ ಬ್ರಹ್ಮಾಸ್ತ್ರವನ್ನು ರಾಜನು ಬಿಡಲು ನಗುತ್ತಾ ಅದನ್ನೂ ನುಂಗಿಹಾಕಿದರು. ಅದನ್ನು ನೋಡಿ ರಾಜನು ರಾಮದೇವರನ್ನು ಸ್ಮರಿಸಿದನು. ರಾಮದೇವರನ್ನು ಸ್ಮರಿಸಿ 'ರಾಮಾಸ್ತ್ರದಿಂದ ನಿನ್ನನ್ನು ಬಂಧಿಸುವೆನು' ಎಂದು ಹೇಳಿ ರಾಮಾಸ್ತ್ರವನ್ನು ಬಿಟ್ಟನು. ಆಗ ಹನುಮಂತದೇವರು ಮಹಾಸಮರ್ಥ ರಾದರೂ, ತತ್ಕಾಲದಲ್ಲಿ ಆ ರಾಜನಿಗೆ ಕೀರ್ತಿಯನ್ನು ಕೊಡುವುದು ರಾಮದೇವರ ಮನಸ್ಸಿಗೆ ಬಂದಿರುವುದೆಂದು ತಿಳಿದವರಾಗಿ ಆ ರಾಮಾಸ್ತ್ರಕ್ಕೆ ಗೌರವವನ್ನು ಕೊಡುವ ಅಭಿಪ್ರಾಯದಿಂದಲೂ ಆ ಅಸ್ತ್ರದಿಂದ ಬದ್ಧರಾದವರಂತೆ ತೋರಿಸಿಕೊಂಡರು. ಸುರಥನೊಡನೆ 'ರಾಜನೇ! ಏನು ಮಾಡಲಿ? ನನ್ನ ಸ್ವಾಮಿಯ ಅಸ್ತ್ರದಿಂದಲೇ ಬಂಧನ ಮಾಡಿರುವಿ. ಬೇರೆ ಸಾಮಾನ್ಯ ಅಸ್ತ್ರದಿಂದ ಅಲ್ಲ. ನಾನು ಆ ಅಸ್ತ್ರಕ್ಕೆ ಬಹುಮಾನ ಮಾಡುವೆನು. ನನ್ನನ್ನು ನಿನ್ನ ಊರಿಗೆ ಕರೆದುಕೊಂಡು ಹೋಗು. ದಯಾನಿಧಿಯಾದ ರಾಮದೇವರು ಬಂದು ನನ್ನನ್ನು ಬಿಡಿಸುವರು' ಎಂದು ಹೇಳಿ ತನ್ನ ಇಚ್ಛೆಯಿಂದ ಬದ್ಧರಂತೆ ಇದ್ದರು.

ಅದನ್ನು ನೋಡಿ ಪುಷ್ಕಲನು ಯುದ್ಧಕ್ಕೆ ಬಂದನು. ಭಯಂಕರವಾದ ಯುದ್ಧವು

ನಡೆಯಿತು. ಕೊನೆಗೆ ಪುಷ್ಕಲನು ಮೂರ್ಛಿತನಾಗಿ ಬಿದ್ದನು. ತರುವಾಯ ಶತ್ರುಘ್ನನೇ ಯುದ್ಧಕ್ಕೆ ಬಂದನು. 'ನೀನು ಮಹಾಕಾರ್ಯವನ್ನು ಮಾಡಿ, ಪುಷ್ಕಲನೇ ಮೊದಲಾದ ಮಹಾಬಲಪರಾಕ್ರಮಶಾಲಿಗಳಾದ ವೀರರನ್ನು ಬೀಳಿಸಿರುವಿ. ನಿಲ್ಲಿ, ನನ್ನ ವೀರರನ್ನೆಲ್ಲಾ ಬೀಳಿಸಿ ಎಲ್ಲಿಗೆ ಹೋಗುವಿ? ನನ್ನ ಬಾಣಗಳನ್ನು ಸಹಿಸು' ಎಂದು ಶತ್ರುಘ್ನನು ಹೇಳಲು ಸುರಥನು ರಾಮದೇವರನ್ನು ಸ್ಮರಿಸುತ್ತಾ 'ಈಗ ನಿನ್ನನ್ನೂ ಬೀಳಿಸುತ್ತೇನೆ. ರಾಮದೇವರನ್ನು ಸ್ಮರಿಸು. ಅವರು ಬಂದು ನಿನ್ನನ್ನು ರಕ್ಷಿಸಲಿ. ಇಲ್ಲದಿದ್ದರೆ ನನ್ನ ಮುಂದೆ ನಿನಗೆ ಜೀವಿತವು ಸಿಗಲಾರದು' ಎಂದು ಹೇಳಿ ಸಾವಿರ ಬಾಣಗಳನ್ನು ಬಿಟ್ಟನು. ಭಯಂಕರವಾದ ಯುದ್ಧವು ನಡೆಯಿತು.

ಕೊನೆಗೆ ಯೋಗಿನಿಯು ಕೊಟ್ಟ ಮೋಹನಾಸ್ತ್ರವನ್ನು ಶತ್ರುಘ್ನನು ಧನುಸ್ಸಿಗೆ ಜೋಡಿಸಿದನು. ಅದನ್ನು ನೋಡಿ ಸುರಥನು 'ರಾಮದೇವರ ಪಾದಗಳ ಮಹಿಮೆಯಿಂದ ಮೋಹಿತನಾದ ನನಗೆ ಮತ್ತೆ ಯಾವ ಮೋಹಕವೂ ಇರಲಾರದು' ಎಂದು ಹೇಳುತ್ತಿರಲು ಶತ್ರುಘ್ನನು ಆ ಅಸ್ತ್ರವನ್ನು ಬಿಟ್ಟನು. ಸುರಥನು ಅದನ್ನು ಕತ್ತರಿಸಿದನು. ಶತ್ರುಘ್ನನು ಆ ಅಸ್ತ್ರವು ವ್ಯರ್ಥವಾದದ್ದನ್ನು ನೋಡಿ ಅತ್ಯಂತ ಆಶ್ಚರ್ಯವುಳ್ಳವನಾಗಿ ಲವಣಾಸುರನನ್ನು ಸಂಹರಿಸಿದ ಘೋರವಾದ ಬಾಣವನ್ನು ಧನುಸ್ಸಿಗೆ ಜೋಡಿಸಿದನು. ಅದನ್ನು ನೋಡಿ ಸುರಥನು 'ಈ ಬಾಣನು ಆ ಸಜ್ಜನರ ಎದೆಗೆ ತಾಗುತ್ತದೆ. ರಾಮದೇವರ ಭಕ್ತನಾದ ನನಗೆ ಏನನ್ನೂ ಮಾಡಲಾರದು' ಎನ್ನುತ್ತಿರುವಾಗ ಶತ್ರುಘ್ನನು ಅವನ ಎದೆಗೆ ಬಿಟ್ಟನು. ಅದರಿಂದ ಸುರಥನು ದುಃಖವುಳ್ಳವನಾಗಿ ರಥದ ಮಧ್ಯದಲ್ಲಿ ಮೂರ್ಛಿತನಾಗಿ ಬಿದ್ದನು. ಆ ಕ್ಷಣದಲ್ಲೇ ಎದ್ದವನಾಗಿ 'ನನ್ನ ಒಂದು ಪೆಟ್ಟನ್ನು ಸಹಿಸು. ಎಲ್ಲಿಗೆ ಹೋಗುವಿ?' ಎಂದು ಹೇಳಿ ಜ್ವಾಲಾಮಾಲೆಯಿಂದ ಕೂಡಿದ ಭಯಂಕರವಾದ ಬಾಣವನ್ನು ಬಿಟ್ಟನು. ಅದನ್ನು ಮಧ್ಯಮಾರ್ಗದಲ್ಲಿ ಶತ್ರುಘ್ನನು ಕತ್ತರಿಸಿದನು. ಆದರೂ ಆ ಬಾಣದ ಮುಂದಿನ ಭಾಗವು ಬಂದು ಶತ್ರುಘ್ನನ ಎದೆಗೆ ತಾಗಿ ಅವನನ್ನು ಮೂರ್ಛಾಗೊಳಿಸಿತು. ತರುವಾಯ ಸೈನ್ಯವೆಲ್ಲವೂ ಹಾಹಾಕಾರವನ್ನು ಮಾಡುತ್ತಾ ಓಡಿಹೋಯಿತು. ಸುರಥನು ಯುದ್ಧದಲ್ಲಿ ಜಯವನ್ನು ಹೊಂದಿದನು. ಅವನ ಹತ್ತುಮಕ್ಕಳೂ ತಮ್ಮೊಡನೆ ಯುದ್ಧ ಮಾಡುತ್ತಿದ್ದವರನ್ನು ಜಯಿಸಿದರು.



# ಶ್ರೀರಾಮದೇವರ ಪರಮಾನುಗ್ರಹ [1]

ತೆರುವಾಯ ಸುಗ್ರೀವನು ಬಂದು ಸುರಥನೊಡನೆ ಭಯಂಕರವಾದ ಯುದ್ಧವನ್ನು ಮಾಡಿದನು. ಸುರಥನು ಸುಗ್ರೀವನನ್ನು ರಾಮಾಸ್ತ್ರದಿಂದ ಬಂಧಿಸಿದನು. ತರುವಾಯ ಸುರಥನು ಎಲ್ಲರನ್ನೂ ರಥದಲ್ಲಿ ಇಟ್ಟುಕೊಂಡು ತನ್ನ ಪಟ್ಟಣಕ್ಕೆ ಹೋದನು. ಸಭೆಯಲ್ಲಿ ಬದ್ಧರಾಗಿರುವ ಹನುಮಂತದೇವರೊಡನೆ 'ಶ್ರೀರಾಮದೇವರನ್ನು ಸ್ಮರಿಸು. ಅವರು ಬಂದು ಬಿಡಿಸಲಿ. ಇಲ್ಲದಿದ್ದರೆ ಎಷ್ಟು ಸಮಯವಾದರೂ ನಾನು ಬಿಡಲಾರೆನು' ಎಂದು ಹೇಳಿದನು. ಹನುಮಂತದೇವರು ಅತಿಸಮರ್ಥರಾದರು. ಸುರಥನಿಗಿಂತ ಎಷ್ಟೋ ಉತ್ತಮರು. ಸಮರ್ಥರು. ಅವರನ್ನು ಒಂದು ಮಾಡಲಿಕ್ಕೂ ಅವನಿಂದ ಆಗಲಾರದು. ಆದರೂ ತತ್ಕಾಲದಲ್ಲಿ ಅವನಿಗೆ ಕೀರ್ತಿಯನ್ನು ಕೊಡುವುದು ರಾಮದೇವರ ಮನಸ್ಸಿಗೆ ಬಂದಿದೆ ಎಂದು ತಿಳಿದುಕೊಂಡೇ ತನ್ನ ಇಚ್ಛೆಯಿಂದಲೇ ಬದ್ಧರಾದಂತೆ ಇದ್ದವರು ಶ್ರೀರಾಮದೇವರನ್ನು ವಿಶೇಷವಾಗಿ ಸ್ತೋತ್ರಮಾಡಿದರು. ಆಗಲೇ ಶ್ರೀರಾಮದೇವರು ಅಲ್ಲಿಗೆ ಬಂದು ಸೇರಿದರು.

ಶ್ರೀರಾಮದೇವರನ್ನು ನೋಡಿ ಸುರಥನು ಪುನಃ ಪುನಃ ನೂರಾರು ನಮಸ್ಕಾರಗಳನ್ನು ಮಾಡಿದನು. ಶ್ರೀರಾಮದೇವರು ಅವನನ್ನು ತನ್ನ ಕೈಗಳಿಂದ ಆಲಿಂಗನ ಮಾಡಿದರು. ಸಂತೋಷದಿಂದ ಆನಂದಬಾಷ್ಪದಿಂದ ಅವನ ತಲೆಗೆ ಅಭಿಷೇಕಮಾಡಿದರು. 'ನೀನು ಪರಮಧನ್ಯನಾಗಿರುವಿ. ಕಪಿಶ್ರೇಷ್ಠನಾದ ಹನುಮಂತ ನನ್ನು ಕಟ್ಟಿಹಾಕಿರಿ. ಮಹಾಕಾರ್ಯವನ್ನು ಮಾಡಿರಿ' ಎಂದು ಹೇಳಿದರು. ಹನುಮಂತ ದೇವರನ್ನು ಬಿಡಿಸಿದರು. ಮೂರ್ಛಿತರಾದ ಎಲ್ಲರನ್ನೂ ಕೃಪಾದೃಷ್ಟಿಯಿಂದ ಬದುಕಿಸಿ ದರು. ಎಲ್ಲರೂ ಮೂರ್ಛೆಯಿಂದ ಎಚ್ಚತ್ತು ರಾಮದೇವರನ್ನು ನೋಡಿದರು. ಎಲ್ಲರೂ ರಾಮದೇವರಿಗೆ ನಮಸ್ಕರಿಸಿದರು. ರಾಮದೇವರು ಎಲ್ಲರಿಗೂ ಕುಶಲಪ್ರಶ್ನೆಯನ್ನು ಮಾಡಿದರು. ಎಲ್ಲರೂ ಸುಖವುಳ್ಳವರಾದರು.

ಸುರಥನು ಶ್ರೀರಾಮದೇವರನ್ನು ನೋಡಿ ಸಕಲ ರಾಜ್ಯವನ್ನು ಕುದುರೆಯನ್ನೂ ಅವರಿಗೆ ಸಮರ್ಪಿಸಿದರು. ಅನೇಕ ಪೂಜೆಗಳಿಂದ ರಾಮದೇವರನ್ನು ಸಂತೋಷ ಪಡಿಸಿದನು. ರಾಮದೇವರು ರಾಜನೊಡನೆ 'ಯುದ್ಧಮಾಡುವುದು ಕ್ಷತ್ರಿಯರ ಧರ್ಮವು. ನೀನು ಧರ್ಮವನ್ನೇ ಮಾಡಿರುವಿ' ಎಂದು ಹೇಳಿದರು. ಮಕ್ಕಳಿಂದ ಸಹಿತನಾದ ಸುರಥನಿಂದ ಪೂಜಿತರಾಗಿ ರಾಮದೇವರು ಮೂರುದಿವಸವಿದ್ದು

1. ಪ.ಪ್ರ.ಪಾ.ಖಂ. ಅ–53

ಆಮೇಲೆ ಹೋಗಿ ಬರುತ್ತೇನೆ ಎಂದು ಹೇಳಿ ಇಚ್ಛಾನುಸಾರವಾಗಿ ಸಂಚರಿಸುವ ವಿಮಾನದಲ್ಲಿ ಕೂತುಕೊಂಡು ಮುನಿಗಳಿಂದ ಸಹಿತರಾಗಿ ಹೊರಟುಹೋದರು. ಅವರನ್ನು ನೋಡಿ ಎಲ್ಲರೂ ಆಶ್ಚರ್ಯಪಡುತ್ತಾ ಅವರ ಕಥೆಯನ್ನೇ ಹೇಳಿಕೊಂಡರು. ತರುವಾಯ ಬಲಿಷ್ಠನಾದ ಸುರಥನು ಚಂಪಕನನ್ನು ರಾಜ್ಯದಲ್ಲಿ ಇಟ್ಟು ಶತ್ರುಘ್ನನ ಒಟ್ಟಿಗೆ ಕುದುರೆಯ ಹಿಂದೆ ಹೋಗಲಿಕ್ಕೆ ಅಭಿಪ್ರಾಯಪಟ್ಟನು. ಶತ್ರುಘ್ನನು ಕುದುರೆಯನ್ನು ಹೊಂದಿ ಭೇರೀಘೋಷವನ್ನು ಮಾಡಿಸಿದನು. ಕುದುರೆಯನ್ನು ಮುಂದೆ ಬಿಟ್ಟನು. ಹಿಂದಿನಿಂದ ಸುರಥನೊಡನೆ ಸಂಚರಿಸಿದನು. ಕುದುರೆಯು ಬಹುಸ್ಥಳಗಳಲ್ಲಿ ಸಂಚರಿಸುತ್ತಾ ಗಂಗಾತೀರದಲ್ಲಿ ಇರುವ ವಾಲ್ಮೀಕಿ ಋಷಿಗಳ ಆಶ್ರಮಕ್ಕೆ ಹೋಯಿತು.



## ಲವನು ಕುದುರೆಯನ್ನು ಕಟ್ಟಿದ್ದು [1]

ಪ್ರಾತಃಕಾಲದಲ್ಲಿ ಸೀತಾದೇವಿಯರ ಮಗನಾದ ಲವನು ಅಗ್ನಿಕಾರ್ಯ ಇತ್ಯಾದಿ ಕಾರ್ಯಗಳಿಗೆ ಉಪಯುಕ್ತವಾದ ಸಮಿಧೆ ಮೊದಲಾದದ್ದನ್ನು ತರಲಿಕ್ಕಾಗಿ ಮುನಿಪುತ್ರರಿಂದ ಕೂಡಿಕೊಂಡು ಹೋಗಿದ್ದನು. ಅಲ್ಲಿ ಹಣೆಯಲ್ಲಿ ಬಂಗಾರದ ಪತ್ರದಿಂದ ಶೋಭಿಸಿರುವ ಕುಕುಮ ಕೇಸರಿಗಂಧ ಕಸ್ತೂರಿ ಇತ್ಯಾದಿಗಳಿಂದ ಸುವಾಸನೆಯಿಂದ ಕೂಡಿರುವ ಕುದುರೆಯನ್ನು ನೋಡಿದನು. ನೋಡಿ ಆಶ್ಚರ್ಯವುಳ್ಳವನಾಗಿ ಮುನಿಪುತ್ರರೊಡನೆ 'ಮನೋವೇಗವುಳ್ಳ ಈ ಕುದುರೆಯು ನಮ್ಮ ಆಶ್ರಮಕ್ಕೆ ದೈವೇಚ್ಛೆಯಿಂದ ಬಂದಿರುವುದು. ಇದು ಯಾರದ್ದಾಗಿರಬಹುದು. ಬನ್ನಿರಿ. ನೋಡುವ. ಭಯಪಡಬೇಡಿರಿ ನಾನಿದ್ದೇನೆ' ಎಂದು ಹೇಳಿ ಆ ಕುದುರೆಯ ಸಮೀಪಕ್ಕೆ ಹೋದನು. ಮುನಿಪುತ್ರರಿಂದ ಸಹಿತನಾಗಿ ಕುದುರೆಯ ಬಳಿಗೆ ಹೋಗಿ ಹಣೆಯಲ್ಲಿ ಇದ್ದ ಪತ್ರವನ್ನು ಓದಿದನು.

'ಸೂರ್ಯವಂಶವು ಸರ್ವಲೋಕ ಪ್ರಸಿದ್ಧವಾದದ್ದು. ಆ ವಂಶದಲ್ಲಿ ಯಾರೊಬ್ಬರೂ ಇನ್ನೊಬ್ಬರನ್ನು ಪೀಡಿಸುವವರಿಲ್ಲ. ಇನ್ನೊಬ್ಬರ ಹಣವನ್ನು ಆಸೆಪಡುವವರೂ ಇಲ್ಲ. ಅಂತಹ ವಂಶದಲ್ಲಿ ಧ್ವಜದಂತೆ ಶ್ರೇಷ್ಠವಾದ ದಶರಥರಾಜನು. ಅವನನ್ನು ಎಲ್ಲಾ ದೇವತೆಗಳೂ ಅಸುರರೂ ಸತ್ಕರಿಸುವರು. ಆ

1. ಪ.ಪ್ರ.ಪಾ.ಖಂ. ಅ–54

ರಾಜನ ಮಗನಾದ ವೀರರ ಬಲದರ್ಪವನ್ನು ಅಪಹರಿಸುವ ಸರ್ವಶೂರರಲ್ಲಿಯೂ ಶ್ರೇಷ್ಠನಾದ ಕೋಸಲದೇಶದ ರಾಜನ ಪುತ್ರಿಯಾದ ಕೌಸಲ್ಯಾ ದೇವಿಯ ಉದರದಿಂದ ಬಂದಿರುವ ರತ್ನವಾದ ಶತ್ರುಗಳನ್ನು ನಾಶಮಾಡುವವನಾದ ರಾಮಚಂದ್ರನು ಬ್ರಾಹ್ಮಣರಿಂದ ಸುಶಿಕ್ಷಿತನಾದ ಅಶ್ವಮೇಧಯಾಗವನ್ನು ಮಾಡುತ್ತಿರುವನು. ರಾವಣ ಎಂದು ಹೆಸರುಳ್ಳ ಬ್ರಾಹ್ಮಣನ ಸಂಹಾರದಿಂದ ಉಂಟಾದ ಪಾಪದ ಪರಿಹಾರಕ್ಕಾಗಿ ಈ ಯಾಗವನ್ನು ಮಾಡುತ್ತಿರುವುದು ಆ ರಾಮನು ಈ ಯಾಗದ ಕುದುರೆಯನ್ನು ಬಿಟ್ಟಿರುವನು. ಈ ಕುದುರೆಯು ಬಹುಸೈನ್ಯ ಸಹಿತವಾಗಿ ಬರುತ್ತಿರುವುದು. ಈ ಕುದುರೆಯನ್ನು ರಕ್ಷಿಸಲಿಕ್ಕೆ ನನ್ನ ತಮ್ಮನಾದ ಲವಣಾಸುರನನ್ನು ಸಂಹರಿಸಿದವನಾದ ಶತ್ರುಘ್ನನು ಚತುರಂಗ ಸೈನ್ಯಸಹಿತನಾಗಿ ಬರುತ್ತಿರುವನು. ಯಾವ ರಾಜನಿಗೆ ನಾವು ಪರಾಕ್ರಮಶಾಲಿಗಳೆಂಬ ಅಭಿಮಾನವಿರುವುದೋ ಅವರು ಈ ಕುದುರೆಯನ್ನು ಕಟ್ಟಿಹಾಕಲಿ. ನನ್ನ ತಮ್ಮನಾದ ಶತ್ರುಘ್ನನು ತನ್ನ ಬಾಣಗಳಿಂದ ಅನಾಯಾಸದಿಂದ ಬಿಡಿಸಿಕೊಂಡು ಬರುವನು. ಯಾರು ಕ್ಷತ್ರಿಯ ಕನ್ಯೆಯರಲ್ಲಿ ಹುಟ್ಟಿದ ಉತ್ತಮವಂಶದಲ್ಲಿ ಹುಟ್ಟಿದ ರಾಜರಿರುವರೋ ಅವರು ಆ ಕುದುರೆಯನ್ನು ಕಟ್ಟಲಿ. ಹಾಗೆ ಇಲ್ಲದೆ ಇದ್ದವರು ತಮ್ಮ ರಾಜ್ಯವನ್ನು ಶತ್ರುಘ್ನನಿಗೆ ಒಪ್ಪಿಸಿ ನಮಸ್ಕಾರ ಮಾಡಲಿ' ಎಂದು ಆ ಪತ್ರದಲ್ಲಿ ಬರೆದಿದ್ದ ವಿಷಯವನ್ನು ನೋಡಿ ಲವನು ರೋಷದಿದಂದ ಗದ್ಗದ ಸ್ವರವುಳ್ಳವನಾಗಿ ಮುನಿಪುತ್ರರೊಡನೆ,

'ನೋಡಿದಿರಾ ಈ ಕ್ಷತ್ರಿಯನ ಧೈರ್ಯವನ್ನು ಈ ಕುದುರೆಯ ಹಣೆಯಲ್ಲಿ ಏನಾಗಿ ತನ್ನ ಪ್ರತಾಪವನ್ನು ಬರೆದುಕೊಂಡಿರುವನು? ರಾಮನು ಯಾರು? ಈ ಕೀಟದಂತೆ ಇರುವ ಶತ್ರುಘ್ನನು ಯಾರು? ಅವರು ಮಾತ್ರ ಕ್ಷತ್ರಿಯ ಕುಲದಲ್ಲಿ ಹುಟ್ಟಿದವರೋ? ನಾವು ಉತ್ತಮ ಕ್ಷತ್ರಿಯವಂಶದಲ್ಲಿ ಜನಿಸಿಲ್ಲವೋ? ರಾಮನ ತಾಯಿಯು ಮಾತ್ರ ವೀರನಾದ ಮಗನನ್ನು ಹಡೆದವಳೋ? ನನ್ನ ಅಣ್ಣನಾದ ಕುಶನನ್ನು ಹಡೆದ ತಾಯಿಯು ವೀರನನ್ನು ಹಡೆದವಳಲ್ಲವೇ? ಈಗ ಕ್ಷತ್ರಿಯ ಸಾಮರ್ಥ್ಯವನ್ನು ತೋರಿಸುತ್ತೇನೆ. ಆ ಶತ್ರುಘ್ನನು ಕ್ಷತ್ರಿಯನ ಮಗನಾಗಿದ್ದರೆ ನಾನು ಕಟ್ಟಿಹಾಕುವ ಈ ಕುದುರೆಯನ್ನು ಬಿಡಿಸಿಕೊಂಡು ಹೋಗಲಿ ಇಲ್ಲದಿದ್ದರೆ ಕ್ಷತ್ರಿಯಧರ್ಮವನ್ನು ಬಿಟ್ಟು ನನ್ನ ಅಣ್ಣನಾದ ಕುಶನ ಕಾಲಿಗೆ ಬೀಳಲಿ. ಬಂದರೆ ನನ್ನ ಧನುಸ್ಸಿನಿಂದ ಬಿಡಲ್ಪಟ್ಟ ಬಾಣಗಳಿಂದ ಭೂಮಿಯಲ್ಲಿ ಮಲಗುವನು' ಇತ್ಯಾದಿ ಮಾತುಗಳನ್ನು ಹೇಳುತ್ತಾ ಲವನು ಆ ಕುದುರೆಯನ್ನು ಕಟ್ಟಿದನು. ಆಗ

1. ಪ.ಪು.ಪಾ.ಖಂ. ಅ–60

ಮುನಿಪುತ್ರರೆಲ್ಲರೂ 'ಲವ! ರಾಮನು ಅಯೋಧ್ಯೆಯ ರಾಜನು. ಮಹಾ ಬಲಪರಾಕ್ರಮವುಳ್ಳವನು. ಅವನ ಕುದುರೆಯನ್ನು ದೇವೇಂದ್ರನೂ ಹಿಡಿಯಲಾರನು. ಕುದುರೆಯನ್ನು ಹಿಡಿಯಬೇಡ. ನಮ್ಮ ಹಿತಕರ ವಾದ ಮಾತನ್ನು ಕೇಳು' ಎಂದು ಹೇಳಿದರು. ಅದನ್ನು ಕೇಳಿ ಲವನು 'ನಿಮಗೆ ಕ್ಷತ್ರಿಯರ ಬಲವು ತಿಳಿಯಲಾರದು. ಕ್ಷತ್ರಿಯರು ಮಹಾಪರಾಕ್ರಮಶಾಲಿಗಳು. ಬ್ರಾಹ್ಮಣರು ಭೋಜನ ಮಾಡುವವರು. ನೀವು ಮನೆಗೆ ಹೋಗಿ ತಾಯಿಯು ಹಾಕಿದ ಅನ್ನವನ್ನು ಭೋಜನಮಾಡಿರಿ' ಎಂದು ಹೇಳಿದನು. ಅದನ್ನು ಕೇಳಿ ಮುನಿಕುಮಾರರು ಸುಮ್ಮನೆ ಆದರು. ಅವನ ಪರಾಕ್ರಮವನ್ನು ನೋಡುತ್ತಾ ಇದ್ದರು. ದೂರದಲ್ಲಿಯೇ ನಿಂತುಕೊಂಡರು. ಈ ಸಂದರ್ಭದಲ್ಲಿ ಶತ್ರುಘ್ನನ ಸೇವಕರು ಬಂದರು. ಕಟ್ಟಿಹಾಕಿ ರುವ ಕುದುರೆಯನ್ನು ನೋಡಿ ಲವನೊಡನೆ 'ಈ ಕುದುರೆಯನ್ನು ಯಾವ ಮದವುಳ್ಳವನು ಕಟ್ಟಿಹಾಕಿದನು. ಯಾರ ಮೇಲೆ ಯಮದೇವರು ಕೋಪಿಸಿ ಕೊಂಡಿರುವರು? ಯಾರು ಬಾಣಗಳನ್ನು ಮಧ್ಯದಲ್ಲಿ ಸಿಕ್ಕಿಕೊಂಡು ಪರಮವ್ಯಥೆ ಯನ್ನು ಹೊಂದುವನು?' ಎಂದು ಕೇಳಿದರು.

ಆಗ ಲವನು 'ನಾನು ಈ ಉತ್ತಮವಾದ ಕುದುರೆಯನ್ನು ಕಟ್ಟಿಹಾಕಿರುವೆನು. ಇದನ್ನು ಯಾರು ಬಿಡಿಸಲಿಕ್ಕೆ ಬರುವರೋ ಅವನ ಮೇಲೆ ನನ್ನ ಅಣ್ಣ ಕುಶನು ಕೋಪಿಸಿಕೊಳ್ಳುವನು. ಯಮನು ತಾನೇ ಇಲ್ಲಿಗೆ ಬಂದರೂ ಏನು ಮಾಡುವನು? ನಮ್ಮ ಬಾಣಗಳ ಮಳೆಯಿಂದ ಸಂತೋಷಪಟ್ಟು ನಮಸ್ಕಾರಮಾಡಿ ಹೋಗುವನು' ಎಂದು ಹೇಳಿದನು. ಅದನ್ನು ಕೇಳಿ ಸೈನಿಕರು ಇವನು ಚಿಕ್ಕಹುಡುಗನು ಎಂದು ಹೇಳುತ್ತಾ ಕುದುರೆಯನ್ನು ಲವನಿಂದ ಬಿಡಿಸಿಕೊಳ್ಳಲಿಕ್ಕೆ ಬಂದರು. ಶತ್ರುಘ್ನನ ಸೇವಕರು ಕುದುರೆಯ ಬಳಿಗೆ ಬಂದದ್ದನ್ನು ನೋಡಿ ಲವನು ಧನುಸ್ಸನ್ನು ಬಗ್ಗಿಸಿ ಬಾಣಗಳನ್ನು ಬಿಟ್ಟನು. ಇದರಿಂದ ಸೇವಕರೆಲ್ಲರೂ ಕತ್ತರಿಸಿಹೋದ ಕೈಯುಳ್ಳವರಾಗಿ ಶತ್ರುಘ್ನನ ಬಳಿಗೆ ಹೋದರು. ಅಲ್ಲಿ ಶತ್ರುಘ್ನನು ಪ್ರಶ್ನೆ ಮಾಡಲು ನಡೆದ ವಿಷಯವನ್ನೆಲ್ಲಾ ತಿಳಿಸಿದರು.



# ಕಾಲಜಿತ್ ಮೃತನಾದದ್ದು [1]

ಶತ್ರುಘ್ನನು ತನ್ನ ವೀರರ ಕೈಗಳನ್ನು ಕತ್ತರಿಸಿದ್ದನ್ನು ನೋಡಿ ಕೋಪವುಳ್ಳವನಾಗಿ ರೋಷದಿಂದ ತುಟಿಯನ್ನು ಕಚ್ಚಿಕೊಂಡು 'ಯಾವ ವೀರನು ನಿಮ್ಮ ಕೈಗಳನ್ನು ಕತ್ತರಿಸಿದನು? ಅವನ ಕೈಗಳನ್ನು ನಾನು ಕತ್ತರಿಸುವೆನು. ಆ ಮಹಾಮೂಢನು ಮಹತ್ತಾದ ರಾಮದೇವರ ಬಲವನ್ನು ತಿಳಿಯದೆ ಇದ್ದಾನೆ. ಈಗ ಅವನಿಗೆ ಬಲವನ್ನು ತೋರಿಸುವೆನು. ಆ ವೀರನು ಎಲ್ಲಿ ಇರುವನು? ಆ ಕುದುರೆಯು ಈಗ ಎಲ್ಲಿರುವುದು? ಯಾವ ಮೂಢನು ಆ ಕುದುರೆಯನ್ನು ಹಿಡಿದನು' ಎಂದು ಕೇಳಿದನು. ಆಗ ಆ ವೀರರು ಅತ್ಯಂತ ಆಶ್ಚರ್ಯಪಡುತ್ತಾ ರಾಮದೇವರಂತೆಯೇ ಕಾಣಿಸುವ ಬಾಲಕನು ಕುದುರೆಯನ್ನು ಕಟ್ಟಿಹಾಕಿದನು ಎಂದು ಹೇಳಿದರು.

ಈರೀತಿಯಾಗಿ ಬಾಲಕನು ಕುದುರೆಯನ್ನು ಕಟ್ಟಿರುವನು ಎಂಬುದನ್ನು ಕೇಳಿ ಶತ್ರುಘ್ನನು ಕೋಪವುಳ್ಳವನಾಗಿ ಕಾಲಜಿತ್ ಎಂದು ಹೆಸರುಳ್ಳ ಸೇನಾಪತಿಯೊಡನೆ 'ಸೇನಾಪತಿಯೇ! ನನ್ನ ಆಜ್ಞೆಯಿಂದ ಸೈನ್ಯವನ್ನೆಲ್ಲಾ ವ್ಯೂಹವಾಗಿ ರಚಿಸು. ಮಹಾಬಲಪರಾಕ್ರಮಶಾಲಿಯಾದ ಶತ್ರುವಿನೊಡನೆ ಯುದ್ಧಕ್ಕೆ ಹೋಗಬೇಕು. ಕುದುರೆಯನ್ನು ಕಟ್ಟಿದವನು ಕೇವಲ ಬಾಲಕನಲ್ಲ. ಹರಿಯೇ ಆಗಿರಬಹುದು. ಅಥವಾ ಶಿವನಾಗಿರಬಹುದು. ಅವಶ್ಯವಾಗಿ ಮಹಾಯುದ್ಧವು ನಡೆಯುವುದು. ಅಲ್ಲಿಗೆ ನಾವೆಲ್ಲರೂ ಹೋಗಬೇಕು' ಎಂದು ಹೇಳಿ ಸೈನ್ಯಕ್ಕೆ ಯುದ್ಧಕ್ಕೆ ಹೋಗಲಿಕ್ಕೆ ಆಜ್ಞಾಪಿಸಿದನು. ಚತುರಂಗ ಸೈನ್ಯವು ಭೂಮಿಯನ್ನೇ ನಡುಗಿಸುತ್ತಾ ಹೋಯಿತು. ಸೇನಾಪತಿಯು ಹೋಗಿ ರಾಮದೇವರಂತೆಯೇ ಕಾಣಿಸುವ ಸುಂದರನಾದದ ಬಾಲಕನಾದ ಲವನೊಡನೆ 'ಬಾಲಕನೇ! ಮಹಾಬಲಶಾಲಿಗಳಾದ ರಾಮದೇವರ ಕುದುರೆಯನ್ನು ಬಿಟ್ಟುಬಿಡು. ನಾನು ರಾಮದೇವರ ಸೇನಾಪತಿಯು ನನ್ನ ಹೆಸರು ಕಾಲಜಿತ್ ಎಂದು ನಿನಗೆ ಹಿತವನ್ನು ಹೇಳುವೆನು. ರಾಮದೇವರಂತೆ ಕಾಣಿಸುತ್ತಿರುವ ನಿನ್ನನ್ನು ನೋಡಿ ನನಗೆ ದಯೆಯುಂಟಾಗಿದೆ. ಕುದುರೆಯನ್ನು ಬಿಡದೆ ಇದ್ದರೆ ನೀನು ಜೀವದಿಂದ ಇರುವುದು ಅಶಕ್ಯವಾಗುವುದು' ಎಂದು ಹೇಳಿದನು. ಆ ಮಾತನ್ನು ಕೇಳಿ ಲವನು ನಗುವವನಾದನು. ಆಮೇಲೆ ಸ್ವಲ್ಪ ಕೋಪದಿಂದ 'ಹೋಗು. ನಾನು ನಿನ್ನನ್ನು ಬಿಟ್ಟಿರುವೆನು. ರಾಮನ ಹತ್ತಿರ ಹೋಗಿ ನಾನು ಕುದುರೆಯನ್ನು ಕಟ್ಟಿರುವೆನೆಂದು ಹೇಳು. ನಿನ್ನಿಂದ ನಾನು ಭಯಪಡುವುದಿಲ್ಲ. ನನಗೆ ನಿನ್ನ ಲಕ್ಷವೇ ಇಲ್ಲ. ನಿನ್ನಂತೆ

1. ಪ.ಪು.ಪಾ.ಖಂ. ಅ–60

ಇರುವವರು ಕೋಟಿ ಜನರಿರುವರು. ನನ್ನ ತಾಯಿಯ ಪಾದದ ಅನುಗ್ರಹದಿಂದ ನೀವೆಲ್ಲರೂ ಹತ್ತಿಯಂತೆ ಇರುವವರು. ನಿನಗೆ ಕಾಲಜಿತ್ ಎಂದು ಹೆಸರು. ಕೇವಲ ಅರ್ಥಹೀನವಾದದ್ದು. ಈಗ ನಿನ್ನ ಪರಾಕ್ರಮವನ್ನು ತೋರಿಸು. ನಿನ್ನ ಹೆಸರನ್ನು ಸಾರ್ಥಕವನ್ನಾಗಿ ಮಾಡು' ಎಂದು ಹೇಳಿದನು.

ಆಗ ಅವನು ಕೋಪಿಸಿಕೊಂಡನು. 'ನಿನ್ನ ಹೆಸರು ತಿಳಿಯಲಿಲ್ಲ. ಕುಲಶೀಲ, ವಯಸ್ಸೂ ಒಂದೂ ತಿಳಿಯಲಿಲ್ಲ. ನೀನು ನೆಲದ ಮೇಲೆ ನಿಂತಿರುವಿ. ನಾನು ರಥದಲ್ಲಿ ಕೂತುಕೊಂಡು ಹೇಗೆ ಯುದ್ಧವನ್ನು ಮಾಡಲಿ. ಅಧರ್ಮವಷ್ಟೆ!' ಎಂದು ಹೇಳಿದನು. ಆಗ ಲವನು ಕೋಪವುಳ್ಳವನಾಗಿ 'ನಿನಗೆ ಕುಲ, ಶೀಲ, ಹೆಸರು ಏನು ಬೇಕಾಗಿದೆ? ನಾನು ಲವನು. ಒಂದು ಕ್ಷಣದಲ್ಲಿಯೇ ಎಲ್ಲಾ ಭಟರನ್ನು ಜಯಿಸುವೆನು. ಈಗಲೇ ನಿನ್ನನ್ನೂ ನೆಲದಲ್ಲಿ ನಿಂತಿರುವಂತೆ ಮಾಡುತ್ತೇನೆ' ಎಂದು ಹೇಳಿ ಧನುಸ್ಸಿಗೆ ಹಗ್ಗವನ್ನು ಬಿಗಿದು ಶಬ್ದಮಾಡಿದನು. ಮೊದಲು ವಾಲ್ಮೀಕಿ ಋಷಿಗಳನ್ನು ಸ್ಮರಿಸಿ ಆಮೇಲೆ ಸೀತಾದೇವಿಯರನ್ನೂ, ಆಮೇಲೆ ಅಣ್ಣನಾದ ಕುಶನನ್ನು ಸ್ಮರಿಸಿಕೊಂಡು ತೀಕ್ಷ್ಣ ಬಾಣಗಳನ್ನು ಬಿಟ್ಟನು. ಕಾಲಜಿತ್ ಕೋಪದಿಂದ ಲವನಿಗೆ ಬಾಣಗಳನ್ನು ಬಿಟ್ಟನು. ಲವನು ಸೇನಾಪತಿಯ ರಥವನ್ನು ಪುಡಿಮಾಡಿದನು. ಆಗ ಸೇನಾಪತಿಯು ಮದಭರಿತವಾದ ಆನೆಯ ಮೇಲೆ ಕೂತುಕೊಂಡು ಯುದ್ಧಕ್ಕೆ ಬಂದನು. ಲವನು ಸ್ವಲ್ಪ ಹೊತ್ತು ಯುದ್ಧಮಾಡಿ ಆನೆಯ ಸೊಂಡಿಲನ್ನು ಕತ್ತರಿಸಿ ಅದರ ದಂತಗಳ ಮೇಲೆ ಕಾಲಿಟ್ಟು ಆನೆಯ ಮೇಲೆ ಹತ್ತಿ ಹೋಗಿ ಸೇನಾಪತಿಯ ಕಿರೀಟವನ್ನು ಪುಡಿಮಾಡಿ ಕವಚವನ್ನು ಸೀಳಿ ತಲೆಯ ಕೂದಲನ್ನು ಹಿಡಿದು ಸೆಳೆದು ಭೂಮಿಯಲ್ಲಿ ಬೀಳಿಸಿದನು. ಸೇನಾಪತಿಯು ಕೋಪದಿಂದ ಲವನ ಎದೆಗೆ ಬಡಿದನು. ಕೊನೆಗೆ ಖಡ್ಗವನ್ನು ಹಿಡಿದುಕೊಂಡು ಬಂದ ಅವನ ಖಡ್ಗ ಸಹಿತವಾದ ಕೈಯನ್ನು ಕತ್ತರಿಸಿದನು. ಸೇನಾಪತಿಯು ಕೋಪದಿಂದ ಎಡಕೈಯಿಂದ ಗದೆಯಿಂದ ಒಡೆಯಲಿಕ್ಕೆ ಬಂದನು. ಲವನು ತೀಕ್ಷ್ಣಬಾಣಗಳಿಂದ ಅವನ ಎಡಕೈಯನ್ನೂ ಕತ್ತರಿಸಿದನು. ಆಗ ಸೇನಾಪತಿಯು ಕೋಪಿಸಿಕೊಂಡು ಪಾದಗಳಿಂದ ಒದೆಯಲಿಕ್ಕೆ ಬಂದನು. ಆಗ ಅವನ ಕಾಲುಗಳನ್ನೂ ಕತ್ತರಿಸಿದನು. ತರುವಾಯ ಅವನು ತನ್ನ ತಲೆಯಿಂದ ಒಡೆಯಲಿಕ್ಕೆ ಆರಂಭಿಸಿದನು. ತರುವಾಯ ಲವನು ಸೇನಾಪತಿಯನ್ನು ಅತಿಪರಾಕ್ರಮಶಾಲಿಯೆಂದು ತಿಳಿದುಕೊಂಡು ಖಡ್ಗವನ್ನು ತೆಗೆದು ಅವನ ತಲೆಯನ್ನು ಕತ್ತರಿಸಿದನು. ಸೇನಾಪತಿಯು ಸಾಯಲು ಹಾಹಾಕಾರವುಂಟಾಯಿತು. ಸೈನಿಕರೆಲ್ಲರೂ ಕೋಪಿಸಿಕೊಂಡು ಲವನನ್ನು ಕೊಲ್ಲಲಿಕ್ಕೆ ಬಂದರು. ಅವರೆಲ್ಲರನ್ನೂ ಬಾಣಗಳಿಂದ

ಓಡಿಸಿದನು. ಅನೇಕರು ಸತ್ತರು. ಭಿನ್ನಭಿನ್ನವಾದ ಅಂಗವುಳ್ಳವರಾದರು. ಕೆಲವರ ಕೈಮುರಿದು ಹೋಯಿತು. ಕಾಲು ಮುರಿದುಹೋಯಿತು. ಯುದ್ಧರಂಗದಲ್ಲಿ ಹೆಣಗಳು ತುಂಬಿಹೋದವು. ಉಳಿದವರು ಓಡಿಹೋದರು.

ಲವನು ಎಲ್ಲರನ್ನೂ ಜಯಿಸಿ ಇನ್ನು ಯಾರು ಬರುವರೆಂದು ನಿರೀಕ್ಷಿಸುತ್ತಾ ಇದ್ದನು. ಉಳಿದ ಸೈನಿಕರು ಶತ್ರುಘ್ನನ ಬಳಿಗೆ ಹೋಗಿ ನಡೆದ ವಿಷಯವನ್ನೆಲ್ಲಾ ಹೇಳಿದರು. ಅದನ್ನು ಕೇಳಿ ಶತ್ರುಘ್ನನು ಆಶ್ಚರ್ಯವುಳ್ಳವನಾದನು. ನಗುವವನಾದನು. ರೋಷದಿಂದ ಹಲ್ಲು ಕಡಿಯುತ್ತಾ 'ವೀರರೇ! ಏನಾಯಿತು? ನೀವು ಸರಿಯಾಗಿ ಯುದ್ಧ ಮಾಡಲಿಲ್ಲವೋ? ಕಾಲಜಿತ್‌ಗೆ ಹೇಗೆ ಮರಣವುಂಟಾಯಿತು? ಅವನು ಯುದ್ಧದಲ್ಲಿ ಭಯಂಕರನಾಗಿದ್ದನು. ಯಮದೇವರನ್ನೂ ಜಯಿಸುವವನಂತೆ ಇದ್ದನು. ಚಿಕ್ಕಬಾಲಕನು ಅವನನ್ನು ಹೇಗೆ ಸಂಹರಿಸಿದನು?' ಎಂದು ಕೇಳಿದನು. ಅದಕ್ಕೆ ಸೈನಿಕರು ನಾವು ಸರಿಯಾಗಿಯೇ ಯುದ್ಧವನ್ನು ಮಾಡಿರುವೆವು. ಕಾಲಜಿತ್ ಲವ ಎಂಬ ಬಾಲಕನಿಂದ ನಿಜವಾಗಿಯೂ ಸಾಯುವವನಾದನು. ಆ ಬಾಲಕನು ಸೈನ್ಯವನ್ನೆಲ್ಲಾ ನಾಶಮಾಡಿರುವನು. ಇನ್ನು ಮುಂದೆ ಏನು ಮಾಡಬೇಕೋ ಅದನ್ನು ನೀನೇ ಮಾಡಬೇಕು. ಚಿಕ್ಕಹುಡುಗನೆಂದು ತಿಳಿದುಕೊಂಡು ಸಾಹಸವನ್ನು ಮಾಡಬಾರದು' ಎಂದು ಹೇಳಿದರು.



## ಲವ ಪುಷ್ಕಲರ ಯುದ್ಧ [1]

ಶತ್ರುಘ್ನನು ಸುಮತಿಯೊಡನೆ 'ಮಂತ್ರಿಯೇ! ನಮ್ಮ ಕುದುರೆಯನ್ನು ಕಟ್ಟಿದ ಬಾಲನು ಯಾರೆಂದು ನೀನು ತಿಳಿದಿರುವಿಯಾ? ಅವನು ಸಮುದ್ರದಂತೆ ಇದ್ದ ನಮ್ಮ ಸೈನ್ಯವೆಲ್ಲವನ್ನೂ ನಾಶಮಾಡಿದನಲ್ಲಾ!' ಎಂದು ಹೇಳಿದನು. ಅದನ್ನು ಕೇಳಿ ಸುಮತಿಯು 'ಸ್ವಾಮಿನ್! ಇದು ವಾಲ್ಮೀಕಿಋಷಿಗಳ ಆಶ್ರಮವು. ಇಲ್ಲಿ ಕ್ಷತ್ರಿಯರ ವಾಸವು ಇಲ್ಲವೇ ಇಲ್ಲ. ಇಂದ್ರದೇವರೋ ಅಥವಾ ರುದ್ರದೇವರೋ ಕುದುರೆಯನ್ನು ಅಪಹರಿಸಿರಬೇಕು. ಇಲ್ಲದಿದ್ದರೆ ಮತ್ತೆ ಯಾರು ಅಪಹರಿಸುವರು? ಅಂತಹ ಮಹಾಸಮರ್ಥನಾದ ಕಾಲಜಿತ್ ಮರಣವನ್ನು ಹೊಂದಿದನು. ಅಂತಹ ಬಾಲಕನೊಡನೆ ಪುಷ್ಕಲನನ್ನು ಹೊರತು ಯಾರು ಹೋಗಲಿಕ್ಕೆ ಸಮರ್ಥನು?

---

1. ಪ.ಪು.ಪಾ.ಖಂ. ಅ–60

ನೀನೂ ಎಲ್ಲಾ ವೀರರಿಂದ ಸಹಿತನಾಗಿ ಅಲ್ಲಿಗೆ ಹೋಗು. ಅವನನ್ನು ಕೊಲ್ಲದೆ ಬದುಕಿರುವಂತೆ ಬಂಧಿಸಿ ರಾಮದೇವರ ಬಳಿಗೆ ತೆಗೆದುಕೊಂಡು ತೋರಿಸು' ಎಂದು ಹೇಳಲು ಶತ್ರುಘ್ನನು ಎಲ್ಲರಿಗೂ ಆಜ್ಞಾಮಾಡಿದನು. ಅವರೆಲ್ಲರೂ ಲವನಿದ್ದಲ್ಲಿಗೆ ಹೋದರು. ಬಂದಿರುವ ವೀರರಿಂದ ಕೂಡಿದ ಸೈನ್ಯವನ್ನು ನೋಡಿ ಲವನು ಸ್ವಲ್ಪವೂ ಭಯವನ್ನು ಹೊಂದಲಿಲ್ಲ. ಭಟರೆಲ್ಲರೂ ಮೃಗಗಳಂತೆ ಎಂದು ತಿಳಿದುಕೊಂಡು ಸಿಂಹದಂತೆ ಎದ್ದನು. ಸಾವಿರಾರು ಬಾಣಗಳನ್ನು ಬಿಟ್ಟನು. ಸೈನಿಕರು ಸುತ್ತಲೂ ನಿಂತುಕೊಂಡು ನಾನಾವಿಧಗಳಾದ ಆಯುಧಗಳನ್ನು ಸುರಿಸಿದರು. ಲವನು ಎಲ್ಲರನ್ನೂ ನಾಶಮಾಡಿದನು. ಅನೇಕರು ಬಿದ್ದರು. ಅನೇಕರು ಮೂರ್ಛಿತರಾದರು. ಕೆಲವರು ಓಡಿಹೋದರು.

ಅದನ್ನು ನೋಡಿ ವೀರನಾದ ಪುಷ್ಕಲನು ನಿಲ್ಲುನಿಲ್ಲು ಎನ್ನುತ್ತಾ ಬಂದನು. ಪರಮ ಅಸ್ತ್ರಜ್ಞಾನಿಯಾದ ಪುಷ್ಕಲನು ರಥದಲ್ಲಿ ಇದ್ದುಕೊಂಡು 'ವತ್ಸ! ನಾನು ಕೊಡುವ ರಥವನ್ನು ಸ್ವೀಕರಿಸು. ನೆಲದಲ್ಲಿ ನಿಂತಿರುವ ನಿನ್ನೊಡನೆ ನಾನು ಹೇಗೆ ಯುದ್ಧವನ್ನು ಮಾಡಲಿ? ಆದುದರಿಂದ ನೀನೂ ರಥವನ್ನು ಏರು. ಆಮೇಲೆ ಯುದ್ಧವನ್ನು ಮಾಡುವ' ಎಂದನು. ಅದಕ್ಕೆ ಲವನು 'ನೀನು ಕೊಟ್ಟ ರಥವನ್ನು ಏರಿ ನಾನು ಯುದ್ಧವನ್ನು ಮಾಡುವುದಾದರೆ ನನಗೆ ಪಾಪವೇ ಬರುವುದು. ಜಯವುಂಟಾಗುವುದೂ ಸಂದೇಹವೇ! ನಾವು ದಾನ ತೆಗೆದುಕೊಳ್ಳುವ ಬ್ರಾಹ್ಮಣರಲ್ಲ. ನಾವು ಕ್ಷತ್ರಿಯರು. ನಿತ್ಯವೂ ದಾನಮಾಡುವವರು. ಈಗ ಕೋಪದಿಂದ ನಿನ್ನ ರಥವನ್ನು ಪುಡಿಮಾಡುವೆನು. ಆಗ ನೀನೂ ಕೂಡ ನನ್ನಂತೆಯೇ ನೆಲದ ಮೇಲೆ ನಿಲ್ಲುವಿ. ಆಮೇಲೆ ಯುದ್ಧಮಾಡುವಿ' ಎಂದು ಹೇಳಿದನು. ಧರ್ಮಧೈರ್ಯ ಯುಕ್ತವಾದ ಆ ಮಾತನ್ನು ಕೇಳಿ ಪುಷ್ಕಲನು ಆಶ್ಚರ್ಯವನ್ನು ಹೊಂದಿದನು. ಧನುಸ್ಸಿಗೆ ಹಗ್ಗವನ್ನು ಬಿಗಿದನು. ಅಷ್ಟರಲ್ಲಿಯೇ ಲವನು ಅವನ ಧನುಸ್ಸನ್ನು ಕತ್ತರಿಸಿದನು. ಅವನು ಮತ್ತೊಂದು ಧನುಸ್ಸನ್ನು ತೆಗೆದು ಹಗ್ಗವನ್ನು ಬಿಗಿಯುವಷ್ಟರಲ್ಲಿಯೇ ಲವನು ಅವನ ರಥವನ್ನು ಪುಡಿಮಾಡಿದನು. ತನ್ನ ರಥವನ್ನೂ ಧನುಸ್ಸನ್ನು ಮುರಿದದ್ದನ್ನು ನೋಡಿ ಪುಷ್ಕಲನು ಲವನನ್ನು ಮಹಾಪರಾಕ್ರಮಶಾಲಿಯೆಂದು ತಿಳಿದುಕೊಂಡು ಭೂಮಿಯಲ್ಲಿ ನಿಂತಿದ್ದ ಅವನ ಬಳಿಗೆ ಯುದ್ಧಕ್ಕೆ ಹೋದನು. ಇಬ್ಬರೂ ಧನುರ್ಧಾರಿಗಳಾಗಿ ಪರಸ್ಪರವಾಗಿ ಯುದ್ಧವನ್ನು ಮಾಡಿಕೊಂಡರು.

ಪುಷ್ಕಲನು 'ಬಾಲಕನೇ! ನಿನ್ನಂತೆ ಇರುವ ಶೂರಶಿರೋಮಣಿಯನ್ನು ನಾನು ನೋಡಿಲ್ಲ. ನಿನ್ನ ತಲೆಯನ್ನು ತೀಕ್ಷ್ಣಬಾಣಗಳಿಂದ ಕತ್ತರಿಸುವೆನು. ಓಡಿಹೋಗದೆ

ಯುದ್ಧವನ್ನು ಮಾಡು' ಎಂದು ಹೇಳಿ ಲವನನ್ನು ಬಾಣಗಳ ಪಂಜರದಲ್ಲಿ ಕಟ್ಟಿಹಾಕಿದನು. ಪುಷ್ಕಲನ ಬಾಣಗಳು ಭೂಮಿಯಲ್ಲಿಯೂ ಆಕಾಶದಲ್ಲಿಯೂ ವ್ಯಾಪಿಸಿದವು. ಬಾಣಗಳ ಪಂಜರದಲ್ಲಿ ಸಿಕ್ಕಿದವನಾಗಿ ಲವನು 'ವೀರನೇ! ನನ್ನನ್ನು ಬಾಣಗಳ ಪಂಜರದಲ್ಲಿ ಸಿಕ್ಕಿದವನಾಗಿ ಲವನು 'ವೀರನೇ! ನನ್ನನ್ನು ಬಾಣಗಳಿಂದ ಪೀಡಿಸಿದುದರಿಂದ ಮಹಾಕಾರ್ಯವನ್ನು ಮಾಡಿದಿ' ಎಂದು ಹೇಳಿ ಬಾಣಸಮೂಹವನ್ನು ಕತ್ತರಿಸಿ ಪುಷ್ಕಲನೊಡನೆ 'ನನ್ನ ಬಾಣದಿಂದ ಪೀಡಿತನಾಗಿ ನಿನ್ನನ್ನು ರಕ್ಷಿಸಿಕೊ' ಎಂದು ಹೇಳಲು ಪುಷ್ಕಲನು ಕೋಪವುಳ್ಳವನಾಗಿ ಲವನೊಡನೆ ಯುದ್ಧಮಾಡಿದನು. ಲವನು ಕೋಪವುಳ್ಳವನಾಗಿ ಕ್ರೂರವಾದ ಬಾಣವನ್ನು ತೆಗೆದನು. ಜ್ವಲಿಸುವ ಆ ಬಾಣವನ್ನು ಲವನು ಪುಷ್ಕಲನ ಎದೆಯನ್ನು ಸೀಳಲಿಕ್ಕಾಗಿ ಬಿಟ್ಟನು. ಪುಷ್ಕಲನು ಅದನ್ನು ಕತ್ತರಿಸಿದನು. ಆಗ ಲವನು ಅತ್ಯಂತ ಕೋಪವುಳ್ಳವನಾಗಿ ಘೋರವಾದ ಮತ್ತೊಂದು ಬಾಣವನ್ನು ತೆಗೆದನು. ಕಿವಿಯವರೆಗೆ ಬಾಣವನ್ನು ಸೆಳೆದು ಎದೆಗೆ ಬಿಟ್ಟನು. ಎದೆಯು ಸೀಳಿಹೋಗಿ ಪುಷ್ಕಲನು ಕೆಳಗೆ ಬಿದ್ದನು.



## ಹನುಮಂತದೇವರಿಗೂ ಲವನಿಗೂ ಯುದ್ಧ [1]

ಮೂರ್ಛಿತನಾಗಿ ಬಿದ್ದ ಪುಷ್ಕಲನನ್ನು ಎತ್ತಿಕೊಂಡು ಹನುಮಂತದೇವರು ಶತ್ರುಘ್ನನ ಬಳಿಗೆ ಹೋದರು. ಮೂರ್ಛಿತನಾದ ಅವನನ್ನು ನೋಡಿ ಶತ್ರುಘ್ನನು ಕ್ರೋಧವುಳ್ಳವನಾಗಿ ಲವನನ್ನು ಸಂಹರಿಸಲಿಕ್ಕೆ ಹನುಮಂತದೇವರನ್ನು ಕಳುಹಿಸಿದನು. ಹನುಮಂತದೇವರು ಕೋಪವುಳ್ಳವರಂತೆ ತೋರಿಸುತ್ತಾ ಮರವನ್ನು ಎತ್ತಿಕೊಂಡು ಯುದ್ಧಕ್ಕೆ ಹೋದರು. ಲವನ ತಲೆಯ ಮೇಲೆ ಹನುಮಂತದೇವರು ಮರದಿಂದ ಬಡೆದರು. ಆ ಮರವನ್ನು ಲವನು ಮುರಿದು ಹಾಕಿದನು. ಆಗ ಪುನಃ ಮರವನ್ನು ತೆಗೆದು ತಲೆಗೂ ಎದೆಗೂ ಬಡೆದರು. ಹನುಮಂತದೇವರು ಯಾವ ಯಾವ ಮರಗಳಿಂದ ಬಡಿದರೋ ಆ ಮರಗಳನ್ನೆಲ್ಲಾ ಲವನು ಕತ್ತರಿಸಿದನು. ತರುವಾಯ ದೊಡ್ಡದೊಡ್ಡ ಕಲ್ಲುಗಳನ್ನು ವೇಗದಿಂದ ಲವನ ತಲೆಯ ಮೇಲೆ ಹಾಕಿದರು. ಲವನು ಅವುಗಳನ್ನೆಲ್ಲಾ ಬಾಣಗಳಿಂದ ಪುಡಿಮಾಡಿದನು. ತರುವಾಯ

1. ಪ.ಪು.ಪಾ.ಖಂ. ಅ–61

ಅತ್ಯಂತ ಕೋಪವನ್ನು ತೋರಿಸುತ್ತಾ ಲವನನ್ನು ಬಾಲದಿಂದ ಸುತ್ತಿದರು. ಲವನು ಬಾಲವನ್ನು ಮುಷ್ಟಿಯಿಂದ ಗುದ್ದಿದರು. ಹನುಮಂತದೇವರು ಅವನನ್ನು ಬಿಟ್ಟು ಬಿಟ್ಟನು. ತರುವಾಯ ಲವನು ಅನೇಕ ಬಾಣಗಳನ್ನು ಬಿಟ್ಟನು. ಆಗ ಹನುಮಂತದೇವರು ಶತ್ರುಘ್ನನೇ ಯುದ್ಧಕ್ಕೆ ಹೋಗಿ ಜಯವನ್ನು ಹೊಂದಲಿ ಎಂದು ಮನಸ್ಸಿನಲ್ಲಿಯೇ ಹೇಳುತ್ತಾ ಮೂರ್ಛೆಯು ಬಂದಂತೆ ತೋರಿಸುತ್ತಾ ಮಲಗಿಕೊಂಡರು. ತರುವಾಯ ಹನುಮಂತದೇವರು ಮೂರ್ಛಿತರಾದರು ಎಂದು ತಿಳಿದುಕೊಂಡು ಇತರರೆಲ್ಲರನ್ನೂ ಬಾಣಗಳಿಂದ ಬಡೆದನು.



## ಶತ್ರುಘ್ನನಿಗೂ ಲವನಿಗೂ ಯುದ್ಧ [1]

ತರುವಾಯ ಶತ್ರುಘ್ನನು ಹನುಮಂತದೇವರು ಮೂರ್ಛಿತರಾಗಿರುವರು ಎಂದು ತಿಳಿದುಕೊಂಡು 'ಯುದ್ಧದಲ್ಲಿ ನಾನೇನು ಮಾಡಲಿ? ಈ ಬಾಲಕನು ಮಹಾಬಲಿಷ್ಠನು. ತಾನು ಬಂಗಾರದ ರಥದಲ್ಲಿ ಕೂತುಕೊಂಡು ಲವನಿದ್ದಲ್ಲಿಗೆ ಯುದ್ಧ ಮಾಡಲಿಕ್ಕೆ ಹೋದನು. ಶಿಶುವನ್ನು ನೋಡಿದಾಗ ರಾಮದೇವರನ್ನು ನೋಡಿದಂತೆ ಆಯಿತು. ರಾಮದೇವರಂತೆ ರೂಪವುಳ್ಳ ಈ ಬಾಲಕನು ಯಾರಿರಬಹುದು? ಇವನು ಸೀತಾದೇವಿಯರ ಮಗನಾಗಿರಬಹುದೇ? ನಮ್ಮನ್ನು ಜಯಿಸಿ ಸಿಂಹದಂತೆ ಕಾಣಿಸುವನು. ನಮಗೆ ಜಯವಾಗುವಂತೆ ಕಾಣಿಸುವುದಿಲ್ಲ. ಶಕ್ತಿಯಿಲ್ಲದ ನಾವು ಏನು ಮಾಡಲಿ?' ಹೀಗೆಲ್ಲಾ ವಿಚಾರ ಮಾಡಿ ಬಾಲಕನೊಡನೆ 'ಬಾಲಕನೇ! ನಮ್ಮ ವೀರರನ್ನು ಬೀಳಿಸಿದ ನೀನು ಯಾರು? ಅಸುರಸಂಹಾರಕರಾದ ರಾಮದೇವರ ಬಲವನ್ನು ನೀನು ತಿಳಿಯಲಿಲ್ಲ. ನಿನ್ನ ತಾಯಿ ಯಾರು? ತಂದೆ ಯಾರು? ಲೋಕದಲ್ಲಿ ಪ್ರಸಿದ್ಧವಾದ ನಿನ್ನ ಹೆಸರೇನು? ನನ್ನ ಕುದುರೆಯನ್ನು ಹೇಗೆ ಕಟ್ಟಿದ್ದಿ? ಅದನ್ನೆಲ್ಲಾ ನಾನು ಕ್ಷಮಿಸುವೆನು. ಬಾ. ರಾಮದೇವರನ್ನು ನೋಡುವಿ. ಅವರು ನಿನಗೆ ಬೇಕಾದ್ದನ್ನು ಕೊಡುವರು' ಎಂದು ಹೇಳಿದನು.

ಅದನ್ನು ಕೇಳಿ ಲವನು 'ನಿನಗೆ ಹೆಸರಿನಿಂದಲೂ ತಂದೆಯಿಂದಲೂ ತಾಯಿಯಿಂದಲೂ, ಕುಲದಿಂದಲೂ, ವಯಸ್ಸಿನಿಂದಲೂ, ಏನಾಗಬೇಕು? ನಿನಗೆ ಬಲವಿದ್ದರೆ ಯುದ್ಧವನ್ನು ಮಾಡು. ಇಲ್ಲದಿದ್ದರೆ ಲವನ ಪಾದಗಳಿಗೆ ನಮಸ್ಕರಿಸಿ

1. ಪ.ಪು.ಪಾ.ಖಂ. ಅ–62

ಹೋಗು. ನಿನಗೆ ವೀರ್ಯವಿದ್ದರೆ ಕುದುರೆಯನ್ನು ಬಿಡಿಸು' ಎಂದು ಹೇಳಿ ಎದೆಗೂ ತಲೆಗೂ ಭುಜಗಳಿಗೂ ಬಾಣಗಳನ್ನು ಬಿಟ್ಟನು. ಆಗ ಶತ್ರುಘ್ನ ಕೋಪವುಳ್ಳವನಾಗಿ ಅನೇಕ ಬಾಣಗಳನ್ನು ಬಿಟ್ಟನು. ಲವನು ಅವುಗಳನ್ನೆಲ್ಲಾ ಕತ್ತರಿಸಿದನು. ಲವನು ಬಿಟ್ಟ ಬಾಣಗಳಿಂದ ಲೋಕವು ವ್ಯಾಪಿಸಿಹೋಯಿತು. ಆಕಾಶದಲ್ಲಿ ಬಾಣಗಳು ತುಂಬಿ ಸೂರ್ಯಪ್ರಕಾಶವು ಕಾಣಿಸಲಿಲ್ಲ. ಗಾಳಿಯು ಬೀಸಲಾಗಲಿಲ್ಲ. ಆ ಬಾಣಗಳನ್ನು ನೋಡಿ ಶತ್ರುಘ್ನ ಆಶ್ಚರ್ಯವನ್ನು ಹೊಂದಿದನು. ಆ ಬಾಣಗಳನ್ನು ಕತ್ತರಿಸಿದನು. ಲವನು ಶತ್ರುಘ್ನನ ಧನುಸ್ಸನ್ನು ಕತ್ತರಿಸಿದನು. ಬೇರೊಂದು ಧನುಸ್ಸನ್ನು ತೆಗೆದು ಶತ್ರುಘ್ನನು ಬಾಣಬಿಡುವಷ್ಟರಲ್ಲಿಯೇ ಲವನು ರಥವನ್ನು ಪುಡಿಮಾಡಿದನು. ಕೈಯಲ್ಲಿ ಇದ್ದ ಧನುಸ್ಸನ್ನು ಕತ್ತರಿಸಿದನು. ಶತ್ರುಘ್ನನು ಬೇರೊಂದು ರಥವನ್ನು ಏರಿಕೊಂಡು ಬಂದನು. ಹೀಗೆ ಭಯಂಕರವಾದ ಯುದ್ಧವು ನಡೆಯಿತು. ಕೊನೆಗೆ ಲವನು ತೀಕ್ಷ್ಣವಾದ ಅರ್ಧಚಂದ್ರಾಕಾರವುಳ್ಳ ಬಾಣದಿಂದ ಶತ್ರುಘ್ನನ ಎದೆಗೆ ಬಡೆದನು. ಶತ್ರುಘ್ನನು ಅದರಿಂದ ಮೂರ್ಛಿತನಾದನು.

ಶತ್ರುಘ್ನನು ಮೂರ್ಛಿತನಾದದ್ದನ್ನು ನೋಡಿ ಸುರಥ ವಿಮಲ ವೀರಮಣಿ ಸುಮದ ರಿಪುತಾಪ ಮೊದಲಾದವರೂ ಯುದ್ಧಮಾಡಿದರು. ಅವರಲ್ಲಿ ಕೆಲವರು ಮೂರ್ಛಿತರಾದರು. ಕೆಲವರು ಓಡಿಹೋದರು. ಅಷ್ಟರಲ್ಲಿ ಶತ್ರುಘ್ನನು ಮೂರ್ಛೆಯಿಂದ ಏಳುವವನಾಗಿ ಯುದ್ಧಕ್ಕೆ ಬಂದನು. ಲವನೊಡನೆ 'ನೀನು ನೋಡಲಿಕ್ಕೆ ಬಾಲಕನಂತೆ ಕಾಣಿಸುವಿಯಷ್ಟೆ. ನೀನು ಬಾಲಕನಲ್ಲ. ಯಾರೋ ದೇವತೆಯಾಗಿರಬೇಕು. ಯಾರಿಂದಲೂ ಮೂರ್ಛೆಯನ್ನು ಹೊಂದದೆ ಇರುವ ನಾನು ನಿನ್ನಿಂದ ಮೂರ್ಛೆಯನ್ನು ಹೊಂದಿದೆನು. ಈಗ ನನ್ನ ಸಾಮರ್ಥ್ಯವನ್ನು ನೋಡು ನಿನ್ನನ್ನು ಯುದ್ಧದಲ್ಲಿ ಬೀಳಿಸುವೆನು. ನನ್ನ ಒಂದು ಬಾಣವನ್ನು ಸಹಿಸು. ಓಡಿಹೋಗ ಬೇಡ' ಎಂದು ಹೇಳಿ ಯಮದೇವರ ಮುಖದಂತೆ ಇರುವ ಘೋರವಾದ ಲವಣಾಸುರನನ್ನು ಕೊಂದಿರುವ ಬಾಣವನ್ನು ತೆಗೆದು ಧನುಸ್ಸಿಗೆ ಜೋಡಿಸಿದನು. ಅದನ್ನು ನೋಡಿ ಲವನು ಈ ಸಮಯದಲ್ಲಿ ಅಣ್ಣನಾದ ಕುಶನಿದ್ದಿದ್ದರೆ ನನಗೆ ಶತ್ರುಘ್ನನಿಂದ ಭಯವುಂಟಾಗುತ್ತಿದ್ದಿಲ್ಲ' ಎಂದು ಯೋಚಿಸುತ್ತಿದ್ದನು. ಅಷ್ಟರಲ್ಲಿಯೇ ಭಯಂಕರವಾದ ಆ ಬಾಣವು ಬಂದು ಲವನ ಎದೆಗೆ ತಾಗಿತು. ಆಗ ವೀರನಾದ ಲವನು ಯುದ್ಧರಂಗದಲ್ಲಿ ಮೂರ್ಛಿತನಾಗಿ ಬಿದ್ದನು.



# ಶತ್ರುಘ್ನನು ಮೂರ್ಛಿತನಾದದ್ದು [1]

ಲವನು ಮೂರ್ಛಿತನಾದದ್ದನ್ನು ನೋಡಿ ಶತ್ರುಘ್ನನು ಜಯವನ್ನು ಹೊಂದಿದನು. ರಾಮದೇವರಂತೆಯೇ ಕಾಣಿಸುವ ಅಲಂಕೃತವಾದ ಆ ಬಾಲಕನನ್ನು ರಥದಲ್ಲಿ ಇಟ್ಟುಕೊಂಡು ಕರಕೊಂಡು ಹೋಗಲಿಕ್ಕೆ ಇಚ್ಛಿಸಿದನು. ಇಲ್ಲಿ ಋಷಿಕುಮಾರರು ತಮ್ಮ ಮಿತ್ರನು ಶತ್ರುವಶದನಾದದ್ದನ್ನು ನೋಡಿ ಓಡಿಬಂದು ಸೀತಾದೇವಿಯರೊಡನೆ 'ಅಮ್ಮ ಜಾನಕಿ! ನಿಮ್ಮ ಮಗನು ಬಲಾತ್ಕಾರದಿಂದ ಒಂದು ಕುದುರೆಯನ್ನು ಅಪಹರಿಸಿದನು. ಅದು ಸೈನ್ಯಸಹಿತನಾದ ಒಬ್ಬ ರಾಜನ ಕುದುರೆಯು. ತರುವಾಯ ಆ ಸೈನ್ಯನೊಡನೆ ನಿಮ್ಮ ಮಗನಿಗೆ ಯುದ್ಧವು ನಡೆಯಿತು. ನಿಮ್ಮ ಮಗನು ಎಲ್ಲರನ್ನೂ ಬೀಳಿಸಿದನು. ಆ ರಾಜನೇ ಯುದ್ಧಕ್ಕೆ ಬಂದನು. ನಿಮ್ಮ ಮಗನು ಅವನನ್ನು ಮೂರ್ಛೆಗೊಳಿಸಿ ಜಯವನ್ನು ಹೊಂದಿದನು. ಪರಮಕ್ರೂರನಾದ ಆ ರಾಜನು ಮೂರ್ಛೆಯಿಂದ ಎದ್ದು ಕೋಪಿಸಿಕೊಂಡು ನಿನ್ನ ಮಗನನ್ನು ಯುದ್ಧದಲ್ಲಿ ಬೀಳಿಸಿದನು. ನಿಮ್ಮ ಮಗನೊಡನೆ ನಾವು ಮೊದಲೇ ಕುದುರೆಯನ್ನು ಹಿಡಿಯ ಬೇಡವೆಂದು ಹೇಳಿದೆವು. ವೇದಶಾಸ್ತ್ರಪಾರಂಗತರಾದ ನಮ್ಮನ್ನು ಧಿಕ್ಕಾರಮಾಡಿ ನಮ್ಮ ಮಾತನ್ನು ಕೇಳಲಿಲ್ಲ' ಎಂದು ತಿಳಿಸಿದರು.

ಈ ಬಾಲಕರ ಮಾತನ್ನು ಕೇಳಿ ಸೀತಾದೇವಿಯರು ಸರ್ವಜ್ಞರಾಗಿಯೂ ಸರ್ವದುಃಖರಹಿತರಾಗಿಯೂ ಇದ್ದವ ರಾದರೂ ಲೋಕದ ಜನರಂತೆ ತೋರಿಸುತ್ತಾ, ತುಂಬಾ ದುಃಖವುಳ್ಳವರಂತೆಯೂ, ಅಜ್ಞಾನವುಳ್ಳವರಂತೆಯೂ, ನಟನೆ ಮಾಡಿ ತೋರಿಸಿದರು. ಭೂಮಿಯಲ್ಲಿ ಮೂರ್ಛಿತರಾಗಿ ಬಿದ್ದರು. ಅಳುವವರಾದರು. 'ರಾಜನು ದಯಾಹೀನನಾಗಿ ಕೂಸಿನ ಹತ್ತಿರ ಹೇಗೆ ಯುದ್ಧವನ್ನು ಮಾಡಿದನು. ದುರ್ಬುದ್ಧಿಯುಳ್ಳವನು ಅಧರ್ಮವನ್ನು ಮಾಡುವವನಾಗಿ ನನ್ನ ಕೂಸನ್ನು ಬೀಳಿಸಿದನು. ವೀರನಾದ ಲವನೇ! ಎಲ್ಲಿಗೆ ಹೋದಿ? ನೀನು ಕೃಪಾಹೀನನಾದ ಆ ರಾಜನ ಕುದುರೆಯನ್ನು ಯಾಕೆ ಅಪಹಾರ ಮಾಡಿದಿ? ನೀನು ಚಿಕ್ಕಹುಡುಗನು. ಅವರು ಸರ್ವಶಸ್ತ್ರಾಸ್ತ್ರ ಪಂಡಿತರು. ಅವರೆಲ್ಲರೂ ರಥದಲ್ಲಿ ಕೂತಿರುವರು. ನೀನು ರಥವಿಲ್ಲದವನು. ನಿಮಗೆ ಯುದ್ಧವು ಹೇಗೆ ಸಮವಾಗುವುದು? ಮಗು! ನಾನು ನಿನ್ನನ್ನು ನೋಡಿಕೊಂಡು ರಾಮದೇವರು ಪರಿತ್ಯಾಗ ಮಾಡಿದ ದುಃಖವನ್ನೂ ಪರಿತ್ಯಾಗ ಮಾಡಿದ್ದೆನು. ಈಗ ನೀನೂ ನನ್ನನ್ನು

---

1. ಪ.ಪು.ಪಾ.ಖಂ. ಅ–63

ಬಿಟ್ಟುಹೋದರೆ ನಾನು ಹೇಗೆ ಜೀವಿಸಿಕೊಂಡು ಇರಲಿ? ನೀನು ಇಲ್ಲಿಗೆ ಬಾ. ಯಜ್ಞದ ಕುದುರೆಯನ್ನು ಬಿಟ್ಟು ಬಿಡಲಿ. ಆ ರಾಜನು ಹೋಗಲಿ. ನನಗೆ ಬಂದ ದುಃಖವನ್ನು ನೀನು ತಿಳಿಯಲಿಲ್ಲ. ವೀರಶಿರೋಮಣಿಯಾದ ಕುಶನು ಈಗ ಯುದ್ಧರಂಗದಲ್ಲಿ ಇದ್ದಿದ್ದರೆ ನಿನ್ನನ್ನು ಆ ರಾಜನಿಂದ ಬಿಡಿಸುತ್ತಿದ್ದನು. ನನ್ನ ಅದೃಷ್ಟದಿಂದ ಅವನೂ ಈಗ ಹತ್ತಿರದಲ್ಲಿ ಇಲ್ಲವಲ್ಲಾ. ನಾನು ಏನು ಮಾಡಲಿ? ನನಗೆ ದೈವವೇ ಈಪ್ರಕಾರವಾಗಿ ದುಃಖಕ್ಕೆ ಕಾರಣವಾಯಿತು' ಇತ್ಯಾದಿರೀತಿಯಾಗಿ ದುಃಖರಹಿತರಾದ ಸರ್ವಜ್ಞರಾದ ಸೀತಾದೇವಿಯರು ಲೋಕದ ಜನರಂತೆ ಅಳುವವರಾದರು. ಆಮೇಲೆ ಕಣ್ಣೀರನ್ನು ಸುರಿಸುತ್ತಾ ಕಾಲಿನ ಬೆರಳಿನಿಂದ ಭೂಮಿಯನ್ನು ಕೆರೆಯುತ್ತಾ ಮುನಿಪುತ್ರರೊಡನೆ 'ಬಾಲಕರೇ! ನನ್ನ ಮಗನನ್ನು ಆ ರಾಜನು ಹೇಗೆ ಬೀಳಿಸಿದರು? ಎಲ್ಲಿಗೆ ಹೋದನು? ಇತ್ಯಾದಿರೀತಿಯಾಗಿ ಕೇಳುತ್ತಿರುವಾಗಲೇ ಕುಶನು ಅಲ್ಲಿಗೆ ಬಂದು ಸೇರಿದನು.

ಅವನು ಮಾಘ ಕೃಷ್ಣ ಚತುರ್ದಶಿ ದಿನದಲ್ಲಿ ಉಜ್ಜಯಿನಿಯಲ್ಲಿ ಮಹಾಕಾಲ ಎಂದು ಹೆಸರುಳ್ಳ ರುದ್ರದೇವರನ್ನು ಪೂಜಿಸಿ ವರವನ್ನು ಪಡೆದು ತಾಯಿಯ ಬಳಿಗೆ ಬಂದು ಸೇರಿದನು. ಕಣ್ಣೀರು ಸುರಿಸುತ್ತಾ ಅಳುತ್ತಿರುವ ತಾಯಿಯನ್ನು ನೋಡಿ 'ಅಮ್ಮಾ! ನಾನು ಬದುಕಿರುವಾಗ ಕಣ್ಣೀರನ್ನು ಸುರಿಸುವುದೇತಕ್ಕೆ? ತಮ್ಮನಾದ ಲವನೇಕೆ ಕಾಣಿಸುವುದಿಲ್ಲ? ನಾನು ಬಂದಾಗ ಸಂತೋಷದಿಂದ ನನ್ನ ಹತ್ತಿರಕ್ಕೆ ಓಡಿಬರುತ್ತಿದ್ದನಷ್ಟೆ? ಎಲ್ಲಿಯಾದರೂ ಹುಡುಗರೊಡನೆ ಆಡಲಿಕ್ಕೆ ಹೋದನೇ' ಎಂದು ಕೇಳಿ ಸೀತಾದೇವಿಯರು ನಡೆದ ವಿಷಯವನ್ನೆಲ್ಲಾ ಹೇಳಿದರು. ಅದನ್ನು ಕೇಳಿ ಕುಶನು 'ಲವನು ಈಗಲೇ ಬಂಧನದಿಂದ ಬಿಡಲ್ಪಟ್ಟನೆಂದು ತಿಳಿಯಿರಿ. ಈಗಲೇ ಸೈನ್ಯಸಹಿತನಾದ ಆ ರಾಜನನ್ನು ಸಂಹರಿಸುವೆನು. ದೇವತೆಯು ಬಂದಿರಲಿ, ರುದ್ರನೇ ಬಂದಿರಲಿ, ಆದರೂ ತೀಕ್ಷ್ಣಬಾಣಗಳಿಂದ ಬಿಡಿಸಿಕೊಂಡು ಬರುವೆನು. ತಾಯಿ! ನೀನು ಅಳಬಾರದು. ನನಗೆ ದಿವ್ಯವಾದ ಕವಚವನ್ನೂ ಧನುಸ್ಸನ್ನೂ ಶಿರಸ್ತ್ರಾಣವನ್ನೂ ತೀಕ್ಷ್ಣವಾದ ಖಡ್ಗವನ್ನೂ ಕೊಡಿರಿ. ಈಗಲೇ ನಾನು ಯುದ್ಧಕ್ಕೆ ಹೋಗುವೆನು. ಆ ಮಹಾಸೈನ್ಯವನ್ನು ಬೀಳಿಸುವೆನು. ಯುದ್ಧಮಧ್ಯದಲ್ಲಿ ಮೂರ್ಛಿತನಾದ ತಮ್ಮನನ್ನು ಬಿಡಿಸುವೆನು. ತಾಯಿ! ತಮ್ಮ ಮಗನನ್ನು ಯುದ್ಧದಿಂದ ಬಿಡಿಸದಿದ್ದರೆ ನಿಮ್ಮ ಪಾದಗಳ ಕೋಪಕ್ಕೆ ಪಾತ್ರನಾಗುವೆನು' ಎಂದು ಹೇಳಲು ಆ ಮಾತನ್ನು ಕೇಳಿ ಸಂತೋಷವುಳ್ಳವರಾಗಿ ಕವಚ ಮೊದಲಾದದ್ದನ್ನು ಕೊಟ್ಟರು. ಜಯವಾಗಲಿ ಎಂದು ಆಶೀರ್ವಾದವನ್ನು ಮಾಡಿ 'ಮಗನೇ! ಯುದ್ಧಕ್ಕೆ ಹೋಗಿ ಮೂರ್ಛಿತನಾದ ಲವನನ್ನು ಬಿಡಿಸಿಕೊಂಡು ಬಾ'ಎಂದು ಹೇಳಿದರು.

ಕುಶನು ಕವಚಕುಂಡಲ ಕಿರೀಟ ಮೊದಲಾದವನ್ನು ಧರಿಸಿ ಆಯುಧ ಧಾರಿಯಾಗಿ ತಾಯಿಯ ಪಾದಗಳಿಗೆ ನಮಸ್ಕರಿಸಿ ಬೇಗನೇ ಹೋದನು. ಹೋಗಿ ಲವನನ್ನು ನೋಡಿದನು. ಎಲ್ಲಾ ವೀರರೂ ಬರುತ್ತಿರುವ ಕುಶನನ್ನು ನೋಡಿದರು. ಯಮದೇವರು ಸಂಹರಿಸಲಿಕ್ಕೆ ಬರುವಂತೆ ಬರುತ್ತಿದ್ದರು. ಲವನು ಬಂದಿರುವ ಅಣ್ಣನನ್ನು ನೋಡಿ ಅಗ್ನಿಯಂತೆ ಜ್ವಲಿಸಿದನು. ರಥದಿಂದ ತನ್ನನ್ನು ಬಿಡಿಸಿಕೊಂಡು ಯುದ್ಧಕ್ಕೆ ಬಂದನು. ಕುಶನು ಪೂರ್ವದಿಕ್ಕಿನಲ್ಲಿ ಎಲ್ಲಾ ವೀರರನ್ನು ಬಡೆದನು. ಪಶ್ಚಿಮದಿಕ್ಕಿನಲ್ಲಿ ಲವನು ಎಲ್ಲವನ್ನೂ ಬಡೆದನು. ಕುಶನಿಂದಲೂ ಲವನಿಂದಲೂ ಬಾಣಸಮೂಹದಿಂದ ಪೀಡಿಸಲ್ಪಟ್ಟ ಸೈನ್ಯಸಮೂಹವು ಸುಖವನ್ನು ಹೊಂದಲಿಲ್ಲ. ಎಲ್ಲಾ ಸೈನ್ಯವೂ ಅಲ್ಲಿ ಇಲ್ಲಿ ಓಡಲಿಕ್ಕೆ ಆರಂಭಿಸಿತು. ಆ ಸಮಯದಲ್ಲಿ ಶತ್ರುಘ್ನನು ಲವನಂತೆ ಇರುವ ಕುಶನ ಬಳಿಗೆ ಯುದ್ಧಕ್ಕೆ ಬಂದನು. ರಾಮದೇವರಂತೇ ಇರುವ ಕುಶನನ್ನು ನೋಡಿ ರಥದಲ್ಲಿ ಇದ್ದ ಶತ್ರುಘ್ನನು 'ಲವನಂತೆಯೇ ಇರುವ ನೀನು ಯಾರು? ಮಹಾವೀರನೇ! ನಿನ್ನ ಹೆಸರೇನು? ನಿನ್ನ ತಂದೆಯು ಯಾರು? ಋಷಿಗಳು ಇರುವ ವನದಲ್ಲಿ ಯಾಕೆ ಇರುವಿ? ಎಲ್ಲವನ್ನೂ ಹೇಳು' ಎಂದು ಕೇಳಲು ಕುಶನು ಮೇಘದಂತೆ ಗಂಭೀರವಾಣಿಯಿಂದ 'ಪತಿವ್ರತೆಯಾದ ಸೀತಾದೇವಿಯರು ನಮ್ಮನ್ನು ವನದಲ್ಲಿ ಹಡೆದಿರುವರು. ನಾವು ವಾಲ್ಮೀಕಿಋಷಿಗಳ ಆಶ್ರಮದಲ್ಲಿ ಆಸಕ್ತರಾಗಿರುವೆವು. ಎಲ್ಲಾ ವಿದ್ಯೆಗಳನ್ನೂ ತಿಳಿದಿರುವೆವು. ನೀನು ಯಾರು? ನಿನ್ನ ಕುದುರೆಯು ಇಲ್ಲಿಗೆ ಯಾಕೆ ಬಂದಿರುವುದು? ವೀರನಾಗಿದ್ದರೆ ಈಗ ನನ್ನೊಡನೆ ಯುದ್ಧವನ್ನು ಮಾಡು. ಯುದ್ಧರಂಗದಲ್ಲಿ ನಿನ್ನನ್ನು ಬೀಳಿಸುತ್ತೇನೆ' ಎಂದು ಹೇಳಿದನು.

ಶತ್ರುಘ್ನನು ರಾಮದೇವರಿಂದ ಸೀತಾದೇವಿಯರಲ್ಲಿ ಹುಟ್ಟಿದ ಮಗನೆಂದು ಮನಸ್ಸಿನಲ್ಲಿಯೇ ತಿಳಿದುಕೊಂಡು ಆಶ್ಚರ್ಯಪಟ್ಟನು. ಆದರೂ ಕೋಪದಿಂದ ಧನುಸ್ಸನ್ನು ತೆಗೆದನು. ಅವನನ್ನು ನೋಡಿ ಕುಶನೂ ಕೋಪದಿಂದ ಧನುಸ್ಸಿನ ಶಬ್ದವನ್ನು ಮಾಡಿದನು. ಶತ್ರುಘ್ನನು ತೀಕ್ಷ್ಣಗಳಾದ ಬಾಣಗಳನ್ನು ಬಿಟ್ಟನು. ಕುಶನು ಅನಾಯಾಸದಿಂದ ಅವುಗಳನ್ನೆಲ್ಲಾ ಕತ್ತರಿಸಿದನು. ತರುವಾಯ ಪರಸ್ಪರವಾಗಿ ಅನೇಕ ಅಸ್ತ್ರಗಳನ್ನು ಬಿಟ್ಟು ಕುಶನು ಕೊನೆಗೆ ಒಂದು ಭಯಂಕರವಾದ ಬೆಂಕಿಯಂತೆ ಜ್ವಲಿಸುವ ಬಾಣವನ್ನು ಶತ್ರುಘ್ನನಿಗೆ ಬಿಟ್ಟನು. ಅದನ್ನು ಶತ್ರುಘ್ನನು ರಾಮದೇವರನ್ನು ಸ್ಮರಿಸುತ್ತಾ ಕತ್ತರಿಸಿದನು. ಆಗ ಕುಶನು ಅತ್ಯಂತ ಕೋಪವುಳ್ಳವನಾಗಿ ಬೇರೊಂದು ಬಾಣವನ್ನು ಬಿಟ್ಟನು. ಅದನ್ನು ಶತ್ರುಘ್ನನು ಕತ್ತರಿಸಿದನು. ಆಗ ಕುಶನು ರೋಷವುಳ್ಳವನಾಗಿ ತಾಯಿಯ ಪಾದಗಳನ್ನು ಸ್ಮರಿಸುತ್ತಾ ಅದ್ಭುತವಾದ ಬಾಣವನ್ನು

ಬಿಟ್ಟನು. ಶತ್ರುಘ್ನನು ಬೇಗನೇ ಅದನ್ನು ಕತ್ತರಿಸಲಿಕ್ಕಾಗಿ ಬೇರೆ ಬಾಣವನ್ನು ತೆಗೆದನು. ಅಷ್ಟರಲ್ಲಿಯೇ ಕುಶನು ಬಿಟ್ಟ ಬಾಣವು ಎದೆಗೆ ತಾಗಿ ಮೂರ್ಛಿತನಾಗಿ ಕೆಳಗೆ ಬಿದ್ದನು. ಶತ್ರುಘ್ನನು ಬೀಳಲು ಸೈನ್ಯದಲ್ಲಿ ಬಹಳವಾಗಿ ಹಾಹಾಕಾರವಾಯಿತು. ಕುಶನು ಜಯವನ್ನು ಹೊಂದಿದನು.



## ಕುಶಲವರ ವಿಜಯವು [1]

ಶತ್ರುಘ್ನನು ಮೂರ್ಛಿತನಾಗಿ ಬಿದ್ದಿರುವುದನ್ನು ನೋಡಿ ಸುರಥನು ಮಣಿಮಯವಾದ ರಥದಲ್ಲಿ ಕೂತುಕೊಂಡು ಕುಶನೊಡನೆ ಯುದ್ಧಕ್ಕೆ ಬಂದನು. ಪುಷ್ಕಲನು ಮೊದಲು ಲವನಿಂದ ಮೂರ್ಛಿತನಾದವನು ಪುನಃ ಲವನೊಡನೆ ಯುದ್ಧಕ್ಕೆ ಬಂದನು. ಸುರಥನು ಕುಶನ ಬಳಿಗೆ ಹೋಗಿ ಅನೇಕ ಬಾಣಗಳನ್ನು ಬಿಟ್ಟು ವ್ಯಥೆಪಡಿಸಿದನು. ಆಗ ಕುಶನು ಹತ್ತು ಬಾಣಗಳಿಂದ ಸುರಥನ ರಥವನ್ನು ಪುಡಿ ಮಾಡಿದನು. ಧನುಸ್ಸನ್ನೂ ಕತ್ತರಿಸಿದನು. ತರುವಾಯ ಇಬ್ಬರಿಗೂ ಭಯಂಕರವಾದ ಯುದ್ಧವು ನಡೆಯಿತು. ಸುರಥನು ಪರಾಜಯಶೂನ್ಯನಾಗಿ ಅತ್ಯಂತ ಯುದ್ಧವನ್ನು ಮಾಡುತ್ತಿರಲು ಕುಶನು ಏನು ಮಾಡಲಿ ಎಂದು ಯೋಚನೆ ಮಾಡಿದನು. ಯೋಚನೆಮಾಡಿ ಸುರಥನನ್ನು ಕೊಲ್ಲಬೇಕೆಂದು ಭಯಂಕರವಾದ ಬಾಣವನ್ನು ತೆಗೆದು ಬಿಟ್ಟನು. ಬರುತ್ತಿರುವ ಬಾಣವನ್ನು ಸುರಥನು ಕತ್ತರಿಸಬೇಕೆಂದು ಯೋಚನೆ ಮಾಡುತ್ತಿರುವಷ್ಟರಲ್ಲಿಯೇ ಆ ಬಾಣವು ಬಂದು ಸುರಥನ ಎದೆಗೆ ತಾಗಿ ಆ ವೀರನು ಮೂರ್ಛಿತನಾಗಿ ಬಿದ್ದನು.

ಸುರಥನು ಮೂರ್ಛಿತನಾಗಿ ಬೀಳಲು ವೀರರನ್ನು ಭಯಪಡಿಸುತ್ತಿರುವ ಕುಶನನ್ನು ನೋಡಿ ಹನುಮಂತದೇವರು ಯುದ್ಧಕ್ಕೆ ಬಂದರು. ಸರ್ವಜ್ಞರಾದ ಸರ್ವಶಕ್ತರಾದ ಹನುಮಂತದೇವರು ರಾಮದೇವರ ಮಕ್ಕಳಿಗೆ ಜಯವನ್ನು ಕೊಡುವುದು ರಾಮದೇವರಿಗೆ ಪ್ರಿಯವೆಂದು ಭಾವಿಸುವವರಾಗಿ ಸ್ವಲ್ಪ ಹೊತ್ತು ಕುಶನೊಡನೆ ಭಯಂಕರವಾಗಿ ಯುದ್ಧ ಮಾಡುವಂತೆ ತೋರಿಸಿ ಆಮೇಲೆ ಮೂರ್ಛೆಯು ಬಂದಂತೆ ತೋರಿಸುತ್ತಾ ಮಲಗಿಕೊಂಡರು.

ತರುವಾಯ ಸುಗ್ರೀವನು ಬಂದು ಕುಶನೊಡನೆ ಭಯಂಕರವಾದ ಯುದ್ಧವನ್ನು

---

1. ಪ.ಪು.ಪಾ.ಖಂ. ಅ–64

ಮಾಡಿದನು. ಕುಶನು ಅವನನ್ನು ವಾರುಣಾಸ್ತ್ರದಿಂದ ಬಂಧಿಸಿದನು. ಅದನ್ನು ನೋಡಿ ಎಲ್ಲಾ ವೀರರು ಓಡಿದರು. ಅಷ್ಟರಲ್ಲಿ ಲವನೂ ಪುಷ್ಕಲನನ್ನೂ ಅಂಗದನನ್ನೂ ಪ್ರತಾಪಾಗ್ರ್ಯನನ್ನು ವೀರಮಣಿಯನ್ನೂ ಇತರ ರಾಜರನ್ನೂ ಜಯಿಸಿ ಅಣ್ಣನ ಸಮೀಪಕ್ಕೆ ಬಂದನು. ಇಬ್ಬರೂ ಸಂತೋಷದಿಂದ ಆಲಿಂಗನ ಮಾಡಿಕೊಂಡರು. ಲವನು 'ಅಣ್ಣ! ನಿನ್ನ ಅನುಗ್ರಹದಿಂದ ಈ ಯುದ್ಧ ಸಮುದ್ರವನ್ನು ದಾಟಲಿಕ್ಕೆ ಆಯಿತು. ಈಗ ರಣರಂಗವನ್ನು ಶೋಧನ ಮಾಡುವ' ಎಂದು ಹೇಳಿ ಬೇಗನೇ ವೀರರಾದ ಕುಶಲವರು ಯುದ್ಧರಂಗಕ್ಕೆ ಹೋದರು. ಶತ್ರುಘ್ನನ ವಿಚಿತ್ರವಾದ ಬಂಗಾರದಿಂದ ಮಾಡಿದ ಕಿರೀಟವನ್ನು ಪುಷ್ಕಲನ ಕಿರೀಟವನ್ನೂ ಶತ್ರುಘ್ನನ ತೋಳುಸರಿಗೆಗಳನ್ನೂ ಇನ್ನೂ ಅನೇಕ ಶಸ್ತ್ರಗಳನ್ನು ಹಿಡಿದುಕೊಂಡರು. ಕುಶನು ಹನುಮಂತದೇವರ ಬಾಲವನ್ನು ಹಿಡಿದುಕೊಂಡು ಎಳೆಯುತ್ತಾ ಹೋದನು. ಲವನು ಸುಗ್ರೀವನ ಬಾಲವನ್ನು ಹಿಡಿದುಕೊಂಡನು. ಅವರಿಬ್ಬರೂ ಸೀತಾದೇವಿಯರ ಬಳಿಗೆ ತಮ್ಮನ್ನು ಕರೆದುಕೊಂಡು ಹೋಗುವರಲ್ಲಾ! ನಮಗೆ ನಾಚಿಕೆಯಾಗುವುದಲ್ಲಾ! ಎಂದು ಮಾತಾಡಿಕೊಂಡರು.

ತರುವಾಯ ಕುಶಲವರಿಬ್ಬರೂ ಸೀತಾದೇವಿಯರಿದ್ದಲ್ಲಿಗೆ ಹೋದರು. ಸೀತಾದೇವಿಯರು ಮಕ್ಕಳನ್ನು ನೋಡಿ ಲೋಕದೃಷ್ಟಿಯಿಂದ ಸಂತೋಷಪಟ್ಟರು. ಪಾಶಬದ್ಧರಾದ ಹನುಮಂತದೇವರನ್ನು ಸುಗ್ರೀವನನ್ನೂ ನೋಡಿ ನಗುತ್ತಾ ಅವರನ್ನು ಬಂಧನದಿಂದ ಬಿಟ್ಟು ಬಿಡಲಿಕ್ಕೆ ಹೇಳಿದರು. 'ಇವನು ಹನುಮಾನ್ ಎಂಬ ಕಪಿವೀರನು. ರಾಕ್ಷಸರ ಪಟ್ಟಣವನ್ನೇ ಸುಟ್ಟವನು. ಇವನು ಕಪಿರಾಜನು. ಇವರನ್ನು ಯಾಕೆ ಬಂಧಿಸಿದಿರಿ?' ಎಂದು ಸರ್ವಜ್ಞರಾದ ಸೀತಾದೇವಿಯರು ಒಂದೂ ತಿಳಿಯದ ಲೋಕದ ಜನರಂತೆ ಕೇಳಿದರು. ಅದಕ್ಕೆ ಕುಶಲವರು 'ಅಮ್ಮ! ದಶರಥರಾಜನ ಮಗನಾದ ಬಲಿಷ್ಠನಾದ ರಾಮನೆಂಬ ಒಬ್ಬ ರಾಜನಿರುವನಂತೆ. ಅವನು ಒಂದು ಕುದುರೆಯ ಹಣೆಯಲ್ಲಿ ಬಂಗಾರದ ಪತ್ರದಲ್ಲಿ ತನ್ನ ಪರಾಕ್ರಮವನ್ನು ಬರೆದು ಕುದುರೆಯನ್ನು ಬಿಟ್ಟಿರುವನು. ಆ ಪತ್ರದಲ್ಲಿ 'ನನ್ನ ತಾಯಿಯೊಬ್ಬಳೇ ವೀರನಾದ ಮಗನನ್ನು ಹಡೆದವಳು. ಯಾರು ಕ್ಷತ್ರಿಯರಾಗಿರುವರೋ ಅವರು ಈ ಕುದುರೆಯನ್ನು ಕಟ್ಟಲಿ. ಇಲ್ಲದಿದ್ದರೆ ಪಾದಕ್ಕೆ ನಮಸ್ಕಾರ ಮಾಡಲಿ' ಎಂಬ ಅಭಿಪ್ರಾಯವು ಆ ಪತ್ರದಲ್ಲಿ ಬರೆಯಲ್ಪಟ್ಟಿತ್ತು. ಆಗ ನಾನು ಯೋಚನೆ ಮಾಡಿದೆನು. ನೀವು ಕ್ಷತ್ರಿಯಳಲ್ಲವೇ? ನೀವು ವೀರರನ್ನು ಹಡೆಯಲಿಲ್ಲವೇ? ಆ ರಾಜನ ಧೈರ್ಯವನ್ನು ನೋಡಿ ಆ ಕುದುರೆಯನ್ನು ಲವನು ಬಲಾತ್ಕಾರದಿಂದ ಕಟ್ಟಿದನು. ಇಲ್ಲಿ

ಅಲ್ಲಿ ಬಂದಿರುವ ರಾಜನ ಕಿರೀಟವು ಇದು ಪುಷ್ಕಲ ಎಂದು ಹೆಸರುಳ್ಳ ಇನ್ನೊಬ್ಬನ ಕಿರೀಟವು. ಇದೇ ಆ ರಾಜನ ಮನೋಹರವಾದ ಕುದುರೆಯು. ಅಣ್ಣ ಕುಶನು ಎಲ್ಲರನ್ನೂ ಯುದ್ಧದಲ್ಲಿ ಬೀಳಿಸಿದನು. ಈ ಕುದುರೆಯು ಚೆನ್ನಾಗಿ ಇದೆ. ಸವಾರಿ ಮಾಡಲಿಕ್ಕೆ ಇರಲಿ ಎಂದು ತೆಗೆದುಕೊಂಡು ಬಂದೆವು. ಯುದ್ಧ ಮಾಡಿದ ಈ ಎರಡು ಕಪಿಗಳನ್ನೂ ನಿಮಗೆ ವಿನೋದಕ್ಕೆ ಇರಲಿ ಎಂದು ತೆಗೆದುಕೊಂಡು ಬಂದೆವು' ಎಂದು ಹೇಳಿದರು.

ಆ ಮಾತನ್ನು ಕೇಳಿ ಸೀತಾದೇವಿಯರು ಹನುಮಂತದೇವರನ್ನು ಸುಗ್ರೀವನನ್ನು ಮೊದಲೇ ಬಿಡಿಸಿ 'ಮಕ್ಕಳೇ! ನೀವು ಬಹಳ ಅನ್ಯಾಯವನ್ನು ಮಾಡಿದಿರಿ. ರಾಮದೇವರ ಕುದುರೆಯನ್ನು ಕಟ್ಟಿದ್ದು ಸರಿಯಲ್ಲ. ಅವರು ನಿಮ್ಮ ತಂದೆಯು. ತಂದೆಯ ಕುದುರೆಯನ್ನು ಕಟ್ಟಿರುವಿರಿ. ತಂದೆಯು ಯಾಗಕ್ಕಾಗಿ ಕುದುರೆಯನ್ನು ಬಿಟ್ಟಿರುವರು. ಅದನ್ನು ನೀವೇಕೆ ಕಟ್ಟಿರುವಿರಿ? ಕುದುರೆಯನ್ನು ಬಿಟ್ಟುಬಿಡಿರಿ. ರಾಮದೇವರ ತಮ್ಮನಾದ ಶತ್ರುಘ್ನನೊಡನೆ ಕ್ಷಮೆಯನ್ನು ಕೇಳಿಕೊಳ್ಳಿರಿ'ಎಂದು ಹೇಳಿದರು. ತಾಯಿಯ ಮಾತನ್ನು ಕೇಳಿ ಅವರು 'ಕ್ಷತ್ರಿಯ ಧರ್ಮದಿಂದ ನಾವು ಆ ರಾಜನನ್ನು ಜಯಿಸಿರುವೆವು. ಕ್ಷತ್ರಿಯ ಧರ್ಮದಿಂದ ಯುದ್ಧ ಮಾಡಿದ ನಮಗೆ ಒಂದೂ ಅನ್ಯಾಯವೂ ಇರುವುದಿಲ್ಲ. ನಾವು ಓದುತ್ತಿರುವಾಗ ವಾಲ್ಮೀಕಿ ಋಷಿಗಳು ಪೂರ್ವದಲ್ಲಿ ಕಣ್ವಾಶ್ರಮದಲ್ಲಿ ಭರತನು ದುಷ್ಯಂತನ ಯಾಗದ ಕುದುರೆಯನ್ನು ಕಟ್ಟಿಹಾಕಿ ಯುದ್ಧ ಮಾಡಿದನೆಂದು ತಿಳಿಸಿರುವರು. ಆದುದರಿಂದ ಕ್ಷತ್ರಿಯನಾದವನು ಮಗನು ತಂದೆಯೊಡನೆಯೂ ತಮ್ಮನು ಅಣ್ಣನೊಡನೆಯೂ ಶಿಷ್ಯನು ಗುರುವಿನೊಡೆಯೂ ಯುದ್ಧವನ್ನು ಮಾಡಬಹುದು. ಆದರೂ ನಿಮ್ಮ ಆಜ್ಞೆಯಿಂದ ಈ ಕಪಿಗಳನ್ನು ಕುದುರೆಯನ್ನು ಬಿಟ್ಟುಬಿಡುವೆವು' ಎಂದು ತಾಯಿಯೊಡನೆ ಹೇಳಿ ಯುದ್ಧರಂಗಕ್ಕೆ ಹೋಗಿ ಕುದುರೆಯನ್ನು ಬಿಟ್ಟು ಬಂದರು. ಶ್ರೀಸೀತಾದೇವಿಯರು ಶ್ರೀರಾಮದೇವರನ್ನು ಮನಸ್ಸಿನಲ್ಲಿಯೇ ಧ್ಯಾನಮಾಡಿ ಒಂದುಕ್ಷಣ ಸೂರ್ಯನನ್ನು ನೋಡಿ 'ನಾನು ಮನಸ್ಸಿನಿಂದಲೂ ಮಾತಿನಿಂದಲೂ ಕಾರ್ಯದಿಂದಲೂ ರಾಮದೇವರನ್ನೇ ಸೇವಿಸುತ್ತಿರುವವಳಾದರೆ ನನ್ನ ಮಕ್ಕಳಿಂದ ಮೃತರಾದವರೆಲ್ಲರೂ ಬದುಕಲಿ' ಎಂದು ಹೇಳಿದರು. ಆಗಲೇ ಯುದ್ಧರಂಗದಲ್ಲಿ ಬಿದ್ದಿದ್ದವರೆಲ್ಲರೂ ಏಳುವವರಾದರು.



# ರಾಮದೇವರ ಕುದುರೆಯು ಹಿಂದೆ ಬಂದದ್ದು [1]

ಯುದ್ಧರಂಗದಲ್ಲಿ ಶತ್ರುಘ್ನನು ಮೂರ್ಛೆಯಿಂದ ಎದ್ದನು. ಹಾಗೆಯೇ ಮೂರ್ಛಿತರಾಗಿದ್ದವರೆಲ್ಲರೂ ಎದ್ದರು. ಶತ್ರುಘ್ನನು ತನ್ನ ಹತ್ತಿರದಲ್ಲಿಯೇ ಇರುವ ಕುದುರೆಯನ್ನು ನೋಡಿದನು. ತನ್ನ ತಲೆಯಲ್ಲಿ ಕಿರೀಟವಿರಲಿಲ್ಲ. ಸೈನ್ಯವೆಲ್ಲವೂ ಬದುಕಿರುವುದನ್ನು ನೋಡಿದನು. ಆಶ್ಚರ್ಯವನ್ನು ಹೊಂದಿದನು. ಮೂರ್ಛಾರಹಿತನಾದ ಮಂತ್ರಿಯಾದ ಸುಮತಿಯೊಡನೆ 'ಆ ಬಾಲಕನು ಕೃಪೆಯನ್ನು ಮಾಡಿ ಯಜ್ಞವು ಪೂರ್ತಿಯನ್ನು ಹೊಂದಲಿ ಎಂದು ಕುದುರೆಯನ್ನು ಬಿಟ್ಟುಹೋದನು. ನಾವಿನ್ನು ಬೇಗನೇ ಕುದುರೆಯನ್ನು ಎದುರುನೋಡುತ್ತಿರುವ ರಾಮದೇವರ ಬಳಿಗೆ ಹೋಗುವ' ಎಂದು ಹೇಳಿ ರಥದಲ್ಲಿ ಕೂತುಕೊಂಡು ಆಶ್ರಮದಿಂದ ಬಹುದೂರಕ್ಕೆ ಹೋದನು. ಅವನ ಹಿಂದೆಯೇ ಚತುರಂಗ ಸೈನ್ಯವೂ ಹೋಯಿತು. ವೇಗದಿಂದ ಗಂಗೆಯನ್ನು ದಾಟಿ ಹೋಯಿತು. ಶತ್ರುಘ್ನನು ಪುಷ್ಕಲನಿಂದಲೂ ಸುರಥನಿಂದಲೂ ಕೂಡಿಕೊಂಡು ಮಣಿಮಯವಾದ ರಥದಲ್ಲಿ ಕೂತುಕೊಂಡು ರತ್ನಮಾಲೆಯಿಂದ ಅಲಂಕೃತವಾದ ಶ್ವೇತಚ್ಛತ್ರವುಳ್ಳ ಚಾಮರದಿಂದ ಅಲಂಕೃತವಾದ ಕುದುರೆಯನ್ನು ಮುಂದೆ ಮಾಡಿಕೊಂಡು ಅನೇಕಸಾವಿರ ವೀರನಾದದಿಂದ ಅಲಂಕೃತರಾದ ಧನುರ್ಧಾರಿಗಳಾದ ಬಲಿಷ್ಠರಾದ ಬಲಿಷ್ಠರಿಂದ ಕೂಡಿಕೊಂಡು ಕ್ರಮದಿಂದ ಅನೇಕ ಸೂರ್ಯವಂಶದ ರಾಜರಿಂದ ಅಲಂಕೃತವಾದ ಅಯೋಧ್ಯಾನಗರಿಗೆ ಬಂದು ಸೇರಿದನು.

ರಾಮದೇವರು ಶತ್ರುಘ್ನನಿಂದಲೂ ಪುಷ್ಕಲನಿಂದಲೂ ಸಹಿತವಾಗಿ ಕುದುರೆಯು ಬಂದು ಸೇರಿತು ಎಂದು ಭೃತ್ಯನು ಹೇಳಿದ ಮಾತನ್ನು ಕೇಳಿ ಸಂತೋಷಪಟ್ಟಂತೆ ತೋರಿಸಿದನು. ಸೈನ್ಯ ಸಹಿತವಾಗಿ ಲಕ್ಷ್ಮಣನನ್ನು ಕೊಟ್ಟು ಕಳುಹಿಸಿದರು. ಲಕ್ಷ್ಮಣನು ಸೈನ್ಯಸಹಿತನಾಗಿ ಹೋಗಿ ಬಂದಿರುವ ತಮ್ಮನನ್ನು ಸಂತೋಷದಿಂದ ಆಲಿಂಗನ ಮಾಡಿಕೊಂಡನು. ಕುಶಲ ಪ್ರಶ್ನೆಯನ್ನು ಮಾಡಿದನು. ಶತ್ರುಘ್ನನೂ ಪರಮಸಂತೋಷವನ್ನು ಹೊಂದಿದನು. ತರುವಾಯ ನಗರಕ್ಕೆ ಬಂದರು. ಸರಯೂನದಿಯ ತೀರದಲ್ಲಿರುವ ರಾಮದೇವರ ಯಾಗಶಾಲೆಗೆ ಎಲ್ಲರೂ ಬಂದರು.



1. ಪ.ಪು.ಪಾ.ಖಂ. ಅ–65

# ಯಜ್ಞಶಾಲೆಯ ವೈಭವವು [1]

ಸರಯೂನದಿಯು ಶ್ರೀರಾಮದೇವರ ಪಾದಧೂಳಿಯಿಂದ ಪವಿತ್ರವಾಗಿತ್ತು. ಹಂಸ, ಕಾರಂಡವ, ಚಕ್ರವಾಕ ಮೊದಲಾದ ವಿಚಿತ್ರ ಬಣ್ಣವುಳ್ಳ ಪಕ್ಷಿಗಳಿಂದ ಶೋಭಿತವಾಗಿತ್ತು. ಆ ನದಿಯ ತೀರದಲ್ಲಿ ರಾಮಚಂದ್ರದೇವರಿಂದ ಮಂಟಪಗಳು ಪ್ರಕಾಶಮಾನಗಳಾಗಿದ್ದವು. ಬ್ರಾಹ್ಮಣರ ವೇದಘೋಷಗಳು ನಡೆಯುತ್ತಿದ್ದವು. ಧನುಸ್ಸನ್ನು ಕೈಯಲ್ಲಿ ಹಿಡಿದುಕೊಂಡಿರುವ ಅನೇಕ ಕ್ಷತ್ರಿಯರೂ ಧನುಸ್ಸಿನ ಠೇಂಕಾರವನ್ನು ಮಾಡುತ್ತಿದ್ದರು. ಅಲ್ಲಿ ಬ್ರಾಹ್ಮಣರು ಪರಸ್ಪರವಾಗಿ ನೋಡಿಕೊಂಡು ಮನೋಹರ ವೃತ್ತಾಂತಗಳನ್ನು ಮಾತಾಡಿಕೊಂಡು ಮನೋಹರವಾದ ಅನ್ನವನ್ನು ಭೋಜನ ಮಾಡುತ್ತಿದ್ದರು. ಚಂದ್ರನಂತೆ ಬೆಳ್ಳಗಿರುವ ಹಾಲಿನ ಪಾಯಸವನ್ನು ಬಡಿಸಿದ್ದರು. ಜೇನುತುಪ್ಪವನ್ನು ಸಕ್ಕರೆ ಹಾಕಿದ ಹಾಲನ್ನೂ ಬಡಿಸುತ್ತಿದ್ದರು. ಚಂದ್ರಮಂಡಲದಂತೆ ಇರುವ ಅಪ್ಪವನ್ನು ಮಾಡಿದ್ದರು. ಅವುಗಳು ಪಚ್ಚೆಕರ್ಪೂರದ ವಾಸನೆಯುಳ್ಳವುಗಳಾಗಿದ್ದವು. ಪೇಣಿಗಳನ್ನು ಅಂಬೋಡೆಗಳನ್ನೂ ದೋಸೆಗಳನ್ನೂ ಚಕ್ಕುಲಿಗಳನ್ನೂ ಮಂಡಿಗೆಗಳನ್ನೂ ಬಡಿಸಿದ್ದರು. ಮಲ್ಲಿಗೆ ಹೂವಿನಂತೆ ಬೆಳ್ಳಗಿರುವ ಅನ್ನವನ್ನು ಬಡಿಸಿದ್ದರು. ಒಳ್ಳೇ ವಾಸನೆಯುಳ್ಳ ಹುಗ್ಗಿಯನ್ನು ಬಡಿಸಿದ್ದರು. ಅದೇ ರೀತಿಯಾಗಿ ರುಚಿಕರವಾದ ಮೊಸರನ್ನವನ್ನು ಬಡಿಸಿದ್ದರು. ಅವರಲ್ಲಿ ಕೆಲವು ಬ್ರಾಹ್ಮಣರು ಎಲೆಯಲ್ಲಿ ಬಡಿಸಿರುವ ಬೆಳ್ಳಗೆ ಇರುವ ಹಾಲಿನ ಪಾಯಸವನ್ನು ನೋಡಿ ಪರಸ್ಪರ ಮಾತಾಡಿಕೊಂಡರು. ಒಬ್ಬ ಬ್ರಾಹ್ಮಣನು ಇದೇನು ಎಲೆಯಲ್ಲಿ ಅದ್ಭುತವಾಗಿ ಬಿದ್ದಿದೆ. ಆಕಾಶದಿಂದ ಚಂದ್ರಮಂಡಲವು ಬಿದ್ದಿದೆಯೋ? ಇದು ಅಮೃತವಲ್ಲವೆಂದು ಕಾಣುತ್ತದೆ ಎಂದನು. ಅದನ್ನು ಕೇಳಿ ಮತ್ತೊಬ್ಬ ಬ್ರಾಹ್ಮಣನು ರೋಷವುಳ್ಳವನಾಗಿ ಇದು ಚಂದ್ರಮಂಡಲವೇ ಇಲ್ಲ. ಇದು ಅಮೃತದ ಬಿಂದುವು ಬಿದ್ದಿದೆ. ಎದ್ದನು. ಮತ್ತೊಬ್ಬನು ಬ್ರಾಹ್ಮಣರ ಸಾವಿರ ಎಲೆಗಳಲ್ಲಿ ಚಂದ್ರಮಂಡಲವು ಹೇಗೆ ಬರುವುದು? ಆದುದರಿಂದ ಇದು ಕನ್ನಡಿಯು. ಅಥವಾ ಕರ್ಪೂರವೆಂದು ತಿಳಿಯಿರಿ ಎಂದನು.

ಅಷ್ಟರಲ್ಲಿ ಮತ್ತೊಬ್ಬ ಬ್ರಾಹ್ಮಣನು ರೋಷದಿಂದ ತಲೆಯಾಡಿಸುತ್ತಾ ಬ್ರಾಹ್ಮಣರೆಲ್ಲರೂ ಮಡ್ಡರು. ಒಬ್ಬರಿಗೂ ಒಂದೂ ತಿಳಿಯದು. ಇದು ಹಾಲಿನಿಂದ ಬೇಯಿಸಿದ ಕಮಲದ ಹೂವು ಎಂದು ಹೇಳಿದನು. ಈ ಪ್ರಕಾರವಾಗಿ ಗೆಡ್ಡೆ ಹಣ್ಣುಗಳನ್ನು ತಿನ್ನುತ್ತಿದ್ದ ಇಂತಹ ಭಕ್ಷ್ಯಗಳ ನೋಡಿರದ ಬ್ರಾಹ್ಮಣರು ನಾನಾವಿಧವಾಗಿ ಊಹೆಯನ್ನು ಮಾಡುತ್ತಾ ಭೋಜನ ಮಾಡುತ್ತಿದ್ದರು. ಒಬ್ಬ ಬ್ರಾಹ್ಮಣನು ಕ್ಷತ್ರಿಯರ ಜನ್ಮವು ಸಾರ್ಥಕವಾದದ್ದು. ಅವರೆಲ್ಲರೂ ಮಹಾಪುಣ್ಯದಿಂದ ಸಿಗುವ ಇಂತಹ ಭಕ್ಷ್ಯವನ್ನು ಭೋಜನ ಮಾಡುವರು ಎಂದು ಹೇಳಿದನು. ಮತ್ತೊಬ್ಬ ಬ್ರಾಹ್ಮಣನು

ಇದು ದಾನದ ಫಲವು. ಯಾರು ಬ್ರಾಹ್ಮಣರಿಗೆ ದಾನಮಾಡಿರುವರೋ ಅವರು ಇಂತಹ ಅನ್ನವನ್ನು ಭೋಜನ ಮಾಡುವರು ಎಂದನು. ಯಾರು ಪರಮಾತ್ಮನ ನೈವೇದ್ಯಗಳಿಂದ ಬ್ರಾಹ್ಮಣರನ್ನು ಪೂಜಿಸಿಲ್ಲವೋ ಅಂತಹವರಿಗೆ ಇಂತಹ ಅನ್ನ ಭಕ್ಷ್ಯಗಳು ಕಣ್ಣಿಗೆ ನೋಡಲಿಕ್ಕೇ ಸಿಗಲಾರವು. ಯಾರು ಬ್ರಾಹ್ಮಣರಿಗೆ ನಾನಾವಿಧ ರುಚಿಕರವಾದ ಪದಾರ್ಥಗಳಿಂದ ಭೋಜನ ಮಾಡಿಸುವುದಿಲ್ಲವೋ ಆ ಪಾಪಿಗಳು ಹಸಿವೆಯಿಂದ ಪೀಡಿತರಾದವರು ಇಂತಹ ರುಚಿಕರವಾದ ವಸ್ತುವನ್ನು ಹೇಗೆ ಭೋಜನ ಮಾಡು ವರು? ಎಂದು ಹೇಳಿದನು. ಈರೀತಿಯಾಗಿ ಅತಿರುಚಿಕರವಾದ ಪದಾರ್ಥಗಳಿಂದ ಬ್ರಾಹ್ಮಣರಿಗೆ ಭೋಜನ ಮಾಡಿಸುತ್ತಿದ್ದರು. ಬ್ರಾಹ್ಮಣರು ವೇದಮಂತ್ರಗಳನ್ನು ಹೇಳು ತ್ತಿದ್ದರು. ಕೆಲವರು ಸಂತೋಷದಿಂದ ಕುಣಿಯುತ್ತಿದ್ದರು. ಗರ್ಜನೆ ಮಾಡುತ್ತಿದ್ದರು. ಮಹಾಉತ್ಸವವು ನಡೆಯುತ್ತಿತ್ತು.



## ದಿಗ್ವಿಜಯದ ವೃತ್ತಾಂತ [1]

ಶತ್ರುಘ್ನನು ವಿನಯದಿಂದ ರಾಮದೇವರ ಬಳಿಗೆ ಬಂದು ನಮಸ್ಕರಿಸಿದನು. ರಾಮದೇವರು ಸಂತೋಷವುಳ್ಳವರಾಗಿ ಎಬ್ಬಿಸಿ ಗಾಢಾಲಿಂಗನ ಮಾಡಿದರು. ಶತ್ರುಘ್ನನು ಬಹಳ ಸಂತೋಷವುಳ್ಳವನಾದನು. ಆಮೇಲೆ ರಾಮದೇವರು ತನಗೆ ನಮಸ್ಕರಿಸಿದ ಪುಷ್ಕಲನನ್ನು ಹನುಮಂತದೇವರನ್ನು ಸುಗ್ರೀವನನ್ನು ಅಂಗದನನ್ನೂ ಲಕ್ಷ್ಮೀನಿಧಿಯನ್ನೂ ಪ್ರತಾಪಾಗ್ರ್ಯ, ಸುಬಾಹು, ಸುಮದ, ನೀಲರತ್ನ, ಸತ್ಯವಂತ, ವೀರಮಣಿ ಇವರಿಂದಲೂ ನಮಸ್ಕಾರ ಮಾಡಲ್ಪಡುವವರಾಗಿ ಅವರನ್ನೆಲ್ಲಾ ಸತ್ಕಾರ ಮಾಡಿದರು. ರಾಮದೇವರು ತನ್ನ ಪಾದಕ್ಕೆ ನಮಸ್ಕರಿಸಿದ ಇತರರನ್ನು ಸ್ವೀಕರಿಸಿದರು.

ಆಗ ರಾಮದೇವರು ತನ್ನ ಮಂತ್ರಿಯೊಡನೆ ಪ್ರೀತಿಯಿಂದ ಯೋಚಸುವವ ರಾದರು. 'ಮಂತ್ರಿವರ್ಯನೇ! ನಮ್ಮ ಕುದುರೆಯು ಎಲ್ಲಿ ಎಲ್ಲಿ ಸಂಚರಿಸಿತು' ತಮ್ಮನಾದ ಶತ್ರುಘ್ನನು ಹೇಗೆ ಕುದುರೆಯನ್ನು ಬಿಡಿಸಿಕೊಂಡು ಬಂದನು? ಇದನ್ನೆಲ್ಲಾ ತಿಳಿಸು' ಎಂದು ಕೇಳಿದರು. ಆಗ ಸುಮತಿಯು ನಗುತ್ತಾ ಗಂಭೀರವಾದ ವಾಣಿ ಯಿಂದ 'ಸರ್ವಜ್ಞರಾದ ನಿಮ್ಮ ಮುಂಭಾಗದಲ್ಲಿ ನಾನು ಏನು ಹೇಳಲಿ? ನೀವು ಎಲ್ಲವನ್ನು ತಿಳಿದವರಾಗಿಯೇ ನನ್ನೊಡನೆ ತಿಳಿಯದವರಂತೆ ಕೇಳುತ್ತಿರುವಿರಿ. ಆದುದರಿಂದ ನಿಮ್ಮ ಆಜ್ಞೆಯಂತೆ ಹೇಳುವೆನು. ನಿಮ್ಮ ಅನುಗ್ರಹದಿಂದ ನಿಮ್ಮ ಕುದುರೆಯು ಭೂಮಿಯಲ್ಲಿ ಎಲ್ಲಾ ಸ್ಥಳದಲ್ಲಿಯೂ ಸಂಚರಿಸಿತು. ಒಬ್ಬರೂ ಅದನ್ನು

1. ಪ.ಪು.ಪಾ.ಖಂ. ಅ–65

# ಯಜ್ಞಶಾಲೆಯ ವೈಭವವು [1]

ಸರಯೂನದಿಯು ಶ್ರೀರಾಮದೇವರ ಪಾದಧೂಳಿಯಿಂದ ಪವಿತ್ರವಾಗಿತ್ತು. ಹಂಸ, ಕಾರಂಡವ, ಚಕ್ರವಾಕ ಮೊದಲಾದ ವಿಚಿತ್ರ ಬಣ್ಣವುಳ್ಳ ಪಕ್ಷಿಗಳಿಂದ ಶೋಭಿತವಾಗಿತ್ತು. ಆ ನದಿಯ ತೀರದಲ್ಲಿ ರಾಮಚಂದ್ರದೇವರಿಂದ ಮಂಟಪಗಳು ಪ್ರಕಾಶಮಾನಗಳಾಗಿದ್ದವು. ಬ್ರಾಹ್ಮಣರ ವೇದಘೋಷಗಳು ನಡೆಯುತ್ತಿದ್ದವು. ಧನುಸ್ಸನ್ನು ಕೈಯಲ್ಲಿ ಹಿಡಿದುಕೊಂಡಿರುವ ಅನೇಕ ಕ್ಷತ್ರಿಯರೂ ಧನುಸ್ಸಿನ ಠೇಂಕಾರವನ್ನು ಮಾಡುತ್ತಿದ್ದರು. ಅಲ್ಲಿ ಬ್ರಾಹ್ಮಣರು ಪರಸ್ಪರವಾಗಿ ನೋಡಿಕೊಂಡು ಮನೋಹರ ವೃತ್ತಾಂತಗಳನ್ನು ಮಾತಾಡಿಕೊಂಡು ಮನೋಹರವಾದ ಅನ್ನವನ್ನು ಭೋಜನ ಮಾಡುತ್ತಿದ್ದರು. ಚಂದ್ರನಂತೆ ಬೆಳ್ಳಗಿರುವ ಹಾಲಿನ ಪಾಯಸವನ್ನು ಬಡಿಸಿದ್ದರು. ಜೇನುತುಪ್ಪವನ್ನು ಸಕ್ಕರೆ ಹಾಕಿದ ಹಾಲನ್ನೂ ಬಡಿಸುತ್ತಿದ್ದರು. ಚಂದ್ರಮಂಡಲದಂತೆ ಇರುವ ಅಪ್ಪವನ್ನು ಮಾಡಿದ್ದರು. ಅವುಗಳು ಪಚ್ಚೆಕರ್ಪೂರದ ವಾಸನೆಯುಳ್ಳವುಗಳಾಗಿದ್ದವು. ಪೇಣಿಗಳನ್ನು ಅಂಬೋಡೆಗಳನ್ನೂ ದೋಸೆಗಳನ್ನೂ ಚಕ್ಕುಲಿಗಳನ್ನೂ ಮಂಡಿಗೆಗಳನ್ನೂ ಬಡಿಸಿದ್ದರು. ಮಲ್ಲಿಗೆ ಹೂವಿನಂತೆ ಬೆಳ್ಳಗಿರುವ ಅನ್ನವನ್ನು ಬಡಿಸಿದ್ದರು. ಒಳ್ಳೇ ವಾಸನೆಯುಳ್ಳ ಹುಗ್ಗಿಯನ್ನು ಬಡಿಸಿದ್ದರು. ಅದೇ ರೀತಿಯಾಗಿ ರುಚಿಕರವಾದ ಮೊಸರನ್ನವನ್ನು ಬಡಿಸಿದ್ದರು. ಅವರಲ್ಲಿ ಕೆಲವು ಬ್ರಾಹ್ಮಣರು ಎಲೆಯಲ್ಲಿ ಬಡಿಸಿರುವ ಬೆಳ್ಳಗೆ ಇರುವ ಹಾಲಿನ ಪಾಯಸವನ್ನು ನೋಡಿ ಪರಸ್ಪರ ಮಾತಾಡಿಕೊಂಡರು. ಒಬ್ಬ ಬ್ರಾಹ್ಮಣನು ಇದೇನು ಎಲೆಯಲ್ಲಿ ಅದ್ಭುತವಾಗಿ ಬಿದ್ದಿದೆ. ಆಕಾಶದಿಂದ ಚಂದ್ರಮಂಡಲವು ಬಿದ್ದಿದೆಯೋ? ಇದು ಅಮೃತವಲ್ಲವೆಂದು ಕಾಣುತ್ತದೆ ಎಂದನು. ಅದನ್ನು ಕೇಳಿ ಮತ್ತೊಬ್ಬ ಬ್ರಾಹ್ಮಣನು ರೋಷವುಳ್ಳವನಾಗಿ ಇದು ಚಂದ್ರಮಂಡಲವೇ ಇಲ್ಲ, ಇದು ಅಮೃತದ ಬಿಂದುವು ಬಿದ್ದಿದೆ. ಎದ್ದನು. ಮತ್ತೊಬ್ಬನು ಬ್ರಾಹ್ಮಣರ ಸಾವಿರ ಎಲೆಗಳಲ್ಲಿ ಚಂದ್ರಮಂಡಲವು ಹೇಗೆ ಬರುವುದು? ಆದುದರಿಂದ ಇದು ಕನ್ನಡಿಯು. ಅಥವಾ ಕರ್ಪೂರವೆಂದು ತಿಳಿಯಿರಿ ಎಂದನು.

ಅಷ್ಟರಲ್ಲಿ ಮತ್ತೊಬ್ಬ ಬ್ರಾಹ್ಮಣನು ರೋಷದಿಂದ ತಲೆಯಾಡಿಸುತ್ತಾ ಬ್ರಾಹ್ಮಣರೆಲ್ಲರೂ ಮಡ್ಡರು. ಒಬ್ಬರಿಗೂ ಒಂದೂ ತಿಳಿಯದು. ಇದು ಹಾಲಿನಿಂದ ಬೇಯಿಸಿದ ಕಮಲದ ಹೂವು ಎಂದು ಹೇಳಿದನು. ಈ ಪ್ರಕಾರವಾಗಿ ಗೆಡ್ಡೆ ಹಣ್ಣುಗಳನ್ನು ತಿನ್ನುತ್ತಿದ್ದ ಇಂತಹ ಭಕ್ಷ್ಯಗಳ ನೋಡಿರದ ಬ್ರಾಹ್ಮಣರು ನಾನಾವಿಧವಾಗಿ ಊಹೆಯನ್ನು ಮಾಡುತ್ತಾ ಭೋಜನ ಮಾಡುತ್ತಿದ್ದರು. ಒಬ್ಬ ಬ್ರಾಹ್ಮಣನು ಕ್ಷತ್ರಿಯರ ಜನ್ಮವು ಸಾರ್ಥಕವಾದದ್ದು. ಅವರೆಲ್ಲರೂ ಮಹಾಪುಣ್ಯದಿಂದ ಸಿಗುವ ಇಂತಹ ಭಕ್ಷ್ಯವನ್ನು ಭೋಜನ ಮಾಡುವರು ಎಂದು ಹೇಳಿದನು. ಮತ್ತೊಬ್ಬ ಬ್ರಾಹ್ಮಣನು

ಇದು ದಾನದ ಫಲವು. ಯಾರು ಬ್ರಾಹ್ಮಣರಿಗೆ ದಾನಮಾಡಿರುವರೋ ಅವರು ಇಂತಹ ಅನ್ನವನ್ನು ಭೋಜನ ಮಾಡುವರು ಎಂದನು. ಯಾರು ಪರಮಾತ್ಮನ ನೈವೇದ್ಯಗಳಿಂದ ಬ್ರಾಹ್ಮಣರನ್ನು ಪೂಜಿಸಿಲ್ಲವೋ ಅಂತಹವರಿಗೆ ಇಂತಹ ಅನ್ನ ಭಕ್ಷ್ಯಗಳು ಕಣ್ಣಿಗೆ ನೋಡಲಿಕ್ಕೇ ಸಿಗಲಾರವು. ಯಾರು ಬ್ರಾಹ್ಮಣರಿಗೆ ನಾನಾವಿಧ ರುಚಿಕರವಾದ ಪದಾರ್ಥಗಳಿಂದ ಭೋಜನ ಮಾಡಿಸುವುದಿಲ್ಲವೋ ಆ ಪಾಪಿಗಳು ಹಸಿವೆಯಿಂದ ಪೀಡಿತರಾದವರು ಇಂತಹ ರುಚಿಕರವಾದ ವಸ್ತುವನ್ನು ಹೇಗೆ ಭೋಜನ ಮಾಡು ವರು? ಎಂದು ಹೇಳಿದನು. ಈರೀತಿಯಾಗಿ ಅತಿರುಚಿಕರವಾದ ಪದಾರ್ಥಗಳಿಂದ ಬ್ರಾಹ್ಮಣರಿಗೆ ಭೋಜನ ಮಾಡಿಸುತ್ತಿದ್ದರು. ಬ್ರಾಹ್ಮಣರು ವೇದಮಂತ್ರಗಳನ್ನು ಹೇಳು ತ್ತಿದ್ದರು. ಕೆಲವರು ಸಂತೋಷದಿಂದ ಕುಣಿಯುತ್ತಿದ್ದರು. ಗರ್ಜನೆ ಮಾಡುತ್ತಿದ್ದರು. ಮಹಾಉತ್ಸವವು ನಡೆಯುತ್ತಿತ್ತು.



## ದಿಗ್ವಿಜಯದ ವೃತ್ತಾಂತ [1]

ಶತ್ರುಘ್ನನು ವಿನಯದಿಂದ ರಾಮದೇವರ ಬಳಿಗೆ ಬಂದು ನಮಸ್ಕರಿಸಿದನು. ರಾಮದೇವರು ಸಂತೋಷವುಳ್ಳವರಾಗಿ ಎಬ್ಬಿಸಿ ಗಾಢಾಲಿಂಗನ ಮಾಡಿದರು. ಶತ್ರುಘ್ನನು ಬಹಳ ಸಂತೋಷವುಳ್ಳವನಾದನು. ಆಮೇಲೆ ರಾಮದೇವರು ತನಗೆ ನಮಸ್ಕರಿಸಿದ ಪುಷ್ಕಲನನ್ನು ಹನುಮಂತದೇವರನ್ನು ಸುಗ್ರೀವನನ್ನು ಅಂಗದನನ್ನೂ ಲಕ್ಷ್ಮೀನಿಧಿಯನ್ನೂ ಪ್ರತಾಪಾಗ್ರ್ಯ, ಸುಬಾಹು, ಸುಮದ, ನೀಲರತ್ನ, ಸತ್ಯವಂತ, ವೀರಮಣಿ ಇವರಿಂದಲೂ ನಮಸ್ಕಾರ ಮಾಡಲ್ಪಡುವವರಾಗಿ ಅವರನ್ನೆಲ್ಲಾ ಸತ್ಕಾರ ಮಾಡಿದರು. ರಾಮದೇವರು ತನ್ನ ಪಾದಕ್ಕೆ ನಮಸ್ಕರಿಸಿದ ಇತರರನ್ನು ಸ್ವೀಕರಿಸಿದರು.

ಆಗ ರಾಮದೇವರು ತನ್ನ ಮಂತ್ರಿಯೊಡನೆ ಪ್ರೀತಿಯಿಂದ ಯೋಚಿಸುವವ ರಾದರು. 'ಮಂತ್ರಿವರ್ಯನೇ! ನಮ್ಮ ಕುದುರೆಯು ಎಲ್ಲಿ ಎಲ್ಲಿ ಸಂಚರಿಸಿತು' ತಮ್ಮನಾದ ಶತ್ರುಘ್ನನು ಹೇಗೆ ಕುದುರೆಯನ್ನು ಬಿಡಿಸಿಕೊಂಡು ಬಂದನು? ಇದನ್ನೆಲ್ಲಾ ತಿಳಿಸು' ಎಂದು ಕೇಳಿದರು. ಆಗ ಸುಮತಿಯು ನಗುತ್ತಾ ಗಂಭೀರವಾದ ವಾಣಿ ಯಿಂದ 'ಸರ್ವಜ್ಞರಾದ ನಿಮ್ಮ ಮುಂಭಾಗದಲ್ಲಿ ನಾನು ಏನು ಹೇಳಲಿ? ನೀವು ಎಲ್ಲವನ್ನು ತಿಳಿದವರಾಗಿಯೇ ನನ್ನೊಡನೆ ತಿಳಿಯದವರಂತೆ ಕೇಳುತ್ತಿರುವಿರಿ. ಆದುದರಿಂದ ನಿಮ್ಮ ಆಜ್ಞೆಯಂತೆ ಹೇಳುವೆನು. ನಿಮ್ಮ ಅನುಗ್ರಹದಿಂದ ನಿಮ್ಮ ಕುದುರೆಯು ಭೂಮಿಯಲ್ಲಿ ಎಲ್ಲಾ ಸ್ಥಳದಲ್ಲಿಯೂ ಸಂಚರಿಸಿತು. ಒಬ್ಬರೂ ಅದನ್ನು

1. ಪ.ಪು.ಪಾ.ಖಂ. ಅ–65

ಕಟ್ಟಿದವರಲ್ಲ. ಎಲ್ಲರೂ ತಮ್ಮ ತಮ್ಮ ರಾಜ್ಯವನ್ನು ಕೊಟ್ಟು ನಮಸ್ಕರಿಸಿದರು. ರಾವಣನೆಂಬ ದೈತ್ಯೇಂದ್ರನನ್ನು ಸಂಹರಿಸಿದ ನಿಮ್ಮ ಕುದುರೆಯನ್ನು ಯಾರು ಕಟ್ಟಿಹಾಕಬೇಕು' ತರುವಾಯ ನಿಮ್ಮ ಕುದುರೆಯು ಅಹಿಚ್ಛತ್ರಕ್ಕೆ ಹೋಯಿತು.

ಅದನ್ನು ತಿಳಿದು ಅಲ್ಲಿಯ ರಾಜನಾದ ಸುಮದನು ಮಕ್ಕಳಿಂದ ಸೈನ್ಯದಿಂದ ಸಹಿತನಾಗಿ ಸಮಸ್ತ ರಾಜ್ಯವನ್ನು ಒಪ್ಪಿಸಿದನು. ಆ ರಾಜನು ಪಾರ್ವತೀದೇವಿಯನ್ನು ಪೂಜಿಸಿ ಬಹುಕಾಲ ಆಯುಷ್ಯವನ್ನು ರಾಜ್ಯವನ್ನು ಪಡೆದಿದ್ದನು. ಅದೇ ಸುಮದನು ನಿಮಗೆ ಈಗ ನಮಸ್ಕರಿಸುವನು. ಇವನನ್ನು ಕೃಪಾದೃಷ್ಟಿಯಿಂದ ಅಂಗೀಕರಿಸಿರಿ. ತರುವಾಯ ಕುದುರೆಯು ಅಲ್ಲಿಂದ ಸುಬಾಹುರಾಜನ ರಾಜ್ಯಕ್ಕೆ ಹೋಯಿತು. ಸುಬಾಹುರಾಜನ ಮಗನಾದ ದಮನನು ಕುದುರೆಯನ್ನು ಕಟ್ಟಿಹಾಕಿದನು. ದಮನನೊಡನೆ ಬಹಳ ಯುದ್ಧವು ನಡೆಯಿತು. ಕೊನೆಗೆ ಅವನನ್ನು ಪುಷ್ಕಲನು ಜಯಿಸಿದನು. ಮೂರ್ಛಾಗೊಳಿಸಿದನು. ತರುವಾಯ ಸುಬಾಹುರಾಜನು ಕೋಪಿಸಿಕೊಂಡು ಬಂದು ಹನುಮಂತದೇವರೊಡನೆ ಯುದ್ಧ ಮಾಡಿದನು. ಆ ಹನುಮಂತದೇವರ ಪಾದದಿಂದ ಒದೆಯಲ್ಪಟ್ಟವನಾಗಿ ಶಾಪದಿಂದ ತಿರಸ್ಕೃತವಾದ ಜ್ಞಾನವನ್ನು ಹೊಂದಿ ಸಮಸ್ತವನ್ನೂ ಸಮರ್ಪಿಸಿ ಕುದುರೆಗೆ ರಕ್ಷಕನಾಗಿ ಬಂದನು. ಈ ಸುಬಾಹುರಾಜನೂ ತಮಗೆ ನಮಸ್ಕರಿಸುತ್ತಿರುವನು. ಅವನಿಗೂ ತಾವು ಕ್ಷೇಮವುಂಟಾಗುವಂತೆ ಅನುಗ್ರಹ ಮಾಡಬೇಕು.

ಅಲ್ಲಿಂದ ಮುಂದೆ ಹೋಗಿ ಕುದುರೆಯು ಒಂದು ಮಡುವಿನಲ್ಲಿ ಮುಳುಗಿಹೋಯಿತು. ಅಲ್ಲಿಗೆ ಶತ್ರುಘ್ನನು ಹೋಗಿ ಮೋಹನಾಸ್ತ್ರವನ್ನು ಪಡೆದನು. ಆಮೇಲೆ ಕುದುರೆಯು ರುದ್ರದೇವರು ವಾಸಮಾಡುತ್ತಿರುವ ದೇವಪುರಕ್ಕೆ ಹೋಯಿತು. ಅಲ್ಲಿಗೆ ನೀವೇ ಬಂದಿರುವ ಕಾರಣ ಅಲ್ಲಿ ನಡೆದದ್ದೆಲ್ಲವನ್ನು ತಿಳಿದಿರುವಿರಿ. ಆಮೇಲೆ ಹೋಗುವಾಗ ದಾರಿಯಲ್ಲಿ ವಿದ್ಯುನ್ಮಾಲಿ ಎಂಬ ದೈತ್ಯನು ಕುದುರೆಯನ್ನು ಅಪಹರಿಸಿದನು. ಅವನನ್ನು ಶತ್ರುಘ್ನನು ಸಂಹರಿಸಿದನು. ಆಮೇಲೆ ಸುರಥನೊಡನೆ ಯುದ್ಧವನ್ನು ನಡೆದದ್ದನ್ನು ತಿಳಿದಿರುವಿರಿ. ಆ ಕುಂಡಲ ನಗರದಿಂದ ಹೊರಟ ಕುದುರೆಯು ಎಲ್ಲಾ ಸ್ಥಳದಲ್ಲಿಯೂ ಸಂಚರಿಸಿತು. ಒಬ್ಬರೂ ಅದನ್ನು ಕಟ್ಟಿದವರಿಲ್ಲ. ಆಮೇಲೆ ವಾಲ್ಮೀಕಿ ಋಷಿಗಳ ಆಶ್ರಮಕ್ಕೆ ಕುದುರೆಯು ಬಂದಿತು. ಅಲ್ಲಿ ನಿಮ್ಮಂತೆಯೇ ಇರುವ ಹದಿನಾರು ವರ್ಷದ ಬಾಲಕನೋರ್ವನು ಕುದುರೆಯನ್ನು ಕಟ್ಟಿದನು. ಅಲ್ಲಿ ಕಾಲಜಿತ್ ಹೋಗಿ ಬಾಲಕನೊಡನೆ ಯುದ್ಧಮಾಡಿ ಮರಣವನ್ನು ಹೊಂದಿದನು. ಅನೇಕರು ಮರಣವನ್ನು ಹೊಂದಿದರು. ಪುಷ್ಕಲನು ಮೊದಲಾದವರು ಮೂರ್ಛಿತರಾದರು. ಆ ಬಾಲಕನು ಶತ್ರುಘ್ನನನ್ನೂ ಮೂರ್ಛೆಗೊಳಿಸಿದನು. ಆಮೇಲೆ ಶತ್ರುಘ್ನನು ಕೋಪದಿಂದ ಆ ಬಾಲಕನನ್ನು

ಮೂರ್ಛೆಗೊಳಿಸಿದನು. ಅಷ್ಟರಲ್ಲಿಯೇ ಆ ಬಾಲಕನಂತೆಯೇ ಇರುವ ಇನ್ನೊಬ್ಬ ಬಾಲಕನು ಅಲ್ಲಿಗೆ ಬಂದು ಎಲ್ಲರನ್ನೂ ಮೂರ್ಛೆಪಡಿಸಿ ಶಸ್ತ್ರಾಭರಣಗಳನ್ನು ಹಿಡಿದುಕೊಂಡು ಹನುಮಂತದೇವರನ್ನೂ ಸುಗ್ರೀವನನ್ನೂ ಹಿಡಿದುಕೊಂಡು ಹೋದರು. ಆಮೇಲೆ ಆ ಬಾಲಕನು ಕೃಪೆಯನ್ನು ಮಾಡಿ ನಮ್ಮ ಕುದುರೆಯನ್ನು ಬಿಟ್ಟುಬಿಟ್ಟನು. ಮೂರ್ಛೆಯನ್ನು ಹೊಂದಿದವರೆಲ್ಲರೂ ಎಚ್ಚೆತ್ತರು. ಆಮೇಲೆ ನಾವು ಕುದುರೆಯನ್ನು ಹಿಡಿದುಕೊಂಡು ಇಲ್ಲಿಗೆ ಬಂದೆವು. ಇಷ್ಟು ತಾನೇ ನನಗೆ ತಿಳಿದ ವಿಷಯವಾಗಿರುವುದು' ಎಂದು ಹೇಳಿದನು.



## ಕುಶಲವರ ಚರಿತ್ರೆ [1]

ಶ್ರೀರಾಮದೇವರು ವಾಲ್ಮೀಕಿ ಆಶ್ರಮದಲ್ಲಿ ಇದ್ದವರು ತನ್ನ ಮಕ್ಕಳೆಂದು ತಿಳಿದವರಾಗಿ ವಾಲ್ಮೀಕಿ ಋಷಿಗಳೊಡನೆ 'ನಿಮ್ಮ ಆಶ್ರಮದಲ್ಲಿ ನನ್ನಂತೆ ಇರುವ ಇಬ್ಬರು ಬಾಲಕರು ಯಾರು? ಯಾಕೆ ಅಲ್ಲಿ ಇರುವರು? ನಮ್ಮ ಮಂತ್ರಿಯು ಹೇಳಿದ ಮಾತನ್ನು ಕೇಳಿ ನನಗೆ ಆಶ್ಚರ್ಯವಾಗುತ್ತದೆ. ಅವರು ಶತ್ರುಘ್ನನನ್ನು ಬಂಧಿಸಿದರಂತೆ. ಆದುದರಿಂದ ಆ ಹುಡುಗರ ಚರಿತ್ರೆಯನ್ನು ಹೇಳಿರಿ' ಎಂದು ಕೇಳಿದರು.

ಆಗ ವಾಲ್ಮೀಕಿ ಮುನಿಗಳು 'ಸರ್ವಾಂತರ್ಯಾಮಿಯಾದ ನಿಮಗೆ ತಿಳಿಯದ ವಿಷಯವೇ ಇಲ್ಲ. ಆದರೂ ನಿಮ್ಮ ಸಂತೋಷಕ್ಕಾಗಿ ಹೇಳುವೆನು. ನಿಮ್ಮಂತೆಯೇ ಇರುವ ಆ ಹುಡುಗರು ಯಾರೆಂದು ತಿಳಿಸುವೆನು. ನೀವು ಯಾವಾಗ ಸೀತಾದೇವಿಯನ್ನು ವನದಲ್ಲಿ ಪರಿತ್ಯಾಗ ಮಾಡಿದಿರೋ ಆಗ ಗರ್ಭಿಣಿಯಾಗಿದ್ದ ಅವರು ಕುರರೀ ಪಕ್ಷಿಯಂತೆ ಅಳುವವರಾದರು. ಅವರನ್ನು ನಾನು ನನ್ನ ಆಶ್ರಮಕ್ಕೆ ಕರೆತಂದೆನು. ಅವರಿಗೆ ಮುನಿಬಾಲಕರು ಪ್ರತ್ಯೇಕವಾಗಿ ಒಂದು ಪರ್ಣಶಾಲೆಯನ್ನು ಮಾಡಿಕೊಟ್ಟರು. ಆ ಸೀತಾದೇವಿಯರಲ್ಲಿ ಇಬ್ಬರು ರಟ್ಟೆ ಮಕ್ಕಳು ಹುಟ್ಟಿದರು. ಅವರಿಗೆ ಕುಶ ಲವ ಎಂದು ಹೆಸರನ್ನಿಟ್ಟೆನು. ಅವರು ಶುಕ್ಲಪಕ್ಷದ ಚಂದ್ರನಂತೆ ಬೆಳೆದರು. ಕಾಲಕ್ರಮದಿಂದ ಅವರಿಗೆ ನಾನೇ ಉಪನಯವನ್ನು ಮಾಡಿದೆನು. ಸಮಸ್ತ ವೇದಗಳನ್ನೂ ಹೇಳಿಕೊಟ್ಟೆನು. ಆಮೇಲೆ ಆಯುರ್ವೇದ ಮೊದಲಾದ ಉಪವೇದ ಗಳನ್ನೂ ನಾನಾವಿದ್ಯೆಗಳನ್ನೂ ಹೇಳಿಕೊಟ್ಟೆನು. ಸಂಗೀತದಲ್ಲಿ ಅವರನ್ನು ಕುಶಲರನ್ನಾಗಿ ಮಾಡಿದೆನು. ಅವರು ಗಂಗಾತೀರದಲ್ಲಿ ಅಲ್ಲಲ್ಲಿ ಸಂಚರಿಸುತ್ತಾ ಗಾನ ಮಾಡುತ್ತಿದ್ದರು.

1. ಪ.ಪು.ಪಾ.ಖಂ. ಅ–66

ಅವರನ್ನು ನೋಡಿ ನಾನು ಸಂತೋಷಪಟ್ಟೆನು. ಅವರಿಗೆ ಎಲ್ಲಾ ಅಸ್ತ್ರಮಂತ್ರಗಳನ್ನೂ ಉಪದೇಶಿಸಿ ಅವರ ತಲೆಯ ಮೇಲೆ ಕೈಯನ್ನು ಇಟ್ಟೆನು. ಗಾನದಲ್ಲಿ ಚತುರರಾದ ಅವರನ್ನು ನೋಡಿ ಎಲ್ಲಾ ಜನರೂ ಆಶ್ಚರ್ಯಪಟ್ಟರು. ನಾನು ಭವಿಷ್ಯಜ್ಞಾನದಿಂದ ರಾಮಾಯಣವನ್ನು ಮಾಡಿ ಅವರಿಂದ ಅದನ್ನು ಗಾನಮಾಡಿಸಿದೆನು. ಅವರು ವನವನದಲ್ಲಿ ಗಾನಮಾಡುತ್ತಾ ಮೃಗಪಕ್ಷಿಗಳನ್ನು ಮೋಹಗೊಳಿಸುತ್ತಿದ್ದರು. ಆ ರಾಜಕುಮಾರರ ಗಾಯನದ ಮಾಧುರ್ಯವನ್ನು ಕೇಳುವುದಕ್ಕಾಗಿ ವರುಣದೇವರು ಅವರನ್ನು ವಿಭಾವರೀನ ಗಂಗೆ ತರಿಸಿದರು. ಅವರು ಅಲ್ಲಿಗೆ ಹೋದರು. ವರುಣದೇವರು ಕುಟುಂಬ ಸಹಿತರಾಗಿ ಮಿತ್ರನಿಂದ ಸಹಿತರಾಗಿ ಅವರ ಮುಖದಿಂದ ರಾಮಾಯಣವನ್ನು ಕೇಳಿದರು. ತೃಪ್ತಿಯನ್ನು ಹೊಂದಲಿಲ್ಲ, ರಾಮಚಂದ್ರ! ನಿಮ್ಮ ಚರಿತ್ರೆಯು ಅಮೃತಕ್ಕಿಂತಲೂ ರುಚಿಕರವಾದದ್ದು. ವರುಣದೇವರು ಗಾನಕೇಳಿ ಸಂತೋಷದಿಂದ ಬಾಲಕರನ್ನು ತನ್ನ ನಗರದಿಂದ ಬರಲಿಕ್ಕೆ ಬಿಡಲೇ ಇಲ್ಲ. ನಾನೂ ಅಲ್ಲಿಗೆ ಹೋಗಿದ್ದೆನು. ವರುಣದೇವರು ನನಗೂ ಪರಮಪ್ರೇಮದಿಂದ ಸತ್ಕಾರವನ್ನು ಮಾಡಿದರು. ಮತ್ತು ನನ್ನೊಡನೆ 'ಸೀತಾದೇವಿಯರು ಪರಮ ಪತಿವ್ರತೆಯರು. ಅವರನ್ನು ರಾಮದೇವರು ಸ್ವೀಕರಿಸಬೇಕು. ಪಾಮರರಾದವರು ಅವರನ್ನು ದೂಷಿಸಿದರೆ ಅವರಿಗೆ ದೋಷವೇನು ಬಂದಿತು? ಇತ್ಯಾದಿ ಮಾತುಗಳನ್ನು ರಾಮದೇವರೊಡನೆ ತಿಳಿಸಬೇಕು' ಎಂದು ಹೇಳಿದರು.

ತರುವಾಯ ರಾಮದೇವರು ಲಕ್ಷ್ಮಣನನ್ನು ಕೊಟ್ಟು ಕಳುಹಿಸಿ ಸೀತಾದೇವಿಯರನ್ನು ಅಲ್ಲಿಗೆ ತರಿಸಿದರು. ಸೀತಾದೇವಿಯರು ಕುಶಲವರಿಂದ ಸಹಿತರಾಗಿ ಅಲ್ಲಿಗೆ ಬಂದು ತಾನು ಪತಿವ್ರತೆಯೆಂದು ಅಜ್ಞಾನಿಗಳಿಗೆ ತಿಳಿಸುವುದಕ್ಕಾಗಿ ತಾನು ಪತಿವ್ರತೆಯಾಗಿದ್ದರೆ ಭೂಮಿಯು ತನಗೆ ಅವಕಾಶವನ್ನು ಕೊಡಲೆಂದು ಪ್ರತಿಜ್ಞೆ ಮಾಡಿದರು. ಭೂದೇವಿಯು ಅವಕಾಶಕೊಟ್ಟರು. ಅಜ್ಞಾನಿಗಳ ದೃಷ್ಟಿಯಿಂದ ಸೀತಾದೇವಿಯರು ಭೂಮಿಯು ಕೊಟ್ಟ ಅವಕಾಶದಿಂದ ಇಳಿದು ಅಜ್ಞಾನಿಗಳ ಕಣ್ಣಿಗೆ ಅದೃಶ್ಯರಾಗಿ ಹೋದರು. ಆಮೇಲೆ ಏಳು ನೂರು ವರ್ಷ ರಾಮದೇವರು ರಾಜ್ಯಭಾರವನ್ನು ಮಾಡುತ್ತಿದ್ದು ವೈಕುಂಠಲೋಕಕ್ಕೆ ಹೋಗುವಾಗ ಸೀತಾದೇವಿಯರು ಎರಡು ರೂಪದಿಂದ ಎಲ್ಲರ ಕಣ್ಣಿಗೆ ಕಾಣಿಸುವಂತೆ ಬಂದು ರಾಮದೇವರೊಡನೆ ವೈಕುಂಠಕ್ಕೆ ಹೋದರು. ಆಮೇಲೆ ಕುಶಲವರು ರಾಜ್ಯಭಾರವನ್ನು ಮಾಡುತ್ತಿದ್ದರು.



# ಶ್ರೀಕೃಷ್ಣಾವತಾರವು[1]

## ಉಪೋದ್ಘಾತ

ಪೂರ್ವದಲ್ಲಿ ದ್ವಾಪರಾಂತ್ಯದಲ್ಲಿ ಅಸುರರಿಂದ ಪೀಡಿತಳಾದ ಭೂಮಿಯು ಬ್ರಹ್ಮದೇವರನ್ನು ಮರೆಹೊಂದಿದಳು. ಭೂದೇವಿಯು ಗೋರೂಪವನ್ನು ಧರಿಸಿ ಖೇದವುಳ್ಳವಳಾಗಿ ಕರುಣೆಯುಂಟಾಗುವಂತೆ ಅಳುತ್ತಾ ಬ್ರಹ್ಮದೇವರ ಸಮೀಪಕ್ಕೆ ಹೋಗಿ ತನ್ನ ವ್ಯಸನವನ್ನು ಹೇಳಿಕೊಂಡಳು. ಬ್ರಹ್ಮದೇವರು ಅದನ್ನು ಕೇಳಿ ರುದ್ರದೇವರಿಂದ ಸಹಿತರಾಗಿ ಇತರ ದೇವತೆಗಳಿಂದಲೂ ಭೂದೇವಿಯಿಂದಲೂ ಸಹಿತರಾಗಿ ಕ್ಷೀರಸಮುದ್ರದ ತೀರಕ್ಕೆ ಹೋದರು. ಅಲ್ಲಿ ಬ್ರಹ್ಮದೇವರು ಪುರುಷಸೂಕ್ತದಿಂದ ಸ್ತೋತ್ರ ಮಾಡಿ ಧ್ಯಾನಮಾಡಿದರು. ಧ್ಯಾನ ಮಾಡುವ ಸಮಯದಲ್ಲಿ ಬ್ರಹ್ಮದೇವರು, ಶ್ರೀಭಗವಂತನು ರಮಾದೇವಿಯೊಡನೆ ದೇವತೆಗಳು ಅಸುರರಿಂದ ಪೀಡಿತರಾಗಿ ಬಂದಿರುವರೆಂದೂ ಅವರ ದುಃಖವನ್ನು ಪರಿಹರಿಸಲಿಕ್ಕೆ ಅವತರಿಸುವೆನೆಂದೂ ದೇವತೆಗಳೆಲ್ಲರೂ ಅವತರಿಸಲೆಂದೂ ತಾನು ವಸುದೇವನ ಪತ್ನಿಯಲ್ಲಿ ಅವತರಿಸುವೆನೆಂದೂ ಹೇಳಿದ ಮಾತನ್ನು ಕೇಳಿ ದೇವತೆಗಳೊಡನೆ 'ದೇವತೆಗಳೇ! ಭೂಮಿಗೆ ಬಂದಿರುವ ವ್ಯಸನವು ಭಗವಂತನಿಗೆ ಮೊದಲೇ ತಿಳಿದಿರುವುದು. ಭಗವಂತನ ಸೇವೆಗಾಗಿ ನೀನು ಒಂದಂಶದಿಂದ ಭೂಮಿಯಲ್ಲಿ ಯದುವಂಶದಲ್ಲಿ ಅವತರಿಸಿರಿ. ಶ್ರೀಭಗವಂತನು ವಸುದೇವನ ಪತ್ನಿಯಲ್ಲಿ ಅವತರಿಸುವನು. ಅವನ ಪ್ರೀತಿಗಾಗಿ ದೇವತಾಸ್ತ್ರೀಯರು ಅವತರಿಸಲಿ. ಪರಮಾತ್ಮನ ಸನ್ನಿಧಾನವುಳ್ಳ ಶೇಷನು ಪರಮಾತ್ಮನಿಗೆ ಪ್ರಿಯವನ್ನು ಮಾಡಲಿಕ್ಕೆ ಮೊದಲೇ ಅವತರಿಸುವನು. ದುರ್ಗಾದೇವಿಯರೂ ಪರಮಾತ್ಮನಿಂದ ಆಜ್ಞಪ್ತರಾಗಿ ಒಂದಂಶ ದಿಂದ ಅವತರಿಸುವರು' ಎಂದು ಹೇಳಿದರು. ಈರೀತಿಯಾಗಿ ಬ್ರಹ್ಮದೇವರು ದೇವತೆ ಗಳಿಗೆ ಆಜ್ಞಾಪಿಸಿ ಭೂಮಿಗೂ ಸಮಾಧಾನಪಡಿಸಿ ತನ್ನ ಸತ್ಯಲೋಕಕ್ಕೆ ಹೋದರು. (ಈರೀತಿಯಾಗಿ ಭಾಗವತದಲ್ಲಿ ಹೇಳಿದ ಕಥೆಯು. ಬಹುಕಲ್ಪಾನುಸಾರವಾಗಿ ತಾತ್ಪರ್ಯ ನಿರ್ಣಯದಲ್ಲಿ ಹೇಳಿದ ಹರಿವಂಶಾನುಸಾರವಾದ ಕಥೆಯು ಹೀಗೆ ಇರುವುದು)

ಬ್ರಹ್ಮರುದ್ರಾದಿದೇವತೆಗಳು ಕ್ಷೀರಸಮುದ್ರದಲ್ಲಿ ಶೇಷದೇವರಲ್ಲಿ ಮಲಗಿರುವ

1. ಭಾ. X -1 ಮತ್ತು ಮ.ತಾ.ನಿ. ಅ–11, 12

ಪರಮಾತ್ಮನನ್ನು ಮರೆಹೊಂದಿದರು. ಬ್ರಹ್ಮಾದಿದೇವತೆಗಳು ಅನಂತಶಕ್ತಿಯುಳ್ಳ ಪರಮಾತ್ಮನನ್ನು ಪುರುಷಸೂಕ್ತದಿಂದ ಸ್ತೋತ್ರಮಾಡಿ ಹೇಳಿಕೊಂಡರು. 'ಶ್ರೀಭಗವಂತನೇ! ನಿನ್ನ ದ್ವೇಷಿಗಳಾದ ಅಸುರರ ಭಾರದಿಂದ ಭೂದೇವಿಯು ಖಿನ್ನಳಾಗಿರುವಳು. ಸಜ್ಜನರಿಗೆ ದುಷ್ಟರ ಸಹವಾಸವು ಭಾರಕರವಾಗಿಯೇ ಆಗುವುದು. ಪರಮಾತ್ಮನೇ! ನಾವು ಹೇಳುವ ಮಾತನ್ನು ಕೇಳಬೇಕು. ಪೂರ್ವದಲ್ಲಿ ನಮ್ಮ ಪ್ರೀತಿಗಾಗಿ ನಿನ್ನಿಂದ ಯುದ್ಧಗಳಲ್ಲಿ ಸಂಹರಿಸಲ್ಪಟ್ಟ ಅಸುರರೆಲ್ಲರೂ ಈಗ ಭೂಮಿಯಲ್ಲಿ ಹುಟ್ಟಿರುವರು.

ಪೂರ್ವದಲ್ಲಿ ದೇವತೆಗಳಿಗೂ ದೈತ್ಯರಿಗೂ ಭಯಂಕರವಾದ ಯುದ್ಧವು ನಡೆಯಿತು. ದೇವತೆಗಳಿಂದ ಅನೇಕ ಅಸುರರು ಸಂಹೃತ ರಾದರು. ತರುವಾಯ ತನ್ನ ಸೈನ್ಯವು ಕ್ಷೀಣವಾಗುವುದನ್ನು ನೋಡಿ ರುದ್ರದೇವರ ಅನುಗ್ರಹದಿಂದ ಇತರರಿಂದ ಸಹಿಸಲಿಕ್ಕೆ ಆಗದ ಮಾಯೆಗಳುಳ್ಳವನಾದ ಶಂಬರ ಎಂಬ ದೈತ್ಯನು ದೇವತೆಗಳನ್ನು ಮೋಹಗೊಳಿಸುತ್ತಾ ಬಂದನು. ಅವನ ಸಾವಿರಾರು ಮಾಯೆಗಳಿಂದ ಚಂದ್ರಸೂರ್ಯಾದಿ ದೇವತೆಗಳೂ ವಿಷಾದವನ್ನು ಹೊಂದಿದರು.

ಅವರನ್ನು ನೋಡಿ ಇಂದ್ರದೇವರು ಬ್ರಹ್ಮದೇವರಿಂದ ಕೊಡಲ್ಪಟ್ಟ ವಿಷ್ಣುಪ್ರತಿಪಾದಕ ವಾದ ಪರಮವಿದ್ಯೆಯನ್ನು ಪ್ರಯೋಗಿಸಿದರು. ಶ್ರೀಭಗವಂತನ ವರದಿಂದ ಸಮಸ್ತ ಮಾಯೆಗಳನ್ನು ಪರಿಹರಿಸುವ ಆ ವಿದ್ಯೆಯಿಂದ ಶಂಬರಾಸುರನ ಮಾಯೆಗಳು ನಷ್ಟವಾದವು. ವರುಣ ಅಗ್ನಿ ಚಂದ್ರ ಇತ್ಯಾದಿದೇವತೆಗಳೂ ಮಾಯೆಯಿಂದ ಬಿಡ ಲ್ಪಟ್ಟರು. ತರುವಾಯ ಆ ದೇವತೆಗಳೆಲ್ಲರೂ ಇಂದ್ರದೇವರಿಂದ ಸಾಮರ್ಥ್ಯವುಳ್ಳವರಾಗಿ ಅಸುರರನ್ನು ಬಡಿದರು. ಇಂದ್ರದೇವರು ವಜ್ರಾಯುಧ ದಿಂದ ಶಂಬರಾಸುರ ನನ್ನು ಸಂಹರಿಸಿದರು. ಅವನು ಸಾಯಲು ಅಸುರರೆಲ್ಲರೂ ಇಂದ್ರದೇವರಿಂದದ ಭಯಪಟ್ಟು ಓಡಿದರು. ಓಡುತ್ತಿದ್ದ ಅವರೆಲ್ಲರನ್ನೂ ವಿಪ್ರಚಿತ್ತಿ ಎಂಬ ಅಸುರನು ತಡೆದು ಧನುಸ್ಸನ್ನು ಧರಿಸಿಕೊಂಡು ಇಂದ್ರಾದಿದೇವತೆಗಳೊಡನೆ ಯುದ್ಧಕ್ಕೆ ಹೋದನು. ಬ್ರಹ್ಮದೇವರ ವರದಿಂದ ಪರಾಜಯಶೂನ್ಯನಾದ ಅವನು ದೇವ ಶ್ರೇಷ್ಠರನ್ನು ಎಲ್ಲರನ್ನು ಬಾಣಗಳಿಂದ ಕೆಳಗೆ ಬೀಳಿಸಿದನು. ಇಂದ್ರದೇವರನ್ನು ಮೂರ್ಛಾಗೊಳಿಸಿದನು. ಆಗ ಅವನನ್ನು ವಾಯುದೇವರು ಬಾಣಗಳಿಂದ ತಡೆದರು ವಾಯುದೇವರು ಅವನು ಬಿಟ್ಟ ಅಸ್ತ್ರಗಳನ್ನು ಅಸ್ತ್ರಗಳಿಂದ ತಡೆದು ಅವನ ಎದೆಯಮೇಲೆ ಬಂಗಾರದ ಗದೆಯನ್ನು ಹಾಕಿದರು. ಮಹಾಬಲಿಷ್ಠನಾದ ವಿಪ್ರಚಿತ್ತಿಯು ಆಗದೆಯಿಂದ ಪುಡಿಪುಡಿಯಾದವನಾಗಿ ಮೇರುಪರ್ವತಕ್ಕೆ ಹೋಗಿ

ಬಿದ್ದನು. ತರುವಾಯ ಕಾಲನೇಮಿ ಎಂಬ ಅಸುರನು ಯುದ್ಧಕ್ಕೆ ಬಂದನು. ಅವನಿಗೆ ಸಾವಿರ ತಲೆಗಳು. ಎರಡು ಸಾವಿರ ಕೈಗಳು. ಅವನಿಗೆ ನಿನ್ನ ಆಜ್ಞೆಯಿಂದ ಬ್ರಹ್ಮದೇವರು ಸರ್ವರಿಂದ ಪರಾಜಯವುಂಟಾಗದಂತೆ ವರವನ್ನು ಕೊಟ್ಟಿದ್ದರು. ಅಂತಹ ಕಾಲನೇಮಿಯು ಯುದ್ಧಕ್ಕೆ ಬಂದುದನ್ನು ನೋಡಿ ವಾಯುದೇವರು ನಿನ್ನ ಆಜ್ಞೆಯಿಂದ ಬ್ರಹ್ಮದೇವರು ಕೊಟ್ಟ ವರವನ್ನು ನೀನೇ ಭಗ್ನಗೊಳಿಸಬೇಕೆಂದು ಯೋಚಿಸಿ ನಿನ್ನನ್ನೇ ಸ್ಮರಿಸಿದರು. ಆಗ ಅನಂತಪೌರುಷವುಳ್ಳ ನೀನು ಕಾಣಿಸಿಕೊಂಡಿ. ಬಹುಕೈಗಳಿಂದ ಅಸ್ತ್ರಶಸ್ತ್ರಗಳನ್ನು ಸುರಿಸುತ್ತಾ ಇದ್ದ ಲೋಕದಲ್ಲಿ ವ್ಯಾಪ್ತವಾದ ದೇಹವಿದ್ದ ಅವನ ಕೈಗಳನ್ನು ತಲೆಗಳನ್ನು ಚಕ್ರಾಯುಧದಿಂದ ಕತ್ತರಿಸಿ ಸಂಹಾರ ಮಾಡಿದಿ. ತರುವಾಯ ಮೂರು ಭಾಗ ಅಸುರರು ಸಂಹೃತರಾದರು.

ನಾಲ್ಕನೇ ಭಾಗವನ್ನು ವಾಯುದೇವರು ಸಂಹರಿಸಿದರು. ಆ ಅಸುರರೆಲ್ಲರೂ ಈಗ ಭೂಮಿಯಲ್ಲಿ ಹುಟ್ಟಿರುವರು. ಅವರು ದೊಡ್ಡ ರಾಜವಂಶದಲ್ಲಿ ಹುಟ್ಟಿರುವರು. ಆದರಿಂದ ಅವರಿಗೆ ಬುದ್ಧಿಯು ನಿರ್ಮಲವಾಗಿದೆ. ಪುರೋಹಿತರಾದ ಬ್ರಾಹ್ಮಣಶ್ರೇಷ್ಠರ ಶಿಕ್ಷೆಯಿಂದ ನಿನ್ನಲ್ಲಿ ಸ್ವಲ್ಪ ಭಕ್ತಿಯೂ ಉಂಟಾಗಿರುವುದು. ನಿನ್ನಲ್ಲಿ ಸ್ವಲ್ಪವಾಗಿಯಾದರೂ ಭಕ್ತಿಯನ್ನು ಮಾಡುವ ಸತ್ಕರ್ಮವನ್ನು ಅನುಷ್ಠಾನ ಮಾಡುವವನು ದುಷ್ಟಲೋಕವನ್ನು ಹೊಂದಬಾರದು. ದೈತ್ಯೇಶ್ವರರಿಗೆ ಅವರ ಯೋಗ್ಯತಾನುಸಾರವಾಗಿ ನಿನ್ನಿಂಥ ಅಂಧಂತಮಸ್ಸೇ ಕ್ಲೃಪ್ತವಾಗಿರುವುದು. ಆದುದರಿಂದ ಅವರು ಮಾಡಿದ ಧರ್ಮಕ್ಕೆ ಫಲವನ್ನು ಕೊಡದೆ ಇದ್ದರೆ ಅದು ವ್ಯರ್ಥವಾಗುವುದು. ಕೊಟ್ಟರೆ ಅವರಿಗೆ ಶುಭವಾದ ಗತಿಯಾಗಬೇಕಾಗುವುದು. ಆದುದರಿಂದ ಅವರನ್ನು ನಿನ್ನ ಭಕ್ತಿಯಿಂದಲೂ ಸತ್ಕರ್ಮಾನುಷ್ಠಾನದಿಂದಲೂ ತಪ್ಪಿಸಬೇಕೆಂದು ಪ್ರಾರ್ಥಿಸುವೆವು.

ಉಗ್ರಸೇನ ಎಂದು ಹೆಸರುಳ್ಳ ಗಂಧರ್ವನು ಅದೇ ಹೆಸರಿನಿಂದ ಯದುವಂಶದಲ್ಲಿ ಹುಟ್ಟಿರುವನು. ಕಾಲನೇಮಿಯು ಅವನಿಗೆ ಮಗನಾಗಿ ಹುಟ್ಟಿರುವನು. ಅಂದರೆ ಉಗ್ರಸೇನನ ಹೆಂಡತಿಯಲ್ಲಿ ಉಗ್ರಸೇನನ ರೂಪವನ್ನು ಧರಿಸಿದ ಗಂಧರ್ವನ ಮಗನಾದ ದ್ರಮಿಲ ಎಂದು ಹೆಸರುಳ್ಳ ಅಸುರನಿಂದ ಕಾಲನೇಮಿಯು ಕಂಸ ಎಂಬ ಹೆಸರಿನಿಂದ ಹುಟ್ಟಿರುವನು. ಅವನು ವರಬಲದಿಂದ ಇಂದ್ರದೇವರನ್ನು ಜಯಿಸಿದನು. ವರುಣದೇವರನ್ನು ಜಯಿಸಿ ರತ್ನಗಳನ್ನು ಅಪಹರಿಸಿದ್ದನು. ಜರಾಸಂಧನದಿ ಅಸ್ತಪ್ರಾಸ್ತಿ ಎಂದು ಹೆಸರುಳ್ಳ ಇಬ್ಬರು ಹೆಣ್ಣುಮಕ್ಕಳನ್ನು ರಕ್ಷಿಸಲಿಕ್ಕೆ ಇಟ್ಟಿದ್ದ ರುದ್ರದೇವರ ಭೃತ್ಯರಾದ ಯಕ್ಷರನ್ನು ಜಯಿಸಿದ್ದನು. ಅಸ್ತಿಪ್ರಾಸ್ತಿಯರನ್ನು ಬಲಾತ್ಕಾರದಿಂದ ಅಪಹರಿಸಿದ್ದನು. ವಿಪ್ರಚಿತ್ತಿಯೇ

ಜರಾಸಂಧನಾಗಿ ಹುಟ್ಟಿರುವನು. ಅವನು ಬ್ರಹ್ಮದೇವರ ಮತ್ತು ರುದ್ರದೇವರ ವರದಿಂದ ಎಲ್ಲರಿಂದಲೂ ಪರಾಜಯ ಶೂನ್ಯನಾಗಿದ್ದನು. ಅವನು ಕಂಸನ ಉತ್ತಮವಾದ ಬಲವನ್ನು ನೋಡಿ ಸಂತೋಷದಿಂದಲೇ ತನ್ನ ಹೆಣ್ಣುಮಕ್ಕಳನ್ನು ಅವನಿಗೆ ಮದುವೆ ಮಾಡಿಕೊಟ್ಟನು. ಜರಾಸಂಧನು ಬ್ರಹ್ಮದೇವರ ರುದ್ರದೇವರ ಬಲದಿಂದ ಅತಿಬಲಾಢ್ಯನಾಗಿದ್ದನು. ಅವನಿಗೆ ಸಮಾನ ಬಲಿಷ್ಠರೇ ಭೂಮಿಯಲ್ಲಿ ಇರಲಿಲ್ಲ. ಎಲ್ಲಾ ರಾಜರನ್ನೂ ತನ್ನ ವಶಮಾಡಿಕೊಂಡಿದ್ದನು. ಆದುದರಿಂದ ತನ್ನ ಇಚ್ಛೆಯಿಂದಲೇ ಕಂಸನನ್ನು ಜಯಿಸಲಿಕ್ಕೆ ಹೋಗದೆ ಸಂತೋಷದಿಂದಲೇ ತನ್ನ ಹೆಣ್ಣುಮಕ್ಕಳನ್ನು ಅವನಿಗೆ ಮದುವೆ ಮಾಡಿಕೊಟ್ಟನು.

ಪೂರ್ವದಲ್ಲಿ ನಿನ್ನಿಂದ ಮೃತರಾದ ಮಧುಕೈಟಭ ಎಂಬ ರಾಕ್ಷಸರು ಈಗ ಹಂಸಡಿಭಿಕರಾಗಿ ಹುಟ್ಟಿರುವರು. ಅವರು ರುದ್ರದೇವರ ವರದಿಂದ ಪರಾಜಯ ಶೂನ್ಯರಾಗಿರುವರು. ಪರಾಕ್ರಮಶಾಲಿಗಳು. ಜರಾಸಂಧನನ್ನು ಅನುಸರಿಸಿಕೊಂಡು ರುದ್ರದೇವರ ಭಕ್ತರಾಗಿರುವರು. ಇನ್ನೂ ಅನೇಕ ಅಸುರರು ನಿನ್ನಿಂದ ಮೃತರಾದವರು ಈಗ ಭೂಮಿಯಲ್ಲಿ ಹುಟ್ಟಿರುವರು. ಅವರೆಲ್ಲರನ್ನು ಅಂಧಂತಮಸ್ಸಿಗೆ ನೀನು ಕಳುಹಿಸಬೇಕು. ಕೆಲವರು ಅಂಧಂತಮಸ್ಸಿಗೆ ಹೋಗಿರುವರು. ವ್ಯಾಸಾವತಾರದಲ್ಲಿ ನಿನ್ನಿಂದ ಉತ್ತಮಶಾಸ್ತ್ರವಚನಗಳಿಂದ ಸಂಹೃತನಾದ ಕಲಿಯು ಈಗ ಪುರುಷರಲ್ಲಿ ಇದ್ದುಕೊಂಡು ನಿನ್ನ ವಚನಗಳನ್ನು ಕೇಳಿ ನಿನ್ನಲ್ಲಿ ಸ್ವಲ್ಪ ಮನಸ್ಸುಳ್ಳವನಾಗಿರುವನು. ರಾಮಾವತಾರದಲ್ಲಿ ನಿನ್ನಿಂದ ಮೃತರಾದ ರಾಕ್ಷಸರು ಆಗ ನಿನ್ನ ಬಲವನ್ನು ನೋಡಿದವರು ಈಗ ನಿನಗೆ ಸಮಾನರೇ ಇಲ್ಲವೆಂದು ತಿಳಿಯುತ್ತಿರುವರು. ಹಾಗೆಯೇ ಹನುಮಂತದೇವರ ಬಲವನ್ನು ನೋಡಿದವರು ಅವರಿಗೂ ಸಮಾನರಿಲ್ಲವೆಂದು ತಿಳಿಯುತ್ತಿರುವರು. ಯಾರು ನಿನ್ನಲ್ಲಿಯೂ ವಾಯುದೇವರಲ್ಲಿಯೂ ಬಹುಮಾನ ವುಳ್ಳವರಾಗಿರುವರೋ ಅವರು ಅಂಧಂತಮಸ್ಸಿಗೆ ಹೋಗಲಿಕ್ಕೆ ಯೋಗ್ಯವಾಗ ಲಾರರು. ಆದುದರಿಂದ ನೀನು ಭೂಮಿಯಲ್ಲಿ ಅವತರಿಸಿಯೇ ಅವರನ್ನು ಸನ್ಮಾರ್ಗದಿಂದ ತಪ್ಪಿಸಬೇಕು. ಕಲಿಯೇ ಮೊದಲಾದ ಅಸುರರಿಗೆ ನಿನ್ನಲ್ಲಿಯೂ ವಾಯುದೇವ ರಲ್ಲಿಯೂ ಹಾಗೆಯೇ ಎಲ್ಲಾ ದೇವತೆಗಳಲ್ಲಿಯೂ ದ್ವೇಷವು ಬರುವಂತೆ ಮಾಡಿ ಅವರನ್ನು ಅಂಧಂತಮಸ್ಸಿಗೆ ಕಳುಹಿಸಬೇಕು.

ಮಹಾಸುರಾವೇಶವುಳ್ಳ ನಿನ್ನ ದ್ವಾರಪಾಲಕರು ರಾವಣ ಕುಂಭಕರ್ಣರಾಗಿ ಹುಟ್ಟಿದಾಗ ನೀನು ಸಂಹರಿಸಿರುವಿ. ಅವರೇ ಈಗ ಶಿಶುಪಾಲ ದಂತವಕ್ರರಾಗಿ ಹುಟ್ಟಿರುವರು. ಅವರಲ್ಲಿರುವ ದ್ವಾರಪಾಲಕರನ್ನು ನೀನು ಬಿಡಿಸಬೇಕು. ಅಸುರರನ್ನು

ಅಂಧಂತಮಸ್ಸಿಗೆ ಕಳುಹಿಸಬೇಕು. ಮತ್ತು ಬಲಿಯೆಂಬ ಉತ್ತಮಜೀವನಲ್ಲಿ ಆವಿಷ್ಟನಾಗಿ ನಮ್ಮಲ್ಲಿಯೂ ನಿನ್ನಲ್ಲಿಯೂ ವಿರೋಧವನ್ನು ಮಾಡಿಸಿದ ಬಲಿಯೆಂದೇ ಹೆಸರುಳ್ಳ ಅಸುರನು ಸಾಲ್ವ ಎಂಬ ಹೆಸರಿನಿಂದ ಬ್ರಹ್ಮದತ್ತ ಎಂಬ ಸಾಲ್ವದೇಶದ ರಾಜನಾಗಿ ಮಗನಾಗಿ ಹುಟ್ಟಿರುವನು. ಅವನು ರುದ್ರದೇವರಿಂದ ಸೌಭ ಎಂಬ ಹೆಸರುಳ್ಳ ಅಭೇದ್ಯವಾದ ವಿಮಾನವನ್ನು ಪಡೆದಿರುವನು. ಅವನನ್ನು ನೀನೇ ಪರಶುರಾಮರೂಪದಿಂದ ಅನೇಕಬಾರಿ ಓಡಿಸಿರುವಿ. ಆಗ ನೀನು ಅವನನ್ನು ಕೊಲ್ಲಲಿಕ್ಕೆ ಶಕ್ತನಾಗಿದ್ದರೂ ಕೃಷ್ಣಾವತಾರದಲ್ಲಿ ನಾನೇ ಸಂಹರಿಸಬೇಕೆಂದು ನಿನ್ನ ಸಂಕಲ್ಪವನ್ನೇ ಸತ್ಯವನ್ನಾಗಿ ಮಾಡುವುದಕ್ಕಾಗಿ ಸಂಹರಿಸಲಿಲ್ಲ. ಈಗ ಅವನನ್ನು ಸಂಹರಿಸಬೇಕು. ಅವನ ವಿಮಾನವನ್ನು ಏರಿ ಸಂಚರಿಸಿ ಅವನ ತಂದೆಯಾದ ಬ್ರಹ್ಮದತ್ತನೂ ಸೌಭಪತಿಯೆಂದು ಹೆಸರನ್ನು ಪಡೆದಿರುವನು. ಆ ಬ್ರಹ್ಮದತ್ತನನ್ನು ಅಂಬೆಯ ಸ್ವಯಂವರದಲ್ಲಿ ಜಯಿಸುವಾಗ ಸಾಲ್ವನು ತಪಸ್ಸಿಗೆ ಹೋಗಿದ್ದನು. ಅವನು ಇದ್ದಿದ್ದರೆ ಭೀಷ್ಮಾಚಾರ್ಯರಿಂದ ಬ್ರಹ್ಮದತ್ತನನ್ನು ಜಯಿಸುವುದು ಶ್ರಮಸಾಧ್ಯವಾಗುತ್ತಿತ್ತು. ಅವನೀಗ ತಪಸ್ಸನ್ನು ಮುಗಿಸಿಕೊಂಡು ಬಂದಿರುವನು. ಅವನು ಜರಾಸಂಧನನ್ನು ಅನುಸರಿಸಿಕೊಂಡು ಇರುವನು. ಅವನು ಇನ್ನೊಬ್ಬರಿಂದ ಸಾಯಲಾರನು. ಆದುದರಿಂದ ನೀನೇ ಅವತರಿಸಿ ಅವನನ್ನು ಸಂಹರಿಸಬೇಕು. ತಮಸ್ಸಿಗೆ ಕಳುಹಿಸಬೇಕು. ಹಾಗೆಯೇ ಬಾಣ ಎಂಬ ಸಜ್ಜೀವನನ್ನು ಪ್ರವೇಶಿಸಿರುವ ಬಾಣನೆಂಬ ಮಹಾದೈತ್ಯನು ಭೂಮಿಯಲ್ಲಿ ಕೀಚಕನೆಂಬ ಹೆಸರಿನಿಂದ ಹುಟ್ಟಿರುವನು. ಅವನು ರುದ್ರದೇವರ ವರದಿಂದ ಮರಣರಹಿತನಾಗಿರುವನು. ಅವನನ್ನು ಅಂಧಂತಮಸ್ಸಿಗೆ ಕಳುಹಿಸಬೇಕು. ಆದುದರಿಂದ ನೀನೇ ಭೂಮಿಯಲ್ಲಿ ಅವತರಿಸಿ ದೇವತೆಗಳ ಕಾರ್ಯಗಳೆಲ್ಲವನ್ನು ಮಾಡಬೇಕು. ನೀನೇ ಎಲ್ಲರಿಗೂ ಆಶ್ರಯನಾದವನು' ಎಂದು ಹೇಳಿ ಸ್ತೋತ್ರಮಾಡಿದರು.

ತರುವಾಯ ಪರಮಾತ್ಮನು ಅಲ್ಲಿಂದ ಎದ್ದು ದೇವತೆಗಳಿಂದ ಕೂಡಿಕೊಂಡು ಮೇರುಪರ್ವತಕ್ಕೆ ಹೋದನು. ಅಲ್ಲಿ ಬ್ರಹ್ಮದೇವರೊಡನೆ 'ನಾನು ಎಲ್ಲಿ ಅವತರಿಸ ಬೇಕೆಂದು ನೀನು ಹೇಳುವಿಯೋ ಅಲ್ಲಿ ನಾನು ಅವತರಿಸುವೆನು. ನಾನು ಸ್ವತಂತ್ರ ನಾದರೂ ನನ್ನ ಇಚ್ಛೆಯಿಂದ ನಿನ್ನ ಭಕ್ತಿಗೆ ವಶನಾಗಿರುವೆನು' ಎಂದು ಹೇಳಿದರು.

ಆಗ ಬ್ರಹ್ಮದೇವರು ಪರಮಾತ್ಮನಿಗೆ ನಮಸ್ಕರಿಸಿ 'ಭಗವಂತನೇ! ನಾನು ಪೂರ್ವದಲ್ಲಿ ವರುಣನಿಗೆ ಉತ್ತಮ ಗೋವುಗಳನ್ನು ಕೊಟ್ಟಿದ್ದೆನು. ಅವುಗಳನ್ನು ಅವನ ತಂದೆಯಾದ ಕಶ್ಯಪನು ಅಹಂಕಾರದಿಂದ ಅಪಹಾರ ಮಾಡಿದನು. ವರುಣನು ತನ್ನ

ತಾಯಿಯಾದ ಅದಿತಿದೇವಿಯಿಂದಲೂ ಸುರಭಿದೇವಿಯಿಂದಲೂ ಪ್ರೇರಿತನಾದ ಕಶ್ಯಪನು ಗೋವುಗಳನ್ನು ಅಪಹರಿಸಲು ನನ್ನೊಡನೆ ಬಂದು ದೂರಿಕೊಂಡನು. ಆಗ ನಾನು 'ಕ್ಷತ್ರಿಯರಲ್ಲಿ ಗೋವುಗಳಿಂದ ಜೀವನವುಳ್ಳವನಾಗಿ ಹುಟ್ಟು' ಎಂದು ಶಾಪವನ್ನು ಕೊಟ್ಟೆನು. ಅವನು ಶೂರರಾಜನ ಮಗನಾಗಿ ಹುಟ್ಟಿದನು. ಬಹುಗೋವುಗಳುಳ್ಳವನಾಗಿರುವನು. ಅವನಿಗೆ ವಸುದೇವ ಎಂದು ಹೆಸರು. ಅದಿತಿಯು ಅವನಿಗೆ ದೇವಕಿಯೆಂಬ ಹೆಸರಿನಿಂದ ಹೆಂಡತಿಯಾಗಿರುವಳು. ಸುರಭಿಯು ರೋಹಿಣಿಯಾಗಿ ಅವನ ಹೆಂಡತಿಯಾಗಿರುವಳು. ನೀನು ಬೇಗನೇ ವಸುದೇವನಿಗೆ ದೇವಕಿಯ ಮಗನಾಗಿ ಅವತರಿಸು. ಹಾಗೆಯೇ ದ್ರೋಣ ಎಂದು ಹೆಸರುಳ್ಳ ವಸುವು ತನ್ನ ಹೆಂಡತಿಯಾದ ಧರಾ ಎಂಬ ಹೆಂಡತಿಯಿಂದ ಸಹಿತನಾಗಿ ನಿನ್ನ ತಂದೆಯಾಗಬೇಕೆಂದು ತಪಸ್ಸನ್ನು ಮಾಡಿರುವನು. ಅವನಿಗೂ ನಾನು ವರವನ್ನು ಕೊಟ್ಟಿರುವೆನು. ಅವನು ನಂದ ಎಂಬ ಹೆಸರಿನಿಂದ ಹುಟ್ಟಿರುವನು. ಧರೆಯು ಯಶೋದಾ ಎಂಬ ಹೆಸರಿನಿಂದ ಅವನ ಹೆಂಡತಿಯಾಗಿರುವಳು. ನಂದಗೋಪನು ವಸುದೇವನ ತಂದೆಯಾದ ಶೂರರಾಜನಿಗೆ ವೈಶ್ಯಸ್ತ್ರೀಯಲ್ಲಿ ಹುಟ್ಟಿದವನು. ಆದುದರಿಂದ ವಸುದೇವನಿಗೆ ತಮ್ಮನಾಗಬೇಕು. ಗೋಪಜಾತಿಯವನು. ವಸುದೇವ ದೇವಕಿಯರೂ ನೀನು ಮಗನಾಗಬೇಕೆಂದು ತಪಸ್ಸನ್ನು ಮಾಡಿರುವರು. ಆದುದರಿಂದ ನೀನು ಮೊದಲು ವಸುದೇವದೇವಕಿಯರಿಗೆ ಮಗನಾಗಿ ತೋರಿಸಿ ಆಮೇಲೆ ನಂದಗೋಕುಲಕ್ಕೆ ಹೋಗು' ಎಂದು ಹೇಳಿದರು.

ಈರೀತಿಯಾಗಿ ಬ್ರಹ್ಮದೇವರು ಹೇಳಲು ಪರಮಾತ್ಮನು 'ಹಾಗೆಯೇ ಆಗಲಿ' ಎಂದು ಹೇಳಿ ಮತ್ತು ದೇವತೆಗಳೊಡನೆ 'ನೀವೆಲ್ಲರೂ ಭೂಮಿಯಲ್ಲಿ ಅವತರಿಸಿರಿ' ಎಂದು ಹೇಳಿದರು. ತರುವಾಯ ದೇವತೆಗಳೆಲ್ಲರೂ ಪರಮಾತ್ಮನು ಹೇಳಿದಂತೆ ಅವತರಿಸಿದರು. ಪೂರ್ವದಲ್ಲಿಯೇ ಕುಬೇರನು ನರಕಾಸುರನಿಗೆ ಮಗನಾಗಿ ಭಗದತ್ತನೆಂಬ ಹೆಸರಿನಿಂದ ಹುಟ್ಟಿದ್ದನು. ನರಕಾಸುರನು ಪರಮಾತ್ಮನಿಂದ ಭೂಮಿಗೆ ಅಭಿಮಾನಿನಿ ಯಾದ ಧರಾದೇವಿಯಲ್ಲಿ ಹುಟ್ಟಿದವನು. ಪರಮಾತ್ಮನ ಮಗನಾದರೂ ಪರಮಾತ್ಮನ ಇಚ್ಛೆಯಿಂದ ಅಸುರನಾಗಿದ್ದನು. ಅವನು ಕುಬೇರನಿಗೆ ರುದ್ರದೇವರು ಕೊಟ್ಟಿದ್ದ ಸುಪ್ರತೀಕ ಎಂದು ಹೆಸರುಳ್ಳ ಆನೆಯನನು ಅಪಹರಿಸಿದ್ದನು. ಆನೆಗಾಗಿಯೇ ಕುಬೇರನು ಅವನಿಗೆ ಮಗನಾಗಿ ಹುಟ್ಟಿದನು. ಭಗದತ್ತನಲ್ಲಿ ಮಹಾಸುರನ ಆವೇಶ ವಿದ್ದಿತು. ರುದ್ರದೇವರ ಆವೇಶವಿದ್ದ ಕಾರಣ ಬಲಿಷ್ಠನಾಗಿದ್ದನು. ಅಸ್ತ್ರಜ್ಞಾನಿಯೂ ಆಗಿದ್ದನು. ತಂದೆಯು ಮೃತನಾದ ಮೇಲೆ ಇಂದ್ರದೇವರ ಶಿಷ್ಯನಾಗಿದ್ದನು. ನಿತ್ಯವೂ ಸ್ವಧರ್ಮದಲ್ಲಿ ಆಸಕ್ತನಾಗಿದ್ದನು.

ಯಾದವರಲ್ಲಿ ಶಿನಿಯೆಂದು ಹೆಸರುಳ್ಳವನಿದ್ದನು. ಅವನಿಗೆ ಸತ್ಯಕನೆಂಬ ಮಗನಿದ್ದನು. ಅವನಿಗೆ ಯುಯುಧಾನ ಎಂಬ ಮಗನು ಹುಟ್ಟಿದನು. ಅವನಿಗೆ ಸಾತ್ಯಕಿಯೆಂದೂ ಹೆಸರು. ಅವನು ಕೃಷ್ಣಪಕ್ಷಕ್ಕೆ ಅಭಿಮಾನಿಯಾದ ದೇವತೆಯು ಗರುಡದೇವರ ಆವೇಶವುಳ್ಳವನಾಗಿದ್ದನು. ಸಂವಹ ಎಂಬ ಮರುತ್ತಿನ ಮತ್ತು ಪರಮಾತ್ಮನ ಚಕ್ರಾಭಿಮಾನಿಯ ಆವೇಶವುಳ್ಳವನಾಗಿದ್ದನು. ಹಾಗೆಯೇ ಯಾದವರಲ್ಲಿ ಭೋಜವಂಶದಲ್ಲಿ ಹೃದಿಕನೆಂಬುವನು ಇದ್ದನು. ಅವನಿಗೆ ಶುಕ್ಲಪಕ್ಷಕ್ಕೆ ಅಭಿಮಾನಿದೇವತೆಯು ಮಗನಾಗಿ ಹುಟ್ಟಿದನು. ಅವನಿಗೆ ಕೃತವರ್ಮ ಎಂದು ಹೆಸರು. ಪರಮಾತ್ಮನ ಶಂಖದ ಅಭಿಮಾನಿದೇವತೆಯ ಆವೇಶವುಳ್ಳವನಾಗಿದ್ದನು. ಹಾಗೆಯೇ ಮರುತ್ತುಗಳಲ್ಲಿ ಪ್ರವಹ ಎಂಬ ಮರುತ್ತಿನ ಆವೇಶವುಳ್ಳನಾಗಿದ್ದನು. ಹಾಗೆಯೇ ಇತರ ಯಾದವರೂ ಗೋಪರೂ ದೇವತೆಗಳ ಅವತಾರಭೂತರು. ಯಾರು ಪಾಂಡವರಿಗೆ ಸಹಾಯವನ್ನು ಮಾಡಿದ್ದರೋ ಅವರೆಲ್ಲರೂ ದೇವತೆಗಳು ಅಥವಾ ದೇವತೆಗಳ ಭೃತ್ಯರು. ದ್ವೇಷ ಮಾಡಿದವರು ಅಸುರರು. ಭೀಷ್ಮದ್ರೋಣಾದಿಗಳು ದುರ್ಯೋಧನನ ಪಕ್ಷದಲಲಿ ಇದ್ದರೂ ಮನಸ್ಸಿನಿಂದ ಪಾಂಡವರಿಗೆ ಸಹಾಯವನ್ನು ಮಾಡಿದವರಾದ ಕಾರಣ ದೇವತೆಗಳೇ ಚಂಚಲ ಬುದ್ಧಿಯುಳ್ಳ ಮನುಷ್ಯರು ಮಧ್ಯಮರು. ದೇವತೆಗಳಿಗೂ ದೇವಭೃತ್ಯರಾದ ಗಂಧರ್ವರಿಗೂ ಪರಮಾತ್ಮನಲ್ಲಿ ಉತ್ತಮವಾದ ಭಕ್ತಿಯನ್ನು ಮಾಡುವುದು ಗುರುತು. ಅಸುರರಿಗೆ ಪರಮಾತ್ಮನಲ್ಲಿ ದೇವತೆಗಳಲ್ಲಿ ದ್ವೇಷಮಾಡುವುದೇ ಲಕ್ಷಣವು. ಆದುದರಿಂದ ಕೌರವಪಾಂಡವ ಸೈನ್ಯದಲ್ಲಿ ಪರಮಾತ್ಮನಲ್ಲಿ ಭಕ್ತಿಯುಳ್ಳವರಾಗಿದ್ದ ಯುಧಿಷ್ಠಿರ ಭೀಮ ಅರ್ಜುನ ದ್ರೋಣ ಕರ್ಣಭೀಷ್ಮಾದಿಗಳು ಸಾಕ್ಷಾತ್ ದೇವತೆಗಳು. ಧೃತರಾಷ್ಟ್ರ ದ್ರುಪದ ವಿರಾಟಾದಿಗಳು ಗಂಧರ್ವರು. ಯಾರು ಪರಮಾತ್ಮನಲ್ಲಿ ಭಕ್ತಿಯುಳ್ಳವರಾಗಿರುವುದಿಲ್ಲವೋ ಪರಮಾತ್ಮನ ಭಕ್ತಿಯುಳ್ಳವರಲ್ಲಿ ವಿರುದ್ಧವಾಗಿರುವರೋ ಆ ದುರ್ಯೋಧನಾದಿಗಳೆಲ್ಲರೂ ಅಸುರರು.

ದೇವಕನೆಂದು ಹೆಸರುಳ್ಳ ಗಂಧರ್ವಮುನಿಯು ಭಗವಂತನ ಸೇವೆಗಾಗಿ ಆಹುಕರಾಜನಿಗೆ ಮಗನಾಗಿ ಹುಟ್ಟಿದನು. ಆಗಲೂ ದೇವಕನೆಂದೇ ಹೆಸರು. ಉಗ್ರಸೇನನ ತಮ್ಮನು. ಆ ದೇವಕನ ಮಗಳು ದೇವಕಿಯು. ಕಶ್ಯಪರ ಪತ್ನಿಯರಾದ ಇತರ ಆರು ಜನರೂ ದೇವಕಿಯ ತಂಗಿಯರಾಗಿ ದೇವಕನಿಗೆ ಮಕ್ಕಳಾಗಿ ಹುಟ್ಟಿದ್ದರು. ಅಂದರೆ ಕಶ್ಯಪರಿಗೆ ಹದಿಮೂರು ಜನ ಹೆಂಡತಿಯರು. ಅವರಲ್ಲಿ ಸುರಭಿಯು ಬಾಹ್ಲೀಕರಾಜನ ಮಗಳಾಗಿ ರೋಹಿಣಿಯೆಂಬ ಹೆಸರಿನಿಂದಲೂ ದಿತಿಯು

ಕಾಶಿರಾಜನ ಮಗಳಾಗಿಯೂ ದನುವು ಕರವೀರರಾಜನ ಮಗಳಾಗಿಯೂ ಹುಟ್ಟಿದ್ದರು. ಈರೀತಿಯಾಗಿ ಕಶ್ಯಪರ ಹತ್ತುಜನ ಪತ್ನಿಯರಿಗೆ ಮಾತ್ರ ಭೂಮಿಯಲ್ಲಿ ಅವತಾರವು. ಉಳಿದ ಮೂರುಜನರಿಗೆ ಕಾರ್ಯವಿಲ್ಲದ ಕಾರಣ ಭೂಮಿಯಲ್ಲಿ ಅವತಾರವಿಲ್ಲ. ಕಶ್ಯಪರ ಅವತಾರವು ವಸುದೇವನು. ದೇವಕನ ಹೆಣ್ಣುಮಕ್ಕಳಲ್ಲಿ ದೇವಕಿಯು ಜ್ಯೇಷ್ಠಳು. ಅವಳನ್ನು ದೇವಕನ ತಂದೆಯಾದ ಆಹುಕರಾಜನು ತನ್ನ ಮಗಳಾಗಿ ಮಾಡಿಕೊಂಡಿದ್ದನು. ಇದರಿಂದ ದೇವಕನ ಅಣ್ಣನಾದ ಉಗ್ರಸೇನನ ಮಗನಾದ ಕಂಸನಿಗೆ ದೇವಕಿಯು ಸೋದರ ಅತ್ತೆಯಾಗಬೇಕು. ಉಗ್ರಸೇನನ ತಮ್ಮನಾದ ದೇವಕನ ಮಗಳಾದ ಕಾರಣ ಸಹೋದರಿಯಾಗಬೇಕು.

ಕಾರ್ತವೀರ್ಯನ ಮಗನಾದ ಶೂರಸೇನ ಎಂದು ಹೆಸರುಳ್ಳ ಯದುವಂಶದ ರಾಜನು ಮಧುರಾಪಟ್ಟಣದಲ್ಲಿ ವಾಸಮಾಡಿಕೊಂಡು ಮಾಧುರ ಶೂರಸೇನ ಎಂಬ ದೇಶಗಳನ್ನು ಆಳುತ್ತಿದ್ದನು. ಆದುದರಿಂದ ಆಮೇಲೆ ಬಂದ ಯದುವಂಶದ ರಾಜರೆಲ್ಲರಿಗೂ ಮಧುರಾಪಟ್ಟಣವೇ ರಾಜಧಾನಿಯಾಗಿದ್ದಿತು. ಮಧುರಾಪಟ್ಟಣದಲ್ಲಿ ಭಗವಂತನು ವಿಶೇಷವಾಗಿ ಸನ್ನಿಹಿತನಾಗಿದ್ದನು.

ಅಂತಹ ಮಧುರಾಪಟ್ಟಣದಲ್ಲಿ ಒಂದುದಿನದಲ್ಲಿ ವಸುದೇವನು ಮದುವೆ ಮಾಡಿಕೊಂಡು ಹೆಂಡತಿಯಾದ ದೇವಕಿಯಿಂದ ಕೂಡಿಕೊಂಡು ಪ್ರಯಾಣಕಾಲದಲ್ಲಿ ರಥವನ್ನು ಏರಿದನು. ಆಗ ಉಗ್ರಸೇನನ ಮಗನಾದ ಕಂಸನು ಸಹೋದರಿಯಾದ ದೇವಕಿಗೆ ಪ್ರೀತಿಯನ್ನು ಉಂಟುಮಾಡುವುದಕ್ಕಾಗಿ ಸುತ್ತಲೂ ನೂರಾರು ಬಂಗಾರದ ರಥಗಳಿಂದ ಸಹಿತನಾಗಿ ವಸುದೇವನು ಕೂತಿದ್ದ ರಥವನ್ನು ತಾನೇ ಓಡಿಸಿದನು. ಆ ಸಮಯದಲ್ಲಿ ಮಗಳ ಮೇಲೆ ಪ್ರೇಮವುಳ್ಳ ದೇವಕನು ಬಂಗಾರದ ಮಾಲೆಗಳುಳ್ಳ ನಾಲ್ಕು ನೂರು ಆನೆಗಳನ್ನು, ಹತ್ತೂವರೆ ಸಾವಿರ ಕುದುರೆಗಳನ್ನು, ಸಾವಿರದ ಎಂಟುನೂರು ರಥಗಳನ್ನು, ಸುಕುಮಾರಿಯರಾದ ಅಲಂಕೃತರಾದ ಇನ್ನೂರು ದಾಸಿಯರನ್ನು, ಮಗಳಿಗಾಗಿ ಕೊಟ್ಟನು. ವಧೂವರರು ಪ್ರಯಾಣ ಮಾಡುವ ಸಮಯದಲ್ಲಿ ಶಂಖ, ತೂರ್ಯ, ಮೃದಂಗ ಇತ್ಯಾದಿ ಅನೇಕ ವಾದ್ಯಗಳನ್ನು ಬಾರಿಸಿದರು. ಈರೀತಿಯಾಗಿ ವೈಭವದಿಂದ ಹೋಗುತ್ತಿರುವಾಗ ದಾರಿಯಲ್ಲಿ ಕುದುರೆಯ ಹಗ್ಗವನ್ನು ಹಿಡಿದು ಓಡಿಸುತ್ತಿರುವ ಕಂಸನನ್ನು ಕುರಿತು 'ಮೂರ್ಖನೇ! ನೀನು ಯಾರನ್ನು ಕರೆದುಕೊಂಡು ಹೋಗುತ್ತಿರುವಿಯೋ ಇವಳಲ್ಲಿ ಹುಟ್ಟುವ ಎಂಟನೇ ಮಗನೇ ನಿನ್ನನ್ನು ಸಂಹರಿಸುವನು' ಎಂದು ಅಶರೀರವಾಣಿಯಾಯಿತು.

ಲೋಕಧರ್ಮವನ್ನು ಲೋಕಹಿತಕ್ಕಾಗಿ ಅನುಸರಿಸುವ ಭಗವಂತನು

ದೇವಕಿಯಲ್ಲಿ ಕೃಷ್ಣನಾಗಿ ಅವತರಿಸಿದಾಗ ಸೋದರಮಾವನಾದ ಕಂಸನು ತನಗೆ ಬಂಧುತ್ವವಿಷಯದಲ್ಲಿ ಸೋದರಮಾವನಿಗಿಂತ ಶ್ರೇಷ್ಠರಾದ ತಂದೆತಾಯಿಗಳಾದ ವಸುದೇವದೇವಕಿಯರಿಗೆ ಅಪರಾಧವನ್ನು ಮಾಡದೆ ಇದ್ದರೆ ವ್ಯರ್ಥವಾಗಿ ಸೋದರಮಾವನಾದ ಅವನನ್ನು ಕೊಲ್ಲುವುದು ಉಚಿತವಾಗುವುದಿಲ್ಲ. ಅದಕ್ಕಾಗಿ ಕಂಸನು ವಸುದೇವದೇವಕಿಯರಿಗೆ ವಿರೋಧವನ್ನು ಮಾಡಲಿ ಎಂಬ ಅಭಿಪ್ರಾಯದಿಂದಲೇ ವಾಯುದೇವರು ಅಶರೀರವಾಣಿಯಿಂದ ದೇವಕಿಯ ಎಂಟನೇ ಪುತ್ರನು ಸಂಹರಿಸುವನೆಂದು ತಿಳಿಸಿದರು. ಆ ಅಶರೀರವಾಣಿಯನ್ನು ಕೇಳಿದ ಕೂಡಲೇ ಕಂಸನು ಖಡ್ಗವನ್ನು ತೆಗೆದು ತಂಗಿಯಾದ ದೇವಕಿಯನ್ನು ಕೊಲ್ಲುವೆನೆಂದು ತಲೆಯ ಕೂದಲನ್ನು ಹಿಡಿದು ಸೆಳೆದನು. ವಸುದೇವನು ನಾನಾ ವಿಧವಾಗಿ ಸಮಾಧಾನಪಡಿಸಿದರೂ ಕೇಳದೆ ಇರಲು ಕೊನೆಗೆ ಇವಳಲ್ಲಿ ಹುಟ್ಟಿದ ಮಕ್ಕಳೆಲ್ಲರನ್ನೂ ಒಪ್ಪಿಸುವೆನೆಂದು ಹೇಳಿ ಸಮಾಧಾನಪಡಿಸಿ ದೇವಕಿಯಿಂದ ಸಹಿತನಾಗಿ ಮನೆಗೆ ಹೋದನು. ದೇವಕಿಯ ತಂಗಿಯರಾದ ಆರು ಜನರನ್ನು ವಸುದೇವನೇ ಮದುವೆಯಾದನು. ಅವರಿಂದ ಕೂಡಿಕೊಂಡು ವಸುದೇವನು ಸಂತೋಷದಿಂದ ಇದ್ದನು. ಸುರಭಿಯು ರೋಹಿಣಿಯೆಂಬ ಹೆಸರಿನಿಂದ ಬಾಹ್ಲೀಕ ರಾಜನ ಮಗಳಾಗಿ ಹುಟ್ಟಿದ್ದಳು. ಅವಳನ್ನು ವಸುದೇವನು ಮದುವೆಯಾಗಿದ್ದನು. ವಸುದೇವನು ಕಾಶಿರಾಜನ ಮಗಳನ್ನು ಮದುವೆಯಾಗಿದ್ದನು. ಅವಳು ಪೂರ್ವದಲ್ಲಿ ದಿತಿಯೂ ಅವಳನ್ನು ಪುತ್ರಿಕಾಪುತ್ರಧರ್ಮದಿಂದ ಮದುವೆಯಾಗಿದ್ದನು. (ಪುತ್ರಿಕಾಪುತ್ರಧರ್ಮವೆಂದರೆ ಮಗಳನ್ನು ಮದುವೆ ಮಾಡಿಕೊಡು ವಾಗ ಇವಳಲ್ಲಿ ಹುಟ್ಟುವ ಮಗನನ್ನು ನನಗೆ ಕೊಡಬೇಕೆಂದು ಹೇಳಿಕೊಂಡೇ ಮದುವೆ ಮಾಡಿಕೊಡುವುದು) ಅವಳಲ್ಲಿ ವಸುದೇವನಿಂದ ಪೌಂಡ್ರಕವಾಸು ದೇವನೆಂಬ ಮಗನು ಹುಟ್ಟಿದನು. ಅವನು ಪೂರ್ವದಲ್ಲಿ ನಾನೇ ದೇವರು ಎಂದು ಹೇಳುತ್ತಿದ್ದ ವೇನರಾಜನು. ವಸುದೇವನು ಹಾಗೆಯೇ ಕರವೀರದೇಶದ ರಾಜನ ಮಗಳನ್ನು ಮದುವೆಯಾಗಿದ್ದನು. ಅವಳು ಪೂರ್ವದಲ್ಲಿ ದನುವು. ಅವಳಲ್ಲಿ ಸೃಗಾಲವಾಸುದೇವ ನೆಂಬ ಮಗನು ಹುಟ್ಟಿದ್ದನು. ಪೂರ್ವದಲ್ಲಿ ಕುವಲಯಾಶ್ವ ರಾಜನಲ್ಲಿ ಆವಿಷ್ಟನಾದ ಪರಮಾತ್ಮನಿಂದ ಮೃತನಾಗಿದ್ದ ಧುಂಧು ಎಂದು ಹೆಸರುಳ್ಳ ಮಧುರಾಕ್ಷಸ ಮಗನೇ ಸೃಗಾಲವಾಸುದೇವನಾಗಿ ಹುಟ್ಟಿದ್ದನು. ವಸುದೇವನು ದೇವಕಿಯನ್ನು ಮದುವೆಯಾದ ಮೇಲೆ ಕಾಶಿರಾಜ್ಯಕ್ಕೂ ಕರವೀರನಗರಕ್ಕೂ ಹೋಗಲೇ ಇಲ್ಲ. ಇದರಿಂದ ವಸುದೇವನ ಜ್ಯೇಷ್ಠಪುತ್ರರಾದ ಪೌಂಡ್ರಕವಾಸು ದೇವನೂ ಸೃಗಾಲವಾಸುದೇವನೂ ಇಬ್ಬರೂ ಯಾದವರಿಗೆ ಶತ್ರುಗಳಾಗಿದ್ದರು.

ವಸುದೇವನು ಇತರ ಪತ್ನಿಯರಲ್ಲಿಯೂ ದೇವತೆಗಳ ಅವತಾರಭೂತರಾದ ಉತ್ತಮರಾದ ಮಕ್ಕಳನ್ನು ಪಡೆದನು. ಯಾವ ಯಾವ ದೇವತೆಗಳು ಭೂಮಿಯಲ್ಲಿ ಅವತರಿಸಿದ್ದರೋ ಅವರೆಲ್ಲರೂ ವೇದವ್ಯಾಸದೇವರ ಶಿಷ್ಯರು. ಎಲ್ಲರೂ ಪರಮಾತ್ಮನ ಜ್ಞಾನವನ್ನು ಹೊಂದಿ ತಮ್ಮ ಯೋಗ್ಯತಾನುಸಾರವಾಗಿ ಸರ್ವಜ್ಞರಾಗಿದ್ದರು. ತರುವಾಯ ಸರಿಯಾದ ಕಾಲದಲ್ಲಿ ದೇವಕಿಯೂ ಮಕ್ಕಳನ್ನು ಹಡೆದಳು. ಎಂಟು ಗಂಡುಮಕ್ಕಳನ್ನು ಒಂದು ಹೆಣ್ಣುಮಗಳನ್ನೂ ವರ್ಷಕ್ಕೆ ಒಂದೊಂದನ್ನಾಗಿ ಹಡೆದಳು. ಪೂರ್ವದಲ್ಲಿ ಮರೀಚಿಋಷಿಗಳ ಮಕ್ಕಳಾದ ಆರು ಮುನಿಗಳು ಇದ್ದರು. ಅವರು ಕಾಮಜ್ವರದಿಂದ ಕೃಶರಾಗಿದ್ದ ದೇವಲಮುನಿಗಳನ್ನು ನೋಡಿ ಅಪಹಾಸ ಮಾಡಿದರು. ಆದರಿಂದ ದೇವಲರು ಕೋಪಗೊಂಡವರಾಗಿ ಅವರಿಗೆ ದೈತ್ಯರಾಗಿ ಹುಟ್ಟುವಂತೆ ಶಾಪವನ್ನು ಕೊಟ್ಟರು. ಆದರಿಂದ ಆ ಆರುಮುನಿಗಳು ಕಾಲನೇಮಿಯ ಮಕ್ಕಳಾಗಿ ಹುಟ್ಟಿದವರಾಗಿ ತಾವು ಅವಧ್ಯರಾಗಬೇಕೆಂದು ಬ್ರಹ್ಮದೇವರನ್ನು ತಪಸ್ಸು ಮಾಡಿದರು. ಬ್ರಹ್ಮದೇವರು ಹಾಗೆಯೇ ವರವನ್ನು ಕೊಟ್ಟರು. ಆ ಸಮಯದಲ್ಲಿ ಹಿರಣ್ಯಕಶಿಪು ಬ್ರಹ್ಮದೇವರ ವರವನ್ನು ಪಡೆದು ಪ್ರಬಲನಾಗಿದ್ದನು. ಅವನು ತನ್ನನ್ನು ಬಿಟ್ಟು ಬ್ರಹ್ಮದೇವರನ್ನು ಅವರು ತಪಸ್ಸು ಮಾಡಿದರೆಂದು ಕೋಪಿಸಿಕೊಂಡವನಾಗಿ ಆ ಆರು ಜನರಿಗೂ 'ನೀವು ಭೂಮಿಯಲ್ಲಿ ಹುಟ್ಟಿರಿ. ಅಲ್ಲಿ ನಿಮ್ಮನ್ನು ನಿಮ್ಮ ತಂದೆಯು ಕೊಲ್ಲಲಿ' ಎಂದು ಶಾಪವನ್ನು ಕೊಟ್ಟನು. ಬ್ರಹ್ಮದೇವರ ವರವಿರುವ ಕಾರಣ ಹಿರಣ್ಯಕಶಿಪುವಿನ ಶಾಪವೂ ನಡೆಯಬೇಕಾಗಿದೆ. ಅದಕ್ಕಾಗಿ ಆಗ ದುರ್ಗಾದೇವಿಯರು ಭಗವಂತನಿಂದ ಪ್ರೇರಿತರಾಗಿ ಕಾಲನೇಮಿಯ ಮಕ್ಕಳಾದ ದೈತ್ಯರನ್ನು ಒಂದು ಪರ್ವತದ ಗುಹೆಯಲ್ಲಿ ಮಲಗಿಸಿ ಅವರ ದೇಹದಿಂದ ಜೀವರನ್ನು ಮಾತ್ರ ಹೊರಗೆ ಸೆಳೆದು ಆರುಜನರನ್ನು ಕ್ರಮದಿಂದ ದೇವಕಿಯ ಗರ್ಭದಲ್ಲಿ ಪ್ರವೇಶ ಮಾಡಿಸಿದಳು. ಒಬ್ಬೊಬ್ಬನನ್ನೇ ಕಂಸನು ಸಂಹರಿಸಿದನು. ತರುವಾಯ ದುರ್ಗಾದೇವಿಯರು ಆ ಜೀವನನ್ನು ಗುಹೆಯಲ್ಲಿ ಮಲಗಿಸಿದ್ದ ಆ ದೈತ್ಯದೇಹಗಳಲ್ಲಿಯೇ ಪ್ರವೇಶಗೊಳಿಸಿದರು. ಈರೀತಿಯಾಗಿ ಅವರಿಗೆ ಪೂರ್ವದ ತಂದೆಯಾದ ಕಾಲನೇಮಿಯೇ ಕಂಸನಾಗಿ ಹುಟ್ಟಿದ್ದ ಕಾರಣ ಆ ಆರು ಜನರೂ ಕಂಸನಿಂದ ಮೃತರಾದ ಕಾರಣ ಹಿರಣ್ಯಕಶಿಪುವಿನ ಶಾಪವು ಸರಿಯಾಯಿತು. ಅವರ ದೈತ್ಯದೇಹವು ನಾಶವನ್ನು ಹೊಂದದೆ ಇದ್ದ ಕಾರಣ ಆ ದೇಹದಲ್ಲಿ ಬ್ರಹ್ಮದೇವರು ಕೊಟ್ಟ ವರವೂ ಸಾರ್ಥಕವಾಯಿತು. ಅವರು ಆರುಜನರೂ ಅಸುರದೇಹದಿಂದ ಬಲಿಯ ಲೋಕದಲ್ಲಿ ವಾಸಮಾಡಿಕೊಂಡು ಇದ್ದರು.

ದೇವಕಿಯು ಮೊದಲಿನ ಮಗುವನ್ನು ಹಡೆಯಲು ವಸುದೇವನು ಕೀರ್ತಿವಂತನೆಂದು ಹೆಸರುಳ್ಳ ಆ ಮಗುವನ್ನು ಕಂಸನಿಗೆ ತೆಗದುಕೊಂಡು ಹೋಗಿ ಕೊಟ್ಟನು. ಆಗ ಕಂಸನು 'ಈ ಮಗುವು ಹೋಗಲಿ. ನನಗೆ ನಿಮ್ಮ ಎಂಟನೇ ಮಗುವಿನಿಂದ ಮರಣವು ವಿಹಿತವಾದದ್ದಷ್ಟೇ' ಎಂದು ಹೇಳಿದನು. ಹಾಗೆಯೇ ಆಗಲಿ ಎಂದು ಹೇಳಿ ವಸುದೇವನು ಮಗುವನ್ನು ಎತ್ತಿಕೊಂಡು ಹೋದನು. ಆದರೆ ಅವನು ಕಂಸನು ಚಂಚಲಮನಸ್ಸುಳ್ಳವನಾದ ಕಾರಣ ಅವನ ಮಾತನ್ನು ನಂಬಲಿಲ್ಲ. ವಸುದೇವನು ಕೂಸನ್ನು ಹಿಡಿದುಕೊಂಡು ಹೋದಮೇಲೆ ಏಕಾಂತದಲ್ಲಿ ಕಂಸನಿದ್ದಲ್ಲಿಗೆ ನಾರದರು ಬಂದು 'ಗೋಕುಲದಲ್ಲಿ ಇರುವ ನಂದಗೋಪನೇ ಮೊದಲಾದ ಗೋಪಾಲರೂ ಅವರ ಹೆಂಗಸರೂ ವಸುದೇವನೇ ಮೊದಲಾದ ಯಾದವರೂ ದೇವಕಿಯೇ ಮೊದಲಾದ ಯಾದವರ ಹೆಂಗಸರೂ ಎಲ್ಲರೂ ದೇವತೆಗಳೇ. ನಿನ್ನನ್ನು ಅನುಸರಿಸಿರುವ ಬಂಧುಗಳೂ ಮಿತ್ರರೂ ಎಲ್ಲರೂ ಅಸುರರು. ಅಸುರರೆಲ್ಲರನ್ನೂ ಸಂಹರಿಸಲಿಕ್ಕೆ ದೇವತೆಗಳು ಉದ್ಯೋಗವನ್ನು ಮಾಡಿರುವರು. ನೀನು ಕಾಲನೇಮಿಯೆಂಬ ಅಸುರನು. ದೇವಕಿಯ ಗರ್ಭದಲ್ಲಿ ವಿಷ್ಣುವು ನಿನ್ನನ್ನು ಕೊಲ್ಲಲು ಅವತರಿಸುವನು' ಇತ್ಯಾದಿರೀತಿಯಾಗಿ ದೇವತಾಕಾರ್ಯಸಿದ್ಧಿಗಾಗಿ ತಿಳಿಸಿ ಹೊರಟು ಹೋದನು. ನಾರದರು ಹೊರಟುಹೋದ ಮೇಲೆ ಕಂಸನು ವಸುದೇವ ದೇವಕಿಯರನ್ನು ಬಂಧನದಲ್ಲಿ ಇಟ್ಟು ಹುಟ್ಟಿದ ಮಕ್ಕಳನ್ನು ಕೊಂದು ಹಾಕಿದನು. ತಾನು ಪೂರ್ವದಲ್ಲಿ ವಿಷ್ಣುವಿನಿಂದ ಮೃತನಾದ ಕಾಲನೇಮಿಯೆಂದು ತಿಳಿದುಕೊಂಡು ಯಾದವರೊಡನೆ ವಿರೋಧಮಾಡಿದನು. ಮಹಾಬಲಿಷ್ಠನಾದ ಅವನು ಯಾದವರಿಗೆ ರಾಜನಾಗಿದ್ದ ತನ್ನ ತಂದೆಯಾದ ಉಗ್ರಸೇನರಾಜನನ್ನು ಬಲಾತ್ಕಾರದಿಂದ ಬಂಧನದಲ್ಲಿ ಇಟ್ಟು ತಾನೇ ರಾಜ್ಯಭಾರವನ್ನು ಮಾಡಿದನು.

ಬಲಿಷ್ಠನಾದ ಕಂಸನು ಮಾವನಾದ ಜರಾಸಂಧನನ್ನು ಆಶ್ರಯಿಸಿಕೊಂಡು ಪ್ರಲಂಬ ಬಕ, ಚಾಣೂರ, ತೃಣಾವರ್ತ, ಮುಷ್ಟಿಕ ,ಅರಿಷ್ಟ, ವಿವಿದ, ಪೂತನಾ, ಕೇಶಿ, ಧೇನುಕ ಎಂಬ ರಾಕ್ಷಸರಿಂದಲೂ ಇತರರಾದ ಬಾಣಾಸುರ ನರಕಾಸುರ ಮೊದಲಾದ ಅಸುರಭೂಪಾಲರಿಂದಲೂ ಸಹಿತನಾಗಿ ಯಾದವರೊಡನೆ ಜಗಳವಾಡಿದನು. ಕಂಸನಿಂದ ಪೀಡಿತರಾದ ಯಾದವರು ಕುರು, ಪಾಂಚಾಲ, ಕೈಕಯ, ಶಾಲ್ವ ವಿದರ್ಭ, ನಿಷಧ, ವಿದೇಹ, ಮಾಗಧ ಇತ್ಯಾದಿ ದೇಶಗಳಿಗೆ ಓಡಿಹೋದರು. ಅಕ್ರೂರನೇ ಮೊದಲಾದ ಕೆಲವರು ಮಾತ್ರ ಕಂಸನನ್ನೇ ಅನುಸರಿಸಿ ಅಲ್ಲಿಯೇ ವಾಸಮಾಡುತ್ತಿದ್ದರು. ಕಂಸನು ಆರು ಮಕ್ಕಳನ್ನು ಸಂಹರಿಸಿದ ಮೇಲೆ ಏಳನೇ

ಗರ್ಭದಲ್ಲಿ ಶೇಷದೇವರು ಪ್ರವೇಶಿಸಿದರು. ದೇವಕಿಗೆ ಸಂತೋಷಕರವಾಗಿಯೂ ಆಮೇಲೆ ಸ್ರವಿಸಿ ಹೋದಕಾರಣ ಶೋಕಕ್ಕೂ ಕಾರಣವಾದ ಗರ್ಭವು ಉಂಟಾಯಿತು. ಶ್ರೀಭಗವಂತನು ಆ ಸಮಯದಲ್ಲಿ ತನ್ನ ಭಕ್ತರಾದ ಯಾದವರಿಗೆ ಬಂದಿರುವ ಭಯವನ್ನು ತಿಳಿದು ದುರ್ಗಾದೇವಿಯರಿಗೆ ಆಜ್ಞಾಪಿಸಿದನು. ದೇವಿ! ನೀನು ಗೋವುಗಳಿಂದ ಗೋಪರಿಂದಲೂ ಅಲಂಕೃತವಾದ ಗೋಕುಲಕ್ಕೆ ಹೋಗು. ವಸುದೇವನ ಪತ್ನಿಯಾದ ರೋಹಿಣಿಯು ನಂದಗೋಕುಲದಲ್ಲಿ ಇರುವಳು. ಇತರ ವಸುದೇವ ಪತ್ನಿಯರು ಕಂಸನ ಭಯದಿಂದ ಅಲ್ಲಲ್ಲಿ ವಾಸಮಾಡಿಕೊಂಡಿರುವರು. ದೇವಕಿಯ ಗರ್ಭದಲ್ಲಿರುವ ಶೇಷನನ್ನು ಸೆಳೆದು ರೋಹಿಣಿಯ ಉದರಲ್ಲಿ ಸ್ಥಾಪಿಸು. ಆಮೇಲೆ ನಾನು ಒಂದು ಅಂಶದಲ್ಲಿ ದೇವಕಿಯಲ್ಲಿ ಅವತರಿಸುವೆನು. ನೀನು ನಂದಗೋಪನ ಹೆಂಡತಿಯಾದ ಯಶೋದೆಯಲ್ಲಿ ಅವತರಿಸುವಿ. ನಿನ್ನನ್ನು ಮನುಷ್ಯರೆಲ್ಲರೂ ಪೂಜಿಸುವರು. ನಾನಾ ಹೆಸರನ್ನು ಹೇಳುವರು. ನಾನಾ ಸ್ಥಾನಗಳನ್ನು ಕೊಡುವರು. ದುರ್ಗಾ, ಭದ್ರಾ, ಕಾಲಾ, ವಿಜಯೀ, ವೈಷ್ಣವೀ, ಕುಮುದಾ, ಚಂಡಿಕಾ, ಕ್ರಷ್ಣಾ, ಮಾಧವೀ, ಕನ್ಯಕಾ, ಮಾಯಾ, ನಾರಾಯಣೀ, ಈಶಾನಾ, ಶರದಾ, ಅಂಬಿಕಾ ಎಂಬ ಹೆಸರುಗಳಿಂದ ನಿನ್ನನ್ನು ಹೇಳುವರು. ನೀನು ಗರ್ಭವನ್ನು ಸೆಳೆದ ಕಾರಣ ಶೇಷನ ಅವತಾರನಿಗೆ ಸಂಕರ್ಷಣನೆಂದು ಹೇಳುವರು. ಲೋಕವನ್ನು ಸಂತೋಷಪಡಿಸುವ ಕಾರಣ ರಾಮ ಎಂದು ಹೇಳುವರು. ಬಲಿಷ್ಠನಾದ ಕಾರಣ ಬಲಭದ್ರ ಎಂದು ಹೇಳುವರು' ಎಂದು ಹೇಳಿದನು. ಈರೀತಿಯಾಗಿ ಭಗವಂತನಿಂದ ಆಜ್ಞಪ್ತರಾದ ದುರ್ಗಾದೇವಿಯರು ಹಾಗೆಯೇ ಆಗಲಿ ಎಂದು ಹೇಳಿ ಭಗವಂತನಿಗೆ ಪ್ರದಕ್ಷಿಣೆ ಹಾಕಿ ಭೂಮಿಗೆ ಬಂದು ಹಾಗೆಯೇ ಮಾಡಿದರು. ದುರ್ಗಾದೇವಿಯರು ದೇವಕೀದೇವಿಯ ಗರ್ಭವನ್ನು ರೋಹಿಣಿಯ ಉದರದಲ್ಲಿ ಸ್ಥಾಪಿಸಲು ಜನರೆಲ್ಲರೂ ದೇವಕೀದೇವಿಯ ಗರ್ಭವು ಸ್ರವಿಸಿ ಹೋಯಿತು ಎಂದು ಕೂಗಿಕೊಂಡರು.

ಕಂಸನು ವಸುದೇವದೇವಕಿಯರನ್ನು ಬಂಧನದಲ್ಲಿ ಇಟ್ಟಿರುವ ಸಮಯದಲ್ಲಿ ಇತರ ಪತ್ನಿಯರನ್ನು ದೂರಕ್ಕೆ ಕಳುಹಿಸಿದ್ದನು. ವಸುದೇವನ ಹೆಂಡತಿಯರೆಲ್ಲರೂ ಅವನೊಟ್ಟಿಗೇ ಇಟ್ಟರೆ ದೇವಕಿಯೂ ಇತರರೂ ಗರ್ಭಿಣಿಯರಾಗಿರುವಾಗ ಮಕ್ಕಳನ್ನು ಮಾರಿಸಿಕೊಂಡು ಬಿಟ್ಟರೆ ದೇವಕಿಯ ಮಗುವು ತಿಳಿಯಲಾರದೆಂದು ದೇವಕಿಯ ಮಗುವಿನ ನಿಶ್ಚಯಕ್ಕಾಗಿ ವಸುದೇವನ ಇತರ ಹೆಂಡತಿಯರು ಗರ್ಭವತಿಯರಾದ ಕೂಡಲೇ ಬೇರೆ ಸ್ಥಳಕ್ಕೆ ಕಳುಹಿಸಿಬಿಡುತ್ತಿದ್ದನು. ರೋಹಿಣಿಯು ಗೋಕುಲದಲ್ಲಿ ಇದ್ದಳು. ಮೊದಲು ದುರ್ಗಾದೇವಿಯರು ಗರ್ಭವನ್ನು ಅವಳಲ್ಲಿ

ಇಟ್ಟದ್ದು ಅವಳಿಗೆ ತಿಳಿಯಲಿಲ್ಲ. ದೇವಕಿಯ ಗರ್ಭವು ಸ್ರವಿಸಿಹೋಯಿತು. ಎಂದು ವರ್ತಮಾನವನ್ನು ಕೇಳಿ ದೇವಕಿಯನ್ನು ವಿಚಾರಿಸಲಿಕ್ಕೆ ಬಂದಿದ್ದಳು. ತರುವಾಯ ಅವಳಲ್ಲಿ ಗರ್ಭಚಿಹ್ನೆಯು ತಿಳಿಯಲು ಕಂಸನು ಅವಳನ್ನು ಪುನಃ ನಂದಗೋಕುಲಕ್ಕೆ ಕಳುಹಿಸುವವನಾದನು. ಶೇಷದೇವರು ಪೂರ್ವದಲ್ಲಿ ಲಕ್ಷ್ಮಣನಾಗಿ ರಾಮದೇವರ ಸೇವೆಯನ್ನು ಮಾಡಿ ಖಿನ್ನರಾಗಿ ಈಗ ಪರಮಾತ್ಮನಿಗೆ ಜ್ಯೇಷ್ಠನಾಗಿ ಹುಟ್ಟಿದರು. ರೋಹಿಣಿಯ ಉದರದಲ್ಲಿ ಏಳು ತಿಂಗಳು ಇದ್ದು ಆಮೇಲೆ ಹುಟ್ಟಿದರು. ವಸುದೇವದೇವಕಿಯರು ಶೇಷದೇವರನ್ನು ಮಗನನ್ನಾಗಿ ಪಡೆಯಬೇಕೆಂದು ತಪಸ್ಸನ್ನು ಮಾಡಿದರು. ಹಾಗೆಯೇ ರೋಹಿಣಿಯೂ ಪರಮಾತ್ಮನ ಆವೇಶವುಳ್ಳ ಬಲಿಷ್ಠನಾದ ಮಗನಾಗಬೇಕೆಂದು ತಪಸ್ಸನ್ನು ಮಾಡಿದ್ದಳು. ಆದುದರಿಂದ ಪರಮಾತ್ಮನ ಶುಕ್ಲಕೇಶ ಆವೇಶವುಳ್ಳವರಾಗಿ ಶೇಷದೇವರು ದೇವಕಿಗೂ ರೋಹಿಣಿಗೂ ಮಗನಾದರು.

ತರುವಾಯ ಭಕ್ತರಿಗೆ ಅಭಯವನ್ನು ಉಂಟುಮಾಡುವ ಶ್ರೀಭಗವಂತನು ಒಂದು ಅಂಶದಿಂದ ಪ್ರವೇಶಿಸಿದನು. ಅಂದರೆ ಲೋಕದಲ್ಲಿ ಜೀವರು ಹುಟ್ಟಲಿಕ್ಕಾಗಿ ಆಹಾರದೊಡನೆ ತಂದೆಯ ದೇಹವನ್ನು ಪ್ರವೇಶಿಸುವಂತೆ ಅಲ್ಲ. ಭೂತಗಳು ಒಬ್ಬರ ದೇಹವನ್ನು ಪ್ರವೇಶಿಸುವಂತೆ ಪ್ರವೇಶಿಸಿದನು. ಭಗವಂತನ ರೂಪವಿಶೇಷವನ್ನು ಧರಿಸಿದ ವಸುದೇವನು ಸೂರ್ಯನಂತೆ ಪ್ರಕಾಶಿಸುತ್ತಿದ್ದನು. ತೇಜಸ್ಸಿನಿಂದ ಅವನ ಹತ್ತಿರಕ್ಕೆ ಯಾರಿಗೂ ಹೋಗಲಿಕ್ಕೆ ಆಗುತ್ತಿದ್ದಿಲ್ಲ. ತರುವಾಯ ಋತುಕಾಲದಲ್ಲಿಯೇ ಶ್ರೀಭಗವಂತನು ರೂಪವಿಶೇಷದಿಂದ ವಸುದೇವನ ದೇಹದಿಂದ ಭೂತಗಳು ಪ್ರವೇಶಿಸುವಂತೆ ದೇವಕಿಯ ದೇಹವನ್ನು ಪ್ರವೇಶಿಸಿದನು. ಪೂರ್ವದಲ್ಲಿ ಕಂಸನ ಬಂಧನದಲ್ಲಿರುವಾಗ ಕಾಂತಿಹೀನಳಾಗಿದ್ದ ದೇವಕಿಯು, ಭಗವಂತನು ಪ್ರವೇಶಿಸಲು ಅತಿಪ್ರಕಾಶವನ್ನು ಹೊಂದಿದಳು. ತನ್ನ ದೇಹಕಾಂತಿಯಿಂದ ಮನೆಯನ್ನೇ ಪ್ರಕಾಶಗೊಳಿಸುತ್ತಿದ್ದ ದೇವಕೀದೇವಿಯನ್ನು ನೋಡಿ ನನ್ನ ಪ್ರಾಣವನ್ನು ಅಪಹರಿಸುವ ಹರಿಯು ಇವಳಲ್ಲಿ ವಾಸಮಾಡುತ್ತಿರುವನು. ಆದುದರಿಂದ ತೇಜಸುಳ್ಳವಳಾಗಿರು ವಳು. ಪೂರ್ವದಲ್ಲಿ ಇವಳಿಗೆ ಇಂತಹ ತೇಜಸ್ಸು ಇರಲಿಲ್ಲ. ನಾನೀಗ ಆ ಹರಿಗೆ ಏನು ಪ್ರತೀಕಾರಮಾಡಲಿ? ಇವಳನ್ನೇ ಕೊಂದುಬಿಡುವ ಎಂದರೆ ಹೆಂಗಸನ್ನು ಕೊಂದರೆ ಕೀರ್ತಿಯು ನಷ್ಟವಾಗುವುದು. ಅಪಕೀರ್ತಿಯು ಬರುವುದಲ್ಲಾ! ಅಪಕೀರ್ತಿಯು ಬಂದರೂ ಬರಲಿ ಎಂದು ಯೋಚಿಸಿ, ಸಂಹರಿಸುವ, ಎಂದರೆ ಇವಳು ತಂಗಿಯಾಗಿರುವಳಲ್ಲಾ! ತಂಗಿಯನ್ನು ಸಂಹರಿಸಿದರೆ ಸಂಪತ್ತೆಲ್ಲವೂ ಹೋಗುವುದು.

ಸಂಪತ್ತೆಲ್ಲವೂ ಹೋದರೂ ಹೋಗಲಿ ದರಿದ್ರನಾಗಿಯೇ ಜೀವಿಸುವ. ಇವಳನ್ನು ಕೊಂದು ಬಿಡುವ ಎಂದು ಯೋಚಿಸಿದರೆ ಇವಳು ಗರ್ಭಿಣಿಯಾಗಿರುವಳು. ಗರ್ಭಿಣಿಯನ್ನು ಸಂಹರಿಸಿದರೆ ಇದ್ದ ಆಯುಷ್ಯವೂ ಹೋಗುವುದು. ಅಂದರೆ ಸದ್ಯ ಸಾಯಬೇಕಾಗುವುದು' ಎಂದು ಯೋಚಿಸಿ ಅವಳನ್ನು ಸಂಹಾರ ಮಾಡದೆ ಬಿಟ್ಟನು. ಕೇವಲ ಕಾಲನೇಮಿಯೇ ಆಗಿದ್ದರೆ ಅಷ್ಟೆಲ್ಲಾ ಯೋಚನೆ ಮಾಡುತ್ತಿರಲಿಲ್ಲ. ಸಮಯದಲ್ಲಿ ಕಂಸನಲ್ಲಿ ಭೃಗುಗಳ ಆವೇಶವು ವಿಶೇಷವಾಗಿ ಇದ್ದಿದ್ದ ಕಾರಣ ಹಾಗೆ ಯೋಚಿಸಿ ದೇವಕಿಯನ್ನು ಕೊಲ್ಲದೆ ಬಿಟ್ಟನು. ಕಂಸನು ಯಾವಾಗ ಭಗವಂತನು ಅವತರಿಸುವನು ಎಂದು ಭಯದಿಂದ ವೈರದಿಂದ ಶ್ರೀಭಗವಂತನನ್ನು ಸ್ಮರಿಸುತ್ತಿದ್ದನು. ಕೂತುಕೊಳ್ಳುವಾಗ, ನಿಲ್ಲುವಾಗ, ಊಟಮಾಡುವಾಗ, ನೀರು ಕುಡಿಯುವಾಗ, ನಡೆಯುವಾಗ, ಸರ್ವಕಾಲದಲ್ಲಿ ಭಗವಂತನನ್ನೇ ಸ್ಮರಿಸುತ್ತಿದ್ದನು. ಎಲ್ಲಿ ನೋಡಿದರೂ ಭಗವಂತನು ತೋರುವಂತೆ ಇತ್ತು.

ತರುವಾಯ ಬ್ರಹ್ಮದೇವರೂ ರುದ್ರದೇವರೂ ನಾರದಾದಿ ಮುನಿಗಳಿಂದಲೂ ಸಪರಿವಾರರಾದ ದೇವತೆಗಳಿಂದಲೂ ಸಹಿತರಾಗಿ ಬಂದು ಗರ್ಭದಲ್ಲಿ ಇದ್ದ ಶ್ರೀಭಗವಂತನನ್ನು ಸ್ತುತಿಸಿದರು. ''ಶ್ರೀಭಗವಂತನೇ! ಪೂರ್ಣಾನಂದಜ್ಞಾನವೇ ಸ್ವರೂಪವಾಗಿರುವ ಕಾರಣವೂ ಸತ್ಯವನ್ನೇ ಹೇಳುವ ನಿಯಮವಿರುವ ಕಾರಣವೂ ಸತ್ಯವ್ರತ ಎಂದು ಹೇಳಿಸಿಕೊಳ್ಳುವ, ಸತ್ ಎಂದು ಹೆಸರುಳ್ಳ ಪೃಥಿವೀ ಅಪ್ ತೇಜಸ್ಸುಗಳಿಂದಲೂ, ತ್ಯ ಎಂದು ಹೆಸರುಳ್ಳ ವಾಯು, ಆಕಾಶಗಳಿಂದಲೂ ವಿಲಕ್ಷಣನಾದ ಕಾರಣವೂ ಸತ್ಯವೆಂದು ಹೆಸರುಳ್ಳ, ಧರ್ಮವನ್ನು ರಕ್ಷಿಸುವ ಕಾರಣವೂ ಸತ್ಯಪರ ಎಂದು ಹೆಸರುಳ್ಳ ಮತ್ತು ನಾಶರಹಿತನಾದ ಕಾರಣದಿಂದಲೂ ಸತ್ಯಪರನೆಂದು ಹೆಸರುಳ್ಳ ಮೂರು ವೇದಗಳ ಮುಖ್ಯಾರ್ಥನಾದ ಕಾರಣವೂ, ಮೂರುಲೋಕಗಳು ನಾಶವನ್ನು ಹೊಂದಿದಾಗಲೂ, ನಾಶರಹಿತನಾದ ಕಾರಣವೂ ತ್ರಿಸತ್ಯ ಎಂದು ಹೆಸರುಳ್ಳ, ಯಥಾರ್ಥವಾದ ಪ್ರಪಂಚಕ್ಕೆ ಮೂಲಕಾರಣನಾದ ಪ್ರಯುಕ್ತವೂ, ಸತ್ಯಸ್ಯಯೋನಿ ಎಂದು ಹೆಸರುಳ್ಳ, ಯಥಾರ್ಥವಾದ ಪ್ರಪಂಚದಲ್ಲಿ ನಿಯಾಮಕನಾಗಿ ಇರುವ ಕಾರಣವು ಸತ್ಯ ಎಂದು ಹೆಸರುಳ್ಳ ಮುಖ್ಯಪ್ರಾಣದೇವರಲ್ಲಿ ಇರುವ ಕಾರಣವೂ ಸತ್ಯೇ ನಿಹಿತಂ ಎಂದು ಹೇಳಲ್ಪಡುವ, ಯಥಾರ್ಥವಾದ ಪ್ರಪಂಚಕ್ಕೆ ಪ್ರಕಾಶಕನಾದ ಕಾರಣವೂ ಸತ್ಯಸ್ಯ ಸತ್ಯ ಎಂದು ಹೆಸರುಳ್ಳ, ಯಥಾರ್ಥವಾದ ಪ್ರಪಂಚಕ್ಕೆ ನಿಯಾಮಕನಾದ ಕಾರಣವೂ ಸತ್ಯ ಎಂದು ಹೆಸರುಳ್ಳ, ದೇವತೆಗಳು ಶಿಷ್ಯರಿಗೆ ಉಪದೇಶಕರಾಗಿ ಇರುವ ಕಾರಣವೂ ಸತ್ಯನೇತ್ರ ಎಂದು

ಹೆಸರುಳ್ಳ, ಯಥಾರ್ಥವಾದ ಪ್ರಪಂಚವನ್ನು ಸಂಹಾರಮಾಡುವ ಕಾರಣವೂ ಯಥಾರ್ಥವಾದ ಆತ್ಮನ ಸುಖಕ್ಕೆ ಕಾರಣನಾದ ಕಾರಣವೂ, ಸತ್ಯಾತ್ಮಕ ಎಂದು ಹೆಸರುಳ್ಳ ನಿನ್ನನ್ನು ಮರೆಹೊಂದುವೆವು. ಒಂದಾದ ಚೇತನಪ್ರಕೃತಿಯು ಅಥವಾ ಅಚೇತನ ಪ್ರಕೃತಿಯು ಆಶ್ರಯವಾಗಿ ಉಳ್ಳ ಎರಡಾದ ಪ್ರವೃತ್ತಧರ್ಮ ನಿವೃತ್ತಧರ್ಮಗಳೆಂಬ ಅಥವಾ ಪುಣ್ಯಪಾಪಗಳೆಂಬ ಫಲಗಳುಳ್ಳ, ಮೂರಾದ ಸತ್ವ ರಜಃ ತಮಸ್ಸುಗಳೆಂಬ ಅಥವಾ ಜಾಗ್ರತ್ ಸ್ವಪ್ನ ಸುಷುಪ್ತಿಗಳೆಂಬ ಮೂರು ಅವಸ್ಥೆಗಳೆಂಬ ಅಥವಾ ಮೂರು ವ್ಯಾಹೃತಗಳೆಂಬ ಮೂರುವೇದಗಳೆಂಬ ಬೇರುಗಳುಳ್ಳ, ಧರ್ಮ ಅರ್ಥ ಕಾಮ ಮೋಕ್ಷಗಳೆಂಬ ಅಥವಾ ಸ್ವರ್ಗ, ಮೋಕ್ಷ, ನರಕ, ತಮಸ್ಸು ಎಂಬ ನಾಲ್ಕು ರಸಗಳುಳ್ಳ, ಶಬ್ದ ರೂಪ ರಸ ಗಂಧ ಸ್ಪರ್ಶಗಳೆಂಬ ಅಥವಾ ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ ಎಂಬ ಐದು ಜಟೆಗಳುಳ್ಳ (ಆಲದ ಮರದ ಕೊಂಬೆಯಿಂದ ಕೆಳಗೆ ಜೋಲುವ ಬೇರಿಗೆ ಜಟೆಯೆಂದು ಹೆಸರು) ಇರುವುದು, ಹುಟ್ಟುವುದು, ವಿಕಾರವನ್ನು ಹೊಂದುವುದು, ಬೆಳೆಯುವುದು, ಕ್ಷಯವನ್ನು ಹೊಂದುವುದು, ನಾಶವನ್ನು ಹೊಂದುವುದು ಎಂಬ ಆರು ವಿಕಾರಗಳನ್ನು ಹೊಂದುವ ಅಥವಾ ಹಸಿವೆ ದಾಹ ಶೋಕ ಮೋಹ ಜರಾ ಮೃತ್ಯುಗಳೆಂಬ ಆರು ಸ್ವಾಭಾವಿಕ ಧರ್ಮಗಳುಳ್ಳ ತ್ವಕ್, ಚರ್ಮ, ಮಾಂಸ, ರಕ್ತ, ಮೇದಸ್ಸು, ಮಜ್ಜಾ ಎಲುಬು ಎಂಬ ಅಥವಾ ಏಳು ಛಂದಸ್ಸುಗಳೆಂಬ ತೊಗಲುಗಳುಳ್ಳ, ದೇವ, ಗಂಧರ್ವ, ದಾನವ, ರಾಕ್ಷಸ, ಪಿಶಾಚ, ತಿರ್ಯಕ್, ಮನುಷ್ಯ, ಸ್ಥಾವರ ಎಂಬ ಅಥವಾ ಪಂಚಭೂತಗಳೂ ಮನಸ್ಸು, ಬುದ್ಧಿ, ಅಹಂಕಾರವೆಂದು ಹೆಸರುಳ್ಳ ಎಂಟು ಕೊಂಬೆಗಳುಳ್ಳ ಒಂಬತ್ತು ಇಂದ್ರಿಯಗೋಲಕಗಳೆಂಬ ಅಥವಾ ಹದಿನೆಂಟು ಭಾಷೆಗಳೆಂಬ ಪೊಂದುಗಳುಳ್ಳ, ಹತ್ತು ಇಂದ್ರಿಯಗಳೆಂಬ ಅಥವಾ ಹತ್ತು ಇಂದ್ರಿಯ ವಿಷಯಗಳೆಂಬ ಎಲೆಗಳುಳ್ಳ, ಪ್ರವೃತ್ತಿ ಮಾರ್ಗದಲ್ಲಿ ಇರುವವರು, ನಿವೃತ್ತಿ ಮಾರ್ಗದಲ್ಲಿ ಇರುವವರು, ಎಂಬ ಇಬ್ಬರು ಪಕ್ಷಿಗಳುಳ್ಳ ಈ ಜಗತ್ತು ಎಂಬ ವೃಕ್ಷವು ಯಾರಲ್ಲಿ ಆಶ್ರಯಿಸಿ ಇರುವುದೋ ಅಂತಹ ನಿನ್ನನ್ನು ಮರೆಹೊಂದುವೆವು! ಇತ್ಯಾದಿ ರೀತಿಯಿಂದ ಸ್ತೋತ್ರಮಾಡಿ ದೇವಕೀದೇವಿಯೊಡನೆಯೂ 'ಶ್ರೀಭಗವಂತನು ನಿನ್ನಲ್ಲಿ ಅವತರಿಸುವನು. ಕಂಸನಿಂದ ಭಯಪಡುವುದು ಬೇಡ' ಎಂದು ಹೇಳಿ ಹೊರಟುಹೋದರು.

ತರುವಾಯ ಶುಭದಿವಸದಲ್ಲಿ, ಶುಭಮುಹೂರ್ತದಲ್ಲಿ, ಮಧ್ಯರಾತ್ರಿ ಸಮಯದಲ್ಲಿ, ದೇವಕೀದೇವಿಯಲ್ಲಿ ಶ್ರೀಭಗವಂತನು ಅವತರಿಸಿದನು. ಶ್ರೀಭಗವಂತನು

ದೇವಕಿಯ ಉದರದಲ್ಲಿ ಏಳೂವರೆ ತಿಂಗಳು ವಾಸಮಾಡಿ ಅವತರಿಸಿದನು. ಪೂರ್ವದಲ್ಲಿ ನೃಸಿಂಹರೂಪದಿಂದ ಕಂಬದಿಂದ ಹೇಗೆ ಅವತರಿಸಿದನೋ ಅದೇ ರೀತಿಯಿಂದ ಕೃಷ್ಣಪರಮಾತ್ಮನು ದೇವಕಿಯ ಉದರದಿಂದ ಆವಿರ್ಭೂತನಾದನು. ಅಸುರರನ್ನು ಮೋಹಗೊಳಿಸುವುದಕ್ಕಾಗಿ ಪರಮಾತ್ಮನು ತಂದೆತಾಯಿಗಳಿಂದ ಹುಟ್ಟುವಂತೆ ತೋರಿಸುವನು. ಆದರಿಂದ ಅವನ ದೇಹವು ಸ್ತ್ರೀಪುರುಷ ಸಂಪಂಧದಿಂದ ಹುಟ್ಟಿದ್ದು ಅಲ್ಲವೆಂದು ತೋರಿಸುವುದಕ್ಕಾಗಿ ಶಂಖ ಚಕ್ರಾದಿಗಳನ್ನು ಧರಿಸಿಕೊಂಡು ಅವತರಿಸಿದನು.

ವಸುದೇವನು ತಾವರೆಹೂವಿನಂತೆ ಕಣ್ಣುಗಳುಳ್ಳ, ನಾಲ್ಕು ಕೈಗಳುಳ್ಳ, ಶಂಖಗಂಧಾದಿ ಆಯುಧಗಳುಳ್ಳ, ಶ್ರೀವತ್ಸಚಿಹ್ನೆಯುಳ್ಳ, ಕುತ್ತಿಗೆಯಲ್ಲಿ ಶೋಭಿಸುವ ಕೌಸ್ತುಭಮಣಿಯುಳ್ಳ, ಪೀತಾಂಬರವನ್ನು ಧರಿಸಿರುವ ಮೇಘದಂತೆ ಕಾಂತಿಯುಳ್ಳ, ಮಹಾಬೆಲೆಬಾಳುವ ವೈಡೂರ್ಯ ಮಣಿಗಳಿಂದ ಖಚಿತಗಳಾದ ಕಿರೀಟ ಕುಂಡಲಗಳ ಕಾಂತಿಯಿಂದ ಕೂಡಿದ ಅನೇಕ ಕೂದಲುಗಳುಳ್ಳ, ಉತ್ಕೃಷ್ಟಗಳಾದ ಕಾಂಚೀ, ಅಂಗದ, ಕಂಕಣ ಇತ್ಯಾದಿಗಳಿಂದ ಪ್ರಕಾಶಮಾನನಾದ ಅದ್ಭುತ ಬಾಲಕರೂಪವುಳ್ಳ ಭಗವಂತನನ್ನು ನೋಡಿದನು. ವಸುದೇವನು ಆಶ್ಚರ್ಯದಿಂದ ಅರಳಿದ ಕಣ್ಣುಳ್ಳುವನಾಗಿ ಪರಮಾತ್ಮನನ್ನು ನೋಡಿ ಕೃಷ್ಣಾವತಾರದ ಸಂತೋಷದಿಂದ ಬ್ರಾಹ್ಮಣರಿಗೆ ಹತ್ತುಸಾವಿರ ಗೋದಾನಗಳನ್ನು ಮಾಡುವೆನೆಂದು ಮನಸ್ಸಿನಿಂದಲೇ ಸಂಕಲ್ಪಿಸಿದನು. ತರುವಾಯ ಬ್ರಹ್ಮಾದಿ ದೇವತೆಗಳು ಸ್ತೋತ್ರಮಾಡಿದ ಅನಂತರ ವಸುದೇವನೂ ದೇವಕಿಯೂ ಭಗವಂತ ನನ್ನು ಸ್ತೋತ್ರ ಮಾಡಿದರು. ಶ್ರೀಭಗವಂತನು ದೇವಕಿಯೊಡನೆ 'ಪೂರ್ವದಲ್ಲಿ ಸ್ವಾಯಂಭುವ ಮನ್ವಂತರದಲ್ಲಿ ಪೃಶ್ನಿ ಎಂದು ಹೆಸರುಳ್ಳವಳಾಗಿದ್ದಿ. ಆಗ ಈ ವಸುದೇವನು ಸುತಪ ಎಂದು ಹೆಸರುಳ್ಳ ಪ್ರಜೇಶ್ವರನಾಗಿದ್ದನು. ನೀವಿಬ್ಬರು ಪ್ರಜಾಸೃಷ್ಟಿಮಾಡಬೇಕೆಂದು ಬ್ರಹ್ಮದೇವರಿಂದ ಆಜ್ಞಪ್ತರಾಗಿ ಇಂದ್ರಿಯ ನಿಗ್ರಹವನ್ನು ಮಾಡಿ ಛಳಿ, ಮಳೆ, ಬಿಸಿಲುಗಳನ್ನು ಸಹಿಸಿಕೊಂಡು ತಪಸ್ಸನ್ನು ಮಾಡಿದಿರಿ. ದಿವ್ಯ ಹನ್ನೆರಡು ಸಾವಿರ ವರ್ಷ ತಪಸ್ಸನ್ನು ಮಾಡಿದಿರಿ. ಆಗ ನಾನು ನಿಮಗೆ ಸಂತುಷ್ಟನಾಗಿ ಇದೇ ರೂಪದಿಂದ ಪ್ರತ್ಯಕ್ಷನಾದೆನು. ವರವನ್ನು ಕೇಳಿಕೊಳ್ಳಿರಿ ಎಂದು ಹೇಳಲು 'ನಿನ್ನಂತೆಯೇ ಇರುವ ಮಗನು ಬೇಕು' ಎಂದು ಕೇಳಿಕೊಂಡಿರಿ. ನನ್ನಂತೆ ಇರುವ ಇನ್ನೊಬ್ಬರು ಇಲ್ಲದ ಕಾರಣ ನಾನೇ ಪೃಶ್ನಿಗರ್ಭ ಎಂದು ಹೆಸರುಳ್ಳವನಾಗಿ ನಿಮ್ಮ ಮಗನಾಗಿ ಅವತರಿಸಿದೆನು. ನೀವು ಅದಿತಿ ಕಶ್ಯಪರಾಗಿರುವಾಗ ಉಪೇಂದ್ರನೆಂದೂ ವಾಮನನೆಂದೂ ಹೆಸರುಳ್ಳವನಾಗಿ

ಅವತರಿಸಿದೆನು. ಮೂರನೆಯದಾಗಿ ಈ ರೂಪದಿಂದ ಅವತರಿಸಿರುವೆನು. ನೀವು ನನ್ನನ್ನು ಮಗನೆಂಬ ಭಾವನೆಯಿಂದಲೂ ಪರಬ್ರಹ್ಮ ಎಂಬ ಭಾವನೆಯಿಂದಲೂ ಭಕ್ತಿಯಿಂದ ಧ್ಯಾನಮಾಡುವವರಾಗಿ ನನ್ನ ಲೋಕವನ್ನು ಹೊಂದುವಿರಿ' ಎಂದು ಹೇಳಿ ತಂದೆತಾಯಿಗಳು ನೋಡುತ್ತಿರುವಂತೆ ಶಿಶುರೂಪವನ್ನು ಧರಿಸಿದನು. ನನ್ನನ್ನು ನಂದಗೋಕುಲಕ್ಕೆ ಕರೆದುಕೊಂಡು ಹೋಗು'ಎಂದು ಹೇಳಿ ಎರಡು ಕೈಗಳುಳ್ಳ ಮಗುವಿನ ರೂಪವನ್ನು ಧರಿಸಿದನು.



## ಭಗವಂತನ ಗೋಕುಲಕ್ಕೆ ಗಮನವು [1]

ತೆರುವಾಯ ಭಗವಂತನಿಂದ ಪ್ರೇರಿತನಾದ ವಸುದೇವನು ಶಿಶುರೂಪಿಯಾದ ಭಗವಂತನನ್ನು ಹಿಡಿದುಕೊಂಡು ಕೂಸನ್ನು ಹಡೆದ ಮನೆಯಿಂದ ಹೊರಗೆ ಬರಬೇಕೆಂದು ಬಂದಾಗ ಬೀಗಹಾಕಿ ಮುಚ್ಚಿದ್ದ ಬಾಗಿಲುಗಳೆಲ್ಲವೂ ತಾವಾಗಿಯೇ ತೆರೆದುಕೊಂಡವು. ದುರ್ಗಾದೇವಿಯಿಂದ ಮೋಹಿತರಾಗಿ ಎಲ್ಲಾ ದ್ವಾರಪಾಲಕರೂ ಊರಿನ ಜನರೂ ಗಾಢನಿದ್ರೆಯ ವಶರಾದರು. ಹೊರಗೆ ವಸುದೇವನು ಬರುತ್ತಿರಲು ಮಳೆಯು ಬರುತ್ತಿತ್ತು. ಆಗ ಶೇಷದೇವರು ಭಗವಂತನ ಮೇಲೆ ಮಳೆಯ ನೀರು ಬೀಳದಂತೆ ಹೆಡೆಯನ್ನು ಹಿಡಿಯುತ್ತಾ ಬಂದರು. ಮಳೆಯು ಬರುತ್ತಿರಲು ಯಮುನಾನದಿಯಲ್ಲಿ ಮಹಾಪ್ರವಾಹವು ತುಂಬಿತ್ತು. ಭಯಂಕರ ಸುಳಿಗಳಿದ್ದವು. ವಸುದೇವನು ಕೃಷ್ಣಪರಮಾತ್ಮನನ್ನು ಹೊತ್ತುಕೊಂಡು ಬರಲು ಯಮುನೆಯು ವಸುದೇವನು ನಡೆದುಕೊಂಡು ಹೋಗಲಿಕ್ಕೆ ಒಂಟಿಹೆಜ್ಜೆ ದಾರಿಯನ್ನು ಬಿಟ್ಟುಕೊಟ್ಟಿತು. ವಸುದೇವನು ಯಮುನೆಯನ್ನು ದಾಟಿಹೋದನು. ಆ ಸಮಯದಲ್ಲಿ ನಂದಗೋಪನು ಕಂಸನಿಗೆ ಕಪ್ಪವನ್ನು ಕೊಡುವುದಕ್ಕಾಗಿ ಬೃಹದ್ವನದಿಂದ ಹೊರಟು ಬಂದಿದ್ದನು. ಅವನ ಒಟ್ಟಿಗೆ ಯಶೋದೆಯೂ ಇತರ ಗೋಪರೂ ಬಂದಿದ್ದರು. ಯಮುನೆಯ ತೀರಕ್ಕೆ ಬಂದಿರಲು ಗರ್ಭಿಣಿಯಾದ ಯಶೋದೆಯು ಡೇರೆಯಲ್ಲಿ (ವಸ್ತ್ರಗೃಹದಲ್ಲಿ) ಯಮುನಾತೀರದಲ್ಲಿಯೇ ದಾರಿಯಲ್ಲಿ ಹೆಣ್ಣುಕೂಸನ್ನು (ದುರ್ಗಾದೇವಿಯರನ್ನುঃ ಹಡೆದಿದ್ದಳು. ಅಲ್ಲಿಗೆ ವಸುದೋವನು ಹೋದನು. ಆಗ ಎಲ್ಲರೂ ಅಲ್ಲಿ ನಿದ್ರಾವಶರಾಗಿದ್ದರು. ವಸುದೇವನು ಕೃಷ್ಣಪರಮಾತ್ಮನನ್ನು ಯಶೋದೆಯ ಹಾಸಿಗೆಯಲ್ಲಿ ಇಟ್ಟು ಹೆಣ್ಣು ಶಿಶುವನನು ಹಿಡಿದುಕೊಂಡು ಪುನಃ

1. ಭಾ. X-4 ಮತ್ತು ಮ.ತಾ.ನಿ. ಅ–12

ಮನೆಗೆ ಬಂದು ಸೇರಿದನು. ಹೆಣ್ಣುಮಗುವನ್ನು ದೇವಕಿಯ ಹಾಸಿಗೆಯಲ್ಲಿ ಇಟ್ಟು ಪೂರ್ವದಂತೆ ಕಾಲಿನಿಂದ ಸಂಕೋಲೆ ಬಂಧನವುಳ್ಳವನಾಗಿದ್ದನು. ವಸುದೇವನು ಒಳಗೆ ಬಂದಮೇಲೆ ಬಾಗಿಲುಗಳೆಲ್ಲವೂ ಪೂರ್ವದಂತೆಯೇ ಮುಚ್ಚಿಕೊಂಡವು.

ತರುವಾಯ ಬಂದ ಹೆಣ್ಣುಮಗುವು ಅಳಲಿಕ್ಕೆ ಆರಂಭಿಸಿತು. ಮಗುವು ಅಳುವ ಧ್ವನಿಯನ್ನು ಕೇಳಿ ನಿದ್ದೆ ಮಾಡುತ್ತಿದ್ದ ದ್ವಾರಪಾಲಕರು ಎಚ್ಚತ್ತರು. ಅವರು ಬೇಗನೇ ಕಂಸನಿದ್ದಲ್ಲಿಗೆ ಓಡಿದರು. ಕಂಸನು ಯಾವಾಗ ದೇವಕಿಯು ಹಡೆಯುವಳು ಎಂದು ನಿರೀಕ್ಷಿಸುತ್ತಿದ್ದನು. ದ್ವಾರಪಾಲಕರು ಅವನೊಡನೆ ದೇವಕಿಯು ಇದೇ ಸಮಯ ವೆಂದು ಹೇಳುತ್ತಾ ಪರವಶನಾಗಿ ತಲೆಕೂದಲು ಬಿಚ್ಚಿಹೋಗುತ್ತಿರಲು ಹಾಗೆಯೇ ಎಡವುತ್ತಾ ದೇವಕಿಯು ಹಡೆದ ಮನೆಗೆ ಓಡಿದನು.

ಆಗ ದೇವಕಿಯು ಅಣ್ಣನಾದ ಕಂಸನೊಡನೆ ಕರುಣೆಯು ಬರುವಂತೆ 'ಸಹೋದರನೇ! ಇವಳು ನನ್ನ ಸೊಸೆಯು. ಈ ಹೆಣ್ಣನ್ನು ಸಂಹರಿಸಬಾರದು. ಬೆಂಕಿ ಯಂತೆ ಪ್ರಕಾಶಿಸುವ ಅನೇಕ ಮಕ್ಕಳು ದೈವೇಚ್ಛೆಯಿಂದ ಪ್ರೇರಿತನಾದ ನಿನ್ನಿಂದ ಸಂಹಾರ ಮಾಡಲ್ಪಟ್ಟರು. ಇವಳೊಬ್ಬಳು ಮಗಳನ್ನು ಬಿಟ್ಟುಬಿಡು. ನಾನು ನಿನ್ನ ತಂಗಿ ಯಷ್ಟೆ. ದೀನಳಾಗಿರುವೆನು. ಮಕ್ಕಳೆಲ್ಲರನ್ನು ಕಳೆದುಕೊಂಡಿರುವೆನು. ಅಣ್ಣ! ಈ ಕೊನೆಯ ಮಗನನ್ನು ಬಿಟ್ಟುಬಿಡು' ಎಂದು ಹೇಳಿ ಮಗಳನ್ನು ಗಟ್ಟಿಯಾಗಿ ಕಟ್ಟಿಕೊಂಡು ಅಳುತ್ತಾ ಬೇಡಿಕೊಂಡಳು. ಆಗ ದುಷ್ಟನಾದ ಕಂಸನು ಅವಳನ್ನೇ ಬೆದರಿಸುತ್ತಾ ಮಗುವನ್ನು ಸೆಳೆದುಕೊಂಡನು. ಆಗಲೇ ಹುಟ್ಟಿರುವ ತಂಗಿಯ ಮಗಳಾದ ಆ ಮಗು ವಿನ ಕಾಲನ್ನು ಹಿಡಿದು ಕಲ್ಲಿನ ಮೇಲೆ ಅಪ್ಪಳಿಸಿದನು. ಆಗ ಕೂಸಿನ ರೂಪದಿಂದ ಇದ್ದ ದುರ್ಗಾದೇವಿಯರು ಕಂಸನ ಕೈಯಿಂದ ತಪ್ಪಿಸಿಕೊಂಡು ಮೇಲೆ ಹೋದವರಾಗಿ ಆಯುಧಸಹಿತಗಳಾದ ಎಂಟುಕೈಗಳುಳ್ಳವರಾಗಿ ದಿವ್ಯವಾದ ಸೀರೆಯನ್ನು ಉಟ್ಟು ಕೊಂಡು ಗಂಧವನ್ನು ಹಚ್ಚಿಕೊಂಡು ಪುಷ್ಪವನ್ನು ಧರಿಸಿಕೊಂಡು ರತ್ನಾಭರಣಗಳಿಂದ ಅಲಂಕರಿಸಿಕೊಂಡು ಧನುಃ, ಶೂಲ, ಬಾಣ, ಚರ್ಮ, ಖಡ್ಗ, ಶಂಖ, ಚಕ್ರ, ಗದೆಗಳನ್ನು ಧರಿಸಿಕೊಂಡು ಸಿದ್ಧಚಾರಣ ಗಂಧರ್ವ ಅಪ್ಸರ ಸ್ತ್ರೀಯರು ಕಿನ್ನರ ಉರಗ ಇವರಿಂದ ಸ್ತೋತ್ರಮಾಡಲ್ಪಡುತ್ತಾ ಕಾಣಿಸಿಕೊಂಡರು. 'ಮಡ್ಡನೇ! ನನ್ನನ್ನು ಕೊಂದು ಏನು ಪ್ರಯೋಜನ? ನಿನ್ನನ್ನು ಕೊಲ್ಲುವ ಪೂರ್ವಶತ್ರುವು ಎಲ್ಲಿಯೋ ಹುಟ್ಟಿರುವನು' ಎಂದು ಹೇಳಿ ಅನೇಕ ಸ್ಥಳಗಳಲ್ಲಿ ಅನೇಕ ರೂಪಗಳಿಂದ ಇದ್ದರು. ಮತ್ತು ಬಾಲರೂಪದಿಂದಲೇ ದೇವಕಿಯ ಹಾಸಿಗೆಯಲ್ಲಿ ಮಲಗಿದರು. ತಂದೆತಾಯಿಗಳನ್ನು ಹೊರತು ಮತ್ತೆ ಯಾರೂ ಗುಣಾಢ್ಯರಾದ ದುರ್ಗಾದೇವಿಯರನ್ನು ತಿಳಿಯಲಿಲ್ಲ.

ಕಂಸನು ದುರ್ಗಾದೇವಿಯರು ಹೇಳಿದ ಮಾತನ್ನು ಕೇಳಿ ಅತ್ಯಂತ ಆಶ್ಚರ್ಯವುಳ್ಳವನಾಗಿ ದೇವಕೀವಸುದೇವರನ್ನು ಬಿಡಿಸಿ ವಿಶ್ವಾಸದಿಂದ 'ತಂಗಿಯೇ! ಭಾವನೇ! ಪಾಪಿಯಾದ ನಾನು ರಾಕ್ಷಸರಂತೆ ನಿನ್ನ ಮಕ್ಕಳನ್ನು ಕೊಂದುಹಾಕಿದೆನು. ಕರುಣಾಹೀನನಾದ ಜ್ಞಾತಿಗಳನ್ನು ಮಿತ್ರರನ್ನು ಬಿಟ್ಟ ದುಷ್ಟನಾದ ನಾನು ಬ್ರಹ್ಮಹತ್ಯೆ ಯನ್ನು ಮಾಡಿದವನಂತೆ ಜೀವನ್ಮೃತನಾಗಿ ಯಾವಲೋಕವನ್ನು ಹೊಂದುವೆನೋ! ಮನುಷ್ಯರು ಮಾತ್ರವಲ್ಲ, ದೇವತೆಗಳೂ ಸುಳ್ಳು ಹೇಳುವರು. ನಾನು ದೇವತೆಗಳು ಹೇಳಿದ ಅಶರೀರವಾಣಿ ಯಲ್ಲಿ ನಂಬಿಕೆಯುಳ್ಳವನಾಗಿ ತಂಗಿಯ ಮಕ್ಕಳನ್ನು ಕೊಂದು ಹಾಕಿದೆನು. ಆದರೂ ನೀವು ಮೃತರಾದ ಮಕ್ಕಳನ್ನು ಕುರಿತು ದುಃಖಪಡಬೇಡಿರಿ. ಅವರವರು ಅವರವರ ಕರ್ಮಾನುಸಾರವಾಗಿ ಭಗವದಧೀನರಾಗಿ ಇರುವರು. ತಂಗಿ! ನಾನು ನಿನ್ನ ಮಕ್ಕಳನ್ನು ಕೊಂದರೂ ಅವರು ತಮ್ಮತಮ್ಮ ಕರ್ಮಾನುಸಾರವಾಗಿ ಮೃತರಾದರು ಎಂದು ತಿಳಿದುಕೊಂಡು ದುಃಖಪಡಬೇಡಿರಿ. ಬಂಧುಗಳಲ್ಲಿ ಸ್ನೇಹ ವುಳ್ಳವರಾದ ನೀವು ನನ್ನ ದುಷ್ಟತನವನ್ನು ಕ್ಷಮಿಸಿರಿ' ಎಂದು ಹೇಳಿ ವಸುದೇವ ದೇವಕಿಯರ ಕಾಲನ್ನು ಹಿಡಿದನು. ದೇವಕಿಯು ಅಣ್ಣನ ಮಾತನ್ನು ಕೇಳಿ ಕ್ಷಮಿಸುವವ ಳಾಗಿ ರೋಷವನ್ನು ಬಿಟ್ಟಳು. ವಸುದೇವನೂ ಕ್ಷಮಿಸುತ್ತಾ ನಗುವವನಾಗಿ ಸುಖದುಃಖ ಗಳಿಗೆ ಮುಖ್ಯವಾಗಿ ಭಗವಂತನೇ ಕಾರಣನೆಂದು ಹೇಳಿದನು. ತರುವಾಯ ಕಂಸನು ಅವರಿಬ್ಬರಿಂದ ಅನುಜ್ಞೆಯನ್ನು ಪಡೆದು ಮನೆಯ ಒಳಗೆ ಹೋದನು.

ಆ ರಾತ್ರಿಯು ಕಳೆಯಲು ಕಂಸನು ಮಂತ್ರಿಗಳನ್ನು ಕರೆದು ದುರ್ಗಾದೇವಿಯು ಹೇಳಿದ ಮಾತುಗಳನ್ನೆಲ್ಲಾ ಹೇಳಿದನು. ಅದನ್ನು ಕೇಳಿ ಮಂತ್ರಿಗಳಾದ ಅಸುರರು ದೇವತೆಗಳ ಮೇಲೆ ಕೋಪಿಸಿಕೊಳ್ಳುವವರಾಗಿ 'ಹಾಗಾದರೆ ಊರಿನಲ್ಲಿ ಇರುವ ಹತ್ತುದಿನಗಳ ಒಳಗಿನ ಆಮೇಲಿನ ಮಕ್ಕಳುಗಳೆಲ್ಲರನ್ನೂ ಕೊಂದು ಹಾಕುವ. ಯುದ್ಧದಲ್ಲಿ ಅಂಜಿಕೊಳ್ಳುವ ದೇವತೆಗಳು ಏನು ಮಾಡುವರು? ಯಾವಾಗಲೂ ನಿನ್ನ ಧನುಸ್ಸಿನ ಶಬ್ದವನ್ನು ಕೇಳಿದರೇ ಭಯಪಡುವರು. ನೀನು ಬಾಣಗಳನ್ನು ಬಿಡಲಿಕ್ಕೆ ಆರಂಭಿಸಿದರೆ ಬದುಕುವ ಆಸೆಯಿಂದ ಯುದ್ಧರಂಗವನ್ನೇ ಬಿಟ್ಟು ಓಡಿಹೋಗುವರು. ಕೆಲವರು ಆಯುಧಗಳನ್ನು ಕೆಳಗಿಟ್ಟು ಕೈಮುಗಿಯುವರು. ತಲೆಬಿಚ್ಚಿಕೊಂಡು ನಾವು ಭಯವುಳ್ಳವರಾಗಿರುವೆವು ಎಂದು ಹೇಳುವರು. ನೀನಾದರೂ ಶಸ್ತ್ರಾಸ್ತ್ರಗಳನ್ನು ಮರೆತುಬಿಟ್ಟವರನ್ನು, ರಥರಹಿತರನ್ನು, ಭಯಗ್ರಸ್ತರನ್ನು, ಅನ್ಯತ್ರ ಮನಸ್ಸುಳ್ಳವರನ್ನು, ಧನುಸ್ಸು ಮುರಿದುಹೋದವರನ್ನು, ಯುದ್ಧಮಾಡದೆ ಇದ್ದವರನ್ನು ಸಂಹಾರಮಾಡುವುದಿಲ್ಲ. ಕ್ಷೇಮಸಮಯದಲ್ಲಿ ಶೂರರಾದ, ಯುದ್ಧವಿಲ್ಲದ

ಸಮಯದಲ್ಲಿ ಹೊಗಳಿಕೊಳ್ಳುವ ದೇವತೆಗಳಿಂದ ಏನು ಆಗುವುದು. ಏಕಾಂತದಲ್ಲಿ ಹರಿಯಿಂದ ಏನಾಗುವುದು? ಕಾಡಿನಲ್ಲಿ ಇರುವ ಶಂಭುವಿನಿಂದ ಏನಾಗುವುದು? ಅಲ್ಪವೀರ್ಯವುಳ್ಳ ಇಂದ್ರನಿಂದ ಏನಾಗುವುದು? ತಪಸ್ಸು ಮಾಡುವ ಬ್ರಹ್ಮನಿಂದ ಏನಾಗುವುದು? ಆದರೂ ದೇವತೆಗಳು ನಮ್ಮ ಶತ್ರುಗಳಾದ ಕಾರಣ ನಾವು ಅವರನ್ನು ಸುಮ್ಮನೆ ಬಿಡಬಾರದು. ಆದುದರಿಂದ ಅವರ ಮೂಲವನ್ನೇ ನಾಶಮಾಡಲು ನಮಗೆ ಆಜ್ಞಾಪಿಸು. ದೇವತೆಗಳಿಗೆಲ್ಲಾ ವಿಷ್ಣುವು ಮೂಲನು. ಆ ವಿಷ್ಣುವಿಗೆ ವೇದಗಳೂ, ಗೋವುಗಳೂ, ಬ್ರಾಹ್ಮಣರೂ, ತಪಸ್ಸೂ, ಯಜ್ಞಗಳೂ, ದಕ್ಷಿಣೆಗಳೂ ಬಲಕ್ಕೆ ಕಾರಣರು. ಆದುದರಿಂದ ಸರ್ವಪ್ರಕಾರದಿಂದ ವೇದವನ್ನು ಓದಿರುವ, ತಪಸ್ಸು ಮಾಡುವ, ಯಜ್ಞಮಾಡುವ, ಬ್ರಾಹ್ಮಣರನ್ನು ಯಜ್ಞಕ್ಕೆ ಬೇಕಾದ ಹಾಲು ಇತ್ಯಾದಿಗಳಿಗೆ ಕಾರಣಗಳಾದ ಗೋವುಗಳನ್ನು ಸಂಹರಿಸುವ. ಬ್ರಾಹ್ಮಣರೂ, ಗೋವುಗಳೂ, ದೇವತೆಗಳೂ, ತಪಸ್ಸೂ, ಸತ್ರವೂ, ಇಂದ್ರಿಯನಿಗ್ರಹವೂ, ಪರಮಾತ್ಮನಲ್ಲಿ ಭಕ್ತಿಯೂ, ಆಸ್ತಿಕ್ಯಬುದ್ಧಿಯೂ, ದಯೆಯೂ, ಕ್ಷಮಾಗುಣವೂ ಭಗವಂತನ ಪ್ರತಿಮೆಗಳು ಆ ಭಗವಂತನು ಎಲ್ಲಾ ದೇವತೆಗಳಿಗೂ ಆಶ್ರಯನು. ಅಸುರರಿಗೆ ದ್ವೇಷಿಯು. ಬ್ರಹ್ಮರುದ್ರಾದಿ ದೇವತೆಗಳು ಆ ಭಗವಂತನನ್ನು ಆಶ್ರಯಿಸಿರುವರು. ಋಷಿಗಳಿಗೆ ಹಿಂಸೆಯನ್ನು ಉಂಟುಮಾಡುವುದೇ ಆ ಭಗವಂತನನ್ನು ಕೊಲ್ಲುವ ಉಪಾಯವು' ಎಂದು ದುರಾಲೋಚನೆಯನ್ನು ಹೇಳಿದರು.

ದುರ್ಬುದ್ಧಿಯುಳ್ಳ ಕಂಸನು ಅವರೊಡನೆ ಈರೀತಿಯಾಗಿ ಯೋಚನೆಯನ್ನು ಮಾಡಿ ಸಾವು ಸಮೀಪಿಸಿದ ಕಾರಣ ಬ್ರಾಹ್ಮಣರನ್ನು ಹಿಂಸಿಸುವುದು ತನಗೆ ಹಿತಕರವೆಂದು ತಿಳಿದನು. ಜನರನ್ನು ಹಿಂಸಿಸಲಿಕ್ಕೆ ಇಚ್ಛಾನುಸಾರ ರೂಪಧರಿಸುವ ಅಸುರರಿಗೆ ಆಜ್ಞೆಯನ್ನು ಮಾಡಿ ಮನೆಯಳಗೆ ಹೋದನು. ರಾಜಸ, ತಾಮಸ ಸ್ವಭಾವವುಳ್ಳವರಾದ ಆ ಅಸುರರು ಮರಣವು ಸಮೀಪಿಸಿದ ಕಾರಣ ಸಜ್ಜನರಲ್ಲಿ ದ್ವೇಷಮಾಡಿದರು. ಏಕೆಂದರೆ ಸಜ್ಜನರಲ್ಲಿ ದ್ವೇಷವು ಆಯುಷ್ಯವನ್ನು, ಸಂಪತ್ತನ್ನು, ಕೀರ್ತಿಯನ್ನು, ಧರ್ಮವನ್ನು, ಸ್ವರ್ಗಾದಿಲೋಕಗಳನ್ನು, ಇತರ ಅಭೀಷ್ಟಗಳನ್ನು ಎಲ್ಲಾ ಶ್ರೇಯಸ್ಸುಗಳನ್ನು ನಾಶಮಾಡುವುದು.



# ನಂದವಸುದೇವರ ಸಂಗಮ [1]

ಗೋಕುಲದಲ್ಲಿ ಇತ್ತ ಬೆಳಗಾಗಲು ನಂದಗೋಪನು ತನಗೆ ಪುತ್ರೋತ್ಸವ ವಾಯಿತೆಂದು ಸಂತೋಷದಿಂದ ಜ್ಯೋತಿಷವನ್ನು ತಿಳಿದ ಬ್ರಾಹ್ಮಣರನ್ನು ಕೂಡಿ ತಾನು ಸ್ನಾನಮಾಡಿ ಶುಚಿಯಾಗಿ ಅಲಂಕಾರಮಾಡಿಕೊಂಡು ಪುಣ್ಯಾಹವಾಚನವನ್ನು ಮಾಡಿಸಿ ವಿಧಿಪ್ರಕಾರವಾಗಿ ಜಾತಕರ್ಮವನ್ನು ಮಾಡಿಸಿದನು. ಬ್ರಾಹ್ಮಣರಿಗೆ ಎರಡು ಲಕ್ಷ ಗೋವುಗಳನ್ನು ದಾನಮಾಡಿದನು. ಎಳ್ಳುಗಳ ರಾಶಿಗಳನ್ನು ಏಳುರತ್ನಗಳ ಸಮೂಹಗಳನ್ನು ಬಂಗಾರ ಕೊಡಗಳನ್ನು ದಾನ ಮಾಡಿದನು. ಬ್ರಾಹ್ಮಣರು ಮಂಗಲವಚನವನ್ನು ಹೇಳಿದರು. ಸ್ತೋತ್ರಪಾಠಕರು ಸ್ತೋತ್ರಮಾಡಿದರು. ಹಾಡುಹೇಳುವವರು ಹಾಡನ್ನು ಹೇಳಿದರು. ದುಂದುಭಿವಾದ್ಯ ವನ್ನು ಬಾರಿಸಿದರು. ಗೋಕುಲದ ಜನರೆಲ್ಲರೂ ಮನೆಗಳನ್ನೆಲ್ಲಾ ಅಲಂಕರಿಸಿದರು. ದನಗಳನ್ನು ಎತ್ತುಗಳನ್ನು ಕರುಗಳನ್ನೂ ಅರಿಷಿಣ ಎಣ್ಣೆಯಿಂದ ಹಚ್ಚಿ ಹೂವಿನಮಾಲೆ ಇತ್ಯಾದಿಗಳಿಂದ ಅಂಗಿಯನ್ನು ಧರಿಸಿಕೊಂಡು ಬಂದರು. ಗೋಪಸ್ತ್ರೀಯರೂ ಯಶೋದೆಗೆ ಮಗು ಹುಟ್ಟಿದ ವರ್ತಮಾನವನ್ನು ಕೇಳಿ ಅಲಂಕಾರ ಮಾಡಿಕೊಂಡು ಯಶೋದೆಯ ಮನೆಗೆ ಹೋದರು. 'ನಮ್ಮನ್ನೆಲ್ಲರನ್ನು ಬಹುಕಾಲ ರಕ್ಷಿಸುತ್ತಿರು' ಎಂದು ಆಶೀರ್ವಾದ ಮಾಡುವವರಾಗಿ ಅರಸಿನಪುಡಿ ಎಣ್ಣೆ ನೀರುಗಳನ್ನು ಹಚ್ಚಿ ಭಗವಂತನನ್ನು ಸ್ತುತಿಸಿದರು. ಆ ಮಹೋತ್ಸವದಲ್ಲಿ ವಿಚಿತ್ರ ವಾದ್ಯಗಳನ್ನು ಬಾರಿಸಿದರು. ಗೋಪಾಲರು ಸಂತೋಷವುಳ್ಳವರಾಗಿ ಒಬ್ಬರಿಗೊಬ್ಬರು ಹಾಲು ಮೊಸರು ಬೆಣ್ಣೆ ತುಪ್ಪಗಳನ್ನು ಎರಚಿಕೊಂಡು ಆಟವಾಡಿದರು. ನಂದಗೋಪನು ಅವರಿಗೆ ವಸ್ತ್ರ ಅಲಂಕಾರ ಗೋವುಗಳಿಂದ ಸತ್ಕರಿಸಿದನು. ಅದೇರೀತಿಯಾಗಿ ಸ್ತೋತ್ರಪಾಠಕರಿಗೂ ಇತರರಿಗೂ ಸತ್ಕರಿಸಿದನು. ಭಗವಂತನಿಗೆ ಪ್ರೀತಿಯಾಗಲಿ ಎಂದೂ ಮಗನಿಗೆ ಅಭ್ಯುದಯವು ಏರ್ಪಡಲಿ ಎಂದು ಎಲ್ಲರಿಗೂ ಯಥೋಚಿತ ವಾಗಿ ಪೂಜಿಸಿದನು. ರೋಹಿಣಿಯೂ ನಂದಗೋಪನಿಂದ ಅಭಿನಂದಿಸಲ್ಪಟ್ಟವಳಾಗಿ ವಸ್ತ್ರಾಭರಣಗಳಿಂದ ಅಲಂಕೃತಳಾಗಿ ಸಂಚರಿಸುತ್ತಿದ್ದಳು. ತರುವಾಯ ಆ ಗೋಕುಲವು ಭಗವಂತನ ಸನ್ನಿಧಾನದಿಂದ ಲಕ್ಷ್ಮೀವಿಹಾರಸ್ಥಾನವಾಯಿತು.

ತರುವಾಯ ನಂದಗೋಪನು ಗೋಪಾಲರನ್ನು ಗೋಕುಲವನ್ನು ನೋಡಿಕೊಳ್ಳಲಿಕ್ಕೆ ಇಟ್ಟು ಕಂಸನಿಗೆ ವರ್ಷವೂ ಕೊಡುವ ಕಪ್ಪವನ್ನು ಕೊಡುವುದಕ್ಕಾಗಿ

1. ಭಾ. X-6 ಮತ್ತು ಮ.ತಾ.ನಿ. ಅ–12

ಮಧುರಾಪಟ್ಟಣಕ್ಕೆ ಹೋದನು. ವಸುದೇವನು ತನ್ನ ತಮ್ಮನಾದ ನಂದಗೋಪನು ಬಂದಿರುವುದನ್ನು ಕೇಳಿ ರಾಜನಾದ ಕಂಸನಿಗೆ ಕಪ್ಪವನ್ನು ಕೊಟ್ಟಮೇಲೆ ಹೋಗಿ ಅವನನ್ನು ನೋಡಿದನು. ನಂದಗೋಪನು ವಸುದೇವನು ಬಂದುದನ್ನು ನೋಡಿ ಬೇಗನೇ ಎದ್ದು ಆಲಿಂಗನ ಮಾಡಿಕೊಂಡನು. ವಸುದೇವನು ನಂದಗೋಪನಿಂದ ಸತ್ಕೃತನಾಗಿ ಸುಖವಾಗಿ ಕೂತುಕೊಂಡು ಕುಶಲಪ್ರಶ್ನೆಯನ್ನು ಮಾಡಿ ತನ್ನ ಮಕ್ಕಳ ವಿಷಯವಾಗಿ ಯೋಚಿಸಿ ಕುಶಲಪ್ರಶ್ನೆಯನ್ನು ಮಾಡಿ ಮಕ್ಕಳ ಕ್ಷೇಮವನ್ನು ವಿಚಾರಿಸಿದನು. ನಂದಗೋಪನು 'ನಿನ್ನ ದೇವಕಿಯ ಮಕ್ಕಳು ಅನೇಕರು ಕಂಸನಿಂದ ಮೃತರಾದರು. ಹೆಣ್ಣುಮಗಳೊಬ್ಬಳು ಉಳಿದಳು. ಅವಳೂ ಆಕಾಶಕ್ಕೆ ಹಾರಿಹೋದಳು' ಎಂದು ಹೇಳಿದನು. ವಸುದೇವನು 'ನಂದಗೋಪ! ವರ್ಷವೂ ರಾಜನಿಗೆ ಕೊಡುವ ಕಪ್ಪವನ್ನು ಕೊಟ್ಟಾಯಿತು. ನಮ್ಮನ್ನು ನೋಡಿಯೂ ಆಯಿತು. ನೀನು ಇನ್ನು ಇಲ್ಲಿ ಇರಬಾರದು. ಗೋಕುಲದಲ್ಲಿ ದುರ್ನಿಮಿತ್ತಗಳು ಆಗುವುವು' ಎಂದು ಹೇಳಿದನು. ಅದನ್ನು ಕೇಳಿ ನಂದಗೋಪನು ತನ್ನ ಒಟ್ಟಿಗೆ ಬಂದ ಗೋಪಾಲರೊಡನೆ ವಸುದೇವನ ಅನುಜ್ಞೆಯನ್ನು ಪಡೆದು ಗೋಕುಲಕ್ಕೆ ಹೋದನು.



## ಪೂತನಾಸಂಹಾರವು [1]

ನಂದಗೋಪನು ಹೋಗುತ್ತಿರುವಾಗ ದಾರಿಯಲ್ಲಿ ವಸುದೇವನ ಮಾತು ಸುಳ್ಳಲ್ಲವೆಂದು ಯೋಚಿಸುತ್ತಾ ನಂದಗೋಕುಲದಲ್ಲಿ ಉತ್ಪಾತಗಳು ಉಂಟಾಗ ಬಹುದೆಂದು ಯೋಚಿಸುತ್ತಾ ಪರಮಾತ್ಮನನ್ನು ಮರೆಹೊಂದಿದನು. ಗೋಕುಲದಲ್ಲಿ ಕಂಸನಿಂದ ಕಳುಹಿಸಲ್ಪಟ್ಟ ಕ್ರೂರಳಾದ ಪೂತನೆ ಎಂಬ ರಾಕ್ಷಸಿಯು ಮಕ್ಕಳನ್ನು ಸಂಹರಿಸುತ್ತಾ ಸಂಚರಿಸುತ್ತಾ ಹೋದಳು. ಅವಳು ಮಾಯೆಯಿಂದ ತನ್ನ ಭಯಂಕರವಾದ ರೂಪವನ್ನು ಮರೆಮಾಡಿಕೊಂಡು ಸುಂದರವಾದ ರೂಪವನ್ನು ಧರಿಸಿಕೊಂಡು ಗೋಕುಲವನ್ನು ಪ್ರವೇಶಿಸಿದಳು. ಅವಳು ನಂದಗೋಪನ ಮನೆಗೆ ಬಂದು ಬೂದಿಮುಚ್ಚಿದ ಕೆಂಡದಂತೆ ತನ್ನ ತೇಜಸ್ಸನ್ನು ಮರೆಮಾಡಿಕೊಂಡಿರುವ ಬಾಲಕನಾದ ಕೃಷ್ಣನನ್ನು ಎತ್ತಿಕೊಂಡಳು. ಶ್ರೀಭಗವಂತನು ಅವಳು ಬಾಲಕರನ್ನು ಕೊಲ್ಲುವ ಪಿಶಾಚವೆಂದು ತಿಳಿದವನಾಗಿ ಬಾಲಭಾವವನ್ನು ನಟಿಸುತ್ತಾ ಸುಮ್ಮನೆ

1. ಭಾ. X-7 ಮತ್ತು ಮ.ತಾ.ನಿ. ಅ–12

ಇದ್ದನು. ಪೂತನೆಯು ಸಮಸ್ತ ಜಗತ್ತಿನ ವ್ಯಾಪಾರವನ್ನು ತಿಳಿದ ಶ್ರೀಕೃಷ್ಣನನ್ನು ಶ್ರೀಭಗವಂತನೆಂಬುದನ್ನು ತಿಳಿಯದೆ ಇರುವವಳಾಗಿ ಮಲಗಿರುವ ಹಾವನ್ನು ಹೂವಿನ ಮಾಲೆಯೆಂದು ಭ್ರಮಿಸಿ ಎತ್ತಿಕೊಳ್ಳುವಂತೆ ಶ್ರೀಕೃಷ್ಣನನ್ನು ತೊಡೆಯಲ್ಲಿ ಮಲಗಿಸಿಕೊಂಡಳು.

ಆ ಸಮಯದಲ್ಲಿ 'ಯಶೋದೆಯು ಅವಳ ಮಾಯೆಯಿಂದ ನಿದ್ರಾಪರವಶಳಾದ ಕಾರಣವೂ, ಅವಳು ಪರಮಸುಂದರಿಯಾಗಿ ಕಾಣುತ್ತಿದ್ದ ಪ್ರಯುಕ್ತವೂ, ಪೂತನೆಯೊಡನೆ ಮಗುವನ್ನು ಎತ್ತಬೇಡವೆಂದು ನಿಷೇಧಿಸದೆ ಸುಮ್ಮನೆ ನೋಡುತ್ತಾ ಇದ್ದಳು. ಪೂತನೆಯು ಕೃಷ್ಣನನ್ನು ತೊಡೆಯಲ್ಲಿ ಮಲಗಿಸಿಕೊಂಡು ವಿಷದಿಂದ ಕೂಡಿದ ತನ್ನ ಸ್ತನವನ್ನು ಕೊಟ್ಟಳು. ಆಗ ಕೃಷ್ಣನು ಎರಡು ಕೈಗಳಿಂದ ಗಟ್ಟಿಯಾಗಿ ಸ್ತನಗಳನ್ನು ಹಿಡಿದುಕೊಂಡು ರೋಷದಿಂದ ಪ್ರಾಣಸಹಿತವಾಗಿ ಸ್ತನವನ್ನು ಪಾನಮಾಡಿದನು. ಆಗ ಅವಳು ಅತ್ಯಂತ ಪೀಡಿತಳಾಗಿ ಬಿಡು ಬಿಡು ಎಂದು ಕೂಗುವವಳಾಗಿ ಕಣ್ಣುಗಳನ್ನು ಚೆನ್ನಾಗಿ ತೆರೆದು ಕೈಗಳನ್ನು ಕಾಲುಗಳನ್ನು ಹಾರಿಸುತ್ತಾ ಮೈಯೆಲ್ಲಾ ಬೆವರುಳ್ಳವಳಾಗಿ ಹೋ ಎಂದು ಗಟ್ಟಿಯಾಗಿ ಅಳುವವಳಾದಳು. ಗಂಭೀರವಾದ ಅವಳ ಅಳುವ ಧ್ವನಿಯಿಂದ ಭೂಮಿಯೂ ಸ್ವರ್ಗವೂ ನಡುಗಿಹೋಯಿತು. ದಿಕ್ಕುಗಳಲ್ಲೆಲ್ಲಾ ಪ್ರತಿಧ್ವನಿಯುಂಟಾಯಿತು. ಜನರೆಲ್ಲರೂ ಪಿಡುಗುಬಿದ್ದಿತೆಂದು ಭಯದಿಂದ ಕೆಳಗೆ ಬಿದ್ದರು. ಈರೀತಿಯಾಗಿ ಆ ರಾಕ್ಷಸಿಯು ವ್ಯಥೆಯುಳ್ಳವಳಾಗಿ ತಲೆಕೂದಲನ್ನು ಕೈಕಾಲುಗಳನ್ನು ವಿಸ್ತರಿಸಿ ಭಯಂಕರವಾದ ತನ್ನ ನಿಜರೂಪವನ್ನು ಧರಿಸಿ ಇಂದ್ರದೇವರಿಂದ ಸತ್ತುಬಿದ್ದ ವೃತ್ರಾಸುರನಂತೆ ಸತ್ತುಬಿದ್ದಳು. ಆ ದೇಹವು ಕೆಳಗೆ ಬೀಳುವಾಗ ಹನ್ನೆರಡು ಮೈಲು ದೂರದಲ್ಲಿರುವ ಮರಗಳೆಲ್ಲವೂ ಮುರಿದುಹೋದವು. ಅಂದರೆ ಆ ದೇಹವು ಅಷ್ಟು ದೊಡ್ಡದಾಗಿತ್ತು. ಅದು ನೋಡುವವರಿಗೆ ಅತ್ಯದ್ಭುತವಾಗಿ ಕಂಡಿತು. ರಥದ ಮರದಂತೆ ಅವಳ ಕೋರೆಹಲ್ಲುಗಳಿದ್ದವು. ಮೂಗಿನ ದ್ವಾರಗಳು ಪರ್ವತಗಳ ಗುಹೆಗಳಂತೆ ಇದ್ದವು. ಎರಡು ಸ್ತನಗಳು ದೊಡ್ಡ ಬಂಡೆಕಲ್ಲುಗಳಂತೆ ಇದ್ದವು. ಕೆಂಪಾದ ಕೂದಲುಗಳು ಹಾರುತ್ತಾ ಇದ್ದವು. ಹಾಳುಭಾವಿಯಂತೆ ಆಳವಾದ ಕಣ್ಣುಗಳಿದ್ದವು. ದೊಡ್ಡ ಉಸುಬಿನ ತೀರದಂತೆ ಕಟಿಪ್ರದೇಶವಿದ್ದಿತು. ಸೇತುವಿನಂತೆ ಕೈಗಳಿದ್ದವು. ನೀರಿಲ್ಲದ ದೊಡ್ಡ ಮಡುವಿನಂತೆ ಹೊಟ್ಟೆಯಿದ್ದಿತು. ಈಪ್ರಕಾರವಾಗಿ ಭಯಂಕರವಾಗಿದ್ದ ಆ ದೇಹವನ್ನು ನೋಡಿ ಗೋಪಾಲರೂ ಗೋಪಿಕಾಸ್ತ್ರೀಯರೂ ಅತ್ಯಂತಭಯವನ್ನು ಹೊಂದಿದರು. ಮೊದಲೇ ಅವಳು ಕೂಗಿದ ಶಬ್ದದಿಂದ ಅವರಿಗೆ ಎದೆ ಕಿವಿ ತಲೆಗಳು

ಒಡೆದುಹೋದಂತೆ ಆಗಿದ್ದವು. ಅವಳ ಎದೆಯಲ್ಲಿ ಆಡುತ್ತಿದ್ದ ಭಯರಹಿತವಾದ ಮಗುವನ್ನು ನೋಡ ಗೋಪಸ್ತ್ರೀಯರು ಬೇಗನೇ ಓಡಿಬಂದು ಎತ್ತಿಕೊಂಡರು.

ತರುವಾಯ ಗೋಪಸ್ತ್ರೀಯರು ಯಶೋದಾರೋಹಿಣಿಯರಿಂದ ಸಹಿತರಾಗಿ ಮಗುವಿಗೆ ಗೋವಿನ ಬಾಲವನ್ನು ಸುತ್ತು ಹಾಕಿ ರಕ್ಷೆಯನ್ನು ಮಾಡಿದರು. ಗೋಮೂತ್ರದಿಂದ ಸ್ನಾನಮಾಡಿಸಿ ಗೋವುಗಳ ಧೂಳಿನಿಂದಲೂ ಸೆಗಣಿಯಿಂದಲೂ ರಕ್ಷೆಯನ್ನು ಮಾಡಿದರು. ಗೋಪಸ್ತ್ರೀಯರು ಆಚಮನ ಮಾಡುವವರಾಗಿ ಭಗವದ್ರೂಪಗಳನ್ನು ಸ್ಮರಿಸಿ ಒಂದೊಂದು ರೂಪವು ಒಂದೊಂದು ಅಂಗವನ್ನು ರಕ್ಷಿಸಲಿ ಎಂದು ಪ್ರಾರ್ಥಿಸಿದರು. [1]ಈರೀತಿಯಾಗಿ ಪ್ರೀತಿಯುಳ್ಳವರಾಗಿ ಗೋಪಸ್ತ್ರೀಯರು ರಕ್ಷೆಯನ್ನು ಮಾಡಲು ತಾಯಿಯಾದ ಯಶೋದೆಯು ಮಗುವಿಗೆ ಸ್ತನ್ಯಪಾನ ಮಾಡಿಸಿ ನಿದ್ದೆ ಮಾಡಿಸಿದಳು. ಅಷ್ಟರಲ್ಲಿ ನಂದಗೋಪನೇ ಮೊದಲಾದ ಗೋಪಾಲರು ಮಧುರಾಪಟ್ಟಣದಿಂದ ಗೋಕುಲಕ್ಕೆ ಬಂದವರಾಗಿ ಪೂತನೆಯ ದೇಹವನ್ನು ನೋಡಿ ಅತ್ಯಂತ ಆಶ್ಚರ್ಯವನ್ನು ಹೊಂದಿದರು. 'ವಸುದೇವನು ತ್ರಿಕಾಲವನ್ನು ತಿಳಿದ ಋಷಿಯಾಗಿರಬೇಕು. ಅವನು ಹೇಳಿದಂತೆಯೇ ಇಲ್ಲಿ ಉತ್ಪಾತವು ನಡೆದಿರುವುದು' ಎಂದು ಹೇಳಿಕೊಂಡರು.

ಗೋಪಾಲರು ಅಷ್ಟು ದೊಡ್ಡ ದೇಹವನ್ನು ಕೊಡಲಿಯಿಂದ ಕಡಿದು ತುಂಡುತುಂಡು ಮಾಡಿ ಬೇರೆಬೇರೆ ತುಂಡನ್ನು ದೂರಕ್ಕೆ ಹಾಕಿ ಕಟ್ಟಿಗೆರಾಶಿಯನ್ನು ಹಾಕಿ ಸುಟ್ಟರು. ದೇಹವನ್ನು ಸುಡುತ್ತಿರುವಾಗ ಆ ದೇಹದಿಂದ ಅಗುರು ಗಂಧದಂತೆ ಸುವಾಸನೆಯುಳ್ಳ ಹೊಗೆಯು ಬರುತ್ತಿತ್ತು. ಲೋಕದ ಬಾಲಕರನ್ನು ಸಂಹರಿಸುತ್ತಿದ್ದ ರಕ್ತಪಾನ ಮಾಡುತ್ತಿದ್ದ ಆ ಪೂತನಾರಾಕ್ಷಸಿಯು ಸಂಹಾರ ಮಾಡುವ ಇಚ್ಛೆಯಿಂದ ಕೃಷ್ಣನಿಗೆ ವಿಷಭರಿತವಾದ ಸ್ತನವನ್ನು ಕೊಟ್ಟಳು. ಅವಳಲ್ಲಿ ತಾಟಕಾ ಊರ್ವಶೀ ಎಂಬ ಇಬ್ಬರು ಜೀವರು ಇದ್ದರು. ಊರ್ವಶಿಯು ತುಂಬುರು ಎಂಬ ಗಂಧರ್ವನ ಸಂಗವನ್ನು ಮಾಡಿದಳೆಂದು ಕುಬೇರನು ಅವಳಿಗೆ ರಾಕ್ಷಸದೇಹದಲ್ಲಿ ಪ್ರವೇಶಿಸುವಂತೆ ಶಾಪವನ್ನು ಕೊಟ್ಟಿದ್ದನು. ಅದರಿಂದ ಅವಳು ಪೂತನಾದೇಹದಲ್ಲಿ ಇದ್ದಳು. ಕೃಷ್ಣಪರಮಾತ್ಮನ ದ್ವೇಷದಿಂದ ತಾಟಕೆಯು ಅಂಧಂತಮಸ್ಸಿಗೆ ಹೋದಳು. ಕೃಷ್ಣ ಪರಮಾತ್ಮನು ಸ್ತನ್ಯಪಾನ ಮಾಡಿದುದರಿಂದ ಉಂಟಾದ ಪುಣ್ಯದಿಂದ ಊರ್ವಶಿಯು ಸ್ವರ್ಗಕ್ಕೆ ಹೋದಳು. ರಾಕ್ಷಸಿಯ ಸಹವಾಸವಿದ್ದ ಆ ಊರ್ವಶಿಗೆ ಸದ್ಗತಿಯಾಗಿರಲು ರಾಕ್ಷಸರ ಸಹವಾಸವಿಲ್ಲದ ಸಜ್ಜೀವರಿಗೆ ಉತ್ತಮಗತಿಯಾಗುವುದೆಂದು ಏನು

1. ಭಾ. X-7

ಹೇಳಬೇಕಾಗಿದೆ? ಶ್ರೀಭಗವಂತನು ಯಾವ ಯಶೋದೆಯ ಮತ್ತು ಗೋಪಿಕೆಯರ ಸ್ನೇಹದಿಂದ ಸುರಿದ ಹಾಲನ್ನು ಪಾನಮಾಡಿದನೋ ಅಂತಹ ಮಗನೆಂದು ಭಾವನಾ ಮಾಡುತ್ತಿದ್ದ ಅವರಿಗೆ ಅಜ್ಞಾನದಿಂದ ಉಂಟಾಗುವ ಸಂಸಾರವೇ ಉಂಟಾಗಲಾರದು. ಹೆಣವು ಸುಡಲ್ಪಡುತ್ತಿರುವಾಗ ಉಂಟಾದ ಹೊಗೆಯ ಸುವಾಸನೆಯನ್ನು ಮೂಸಿ ನೋಡಿ 'ಏನಿದು? ಎಲ್ಲಿಂದ ಬಂತು?' ಎಂದು ಹೇಳುತ್ತಾ ಗೋಪಾಲರು ಗೋಕುಲಕ್ಕೆ ಬಂದರು. ಅವರು ಅಲ್ಲಿಗೆ ಪೂತನೆಯು ಬಂದ ವಿಷಯವನ್ನು ಅವಳ ಮರಣವನ್ನು ಮಗುವಿನ ಕ್ಷೇಮವನ್ನು ಕೇಳಿ ಅತಿ ಆಶ್ಚರ್ಯವನ್ನು ಹೊಂದಿದರು. ನಂದಗೋಪನು ಮಧುರೆಯಿಂದ ಬಂದವನು ಮಗುವನ್ನು ಎತ್ತಿ ಶಿರಸ್ಸಿನಲ್ಲಿ ಮೂಸಿನೋಡಿ ಸಂತೋಷಪಟ್ಟನು.



## ಪೂತನಾರಾಕ್ಷಸಿಗೆ ಮೋಕ್ಷವಾಯಿತೇ? [1]

ಪೂತನಾ ಎಂಬ ರಾಕ್ಷಸಿಗೆ ಮೋಕ್ಷವಾಯಿತೇ ಎಂದು ಕೇಳಿದರೆ ಸಾಮಾನ್ಯವಾಗಿ ಭಾಗವತವಾಕ್ಯವನ್ನು ನೋಡಿದವರು ಅವಳಿಗೆ ಮೋಕ್ಷವಾಯಿತು ಎನ್ನುವರು. ಆದರೆ ಶ್ರೀಮದಾಚಾರ್ಯರು ತೋರಿಸಿದ ಮಾರ್ಗದಿಂದ ಪ್ರಮಾಣಗಳನ್ನು ವಿಚಾರಿಸಿದರೆ ಪೂತನೆಯೆಂಬ ರಾಕ್ಷಸಿಗೆ ಮೋಕ್ಷವಾಗಿಲ್ಲವೆಂದೇ ನಿರ್ಧಾರವಾಗುವುದು. ಭಾಗವತದಲ್ಲಿ ನೋಡುವಾಗ ಪೂತನೆಗೆ ಮೋಕ್ಷವಾಯಿತೆಂದು ಹೇಳಿರುತ್ತದೆ. [2]**ಪೂತನಾ ಲೋಕಬಾಲಘ್ನೀ ರಾಕ್ಷಸೀ ರುಧಿರಾಶನಾ । ಜಘಾಂಸಯಾऽಪಿ ಹರಯೇ ಸ್ತನಂ ದತ್ತ್ವಾऽಪ ಸದ್ಗತಿಮ್ । ಯಾತುಧಾನ್ಯಪಿ ಸಾ ಸ್ವರ್ಗಮವಾಪ ಜನನೀಗತಿಮ್ । ಕೃಷ್ಣಭುಕ್ತಸ್ತನಕ್ಷೀರಾಃ ಕಿಮು ಗಾವೋ ನು ಮಾತರಃ ॥** ಇದರಿಂದ ದ್ವೇಷ ಮಾಡಿದರೂ ಪೂತನೆಗೆ ಮೋಕ್ಷವಾಯಿತೆಂದು ತೋರುತ್ತದೆ. ಆದರೆ ಅದು ಸರಿಯಾದ ವಿಷಯವಲ್ಲ.

ಏಕೆಂದರೆ ಪೂತನೆಗೆ ದ್ವೇಷಮಾಡಿದ ಕಾರಣದಿಂದ ಮೋಕ್ಷವಾಗುವುದಾದರೆ ದ್ವೇಷಮಾಡಿದ ಎಲ್ಲರಿಗೂ ಮೋಕ್ಷವಾಗಬೇಕಾದೀತು. ಹಾಗಿದ್ದರೆ ತೃಣಾವರ್ತ ಅರಿಷ್ಟಾಸುರ ಇತ್ಯಾದಿ ಅಸುರರ ಸಂಹಾರದ ಸಮಯದಲ್ಲಿಯೂ ಭಾಗವತದಲ್ಲಿ ಅವರಿಗೂ ಮೋಕ್ಷವಾಯಿತೆಂದು ಹೇಳಬೇಕಿತ್ತು. ಹಾಗೆ ಹೇಳದೆ ಪೂತನಾ

1. ಭಾ.ತಾ. X-5-1 ಮ.ತಾ.ನಿ. ಅ–12 2. ಭಾ. X-7 ಮತ್ತು ರು.ವಿ.ಸ.–2

ಮೊದಲಾದ ಕೆಲವರಿಗೆ ಮಾತ್ರ ಮೋಕ್ಷವನ್ನು ಹೇಳಿರುವರು. ಅದೇನೆಂದರೆ ಪೂತನಾದಿಗಳಿಗೆ ಆ ಅಸುರರಿಂದ ವಿಶೇಷವಿದೆ ಯೆಂದು ತಿಳಿಯುವುದು. ಅದೇನೆಂದರೆ ಪೂತನಾದಿಗಳ ದೇಹದಲ್ಲಿ ಉತ್ತಮಜೀವರೂ ಅಧಮಜೀವರು ಎಂದು ಎರಡು ಜೀವರು ಇರುವರು. ಅದರಲ್ಲಿ ಉತ್ತಮಜೀವರಿಗೆ ಮೋಕ್ಷವಾಯಿತೆಂದು ಅರ್ಥವು. ಅಧಮಜೀವರಾದ ರಾಕ್ಷಸರಿಗೆ ಮೋಕ್ಷವಲ್ಲ. ತೃಣಾವರ್ತ ಮೊದಲಾದ ಅಸುರರ ದೇಹದಲ್ಲಿ ರಾಕ್ಷಸರು ಮಾತ್ರವಿರುವುದರಿಂದ ಅವರಿಗೆ ಮೋಕ್ಷವನ್ನು ಹೇಳಿಲ್ಲ. ಏವಂಚ ಪೂತನಾ ದೇಹದಲ್ಲಿ ತಾಟಕಾ ಎಂಬ ರಾಕ್ಷಸಿಯೂ ಉರ್ವಶಿಯೆಂಬ ದೇವತಾಸ್ತ್ರೀಯೂ ಇದ್ದಳು. ಅವಳಲ್ಲಿ ತಾಟಕೆಗೆ ತಮಸ್ಸೇ ಆಯಿತು. ಊರ್ವಶಿಗೆ ಮಾತ್ರ ಸದ್ಗತಿಯಾಯಿತೆಂದು ತಿಳಿಯಬೇಕು. ಭಗವಂತನು ದ್ವೇಷಮಾಡಿದವರಿಗೂ ಮೋಕ್ಷವನ್ನು ಕೊಡುವವನಾದರೆ ಅನುಗ್ರಹವನ್ನು ಮಾಡುವವನಾದರೆ ಅವನು ಭೂಮಿಯಲ್ಲಿ ಅವತರಿಸಿ ಅಸುರರನ್ನು ಜಯಿಸಿ ಅವರ ಸಂಪತ್ತನ್ನು ಭಕ್ತರಿಗೆ ಯಾಕೆ ಕೊಡುವನು? ಭಾಗವತದಲ್ಲಿ ಅನೇಕ ಸ್ಥಳಗಳಲ್ಲಿ ಭಗವಂತನನ್ನು ದ್ವೇಷಮಾಡುವವರಿಗೆ ಅಂಧಂತಮಸ್ಸನ್ನೇ ಹೇಳಿರುವರು. ದ್ವೇಷಮೂಲ ಸ್ಮರಣೆಯಿಂದ ದೇವರು ಸಂತುಷ್ಟನಾಗಿ ಮೋಕ್ಷವನ್ನು ಕೊಡಬಹುದು. ಭಗವಂತನಲ್ಲಿ ದ್ವೇಷವೆಂದರೆ ಅವನಲ್ಲಿ ದೋಷಗಳನ್ನು ತಿಳಿದುಕೊಂಡು ಆಗುವ ಮನೋ ವ್ಯಾಪಾರವು. ಭಗವಂತನ ಸ್ಮರಣೆಯನ್ನು ಮಾಡದೆ ಅವನನ್ನು ದ್ವೇಷಿಸಲಿಕ್ಕೆ ಆಗುವುದಿಲ್ಲ. ಆದುದರಿಂದ ಆ ಸ್ಮರಣೆಯಿಂದ ಭಗವಂತನು ಸಂತೋಷ ಪಡಬಹುದು ಎನ್ನುವುದೂ ಸರಿಯಾಗಲಾರದು. ಯಾಕೆಂದರೆ ಲೋಕದಲ್ಲಿ ಒಬ್ಬರನ್ನು ಆಲಿಂಗನ ಮಾಡುವುದು ಅವರಿಗೆ ಸುಖಕ್ಕೆ ಕಾರಣವಾದದ್ದು. ಮಗುವನ್ನು ಆಲಿಂಗಿಸಿದರೆ ಮಗುವಿಗೆ ಸಂತೋಷವಾಗುವುದು. ಹಾಗೆಯೇ ಹುಲಿಯು ದನವನ್ನು ಕೊಲ್ಲಲಿಕ್ಕಾಗಿ ಆಲಿಂಗಿಸುವಾಗ ದನಕ್ಕೆ ಸಂತೋಷವಾಗುವುದೇ? ಆದುದರಿಂದ ಆಲಿಂಗನವು ಸುಖಕರವಾಗಿದ್ದರೂ ಕೊಲ್ಲಲಿಕ್ಕೆ ಆಲಿಂಗಿಸುವಾಗ ಹೇಗೆ ಸುಖಕ್ಕೆ ಕಾರಣವಾಗಲಾರದೋ ಹಾಗೆಯೇ ಸ್ಮರಣೆಯು ಸಂತೋಷಕರವಾಗಿದ್ದರೂ ದ್ವೇಷ ದಿಂದ ಮಾಡಿದ ಸ್ಮರಣೆಯು ಭಗವಂತನ ಸ್ಮರಣೆಯು ಸಂತೋಷಕ್ಕೆ ಕಾರಣವಾಗ ಲಾರದು. ಹೇಗಾದರೂ ಮಾಡಿದ ಸ್ಮರಣೆಯು ಪುಣ್ಯಕ್ಕೆ ಕಾರಣವಾಗಿ ಭಗವಂತನ ಸಂತೋಷಕ್ಕೆ ಕಾರಣವಾಗುವುದಾದರೆ ಗೋವುಗಳ ಬ್ರಾಹ್ಮಣರ ಸಂಹಾರ ಮಾಡುವುದೂ ಪುಣ್ಯಕ್ಕೆ ಕಾರಣವಾಗಬೇಕಾಗುವುದು. ಅವರನ್ನು ಕೊಲ್ಲುವಾಗ ಅವರ ಹೆಸರನ್ನು ಹೇಳಿ ಕರೆದು ಹತ್ತಿರಬಂದಾಗ ಅವರನ್ನು ನೋಡಿ ಅವರನ್ನು

ಮುಟ್ಟುವುದರಿಂದ ಗೋಬ್ರಾಹ್ಮಣರ ನಾಮವನ್ನು ಹೇಳುವುದೂ ಅವರ ದರ್ಶನ ಸ್ಪರ್ಶನಗಳೂ ಪುಣ್ಯಕ್ಕೆ ಕಾರಣವಾದ ಕಾರಣ ಅವರ ಸಂಹಾರ ಮಾಡುವುದೂ ಪುಣ್ಯಕ್ಕೆ ಕಾರಣವಾಗಬೇಕಾಗುವುದು. ಅದು ಸರಿಯಲ್ಲ. ಆದುದರಿಂದ ಭಕ್ತಿಯಿಂದ ಅವರ ನಾಮವನ್ನು ಸ್ಮರಿಸುವುದಾಗಲೀ ದರ್ಶನ ಸ್ಪರ್ಶನವಾಗಲೀ ಕಾರಣವಲ್ಲದೆ ಕೊಲ್ಲುವ ಇಚ್ಛೆಯಿಂದ ಮಾಡುವ ನಾಮವನ್ನು ಹೇಳುವುದು ಮೊದಲಾದದ್ದು ಪುಣ್ಯಕ್ಕೆ ಕಾರಣವಲ್ಲವೆನ್ನಬೇಕು. ಹಾಗೆಯೇ ದ್ವೇಷದಿಂದ ಮಾಡುವ ಭಗವಂತನ ಸ್ಮರಣೆಯು ಪುಣ್ಯಕ್ಕೂ ಅವನ ಪ್ರೀತಿಗೂ ಕಾರಣವಲ್ಲ. ಭಕ್ತಿಯಿಂದ ಮಾಡುವ ಸ್ಮರಣೆಯೇ ಅವನ ಪ್ರೀತಿಗೆ ಕಾರಣವಾಗುವುದು.

ಭಾಗವತದಲ್ಲಿಯೇ ಒಂದು ಸ್ಥಳದಲ್ಲಿ ಹಿರಣ್ಯಕಶಿಪುವು ಭಗವಂತನನ್ನು ನಿಂದಿಸಿದುದರಿಂದ ತಮಸ್ಸಿಗೆ ಹೋಗಬೇಕಾಗಿತ್ತು. ಆದರೆ ಪ್ರಹ್ಲಾದನ ಮಹಿಮೆ ಯಿಂದ ತಮಸ್ಸನ್ನು ಹೊಂದಲಿಲ್ಲ ವೆಂದು ವೇನರಾಜನು ಭಗವಂತನನ್ನು ನಿಂದಿಸಿದುದರಿಂದ ಅವನನ್ನು ಬ್ರಾಹ್ಮಣರು ತಮಸ್ಸಿಗೆ ಕಳುಹಿಸಿದರೆಂದು ಭಗವಂತನ ನಿಂದೆಗೆ ತಮಸ್ಸು ಫಲವೆಂದೇ ಹೇಳಿದೆ. ತಮಸ್ಸು ಎಂದರೆ ಭಯಂಕರವಾದ ನಿತ್ಯ ವಾದ ನರಕವು. ನಿಂದೆಯು ದ್ವೇಷದಿಂದ ಮಾಡುವ ಕಾರಣ, ದ್ವೇಷವೂ ತಮಸ್ಸಿಗೇ ಕಾರಣವೆಂದಾಯಿತು. ಭಗವದ್ಗೀತೆಯಲ್ಲಿ ಶ್ರೀಕೃಷ್ಣಪರಮಾತ್ಮನು ತನ್ನನ್ನು ನಿಂದಿಸು ವವರನ್ನು ಅಧಮಗತಿಗೆ ಕಳುಹಿಸುವೆನೆಂದು ಹೇಳಿರುವನು. ಭಾಗವತದಲ್ಲಿಯೇ ಮತ್ತೊಂದು ಸ್ಥಳದಲ್ಲಿ ಪ್ರಹ್ಲಾದನು ನರಸಿಂಹದೇವರೊಡನೆ 'ನನ್ನ ತಂದೆಯು ನಿನ್ನನ್ನು ನಿಂದಿಸಿದ ಕಾರಣವೂ ನಿನ್ನ ಭಕ್ತನಾದ ನನ್ನಲ್ಲಿ ಅಪರಾಧಮಾಡಿದ ಕಾರಣವೂ ಉಂಟಾದ ಮಹಾದೋಷದಿಂದ ಉದ್ಧೃತನಾಗಬೇಕೆಂದು ಪ್ರಾರ್ಥಿಸಿಕೊಂಡಿರುವ ಕಾರಣವೂ ದ್ವೇಷಕ್ಕೆ ಫಲವು ದೋಷವೆಂದೇ ಆಯಿತು.

ಯಾವ ವಾದಿಗಳ ರೀತಿಯಿಂದಲೂ ದ್ವೇಷವು ಮೋಕ್ಷಕ್ಕೆ ಕಾರಣವೆನ್ನುವುದು ಸರಿಯಲ್ಲ. ಯಾಕೆಂದರೆ ಅದ್ವೈತಿಗಳು ಬ್ರಹ್ಮನಜ್ಞಾನ ದಿಂದ ಮೋಕ್ಷವೆನ್ನುವರು. ನೈಯಾಯಿಕರ ಪದಾರ್ಥಗಳ ಜ್ಞಾನದಿಂದ ಮೋಕ್ಷವೆನ್ನುವರು. ಎಲ್ಲ ವಾದಿಗಳೂ ಜ್ಞಾನದಿಂದಲೇ ಮೋಕ್ಷವೆನ್ನುವರು. ಜ್ಞಾನವಿಲ್ಲದೆ ದ್ವೇಷದಿಂದ ಮೋಕ್ಷವೆನ್ನುವುದು. ಯಾರ ಸಿದ್ಧಾಂತಕ್ಕೂ ಸರಿಬೀಳಲಾರದು. ಭಗವಂತನ ಜ್ಞಾನವಿಲ್ಲದೆ ಮೋಕ್ಷವಿಲ್ಲ ವೆಂದು ವೇದವೂ **ನಾನ್ಯಃ ಪಂಥಾ ಅಯನಾಯ ವಿದ್ಯತೇ** ಹೇಳುವುದು. ವೇದಾರ್ಥನಿರ್ಣಯಮಾಡಿದ ವೇದವ್ಯಾಸದೇವರೂ **ಅಥಾತೋ ಬ್ರಹ್ಮಜಿಜ್ಞಾಸಾ** ಸೂತ್ರದಲ್ಲಿ ಹಾಗೆಯೇ ಹೇಳಿರುವರು. ದ್ವೇಷದಿಂದ ಮೋಕ್ಷವಾಗುವುದಾದರೆ ಈ

ಸುಲಭವಾದ ಮೋಕ್ಷಮಾರ್ಗವು ವೇದಪುರುಷನಿಗಾಗಲೀ ಸೂತ್ರಕಾರರಿಗಾಗಲೀ ತಿಳಿಯದೆ ಹೋಯಿತೇ? ದ್ವೇಷದಿಂದಲೇ ಸುಲಭವಾಗಿ ಮೋಕ್ಷವಾಗುವ ಹಾಗಿದ್ದರೆ ಋಷಿಗಳೆಲ್ಲರೂ ಬಿಸಿಲುಚಳಿಗಳಲ್ಲಿ ಶ್ರಮಪಟ್ಟು ತಪಸ್ಸು ಯಾಕೆ ಮಾಡಬೇಕು? ಕೃಚ್ಛ್ರ ಚಾಂದ್ರಾಯಣ ಇತ್ಯಾದಿ ವ್ರತಗಳನ್ನು ಏಕೆ ಮಾಡಬೇಕು? ಭಾಗವತದಲ್ಲಿಯೇ ಒಂದು ಸ್ಥಳದಲ್ಲಿ ರಾಜಸೂಯಯಾಗದ ಸಭೆಯಲ್ಲಿ ಧರ್ಮರಾಜನು ಕೃಷ್ಣಪರಮಾತ್ಮನಿಗೆ ಅಗ್ರಪೂಜೆಯನ್ನು ಮಾಡಿದಾಗ ಶಿಶುಪಾಲನು ಶ್ರೀಭಗವಂತನನ್ನು ಬಹಳವಾಗಿ ನಿಂದಿಸಲು ಅಲ್ಲಿದ್ದ ಜನರೆಲ್ಲರೂ ಆಸ್ಥಳವನ್ನು ಬಿಟ್ಟುಹೋದರು ಎಂದುಹೇಳಿ ಆಮೇಲೆ ಭಗವಂತನ ಅಥವಾ ಭಗವದ್ಭಕ್ತರ ನಿಂದೆಯನ್ನು ಕೇಳಿ ಆಮೇಲೆ ಭಗವಂತನ ಅಥವಾ ಭಗವದ್ಭಕ್ತರ ನಿಂದೆಯನ್ನು ಕೇಳಿ ಆ ಸ್ಥಳವನ್ನು ಬಿಟ್ಟು ಯಾರು ಹೋಗುವುದಿಲ್ಲವೋ ಅವನು ಪುಣ್ಯದಿಂದ ರಹಿತನಾಗಿ ನರಕವನ್ನು ಹೊಂದುವನು ಎಂದು ಶುಕಾಚಾರ್ಯರು ಹೇಳಿರುವರು.

ಹೀಗೆ ಹೇಳಿರುವಾಗ ದ್ವೇಷದಿಂದ ಮೋಕ್ಷವಾಗುವುದೆಂದು ಶುಕಾಚಾರ್ಯರಿಗೆ ಹೇಗೆ ಸಮ್ಮತವಾಗುವುದು? **ಯಾತುಧಾನ್ಯಪಿ ಸಾಸ್ವರ್ಗಮವಾಪ ಜನನೀಗತಿಮ್ ।** ಎಂದು ಭಾಗವತವು ದ್ವೇಷದಿಂದ ಮೋಕ್ಷವಿದೆಯೆಂದು ಹೇಳಿದೆಯೆಂದು ತಿಳಿಯಬಾರದು. **ಮೃದಬ್ರವೀತ್** ಎಂಬ ವೇದವು ಮಣ್ಣು ಮಾತಾಡಿತು ಎಂದು ಹೇಳಿದಂತೆ ಕಂಡರೂ ಅದು ಯುಕ್ತಿವಿರುದ್ಧವಾದ ಕಾರಣ ಮಣ್ಣಿಗೆ ಅಭಿಮಾನಿಯಾದ ದೇವತೆಯು ಮಾತಾಡಿತು ಎಂದು ಅರ್ಥವನ್ನು ಮಾಡುವಂತೆ ಆ ವಾಕ್ಯಗಳಿಗೂ ಯುಕ್ತಿಗೆ ಸರಿಬೀಳುವ ಬೇರೆ ಅರ್ಥವನ್ನು ಮಾಡುವಂತೆ ಆ ವಾಕ್ಯಗಳಿಗೂ ಯುಕ್ತಿಗೆ ಸರಿಬೀಳುವ ಬೇರೆ ಅರ್ಥವನ್ನು ಮಾಡಬೇಕು. ಪಿಶಾಚಿಯು ಹಿಡಿದವನ ದೇಹದಲ್ಲಿ ಪಿಶಾಚಿಯೂ ಆ ದೇಹದಲ್ಲಿ ಇದ್ದ ಜೀವನೂ ಹೀಗೆ ಎರಡು ಜೀವರು ಹೇಗೆ ಇರುವರೋ ಹಾಗೆಯೇ ಪೂತನಾ ಮೊದಲಾದವರ ದೇಹದಲ್ಲಿ ಇಬ್ಬರು ಜೀವರು ಇರುವರು. ಅವರಲ್ಲಿ ಒಳ್ಳೇ ಜೀವನು ಮೋಕ್ಷರೂಪಸುಖವನ್ನು ಹೊಂದುವನು. ದುಷ್ಟಜೀವನು ತಮಸ್ಸು ಎಂಬ ದುಃಖವನ್ನೇ ಹೊಂದುವನು. ಸನಕಾದಿಗಳು ಜಯವಿಜಯರಿಗೆ ನೀನು ಮೂರು ಜನ್ಮಗಳಲ್ಲಿ ಅಸುರರಾಗಿರಿ ಎಂದು ಶಪಿಸಿರುವರು. ಆದರಿಂದ ಶಿಶುಪಾಲ ದಂತವಕ್ತ್ರರನ್ನೂ ಅಸುರರೆಂದು ಹೇಳಿದಂತೆ ಆಯಿತು. ಶಿಶುಪಾಲಾದಿಗಳ ದೇಹದಲ್ಲಿ ಒಬ್ಬ ಅಸುರಜೀವನಿಲ್ಲದಿದ್ದರೆ ಅವರನ್ನು ಅಸುರನೆಂದು ಹೇಳಲಿಕ್ಕೆ ಆಗಲಾರದು. ಭಗವಂತನನ್ನು ದ್ವೇಷಮಾಡಿದ ಕಾರಣವೇ ಅಸುರರೆಂದೇ ಹೇಳಲಿಕ್ಕೆ ಆಗಲಾರದು. ಅಷ್ಟರಿಂದಲೇ ಅಸುರ ಎಂದು

ಹೇಳುವುದಾದರೆ ಅರ್ಜುನಾದಿಗಳು ಕೆಲವು ಸಮಯದಲ್ಲಿ ಭಗವಂತನನ್ನು ದ್ವೇಷಿಸಿದ ಕಾರಣ ಅವರನ್ನು ಅಸುರ ಎಂದು ಹೇಳಬೇಕಾಗುವುದು. ಹಾಗೆ ಹೇಳುವುದಿಲ್ಲವಷ್ಟೆ. ಶಾಪದಿಂದಲಾದರೂ ಜಯನೆಂಬ ಸಜ್ಜೀವನಿಗೆ ಒಬ್ಬ ಅಸುರನಿಲ್ಲದೆ ಅಸುರ ಎಂದು ಹೆಸರು ಬರಲಾರದು.

ಪೂರ್ವದಲ್ಲಿ ಕಲ್ಮಾಷಪಾದ ರಾಜನಿಗೆ ವಸಿಷ್ಠರು ಅಸುರನಾಗೆಂದು ಶಾಪ ಕೊಡಲು ಅವನಲ್ಲಿ ಕಿಂಕರನೆಂಬ ಅಸುರನು ಪ್ರವೇಶಿಸಿದನೆಂದು ಭಾರತದಲ್ಲಿ ಹೇಳಿರುವುದು. ಹಾಗೆಯೇ ಕ್ಷತ್ರಿಯದೇಹವುಳ್ಳ ಸಜ್ಜೀವನಾದ ಶಿಶುಪಾಲನಿಗೆ ಅಸುರನೆಂಬ ಹೆಸರು ತನ್ನಲ್ಲಿ ಇರುವ ಒಬ್ಬ ಅಸುರನಿಂದ ಎಂದೇ ಹೇಳಬೇಕು. ಜಯನು ಶಿಶುಪಾಲನಾಗಿ ಹುಟ್ಟಿರುವನೆಂದು ಭಾಗವತದಲ್ಲಿಯೇ ಹೇಳಿರುವುದರಿಂದ ಅವನ ದೇಹದಲ್ಲಿ ಸಜ್ಜೀವನು ಸಿದ್ಧನಾದನು. ಹಾಗೆಯೇ ಸರ್ವದಾ ಭಗವಂತನನ್ನು ದ್ವೇಷಮಾಡಿದ್ದಕ್ಕೆ ಕಾರಣನಾದ ಒಬ್ಬ ಅಸುರನೂ ಸಿದ್ಧನಾಗುವನು. ಶಿಶುಪಾಲನ ದೇಹದಲ್ಲಿ ಅಸುರಜೀವನು ಇರದಿದ್ದರೆ ಅಲ್ಲಿ ಇರುವ ಜಯನು ಭಗವಂತನ ಭಕ್ತನಾದ ಕಾರಣ ಭಕ್ತಿಯಿಂದಲೇ ಮೋಕ್ಷವು ಸಿಕ್ಕಿದಂತೆ ಆಯಿತು. ದ್ವೇಷದಿಂದ ಅಲ್ಲ. ಜಯನು ಆಕಾಲದಲ್ಲಿ ಮಾಡಿದ ದ್ವೇಷವನ್ನು ಮನಸ್ಸಿಗೆ ತಾರದೆ ಬಹುಜನ್ಮಗಳಲ್ಲಿ ಮಾಡಿದ ಭಕ್ತಿಯಿಂದಲೇ ಮೋಕ್ಷವನ್ನು ಅವನಿಗೆ ಭಗವಂತನು ಕೊಟ್ಟನೆಂದೇ ಸರಿಯಾಗುವುದು. ಪರಮಾತ್ಮನಲ್ಲಿ ಭಕ್ತಿಯನ್ನೇ ಮಾಡದ ಜೀವನೊಬ್ಬನಿರುವನೆಂದು ಹೇಳುವುದಾದರೆ ಶಿಶುಪಾಲನ ದೇಹದಲ್ಲಿ ಇಬ್ಬರು ಜೀವರಿರುವರೆಂದು ಅರ್ಥವಾಯಿತು. 'ರಾಕ್ಷಸಿಯಾದರೂ ತಾಯಿಯ ಗತಿಯನ್ನು ಹೊಂದಿದಳು. ಕೃಷ್ಣಪರಮಾತ್ಮನಿಗೆ ಸ್ನೇಹದಿಂದ ಸ್ತನವನ್ನು ಕೊಟ್ಟ ತಾಯಿಯೇ ಮೊದಲಾದವರಿಗೆ ಏನು ಹೇಳಬೇಕು' ಎಂದು ಹೇಳಿದ ಭಾಗವತವಾಕ್ಯಕ್ಕೆ ರಾಕ್ಷಸ ಸಹವಾಸವುಳ್ಳ ಸಜ್ಜೀವಳಿಗೂ ಭಗವಂತನು ಮೋಕ್ಷವನ್ನು ಕೊಟ್ಟಿರುವಾಗ ರಾಕ್ಷಸ ಸಹವಾಸವಿಲ್ಲದ ಸಜ್ಜೀವನಿಗೆ ಏನು ಹೇಳಬೇಕು ಎಂದು ಅರ್ಥವನ್ನು ಮಾಡಬೇಕು. (ಅಯೋಗ್ಯರಿಗೆ ಭಗವಂತನಲ್ಲಿ ದ್ವೇಷವು ಅಧಿಕವಾಗಲಿ ಎಂದೇ ವೇದವ್ಯಾಸದೇವರು ಈ ವಿಷಯವನ್ನು ಸ್ಪಷ್ಟವಾಗಿ ಹೇಳಲಿಲ್ಲ. ಯಾಕೆಂದರೆ ಎಲ್ಲರೂ ಭಗವಂತನಲ್ಲಿ ಭಕ್ತಿಯನ್ನು ಮಾಡಿದರೆ ಅಂಧಂತಮಸ್ಸಿಗೆ ಹೋಗುವವರೇ ಇಲ್ಲವೆಂದಾಗುವುದು. ಆ ತಮಸ್ಸಿಗೆ ಭಕ್ತರು ಹೋಗಲಾರರು. ಸಾಮಾನ್ಯಪಾಪವನ್ನು ಮಾಡಿದವರೂ ಹೋಗಲಾರರು. ದ್ವೇಷಮಾಡಿದವರೇ ಹೋಗಬೇಕು)

ಶಿಶುಪಾಲಾದಿಗಳು ದ್ವೇಷದಿಂದ ಮೋಕ್ಷವನ್ನು ಹೊಂದಿದರು ಎಂದು ಹೇಳಿದ

ಭಾಗವತ ವಾಕ್ಯಕ್ಕೆ ಭಗವಂತನು ಮಹಾಕರುಣೆಯುಳ್ಳವನು ಎಂದು ಹೇಳುವುದರಲ್ಲಿ ತಾತ್ಪರ್ಯವು. ಲೋಕದ ಜನರು ತಮಗೆ ಒಬ್ಬರು ಎಷ್ಟು ಉಪಕಾರವನ್ನು ಮಾಡಿದ್ದರೂ ಆಮೇಲೆ ಸ್ವಲ್ಪ ದ್ವೇಷಮಾಡಿದರೆ ಅವರು ಮೊದಲು ಮಾಡಿದ ಉಪಕಾರವೆಲ್ಲವನ್ನು ಮರೆತುಬಿಟ್ಟು ಆಮೇಲೆ ಮಾಡಿದ ದ್ವೇಷವನ್ನೇ ಮನಸ್ಸಿಗೆ ತಂದುಕೊಂಡು ಅದಕ್ಕೆ ಪ್ರತೀಕಾರವನ್ನು ಮಾಡುವರು. ಭಗವಂತನು ಹಾಗಲ್ಲ. ಜಯನು ಅಸುರನ ಸಹವಾಸದಿಂದ ಸ್ವಲ್ಪ ದ್ವೇಷ ಮಾಡಿದ್ದರೂ ಅದನ್ನು ಮನಸ್ಸಿಗೆ ತಂದುಕೊಳ್ಳದೆ ಪರಮಾತ್ಮನು ಅವನು ಪೂರ್ವದಲ್ಲಿ ಮಾಡಿದ ಭಕ್ತಿಯು ಫಲವಾದ ಮೋಕ್ಷವನ್ನೇ ಕೊಟ್ಟನು ಎಂದು ಅವನು ಕರುಣಾಶೀಲನು ಲೋಕದ ಜನರಂತೆ ಅಲ್ಲ ಎಂದು ಅಭಿಪ್ರಾಯವು. ಇನ್ನು ಭಾಗವತದಲ್ಲಿ ಕೆಲವು ಸ್ಥಳದಲ್ಲಿ ದ್ವೇಷದಿಂದ ಸ್ಮರಣೆ ಮಾಡಿ ಮೋಕ್ಷವನ್ನು ಹೊಂದಿದರು ಎಂದು ಹೇಳಿರುವಂತೆ ತೋರುವುದು.

**ವೃದ್ಧೌ ಚ ಮಾತಾಪಿತರೌ ಸತೀ ಭಾರ್ಯಾ ಸುತಃ ಶಿಶುಃ ।**

**ಅಪ್ಯಕಾರ್ಯಶತಂ ಕೃತ್ವಾ ಭರ್ತವ್ಯಾ ಮನುರಬ್ರವೀತ್ ॥ (ಮನುಸ್ಮೃತಿ)**

ಎಂಬ ವಾಕ್ಯದಲ್ಲಿ ವಯಸ್ಸಾದ ತಂದೆತಾಯಿಗಳನ್ನು ಪತಿವ್ರತೆಯಾದ ಹೆಂಡತಿಯನ್ನು ಚಿಕ್ಕಮಗುವನ್ನು ಕೂಡ ನೂರಾರು ದುಷ್ಕಾರ್ಯಗಳನ್ನು ಮಾಡಿಯಾದರೂ ರಕ್ಷಿಸಬೇಕೆಂದು ಹೇಳಿದ್ದರೂ, ಆ ಮಾತಿಗೆ ದುಷ್ಕಾರ್ಯಗಳನ್ನು ಮಾಡಬೇಕೆಂದು ತಾತ್ಪರ್ಯವಲ್ಲ. ಹಾಗೆಯೇ ಭಗವಂತನನ್ನು ಸ್ಮರಿಸಬೇಕು ಎಂದು ಇಷ್ಟೇ ತಾತ್ಪರ್ಯ ವಲ್ಲದೆ ದ್ವೇಷದಿಂದ ಸ್ಮರಿಸಬೇಕೆಂಬುದರಲ್ಲಿ ತಾತ್ಪರ್ಯವಿಲ್ಲ. ಆದುದರಿಂದ ಭಗವಂತನಲ್ಲಿ ದ್ವೇಷಮಾಡಿದರೆ ತಮಸ್ಸು ಎಂಬ ಮಹಾನರಕವೇ ಆಗುವುದಲ್ಲದೆ ಉತ್ತಮಗತಿಯು ಎಷ್ಟು ಮಾತ್ರಕ್ಕೂ ಆಗಲಾರದು. ಆದುದರಿಂದ ರಾಕ್ಷಸಿಯಾದ ಪೂತನಿಗೆ ಮೋಕ್ಷವಾಗಲಿಲ್ಲ. ತಾಟಕೆಯೆಂಬ ಆ ರಾಕ್ಷಸಿಗೆ ತಮಸ್ಸೇ ಆಯಿತು. ಅವಳಲ್ಲಿ ಇದ್ದ ಊರ್ವಶಿಯೆಂಬ ಸಜ್ಜೀವಳಿಗೆ ಮಾತ್ರ ಉತ್ತಮಲೋಕ ಪ್ರಾಪ್ತಿಯಾಯಿತು ಎಂದು ತಿಳಿಯಬೇಕು.



# ಶಕಟಾಸುರನ ಸಂಹಾರವು [1]

ಶ್ರೀಕೃಷ್ಣನಿಗೆ ನಾಲ್ಕು ತಿಂಗಳಾಗಿರಲು ಬಹಿರ್ನಿಷ್ಕ್ರಮಣೋತ್ಸವವು ನಡೆಯಿತು. ಬಹಿರ್ನಿಷ್ಕ್ರಮಣೋತ್ಸವವೆಂದರೆ ಮಗುವನ್ನು ಮನೆಯಿಂದ ಹೊರಗೆ ದೇವಾಲಯಾದಿಗಳಿಗೆ ತೆಗೆದುಕೊಂಡು ಹೋಗಲು ಮಾಡುವ ಉತ್ಸವವೆಂದು ಅರ್ಥವು. ಆದಿವಸದಲ್ಲಿ ಬಹುಜನ ಹೆಂಗಸರು ಬಂದಿದ್ದರು. ಬ್ರಾಹ್ಮಣರ ಮಂತ್ರ ಪೂರ್ವಕವಾಗಿ ಮಗುವಿಗೆ ಸ್ನಾನಮಾಡಿಸಿದಳು. ಆಮೇಲೆ ಪುಣ್ಯಾಹವಾಚನೆ ಯಾಯಿತು. ಬ್ರಾಹ್ಮಣರಿಗೆ ಭೋಜನ ಮಾಡಿಸಿ ಗೋವುಗಳ ಇತ್ಯಾದಿಗಳ ದಾನ ಮಾಡಿದ ಮೇಲೆ ಮಗುವಿಗೆ ಕಣ್ಣಿಗೆ ನಿದ್ರೆಯು ಹಿಡಿಯಿತೆಂದು ಮಲಗಿಸಿದಳು.

ತರುವಾಯ ಯಶೋದೆಯು ಬಂದ ಹೆಂಗಸರೆಲ್ಲರನ್ನೂ ಉಪಚರಿಸುತ್ತಿದ್ದಳು. ಅಷ್ಟರಲ್ಲಿ ಶ್ರೀಕೃಷ್ಣನು ಅಳಲಿಕ್ಕೆ ಆರಂಭಿಸಿದನು. ಯಶೋದೆಯು ಬಂದವರನ್ನು ಉಪಚರಿಸುತ್ತಿದ್ದ ಕಾರಣ ಮಗುವು ಅಳುವುದು ಕೇಳಿಸಲಿಲ್ಲ. ಕೃಷ್ಣನು ಅಳುತ್ತಾ ಸ್ತನಪಾನ ಮಾಡಬೇಕೆಂದು ಕಾಲುಗಳನ್ನು ಮೇಲೆ ಹಾರಿಸಿದನು. ಬಂಡಿಯ ಕೆಳಗೆ ಮಲಗಿದ್ದ ಕೃಷ್ಣನ ಮೃದುವಾದ ಪಾದವು ಬಂಡಿಯ ಚಕ್ರಕ್ಕೆ ತಾಗಿತು. ಆ ಸಮಯದಲ್ಲಿ ಬಂಡಿಯಲ್ಲಿ ಒಬ್ಬ ಅಸುರನು ಶಕಟಾಕ್ಷ ಎಂದು ಹೆಸರುಳ್ಳವನು ಭಗವಂತನಿಗೆ ವಿರೋಧಮಾಡಬೇಕೆಂದು ಇದ್ದನು. ಶ್ರೀಕೃಷ್ಣನ ಪಾದವು ತಾಗಲು ಚಕ್ರವು ಬಿದ್ದು ಅದರಲ್ಲಿ ಇದ್ದ ಶಕಟಾಸುರನೂ ಮೃತನಾದನು. ಬಂಡಿಯ ಮೇಲೆ ಇದ್ದ ಪಾತ್ರೆಗಳು ಒಡೆದುಹೋದವು. ಚಕ್ರವು ಇರುವ ಅಚ್ಚಿನ ಮರವು ಮುರಿದು ಹೋಯಿತು. ಯಶೋದೆಯೂ ಬಂದಿರುವ ಹೆಂಗಸರೂ ನಂದಗೋಪನೇ ಮೊದಲಾದವರೂ ಬಂಡಿಯು ಹೀಗೆ ವಿಪರೀತವಾಗಿ ಏಕೆ ಆಯಿತೆಂದು ಆಶ್ಚರ್ಯಪಟ್ಟರು. ಅತಿವಿಷಾದವುಳ್ಳವರಾಗಿ ಸುತ್ತಲೂ ಓಡಿಬಂದರು. ಆಗ ಅಲ್ಲಿದ್ದ ಹುಡುಗರು ಗೋಪಾಲರೊಡನೆಯೂ ಗೋಪಿಯರೊಡನೆಯೂ 'ಅಳುವ ಈ ಮಗುವಿನ ಕಾಲು ತಾಗಿ ಚಕ್ರವು ಮುರಿದು ಹೋಯಿತು' ಎಂದು ಹೇಳಿದರು. ಆದರೆ ಗೋಪಾಲರೂ ಗೋಪಿಯರೂ ಚಿಕ್ಕ ಹುಡುಗರು ಹೇಳುತ್ತಿರುವರೆಂದು ಅವರ ಮಾತನ್ನು ನಂಬಲಿಲ್ಲ. ಅಪ್ರಮೇಯನಾದ ಭಗವಂತನ ಮಹಿಮೆಯನ್ನು ಅವರು ತಿಳಿಯಲಿಲ್ಲ.

ಯಶೋದೆಯು ಅಳುತ್ತಿದ್ದ ಕೂಸನ್ನು ಎತ್ತಿಕೊಂಡಳು. ಪಿಶಾಚಿಯೇನಾದರೂ ಹಿಡಿಯಿತೋ ಎಂಬ ಸಂದೇಹದಿಂದ ಕೂಸಿಗೆ ಬ್ರಾಹ್ಮಣರಿಂದ ಮಂಗಳವಾಗುವಂತೆ

---

1. ಭಾ. X-8 ಮತ್ತು ಮ.ತಾ.ನಿ. ಅ-12

ಮಂತ್ರವನ್ನು ಹೇಳಿಸಿ ಸ್ತನ್ಯಪಾನ ಮಾಡಿಸಿದಳು. ಆಮೇಲೆ ಬಲಿಷ್ಠರಾದ ಗೋಪಾಲರು ಬಂಡಿಯಚಕ್ರವನ್ನು ಸರಿಯಾಗಿ ಮಾಡಿ ಬಂಡಿಯನ್ನು ನಿಲ್ಲಿಸಿದರು. ಬ್ರಾಹ್ಮಣರು ಹೋಮವನ್ನು ಮಾಡಿ ರಕ್ಷೆಯನ್ನು ಮಾಡಿದರು. ಕಳವು ಸುಳ್ಳು ಹೇಳೋಣ ದಂಭ ಇತ್ಯಾದಿ ದೋಷರಹಿತರಾದ ಬ್ರಾಹ್ಮಣರು ಮಾಡಿದ ಆಶೀರ್ವಾದವು ನಿಷ್ಫಲವಾಗಲಾರದು ಎಂದು ಹೇಳಿಕೊಂಡು ಬ್ರಾಹ್ಮಣರಿಂದ ವೇದಮಂತ್ರಗಳನ್ನು ಹೇಳಿಸಿ ಶಿಶುವಿಗೆ ಸ್ನಾನಮಾಡಿಸಿದಳು. ನಂದಗೋಪನು ಪುಣ್ಯಾಹವಾಚನೆಯನ್ನು ಮಾಡಿಸಿ ಬ್ರಾಹ್ಮಣರಿಂದ ಹೋಮವನ್ನು ಮಾಡಿಸಿ ಬ್ರಾಹ್ಮಣರಿಗೆ ಭೋಜನ ಮಾಡಿಸಿದನು. ಮಗನಾದ ಕೃಷ್ಣನ ಮತ್ತು ರೋಹಿಣಿಯ ಮಗನ ಅಭ್ಯುದಯಕ್ಕಾಗಿ ಗೋವುಗಳ ದಾನವನ್ನು ಮಾಡಿದನು.



## ತೃಣಾವರ್ತನ ಸಂಹಾರವು [1]

ಒಂದು ದಿವಸದಲ್ಲಿ ಯಶೋದೆಯು ಕೃಷ್ಣನನ್ನು ತೊಡೆಯಲ್ಲಿ ಇಟ್ಟುಕೊಂಡು ಆಡಿಸುತ್ತಾ ಇದ್ದಳು. ಆಗ ಮಗುವಿನ ಭಾರವನ್ನು ಧರಿಸಲಾರಳಾದಳು. ತರುವಾಯ ಅವಳು ಆಶ್ಚರ್ಯವುಳ್ಳವಳಾಗಿ ಭಾರವನ್ನು ತಾಳಲಾರದೆ ಕೆಳಗಿಟ್ಟು ಭಗವಂತನನ್ನು ಧ್ಯಾನ ಮಾಡಿದಳು. ತರುವಾಯ ಮನೆಯ ಕೆಲಸಕ್ಕಾಗಿ ಹೋದಳು. ಆಗ ತೃಣಾವರ್ತನೆಂದು ಹೆಸರುಳ್ಳ ಕಂಸನಿಂದ ಪ್ರೇರಿತನಾದ ಕಂಸನ ಭೃತ್ಯನಾದ ಅಸುರನು ಸುಳಿಗಾಳಿಯ ಸ್ವರೂಪದಿಂದ ಬಂದು ಕೂತಿದ್ದ ಬಾಲಕನಾದ ಶ್ರೀಕೃಷ್ಣನನ್ನು ಎತ್ತಿಕೊಂಡು ಹೋದನು. ಗೋಕುಲದಲ್ಲೆಲ್ಲಾ ಶಬ್ದವುಂಟಾಗುವಂತೆ ಮಾಡಿದನು. ಎಲ್ಲರ ಕಣ್ಣಿಗೂ ಧೂಳಿಯನ್ನು ಉಂಟುಮಾಡಿದನು. ಒಂದು ಮುಹೂರ್ತ ಸಮಯದಲ್ಲಿ ಗೋಕುಲವೆಲ್ಲವೂ ಧೂಳಿಯಿಂದಲೂ ಕತ್ತಲೆಯಿಂದಲೂ ತುಂಬಿ ಹೋಯಿತು. ಯಶೋದೆಯು ಬಂದು ನೋಡಲು ತಾನು ಇಟ್ಟ ಸ್ಥಳದಲ್ಲಿ ಮಗುವನ್ನು ನೋಡಲಿಲ್ಲ. ಯಾರೊಬ್ಬನೂ ಕೂಡ ತೃಣಾವರ್ತನಿಂದ ಉಂಟಾದ ಉಸುಗುಗಳಿಂದ ಕಣ್ಣು ತೆರೆಯಲಿಕ್ಕೆ ಆಗದೆ ತನ್ನ ದೇಹವನ್ನು ಧೂಳಿಯ ಮಳೆಯೇ ಉಂಟಾಗಲು ಯಶೋದೆಯು ಮಗುವು ಹೋದ ಮಾರ್ಗವನ್ನು ತಿಳಿಯದೆ ಭೂಮಿಯಲ್ಲಿ ಕರು ಸತ್ತುಹೋದ ದನವು ದುಃಖಪಡುವಂತೆ ಅಳುವವಳಾದಳು. ಗೋಪಸ್ತ್ರೀಯರು ಯಶೋದೆಯ ಅಳುವನ್ನು ಕೇಳಿ ಅತ್ಯಂತ ಸಂತಪ್ತವಾದ

1. ಭಾ. X-8 ಮತ್ತು ಮ.ತಾ.ನಿ. ಅ–12

ಮನಸ್ಸುಳ್ಳವರಾಗಿ ಕಣ್ಣೀರನ್ನು ಸುರಿಸುವವರಾಗಿ ಗಾಳಿಯ ವೇಗವು ಕಡಿಮೆಯಾಗಿ ಧೂಳಿಯು ನಿಂತುಹೋದಾಗ ಕೃಷ್ಣನನ್ನು ನೋಡದೆ ಅಳುವವರಾದರು. ಸುಳಿಗಾಳಿಯ ರೂಪವನ್ನು ಧರಿಸಿದ್ದ ತೃಣಾವರ್ತನು ಸುಳಿಗಾಳಿಯ ರೂಪದಿಂದ ಕೃಷ್ಣನನ್ನು ಎತ್ತಿಕೊಂಡು ಆಕಾಶದಲ್ಲಿ ಹೋದವನಾಗಿ ಕೃಷ್ಣನ ಭಾರವು ಹೆಚ್ಚಾಗಿ ಎತ್ತಿಕೊಂಡು ಹೋಗಲಿಕ್ಕೆ ಅಶಕ್ತನಾದನು. ಭಾರದಿಂದ ಅವನಿಗೆ ಕೃಷ್ಣಪರಮಾತ್ಮನು ದೊಡ್ಡಕಲ್ಲಿನಂತೆ ತೋರಿತು.

ಆಗ ಕೃಷ್ಣನು ಅವನ ಕುತ್ತಿಗೆಯನ್ನು ಗಟ್ಟಿಯಾಗಿ ಹಿಡಿದಿದ್ದ ಕಾರಣ ಅವನನ್ನು ಬಿಟ್ಟುಬಿಡಲಿಕ್ಕೂ ಸಾಧ್ಯವಾಲಿಲ್ಲ. ಕೃಷ್ಣಪರಮಾತ್ಮನು ಕುತ್ತಿಗೆಯನ್ನು ಗಟ್ಟಿಯಾಗಿ ಹಿಡಿದಿದ್ದ ಕಾರಣ ಕೈಕಾಲುಗಳನ್ನು ಆಡಿಸಲಿಕ್ಕೆ ಸಾಧ್ಯವಾಗಲಿಲ್ಲ. ಕೃಷ್ಣನಿಂದ ಸಹಿತನಾಗಿ ರಾಕ್ಷಸನು ಮೃತನಾಗಿ ಗೋಕುಲದಲ್ಲಿ ಬಿದ್ದನು. ಅಸುರನು ಅಂತರಿಕ್ಷದಿಂದ ವಿಶಾಲವಾದ ಕಲ್ಲಿನಲ್ಲಿ ಬಿದ್ದನು. ಅವನ ಎಲ್ಲಾ ಅವಯವಗಳೂ ಸೀಳಿಹೋದವು. ಅವನನ್ನು ಎಲ್ಲಾ ಅಳುತ್ತಿದ್ದವರು ಬಂದು ನೋಡಿದರು. ಅಸುರನ ಮೇಲೆ ಜೋಲುತ್ತಿದ್ದ ಕೃಷ್ಣನನ್ನು ಆಶ್ಚರ್ಯದಿಂದ ಎತ್ತಿಕೊಂಡು ಬಂದರು. ಗೋಪಾಲರೂ ಗೋಪಸ್ತ್ರೀಯರೂ ಕೃಷ್ಣನನ್ನು ಮೃತ್ಯುಮುಖದಿಂದ ತಪ್ಪಿಸಿಕೊಂಡು ಬಂದನೆಂದು ತಿಳಿದುಕೊಂಡು ಸಂತೋಷಪಟ್ಟರು. 'ಮಗುವನ್ನು ಹಿಂಸಿಸಲು ಬಂದ ಅಸುರನು ತನ್ನ ಪಾಪದಿಂದ ಸಂಹೃತನಾದನು! ಇತ್ಯಾದಿ ಹೇಳಿಕೊಂಡರು. ನಂದಗೋಪನು ಬೃಹದ್ವನಲ್ಲಿ ಅನೇಕ ಅದ್ಭುತಗಳನ್ನು ನೋಡಿ ಆಶ್ಚರ್ಯವುಳ್ಳವ ನಾಗಿ ಬಹಳವಾಗಿ ವಸುದೇವನ ಮಾತನ್ನು ಬಹುಮಾನ ಮಾಡಿದನು.

ಒಂದುದಿವಸ ಯಶೋದೆಯು ಶ್ರೀಕೃಷ್ಣನನ್ನು ತೊಡೆಯಲ್ಲಿ ಮಲಗಿಸಿಕೊಂಡು ಸ್ನೇಹದಿಂದ ಸುರಿಯುತ್ತಿದ್ದ ಸ್ತನದ ಹಾಲನ್ನು ಕುಡಿಸಿದಳು. ತಾಯಿಯು ಮಗುವು ಅನೇಕವಾಗಿ ಸ್ತನದ ಹಾಲನ್ನು ಕುಡಿದ ಮೇಲೆ ಮುಗುಳುನಗೆಯುಳ್ಳ ಮುಖವನ್ನು ಆಡಿಸುತ್ತಾ ಆಕಳಿಕೆ ಮಾಡುವಾಗ ಬಾಯಿಯನ್ನು ನೋಡಿದಳು. ಆಗ ಬಾಯಿಯೊಳಗೆ ಎಲ್ಲಾ ಜಗತ್ತನ್ನೂ ನೋಡಿದಳು. ಆಕಾಶವನ್ನು ಭೂಮಿಯನ್ನು ಸ್ವರ್ಗವನ್ನು ಜ್ಯೋತಿಶ್ಚಕ್ರವನ್ನು ದಿಕ್ಕುಗಳನ್ನು ಸೂಯಚಂದ್ರಅಗ್ನಿಗಾಳಿ ಸಮುದ್ರಗಳನ್ನು ದ್ವೀಪ ಗಳನ್ನು ಪರ್ವತಗಳನ್ನು ನದಿಗಳನ್ನೂ ಎಲ್ಲಾ ಸ್ಥಾವರ ಜಂಗಮ ಪ್ರಾಣಿಗಳನ್ನು ನೋಡಿದಳು. ಯಶೋದೆಯು ಅದೆಲ್ಲವನ್ನು ನೋಡಿ ನಡುಗಿಹೋದವಳಾಗಿ ಕಣ್ಣುಗಳನ್ನು ಮುಚ್ಚಿಕೊಂಡು ಆಶ್ಚರ್ಯಪಟ್ಟಳು.



# ಕೃಷ್ಣಬಲರಾಮರ ನಾಮಕರಣವು [1]

ಮಹಾತಪಸ್ವಿಯಾದ ಯಾದವರ ಪುರೋಹಿತರಾದ ಗರ್ಗಾಚಾರ್ಯರನ್ನು ವಸುದೇವನು ಮಕ್ಕಳಿಗೆ ನಾಮಕರಣವನ್ನು ಮಾಡುವುದಕ್ಕಾಗಿ ಗೋಕುಲಕ್ಕೆ ಕಳುಹಿಸಿದನು. ನಂದಗೋಪನು ಬಂದಿರುವ ಗರ್ಗಾಚಾರ್ಯರನ್ನು ನೋಡಿ ಎದ್ದು ನಿಂತು ಕೈಮುಗಿಯುವವನಾಗಿ ನಮಸ್ಕಾರಮಾಡಿ ಭಗವಂತನ ಸನ್ನಿಧಾನವಿರುವು ದೆಂಬ ಬುದ್ಧಿಯಿಂದ ನಮಸ್ಕಾರ ಮಾಡಿ ಉಪಚರಿಸಿದನು. ಕೂತುಕೊಳ್ಳಿಸಿದನು. ಆತಿಥ್ಯವನ್ನು ಮಾಡಿದನು. ಮಧುರವಾದ ಮಾತಿನಿಂದ ಸಂತೋಷಪಡಿಸಿ ಪೂರ್ಣರಾದ ತಮಗೆ ನಾನೇನು ಮಾಡಲಿ ಎಂದು ಕೇಳಿದನು. 'ತಮ್ಮಂತಹ ದೊಡ್ಡವರು ಸಂಚರಿಸುವುದು ದೀನರಾದ ನಮ್ಮಂತವರ ಶ್ರೇಯಸ್ಸಿಗೆ ಕಾರಣವಾಗು ವುದು. ತಾವು ತ್ರಿಕಾಲಜ್ಞಾನಕ್ಕೆ ಕಾರಣವಾದ ಜ್ಯೋತಿಃಶಾಸ್ತ್ರವನ್ನು ಮಾಡಿರುವಿರಿ. ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠರಾದ ನೀವು ಈ ಬಾಲಕರಿಗೆ ನಾಮಕರಣಾದಿ ಸಂಸ್ಕಾರಗಳನ್ನು ಮಾಡುವವರಾಗಬೇಕು. ಎಲ್ಲಾ ವರ್ಣದವರಿಗೂ ಬ್ರಾಹ್ಮಣರು ಮುಖ್ಯವಾಗಿ ಗುರುಗಳು' ಎಂದು ನಂದಗೋಪನು ಗರ್ಗಾಚಾರ್ಯರೊಡನೆ ಹೇಳಿಕೊಂಡನು.

ಅದಕ್ಕೆ ಗರ್ಗಾಚಾರ್ಯರು 'ನಾನು ಯಾದವರಿಗೆ ಪುರೋಹಿತನೆಂದು ಭೂಮಿಯಲ್ಲಿ ಎಲ್ಲಾ ಸ್ಥಳದಲ್ಲಿಯೂ ಪ್ರಸಿದ್ಧನಾಗಿರುವೆನು. ನಾನು ನಿನ್ನ ಮಗನಿಗೆ ನಾಮಕರಣಾದಿ ಸಂಸ್ಕಾರವನ್ನು ಮಾಡಿದರೆ ನಿನ್ನ ಮಗನನ್ನು ದೇವಕಿಯ ಮಗನೆಂದು ಯಾರಾದರೂ ತಿಳಿದರೂ ತಿಳಿಯಬಹುದು. ಪಾಪಬುದ್ಧಿಯುಳ್ಳ ಕಂಸನಿಗೆ ನಿನಗೂ ವಸುದೇವನಿಗೂ ಸ್ನೇಹವಿರುವುದು ತಿಳಿದಿರುವುದು. ಅವನು ದೇವಕಿಯ ಮಗಳು ಹೇಳಿದ ಮಾತನ್ನು ಕೇಳಿ ದೇವಕಿಯ ಎಂಟನೇ ಮಗುವು ಹೆಣ್ಣು ಆಗಿರಲಿಕ್ಕಿಲ್ಲ ಎಂದು ಯೋಚಿಸುತ್ತಿರುವನು. ಈಗ ನಾನು ನಿನ್ನ ಮಗನಿಗೆ ನಾಮಕರಣವನ್ನು ಮಾಡಿದ್ದು ತಿಳಿದರೆ ಅವನು ಯಾದವರ ಪುರೋಹಿತನಾದ ನಾನು ನಾಮಕರಣ ಮಾಡಿದ ಕಾರಣ ನಿನ್ನ ಮಗನು ವಸುದೇವನ ಮಗನಾಗಿರಬಹುದೆಂದು ಅವನಿಗೆ ಸಂದೇಹ ಬಂದುಬಿಟ್ಟರೆ ತುಂಬಾ ಅನರ್ಥವಾಗುವುದಲ್ಲಾ!' ಎಂದು ಹೇಳಿದರು.

ಅದಕ್ಕೆ ನಂದಗೋಪನು 'ನಮ್ಮವರಿಗೂ ತಿಳಿಯದಂತೆ ನಂದಗೋಕುಲದಲ್ಲಿ ರಹಸ್ಯದಲ್ಲಿ ಪುಣ್ಯಾಹವಾಚನೆಯನ್ನು ಮಾಡಿ ನನ್ನ ಮಗನಿಗೆ ದ್ವಿಜರಿಗೆ ಯೋಗ್ಯಗಳಾದ ಸಂಸ್ಕಾರಗಳನ್ನು ಮಾಡಿರಿ' ಎಂದು ಹೇಳಿದರು. ಈರೀತಿಯಾಗಿ

1. ಭಾ. X-9 ಮತ್ತು ಮ.ತಾ.ನಿ. ಅ–13

ಪ್ರಾರ್ಥಿಸಲ್ಪಟ್ಟ ಗರ್ಗಾಚಾರ್ಯರು ತಾನೂ ಅದೇ ಅಭಿಪ್ರಾಯವುಳ್ಳವರಾದ ಕಾರಣ ಏಕಾಂತದಲ್ಲಿ ಒಬ್ಬರಿಗೂ ತಿಳಿಯದಂತೆ ಬಾಲಕರಿಗೆ ನಾಮಕರಣವನ್ನು ಮಾಡಿದರು. 'ಈ ರೋಹಿಣೀಪುತ್ರನು ಮಿತ್ರರನ್ನು ಗುಣಗಳಿಂದ ಸಂತೋಷಪಡಿಸುವವನಾಗಿ ರಾಮ ಎಂದು ಪ್ರಸಿದ್ಧನಾಗುವನು. ಅಧಿಕವಾದ ಬಲವಿರುವ ಕಾರಣ ಬಲ ಎಂದೂ ಹೆಸರನ್ನು ಹೊಂದುವನು. ಯಾದವರಲ್ಲಿ ಸೇರಿದವನಾದ ಕಾರಣ ಸಂಕರ್ಷಣ ಎಂದೂ ಹೇಳುವರು. ನಿನ್ನ ಮಗನು ಒಂದೊಂದು ಯುಗದಲ್ಲಿ ಒಂದೊಂದು ಬಣ್ಣದ ದೇಹವನ್ನು ಧರಿಸುವನು. ಮೊದಲಾಗಿ ಬೆಳ್ಳಗಾದ ದೇಹವನ್ನು ಆಮೇಲೆ ಕೆಂಪಾದ ದೇಹವನ್ನು ಆಮೇಲೆ ಅರಸಿನ ಬಣ್ಣದ ದೇಹವನ್ನು ಧರಿಸಿ ಈಗ ಕೃಷ್ಣರೂಪವನ್ನು ಧರಿಸಿರುವನು. ಇವನು ಪೂರ್ವದಲ್ಲಿ ವಸುದೇವನ ಮಗನಾಗಿ ಹುಟ್ಟಿದನು. ಆದುದರಿಂದ ಇವನನ್ನು ವಾಸುದೇವ ಎಂದು ಹೇಳುವರು. ನಿನ್ನ ಮಗನಿಗೆ ಬಹಳ ರೂಪಗಳೂ ಹೆಸರುಗಳೂ ಇರುವುವು. ಗುಣಗಳಿಗೂ ಕರ್ಮಗಳಿಗೂ ಸರಿಯಾದ ಹೆಸರುಗಳಿರುವುವು. ಅವುಗಳನ್ನು ನಾನು ತಿಳಿದಿರುವೆನು. ಜನರು ತಿಳಿದಿಲ್ಲ. ಇವನು ಗೋಪಾಲರಿಗೂ ಗೋವುಗಳ ಸಮೂಹಕ್ಕೂ ಶ್ರೇಯಸ್ಸನ್ನು ಉಂಟುಮಾಡುವನು. ಇವನಿಂದ ಎಲ್ಲಾ ಆಪತ್ತುಗಳನ್ನೂ ದಾಟುವಿರಿ. ಪೂರ್ವದಲ್ಲಿ ಒಂದು ಸಮಯದಲ್ಲಿ ರಾಜನಿಲ್ಲದೆ ಕಳ್ಳರಿಂದ ಜನರು ಪೀಡಿತರಾಗಿರುವಾಗ (ಪೃಥುರಾಜನಲ್ಲಿ ಆವಿಷ್ಟನಾದ) ಇವನಿಂದ ಸಾಮರ್ಥ್ಯವುಳ್ಳವರಾಗಿ ಕಳ್ಳರನ್ನು ಜಯಿಸಿದರು. ಯಾವ ಮಹಾನುಭಾವರು ಇವನಲ್ಲಿ ಪ್ರೀತಿಯನ್ನು ಮಾಡುವರೋ ಅವರನ್ನು ಶತ್ರುಗಳು ಜಯಿಸುವುದಿಲ್ಲ. ಆದುದರಿಂದ ನಿನ್ನ ಮಗನು ಕಾಂತಿಯಿಂದಲೂ ಕೀರ್ತಿಯಿಂದಲೂ ಸಾಮರ್ಥ್ಯದಿಂದಲೂ ಎಲ್ಲಾ ಗುಣಗಳಿಂದಲೂ ನಾರಾಯಣನಿಗೆ ಸಮಾನನು. ಇವನನ್ನು ಚೆನ್ನಾಗಿ ರಕ್ಷಣೆ ಮಾಡು' ಎಂದು ಹೇಳಿ ಗರ್ಗಾಚಾರ್ಯರು ತನ್ನ ಮನೆಗೆ ಹೋಗಲು ನಂದಗೋಪನು ಸಂತೋಷವುಳ್ಳವನಾಗಿ ತಾನು ಕೃತಾರ್ಥನಾದೆನೆಂದು ತಿಳಿದುಕೊಂಡನು.



# ಕೃಷ್ಣನ ಬಾಲಕ್ರೀಡೆಗಳು [1]

ಸ್ವಲ್ಪ ಸಮಯವಾಗಲು ಕೃಷ್ಣಬಲರಾಮರು ಅಂಬೆ ಕಾಲು ಹಾಕುತ್ತಾ ಸಂಚರಿಸತೊಡಗಿದರು. ಅವರಿಬ್ಬರೂ ಕಾಲನ್ನು ಸೆಳೆಯುತ್ತಾ ಅಂಬೆಕಾಲು ಹಾಕುತ್ತಾ ಗೆಜ್ಜೆಗಳ ಶಬ್ದದಿಂದ ಮನೋಹರವಾದ ಗೋಕುಲದಲ್ಲಿರುವ ಕೆಸರಿನಲ್ಲಿ ಸಂಚರಿಸುತ್ತಾ ಗೆಜ್ಜೆಶಬ್ದಗಳಿಂದ ಸಂತೋಷಯುಕ್ತವಾದ ಮನಸ್ಸುಳ್ಳವರಾಗಿ ಭಯಪಟ್ಟಂತೆಯೂ ತೋರಿಸುತ್ತಾ ತಾಯಿಯರ ಸಮೀಪಕ್ಕೆ ಬರುತ್ತಿದ್ದರು. ತಾಯಿಯರು ದಯೆಯಿಂದ ಸ್ತನಗಳಲ್ಲಿ ಹಾಲನ್ನು ಸುರಿಸುವವರಾಗಿ ಮೈಯೆಲ್ಲಾ ಕೆಸರನ್ನು ಮಾಡಿಕೊಂಡು ಸುಂದರವಾಗಿರುವ ಕೃಷ್ಣಬಲರಾಮರನ್ನು ಕೈಗಳಿಂದ ಎತ್ತಿ ಸ್ತನವನ್ನು ಕೊಟ್ಟು ಸ್ತನ್ಯಪಾನ ಮಾಡುತ್ತಿರುವ ಮಕ್ಕಳ ಮನೋಹರವಾದ ಮಂದಹಾಸದಿಂದ ಸ್ವಲ್ಪವಾಗಿ ಕಾಣಿಸುವ ಚಿಕ್ಕಚಿಕ್ಕ ಹಲ್ಲುಗಳ ಮುಖವನ್ನು ನೋಡಿ ಸಂತೋಷಪಟ್ಟರು. ಆಮೇಲೆ ಸ್ವಲ್ಪ ದೊಡ್ಡವರಾದ ಮೇಲೆ ಮನೋಹರಗಳಾದ ಬಾಲಕ್ರೀಡೆಗಳುಳ್ಳವರಾಗಿ ಗೋಕುಲಮಧ್ಯದಲ್ಲಿ ಬಂದವರಾಗಿ ದನದ ಕರುಗಳ ಬಾಲವನ್ನು ಹಿಡಿದು ಅಲ್ಲಿ ಇಲ್ಲಿ ಸಂಚರಿಸುತ್ತಿರುವ ಕೃಷ್ಣಬಲರಾಮರನ್ನು ನೋಡಿ ಗೋಪಸ್ತ್ರೀಯರು ನಗುತ್ತಾ ಮನೆಯ ಕೆಲಸವೆಲ್ಲವನ್ನು ಮರೆತುಬಿಡುತ್ತಿದ್ದರು.

ಆಮೇಲೆ ಯಶೋದೆ ಮೊದಲಾದವರು ಆಟವಾಡುತ್ತಿರುವ ಕೃಷ್ಣ ಬಲರಾಮರು ದನಗಳು ನಾಯಿ ಮೊದಲಾದ ಪ್ರಾಣಿಗಳು ಸರ್ಪಗಳು ನೀರು ಪಕ್ಷಿಗಳು ಮುಳ್ಳುಗಳು ಇತ್ಯಾದಿಗಳನ್ನು ಹಿಡಿಯಲಿಕ್ಕೆ ಹೋಗದಂತೆ ತಡೆಯಲಿಕ್ಕೂ ಮನೆಯ ಕೆಲಸವನ್ನು ಮಾಡಲಿಕ್ಕೂ ಸಾಧ್ಯವಾಗದೆ ಏನು ಮಾಡಲಿ ಎಂದು ಯೋಚಿಸುತ್ತಿದ್ದರು. ಸ್ವಲ್ಪಸಮಯವಾಗಲು ಕೃಷ್ಣಬಲರಾಮದೇವರು ಗೋಕುಲದಲ್ಲಿ ನಡೆಯಲಿಕ್ಕೆ ಆರಂಭಿಸಿದರು. ಒಂದು ದಿನದಲ್ಲಿ ಗೋಪಸ್ತ್ರೀಯರು ಬಂದು ತಾಯಿಯಾದ ಯಶೋದೆಯು ಕೇಳುವಂತೆ ಕೃಷ್ಣನ ಬಾಲಚೇಷ್ಟೆಗಳನ್ನು ಹೇಳಿದರು. ''ಅಮ್ಮ ಯಶೋದೆ! ಕೃಷ್ಣನು ಅವೇಳೆಯಲ್ಲಿ ಬಂದು ಕರುಗಳನ್ನು ಬಿಚ್ಚಿಬಿಡುವನು. ನಾವು ಕೂಗಿಕೊಂಡರೆ ನಗುವನು. ರುಚಿಕರಗಳಾದ ಹಾಲುಮೊಸರು ಇತ್ಯಾದಿಗಳನ್ನು ಉಪಾಯದಿಂದ ಕದ್ದುತಿನ್ನುವನು. ಹಾಲು ಮೊಸರು ಇತ್ಯಾದಿಗಳನ್ನು ಬೆಕ್ಕುಗಳಿಗೆ ಕೊಡುವನು. ಹಾಲೂ ಮೊಸರೂ ಸಿಗದಿದ್ದರೆ ಪಾತ್ರೆಯನ್ನು ಒಡೆದು ಹಾಕುವನು. ಒಂದೂ ಇಲ್ಲದಿದ್ದರೆ ಕೋಪಿಸಿಕೊಂಡು ಮಕ್ಕಳನ್ನು ಅಳುವಂತೆ ಮಾಡಿ

---

1. ಭಾ. X-9-10 ಮತ್ತು ಮ.ತಾ.ನಿ. ಅ–13

ಓಡಿಹೋಗುವನು. ಹಾಲುಮೊಸರಿನ ಪಾತ್ರೆಗಳು ಕೈಗೆ ಸಿಗದಿದ್ದರೆ ಕೆಳಗೆ ಒರಳನ್ನೋ ಹಲಿಗೆಯನ್ನೋ ಇಟ್ಟು ತೆಗೆಯುವನು. ಅಥವಾ ನೆಲುವಿನಲ್ಲಿರುವ ಹಾಲುಮೊಸರು ಗಳ ಪಾತ್ರೆಗಳಲ್ಲಿ ಒಡಕು ಮಾಡಿ ಸೋರುವ ಹಾಲುಮೊಸರನ್ನು ಸ್ವೀಕರಿಸುವನು. ನಾವು ಮನೆಯ ಕೆಲಸದಲ್ಲಿ ಆಸಕ್ತರಾಗಿರುವಾಗ ಕತ್ತಲೆಯಿಂದ ಕೂಡಿದ ಮನೆಯಲ್ಲಿ ರತ್ನಗಳನ್ನು ಧರಿಸಿದ ತನ್ನ ದೇಹದಿಂದಲೇ ಪ್ರಕಾಶವನ್ನು ಉಂಟುಮಾಡಿ ಪ್ರವೇಶಿಸುವನು. ಧೈರ್ಯದಿಂದ ಮನೆಯೊಳಗೆ ಪ್ರವೇಶಿಸುವನು. ಹೊಸ್ತಿಲಿನಲ್ಲಿ ಮಲಮೂತ್ರ ವಿಸರ್ಜನ ಮಾಡುವನು. ನಾನಾ ಉಪಾಯಗಳಿಂದ ಕಳ್ಳತನವನ್ನು ಮಾಡಿ ಸಂಭಾವಿತನಂತೆ ಕೂತಿರುವನು'' ಇತ್ಯಾದಿರೀತಿಯಾಗಿ ಗೋಪಿಯರು ಕೃಷ್ಣನ ದೂರನ್ನು ಹೇಳುತ್ತಿರಲು ಕೃಷ್ಣನು ಭಯಪಟ್ಟಂತೆ ಕಾಣಿಸುತ್ತಿದ್ದನು. ಅವನ ಮುಖವನ್ನು ನೋಡುತ್ತಾ ಗೋಪಿಯರು ದೂರನ್ನು ಹೇಳುತ್ತಿದ್ದರು. ಅದನ್ನೆಲ್ಲಾ ಕೇಳಿ ಯಶೋದೆಗೆ ನಗುಬಂತಲ್ಲದೆ ಕೃಷ್ಣನನ್ನು ಗದರಿಸಬೇಕೆಂದು ತೋರಲಿಲ್ಲ.

ಒಂದು ದಿನದಲ್ಲಿ ಬಲರಾಮಾದಿ ಗೋಪಬಾಲಕರು ಬಂದು ತಾಯಿಯೊಡನೆ 'ಕೃಷ್ಣನು ಮಣ್ಣನ್ನು ತಿಂದನು' ಎಂದು ತಿಳಿಸಿದರು. ಆಗ ಯಶೋದೆಯು ಕೃಷ್ಣನಿಗೆ ಹಿತವನ್ನು ಬಯಸುವವಳಾಗಿ ಕೃಷ್ಣನ ಕೈಯನ್ನು ಹಿಡಿದು ಭಯವುಳ್ಳವಳಂತೆ ನಟಿಸುವ ಅವನೊಡನೆ 'ಯಾಕೋ ಮಣ್ಣನ್ನು ತಿಂದವನಾದಿ. ನಿನ್ನ ಸ್ನೇಹಿತರೆಲ್ಲರೂ ಹೇಳುತ್ತಿರುವರು. ನಿನ್ನ ಅಣ್ಣನು ಹೇಳುವನಲ್ಲಾ!' ಎಂದು ಕೇಳಿದಳು. ಅದಕ್ಕೆ ಕೃಷ್ಣನು 'ಅಮ್ಮ! ನಾನು ಮಣ್ಣನ್ನು ತಿನ್ನಲಿಲ್ಲ. ಎಲ್ಲರೂ ಸುಳ್ಳು ಹೇಳುತ್ತಿರುವರು. ಅವರು ಸತ್ಯವನ್ನು ಹೇಳುವರೆಂದು ನಂಬಿಕೆಯಿರುವುದಾದರೆ ನಾನು ಬಾಯಿಯನ್ನು ತೆರೆಯುವೆನು. ಪ್ರತ್ಯಕ್ಷವಾಗಿ ನೋಡಿ' ಎಂದು ಹೇಳಿದನು. ಅದಕ್ಕೆ 'ಸರಿ. ಹಾಗಾದರೆ ಬಾಯಿಯನ್ನು ತೆರೆ' ಎಂದು ಹೇಳಲು ಅವ್ಯಾಹತ ಸಾಮರ್ಥ್ಯವುಳ್ಳ ಬಾಲಕನಂತೆ ನಟಿಸುತ್ತಿದ್ದ ಶ್ರೀಕೃಷ್ಣನು ಬಾಯಿಯನ್ನು ತೆರೆದನು. ಯಶೋದೆಯು ಕೃಷ್ಣನ ಬಾಯಿಯಲ್ಲಿ ಸ್ಥಾವರಜಂಗಮ ಪ್ರಾಣಿಗಳನ್ನು ಆಕಾಶವನ್ನು ದಿಕ್ಕುಗಳನ್ನು ಪರ್ವತಗಳನ್ನೂ ದ್ವೀಪ ಸಮುದ್ರ ಇತ್ಯಾದಿ ಸಮಸ್ತವನ್ನು ನೋಡಿದಳು. ಮಗನ ಬಾಯಿಯೊಳಗೆ ವಿಚಿತ್ರವಾದ ಸಮಸ್ತ ಜಗತ್ತನ್ನು ಗೋಕುಲವನ್ನು ತನ್ನನ್ನೂ ನೋಡಿ ಭಯವುಳ್ಳವಳಾದಳು. 'ಇದೇನು ಸ್ವಪ್ನವೋ? ದೇವರ ಮಾಯೆಯೋ? ಅಥವಾ ನನ್ನ ಬುದ್ಧಿಭ್ರಮವೋ? ಅಥವಾ ನನ್ನ ಮಗುವಿನ ಸ್ವಾಭಾವಿಕ ಸಾಮರ್ಥ್ಯವೋ! ಬ್ರಹ್ಮಾದಿಗಳಿಂದಲೂ ತಿಳಿಯಲಿಕ್ಕೆ ಅಶಕ್ಯವಾದ ಮಹಿಮೆಯುಳ್ಳ ಭಗವಂತನನ್ನೇ ಮರೆಹೊಂದುವೆನು' ಎಂದು ಹೇಳಿದಳು. ಹೀಗೆ ಪರಮಾತ್ಮನು ತನ್ನನ್ನು ಲೋಕದ

ಮಗುವಿನಂತೆ ಇರುವ ಮಗುವೆಂದು ತಿಳಿದುಕೊಂಡಿದ್ದ ಯಶೋದೆಗೆ ಬಾಯಿಯಲ್ಲಿ ಜಗತ್ತನ್ನು ತೋರಿಸಿ ಆಮೇಲೆ ಅವಳು ತತ್ತ್ವವನ್ನು ತಿಳಿದವಳಾಗಲು ಪರಮಾತ್ಮನು ಪ್ರಜಾಸ್ನೇಹರೂಪವಾದ ವೈಷ್ಣವಮಾಯೆಯನ್ನು ಬೀರಿದನು. ಆಗಲೇ ಯಶೋದೆಗೆ ಎಲ್ಲವೂ ಮರೆತುಹೋಯಿತು. ಕೃಷ್ಣನನ್ನು ತೊಡೆಯಲ್ಲಿ ಇಟ್ಟುಕೊಂಡು ಪೂರ್ವದಂತೆಯೇ ಮಗುವೆಂಬ ಸ್ನೇಹವುಳ್ಳವನಾಗಿದ್ದಳು. ಮೂರುವೇದಗಳಿಂದಲೂ ಉಪನಿಷತ್ತುಗಳಿಂದಲೂ ಸ್ತೋತ್ರ ಮಾಡಲ್ಪಡುವ ಮಹಿಮೆಯುಳ್ಳ ಆ ಭಗವಂತನನ್ನು ಮಗನೆಂದು ತಿಳಿದುಕೊಂಡಳು.

ಈರೀತಿಯಾಗಿ ಶುಕಾಚಾರ್ಯರು ಪರೀಕ್ಷಿದ್ರಾಜನೊಡನೆ ಹೇಳುತ್ತಿರಲು ಪರೀಕ್ಷದ್ರಾಜನು ಅವರೊಡನೆ 'ಸ್ವಾಮಿ! ನಂದಗೋಪನು ಏನು ಪುಣ್ಯವನ್ನು ಮಾಡಿರುವನು? ಕೃಷ್ಣಪರಮಾತ್ಮನಿಗೆ ಸ್ತನಪಾನ ಮಾಡಿಸಿದ ಯಶೋದೆಯು ಏನು ಪುಣ್ಯ ಮಾಡಿರುವಳು?' ಎಂದು ಕೇಳಲು ಶುಕಾಚಾರ್ಯರು ಹೇಳಿದರು. ವಸುಗಳಲ್ಲಿ ಶ್ರೇಷ್ಠನಾದ ದ್ರೋಣನು ಧರಾ ಎಂದು ಹೆಸರುಳ್ಳ ತನ್ನ ಹೆಂಡತಿಯಿಂದ ಸಹಿತನಾಗಿ ಬ್ರಹ್ಮದೇವರ ಆಜ್ಞೆಯನ್ನು ನಡಿಸುವವನಾಗಿ ಬ್ರಹ್ಮದೇವರೊಡನೆ 'ಭೂಮಿಯಲ್ಲಿ ಹುಟ್ಟಿರುವ ನಮಗೆ ಪರಮಾತ್ಮನಲ್ಲಿ ಉತ್ತಮವಾದ ಭಕ್ತಿಯುಂಟಾಗಬೇಕು' ಎಂದು ಕೇಳಿಕೊಂಡಿದ್ದನು. ಬ್ರಹ್ಮದೇವರು ಹಾಗೆಯೇ ಆಗಲಿ ಎಂದು ಹೇಳಿದ್ದರು. ತರುವಾಯ ಆ ದ್ರೋಣನೇ ಗೋಕುಲದಲ್ಲಿ ನಂದಗೋಪನಾಗಿ ಹುಟ್ಟಿದನು. ಧರೆಯೇ ಯಶೋದೆಯಾದಳು. ಅದರಿಂದ ಆ ದಂಪತಿಗಳಿಗೆ ಕೃಷ್ಣಪರಮಾತ್ಮನಲ್ಲಿ ಅತ್ಯಂತ ಭಕ್ತಿಯಿದ್ದಿತು. ಕೃಷ್ಣಪರಮಾತ್ಮನು ಬ್ರಹ್ಮದೇವರ ಮಾತನ್ನು ಸತ್ಯವನ್ನಾಗಿ ಮಾಡುವುದಕ್ಕಾಗಿ ಬಲರಾಮದೇವರಿಂದ ಕೂಡಿಕೊಂಡು ಗೋಕುಲದಲ್ಲಿ ವಾಸಮಾಡುತ್ತಾ ತನ್ನ ಕ್ರೀಡೆಯಿಂದ ಅವರಿಗೆ ಪ್ರೀತಿಯನ್ನು ಉಂಟುಮಾಡಿದನು.



# ಕೃಷ್ಣನನ್ನು ಒರಳಿಗೆ ಕಟ್ಟಿದ್ದು [1]

ಒಂದು ದಿವಸದಲ್ಲಿ ಮನೆಯ ದಾಸಿಯರು ಬೇರೆ ಕೆಲಸಗಳಲ್ಲಿ ಆಸಕ್ತರಾಗಿರುವ ಸಮಯದಲ್ಲಿ ಯಶೋದೆಯು ತಾನೇ ಮೊಸರನ್ನು ಕಡೆದಳು. ಯಶೋದೆಯು ಪಟ್ಟೆಸೀರೆಯನ್ನು ಉಟ್ಟಿದ್ದಳು. ಪುತ್ರಸ್ನೇಹದಿಂದ ಕುಚಗಳಲ್ಲಿ ಹಾಲು ಸುರಿಯುತ್ತಿತ್ತು. ಮೊಸರು ಕಡೆಯುವಾಗ ಸ್ತನಗಳು ನಡುಗುತ್ತಿದ್ದವು. ಹಗ್ಗವನ್ನು ಹಿಡಿದು ಸೆಳೆಯುತ್ತಿರುವಾಗ ಬಳೆಗಳು ಚಂಚಲಗಳಾಗಿದ್ದವು. ಮುಖದಲ್ಲಿ ಬೆವರು ಬರುತ್ತಿತ್ತು. ತಲೆಯಲ್ಲಿ ಮುಡಿದುಕೊಂಡಿದ್ದ ಹೂಗಳು ಕೆಳಗೆ ಉದುರುತ್ತಿದ್ದವು. ಹೀಗೆ ಯಶೋದೆಯು ಮೊಸರನ್ನು ಕಡೆಯುತ್ತಿದ್ದಳು.

ಆ ಸಮಯದಲ್ಲಿ ಕೃಷ್ಣನು ಎದ್ದು ಸ್ತನ್ಯಪಾನ ಮಾಡಬೇಕೆಂದು ತಾಯಿಯ ಬಳಿಗೆ ಬಂದು ಪ್ರೀತಿಯನ್ನು ಉಂಟು ಮಾಡುತ್ತಾ ಮೊಸರನ್ನು ಕಡೆಯಬೇಡವೆಂದು ಕಡೆಗೋಲನ್ನು ಹಿಡಿದುಕೊಂಡನು. ಯಶೋದೆಯು ಕೃಷ್ಣನನ್ನು ತೊಡೆಯಲ್ಲಿ ಮಲಗಿಸಿಕೊಂಡು ಸ್ತನವನ್ನು ಕೊಟ್ಟಳು. ಅಷ್ಟರಲ್ಲಿ ಒಲೆಯಲ್ಲಿ ಕಾಯಲಿಕ್ಕೆ ಇಟ್ಟಿದ್ದ ಹಾಲು ಉಕ್ಕಿ ಮೇಲಕ್ಕೆ ಬಂದಿತು. ಆಗ ಯಶೋದೆಯು ಅರ್ಧದಲ್ಲಿಯೇ ಕೃಷ್ಣನನ್ನು ಕೆಳಗೆ ಇಟ್ಟು ಒಲೆಯಿಂದ ಹಾಲನ್ನು ಕೆಳಗೆ ಇಳಿಸಲಿಕ್ಕೆ ಹೋದಳು. ಅಷ್ಟರಲ್ಲಿ ಕೃಷ್ಣನು ಕೋಪದಿಂದ ತುಟಿಯನ್ನು ನಡುಗಿಸುತ್ತಾ ಹಲ್ಲುಗಳಿಂದ ತುಟಿಯನ್ನು ಕಚ್ಚಿಕೊಂಡು ವ್ಯರ್ಥವಾಗಿ ಸುಮ್ಮನೆ ಕಣ್ಣೀರನ್ನು ಸುರಿಸುತ್ತಾ ಮೊಸರಿನ ಪಾತ್ರೆಯನ್ನು ಒಡೆದು ಏಕಾಂತಕ್ಕೆ ಹೋಗಿ ಬೆಣ್ಣೆಯನ್ನು ತಿಂದನು. ಯಶೋದೆಯು ಉಕ್ಕಿಬಂದ ಹಾಲನ್ನು ಕೆಳಗೆ ಇಳಿಸಿ ಕೃಷ್ಣನು ಇದ್ದ ಸ್ಥಳಕ್ಕೆ ಬಂದು ಅಲ್ಲಿ ಒಡೆದು ಬಿದ್ದಿದ್ದ ಮೊಸರಿನ ಪಾತ್ರೆಯನ್ನು ನೋಡಿ, ಕೃಷ್ಣನನ್ನು ಅಲ್ಲಿ ನೋಡದೆ ಅದು ಕೃಷ್ಣನ ಕೆಲಸವೆಂದು ತಿಳಿದುಕೊಂಡಳು.

ಒಂದು ಸ್ಥಳದಲ್ಲಿ ಒರಳಿನ ಮೇಲೆ ಕೂತುಕೊಂಡು ಬೆಕ್ಕಿಗೆ ಬೆಣ್ಣೆಯನ್ನು ಕೊಡುತ್ತಾ ಇದ್ದ ತಾನು ಕದ್ದುಕೊಂಡುಬಂದೆನೆಂದು ಕಣ್ಣುಮುಚ್ಚಿ ತೆರೆಯುತ್ತಿದ್ದ ಕೃಷ್ಣನನ್ನು ನೋಡಿ ಮೆಲ್ಲನೆ ಹಿಂದೆ ಹೋದಳು. ಕೋಲು ಹಿಡಿದುಕೊಂಡು ಬಂದಿರುವ ಯಶೋದೆಯನ್ನು ನೋಡಿ ಶ್ರೀಕೃಷ್ಣನು ಬೇಗನೆ ಒರಳಿನಿಂದ ಕೆಳಗೆ ಹಾರಿ ಭಯವುಳ್ಳವನಂತೆ ತೋರಿಸುತ್ತಾ ಓಡಿದನು. ಯಾವಾತನನ್ನು ತಪಸ್ಸಿನಿಂದ ಪ್ರೇರಿತವಾದ ಯೋಗಿಗಳ ಮನಸ್ಸು ಕೂಡ ತನ್ನ ಶಕ್ತಿಯಿಂದ ಹೊಂದಲಿಕ್ಕೆ

1. ಭಾ. X-10 ಮತ್ತು ಮ.ತಾ.ನಿ. ಅ–13

ಸಮರ್ಥವಾಗಲಾರದೋ ಅಂತಹ ಕೃಷ್ಣನನ್ನು ಹಿಡಿಯುವೆನೆಂದು ಯಶೋದೆಯು ಹಿಂದೆಯೇ ಓಡುತ್ತಿದ್ದಳು. ತರುವಾಯ ವೇಗವನ್ನು ಬಿಟ್ಟು ಕಟಿಯ ಭಾರದಿಂದ ಮೆಲ್ಲನೆ ಹೋಗುತ್ತಾ ವೇಗದಿಂದ ಹೋಗುತ್ತಿದ್ದಾಗ ತಲೆಗಂಟು ಬಿಚ್ಚಿಹೋಗಿ ಹೂಗಳು ಉದುರಿ ಹೋದವಳಾಗಿ ಹೋಗಿ ಕೃಷ್ಣನನ್ನು ಹಿಡಿದಳು. ಯಶೋದೆಯು ಹಿಡಿದ ಕೂಡಲೇ ಅಪರಾಧ ಮಾಡಿದವನಂತೆ ಕೃಷ್ಣನು ಅಳಲಿಕ್ಕೆ ಆರಂಭಿಸಿದನು. ಕಪ್ಪುಹಚ್ಚಿರುವ ಕಣ್ಣನ್ನು ತಿಕ್ಕಿಕೊಂಡನು. ಭಯಪಟ್ಟಂತೆ ಯಶೋದೆಯನ್ನು ನೋಡುತ್ತಿದ್ದನು. ಆಗ ಯಶೋದೆಯು ಕೃಷ್ಣನ ಕೈಯನ್ನು ಹಿಡಿದು ಭಯಪಡಿಸುತ್ತಾ ಗದರಿಸಿದಳು. ಆಮೇಲೆ ಮಗುವಿನ ಮೇಲೆ ಸ್ನೇಹವುಳ್ಳವಳಾದ ಯಶೋದೆಯು ಮಗುವು ಭಯಪಡುವು ದೆಂದು ತಿಳಿದುಕೊಂಡು ಕೋಲನ್ನು ಕೆಳಗೆ ಹಾಕಿ ಕೃಷ್ಣನ ಮಹಿಮೆಯನ್ನು ತಿಳಿಯದೆ ಹಗ್ಗದಿಂದ ಒರಳಿಗೆ ಕಟ್ಟಿಹಾಕಲಿಕ್ಕೆ ಇಚ್ಛಿಸಿದಳು. ಜಗತ್ತಿನಲ್ಲಿ ವ್ಯಾಪ್ತನಾದ ಭಗವಂತನನ್ನು ಸಾಮಾನ್ಯ ಕೂಸನ್ನು ಕಟ್ಟಿಹಾಕುವಂತೆ ಒರಳಿನಲ್ಲಿ ಕಟ್ಟಬೇಕೆಂದು ಯೋಚಿಸಿದಳು. ಕಟ್ಟಲಿಕ್ಕೆ ಆರಂಭಿಸಿದಳು. ಕಟ್ಟುತ್ತಿರುವಾಗ ಹಗ್ಗವು ಎರಡು ಬೆರಳಿನಷ್ಟು ಸಾಲದಾಯಿತು. ಆಗ ಇನ್ನೊಂದು ಹಗ್ಗವನ್ನು ಅದಕ್ಕೆ ಜೋಡಿಸಿ ಕಟ್ಟಿದಳು. ಆಗಲೂ ಎರಡು ಬೆರಳಿನಷ್ಟು ಸಾಲದಾಯಿತು. ಇದೇ ರೀತಿಯಾಗಿ ಮನೆಯಲ್ಲಿ ಇದ್ದ ಎಲ್ಲಾ ಹಗ್ಗಗಳನ್ನು ಜೋಡಿಸಿ ಕಟ್ಟುತ್ತಿದ್ದಳು. ಆದರೂ ಎರಡು ಬೆರಳಿನಷ್ಟು ಸಾಲದಾಯಿತು. ಇದನ್ನು ಎಲ್ಲಾ ಗೋಪಿಯರೂ ನೋಡುತ್ತಾ ನಗುತ್ತಾ ಆಶ್ಚರ್ಯಪಡುತ್ತಿದ್ದರು.

ಶ್ರೀಕೃಷ್ಣನು ತಾಯಿಯಾದ ಯಶೋದೆಯು ಮೈಯೆಲ್ಲ ಬೆವರಿಸಿಕೊಂಡು ತಲೆಬಿಚ್ಚಿಕೊಂಡು ಶ್ರಮಪಡುತ್ತಿರುವುದನ್ನು ನೋಡಿ ಕೃಪೆಯಿಂದ ತಾನೇ ಇಚ್ಛೆಯಿಂದ ಒಂದು ಕರುವನ್ನು ಕಟ್ಟಲಿಕ್ಕೆ ಸಾಕಾಗುವ ಹಗ್ಗದಲ್ಲಿಯೇ ಕಟ್ಟಿಸಿಕೊಂಡನು. ಈರೀತಿ ಯಾಗಿ ಸ್ವತಂತ್ರನಾದ ಭಗವಂತನು ತಾನು ಭಕ್ತರ ವಶನಾಗುವೆನು ಎಂದು ತೋರಿಸಿಕೊಂಡನು. ಈರೀತಿಯಾಗಿ ಶ್ರೀಭಗವಂತನು ಯಶೋದೆಯೇ ಮೊದ ಲಾದ ಗೋಪಿಯರಿಗೆ ತೋರಿಸಿದ ತಾತ್ಕಾಲಿಕ ಕೃಪೆಯನ್ನು ರಮಾಬ್ರಹ್ಮಾದಿಗಳೂ ಹೊಂದಲಿಲ್ಲವೆನ್ನಬಹುದು. ತರುವಾಯ ಯಶೋದೆಯು ಮನೆಯ ಕೆಲಸದಲ್ಲಿ ಆಸಕ್ತಳಾಗಿರಲು ನಾರದರ ಶಾಪದಿಂದ ಎರಡು ಸರಳೀವೃಕ್ಷಗಳಾಗಿ ಇದ್ದ ನಲಕೂಬರ ಮಣಿಗ್ರೀವ ಎಂಬ ಕುಬೇರನ ಮಕ್ಕಳನ್ನು ನೋಡಿದನು.



# ನಲಕೂಬರ ಮಣಿಗ್ರೀವರ ವಿಮೋಚನೆ [1]

ಪೂರ್ವದಲ್ಲಿ ಒಂದು ದಿವಸದಲ್ಲಿ ರುದ್ರದೇವರ ಭೃತ್ಯರಾದ, ದರ್ಪವುಳ್ಳವರಾದ ನಲಕೂಬರ ಮಣಿಗ್ರೀವರು ಗಂಗಾತೀರದಲ್ಲಿ ಮನೋಹರವಾದ ಕೈಲಾಸದ ಉಪವನದಲ್ಲಿ ಮದ್ಯಪಾನವನ್ನು ಮಾಡಿ ಗಾಯನ ಮಾಡುವ ಸ್ತ್ರೀಯರಿಂದ ಕೂಡಿಕೊಂಡು ಪುಷ್ಪಯುಕ್ತವಾದ ವನದಲ್ಲಿ ಸಂಚಾರಮಾಡಿದರು. ತಾವರೆ ಪುಷ್ಪಗಳಿಂದ ಪ್ರಕಾಶಮಾನವಾದ ಗಂಗೆಯಲ್ಲಿ ಇಳಿದು ಯುವತಿಯರಿಂದ ಕೂಡಿಕೊಂಡು ಜಲಕ್ರೀಡೆಯನ್ನು ಮಾಡಿದರು. ಆ ಸಮಯದಲ್ಲಿ ದೈವೇಚ್ಛೆಯಿಂದ ಅಲ್ಲಿಗೆ ನಾರದರು ಬಂದರು. ಅವರನ್ನು ನೋಡಿ ವಸ್ತ್ರರಹಿತರಾಗಿದ್ದ ಹೆಂಗಸರು ಲಜ್ಜಾಉಳ್ಳವರಾಗಿ ಶಾಪಕೊಡುವರೆಂಬ ಭಯವುಳ್ಳವರಾಗಿ ಬೇಗನೇ ಸೀರೆಯನ್ನು ಉಟ್ಟುಕೊಂಡರು. ವಸ್ತ್ರರಹಿತರಾಗಿದ್ದ ನಲಕೂಬರ ಮಣಿಗ್ರೀವರು ಮಾತ್ರ ವಸ್ತ್ರವನ್ನು ಧರಿಸಲಿಲ್ಲ.

ಮದ್ಯಪಾನದಿಂದ ಮತ್ತರಾಗಿ ಶ್ರೀಮದಾಂಧರಾಗಿ ವಸ್ತ್ರವಿಲ್ಲದೆ ನಿಂತಿದ್ದ ಅವರನ್ನು ನೋಡಿ ನಾರದರು ಅವರಿಗೆ ಅನುಗ್ರಹವನ್ನು ಮಾಡಬೇಕೆಂಬ ಅಭಿಪ್ರಾಯದಿಂದಲೇ ಶಾಪವನ್ನು ಕೊಡುವವರಾಗಿ ಈ ಪ್ರಕಾರವಾಗಿ ಹೇಳಿದರು. ''ವಿಷಯವನ್ನು ಸೇವಿಸುವ ಜನರಿಗೆ ಹಣದಿಂದ ಉಂಟಾದ ಮದವೂ ಒಳ್ಳೆಯ ವಂಶದಲ್ಲಿ ಹುಟ್ಟಿರುವೆನೆಂಬ ಮದವೂ ಬುದ್ಧಿಯನ್ನು ಕೆಡಿಸುವುದು. ಈ ಮದದಿಂದಲೇ ಹೆಂಗಸರನ್ನು ಕೆಡಿಸುವರು. ಜೀಜಾಟವನ್ನು ಆಡುವರು. ಮದ್ಯಪಾನ ಮಾಡುವರು. ಇವುಗಳಿಂದಾಗಿ ದಯಾಹೀನರಾಗಿ ಮನೋಜಯರಹಿತರಾಗಿ ನಶ್ವರವಾದ ಈ ದೇಹವನ್ನು ಜರಾಮರಣ ರಹಿತವಾದದ್ದನ್ನಾಗಿ ತಿಳಿಯುವವರಾಗಿ ಪ್ರಾಣಿಗಳನ್ನು ಸಂಹರಿಸುವರು. ಈ ದೇಹವು ಈಗ ದೇವ ಎಂದು ಹೆಸರುಳ್ಳದ್ದಾಗಿದ್ದರೂ ಕೊನೆಗೆ ಸತ್ತಮೇಲೆ ಈ ದೇಹವನ್ನು ಹಾಗೆಯೇ ಬಿಟ್ಟುಬಿಟ್ಟರೆ ಕ್ರಿಮಿಯಾಗುವುದು. ಯಾವ ಪ್ರಾಣಿಗಳಾದರೂ ತಿಂದುಹಾಕಿದರೆ ಮಲವೆನ್ನಿಸುವುದು. ಬೆಂಕಿಯಲ್ಲಿ ಹಾಕಿ ಸುಟ್ಟರೆ ಭಸ್ಮವೆಂದು ಹೆಸರುಳ್ಳದ್ದಾಗುವುದು. ಇಂತಹ ದೇಹಕ್ಕಾಗಿ ಪ್ರಾಣಿಗಳ ದ್ರೋಹವನ್ನು ಮಾಡುವವನು ಯಾವ ಪುರುಷಾರ್ಥವನ್ನು ಹೊಂದುವನು? ಕೇವಲ ನರಕವೇ ಸಿಗುವುದು. ಮತ್ತು ಸರ್ವದಾ ಇರುವ ಕಾರಣ ಭೂತ ಎಂದು ಹೆಸರುಳ್ಳ ಪರಮಾತ್ಮನ ದ್ರೋಹವನ್ನು ಅಂದರೆ ಪರಮಾತ್ಮನಿಗೆ

---

1. ಭಾ. X-10 ಮತ್ತು ಮ.ತಾ.ನಿ. ಅ–13

ಜೀವರಿಂದ ಐಕ್ಯವನ್ನು ಹೇಳೋಣ ರೂಪವಾದ ಹಿಂಸೆಯನ್ನು ಶ್ರುತಿಯಲ್ಲಿ ಹೇಳಿದ ಸರ್ವಜ್ಞತ್ವಾದಿ ಗುಣಗಳನ್ನು ಬಿಟ್ಟು ನಿರ್ಗುಣತ್ವವನ್ನು ಚಿಂತನೆಯನ್ನು ಮಾಡುವುದು ಎಂಬ ಹಿಂಸೆಯನ್ನೂ, ಭಗವಂತನ ಅವತಾರಗಳಿಗೆ ದುಃಖ ಶ್ರಮ ಅಜ್ಞಾನಾದಿ ಕಲ್ಪನೆಯೆಂಬ ಹಿಂಸೆಯನ್ನು ಪ್ರತ್ಯಕ್ಷಾದಿ ಪ್ರಮಾಣಸಿದ್ಧವಾದ ಪ್ರಪಂಚವನ್ನು ಪರಮಾತ್ಮನಲ್ಲಿ ಆರೋಪಿತವಾಗಿದೆ ಎಂದು ಹೇಳೋಣವೆಂಬ ಹಿಂಸೆಯನ್ನು ಯಾರು ಮಾಡುವರೋ ಅವರಿಗೆ ತಮಸ್ಸು ಎಂಬ ನರಕವೇ ಆಗುವುದು. ಈ ದೇಹವು ಅನ್ನಹಾಕಿ ಬೆಳಸಿದ್ದವನದ್ದೋ ಅಥವಾ ತಂದೆಯದ್ದೋ? ಅಥವಾ ತಾಯಿಯದ್ದೋ? ಮಾತಾಮಹನದ್ದೋ? ಅಥವಾ ಒಬ್ಬ ಬಲಿಷ್ಠನದ್ದೋ? ಕ್ರಯಕ್ಕೆ ಪಡೆದರೆ ಅವನದ್ದೋ? ಸತ್ತಮೇಲೆ ಬೆಂಕಿಗೆ ಹಾಕುವ ಕಾರಣ ಬೆಂಕಿಯದ್ದೋ? ಸತ್ತಮೇಲೆ ಹಾಗೆಯೇ ಬಿಟ್ಟರೆ ನಾಯಿಯು ತಿಂದುಹೋಗುವ ಕಾರಣ ನಾಯಿಯದ್ದೋ ಎಂದು ನಾನಾ ವಿಧ ಜನರಿಗೆ ಸೇರಿದ ಪ್ರಕೃತಿಯಿಂದ ಹುಟ್ಟಿ ಅಲ್ಲಿಯೇ ಲಯವನ್ನು ಹೊಂದುವ ಈದೇಹವನ್ನು ಯಾವ ಜ್ಞಾನಿಯಾದವನು ತನ್ನದೆಂದು ತಿಳಿದುಕೊಂಡು ಈದೇಹಕ್ಕಾಗಿ ಪ್ರಾಣಿಗಳನ್ನು ಕೊಲ್ಲುವನು? ಈಗ ದೇವ ಎಂದು ಹೆಸರಿದ್ದರೂ ಕೊನೆಗೆ ಕ್ರಿಮಿಯಾಗಿಯೇ ಮಲವಾಗಿಯೋ ಭಸ್ಮವಾಗಿಯೋ ಆಗುವ ಈ ನಶ್ವರವಾದ ದೇಹವನ್ನು ಶಾಶ್ವತವೆಂದು ತಿಳಿದುಕೊಳ್ಳುವರು.

ಅಯೋಗ್ಯನಾದ ಶ್ರೀಮದಾಂಧನಿಗೆ ದಾರಿದ್ರ್ಯವೇ ಸರಿಯಾದ ಔಷಧವು. ದರಿದ್ರನು ಇತರರನ್ನು ತನ್ನಂತೆಯೇ ನೋಡಿಕೊಳ್ಳುವನು. ಲೋಕದಲ್ಲಿ ಕಾಲಿಗೆ ಮುಳ್ಳುತಾಗಿ ವೇದನೆಯನ್ನು ಅನುಭವಿಸಿದವನು ಇನ್ನೊಬ್ಬರಿಗೂ ಕಾಲಿಗೆ ಮುಳ್ಳುತಾಗಿದರೆ ತನಗಾದಂತೆಯೇ ವೇದನೆಯಾಗುವುದೆಂದು ಅವರಿಗೆ ಕಾಲಿಗೆ ಮುಳ್ಳುತಾಗಬಾರದು ಎಂದು ಯೋಚಿಸುವನು. ಕಾಲಿಗೆ ಮುಳ್ಳುತಾಗದೆ ಇದ್ದವನು ಹಾಗೆ ಇನ್ನೊಬ್ಬರಿಗೆ ಮುಳ್ಳುತಾಗಬಾರದು ಎಂದು ಯೋಚಿಸಲಾರನು. ಏಕೆಂದರೆ ಅವನಿಗೆ ಆ ವೇದನೆಯ ಅನುಭವವೇ ಇರುವುದಿಲ್ಲ. ದರಿದ್ರನಾದವನು ಅಹಂಕಾರ ರಹಿತನಾಗಿರುವನು. ಸರ್ವಮದಗಳಿಂದ ರಹಿತನಾಗಿರುವನು. ಅವನು ದೈವೇಚ್ಛೆಯಿಂದ ಅನುಭವಿಸುವ ಕಷ್ಟವೆಲ್ಲವೂ ತಪಸ್ಸಿನಂತೆ ಆಗುವುದು. ನಿತ್ಯವೂ ಹಸಿವೆಯಿಂದ ಬಳಲುವ ದೇಹವುಳ್ಳ ಅನ್ನವನ್ನು ಅಪೇಕ್ಷಿಸುವ ದರಿದ್ರನಿಗೆ ಇಂದ್ರಿಯಗಳು ದುರ್ಬಲಗಳಾಗುವುವು. ಇನ್ನೊಬ್ಬರನ್ನು ಹಿಂಸಿಸಲಿಕ್ಕೂ ತೋರಲಾರದು. ಅಂತಹ ದರಿದ್ರನಿಗೇ ಸಜ್ಜನರ ಸಹವಾಸವು ಏರ್ಪಡುವುದು.

ಸಜ್ಜನರ ಸಹವಾಸದಿಂದ ವಿಷಯದಲ್ಲಿ ಆಸೆಯು ಹೋಗುವುದು. ಆಮೇಲೆ

ಸಿದ್ಧಿಯು ಏರ್ಪಡುವುದು. ಪರಮಾತ್ಮನ ಪಾದವನ್ನು ಆಶ್ರಯಿಸಿರುವ ಸಾಧುಗಳಿಗೆ ಶ್ರೀಮದಾಂಧರಾದ ಅಯೋಗ್ಯರಿಂದ ಒಂದೂ ಆಗಬೇಕಾಗಿಲ್ಲ. ಆದುದರಿಂದ ನಾನು ಮದ್ಯಪಾನಮಾಡಿ ಮತ್ತರಾದ ಶ್ರೀಮದಾಂಧರಾದ ಸ್ತ್ರೀಯರಲ್ಲಿ ಅತಿ ಆಸಕ್ತರಾದ ಇಂದ್ರಿಯನಿಗ್ರಹರಹಿತರಾದ ಇವರ ಮದವನ್ನು ಪರಿಹರಿಸುವೆನು. ಇವರು ಲೋಕಪಾಲಕನಾದ ಕುಬೇರನ ಮಕ್ಕಳಾಗಿದ್ದರೂ ಅಜ್ಞಾನದಲ್ಲಿ ಮುಳುಗಿದವರಾಗಿ ಮೈಮೇಲೆ ಬಟ್ಟೆಯಿಲ್ಲದಿರುವುದನ್ನು ತಿಳಿಯದಿರುವ ಕಾರಣ ಮರಗಳಾಗಲಿ. ಇನ್ನು ಮುಂದೆ ಇಂತಹ ಜ್ಞಾನವು ಬರಬಾರದು. ಮರಗಳಾಗಿರು ವಾಗಲೂ ನನ್ನ ಅನುಗ್ರಹದಿಂದ ಸ್ಮರಣೆಯಿರುವುದು. ದೇವತೆಗಳ ನೂರುವರ್ಷ ಗಳು ಕಳೆದುಹೋದಮೇಲೆ ಭಗವಂತನ ಸನ್ನಿಧಾನವನ್ನು ಹೊಂದಿ ಸ್ವರ್ಗವನ್ನು ಹೊಂದಲಿ. ಭಗವಂತನ ಭಕ್ತರಾಗಲಿ' ಎಂದು ಶಾಪವನ್ನು ಕೊಟ್ಟು ಬದರಿಕಾಶ್ರಮಕ್ಕೆ ಹೋದರು.

ನಲಕೂಬರ ಮಣಿಗ್ರೀವರು ಸರಳೀವೃಕ್ಷರಾದರು. ಭಗವದ್ಭಕ್ತಶ್ರೇಷ್ಠ ರಾದ ನಾರದರ ಮಾತನ್ನು ಸತ್ಯವನ್ನಾಗಿ ಮಾಡುವುದಕ್ಕಾಗಿ ಶ್ರೀಕೃಷ್ಣಪರಮಾತ್ಮನು ಮೆಲ್ಲನೇ ಆ ಮರಗಳು ಇರುವಲ್ಲಿಗೆ ಹೋದನು. 'ನಾರದರು ತನಗೆ ಬೇಕಾದವರು. ಇವರೂ ನನ್ನ ಭಕ್ತನಾದ ಕುಬೇರನ ಮಕ್ಕಳು. ಆದುದರಿಂದ ನಾರದರು ಹೇಳಿದಂತೆ ಮಾಡುವೆನು' ಎಂದು ಅಭಿಪ್ರಾಯದಿಂದ ರಟ್ಟೆಯಾಗಿ ಬೆಳೆದಿರುವ ಮರಗಳ ಮಧ್ಯದಿಂದ ಹೋದನು. ತಾನು ಪ್ರವೇಶ ಮಾಡುವ ಮಾತ್ರದಿಂದ ಅಡ್ಡವಾಗಿ ಬಿದ್ದ ಒರಳನ್ನು ಸೆಳೆಯಲು ಆ ಮರಗಳು ಮಹಾಶಬ್ದವನ್ನು ಮಾಡಿ ಬಿದ್ದವು. ಆ ಮರಗಳಿಂದ ನಲಕೂಬರ ಮಣಿಗ್ರೀವರು ಬಂದು ಪರಮಾತ್ಮನನ್ನು ಸ್ತೋತ್ರಮಾಡಿ ಅವನಿಂದ ಆಜ್ಞಪ್ತರಾಗಿ ಪ್ರದಕ್ಷಿಣೆ ಬಂದು ಪುನಃ ಪುನಃ ಸ್ತೋತ್ರಮಾಡಿ ಒರಳಿನಲ್ಲಿ ಕಟ್ಟಲ್ಪಟ್ಟಿದ್ದ ಭಗವಂತನೊಡನೆ 'ಹೋಗಿಬರುವೆವು' ಎಂದು ಹೇಳಿ ಹೊರಟುಹೋದರು. ಆ ಮರಗಳಲ್ಲಿ ಇದ್ದ ಧುನಿ ಚಮು ರಾಕ್ಷಸರು ತಮಸ್ಸನ್ನು ಹೊಂದಿದರು.



# ವೃಂದಾವನಕ್ಕೆ ಹೋದದ್ದು [1]

ನಂದಗೋಪನೇ ಮೊದಲಾದ ಗೋಪಾಲರು ಮರಗಳು ಬಿದ್ದ ಶಬ್ದವನ್ನು ಕೇಳಿ ಪಿಡುಗು ಬಿತ್ತೋ ಎಂಬ ಸಂದೇಹದಿಂದ ಓಡಿಬಂದರು. ಭೂಮಿಯಲ್ಲಿ ಬಿದ್ದಿದ್ದ ಆ ಮರಗಳನ್ನು ನೋಡಿ ಆ ಮರಗಳು ಬೀಳಲು ಕಾರಣವನ್ನು ತಿಳಿಯದೆ ಭ್ರಮಿಸಿ ಹೋದರು. ವರಳನ್ನು ಸೆಳೆಯುತ್ತಿದ್ದ ಬಾಲಕನನ್ನು ನೋಡಿ 'ಈ ಮರಗಳು ಹೇಗೆ ಬಿದ್ದವು? ಆಶ್ಚರ್ಯವಾಗಿದೆ' ಎಂದು ಹೇಳಿಕೊಂಡರು. ಅಪಶಕುನವಾಯಿತೆಂದು ಭಯವನ್ನು ಹೊಂದಿದರು. ಅಲ್ಲಿದ್ದ ಹುಡುಗರು ಕೃಷ್ಣನನ್ನು ತೋರಿಸಿ 'ಈ ಬಾಲಕನು ವರಳನ್ನು ಸೆಳೆಯುತ್ತಿರುವಾಗ ಮರಗಳು ಬಿದ್ದವು. ಈ ಮರಗಳಿಂದ ಎರಡು ಪುರುಷರು ಬಂದುದನ್ನು ನೋಡಿದೆವು' ಎಂದು ಹೇಳಿದರು. ಆದರೆ ಗೋಪಾಲರು ಇಷ್ಟು ಚಿಕ್ಕ ಹುಡುಗನಿಂದ ಆ ಮರಗಳನ್ನು ಬೀಳಿಸಲಾಗದೆಂದು ತಿಳಿದುಕೊಂಡು ಅವರ ಮಾತನ್ನು ನಂಬಲಿಲ್ಲ. ವರಳನ್ನು ಸೆಳೆಯುತ್ತಿದ್ದ ಹಗ್ಗದಿಂದ ಕಟ್ಟಲ್ಪಟ್ಟ ಕೃಷ್ಣನನ್ನು ನೋಡಿ ನಂದಗೋಪನು ನಗುತ್ತಾ ಬಿಡಿಸಿದನು. ಶ್ರೀಭಗವಂತನು ಲೋಕದ ಬಾಲಕರಂತೆಯೇ ನಟನೆ ಮಾಡುತ್ತಿದ್ದನು. 'ಕೃಷ್ಣ! ನಿನಗೆ ಹಣ್ಣು ಕೊಡುತ್ತೇನೆ. ಕುಣಿಯೊ' ಎಂದು ಹೇಳಿದರೆ ಕುಣಿಯುತ್ತಿದ್ದನು. ಅವರು ಹೇಳಿದಂತೆ ಹಾಡು ಹೇಳುತ್ತಿದ್ದನು. ಅವರ ಮಾತಿನಂತೆ ಹಲಿಗೆಯನ್ನು ಅಳತೆ ಪಾತ್ರೆಯನ್ನು ಹಾವಿಗೆಯನ್ನು ತಂದುಕೊಡುವನು. ಅವರನ್ನು ಪ್ರೀತಿಪಡಿಸುವುದಕ್ಕಾಗಿ ಕೈಗಳನ್ನು ಮೇಲೆ ತೂಕುವನು. ಶ್ರೀಭಗವಂತನು ಜ್ಞಾನಿಗಳಿಗೆ ತಾನು ಭಕ್ತರ ವಶನಾದವನೆಂದು ತಿಳಿಸುವವನಾಗಿ ತನ್ನ ಬಾಲಚೇಷ್ಟೆಗಳಿಂದ ಗೋಕುಲಕ್ಕೆ ಸಂತೋಷಪಡಿಸುತ್ತಿದ್ದನು.

ವೃದ್ಧರಾದ ಗೋಪಾಲರು ಬೃಹದ್ವನದಲ್ಲಿ ಉತ್ಪಾತಗಳನ್ನು ಅನುಭವಿಸಿ ಒಟ್ಟಿಗೆ ಸೇರಿ ನಾವೆಲ್ಲರೂ ಏನು ಮಾಡಬೇಕೆಂದು ಯೋಚಿಸಿದರು. ಜ್ಞಾನದಿಂದಲೂ ವಯಸ್ಸಿನಿಂದಲೂ ದೊಡ್ಡವನಾದ ದೇಶಕಾಲಾರ್ಥಗಳನ್ನು ತಿಳಿದವನಾದ ರಾಮಕೃಷ್ಣರಿಗೆ ಪ್ರಿಯವನ್ನು ಮಾಡುವವನಾದ ಉಪನಂದ ಎಂದು ಹೆಸರುಳ್ಳ ಗೋಪನು 'ಗೋಕುಲಕ್ಕೆ ಹಿತವನ್ನು ಬಯಸುವ ನಾವು ಇಲ್ಲಿಂದ ಹೊರಟುಹೋಗಬೇಕು. ಇಲ್ಲಿ ಪ್ರಜೆಗಳ ನಾಶಕ್ಕೆ ಕಾರಣವಾದ ಉತ್ಪಾತಗಳು ಉಂಟಾಗುತ್ತಿವೆ. ಮೊದಲು ರಾಕ್ಷಸಿಯಿಂದ ಕೃಷ್ಣನು ತಪ್ಪಿದನು. ದೇವರ ಅನುಗ್ರಹದಿಂದ ಅವನ ಮೇಲೆ ಬಂಡಿಯೂ ಬೀಳಲಿಲ್ಲ. ಸುಳಿಗಾಳಿಯ ರೂಪವುಳ್ಳ

---

1. ಭಾ. X-12 ಮತ್ತು ಮ.ತಾ.ನಿ. ಅ–13

ದೈತ್ಯನು ಆಕಾಶದಲ್ಲಿ ಎತ್ತಿಕೊಂಡು ಹೋಗಿ ಕಲ್ಲಿನ ಮೇಲೆ ಬಿದ್ದನು. ಆಗ ದೇವತೆಗಳೇ ಕೃಷ್ಣನನ್ನು ರಕ್ಷಿಸಿದರು. ಇಷ್ಟು ದೊಡ್ಡ ಮರಗಳು ಎರಡು ಬೀಳುವಾಗ ಕೃಷ್ಣನಾಗಲೀ ಇತರ ಬಾಲಕರಾಗಲೀ ಮರದ ಕೆಳಗೆ ಬಿದ್ದು ಸಾಯದೆ ಇದ್ದದ್ದೂ ಭಗವಂತನ ರಕ್ಷಣೆಯು. ಇನ್ನೂ ಹೆಚ್ಚಾದ ಅರಿಷ್ಟಗಳು ಗೋಕುಲಕ್ಕೆ ಬರುವ ಮೊದಲೇ ನಾವು ಬಾಲಕರನ್ನು ಕರೆದುಕೊಂಡು ಇಲ್ಲಿಂದ ಹೊರಟುಹೋಗುವ. ವೃಂದಾವನವೆಂಬ ವನವಿದೆ. ಅದು ಪಶುಗಳಿಗೆ ಹಿತಕರವಾಗಿದೆ. ಹೊಸದಾಗಿದೆ. ಗೋಪರಿಗೂ ಗೋಪಿಯರಿಗೂ ಗೋವುಗಳಿಗೂ ಸೇವಿಸಲಿಕ್ಕೆ ಯೋಗ್ಯವಾಗಿದೆ. ಬೆಟ್ಟದಿಂದಲೂ ಹುಲ್ಲುಗಳಿಂದಲೂ ಯುಕ್ತವಾಗಿದೆ. ಆದುದರಿಂದ ನಾವು ಇಲ್ಲಿಂದ ಬೇಗನೇ ಹೋಗುವ. ಬೇಗನೆ ಬಂಡಿಗಳನ್ನು ಕಟ್ಟಿರಿ. ಗೋವುಗಳು ಮುಂದೆ ಹೋಗಲಿ' ಎಂದು ಹೇಳಿದರು. ಆ ಮಾತನ್ನು ಕೇಳಿ ನಂದಗೋಪನೇ ಮೊದಲಾದವರು ಉಪನಂದನ ಮಾತನ್ನು ಅಂಗೀಕರಿಸಿ ಮನೆಗೆ ಹೋದರು.

ನದೀತೀರಕ್ಕೆ ಹೋಗಿ ಬಾಲಕರೊಡನೆ ಆಡುತ್ತಿದ್ದ ಕೃಷ್ಣನನ್ನು ಬಲರಾಮನನ್ನು ರೋಹಿಣಿಯು ಕೂಗಿದಳು. ತಾನು ಎಷ್ಟು ಕೂಗಿದರೂ ಬರದೆ ಇರಲು ರೋಹಿಣಿಯು ಯಶೋದೆಯನ್ನು ಕಳುಹಿಸಿದಳು. ಯಶೋದೆಯು ಹುಡುಗ ರೊಡನೆ ಅತ್ಯಂತ ಆಡುತ್ತಿದ್ದ ಅಣ್ಣನಿಂದ ಸಹಿತನಾದ ಕೃಷ್ಣನನ್ನು ನೋಡಿ ಕೂಗಿದಳು. 'ಕೃಷ್ಣ ಕೃಷ್ಣ! ಬಾ ಸ್ತನವನ್ನು ಪಾನಮಾಡು. ಆಟವಾಡಿದ್ದು ಸಾಕು. ಒಳ್ಳೇ ಹಸಿದಿರುವಿ. ಊಟಮಾಡು. ರಾಮ! ನೀನೂ ತಮ್ಮನಿಂದ ಸಹಿತನಾಗಿ ಬಾ. ಬೆಳಿಗ್ಗೇ ಊಟಮಾಡಿರುವಿ. ಆಟವಾಡಿ ಶ್ರಮಪಟ್ಟಿರುವಿ. ಯಜಮಾನರು ಊಟ ಮಾಡಲಿಕ್ಕೆ ನಿಮಗಾಗಿ ಕಾದಿರುವರು. ಬನ್ನಿರಿ. ನಮಗೆ ಪ್ರಿಯವನ್ನು ಮಾಡಿರಿ. ಹುಡುಗರೇ! ನೀವು ಮನೆಗೆ ಹೋಗಿರಿ. ಕೃಷ್ಣ! ನಿನಗೆ ಈದಿನದಲ್ಲಿ ಜನ್ಮನಕ್ಷತ್ರವು. ಬ್ರಾಹ್ಮಣರಿಗೆ ಗೋವುಗಳನ್ನು ದಾನಮಾಡು. ಮೈಯೆಲ್ಲಾ ಧೂಳಿ ಹಿಡಿದಿರುವುದು. ಮಂಗಳಸ್ನಾನವನ್ನು ಮಾಡು. ತಾಯಿಯಂದಿರಿಂದ ಸ್ನಾನಮಾಡಿಸಿ ಅಲಂಕೃತರಾದ ಮಿತ್ರರನ್ನು ನೋಡು. ನೀನೂ ಸ್ನಾನ ಮಾಡು. ಊಟ ಮಾಡು. ಆಮೇಲೆ ಅಲಂಕಾರಮಾಡಿಕೊಂಡು ಆಟವಾಡು' ಈರೀತಿಯಲ್ಲಿ ಯಶೋದೆಯು ಸರ್ವೋತ್ತಮನಾದ ಭಗವಂತನನ್ನು ಮಗನೆಂದು ತಿಳಿದುಕೊಂಡು ಸ್ನೇಹವುಳ್ಳವಳಾಗಿ ಬಲರಾಮನಿಂದ ಸಹಿತನಾದ ಕೃಷ್ಣನ ಕೈಯಲ್ಲಿ ಹಿಡಿದುಕೊಂಡು ಮನೆಗೆ ಕರೆದುಕೊಂಡು ಹೋಗಿ ಭೋಜನಾದಿಗಳನ್ನು ಮಾಡಿಸಿದಳು.

ಆಸಮಯದಲ್ಲಿ ಕೃಷ್ಣ ಪರಮಾತ್ಮನು ನಂದಗೋಪಾದಿಗಳಿಗೆ ವೃಂದಾವನಕ್ಕೆ

ಹೋಗಲು ವಿಶೇಷ ಬುದ್ಧಿಯನ್ನು ಉಂಟುಮಾಡಲಿಕ್ಕಾಗಿ ತನ್ನ ರೋಮಕೂಪಗಳಿಂದ ತೋಳುಗಳನ್ನು ಸೃಷ್ಟಿಮಾಡಿದನು. ಅನೇಕ ಕೋಟಿ ಸಂಖ್ಯಾವುಳ್ಳ ಅವುಗಳಿಂದ ಪೀಡಿಸಲ್ಪಟ್ಟವರಾಗಿ ಅಲ್ಲಿಂದ ಹೋಗಲು ಇಚ್ಛಿಸಿದರು. ನಂದಗೋಪನು ಎಲ್ಲಾ ಗೋಪಾಲರನ್ನು ಕರೆದು 'ನಾಳೆ ಇಲ್ಲಿಂದ ವೃಂದಾವನಕ್ಕೆ ಹೋಗುವ ಸಿದ್ಧರಾಗಿ' ಎಂದು ಹೇಳಿದನು. ಅದನ್ನು ಕೇಳಿ ಗೋಪಾಲರು ಏಕಬುದ್ಧಿಯುಳ್ಳವರಾಗಿ 'ಸರಿಸರಿ' ಎಂದು ಹೇಳುವವರಾಗಿ ಬಂಡಿಗಳನ್ನು ಕಟ್ಟಿ ಮುದುಕರನ್ನು ಹುಡುಗರನ್ನು ಹೆಂಗಸರನ್ನು ಸರ್ವಪದಾರ್ಥಗಳನ್ನು ಬಂಡಿಯಲ್ಲಿ ಇಟ್ಟುಕೊಂಡು ಗೋಪಾಲರು ಧನುಸ್ಸನ್ನು ಹಿಡಿದುಕೊಂಡು ಗೋವುಗಳನ್ನು ಮುಂದೆ ಮಾಡಿಕೊಂಡು ಕೊಂಬುವಾದ್ಯಗಳನ್ನು ಊದುತ್ತಾ ಇತರ ವಾದ್ಯಘೋಷಗಳಿಂದ, ಪುರೋಹಿತರಿಂದ ಸಹಿತರಾಗಿ ಹೊರಟುಹೋದರು. ಗೋಪಸ್ತ್ರೀಯರು ಬಂಡಿಯಲ್ಲಿ ಕೂತುಕೊಂಡು ಪ್ರೀತಿಯಿಂದ ಕೃಷ್ಣಪರಮಾತ್ಮನ ಲೀಲೆಯನ್ನು ಹಾಡನ್ನಾಗಿ ಹೇಳಿದರು. ಯಶೋದಾ ರೋಹಿಣಿಯರು ಕೃಷ್ಣಬಲರಾಮರಿಂದ ಕೂಡಿಕೊಂಡು ಒಂದೇ ಬಂಡಿಯಲ್ಲಿ ಕೂತಿದ್ದರು. ತರುವಾಯ ವೃಂದಾವನವನ್ನು ಪ್ರವೇಶಿಸಿ ಅಲ್ಲಿ ಅರ್ಧಚಂದ್ರಾಕಾರವಾಗಿ ಬಂಡಿಗಳನ್ನು ನಿಲ್ಲಿಸಿ ವಾಸಮಾಡಲಿಕ್ಕೆ ಸರಿಮಾಡಿಕೊಂಡರು. ವೃಂದಾವನವನ್ನು ಗೋವರ್ಧನ ಪರ್ವತವನ್ನು ಯಮುನಾತೀರವನ್ನು ನೋಡಿ ಕೃಷ್ಣಬಲರಾಮರಿಗೆ ಉತ್ತಮವಾದ ಪ್ರೀತಿಯುಂಟಾಯಿತು. ಈರೀತಿಯಾಗಿ ಬಾಲಚೇಷ್ಟೆಗಳಿಂದ ಅವ್ಯಕ್ತಮಧುರಮಾತುಗಳಿಂದಲೂ ಗೋಪಾಲರಿಗೆ ಪ್ರೀತಿಯನ್ನು ಉಂಟುಮಾಡುತ್ತಾ ಕರುಗಳನ್ನು ಮೇಯಿಸಲಿಕ್ಕೆ ಆರಂಭಿಸಿದರು.



## ವತ್ಸಾಸುರನ ಸಂಹಾರವು [1]

ಕೃಷ್ಣಬಲರಾಮರು ಗೋಕುಲದ ಸಮೀಪದಲ್ಲಿ ಗೋಪಾಲಬಾಲಕರಿಂದ ಸಹಿತರಾಗಿ ನಾನಾ ಆಟ ಸಾಮಗ್ರಿಗಳಿಂದ ಸಹಿತರಾಗಿ ಕರುಗಳನ್ನು ಮೇಯಿಸುತ್ತಿದ್ದರು. ಕೆಲವು ಸಮಯದಲ್ಲಿ ಕೊಳಲನ್ನು ಊದುತ್ತಿದ್ದರು. ಯಂತ್ರಗಳಿಂದ ಕಲ್ಲನ್ನು ತೂಕಿ ಮೇಲೆ ಬಿಸಾಡುತ್ತಿದ್ದರು. ಎತ್ತಿನಂತೆ ಆಡುತ್ತಿದ್ದರು. ಅಡಗಿ ಕೂತುಕೊಳ್ಳುವುದು ಮೊದಲಾದ ಅನೇಕ ಆಟಗಳನ್ನು ಆಡುತ್ತಿದ್ದರು. ಇತರ ಪ್ರಾಣಿಗಳು ಕೂಗುವಂತೆ ಕೂಗುವರು.

---

1. ಭಾ. X-12 ಮತ್ತು ಮ.ತಾ.ನಿ. ಅ-13

ಒಂದು ದಿವಸದಲ್ಲಿ ಯಮುನಾತೀರದಲ್ಲಿ ಕೃಷ್ಣಬಲರಾಮರು ತಮ್ಮ ಮಿತ್ರ ರೊಡನೆ ಕರುಗಳನ್ನು ಮೇಯಿಸುತ್ತಿರಲು ಕರುವಿನ ರೂಪದಿಂದ ವತ್ಸಾಸುರನೆಂಬ ರಾಕ್ಷಸನು ಸಂಹಾರ ಮಾಡಲಿಕ್ಕಾಗಿ ಬಂದನು. ಕೃಷ್ಣಪರಮಾತ್ಮನು ಕರುಗಳ ಮಧ್ಯದಲ್ಲಿ ಸ್ಕಂದನ ವರವುಳ್ಳ ಕರು ರೂಪಿಯಾದ ಆ ದೈತ್ಯನನ್ನು ಬಲರಾಮ ದೇವರಿಗೆ ತೋರಿಸುವವ ನಾಗಿ ಮೆಲ್ಲನೆ ತಿಳಿಯದವನಂತೆ ಅವನ ಸಮೀಪಕ್ಕೆ ಹೋದನು. ಅವನ ಹಿಂದಿನ ಕಾಲುಗಳನ್ನು ಬಾಲವನ್ನು ಹಿಡಿದು ಗರಗರನೆ ತಿರುಗಿಸಿ ಪ್ರಾಣರಹಿತನಾದ ಅವನನ್ನು ಬೆಳೆದ ಹಣ್ಣಿನ ಮರದ ಮೇಲೆ ಬಿಸಾಡಿದನು. ದೊಡ್ಡಶರೀರವುಳ್ಳವರಾಗಿ ಸಾಧುಸಾಧು ಎಂದು ಹೇಳಿದರು. ಮೇಲಿನ ಭಾಗದಲ್ಲಿ ಸಂತುಷ್ಟರಾಗಿ ಪುಷ್ಪದ ಮಳೆಯನ್ನು ಸುರಿಸಿದರು. ಸರ್ವ ಲೋಕಗಳಿಗೂ ಪಾಲಕ ರಾಗಿದ್ದ ಕೃಷ್ಣಬಲರಾಮರು ಕರುಗಳನ್ನು ಮೇಯಿಸುವವರಾಗಿ ಬೆಳಿಗ್ಗೆ ಭೋಜನ ಮಾಡುವವರಾಗಿ ಸಂಚರಿಸುತ್ತಾ ಹೋದರು. ಒಂದು ದಿವಸದಲ್ಲಿ ತಮ್ಮ ತಮ್ಮ ಕರುಗಳಿಗೆ ನೀರನ್ನು ಕುಡಿಸುವುದಕ್ಕಾಗಿ ನೀರಿನ ಸಮೀಪಕ್ಕೆ ಹೋಗಿ ಕರುಗಳಿಗೆ ನೀರನ್ನು ಕುಡಿಸಿ ತಾವೂ ನೀರನ್ನು ಕುಡಿದರು.



## ಬಕಾಸುರನ ವಧವು [1]

ಗೋಪಾಲರು ಕರುಗಳಿಗೆ ನೀರನ್ನು ಕುಡಿಸುತ್ತಿರುವಾಗ ವಜ್ರದಿಂದ ಸೀಳಿಹೋದ ಪರ್ವತದ ಶಿಖರದಂತೆ ಇರುವ ಒಂದು ಪ್ರಾಣಿಯನ್ನು ನೋಡಿ ಭಯಪಟ್ಟರು. ಅದು ಒಬ್ಬ ರಾಕ್ಷಸನು. ಬಕಪಕ್ಷಿಯರೂಪವುಳ್ಳ ಬಕಾಸುರನು ಅವನು ವೇಗದಿಂದ ಬಂದು ಕೃಷ್ಣಪರಮಾತ್ಮನನ್ನು ನುಂಗಿದನು. ಮಹಾಸುರನು ಕೃಷ್ಣನನ್ನು ನುಂಗಿದ್ದನ್ನು ನೋಡಿ ಬಲರಾಮನೇ ಮೊದಲಾದ ಬಾಲಕರು ಕಲ್ಲಿನಂತೆ ನಿಶ್ಚೇಷ್ಟರಾದರು. ರಾಕ್ಷಸನಿಗೆ ಕುತ್ತಿಗೆಯು ಸುಡಲು ಕೃಷ್ಣನನ್ನು ವಾಂತಿಮಾಡಿದನು. ಆಮೇಲೆ ರೋಷದಿಂದ ಕೃಷ್ಣನನ್ನು ಮುಖದಿಂದ ಕುಕ್ಕಲಿಕ್ಕೆ ಬಂದನು. ಆಗ ಭಗವಂತನು ಬಾಲಕರೆಲ್ಲರೂ ನೋಡುತ್ತಿರಲು ಎರಡು ಕೈಗಳಿಂದ ಬಾಯಿಯನ್ನು ಸೀಳಿ ಕೊಂದು ಹಾಕಿದನು. ಅದನ್ನು ನೋಡಿ ದೇವತೆಗಳು ಸಂತೋಷಪಟ್ಟರು. ಅವರು ನಂದನವನದ ಮಲ್ಲಿಗೆ ಮೊದಲಾದ ಹೂಗಳನ್ನು ದೇವರ ಮೇಲೆ ಸುರಿಸಿದರು. ವಾದ್ಯಘೋಷ ಪೂರ್ವಕವಾಗಿ ಸ್ತೋತ್ರ ಮಾಡಿದರು.

1. ಭಾ. X-12 ಮತ್ತು ಮ.ತಾ.ನಿ. ಅ–13

ಅದನ್ನು ನೋಡಿ ಗೋಪಾಲಬಾಲರು ಆಶ್ಚರ್ಯಪಟ್ಟರು. ಬಕಾಸುರನ ಬಾಯಿಯಿಂದ ತಪ್ಪಿಸಿಕೊಂಡು ಬಂದ ಕೃಷ್ಣನನ್ನು ನೋಡಿ ಬಲರಾಮ ಮೊದಲಾದ ಬಾಲಕರು ಆಲಿಂಗನ ಮಾಡುವವರಾಗಿ ಕರು ಗಳನ್ನು ಓಡಿಸಿಕೊಂಡು ಗೋಕುಲಕ್ಕೆ ಬರುವವರಾಗಿ ಆ ವಿಷಯವನ್ನು ಹೇಳಿದರು. ಅದನ್ನು ಕೇಳಿ ಗೋಪಾಲರೂ ಗೋಪಸ್ತ್ರೀಯರೂ ಆಶ್ಚರ್ಯವುಳ್ಳವರಾಗಿ ಸತ್ತವನು ಬದುಕಿಬಂದರೆ ಹೇಗೆ ನೋಡುವರೋ ಹಾಗೆ ಆಸೆಯಿಂದ ನೋಡಿದರು. 'ಆಹಾ! ಮಗುವಿಗೆ ಎಷ್ಟು ಮೃತ್ಯುಗಳು ಬಂದವು? ಆದರೆ ಅವುಗಳಿಗೇ ಅಪ್ರಿಯವು ಉಂಟಾಯಿತು. ಕೃಷ್ಣನನ್ನು ಕೊಲ್ಲಲಿಕ್ಕೆ ಎಂದು ಬಂದು ಪತಂಗಗಳು ದೀಪದಲ್ಲಿ ಬಿದ್ದು ಸಾಯುವಂತೆ ಸಾಯುತ್ತಿರುವುವು. ಬ್ರಹ್ಮಜ್ಞಾನಿಗಳು ಹೇಳುವ ಮಾತು ಯಾವಾಗಲೂ ಸುಳ್ಳಾಗಲಾರದು. ಗರ್ಗಾಚಾರ್ಯರು ಹೇಳಿದ ಮಾತುಗಳೆಲ್ಲವೂ ನಮ್ಮ ಅನುಭವಕ್ಕೆ ಬಂದವು' ಈರೀತಿಯಾಗಿ ನಂದಗೋಪನೇ ಮೊದಲಾದವರು ಸಂತೋಷದಿಂದ ಕೃಷ್ಣಬಲರಾಮರ ಕಥೆಯನ್ನು ಹೇಳುತ್ತಾ ಕ್ರೀಡೆಯನ್ನು ಮಾಡುತ್ತಾ ಸಂಸಾರದುಃಖ ವನ್ನು ತಿಳಿಯಲೇ ಇಲ್ಲ. ಈರೀತಿಯಾಗಿಯೇ ಅಡಗಿಕೂತುಕೊಳ್ಳುವುದು, ಸೇತುವೆಯನ್ನು ಕಟ್ಟುವುದು, ಕಪಿಯಂತೆ ಹಾರುವುದು ಇತ್ಯಾದಿ ಆಟಗಳಿಂದ ಕೌಮಾರ ಅವಸ್ಥೆಯನ್ನು ಕಳೆದರು.



## ಧೇನುಕಾಸುರ ಸಂಹಾರವು [1]

ಒಂದು ದಿನದಲ್ಲಿ ಗೋಪಾಲರೆಲ್ಲರೂ ಆಡುತ್ತಾ ಕೃಷ್ಣಬಲರಾಮರ ಬಳಿಗೆ ಬಂದು ಸೇರಿದರು. ಅವರಲ್ಲಿ ಶ್ರೀದಾಮ ಎಂದು ಹೆಸರುಳ್ಳ ಕೃಷ್ಣಬಲರಾಮರ ಮಿತ್ರನಾದ ಗೋಪಾಲನು ಪ್ರೇಮದಿಂದ 'ಮಹಾಬಾಹುಬಲಶಾಲಿಯಾದ ರಾಮನೇ! ದುಷ್ಟರ ಸಂಹಾರಕನಾದ ಕೃಷ್ಣನೇ! ಇಲ್ಲಿಗೆ ಹತ್ತಿರದಲ್ಲಿಯೇ ಒಂದು ದೊಡ್ಡ ತಾಳೆಮರಗಳ ವನವಿರುವುದು. ಅಲ್ಲಿ ಅನೇಕ ಹಣ್ಣುಗಳು ಬಿದ್ದಿರುವುವು. ಬೀಳುತ್ತಿರುವುವು. ಆದರೆ ದುರಾತ್ಮನಾದ ಧೇನುಕಾಸುರನು ಅಲ್ಲಿಗೆ ಒಬ್ಬರನ್ನು ಹೋಗಲಿಕ್ಕೆ ಬಿಡುವುದಿಲ್ಲ. ಅತಿದುರಾತ್ಮನಾದ ಆ ಅಸುರನು ಕತ್ತೆಯ ರೂಪವುಳ್ಳವನಾಗಿ ತನಗೆ ಸಮಾನ ಬಲವುಳ್ಳ ಅನೇಕ ಅಸುರರಿಂದ ಸಹಿತನಾಗಿ ವಾಸಮಾಡುತ್ತಿರುವನು. ಆ

1. ಭಾ. X-13 ಮತ್ತು ಮ.ತಾ.ನಿ. ಅ–13

ಅಸುರನಿಂದ ಭಯವುಳ್ಳವರಾಗಿ ಮನುಷ್ಯರೂ ಮೃಗಗಳೂ ಅಲ್ಲಿಗೆ ಹೋಗುವುದಿಲ್ಲ. ಪಕ್ಷಿಗಳೂ ಕೂಡ ಅಲ್ಲಿಗೆ ಹೋಗಲಾರವು. ಅಲ್ಲಿ ಇಷ್ಟರವರೆಗೆ ರುಚಿನೋಡದೆ ಇರುವ ಸುವಾಸನೆಯುಳ್ಳ ಹಣ್ಣುಗಳು ಇರುವುವು. ವಾಸನೆಯು ಇಲ್ಲಿಗೆ ಬರುತ್ತಿದೆ. ನಮಗೆ ತುಂಬಾ ಆಸೆಯಾಗುತ್ತಿದೆ' ಎಂದು ಹೇಳಿದನು. ಈರೀತಿಯಾಗಿ ಮಿತ್ರನ ಮಾತನ್ನು ಕೇಳಿ ಮಿತ್ರರಿಗೆ ಪ್ರಿಯವನ್ನು ಮಾಡುವ ಆಸೆಯಿಂದ ನಗುತ್ತಾ ಗೋಪಾಲರಿಂದ ಕೂಡಿಕೊಂಡು ಕೃಷ್ಣಬಲರಾಮರು ತಾಳಿವನಕ್ಕೆ ಹೋದರು.

ತರುವಾಯ ಬಲರಾಮದೇವರು ವನವನ್ನು ಪ್ರವೇಶಿಸಿ ಎರಡು ಕೈಗಳಿಂದ ಮರಗಳನ್ನು ಆಡಿಸಿ ಫಲಗಳನ್ನು ಉದುರಿಸಿದರು. ಹಣ್ಣುಗಳು ಕೆಳಗೆ ಬೀಳುವ ಶಬ್ದವನ್ನು ಕೇಳಿ ಕತ್ತೆಯ ರೂಪವುಳ್ಳ ಅಸುರನು ಭೂಮಿಯನ್ನೇ ನಡುಗಿಸುತ್ತಾ ಓಡಿಬಂದನು. ಆ ರಾಕ್ಷಸನು ಓಡಿಬಂದು ಹಿಂದಿನ ಕಾರ್ಯಗಳಿಂದ ಬಲರಾಮದೇವರನ್ನು ಒದೆದನು. ಕತ್ತೆಯ ಶಬ್ದವನ್ನು ಮಾಡುತ್ತಾ ಬಲರಾಮದೇವರ ಸುತ್ತಲೂ ಸುತ್ತಿದನು. ಪುನಃ ಅವನು ಬಲರಾಮದೇವರ ಹತ್ತಿರ ಬಂದು ಒದೆಯಬೇಕೆಂದು ಹಿಂದೆ ತಿರುಗಿದನು. ಹಿಂದಿನ ಕಾಲುಗಳನ್ನು ಎತ್ತಿದನು. ಆಗ ಬಲರಾಮದೇವರು ಅವನ ಹಿಂದಿನ ಕಾಲುಗಳಲ್ಲಿ ಒಂದನ್ನು ಕೈಯಿಂದ ಹಿಡಿದು ಗರಗರನೆ ತಿರುಗಿಸಿದರು. ಅದರಿಂದಲೇ ಅವನ ಪ್ರಾಣವು ಹೋಯಿತು. ಅವನ ದೇಹವನ್ನು ತಾಳಿಮರದ ಮೇಲೆ ತೂಕಿ ಬಿಸಾಡಿದರು. ಅವನ ದೇಹವು ತಾಗಿ ತಾಳಿಮರವು ಬಿದ್ದಿತು. ಆ ಮರವು ತಾಗಿ ಮತ್ತೊಂದು ಮರವೂ ಅದು ತಾಗಿ ಮತ್ತೊಂದು ಮರವೂ ಹೀಗೆ ಬಹುಮರಗಳು ಕೆಳಗೆ ಬಿದ್ದವು. ಬಲರಾಮದೇವರು ಮೇಲೆ ಬಿಸಾಡಿದ ದೇಹದಿಂದ ತಾಳಿಮರಗಳೆಲ್ಲವೂ ನಡುಗಿ ಹೋದವು.

ತರುವಾಯ ಧೇನುಕಾಸುರನ ಜ್ಞಾತಿಗಳಾದ ಕತ್ತೆಯ ರೂಪವುಳ್ಳ ರಾಕ್ಷಸರು ಕೋಪದಿಂದ ಕೊಲ್ಲಬೇಕೆಂದು ಕೋಪವುಳ್ಳವರಾಗಿ ಕೃಷ್ಣಬಲರಾರ ಬಳಿಗೆ ಬಂದರು. ಕೃಷ್ಣಪರಮಾತ್ಮನೂ ಬಲರಾಮದೇವರೂ ಬಂದವರೆಲ್ಲರನ್ನೂ ಹಿಂದಿನ ಕಾಲುಗಳನ್ನು ಹಿಡಿದು ತಾಳಿಮರದ ಮೇಲೆ ಬಿಸಾಡಿದರು. ನೆಲದಲ್ಲಿ ಹಣ್ಣುಗಳೂ ತುಂಬಿಹೋದವು. ಸತ್ತುಹೋದ ರಾಕ್ಷಸರ ದೇಹಗಳೂ ತುಂಬಿಹೋದವು. ಕೃಷ್ಣಬಲರಾಮರ ಆ ಮಹಾಕಾರ್ಯವನ್ನು ನೋಡಿ ದೇವತೆಗಳೇ ಮೊದಲಾದವರು ಹೂವಿನ ಮಳೆಯನ್ನು ಸುರಿಸಿದರು. ವಾದ್ಯಗಳನ್ನು ಬಾರಿಸಿದರು. ಸ್ತೋತ್ರ ಮಾಡಿದರು. ತರುವಾಯ ಗೋಪಾಲರು ಭಯರಹಿತರಾಗಿ ತಾಳಿಹಣ್ಣುಗಳನ್ನು ತಿಂದರು. ಗೋವುಗಳು ಹುಲ್ಲನ್ನು ತಿನ್ನುವವುಗಳಾದವು. ಶ್ರೀಕೃಷ್ಣಪರಮಾತ್ಮನು

ಗೋಪಾಲರಿಂದ ಸ್ತೋತ್ರಮಾಡಲ್ಪಡುವವನಾಗಿ ಅಣ್ಣನಿಂದ ಸಹಿತನಾಗಿ ಗೋಕುಲಕ್ಕೆ ಹೋದನು. ಆಗ ಗೋಪಸ್ತ್ರೀಯರು ಕೃಷ್ಣಪರಮಾತ್ಮನ ಮುಖವನ್ನು ನೋಡಿ ಹಗಲಲ್ಲಿ ಭಗವಂತನ ವಿಯೋಗದಿಂದ ಉಂಟಾದ ದುಃಖದಿಂದ ರಹಿತರಾದರು. ಆಗ ಯಶೋದಾರೋಹಿಣಿಯರು ಕೃಷ್ಣಬಲರಾಮರಿಗೆ ಉಪಚರಿಸಿದರು. ಕೃಷ್ಣಬಲರಾಮರು ಚೆನ್ನಾಗಿ ಮೈತೊಳೆದುಕೊಂಡು ಸ್ನಾನಮಾಡಿ ವಸ್ತ್ರವನ್ನು ಉಟ್ಟುಕೊಂಡು ಗಂಧವನ್ನು ಹಚ್ಚಿಕೊಂಡು ಪುಷ್ಪಗಳನ್ನು ಧರಿಸಿದವರಾಗಿ ತಾಯಿಯರು ಹಾಕಿದ ರುಚಿಕರವಾದ ಅನ್ನವನ್ನು ಭೋಜನ ಮಾಡಿದವರಾಗಿ ಆದೃತರಾಗಿ ಮೃದುವಾದ ಹಾಸಿಗೆಯಲ್ಲಿ ಮಲಗಿ ಸುಖವಾಗಿ ನಿದ್ರೆ ಮಾಡಿದರು.



## ಕಾಲಿಯಮರ್ದನ [1]

ಈರೀತಿಯಾಗಿ ಶ್ರೀಭಗವಂತನು ಗೋಪಾಲರೊಡನೆ ವಿಹರಿಸುತ್ತಾ ಆರನೇ ವರ್ಷವನ್ನು ಹೊಂದಿದವನಾಗಿ ಸರ್ವಸ್ವಾಮಿಯಾಗಿದ್ದರೂ ಲೋಕದೃಷ್ಟಿಯಿಂದ ಗೋವುಗಳಿಗೆ ಪಾಲಕನಾದನು. ಅಂದರೆ ಗೋವುಗಳನ್ನು ಮೇಯಿಸಲಿಕ್ಕೆ ಆರಂಭಿಸಿದನು. ಒಂದು ದಿವಸದಲ್ಲಿ ಕೃಷ್ಣಪರಮಾತ್ಮನು ಬಲರಾಮದೇವರನ್ನು ಬಿಟ್ಟು ಇತರ ಗೋಪಾಲರೊಡನೆ ಯಮುನಾತೀರದಲ್ಲಿ ವಿಹರಿಸುತ್ತಿದ್ದನು. ಆದಿನದಲ್ಲಿ ಮುಂದೆಬರುವ ದುಃಖವನ್ನು ನೋಡಿ ಗೋಪಾಲರಿಗೆ ಸಮಾಧಾನಪಡಿಸಲಿಕ್ಕೆ ಬಲರಾಮದೇವರನ್ನು ಬಿಟ್ಟುಹೋಗಿದ್ದನು. ತರುವಾಯ ಗೋವುಗಳೂ ಗೋಪಾಲರೂ ಬಿಸಿಲಿನಿಂದ ಪೀಡಿತರಾಗಿ ವಿಷದಿಂದ ದುಷ್ಟವಾದ ನೀರನ್ನು ಕುಡಿದರು. ಎಲ್ಲರೂ ಮೂರ್ಛಿತರಾಗಿ ಬಿದ್ದರು. ಕೃಷ್ಣಪರಮಾತ್ಮನು ಮೂರ್ಛಿತರಾಗಿ ಬಿದ್ದಿದ್ದ ಅವರನ್ನು ನೋಡಿ ಅಮೃತವನ್ನು ಸುರಿಸುವ ದೃಷ್ಟಿಯಿಂದ ಅವರನ್ನು ಬದುಕಿಸಿದನು. ಅವರೆಲ್ಲರೂ ಎದ್ದವರಾಗಿ ಆಶ್ಚರ್ಯವುಳ್ಳವರಾಗಿ ಪರಸ್ಪರವಾಗಿ ನೋಡಿಕೊಂಡು ತಾವು ಸತ್ತವರು ಬದುಕಿದ್ದು ಕೃಷ್ಣನ ಅನುಗ್ರಹದಿಂದ ಎಂದು ತಿಳಿದುಕೊಂಡರು.

ಕೃಷ್ಣಪರಮಾತ್ಮನು ಕಾಲಿಯ ಸರ್ಪನಿಂದ ಯಮುನಾಜಲವು ದೂಷಿತ ವಾಗಿರುವುದನ್ನು ನೋಡಿ ಆ ಸರ್ಪವನ್ನು ಅಲ್ಲಿಂದ ಹೊರಗೆ ಕಳುಹಿಸಿದನು.

---

1. ಭಾ. X-13, 14 ಮತ್ತು ಮ.ತಾ.ನಿ. ಅ-13

ಯಮುನಾನದಿಯಲ್ಲಿ ಕಾಲಿಯನು ವಾಸಮಾಡುವ ಒಂದು ಮಡುವಿತ್ತು. ಅಲ್ಲಿಯ ನೀರು ಯಾವಾಗಲೂ ಕಾಲಿಯನ ವಿಷದಿಂದ ಕುದಿಯುತ್ತಲೇ ಇದ್ದಿತು. ವಿಷದ ವೇಗದಿಂದ ಅಲ್ಲಿ ಮೇಲೆ ಆಕಾಶದಲ್ಲಿ ಹಾರುತ್ತಿದ್ದ ಪಕ್ಷಿಗಳು ಕೆಳಗೆ ಬೀಳುತ್ತಿದ್ದವು. ವಿಷಯುಕ್ತವಾದ ನೀರಿನ ಬಿಂದುಗಳಿಂದ ಸಹಿತವಾದ ಗಾಳಿಯು ತಾಗಿ ನದಿಯತೀರದಲ್ಲಿ ಇದ್ದ ಸ್ಥಾವರ ಜಂಗಮಪ್ರಾಣಿಗಳು ಸಾಯುತ್ತಿದ್ದವು. ಒಂದು ಕದಂಬವೃಕ್ಷದ ಮೇಲೆ ಮಾತ್ರ ಗರುಡದೇವರು ಅಮೃತವನ್ನು ತೆಗೆದುಕೊಂಡು ಹೋಗುವಾಗ ಒಂದು ಬಿಂದು ಬಿದ್ದಿತ್ತಾದ ಕಾರಣ ಆ ಮರವು ಮಾತ್ರ ಬದುಕಿತ್ತು. ದುಷ್ಟರನ್ನು ನಿಗ್ರಹಿಸಲಿಕ್ಕೆ ಅವತರಿಸಿದ ಕೃಷ್ಣಪರಮಾತ್ಮನು ಆ ಕದಂಬಮರದ ಮೇಲೆ ಹತ್ತಿ ಮಧ್ಯಕ್ಕೆ ಗಟ್ಟಿಯಾಗಿ ವಸ್ತ್ರವನ್ನು ಬಿಗಿದುಕೊಂಡು ಅತಿ ವಿಸ್ತರವಾದ ಆ ಮರದಿಂದ ವಿಷಯುಕ್ತವಾದ ನೀರಿನಲ್ಲಿ ಹಾರಿದನು. ಆಗ ನೂರು ಮಾರಿನಷ್ಟು ಎತ್ತರ ನೀರು ಹಾರಿತು.

ಶ್ರೀಕೃಷ್ಣನು ನೀರಿನಲ್ಲಿ ವಿಹರಿಸುತ್ತಿರಲು ಆ ಶಬ್ದವನ್ನು ಕೇಳಿ ಸೈನ್ಯ ಸಹಿತವಾಗಿ ಕಾಲಿಯನು ಕೃಷ್ಣಪರಮಾತ್ಮನ ಬಳಿಗೆ ಬಂದು ರೋಷದಿಂದ ಮರ್ಮಸ್ಥಳದಲ್ಲಿ ಕಚ್ಚಿ ತನ್ನ ದೇಹದಿಂದ ಅವನನ್ನು ಸುತ್ತುಹಾಕಿದನು. ಶ್ರೀಭಗವಂತನು ಭಕ್ತನಾದ ಕಾಲಿಯನ ಅಪರಾಧವನ್ನು ಕ್ಷಮಿಸುವವನಾಗಿ ಸುಮ್ಮನೆ ಇದ್ದನು. ಸರ್ಪದಿಂದ ಸುತ್ತಲ್ಪಟ್ಟವನಾಗಿ ಚೇಷ್ಟಾರಹಿತನಾಗಿ ಇದ್ದ ಕೃಷ್ಣಪರಮಾತ್ಮನನ್ನು ನೋಡಿ ಭಗವಂತನ ಮಿತ್ರರಾದ ಗೋಪಾಲಕರು ಬಹುದುಃಖವನ್ನು ಹೊಂದಿದರು. ದನಗಳೂ, ಎತ್ತುಗಳೂ, ಕರುಗಳೂ, ದುಃಖವುಳ್ಳವುಗಳಾಗಿ, ಭಯವುಳ್ಳವುಗಳಾಗಿ, ಕೃಷ್ಣಪರಮಾತ್ಮನನ್ನೇ ನೋಡುತ್ತಾ ಅಳುತ್ತಾ ನಿಂತುಕೊಂಡರು.

ತರುವಾಯ ಗೋಕುಲದಲ್ಲಿ ಅನೇಕ ಉತ್ಪಾತಗಳು ಕಂಡವು. ಅವುಗಳನ್ನು ನೋಡಿ ನಂದಗೋಪನೇ ಮೊದಲಾದ ಗೋಪಾಲರು ಬಲರಾಮದೇವರನ್ನು ಬಿಟ್ಟು ಕೃಷ್ಣಪರಮಾತ್ಮನು ಗೋವುಗಳನ್ನು ಮೇಯಿಸಲಿಕ್ಕೆ ಹೋಗಿರುವುದನ್ನು ತಿಳಿದು ಆ ದುರ್ನಿಮಿತ್ತಗಳಿಂದ ಕೃಷ್ಣನಿಗೆ ನಾಶವೇ ಉಂಟಾಯಿತೆಂದು ತಿಳಿದುಕೊಂಡರು. ಹುಡುಗರೂ ಮುದುಕರೂ ಹೆಂಗಸರೂ ಎಲ್ಲರೂ ಗೋಕುಲದಲ್ಲಿ ಇರುವರು. ಕೃಷ್ಣನನ್ನು ನೋಡಬೇಕೆಂದು ಆಸೆಯುಳ್ಳವರಾಗಿ ಗೋಕುಲದಿಂದ ಹೊರಟು ಬಂದರು. ಬಲರಾಮದೇವರು ಸಮಾಧಾನಪಡಿಸಿದರೂ ಕೇಳದೆ ಓಡಿಬಂದರು. ಕೃಷ್ಣಪರಮಾತ್ಮನ ಪ್ರಭಾವವನ್ನು ತಿಳಿದು ಬಲರಾಮದೇವರು ಭಯಪಡುತ್ತಿದ್ದ ಅವರನ್ನು ನೋಡಿ ಆಮೇಲೆ ಮಂದಹಾಸವನ್ನು ಬೀರಿ ಒಂದೂ ಮಾತಾಡಲಿಲ್ಲ.

ಅವರು ಕೃಷ್ಣಪರಮಾತ್ಮನ ಹೆಜ್ಜೆಯನ್ನು ನೋಡಿ ಮಾರ್ಗವನ್ನು ತಿಳಿದುಕೊಂಡು ಯಮುನಾತೀರಕ್ಕೆ ಬಂದು ಸೇರಿದರು. ನೀರಿನ ಮಧ್ಯದಲ್ಲಿ ಸರ್ಪಗಳಿಂದ ಸುತ್ತಲ್ಪಡುವವನಾಗಿ ನಿರ್ವ್ಯಾಪಾರನಾಗಿದ್ದ ಕೃಷ್ಣನನ್ನು ತೀರದಲ್ಲಿ ಕರ್ತವ್ಯ ಮೂಢರಾಗಿದ್ದ ಗೋಪಾಲರನ್ನು ಕೂಗುತ್ತಾ ಇದ್ದ ಗೋವುಗಳನ್ನು ನೋಡಿ ತುಂಬಾ ದುಃಖವುಳ್ಳವರಾದರು. ಗೋಪಸ್ತ್ರೀಯರೂ ಗೋಪಾಲರೂ ಎಲ್ಲರೂ ದುಃಖವುಳ್ಳವ ರಾದರು. ಕೃಷ್ಣಪರಮಾತ್ಮನು ಪ್ರಾಣದಂತೆ ಇದ್ದ ನಂದಗೋಪನೇ ಮೊದಲಾದವರು ಮಡುವಿಗೆ ಹಾರಲಿಕ್ಕೆ ಹೋಗುವುದನ್ನು ನೋಡಿ ಕೃಷ್ಣಪರಮಾತ್ಮನ ಪ್ರಭಾವವನ್ನು ತಿಳಿದವರಾದ ಬಲರಾಮದೇವರು ಅವರೆಲ್ಲರನ್ನು ತಡೆದರು.

ತರುವಾಯ ಕೃಷ್ಣಪರಮಾತ್ಮನು ತನ್ನನ್ನೇ ನಂಬಿರುವ ಸ್ತ್ರೀಬಾಲರೇ ಮೊದಲಾದ ಬಹುಜನಭಕ್ತರು ದುಃಖವನ್ನು ಪಡುವುದನ್ನು ನೋಡಿ ತನ್ನ ಭಕ್ತನಾಗಿದ್ದರೂ ಕಾಲಿಯನ್ನು ಮರ್ದನ ಮಾಡಿದನು. ಶ್ರೀಭಗವಂತನು ಕಾಲಿಯನನ್ನು ಸುತ್ತಲೂ ಸುತ್ತುವಂತೆ ಮಾಡಿ ಶ್ರಮವುಳ್ಳ ಅವನ ತಲೆಯ ಮೇಲೆ ಹತ್ತಿ ನರ್ತನ ಮಾಡಿದನು. ಪರಮಾತ್ಮನು ನರ್ತನ ಮಾಡಲಿಕ್ಕೆ ಉದ್ಯುಕ್ತನಾದದ್ದನ್ನು ನೋಡಿ ಗಂಧರ್ವರೂ, ಸಿದ್ಧರೂ, ಮುನಿಗಳೂ, ಚಾರಣರೂ, ದೇವಸ್ತ್ರೀಯರೂ ಪ್ರೀತಿಯಿಂದ ಮೃದಂಗ, ಪಣವ, ಅನೇಕ ವಾದ್ಯಗೀತ ಪುಷ್ಪಗಳು, ಸ್ತೋತ್ರಗಳು ಇವುಗಳನ್ನು ಸಮರ್ಪಿಸಿದರು. ವಿಷದಿಂದ ಕಪ್ಪಾದ ಶಿರಸ್ಸುಳ್ಳ ಆ ಕಾಲಿಯನು ಯಾವ ತಲೆಯನ್ನು ಎತ್ತುವನೋ ಆ ತಲೆಯನ್ನು ಪರಮಾತ್ಮನು ಕಾಲಿನಿಂದ ಮೆಟ್ಟುತ್ತಿದ್ದನು. ತರುವಾಯ ಕಾಲಿಯನ ಬಲವು ಕ್ಷೀಣವಾಗಲು ಬಾಯಿಯಿಂದ ರಕ್ತವನ್ನು ಕಾರಿ ಮೂರ್ಛೆಯನ್ನು ಹೊಂದಿದನು. ಭಗವಂತನು ನರ್ತನ ಮಾಡುತ್ತಿರುವಾಗ ದೇವತೆಗಳು ಪುಷ್ಪಗಳ ಮಳೆಯನ್ನು ಸುರಿಸಿದರು. ಸ್ತೋತ್ರ ಮಾಡಿದರು. ಭಗವಂತ ವಿಚಿತ್ರ ತಾಂಡವದಿಂದ ಶ್ರಮವುಳ್ಳ ಹೆಡೆಯುಳ್ಳವನಾಗಿ ಚರಾಚರ ಪ್ರಪಂಚಕ್ಕೆ ಗುರುವಾದ ನಾರಾಯಣನನ್ನು ಸ್ಮರಿಸಿ ಮನಸ್ಸಿನಿಂದಲೇ ಮರೆಹೊಂದಿದನು.

ಈ ಪ್ರಕಾರವಾಗಿ ಶ್ರಮಪಡುತ್ತಿದ್ದ ಕಾಲಿಯನನ್ನು ನೋಡಿ ಅವನ ಪತ್ನಿಯರು ತುಂಬಾ ದುಃಖವುಳ್ಳವರಾಗಿ ಪೂಜಾಸಾಮಗ್ರಿಗಳನ್ನು ಮುಂದೆ ಇಟ್ಟು ಉದ್ದಕ್ಕೆ ನಮಸ್ಕರಿಸಿದರು. ಕೈಮುಗಿದುಕೊಂಡು ಗಂಡನನ್ನು ಬಿಡಿಸಬೇಕೆಂದು ಮರೆಹೊಂದಿ ದರು. ನಾಗಸ್ತ್ರೀಯರು ಸ್ತೋತ್ರಮಾಡಿ ಪ್ರಾರ್ಥಿಸಿಕೊಳ್ಳಲು ಮೂರ್ಛಿತನಾದ ಕಾಲಿಯನನ್ನು ಮರ್ದನ ಮಾಡುವುದನ್ನು ಬಿಟ್ಟನು. ತರುವಾಯ ಕಾಲಿಯನು ಸ್ವಲ್ಪ ಸಾಮರ್ಥ್ಯವುಳ್ಳವನಾಗಿ ಬಹುಕಷ್ಟದಿಂದ ಶ್ವಾಸವನ್ನು ಬಿಡುತ್ತಾ ಕೈಮುಗಿದುಕೊಂಡು

'ಸ್ವಾಮಿನ್! ನಾವು ಸ್ವಭಾವದಿಂದ ದುಷ್ಟರು. ತಾಮಸರು. ಬಹುಕೋಪವುಳ್ಳವರು. ಜನರಿಗೆ ತಮ್ಮ ಸ್ವಭಾವವನ್ನು ಬಿಡಲಿಕ್ಕೆ ಆಗಲಾರದು. ನಾನಾ ಸ್ವಭಾವವುಳ್ಳ ಪ್ರಾಣಿಗಳನ್ನು ನೀನೇ ಸೃಷ್ಟಿ ಮಾಡಿದವನು. ನಾವು ಸರ್ಪಗಳು ಸ್ವಭಾವದಿಂದಲೇ ಬಹುಕೋಪವುಳ್ಳವರು ನಿನ್ನಿಂದ ಮೋಹಿತರಾಗಿ ನಿನ್ನ ಬಂಧಕಶಕ್ತಿಯನ್ನು ನಾವು ಹೇಗೆ ತಪ್ಪಿಸಿಕೊಳ್ಳುವೆವು? ಭಗವಂತನೇ! ನೀನೇ ಸಮಸ್ತಕ್ಕೂ ಕಾರಣನು. ನನಗೆ ಅನುಗ್ರಹವನ್ನು ಮಾಡಬೇಕೆಂದು ತೋರುತ್ತದೋ ನಿಗ್ರಹವನ್ನು ಮಾಡಬೇಕೆಂದು ತೋರುತ್ತದೋ ಹೇಗೆ ಬೇಕಾದರೂ ಮಾಡು' ಎಂದು ಹೇಳಿಕೊಂಡನು.

ದೇವತಾಕಾರ್ಯಕ್ಕಾಗಿ ಮನುಷ್ಯನಂತೆ ಅವತರಿಸಿದ್ದ ಭಗವಂತನು 'ಸರ್ಪನೇ! ನೀನು ಇಲ್ಲಿ ಇರಬಾರದು. ಜ್ಞಾತಿಗಳನ್ನು ಮಕ್ಕಳನ್ನೂ ಬಂಧುಗಳನ್ನೂ ಕರಕೊಂಡು ಸಮುದ್ರಕ್ಕೆ ಹೋಗು. ಇಲ್ಲಿ ಗೋವುಗಳೂ ಗೋಪಾಲರೂ ನೀರನ್ನು ಕುಡಿಯಬೇಕಾಗಿದೆ. ನಿನ್ನನ್ನು ನಾನು ನಿಗ್ರಹಿಸಿದ್ದನ್ನು ಸ್ಮರಿಸಿಕೊಂಡು ಎರಡು ಸಂಧ್ಯಾಕಾಲದಲ್ಲಿಯೂ ಕೀರ್ತನಮಾಡುವನೋ ಅವನು ನಿಮ್ಮ ಭಯವನ್ನು ಹೊಂದಲಾರನು. ಯಾರು ಈ ಸ್ಥಳದಲ್ಲಿ ಸ್ನಾನಮಾಡಿ ದೇವತೆಗಳನ್ನೂ ಋಷಿಗಳನ್ನೂ ಪಿತೃಗಳನ್ನು ಕುರಿತು ತರ್ಪಣಬಿಡುವನೋ, ಉಪವಾಸಮಾಡಿ ನನ್ನನ್ನು ಪೂಜಿಸುವನೋ ಅವನಿಗೆ ಪಾಪವೆಲ್ಲವೂ ಪರಿಹೃತವಾಗುವುದು. ನೀನು ಯಾವ ಗರುಡನ ಭಯದಿಂದ ರಮಣಕದ್ವೀಪವನ್ನು ಬಿಟ್ಟು ಇಲ್ಲಿಗೆ ಬಂದಿರುವಿಯೋ ಆ ಗರುಡನು ನನ್ನ ಪಾದಚಿಹ್ನೆಯುಳ್ಳ ನಿನ್ನನ್ನು ಇನ್ನು ಮುಂದೆ ತಿನ್ನಲಾರನು' ಎಂದು ಹೇಳಲು ಕಾಲಿಯನೂ ಅವನ ಹೆಂಡತಿಯರೂ ಸಂತೋಷದಿಂದ ಆದರದಿಂದ ಕೃಷ್ಣಪರಮಾತ್ಮನನ್ನು ಪೂಜಿಸಿದರು. ನಾಗರಾಜನಾದ ಕಾಲಿಯನು ದಿವ್ಯವಾದ ವಸ್ತ್ರಪುಷ್ಪರತ್ನಗಳಿಂದಲೂ ಆಭರಣಗಳಿಂದಲೂ ಗಂಧದಿಂದಲೂ ಉತ್ಪಲಪುಷ್ಪಗಳ ಮಾಲೆಯಿಂದಲೂ ಭಗವಂತನ್ನು ಪೂಜಿಸಿ ಸಂತೋಷಪಡಿಸಿ ಅವನಿಂದ ಅನುಜ್ಞೆಯನ್ನು ಪಡೆದು ಪ್ರದಕ್ಷಿಣೆ ಬಂದು 'ನಮಸ್ಕಾರ ಮಾಡಿ ಹೆಂಡತಿ ಮಕ್ಕಳು ಮಿತ್ರರಿಂದ ಕೂಡಿಕೊಂಡು ರಮಣಕದ್ವೀಪಕ್ಕೆ ಹೊರಟುಹೋದನು. ಆಗಲೇ ಭಗವಂತನ ಅನುಗ್ರಹದಿಂದ ಯಮುನೆಯು ವಿಷರಹಿತವಾಗಿ ಅಮೃತಕ್ಕೆ ಸಮಾನವಾದ ನೀರು ಉಳ್ಳವದ್ದಾಯಿತು.



# ಕಾಲಿಯನು ರಮಣಕ ದ್ವೀಪವನ್ನು ಬಿಡಲು ಕಾರಣವು[1]

ಪೂರ್ವದಲ್ಲಿ ರಮಣಕದ್ವೀಪದಲ್ಲಿ ಸರ್ಪಗಳು ತಮ್ಮನ್ನು ಗರುಡದೇವರು ಕೊಲ್ಲಬಾರದು ಎಂದು ಅಭಿಪ್ರಾಯದಿಂದ ಒಂದೊಂದು ಅಮಾವಾಸ್ಯೆಯಲ್ಲಿಯೂ ಗರುಡದೇವರಿಗೆ ಬೇಕಾದ ಆಹಾರವನ್ನು ಕೊಟ್ಟು ಪೂಜೆ ಮಾಡುತ್ತಿದ್ದರು. ವಿಷವೀರ್ಯದಿಂದ ಮದವುಳ್ಳ ಕಾಲಿಯನು ಗರುಡದೇವರನ್ನು ತಿರಸ್ಕರಿಸಿ ಅವರಿಗಾಗಿ ಇಟ್ಟಿದ್ದ ಆಹಾರವನ್ನು ಅಪಹರಿಸಿದನು. ತಾನೇ ತಿಂದುಹಾಕಿದನು. ಅದನ್ನು ಕೇಳಿ ಗರುಡದೇವರು ಕೋಪಿಸಿಕೊಂಡು ಕಾಲಿಯನನ್ನು ಸಂಹರಿಸಬೇಕೆಂದು ಓಡಿಬಂದರು. ಅನೇಕಶಿರಸ್ಸುಗಳುಳ್ಳ ಕಾಲಿಯನು ಬರುತ್ತಿದ್ದ ಗರುಡದೇವರನ್ನು ಹಲ್ಲುಗಳಿಂದ ಕಚ್ಚಿದನು. ಆಗ ಗರುಡನು ಮಹಾವೇಗವುಳ್ಳವನಾಗಿ ಮಹಾಕೋಪವುಳ್ಳವನಾಗಿ ಅವನನ್ನು ತಿರಸ್ಕರಿಸಿ ಬಂಗಾರದಂತೆ ಕಾಂತಿಯುಳ್ಳ ಎಡರೆಕ್ಕೆಯಿಂದ ಕಾಲಿಯನನ್ನು ಬಡೆದನು. ಆ ಪೆಟ್ಟಿನಿಂದ ಕಾಲಿಯನು ಪರವಶನಾಗಿ ಗರುಡನು ಬರಲಿಕ್ಕೆ ಆಗದ ಯಮುನೆಯ ಆ ಮಡುವಿಗೆ ಬಂದು ಪ್ರವೇಶಿಸಿದನು.

ಆ ಮಡುವಿನಲ್ಲಿ ಒಂದು ದಿನದಲ್ಲಿ ಗರುಡದೇವರು ಬಂದು ಅಲ್ಲಿ ಇದ್ದ ಸೌಭರಿಋಷಿಗಳು ಬೇಡವೆಂದು ತಡೆದರೂ ಕೇಳದೆ ಒಂದು ದೊಡ್ಡ ಮೀನನ್ನು ಹಿಡಿದು ತಿಂದರು. ಇದರಿಂದ ಆ ಮಡುವಿನಲ್ಲಿ ಇದ್ದ ಮೀನುಗಳೆಲ್ಲವೂ ದುಃಖಪಡುತ್ತಿದ್ದವು. ಅದನ್ನು ನೋಡಿ ಸೌಭರಿಋಷಿಗಳು ಅಲ್ಲಿದ್ದ ಮೀನುಗಳ ಮೇಲೆ ಕೃಪೆವುಳ್ಳವರಾಗಿ 'ಗರುಡನು ಇಲ್ಲಿಗೆ ಬಂದು ಮೀನನ್ನು ಹಿಡಿದು ತಿಂದರೆ ಅವನು ಆಗಲೇ ಪ್ರಾಣಬಿಡುವನು' ಎಂದು ಶಾಪವನ್ನು ಕೊಟ್ಟರು. ಅದರಿಂದ ಅಲ್ಲಿಗೆ ಆಮೇಲೆ ಗರುಡದೇವರು ಬರುತ್ತಿರಲಿಲ್ಲ. ಬಲಿಷ್ಠರಾದ ಕ್ಷತ್ರಿಯರು ಬ್ರಾಹ್ಮಣರನ್ನು ಪೀಡಿಸದೆ ಇರುವುದಕ್ಕಾಗಿ ಬ್ರಾಹ್ಮಣರು ಕೊಟ್ಟ ಶಾಪವನ್ನು ವಿಷ್ಣುವೂ ಅನುಸರಿಸುವನು. ವಿಷ್ಣುಭಕ್ತರೂ ಅನುಸರಿಸುವರು. ಆದಕಾರಣ ಗರುಡದೇವರು ಸೌಭರಿಋಷಿಗಳಿಂದ ದೊಡ್ಡವರಾಗಿದ್ದರೂ ಅವರು ಕೊಟ್ಟ ಶಾಪವನ್ನು ಅನುಸರಿಸಿದರು. ಈರೀತಿಯಾಗಿ ಸೌಭರಿಋಷಿಗಳು ಶಾಪಕೊಟ್ಟ ವಿಷಯವನ್ನು ಕಾಲಿಯನು ತಿಳಿದಿದ್ದನು. ಮತ್ತೆ ಯಾರಿಗೂ ತಿಳಿದಿರಲಿಲ್ಲ. ಆದುದರಿಂದ ಗರುಡಭಯವುಳ್ಳವನಾಗಿ ಆ ಮಡುವಿಗೆ ಬಂದು ವಾಸಮಾಡಿದನು. ತರುವಾಯ ಪರಮಾತ್ಮನಿಂದ ಅಲ್ಲಿಂದ ಹೊರಡಿಸಲ್ಪಟ್ಟನು.

1. ಭಾ. X-13, 14, 15 ಮತ್ತು ಮ.ತಾ.ನಿ. ಅ-13

ಆ ಮಡುವಿನಿಂದ ಮೇಲೆ ಬಂದ ದಿವ್ಯವಾದ ಗಂಧವನ್ನು ಹಚ್ಚಿಕೊಂಡು ದಿವ್ಯಹೂಮಾಲೆಯನ್ನು ಧರಿಸಿದ್ದ, ಮಹಾರತ್ನಗಳಿಂದಲೂ ಬಂಗಾರದಿಂದಲೂ ಅಲಂಕೃತನಾದ ಕೃಷ್ಣಪರಮಾತ್ಮನನ್ನು ನೋಡಿ ತೀರದಲ್ಲಿ ಇದ್ದ ಗೋಪಾಲರೂ ಪ್ರಾಣ ಬಂದಂತೆ ಎದ್ದವರಾಗಿ ಪ್ರೀತಿಯಿಂದ ಆಲಿಂಗನ ಮಾಡಿದರು. ಯಶೋದೆಯೂ, ರೋಹಿಣಿಯೂ, ನಂದಗೋಪನೂ, ಇತರ ಗೋಪಾಲರೂ, ಗೋಪಿಯರೂ, ಎಲ್ಲರೂ ಕೃಷ್ಣಪರಮಾತ್ಮನನ್ನು ಹೊಂದಿ ಮನಸ್ಸಿನ ಅಭೀಷ್ಟವನ್ನು ಹೊಂದಿದರು. ಬಲರಾಮದೇವರು ಭಗವಂತನ ಮಹಿಮೆಯನ್ನು ತಿಳಿದವರು. ಭಗವಂತನನ್ನು ಆಲಿಂಗಿಸಿ ನಗುವವರಾದರು. ಮನುಷ್ಯರೂ, ಗೋವುಗಳೂ, ಎತ್ತುಗಳೂ, ಕರುಗಳೂ, ಪರಮಸಂತೋಷವನ್ನು ಹೊಂದಿದರು. ಬ್ರಾಹ್ಮಣರು ನಂದಗೋಪನ ಬಳಿಗೆ ಬಂದು ಕಾಲಿಯನ ಬಾಯಿಗೆ ಸಿಕ್ಕಿದ ನಿನ್ನ ಮಗನು ದೈವೇಚ್ಛೆಯಿಂದ ಬದುಕಿಬಂದನು ಎಂದು ಹೇಳಿದರು. ಮಹಾನುಭಾವಳಾದ ಯಶೋದೆಯು ಕಳೆದುಹೋದ ಕೃಷ್ಣನನ್ನು ಹೊಂದಿದವಳಾಗಿ ಕೃಷ್ಣನನ್ನು ಆಲಿಂಗನ ಮಾಡಿ ತೊಡೆಯಲ್ಲಿ ಕೂತುಕೊಳ್ಳಿಸಿಕೊಂಡು ಕಣ್ಣೀರನ್ನು ಸುರಿಸಿದಳು. ತರುವಾಯ ಸೂರ್ಯನು ಮುಳುಗಲು ಕೃಷ್ಣಪರಮಾತ್ಮನು ಎಲ್ಲರಿಂದಲೂ ಕೂಡಿಕೊಂಡು ಆ ರಾತ್ರಿಯಲ್ಲಿ ಅಲ್ಲಿಯೇ ವಾಸಮಾಡಿದನು. ಎಲ್ಲರೂ ಹಸಿವೆ ದಾಹದಿಂದ ಶ್ರಮವುಳ್ಳವರಾಗಿ ಯಮುನೆಯ ತೀರದಲ್ಲಿಯೇ ಆ ರಾತ್ರಿಯಲ್ಲಿ ವಾಸಮಾಡಿದರು. ಎಲ್ಲರೂ ಮಧ್ಯರಾತ್ರಿಯಲ್ಲಿ ನಿದ್ರೆಯನ್ನು ಮಾಡುತ್ತಿರಲು ಸುತ್ತಲೂ ಕಾಡುಕಿಚ್ಚು ಬಂದು ಸುಡಲಿಕ್ಕೆ ಆರಂಭಿಸಿತು. ಆಗ ಸಂಭ್ರಮದಿಂದ ಗೋಪಾಲರು ಎದ್ದು ಕೃಷ್ಣಪರಮಾತ್ಮನನ್ನು ಮರೆ ಹೊಂದಿದರು. ಪರಮಾತ್ಮನು ಆ ಬೆಂಕಿಯನ್ನು ಬಾಯಿಯಿಂದ ನುಂಗಿಬಿಟ್ಟನು. ತರುವಾಯ ಸಂತೋಷವನ್ನು ಹೊಂದಿದ ಬಂಧುಗಳಿಂದ ಸಹಿತನಾಗಿ ಗೋಕುಲವನ್ನು ಪ್ರವೇಶಿಸಿದನು.



# ಪ್ರಲಂಬಾಸುರವಧ [1]

ಗ್ರೀಷ್ಮಋತುವಿನಲ್ಲಿ ಕೃಷ್ಣಪರಮಾತ್ಮನು ಬಲರಾಮದೇವರಿಂದ ಕೂಡಿಕೊಂಡು ಗೋಪರಿಂದ ಕೂಡಿಕೊಂಡು ಕೊಳಲನ್ನು ಬಾರಿಸುತ್ತಾ ವನವನ್ನು ಪ್ರವೇಶಿಸಿದನು. ಗೋಪಾಲರೂ ಕೃಷ್ಣಬಲರಾಮರೂ ಚಿಗುರೆಲೆಯನ್ನು ನವಿಲಿನ ರೆಕ್ಕೆಯನ್ನು ಹೂಗಳನ್ನು ಧರಿಸಿಕೊಂಡು ಗೈರಿಕಧಾತುವಿನಿಂದ ಅಲಂಕಾರ ಮಾಡಿಕೊಂಡು ವನದಲ್ಲಿ ನರ್ತನಮಾಡಿದರು. ಕ್ರೀಡಾಯುದ್ಧವನ್ನು ಮಾಡಿದರು. ಹಾಡನ್ನು ಹೇಳಿದರು. ಕೃಷ್ಣಪರಮಾತ್ಮನು ನರ್ತನ ಮಾಡುತ್ತಿರಲು ಕೆಲವು ಗೋಪರು ಹಾಡು ಹೇಳಿದರು. ಕೆಲವರು ವಾದ್ಯವನ್ನು ಬಾರಿಸಿದರು. ಕೆಲವರು ಕೊಳಲನ್ನು ಬಾರಿಸಿದರು. ಇನ್ನು ಕೆಲವರು ಕೊಂಬನ್ನು ಊದಿದರು. ಇನ್ನು ಕೆಲವರು ಪ್ರಶಂಸಾ ಮಾಡಿದರು. ಗೋಪಾಲರೂಪವನ್ನು ಧರಿಸಿದ್ದ ದೇವತೆಗಳೇ ಕೃಷ್ಣಬಲರಾಮರನ್ನು ಸ್ತೋತ್ರ ಮಾಡಿದರು. ನಾನಾವಿಧವಾಗಿ ಆಟವಾಡಿದರು. ಸುತ್ತಿಕೊಂಡು ಓಡಿಹೋಗುವುದು, ಹಾರುವುದು, ಕಲ್ಲನ್ನು ಬಿಸಾಡುವುದು, ಕೈಬಡಿಯುವುದು, ಒಬ್ಬರನ್ನು ಒಬ್ಬರು ಸೆಳೆಯುವುದು, ದ್ವಂದಯುದ್ಧ ಮಾಡುವುದು, ಬಿಲ್ವಕಾಯಿಗಳಿಂದ ಕುಂಭ ಎಂಬ ಕಾಯಿಗಳಿಂದ ಆಡುವುದು, ನೆಲ್ಲಿಕಾಯಿಗಳಿಂದ ಆಟವಾಡುವುದು, ಕಣ್ಣುಮುಚ್ಚುವ ಆಟವಾಡುವುದು, ಮೃಗಬೇಟೆಯಾಡುವುದು, ಕಪ್ಪೆಯಂತೆ ಹಾರುವುದು, ಊಂಜಿನಿಂದ ಆಡುವುದು, ರಾಜನಂತೆ ಆಡುವುದು ಇತ್ಯಾದಿರೀತಿಯಿಂದ ಆಡುತ್ತಿದ್ದರು. ಇತರರು ನರ್ತನ ಮಾಡುತ್ತಿರಲು ಕೃಷ್ಣಬಲರಾಮರು ಹಾಡುಹೇಳುತ್ತಾ ವಾದ್ಯಬಾರಿಸುತ್ತಾ ಸರಿ ಸರಿ ಎಂದು ಪ್ರಶಂಸಾಮಾಡುತ್ತಾ ಇದ್ದರು.

ಈರೀತಿಯಾಗಿ ಆಡುತ್ತಾ ನದೀತೀರಾದಿಗಳಲ್ಲಿ ಗೋವುಗಳನ್ನು ಮೇಯಿಸುತ್ತಿರಲು ಕೃಷ್ಣಬಲರಾಮರನ್ನು ಕೊಲ್ಲಬೇಕೆಂದು ಪ್ರಲಂಬಾಸುರನು ಬಂದನು. ಅವನು ಗೋಪವೇಷವನ್ನು ಧರಿಸಿಕೊಂಡು ಬಂದನು. ಸರ್ವಜ್ಞನಾದ ಪರಮಾತ್ಮನು ಅವನನ್ನು ಅಸುರನೆಂದು ತಿಳಿದವನಾಗಿದ್ದರೂ ಅವನನ್ನು ಸಂಹರಿಸುವುದಕ್ಕಾಗಿಯೇ ಅವನ ಸಖ್ಯವನ್ನು ಅಂಗೀಕರಿಸಿದನು. ತರುವಾಯ ಕೃಷ್ಣಪರಮಾತ್ಮನು ಇಬ್ಬರು ಇಬ್ಬರಾಗಿ ಸೇರಿ ಆಟವಾಡೋಣ ಎಂದು ಹೇಳಿದನು. ಕೃಷ್ಣಬಲರಾಮರು ಎರಡು ಪಕ್ಷಗಳಲ್ಲಿ ಪ್ರಧಾನರಾಗಿದ್ದರು. ಕೆಲವು ಗೋಪಾಲರು ಬಲರಾಮದೇವರ ಪಕ್ಷದಲ್ಲಿ ಸೇರಿದ್ದರು. ಕೆಲವರು ಕೃಷ್ಣನ ಪಕ್ಷದಲ್ಲಿ ಸೇರಿದ್ದರು. ಒಬ್ಬರನ್ನೊಬ್ಬರು ಎತ್ತಿಕೊಂಡು

1. ಭಾ. X-16 ಮತ್ತು ಮ.ತಾ.ನಿ. ಅ-13

ಹೋಗುತ್ತಿದ್ದರು. ಸೋತವರು ಜಯಿಸಿದವರನ್ನು ಹೊತ್ತುಕೊಂಡು ಹೋಗುತ್ತಿದ್ದರು. ಭಾಂಡೀರ ಎಂಬ ಆಲದಮರದವರೆಗೆ ಹೊತ್ತುಕೊಂಡು ಹೋಗುತ್ತಿದ್ದರು.

ಪ್ರಲಂಬಾಸುರನು ಕೃಷ್ಣಪರಮಾತ್ಮನಿಗೆ ಎದುರಾಗಿ ನಿಂತು ಅವನನ್ನು ಕೊಲ್ಲಲಿಕ್ಕೆ ತನ್ನಿಂದ ಸಾಧ್ಯವಾಗಲಾರದೆಂದು ತಿಳಿದುಕೊಂಡು ಕೃಷ್ಣಪರಮಾತ್ಮನ ಪಕ್ಷದಲ್ಲಿ ಸೇರಿಕೊಂಡನು. ಬಲರಾಮದೇವರೊಡನೆ ಆಡಿದನು. ಬಲರಾಮದೇವರ ಪಕ್ಷದವರೆಲ್ಲರೂ ಸೋತುಹೋದರು. ಆದರೆ ಬಲರಾಮ ದೇವರು ಮಾತ್ರ ಜಯಿಸಿದರು. ಕೃಷ್ಣನ ಪಕ್ಷದವರೆಲ್ಲರೂ ಜಯಿಸಿದರು. ಆದರೆ ಪ್ರಲಂಬಾಸುರನು ಮಾತ್ರ ಸೋತುಹೋದನು. ಅದರಿಂದ ಕೃಷ್ಣಪರಮಾತ್ಮನಿಂದ ಸೋತ ಶ್ರೀದಾಮನೆಂಬ ಗೋಪನು ಕೃಷ್ಣಪರಮಾತ್ಮನನ್ನು ಹೊತ್ತುಕೊಂಡು ಹೋದನು. ವೃಷಭನೆಂಬ ಗೋಪಾಲನನ್ನು ಭದ್ರಸೇನನು ಹೊತ್ತುಕೊಂಡು ಹೋದನು. ಪ್ರಲಂಬನು ಬಲರಾಮದೇವರನ್ನು ಹೊತ್ತುಕೊಂಡು ಹೋದನು. ತನ್ನ ನಿಜವಾದ ಭಯಂಕರವಾದ ರೂಪವನ್ನು ಧರಿಸಿದವನಾಗಿ ಆಕಾಶಮಾರ್ಗದಲ್ಲಿ ಹೋದನು. ಅವನ ಭಯಂಕರವಾದ ರೂಪವನ್ನು ನೋಡಿ ಬಲರಾಮದೇವರು ಭಯವನ್ನು ಹೊಂದಿದರು. ತರುವಾಯ ಶುಕ್ಲಕೇಶದ ಆವೇಶವು ಅಭಿವ್ಯಕ್ತವಾಗಲು ವಜ್ರದಂತೆ ವೇಗವುಳ್ಳ ಮುಷ್ಟಿಯಿಂದ ಅವನ ತಲೆಯಮೇಲೆ ಬಡಿದರು. ಅದರಿಂದ ಅವನು ತಲೆಯು ಒಡೆದುಹೋಗಿ ಗಟ್ಟಿಯಾಗಿ ಕೂಗಿ ಕೆಳಗೆ ಬಿದ್ದು ಪ್ರಾಣವನ್ನು ಬಿಟ್ಟನು. ಈರೀತಿಯಾಗಿ ಬಲಿಷ್ಠನಾದ ಪ್ರಲಂಬಾಸುರನು ಬಲರಾಮದೇವರಿಂದ ಮೃತನಾದದ್ದನ್ನು ನೋಡಿ ಗೋಪಾಲರೆಲ್ಲರೂ ಆಶ್ಚರ್ಯವನ್ನು ಹೊಂದಿದರು. ಸಾಧು, ಸಾಧು ಎಂದು ಹೇಳಿದರು. ದೇವತೆಗಳೆಲ್ಲರೂ ಸಂತೋಷವುಳ್ಳವರಾಗಿ ಬಲರಾಮದೇವರ ಮೇಲೆ ಪುಷ್ಪದ ಮಳೆಯನ್ನು ಸುರಿಸಿದರು.



# ಕೃಷ್ಣನು ವನಾಗ್ನಿಯನ್ನು ಪಾನಮಾಡಿದ್ದು [1]

ಗೋಪಾಲರು ಕ್ರೀಡೆಯನ್ನು ಮಾಡುತ್ತಿರಲು ಅವರ ಗೋವುಗಳು ಇಚ್ಛಾನುಸಾರವಾಗಿ ಸಂಚರಿಸುತ್ತಾ ಹುಲ್ಲಿನ ಆಸೆಯಿಂದ ವನದಿಂದ ಹೋಗುತ್ತಾ ಮುಂಜಾ ಎಂದು ಹೆಸರುಳ್ಳ ಹುಲ್ಲಿನ ವನವನ್ನು ಪ್ರವೇಶಿಸಿದವು. ಅಲ್ಲಿ ಬಿಸಿಲಿನ ಶ್ರಮದಿಂದ ನೀರಡಿಕೆಯುಳ್ಳವುಗಳಾಗಿ ಕೂಗುತ್ತಿದ್ದವು. ಗೋಪಾಲರು ಗೋವುಗಳು ಹೋದಮಾರ್ಗವನ್ನು ತಿಳಿಯದೆ ಪಶ್ಚಾತ್ತಾಪವುಳ್ಳವರಾಗಿ ದನಗಳ ಹೆಜ್ಜೆಗಳನ್ನು ಅವು ಮೇಯಿದ ಹುಲ್ಲುಗಳನ್ನು ನೋಡುತ್ತಾ ಹುಡುಕುತ್ತಾ ಹೋದರು. ಅವರು ಮುಂಜ ಎಂಬ ಹುಲ್ಲಿನ ವನಕ್ಕೆ ಪ್ರವೇಶಿಸಿ ದಾರಿ ತಿಳಿಯದೆ ನೀರಡಿಕೆಯುಳ್ಳವರಾಗಿ ಹಿಂದಿರುಗಿ ಬರಬೇಕೆಂದು ಯೋಚಿಸಿದರು. ಕೃಷ್ಣಪರಮಾತ್ಮನು ಮೇಘದಂತೆ ಗಂಭೀರವಾದ ವಾಣಿಯಿಂದ ದನಗಳ ಹೆಸರನ್ನು ಹೇಳಿ ಕೂಗಿದನು. ಭಗವಂತನ ಧ್ವನಿಯನ್ನು ಕೇಳಿ ಸಂತೋಷದಿಂದ ಗೋವುಗಳು ಪ್ರತಿಯಾಗಿ ಶಬ್ದವನ್ನು ಮಾಡಿದವು. ತರುವಾಯ ದೈವೇಚ್ಛೆಯಿಂದ ಸುತ್ತಲೂ ಭಯಂಕರವಾದ ಕಾಡುಕಿಚ್ಚು ಬಂದಿತು. ಅದನ್ನು ನೋಡಿ ಗೋವುಗಳೂ ಗೋಪಾಲರೂ ನೋಡಿ ಭಯವುಳ್ಳವ ರಾಗಿ ಬಲರಾಮದೇವರಿಂದ ಸಹಿತನಾದ ಕೃಷ್ಣಪರಮಾತ್ಮನ ಬಳಿಗೆ ಬಂದು 'ಕೃಷ್ಣ! ರಾಮ! ಕಾಡುಕಿಚ್ಚಿನಿಂದ ಸುಡಲ್ಪಡುವ ನಮ್ಮನ್ನು ರಕ್ಷಿಸಬೇಕು. ಕೃಷ್ಣ! ನಿನ್ನ ಬಂಧು ಗಳಾದ ನಾವು ಶ್ರಮಪಡುವುದು ಸರಿಯಲ್ಲ. ನಾವೆಲ್ಲರೂ ನಿನ್ನನ್ನೇ ನಂಬಿದವರು' ಎಂದು ಹೇಳಿದರು.

ಕೃಷ್ಣಪರಮಾತ್ಮನು ಬಂಧುಗಳ ಮಾತನ್ನು ಕೇಳಿ 'ಭಯಪಡಬೇಡಿರಿ. ಕಣ್ಣುಗಳನ್ನು ಮುಚ್ಚಿಕೊಳ್ಳಿರಿ' ಎಂದು ಹೇಳಿದನು. ಗೋಪಾಲರು ಹಾಗೆಯೇ ಕಣ್ಣನ್ನು ಮುಚ್ಚಿಕೊಳ್ಳಲು ಕೃಷ್ಣಪರಮಾತ್ಮನು ಬಾಯಿಯಿಂದ ಅಗ್ನಿಯನ್ನು ಪಾನಮಾಡಿ ಅವರನ್ನು ಅಗ್ನಿಭಯದಿಂದ ಬಿಡಿಸಿದನು. ತರುವಾಯ ಗೋಪಾಲರು ಕಣ್ಣುಗಳನ್ನು ತೆರೆದು ಪುನಃ ಭಾಂಡೀರಮರದ ಬಳಿಗೆ ಬಂದರು. ಕೃಷ್ಣ ಪರಮಾತ್ಮನು ತಮ್ಮನ್ನು ಗೋವುಗಳನ್ನು ಅಗ್ನಿಯಿಂದ ಬಿಡಿಸಿದ್ದನ್ನು ನೋಡಿಕೊಂಡು ಆಶ್ಚರ್ಯಪಟ್ಟರು. ಕೃಷ್ಣಪರಮಾತ್ಮನಿಂದ ತಮಗಾದ ಬಿಡುಗಡೆಯನ್ನು ನೋಡಿ ಅವನು ದೇವತೆಯೆಂದು ತಿಳಿದುಕೊಂಡರು. ಸಾಯಂಕಾಲದಲ್ಲಿ ಕೃಷ್ಣಪರಮಾತ್ಮನು ಬಲರಾಮದೇವರಿಂದ ಕೂಡಿಕೊಂಡು ಗೋಪಾಲರಿಂದಲೂ ಸ್ತೋತ್ರ ಮಾಡಲ್ಪಡುತ್ತಾ ಗೋವುಗಳನ್ನು

1. ಭಾ. X-15 ಮತ್ತು ಮ.ತಾ.ನಿ. ಅ-13

ತಿರುಗಿಸಿಕೊಂಡು ಕೊಳಲನ್ನು ಊದುತ್ತಾ ಬಂದನು. ಗೋಪಿಯರಿಗೆ ಪರಮಾತ್ಮನನ್ನು ನೋಡಿ ಬಹುಸಂತೋಷವಾಯಿತು. ಅವರಿಗೆ ಹಗಲಲ್ಲಿ ಪರಮಾತ್ಮನನ್ನು ನೋಡದೆ ಇರುವಾಗ ಒಂದು ಕ್ಷಣವು ನೂರು ಯುಗಗಳಂತೆ ಆಗಿತ್ತು. ಗೋಪಾಲರು ಗೋಪಿಯರೊಡನೆ ಭಗವಂತನು ತಮ್ಮನ್ನು ಕಾಡುಗಿಚ್ಚಿನಿಂದ ಬಿಡಿಸಿದ್ದನ್ನೂ ಪ್ರಲಂಬಾಸುರನ ಸಂಹಾರವನ್ನು ತಿಳಿಸಿದರು. ಅದನ್ನು ಕೇಳಿ ವೃದ್ಧರಾದ ಗೋಪಾಲರೂ ಗೋಪಿಯರೂ ಆಶ್ಚರ್ಯಪಡುವವರಾಗಿ ಕೃಷ್ಣ ಬಲರಾಮರು ಗೋಕುಲಕ್ಕೆ ಬಂದಿರುವ ದೇವತೆಗಳೆಂದು ತಿಳಿದುಕೊಂಡರು.



## ಗೋಪೀವಸ್ತ್ರಾಪಹಾರವು [1]

ಶರದೃತುವಿನಲ್ಲಿ ಕೃಷ್ಣಬಲರಾಮರು ಗೋಪಾಲರಿಂದ ಕೂಡಿಕೊಂಡು ವನಕ್ಕೆ ಹೋಗಿ ಗೋವುಗಳನ್ನು ಮೇಯಿಸುತ್ತಿದ್ದರು. ಪರಮಾತ್ಮನು ಆಗ ಕೊಳಲನ್ನು ಊದುತ್ತಿದ್ದನು. ಭಗವಂತನು ಕೊಳಲು ಊದುವುದನ್ನು ಕೇಳಿ ಗೋಪಿಯರು ಸೇರಿಕೊಂಡು ಅದನ್ನೇ ವರ್ಣನೆ ಮಾಡುತ್ತಾ ಕಾಲವನ್ನು ಕಳೆಯುತ್ತಿದ್ದರು.

ತರುವಾಯ ಹೇಮಂತಋತುವಿನಲ್ಲಿ ಪ್ರಥಮಮಾಸದಲ್ಲಿ ಕೆಲವು ಗೋಪಕನ್ಯೆಯರು ಹವಿಷ್ಯ ಅನ್ನವನ್ನು ಭೋಜನಮಾಡುತ್ತಾ ದುರ್ಗಾದೇವಿಯರ ಪೂಜೆಯನ್ನು ಮಾಡಿದರು. ನಿತ್ಯವೂ ಅರುಣೋದಯಸಮಯದಲ್ಲಿ ಯಮುನಾ ಜಲದಲ್ಲಿ ಸ್ನಾನಮಾಡಿ ಉಸುಬಿನಿಂದ ದುರ್ಗಾದೇವಿಯರ ಪ್ರತಿಮೆಯನ್ನು ಮಾಡಿಟ್ಟುಕೊಂಡು ಗಂಧ, ಪುಷ್ಪ, ಧೂಪ, ದೀಪ, ನೈವೇದ್ಯ ಇತ್ಯಾದಿಗಳಿಂದ ಪೂಜಿಸತ್ತಿದ್ದರೂ 'ತಾಯಿ! ನಮಗೆ ನಂದಗೋಪಕುಮಾರನನ್ನು ಪತಿಯನ್ನಾಗಿ ಮಾಡು. ನಿನಗೆ ನಮಸ್ಕಾರವು! ಎಂದು ಪ್ರಾರ್ಥಿಸುತ್ತಿದ್ದರು. ಇದೇರೀತಿಯಾಗಿ ಒಂದು ತಿಂಗಳು ಮಾಡಿದರು. ನಿತ್ಯವೂ ಉಷಃಕಾಲದಲ್ಲಿ ಎದ್ದು ಪರಸ್ಪರ ಒಬ್ಬರ ಕೈಯನ್ನು ಮತ್ತೊಬ್ಬರು ಹಿಡಿದುಕೊಂಡು ಕೃಷ್ಣಪರಮಾತ್ಮನ ವಿಷಯದಲ್ಲಿ ಗಟ್ಟಿಯಾಗಿ ಹಾಡನ್ನು ಹೇಳುತ್ತಾ ಸ್ನಾನಮಾಡಲಿಕ್ಕೆ ಯಮುನಾನದಿಗೆ ಹೋಗುತ್ತಿದ್ದರು. ಒಂದು ದಿನದಲ್ಲಿ ಅವರು ಎಂದಿನಂತೆ ತಮ್ಮ ಸೀರೆಯನ್ನು ಬಿಚ್ಚಿ ನದೀತೀರದಲ್ಲಿ ಇಟ್ಟು ಸಂತೋಷದಿಂದ ನೀರಿನಲ್ಲಿ ಆಡುತ್ತಿದ್ದರು. ಅದನ್ನು ತಿಳಿದು ಅವರ ಕಾರ್ಯಸಿದ್ಧಿ

1. ಭಾ. X-20 ಮತ್ತು ಮ.ತಾ.ನಿ. ಅ–13

ಯನ್ನು ಮಾಡುವುದಕ್ಕಾಗಿ ಪರಮಾತ್ಮನು ತನ್ನ ಮಿತ್ರರಾದ ಗೋಪಾಲರೊಡನೆ ಕೂಡಿಕೊಂಡು ಅಲ್ಲಿಗೆ ಬಂದನು. ಅವರ ಸೀರೆಗಳನ್ನು ಹಿಡಿದುಕೊಂಡು ಬೇಗನೇ ಮರದ ಮೇಲೆ ಹತ್ತಿ ಕೂತುಕೊಂಡನು. ಗೋಪಾಲರೆಲ್ಲರೂ ನಗಲಿಕ್ಕೆ ಆರಂಭಿಸಿ ದರು. ಭಗವಂತನು ಪರಿಹಾಸವನ್ನು ಮಾಡುತ್ತಾ 'ಕನ್ಯೆಯರೇ! ನೀವೆಲ್ಲರೂ ಮೇಲಕ್ಕೆ ಬಂದು ನಿಮ್ಮ ನಿಮ್ಮ ಸೀರೆಯನ್ನು ತೆಗೆದುಕೊಳ್ಳಿರಿ. ನಾನು ಸತ್ಯವನ್ನೇ ಹೇಳುತ್ತೇನೆ. ಸುಳ್ಳನ್ನು ಹೇಳುವುದಿಲ್ಲ. ನಾನು ಇಷ್ಟರವರೆಗೆ ಯಾರಲ್ಲಿಯೂ ಸುಳ್ಳನ್ನು ಹೇಳಿದ್ದಿಲ್ಲ. ಇದನ್ನು ಈ ನನ್ನ ಮಿತ್ರರು ತಿಳಿದಿರುವರು. ನೀವು ಒಬ್ಬೊಬ್ಬರೇ ಅಥವಾದ ಒಟ್ಟಿಗೆ ಮೇಲೆ ಬಂದು ನಿಮ್ಮ ನಿಮ್ಮ ಸೀರೆಗಳನ್ನು ತೆಗೆದುಕೊಳ್ಳಿರಿ' ಎಂದು ಹೇಳಿದನು. ಭಗವಂತನ ಪರಿಹಾಸವಚನವನ್ನು ಕೇಳಿ ಗೋಪಕನ್ಯೆಯರು ಪರಸ್ಪರ ಮುಖಗಳನ್ನು ನೋಡಿಕೊಂಡು ನಗುತ್ತಾ ನೀರಿನಿಂದ ಮೇಲೆ ಬರಲಿಲ್ಲ. ಎಲ್ಲರೂ ಕುತ್ತಿಗೆಯವರೆಗೆ ನೀರಿನಲ್ಲಿ ಮುಳುಗಿದ್ದರು. ಛಳಿಗೆ ನಡುಗುತ್ತಾ 'ನಂದಗೋಪಕುಮಾರನಾದ ನಿನ್ನನ್ನು ನಾವು ಬಹುಮಾನ ಮಾಡುವೆವು. ನೀನು ನಂದಗೋಕುಲದಲ್ಲಿ ಶ್ರೇಷ್ಠನೆಂದು ತಿಳಿದಿರುವೆವು. ನಾವು ಛಳಿಯಿಂದ ನಡುಗುತ್ತಿರುವೆವು. ನಮ್ಮ ಸೀರೆಗಳನ್ನು ಕೊಟ್ಟುಬಿಡು. ಸುಂದರ! ನಾವು ನಿನ್ನ ದಾಸಿಯರು. ನೀನು ಹೇಳಿದಂತೆ ಕೇಳುವೆವು. ನಮ್ಮ ವಸ್ತ್ರಗಳನ್ನು ಕೊಟ್ಟುಬಿಡು. ಇಲ್ಲದಿದ್ದರೆ ನಾವು ರಾಜನೊಡನೆ ತಿಳಿಸುವೆವು' ಎಂದರು.

ಆಗ ಕೃಷ್ಣನು 'ನೀವು ನನ್ನ ದಾಸಿಯರಾಗಿದ್ದರೆ ನಾನು ಹೇಳಿದಂತೆ ಮಾಡಿರಿ. ಇಲ್ಲಿಗೆ ಬಂದು ನಿಮ್ಮ ಸೀರೆಯನ್ನು ಪಡೆಯಿರಿ. ಇಲ್ಲದಿದ್ದರೆ ನಾನು ನಿಮಗೆ ಸೀರೆಯನ್ನು ಕೊಡುವುದಿಲ್ಲ. ರಾಜನೊನೆ ತಿಳಿಸಿರಿ. ರಾಜನು ಕೋಪಿಸಿಕೊಂಡು ಏನು ಮಾಡುವನು?' ಎಂದು ಹೇಳಿದನು.

ತರುವಾಯ ಗೋಪಕನ್ಯೆಯರು ಛಳಿಯಿಂದ ನಡುಗುತ್ತಾ ಕೈಗಳಿಂದ ತಮ್ಮ ಗುಹ್ಯೇಂದ್ರಿಯವನ್ನು ಮುಚ್ಚಿಕೊಂಡು ಮೇಲಕ್ಕೆ ಬಂದರು. ಭಗವಂತನು ಅವರನ್ನು ನೋಡಿ ಸೀರೆಗಳನ್ನು ಹಿಡಿದುಕೊಂಡು ಮಂದಹಾಸವನ್ನು ಮಾಡುತ್ತಾ 'ವ್ರತವನ್ನು ಮಾಡುತ್ತಿರುವ ನೀವು ವಸ್ತ್ರಹೀನರಾಗಿ ನೀರಿನಲ್ಲಿ ಇಳಿದದ್ದು ಬಹಳ ಅನ್ಯಾಯವು. ಆ ಪಾಪ ಪರಿಹಾರಕ್ಕಾಗಿ ನನಗೆ ಕೈಮುಗಿದು ನಿಮ್ಮ ಸೀರೆಯನ್ನು ಪಡೆಯಿರಿ' ಎಂದು ಹೇಳಿದನು.

ಅದನ್ನು ಕೇಳಿ ಕನ್ಯೆಯರು ಒಂದು ಕೈಯಿಂದ ಗುಹ್ಯೇಂದ್ರಿಯವನ್ನು ಮುಚ್ಚಿ ಕೊಂಡೇ ಮತ್ತೊಂದು ಕೈಯಿಂದ ಭಗವಂತನಿಗೆ ನಮಸ್ಕಾರವನ್ನು ಮಾಡಿದರು.

ಅದನ್ನು ನೋಡಿ ಭಗವಂತನು ಅವರೊಡನೆ 'ಯಾರು ಒಂದು ಕೈಯಿಂದ ದೇವರಿಗೆ ನಮಸ್ಕರಿಸುವರೋ ಅವರ ಕೈಯನ್ನು ಕಡಿದುಹಾಕುವುದೇ ಶಿಕ್ಷೆಯೆಂದು ವೇದವನ್ನು ಓದಿದವರು ತಿಳಿದಿರುವರು. ಆದುದರಿಂದ ಸ್ವಾಮಿಯನ್ನು ಎರಡುಕೈಗಳಿಂದ ನಮಸ್ಕರಿಸಬೇಕು. ನೀವೂ ಹಾಗೆ ಮಾಡಿದರೆ ನನಗೆ ಪ್ರಿಯವಾಗುವುದು' ಎಂದು ಹೇಳಿದನು.

ಈರೀತಿಯಾಗಿ ಭಗವಂತನು ಹೇಳಿದ ಮಾತನ್ನು ಕೇಳಿ ತಾವು ವಸ್ತ್ರಹೀನರಾಗಿ ನೀರಿನಲ್ಲಿ ಇಳಿದದ್ದರಿಂದ ವ್ರತವು ಹಾಳಾಯಿತೆಂದು ಆ ವ್ರತವನ್ನು ಸಂಪೂರ್ಣ ಮಾಡಬೇಕೆಂದೂ ಅಭಿಪ್ರಾಯವುಳ್ಳವರಾಗಿ ಸರ್ವಸಾಕ್ಷಿಯಾದ ಭಗವಂತನಿಗೆ ಎರಡುಕೈಗಳಿಂದ ನಮಸ್ಕರಿಸಿದರು. ಅದರಿಂದ ಸಂತುಷ್ಟನಾಗಿ ಪರಮಾತ್ಮನು ಅವರ ವಸ್ತ್ರಗಳನ್ನು ಕೊಟ್ಟುಬಿಟ್ಟನು. ಭಗವಂತನು ಹೀಗೆಲ್ಲಾ ಮಾಡಿದರೂ ಆ ಗೋಪಕನ್ಯೆಯರು ಅವನ ಮೇಲೆ ಅಸೂಯೆಯನ್ನು ಹೊಂದಲಿಲ್ಲ. ತಮ್ಮ ಸೀರೆ ಗಳನ್ನು ಉಟ್ಟುಕೊಂಡು ಅವನ ಅಂಗಸಂಗವನ್ನು ಹೊಂದಬೇಕೆಂದು ಅಭಿಪ್ರಾಯ ವುಳ್ಳವರಾಗಿ ಅವನಿಂದ ಅಪಹೃತವಾದ ಮನಸ್ಸುಳ್ಳವರಾಗಿ ಅವನನ್ನೇ ನೋಡುತ್ತಾ ಅಲ್ಲಿಂದ ಕದಲಲೇ ಇಲ್ಲ. ಭಗವಂತನು ಅವರ ಅಭಿಪ್ರಾಯವನ್ನು ತಿಳಿದವನಾಗಿ 'ಸಾಧ್ವಿಯರಿರಾ! ನಿಮ್ಮ ಸಂಕಲ್ಪವನ್ನು ನಾನು ತಿಳಿದಿರುವೆನು. ನಾನು ಅನುಮೋದನೆ ಮಾಡಲು ಆ ನಿಮ್ಮ ಸಂಕಲ್ಪವು ಸತ್ಯವಾಗುವುದು. ನನ್ನಲ್ಲಿ ಆಸಕ್ತವಾದ ಮನಸ್ಸುಳ್ಳವರಿಗೆ ಕಾಮವು ಬಂಧಕ್ಕೆ ಕಾರಣವಾಗಲಾರದು. ನೀವೀಗ ಗೋಕುಲಕ್ಕೆ ಹೋಗಿರಿ. ನಿಮ್ಮ ಆಸೆಯಂತೆ ರಾತ್ರಿಯಲ್ಲಿ ನನ್ನೊಡನೆ ವಿಹರಿಸಿರಿ' ಎಂದು ಹೇಳಲು ಗೋಪಕನ್ಯೆಯರು ಕಷ್ಟದಿಂದ ಕೃಷ್ಣನನ್ನೇ ಧ್ಯಾನಮಾಡುತ್ತಾ ಅಲ್ಲಿಂದ ಹೊರಟುಹೋದರು.

ತರುವಾಯ ಶ್ರೀಭಗವಂತನು ಮಿತ್ರರಾದ ಗೋಪರಿಂದ ಕೂಡಿಕೊಂಡು ಗೋವುಗಳನ್ನು ಮೇಯಿಸುತ್ತಾ ಬಹುದೂರ ಹೋದನು. ತರುವಾಯ ಯಮುನಾ ತೀರಕ್ಕೆ ಹೋಗಿ ಗೋಪಾಲರು ದನಗಳಿಗೆ ನೀರನ್ನು ಕುಡಿಸಿ ತಾವೂ ಯಮುನಾ ಜಲವನ್ನು ಕುಡಿಯುವವರಾದರು. ಆಮೇಲೆ ಅಲ್ಲಿಯೇ ಉಪವನದಲ್ಲಿಯೇ ಗೋವುಗಳನ್ನು ಮೇಯಿಸುತ್ತಾ ಹಸಿವೆಯಿಂದ ಪೀಡಿತರಾಗಿ ಕೃಷ್ಣಪರಮಾತ್ಮನ ಬಳಿಗೆ ಬಂದು ದೂರಿಕೊಂಡರು.



# ವಿಪ್ರಪತ್ನಿಯರಿಗೆ ಅನುಗ್ರಹವು [1]

ಗೋಪಾಲರು ಬಂದು 'ರಾಮ! ಕೃಷ್ಣ! ನಮಗೆ ತುಂಬಾ ಹಸಿವೆಯಾಗುತ್ತಿರುವುದು. ಅದಕ್ಕೇನಾದರೂ ಶಾಂತಿಯನ್ನು ಮಾಡಬೇಕು' ಎಂದು ಹೇಳಿಕೊಂಡರು. ಅದನ್ನು ಕೇಳಿ ಕೃಷ್ಣಪರಮಾತ್ಮನು ಭಕ್ತರಾದ ಬ್ರಾಹ್ಮಣಸ್ತ್ರೀಯರಿಗೆ ಅನುಗ್ರಹಮಾಡಬೇಕೆಂದು ಅಭಿಪ್ರಾಯವುಳ್ಳನಾಗಿ ಗೋಪಾಲರೊಡನೆ 'ಇಲ್ಲಿಯೇ ಹತ್ತಿರದಲ್ಲಿ ಬ್ರಾಹ್ಮಣರು ಸ್ವರ್ಗವನ್ನು ಹೊಂದಬೇಕೆಂಬ ಆಸೆಯಿಂದ ಆಂಗೀರಸ ಎಂಬ ಸತ್ರಯಾಗವನ್ನು ಮಾಡುತ್ತಿರುವರು ನೀವು ಅಲ್ಲಿಗೆ ಹೋಗಿ ನನ್ನ ಮತ್ತು ನನ್ನ ಅಣ್ಣನ ಹೆಸರನ್ನು ಹೇಳಿ ಅನ್ನವನ್ನು ಕೇಳಿರಿ' ಎಂದು ಹೇಳಿದನು. ಅದೇ ರೀತಿಯಾಗಿ ಗೋಪಾಲರು ಯಾಗವು ನಡೆಯುತ್ತಿದ್ದ ಸ್ಥಳಕ್ಕೆ ಹೋಗಿ ಬ್ರಾಹ್ಮಣರಿಗೆ ನಮಸ್ಕರಿಸಿ 'ಕೃಷ್ಣ ಬಲರಾಮರು ನಮ್ಮಿಂದ ಕೂಡಿಕೊಂಡು ಗೋವುಗಳನ್ನು ಮೇಯಿಸುತ್ತಾ ಬಹುದೂರ ಬಂದಿರುವರು. ಅವರು ನಮ್ಮನ್ನು ಕಳುಹಿಸಿರುವರು. ಅವರು ಅನ್ನವನ್ನು ಅಪೇಕ್ಷಿಸುವರು. ತಮಗೆ ಶ್ರದ್ಧೆಯಿದ್ದರೆ ಅವರಿಗೆ ಅನ್ನವನ್ನು ಕೊಡಿರಿ' ಎಂದು ಕೇಳಿದರು.

ಈರೀತಿಯಾಗಿ ಗೋಪಾಲರು ತಮ್ಮನ್ನು ಕೃಷ್ಣಬಲರಾಮರೇ ಕೊಟ್ಟು ಕಳುಹಿಸಿರುವರು ಎಂದು ಹೇಳಿದರೂ ಆ ಬ್ರಾಹ್ಮಣರು ಅಲ್ಪವಾದ ಸ್ವರ್ಗದಲ್ಲಿ ಆಸೆಯುಳ್ಳವರಾಗಿ ಅವರಿಗೆ ಅನ್ನವನ್ನು ಕೊಟ್ಟು ಬಿಟ್ಟರೆ ಸ್ವರ್ಗವು ತಪ್ಪಿಹೋಗು ವುದೋ ಎಂಬ ಭಯದಿಂದ ಗೋಪರ ಮಾತನ್ನು ಕೇಳಿಯೂ ಕೇಳದಂತೆ ನಟನೆ ಮಾಡಿದರು. ದೇಶವೂ, ಕಾಲವೂ, ದ್ರವ್ಯವೂ, ಮಂತ್ರವೂ, ತಂತ್ರವೂ, ಋತ್ವಿಕ್ಕುಗಳೂ, ದೇವತೆಗಳೂ, ಯಜಮಾನನೂ, ಯಾಗವೂ, ಯಾರ ಅಧೀನವೋ ಅಂತಹ ಕೃಷ್ಣಪರಮಾತ್ಮನನ್ನು ಅವರು ತಿಳಿಯದೆ ಹೋದರು. ಅವರು ಗೋಪರ ಮಾತಿಗೆ ಕೊಡುತ್ತೇವೆ ಎಂದಾಗಲೀ ಕೊಡುವುದಿಲ್ಲವೆಂದಾಗಲೀ ಉತ್ತರವನ್ನು ಕೊಡಲಿಲ್ಲ. ಗೋಪಾಲರು ನಿಂತು ನಿಂತು ಒಂದು ಉತ್ತರವನ್ನು ಕಾಣದೆ ಆಶಾರಹಿತರಾಗಿ ಹೋಗಿ ಕೃಷ್ಣಬಲರಾಮರೊಡನೆ ನಡೆದ ವಿಷಯವನ್ನು ತಿಳಿಸಿದರು. ಅದನ್ನು ಕೇಳಿ ಕೃಷ್ಣಪರಮಾತ್ಮನು ನಗುವವನಾಗಿ ಹೆಂಗಸರಿಗೆ ಸ್ವಲ್ಪ ಶ್ರದ್ಧೆಯು ಹೆಚ್ಚಾಗಿರುವುದೆಂಬ ಲೋಕಸ್ಥಿತಿಯನ್ನು ತೋರಿಸುವುದಕ್ಕಾಗಿ ಗೋಪಾಲರೊಡನೆ 'ನೀವೀಗ ಆ ಬ್ರಾಹ್ಮಣರ ಪತ್ನಿಯರ ಬಳಿಗೆ ಹೋಗಿ ಅಣ್ಣನಿಂದ ಸಹಿತನಾಗಿ ನಾನು ಬಂದಿರುವೆನೆಂದು ತಿಳಿಸಿರಿ. ಅವರು ನಿಮಗೆ ಬೇಕಾದಷ್ಟು ಅನ್ನವನ್ನು ಕೊಡುವರು.

1. ಭಾ. X-21 ಮತ್ತು ಮ.ತಾ.ನಿ. ಅ-13

ಯಾಕೆಂದರೆ ಅವರು ಯಾವಾಗಲೂ ನನ್ನಲ್ಲಿ ಭಕ್ತಿಯುಳ್ಳವರಾಗಿರುವರು' ಎಂದು ಹೇಳಿದನು.

ಗೋಪಾಲರು ಅಲ್ಲಿಗೆ ಹೋಗಿ ಪತ್ನೀಶಾಲೆಯಲ್ಲಿ ಅಲಂಕೃತರಾಗಿ ಕೂತಿದ್ದ ಬ್ರಾಹ್ಮಣಸ್ತ್ರೀಯರನ್ನು ನೋಡಿ ನಮಸ್ಕಾರ ಮಾಡುವವರಾಗಿ 'ಬ್ರಾಹ್ಮಣಸ್ತ್ರೀಯರಿಗೆ ನಮಸ್ಕಾರವು. ನಮ್ಮ ಮಾತನ್ನು ಕೇಳಿರಿ. ಇಲ್ಲಿ ಹತ್ತಿರದಲ್ಲೇ ಇರುವ ಕೃಷ್ಣನಿಂದ ಕಳುಹಿಲ್ಪಟ್ಟವರಾಗಿ ಇಲ್ಲಿಗೆ ಬಂದಿರುವೆವು. ಆ ಕೃಷ್ಣನು ಬಲರಾಮನಿಂದಲೂ ಗೋಪಾಲರಿಂದಲೂ ಕೂಡಿಕೊಂಡು ಗೋವುಗಳನ್ನು ಮೇಯಿಸಿಕೊಂಡು ಬಹುದೂರ ಬಂದಿರುವನು. ಈಗ ಹಸಿದಿರುವ ಸಪರಿವಾರನಾದ ಅವನಿಗೆ ಅನ್ನವನ್ನು ಕೊಡಿರಿ! ಎಂದು ಹೇಳಿದರು.

ಕೃಷ್ಣಪರಮಾತ್ಮನು ಹತ್ತಿರ ಬಂದಿರುವನೆಂಬ ವರ್ತಮಾನವನ್ನು ಕೇಳಿ ನಿತ್ಯವೂ ಅವನನ್ನು ನೋಡಬೇಕೆಂದು ಆಸೆಪಡುತ್ತಿದ್ದ ಅವನ ಕಥೆಯಲ್ಲಿಯೇ ಆಸಕ್ತವಾದ ಮನಸ್ಸುಳ್ಳವರಾಗಿದ್ದ ಆ ಬ್ರಾಹ್ಮಣಸ್ತ್ರೀಯರು ಸಂಭ್ರಮವುಳ್ಳವರಾಗಿ ಭಕ್ಷ್ಯ, ಭೋಜ್ಯ, ಲೇಹ್ಯ, ಪೇಯವೆಂಬ ನಾಲ್ಕು ವಿಧ ಆಹಾರಸಾಮಗ್ರಿಯನ್ನು ಹಿಡಿದುಕೊಂಡು ಗಂಡಂದಿರೂ, ಸಹೋದರರೂ, ಬಂಧುಗಳೂ, ಮಕ್ಕಳೂ ಬೇಡವೆಂದು ತಡೆದರೂ ಕೇಳದೆ ಹೊರಟುಹೋದರು. ಯಮುನಾತೀರದಲ್ಲಿ ಗೋಪರೊಡನೆ ದನಗಳನ್ನು ಮೇಯಿಸುತ್ತಿದ್ದ ಅಣ್ಣನಿಂದ ಸಹಿತನಾದ ಕೃಷ್ಣಪರಮಾತ್ಮನನ್ನು ನೋಡಿದರು.

ಈರೀತಿಯಾಗಿ ಸರ್ವಆಸೆಯನ್ನೂ ಬಿಟ್ಟು ತನ್ನ ಸಮೀಪಕ್ಕೆ ಬಂದಿದ್ದ ಆ ಬ್ರಾಹ್ಮಣಸ್ತ್ರೀಯರನ್ನು ನೋಡಿ ಕೃಷ್ಣಪರಮಾತ್ಮನು ನಗುತ್ತಾ 'ಮಹಾನುಭಾವರೇ! ಸ್ವಾಗತವು ಕೂತಿಕೊಳ್ಳಿರಿ. ನಾವೇನು ಮಾಡಬೇಕು. ನನ್ನನ್ನು ನೋಡಲಿಕ್ಕೆ ನೀವು ಬಂದಿರುವುದು ಯುಕ್ತವಾಗಿರುವುದು. ನಾನೇ ಎಲ್ಲರಿಗೂ ಅತ್ಯಂತ ಪ್ರಿಯನು. ಇನ್ನು ಮುಂದೆ ಯಾಗಶಾಲೆಗೆ ಹೋಗಿರಿ. ನಿಮ್ಮ ಪತಿಗಳು ನಿಮ್ಮಿಂದ ಕೂಡಿಕೊಂಡು ಸತ್ರಯಾಗವನ್ನು ಮುಗಿಸುವರು' ಎಂದು ಹೇಳಿದನು.

ಅದನ್ನು ಕೇಳಿ ಬ್ರಾಹ್ಮಣಸ್ತ್ರೀಯರು 'ವಿಭೋ! ಇಂತಹ ಕ್ರೂರವಾದ ಮಾತನ್ನು ಆಡಬೇಡ. ಶಾಸ್ತ್ರವಚನವನ್ನು ಸತ್ಯವನ್ನಾಗಿ ಮಾಡು. ನಿನ್ನ ಪಾದಕ್ಕೆ ಸಮರ್ಪಿಸಿದ ತುಲಸೀಮಾಲೆಯನ್ನು ತಲೆಯಲ್ಲಿ ಧರಿಸಲಿಕ್ಕೆ ನಿನ್ನ ಪಾದಮೂಲಕ್ಕೆ ಬಂದಿರುವೆವು. ಎಲ್ಲಾ ಬಂಧುಗಳನ್ನು ಮೀರಿ ಬಂದಿರುವೆವು. ನಾವೀಗ ಹಿಂದಿರುಗಿ ಹೋದರೆ ನಮ್ಮ ಗಂಡಂದಿರೂ, ತಂದೆತಾಯಿಗಳೂ, ಮಕ್ಕಳೂ, ಅಣ್ಣತಮ್ಮಂದಿರೂ, ಬಂಧುಗಳೂ ನಮ್ಮನ್ನು ಸೇರಿಸಿಕೊಳ್ಳಲಾರರು. ಆದುದರಿಂದ ನಿನ್ನ ಪಾದಕಮಲವನ್ನು

ಮರೆಹೊಂದಿರುವ ನಮಗೆ ಬೇರೆ ಗತಿಯೇ ಇಲ್ಲ. ನೀನೇ ರಕ್ಷಿಸು' ಎಂದು ಹೇಳಿದರು.

ಭಗವಂತನು 'ನಿಮ್ಮ ಗಂಡಂದಿರೂ, ಅಣ್ಣತಮ್ಮಂದಿರೂ, ಮಕ್ಕಳೂ ಎಲ್ಲರೂ ನಿಮ್ಮನ್ನು ಸೇರಿಸಿಕೊಳ್ಳುವರು. ನಿಮ್ಮ ಮೇಲೆ ಯಾರೂ ಅಸೂಯೆಯನ್ನು ಹೊಂದಲಾರರು. ನನ್ನ ಭಕ್ತರಾದ ನಿಮ್ಮನ್ನು ದೇವತೆಗಳೂ ಕೂಡ ಅಂಗೀಕರಿಸುವರು. ಜನರಿಗೆ ಅಂಗಸಂಗವು ಪ್ರೀತಿಗೆ ಕಾರಣವಲ್ಲ. ಆದುದರಿಂದ ನೀವು ನನ್ನಲ್ಲಿಯೇ ಮನಸ್ಸನ್ನು ಇಡುವವರಾಗಿ ಬೇಗನೆ ನನ್ನನ್ನು ಹೊಂದುವಿರಿ. ದೂರದಲ್ಲಿ ಇದ್ದುಕೊಂಡೇ ಕೇಳಿಯೋ ಅಥವಾ ನೋಡಿಯೋ ಧ್ಯಾನ ಮಾಡಿಯೋ ನನ್ನಲ್ಲಿ ಉಂಟಾಗುವಷ್ಟು ಭಕ್ತಿಯು ಹತ್ತಿರದಲ್ಲಿ ಇದ್ದರೆ ಆಗಲಾರದು. ಆದುದರಿಂದ ನೀವು ನಿಮ್ಮ ಮನೆಗೆ ಹೋಗಿರಿ' ಎಂದು ಹೇಳಿದನು.

ತರುವಾಯ ಆ ಬ್ರಾಹ್ಮಣಸ್ತ್ರೀಯರು ಪುನಃ ಯಜ್ಞಶಾಲೆಗೇ ಬಂದು ಸೇರಿದರು. ಬ್ರಾಹ್ಮಣರೂ ಅಸೂಯಾಪಡದೆ ತಮ್ಮ ಸ್ತ್ರೀಯರಿಂದ ಕೂಡಿಕೊಂಡು ಆ ಸತ್ರಯಾಗವನ್ನು ಮುಗಿಸಿದರು. ಒಬ್ಬಳನ್ನು ಮಾತ್ರ ಪೂರ್ವದಲ್ಲಿಯೇ ಅವಳ ಗಂಡನು ಕೃಷ್ಣನ ಬಳಿಗೆ ಹೋಗಲಿಕ್ಕೆ ಬಿಟ್ಟಿರಲಿಲ್ಲ. ಅವಳು ಮನೆಯೊಳಗೇ ಇದ್ದುಕೊಂಡು ತಾನು ಪೂರ್ವದಲ್ಲಿ ಕೇಳಿದ ರೀತಿಯಲ್ಲಿ ಕೃಷ್ಣಪರಮಾತ್ಮನನ್ನು ಧ್ಯಾನಮಾಡುವವಳಾಗಿ ದೇಹವನ್ನು ಪರಿತ್ಯಾಗ ಮಾಡಿದಳು.

ಕೃಷ್ಣಪರಮಾತ್ಮನು ಬ್ರಾಹ್ಮಣಸ್ತ್ರೀಯರು ತಂದಿದ್ದ ಆ ಅನ್ನದಿಂದ ಗೋಪಾಲರಿಗೆ ಭೋಜನ ಮಾಡಿಸಿ ತಾನೂ ಭೋಜನ ಮಾಡಿದನು. ಈರೀತಿಯಾಗಿ ಲೀಲೆಯಿಂದ ಮನುಷ್ಯರಂತೆ ಇರುವ ರೂಪವನ್ನು ಧರಿಸಿದ್ದ ಕೃಷ್ಣಪರಮಾತ್ಮನು ಗೋವುಗಳನ್ನೂ ಗೋಪಾಲರನ್ನೂ ಗೋಪಿಯರನ್ನು ತನ್ನ ಮಾತುಗಳಿಂದಲೂ, ಕರ್ಮಗಳಿಂದಲೂ ಸಂತೋಷಪಡಿಸುತ್ತಾ ಇದ್ದನು.

ಇಲ್ಲಿ ಯಜ್ಞಮಾಡುತ್ತಿದ್ದ ಬ್ರಾಹ್ಮಣರು ಮನುಷ್ಯರಂತೆ ನಟಿಸುತ್ತಿದ್ದ ಜಗತ್ತಿಗೆ ಪ್ರಭುಗಳಾದ ಕೃಷ್ಣಬಲರಾಮರ ಯಾಚನೆಯನ್ನು ಭಂಗಮಾಡಿದ ಕಾರಣ ಅವರಿಗೆ ಅಪರಾಧ ಮಾಡುವೆವೆಂದು ಪಶ್ಚಾತ್ತಾಪವನ್ನು ಹೊಂದಿದರು. 'ನಮ್ಮ ಜನ್ಮಕ್ಕೆ ಬುದ್ಧಿಗೂ ಕುಲಕ್ಕೂ ಕ್ರಿಯಾಸಾಮರ್ಥ್ಯಕ್ಕೂ ಜ್ಞಾನಕ್ಕೂ ಧಿಕ್ಕಾರವಿರಲಿ. ಏಕೆಂದರೆ ನಾವು ಭಗವಂತನಲ್ಲಿ ವಿಮುಖರಾಗಿರುವೆವು. ಭಗವಂತನ ಬಂಧಕಶಕ್ತಿಯು ಜ್ಞಾನಿಗಳನ್ನು ಮೋಹಗೊಳಿಸುವುದು. ನಾವು ಇತರರಿಗೆ ಉಪದೇಶ ಮಾಡುವವರೇ ನಮ್ಮ ಕಾರ್ಯದಲ್ಲಿ ಮೋಹವುಳ್ಳವರಾಗಿರುವೆವು. ಏನು ಆಶ್ಚರ್ಯವು?

ಹೆಂಗಸರಿಗೂ ಜಗದ್ಗುರುವಾದ ಭಗವಂತನಲ್ಲಿ ಏನು ಭಕ್ತಿಯು! ಹೆಂಗಸರಿಗೆ ಉಪನಯನ ಸಂಸ್ಕಾರವಿಲ್ಲ, ಗುರುಕುಲದಲ್ಲಿ ವಾಸವಿಲ್ಲ, ತಪಸ್ಸು ಇಲ್ಲ, ಭಗವಂತನ ವಿಚಾರವಿಲ್ಲ, ನಮ್ಮಂತೆ ಶೌಚವಿಲ್ಲ, ಸತ್ಕರ್ಮಗಳಿಲ್ಲ, ಆದರೂ ಅವರಿಗೆ ಭಗವಂತನಲ್ಲಿ ದೃಢವಾದ ಭಕ್ತಿಯಿರುವುದು. ಉಪನಯನ ಸಂಸ್ಕಾರಾದಿಗಳುಳ್ಳವ ರಾಗಿದ್ದರೂ ನಮಗೆ ಇಲ್ಲ, ಮನೆಯಲ್ಲಿಯೇ ಆಸಕ್ತರಾಗಿ ನಮ್ಮ ಕರ್ತವ್ಯವನ್ನು ಮರೆತಿರುವ ನಮಗೆ ಸಜ್ಜನರಿಗೆ ಆಶ್ರಯನಾದ ಭಗವಂತನು ಗೋಪರ ಮಾತಿನಿಂದ ಸ್ಮರಣೆ ಮಾಡಿಸಿದನು. ಇಲ್ಲದಿದ್ದರೆ ಪೂರ್ಣಕಾಮನಾದ ಮೋಕ್ಷಾದಿ ಪುರುಷಾರ್ಥ ಗಳಿಗೇ ಸ್ವಾಮಿಯಾದ ಆ ಭಗವಂತನಿಗೆ ನಮ್ಮಿಂದ ಏನಾಗಬೇಕು? ಯಾವ ಭಗವಂತನ ಪಾದವನ್ನು ರಮಾದೇವಿಯರೇ ಸೇವಿಸುವರೋ ಅಂತಹ ಭಗವಂತನು ನಮ್ಮೊಡನೆ ಅನ್ನವನ್ನು ಬೇಡುವುದೆಂದರೆ ಕೇವಲ ಲೋಕವಿಡಂಬನೆಯು. ದೇಶವೂ, ಕಾಲವೂ, ದ್ರವ್ಯವೂ, ಮಂತ್ರ ತಂತ್ರ ಋತ್ವಿಕ್ಕುಗಳೂ, ಅಗ್ನಿಯೂ, ಯಜಮಾನನೂ, ಯಜ್ಞವೂ ಯಾರ ಅಧೀನವೋ ಅಂತಹ ಭಗವಂತನೇ ಭೂಮಿಯಲ್ಲಿ ಅವತರಿಸಿರುವನೆಂದು ಕೇಳಿದ್ದರೂ ಕೂಡ ನಾವು ಮೂಢರು ತಿಳಿಯದೆ ಹೋದೆವು. ಭಗವಂತನಿಗೆ ನಮಸ್ಕಾರವು. ಆದಿಪುರುಷನಾದ ಭಗವಂತನು, ತನ್ನ ಬಂಧಕಶಕ್ತಿಯಿಂದ ಮೋಹಿತರಾದ ಮಹಿಮೆಯನ್ನು ತಿಳಿಯದೆ ಇದ್ದವರಾದ, ನಮ್ಮ ಅಪರಾಧವನ್ನು ಕ್ಷಮಿಸಬೇಕು' ಈರೀತಿಯಾಗಿ ಆ ಬ್ರಾಹ್ಮಣರು ಭಗವಂತನಲ್ಲಿ ಅಪರಾಧ ಮಾಡಿದವರು ಕೃಷ್ಣಬಲರಾಮರನ್ನು ನೋಡುವ ಆಸೆಯುಳ್ಳವರಾದರೂ ಕಂಸನಿಂದ ಭಯವುಳ್ಳವರಾಗಿ ಅವರನ್ನು ನೋಡಲಿಕ್ಕೆ ಹೋಗಲಿಲ್ಲ.



## ಗೋವರ್ಧನ ಯಾಗವು [1]

ಒಂದು ಸಮಯದಲ್ಲಿ ಭಗವಂತನು ಇಂದ್ರದೇವರನ್ನು ಕುರಿತು ಯಾಗವನ್ನು ಮಾಡಲಿಕ್ಕೆ ಉದ್ಯುಕ್ತರಾಗಿದ್ದ ಗೋಪಾಲರನ್ನು ನೋಡಿದನು. ಶ್ರೀಭಗವಂತನು ಎಲ್ಲವನ್ನೂ ತಿಳಿದವನಾಗಿದ್ದರೂ, ಇಂದ್ರದೇವರು ತನ್ನನ್ನು ಮರೆತಿರುವ ಕಾರಣ ಅವರಿಗೆ ಸ್ಮರಣೆಪಡಿಸಬೇಕೆಂಬ ಅಭಿಪ್ರಾಯದಿಂದ ಆ ಯಾಗವನ್ನು ನಿಲ್ಲಿಸಬೇಕೆಂದು ಮನಸ್ಸುಳ್ಳವನಾಗಿ ಒಂದೂ ತಿಳಿಯದವನಂತೆ ನಟಿಸುತ್ತಾ ವಿನಯದಿಂದ ಬಗ್ಗಿಕೊಂಡು ನಂದಗೋಪನೇ ಮೊದಲಾದ ದೊಡ್ಡವರೊಡನೆ ಇದೇನು

1. ಭಾ. X-22 ಮತ್ತು ಮ.ತಾ.ನಿ. ಅ-13

ಸಂಭ್ರಮವೆಂದು ಕೇಳಿದನು. ಅದನ್ನು ಕೇಳಿ ನಂದಗೋಪನು 'ಮೇಘಚಕ್ರಕ್ಕೆ ಅಭಿಮಾನಿಯು ಇಂದ್ರದೇವರು. ಅವರಿಗೆ ಮೇಘಗಳು ದೇಹದಂತೆ ಇರುವುವು ಗಳು. ಆ ಮೇಘಗಳು ನಮ್ಮ ಜೀವನಕ್ಕೆ ಕಾರಣವಾದ ನೀರನ್ನು ಸುರಿಸುವುವು. ಆದುದರಿಂದ ನಾವೂ ಇತರರೂ ಮೇಘಗಳಿಗೆ ಸ್ವಾಮಿಯಾದ ಇಂದ್ರದೇವರನ್ನು ಅವರು ಕೊಟ್ಟ ನೀರಿನಿಂದ ಉಂಟಾದ ವಸ್ತುಗಳಿಂದ ಯಾಗದಿಂದ ಪೂಜಿಸುವೆವು. ಯಜ್ಞಮಾಡಿ ಉಳಿದ ವಸ್ತುವಿನಿಂದ ನಾವು ಜೀವಿಸುವೆವು. ನಮಗೆಲ್ಲಾ ಇಂದ್ರದೇವರೇ ಫಲವನ್ನು ಕೊಡುವವರು. ಈರೀತಿಯಾಗಿ ಪರಂಪರೆಯಿಂದ ಬಂದಿರುವ ಧರ್ಮವನ್ನು ಯಾರು ಕಾಮದಿಂದಲೋ ಲೋಭದಿಂದಲೋ ದ್ವೇಷದಿಂದಲೋ ಬಿಡುವರೋ ಅವರು ಶುಭವನ್ನು ಹೊಂದಲಾರರು' ಎಂದು ಹೇಳಿದನು.

ನಂದಗೋಪನು ಹೇಳಿದ ಮಾತನ್ನು ಕೇಳಿ ಕೃಷ್ಣಪರಮಾತ್ಮನು ಇಂದ್ರದೇವರಿಗೆ ಕೋಪವನ್ನು ಉಂಟುಮಾಡುತ್ತಾ ಹೇಳಿದನು. 'ಕರ್ಮದಿಂದಲೇ ಜನರು ಹುಟ್ಟುವರು. ಕರ್ಮದಿಂದಲೇ ಸಾಯುವರು. ಸುಖವೂ, ದುಃಖವೂ, ಭಯವೂ ಕ್ಷೇಮವೂ ಕರ್ಮದಿಂದಲೇ ಉಂಟಾಗುವುದು (ಕರ್ಮವೆಂದರೆ ಕರ್ಮಪ್ರೇರಕನಾದ ಪರಮಾತ್ಮನೆಂದು ಭಗವಂತನ ಅಭಿಪ್ರಾಯವು.) ತಮ್ಮ ತಮ್ಮ ಕರ್ಮವನ್ನು ಅನುಸರಿಸಿಕೊಂಡಿರುವ ಜನರಿಗೆ ಇಂದ್ರನಿಂದ ಏನಾಗಬೇಕು? ಜನರೆಲ್ಲರೂ ಸ್ವಭಾವದ ಅಧೀನರು (ಸ್ವಭಾವ ಶಬ್ದಕ್ಕೆ ಸ್ವತಂತ್ರನಾದ ಪರಮಾತ್ಮನೆಂದೇ ಭಗವಂತನ ಅಭಿಪ್ರಾಯವು.) ದೇವತೆಗಳೂ, ಅಸುರರೂ, ಮನುಷ್ಯರೂ, ಸ್ವಭಾವದ ಅಧೀನರು. ಜನರು ಉತ್ತಮಾಧಮ ದೇಹಗಳನ್ನು ಕರ್ಮದಿಂದ ಹೊಂದುವರು. ಕರ್ಮದಿಂದಲೇ ದೇಹವನ್ನು ಬಿಡುವರು. ಶತ್ರು ಮಿತ್ರ ಉದಾಸೀನ ಎಲ್ಲವೂ ಕರ್ಮದ ಅಧೀನವು. ಆದುದರಿಂದ ಕರ್ಮವನ್ನೇ ಪೂಜಿಸಬೇಕು. ಒಬ್ಬರನ್ನು ಉಪಜೀವಿಸಿ ಇನ್ನೊಬ್ಬರನ್ನು ಸೇವಿಸಿದರೆ ಅವರಿಗೆ ಫಲವುಂಟಾಗ ಲಾರದು. ಯಾರು ಯಾರಿಂದ ಜೀವಿಸುತ್ತಾರೋ ಅವರೇ ಅವನಿಗೆ ದೇವತೆಯು. ಬ್ರಾಹ್ಮಣನು ವೇದದಿಂದ ಜೀವಿಸಬೇಕು. ಕ್ಷತ್ರಿಯನು ಭೂಮಿಯ ರಕ್ಷೆಯಿಂದಲೂ, ವೈಶ್ಯನು ವ್ಯಾಪಾರದಿಂದಲೂ ಶೂದ್ರನು ಮೂರು ವರ್ಣದವರ ಸೇವೆಯಿಂದಲೂ ಇರಬೇಕು. ಕೃಷಿ, ವ್ಯಾಪಾರ, ಗೋರಕ್ಷೆ, ಹಣವನ್ನು ಬಡ್ಡಿಗೆ ಹಾಕುವುದು ಎಂದು ನಾಲ್ಕುವಿಧವಾದದ್ದು ವೈಶ್ಯ ವೃತ್ತಿಯು. ನಾವು ಗೋವುಗಳಿಂದ ಜೀವಿಸುವರು. ಸತ್ವ ರಜಸ್ಸು, ತಮಸ್ಸು ಎಂದು ಮೂರು ಗುಣಗಳು ಜಗತ್ತಿನ ಸ್ಥಿತಿ ಉತ್ಪತ್ತಿ ನಾಶಗಳಿಗೆ ಕಾರಣವಾದವುಗಳು. ರಜಸ್ಸಿನಿಂದ (ಭಕ್ತರನ್ನು ಸಂತೋಷಪಡಿಸುವ ಕಾರಣರಜಸ್ಸು

ಎಂದು ಹೆಸರುಳ್ಳ ಪರಮಾತ್ಮನಿಂದ ಎಂದು ಭಗವಂತನ ಅಭಿಪ್ರಾಯವು) ಜಗತ್ತು ಪರಸ್ಪರವಾಗಿ ಹುಟ್ಟುತ್ತದೆ. ರಜಸ್ಸಿನಿಂದ ಪ್ರೇರಿತಗಳಾಗಿ ಮೇಘಗಳು ಸರ್ವಸ್ಥಳಗಳಲ್ಲಿ ಮಳೆಸುರಿಸುತ್ತವೆ. ಜನರು ಆ ಮಳೆಯಿಂದ ಕಾರ್ಯಸಿದ್ಧಿಯನ್ನು ಹೊಂದುತ್ತಾರೆ. ಇಂದ್ರನು ಯಾರಿಗೆ ಏನು ಮಾಡುತ್ತಾನೆ? ಅವನನ್ನು ಯಾಕೆ ಪೂಜಿಸಬೇಕು. ನಾವು ದೇಶದಲ್ಲಿ ಇರುವವರಲ್ಲ, ಗ್ರಾಮದಲ್ಲಿ ಇರುವವರಲ್ಲ, ನಾವು ಮನೆಗಳನ್ನು ಕಟ್ಟಿಕೊಂಡು ಇಲ್ಲ. ಕಾಡಿನಲ್ಲಿ ಬೆಟ್ಟದಲ್ಲಿ ವಾಸಮಾಡುವವರು. ಆದುದರಿಂದ ಗೋವುಗಳಿಗೂ, ಬ್ರಾಹ್ಮಣರಿಗೂ, ಪರ್ವತಕ್ಕೂ ಯಾಗವನ್ನು ಮಾಡಿರಿ. ಇಂದ್ರದೇವರ ಯಾಗಕ್ಕಾಗಿ ಸಂಗ್ರಹಿಸಿದ ಸಾಮಗ್ರಿಯಿಂದ ಈ ಯಾಗವು ನಡೆಯಲಿ. ನಾನಾ ವಿಧವಾದ ಅಡುಗೆಯು ಆಗಲಿ. ತೊವ್ವೆ, ಪಾಯಸ, ಹುಗ್ಗಿ, ಅಪ್ಪ, ಚಕ್ಕುಲಿ ಇತ್ಯಾದಿಗಳೆಲ್ಲವನ್ನು ಮಾಡಿಸಿರಿ. ಎಲ್ಲರ ಹಾಲು ಮೊಸರು ತುಪ್ಪಗಳನ್ನು ಸಂಗ್ರಹಮಾಡಿರಿ. ಒಳ್ಳೇ ಬ್ರಾಹ್ಮಣರು ಅಗ್ನಿಯಲ್ಲಿ ಚೆನ್ನಾಗಿ ಹೋಮವನ್ನು ಮಾಡಲಿ. ಬ್ರಾಹ್ಮಣರಿಗೆ ಬೇಕಾದ ಅನ್ನದಾನವನ್ನು ಮಾಡಬೇಕು. ದನಗಳನ್ನೇ ದಕ್ಷಿಣೆಯಾಗಿ ಕೊಡಿರಿ. ಇತರರಿಗೂ ಚಂಡಾಲರವರೆಗೆ ಎಲ್ಲರಿಗೂ ಅನ್ನವನ್ನು ಹಾಕಿರಿ. ಗೋವುಗಳಿಗೆ ಹುಲ್ಲನ್ನು ಹಾಕಿರಿ. ಪರ್ವತಕ್ಕೆ ಬಲಿಯನ್ನು ಹಾಕಿರಿ. ಎಲ್ಲರೂ ಭೋಜನವನ್ನು ಮಾಡಿ ಗಂಧವನ್ನು ಹಚ್ಚಿಕೊಂಡು ಒಳ್ಳೇ ವಸ್ತ್ರವನ್ನು ಉಟ್ಟುಕೊಂಡು ಅಲಂಕಾರ ಮಾಡಿಕೊಂಡು ಗೋವುಗಳಿಗೂ, ಬ್ರಾಹ್ಮಣರಿಗೂ, ಅಗ್ನಿಗೂ, ಪರ್ವತಕ್ಕೂ ಪ್ರದಕ್ಷಿಣೆ ಹಾಕಿರಿ. ಈರೀತಿಯಾಗಿ ಮಾಡುವುದು ನನಗೆ ಸಮ್ಮತವಾದದ್ದು. ನಿಮ್ಮ ಮನಸ್ಸಿಗೆ ಸರಿತೋರಿದರೆ ಮಾಡಿರಿ. ಈ ಯಾಗವು ಗೋವುಗಳಿಗೂ, ಬ್ರಾಹ್ಮಣರಿಗೂ, ಪರ್ವತಕ್ಕೂ, ನನಗೂ ಪ್ರಿಯವಾದ ಯಾಗವು' ಎಂದು ಹೇಳಿದನು.

ಈರೀತಿಯಾಗಿ ಇಂದ್ರದೇವರ ದರ್ಪವನ್ನು ನಾಶಮಾಡಬೇಕೆಂಬ ಅಭಿಪ್ರಾಯದಿಂದ ಭಗವಂತನು ಹೇಳಿದ ಮಾತನ್ನು ನಂದಗೋಪನೇ ಮೊದಲಾದವರು ಸರಿಯೆಂದು ಅಂಗೀಕರಿಸಿದರು. ಪರಮಾತ್ಮನು ಹೇಳಿದಂತೆಯೇ ಮಾಡಿದರು. ಪುಣ್ಯಾಹವಾಚನೆಯನ್ನು ಮಾಡಿಸಿ ಬ್ರಾಹ್ಮಣರಿಗೆ ಭೋಜನ ಮಾಡಿಸಿ ಗೋವುಗಳಿಗೂ ಆಹಾರವನ್ನು ಹಾಕಿ ಗೋವರ್ಧನಪರ್ವತಕ್ಕೆ ಅನ್ನಾದಿಗಳ ರಾಶಿಯನ್ನು ಬಲಿಯನ್ನಾಗಿ ಹಾಕಿ ಗೋವುಗಳನ್ನು ಮುಂದೆ ಮಾಡಿಕೊಂಡು ಆ ಪರ್ವತಕ್ಕೆ ಪ್ರದಕ್ಷಿಣೆ ಬಂದರು. ಗೋಪಿಯರು ಅಲಂಕಾರ ಮಾಡಿಕೊಂಡು ಬಂಡಿಯಲ್ಲಿ ಕೂತುಕೊಂಡು ಕೃಷ್ಣನ ಮಹಿಮೆಗಳನ್ನು ಹಾಡುಹೇಳುತ್ತಾ ಪ್ರದಕ್ಷಿಣೆ ಬಂದರು. ಕೃಷ್ಣಪರಮಾತ್ಮನು ಗೋಪಾಲರಿಗೆ ನಂಬಿಕೆಯನ್ನು ಉಂಟುಮಾಡುವುದ

ಕ್ಕಾಗಿ ಒಂದು ದೊಡ್ಡರೂಪವನ್ನು ಧರಿಸಿಕೊಂಡು ನಾನೇ ಪರ್ವತ ಎಂದು ಹೇಳುತ್ತಾ ಎದುರಲ್ಲಿ ರಾಶಿಹಾಕಿದ್ದ ಅನ್ನವನ್ನು ಊಟ ಮಾಡಿದನು. ಕೃಷ್ಣಪರಮಾತ್ಮನು ಆ ತನ್ನ ದೊಡ್ಡರೂಪಕ್ಕೆ ಎಲ್ಲಾ ಗೋಪಾಲರಿಂದ ಕೂಡಿಕೊಂಡು ನಮಸ್ಕರಿಸಿದನು. 'ನೋಡಿ ಆಶ್ಚರ್ಯವು! ಪರ್ವತವು ರೂಪವುಳ್ಳದ್ದಾಗಿ ಬಂದು ನಮಗೆ ಅನುಗ್ರಹವನ್ನು ಮಾಡಿತು. ಇದು ಅವಮಾನ ಮಾಡಿದವರನ್ನು ಇಚ್ಛಾನುಸಾರವಾದ ರೂಪವನ್ನು ಧರಿಸಿ ಕೊಂದುಹಾಕುವುದು. ಆದುದರಿಂದ ನಮ್ಮ ಮತ್ತು ಗೋವುಗಳ ಕ್ಷೇಮಕ್ಕಾಗಿ ಇದಕ್ಕೆ ನಮಸ್ಕಾರವನ್ನು ಮಾಡುವ' ಎಂದು ಹೇಳಿದನು. ಈರೀತಿಯಾಗಿ ಗೋಪಾಲರು ಕೃಷ್ಣಪರಮಾತ್ಮನಿಂದ ಪ್ರೇರಿತರಾಗಿ ಪರ್ವತ, ಬ್ರಾಹ್ಮಣ, ಗೋಗಳ ಯಾಗವನ್ನು ಮಾಡಿ ಕೃಷ್ಣನಿಂದ ಸಹಿತರಾಗಿ ಗೋಕುಲಕ್ಕೆ ಹೋದರು.



## ಗೋವರ್ಧನೋದ್ಧಾರವು [1]

ಇಂದ್ರದೇವರಿಗೆ ಭೂಮಿಯಲ್ಲಿ ಭಗವಂತನು ಅವತರಿಸಿದ್ದ ವಿಷಯವು ಮರೆತುಹೋಗಿತ್ತು. ಆದುದರಿಂದ ಯಾರೋ ಒಬ್ಬ ಮನುಷ್ಯನಾದ ಕೃಷ್ಣನ ಮಾತನ್ನು ಕೇಳಿ ಗೋಪಾಲರು ತನಗೆ ಮಾಡಬೇಕಾದ ಯಾಗವನ್ನು ಮಾಡಲಿಲ್ಲವೆಂದು ಕೋಪಿಸಿಕೊಂಡರು. ಇಂದ್ರದೇವರು ಕೋಪಿಸಿಕೊಂಡು ಪ್ರಲಯಕಾಲದ ಸಾಂವರ್ತಕ ಎಂದು ಹೆಸರುಳ್ಳ ಮೇಘಗಳ ಸಮೂಹಕ್ಕೆ ಆಜ್ಞೆಯನ್ನು ಮಾಡಿದರು. ತಾನೇ ಮೂರುಲೋಕಕ್ಕೆ ಅಧಿಪತಿಯೆಂಬ ಅಹಂಕಾರದಿಂದ 'ಕಾಡಿನಲ್ಲಿ ಬದುಕುವ ಗೋಪರಿಗೆ ಏನು ಶ್ರೀಮದಮಾಹಾತ್ಮ್ಯವು. ಅವರು ಮನುಷ್ಯನಾದ ಕೃಷ್ಣನನ್ನು ಆಶ್ರಯಿಸಿ ದೇವತೆಗಳ ಅವಮಾನವನ್ನು ಮಾಡಿದರಲ್ಲಾ! ತತ್ವಜ್ಞಾನವನ್ನು ಬಿಟ್ಟು ಬರೇ ಕಾಮ್ಯಕರ್ಮವನ್ನು ಸಂಸಾರಸಮುದ್ರವನ್ನು ದಾಟಲಿಕ್ಕೆ ಇಚ್ಛಿಸುವವರಂತೆ ಇದ್ದಾರಲ್ಲಾ! ಬಹು ಮಾತಾಡುವವನಾದ, ಅಭಿಮಾನಿಯಾದ, ಮತ್ತನಾದ, ಅಜ್ಞನಾದ ತನ್ನನ್ನು ಪಂಡಿತನೆಂದು ತಿಳಿದುಕೊಂಡು ಮನುಷ್ಯನಾದ ಕೃಷ್ಣನನ್ನು ಆಶ್ರಯಿಸಿ ಗೋಪಾಲರು ನನಗೆ ಅಪ್ರಿಯವನ್ನು ಮಾಡಿರುವರು. ಸಂಪತ್ತಿನಿಂದ ಅಹಂಕಾರಪಟ್ಟವರಾದ, ಕೃಷ್ಣನನ್ನು ಆಶ್ರಯಿಸಿದವರಾದ, ಅವರ ಶ್ರೀಮದದ ಸ್ತಬ್ಧತೆಯನ್ನು ನಾಶಗೊಳಿಸಿರಿ. ಅವರ ಗೋವನ್ನು ಸಂಹರಿಸಿರಿ. ನಾನೂ ಕೂಡ ಐರಾವತದ ಮೇಲೆ ಕೂತುಕೊಂಡು ಮಹಾವೀರ್ಯವುಳ್ಳ ಗಾಳಿಗಳಿಂದ ಕೂಡಿಕೊಂಡು ನಂದಗೋಕುಲವನ್ನು

1. ಭಾ. X-23 ಮತ್ತು ಮ.ತಾ.ನಿ. ಅ-13

ನಾಶಮಾಡುವ ಇಚ್ಛೆಯಿಂದ ಬರುವೆನು' ಎಂದು ಹೇಳಿದರು (ಇಂದ್ರದೇವರು).

ಈರೀತಿಯಾಗಿ ಇಂದ್ರದೇವರಿಂದ ಆಜ್ಞೆಯನ್ನು ಹೊಂದಿದ ಬಂಧನ ರಹಿತಗಳಾದ ಮೇಘಗಳು ನಂದಗೋಕುಲವನ್ನು ಮಳೆಯ ಧಾರೆಗಳಿಂದ ಪೀಡಿಸಿದವು. ಮಿಂಚಿನಿಂದ ಪ್ರಕಾಶಿಸುತ್ತಾ, ಗುಡುಗಿನ ಶಬ್ದವನ್ನು ಮಾಡುತ್ತಾ, ಮಹಾಗಾಳಿಗಳಿಂದ ಪ್ರೇರಿತಗಳಾಗಿ ಕಲ್ಲು ಮಳೆಗಳನ್ನು ಸುರಿಸಿದವು. ದೊಡ್ಡ ಕಂಬದಷ್ಟು ದೊಡ್ಡದಾದ ಮಳೆಯಧಾರೆಗಳು ಬೀಳುತ್ತಿದ್ದವು. ಇದರಿಂದ ನೀರಿನ ಪ್ರವಾಹವು ತುಂಬಿ ಹೆಚ್ಚಿನ ಭೂಮಿಯಲ್ಲಿ ಎತ್ತರ ತಗ್ಗುಗಳು ಕಾಣಿಸಲಿಲ್ಲ. ಅತಿಮಳೆಯಿಂದಲೂ, ಗಾಳಿಯಿಂದಲೂ, ಪಶುಗಳೂ, ಗೋಪಾಲರೂ, ಗೋಪಿಯರೂ, ನಡುಗಿಹೋದವರಾಗಿ ಪರಮಾತ್ಮನನ್ನೇ ಮರೆಹೊಂದಿದರು. 'ಭಕ್ತವತ್ಸಲ! ಕೃಷ್ಣ ಕೃಷ್ಣ! ನೀನೇ ರಕ್ಷಕನಾಗಿ ಉಳ್ಳ ಗೋಕುಲವನ್ನು, ಕೋಪಿಸಿಕೊಂಡಿರುವ ದೇವತೆಯಿಂದ ರಕ್ಷಣೆ ಮಾಡಬೇಕು! ಎಂದು ಜನರು ಹೇಳಿಕೊಂಡರು.

ಆಗ ಭಗವಂತನು ಕಲ್ಲುಮಳೆಯಿಂದ ಬಡಿಯಲ್ಪಟ್ಟು ಜ್ಞಾನ ಶೂನ್ಯವಾದ ಜನರನ್ನು ನೋಡಿ, ಇದು ಕೋಪಿಸಿಕೊಂಡ ಇಂದ್ರದೇವರು ಮಾಡಿದ ಕಾರ್ಯವೆಂದು ತಿಳಿದುಕೊಂಡನು. 'ಇದು ಮಳೆಯು ಬರುವ ಕಾಲವಲ್ಲ, ಈಗ ಇಂದ್ರನು ತನ್ನ ಯಾಗವು ನಿಂತುಹೋಯಿತು ಎಂಬ ಕೋಪದಿಂದ ನಾಶಮಾಡಬೇಕೆಂಬ ಅಭಿಪ್ರಾಯದಿಂದ ಗಾಳಿಸಹಿತವಾದ ಕಲ್ಲು ಮಳೆಯನ್ನು ಸುರಿಸುತ್ತಿರುವನು. ಅದಕ್ಕೆ ಸರಿಯಾದ ಪ್ರತೀಕಾರವನ್ನು ನನ್ನ ಸಾಮರ್ಥ್ಯದಿಂದ ಮಾಡುವೆನು. ಲೋಕಪಾಲಕನೆಂದು ಅಭಿಮಾನವುಳ್ಳ ಅವನ ಅಹಂಕಾರವನ್ನು ನಾಶಮಾಡುವೆನು. ನನ್ನ ಭಕ್ತರಾದ ದೇವತೆಗಳಿಗೆ ತಾನೇ ಸಮರ್ಥನೆಂಬ ಅಹಂಕಾರವು ಬರಬಾರದು. ಅಂತವರಿಗೆ ನನ್ನಿಂದ ಮಾನಭಂಗವಾದರೆ ಶಾಂತಿಯಾಗುವುದು. ಆದುದರಿಂದ ನಾನು ರಕ್ಷಕನಾಗಿ ಗೋಕುಲವನ್ನು ಉಪಾಯದಿಂದ ರಕ್ಷಿಸುವೆನು. ನನ್ನ ಭಕ್ತರನ್ನು ರಕ್ಷಿಸುವುದೇ ನನ್ನ ವ್ರತವು' ಈ ಪ್ರಕಾರವಾಗಿ ಭಗವಂತನು ಹೇಳಿಕೊಂಡು ಚಿಕ್ಕಹುಡುಗನು ನಾಯಿಕೊಡೆಯನ್ನು ಕಿತ್ತಿ ತೆಗೆಯುವಂತೆ ಗೋವರ್ಧನ ಪರ್ವತವನ್ನು ಕಿತ್ತಿ ಮೇಲಕ್ಕೆ ಎತ್ತಿಹಿಡಿದನು. 'ಅಮ್ಮ! ತಂದೆಯೇ! ಗೋಪರೇ! ಎಲ್ಲರೂ ಈ ಬೆಟ್ಟದ ಕೆಳಗಿರುವ ತಗ್ಗಾದ ಪ್ರದೇಶಕ್ಕೆ ಬಂದು ಸೇರಿರಿ. ನನ್ನ ಕೈಯಿಂದ ಬೆಟ್ಟವು ಕೆಳಗೆ ಬೀಳುವುದೆಂದು ಭಯಪಡಬೇಡಿರಿ. ಇಲ್ಲಿ ಗಾಳಿಯ ಮಳೆಯ ಭಯವೂ ಇಲ್ಲ, ಅವುಗಳಿಂದ ರಕ್ಷೆಯನ್ನು ಮಾಡಿರುವೆನು' ಎಂದು ಭಗವಂತನು ನುಡಿದನು.

ಅದನ್ನು ಕೇಳಿ ಗೋಪಗೋಪಿಯರು ಪಶುಗಳಿಂದ ಸಹಿತರಾಗಿ ತಮ್ಮ

ಧನದಿಂದಲೂ ಸಹಿತರಾಗಿ ಅವಕಾಶವಿದ್ದಲ್ಲಿ ಬಂದು ಪ್ರವೇಶಿಸಿ ನಿಂತುಕೊಂಡರು. ಎಲ್ಲರೂ ಹಸಿವೆಯನ್ನು ದಾಹವನ್ನು ಸುಖಾಪೇಕ್ಷೆಯನ್ನು ಬಿಟ್ಟು ಕೃಷ್ಣಪರಮಾತ್ಮನನ್ನೇ ನೋಡುತ್ತಿದ್ದರು. ಹಾಗೆಯೇ ಭಗವಂತನು ಏಳು ದಿವಸಗಳಲ್ಲಿ ಆ ಪರ್ವತವನ್ನು ಎತ್ತಿಹಿಡಿದನು. ಒಂದು ಹೆಜ್ಜೆಯೂ ಕದಲಲಿಲ್ಲ. ತರುವಾಯ ಇಂದ್ರದೇವರಿಗೆ ಕೃಷ್ಣನ ಸ್ವರೂಪಸಾಮರ್ಥ್ಯವನ್ನು ನೋಡಿ ಅತಿ ಆಶ್ಚರ್ಯವುಂಟಾಯಿತು. ತರುವಾಯ ಭಗವಂತನು ಅವತರಿಸಿರುವನೆಂದು ಸ್ಮರಣೆಯುಂಟಾಯಿತು. ತರುವಾಯ ಇಂದ್ರದೇವರು ಅಹಂಕಾರರಹಿತರಾಗಿ ಭ್ರಷ್ಟಸಂಕಲ್ಪರಾಗಿ ತನ್ನ ಮೇಘಗಳನ್ನು ನಿಲ್ಲಿಸಿದರು. ಆಕಾಶದಲ್ಲಿ ಮೇಘಗಳು ಕಾಣಿಸದೆ ಹೋದವು. ಸೂರ್ಯನು ಕಾಣಿಸಿದನು. ಭಯಂಕರವಾದ ಗಾಳಿಮಳೆಗಳು ನಿಂತು ಹೋದವು. ಅದನ್ನು ನೋಡಿ ಪರಮಾತ್ಮನು ಗೋಪರೊಡನೆ 'ಇನ್ನು ನೀವು ಹೊರಗೆ ಹೋಗಿರಿ. ಹೆಂಗಸರೂ ಮಕ್ಕಳೂ ಹಣಸಹಿತವಾಗಿ ಹೊರಗೆ ಹೋಗಿರಿ. ಭಯವನ್ನು ಬಿಡಿರಿ. ಗಾಳಿಮಳೆಗಳು ನಿಂತುಹೋದವು. ನದಿಯ ಪ್ರವಾಹವೂ ಕಡಿಮೆಯಾಯಿತು' ಎಂದು ಹೇಳಿದನು.

ತರುವಾಯ ಎಲ್ಲಾ ಗೋಪರೂ ತಮ್ಮ ತಮ್ಮ ಗೋವುಗಳನ್ನು ಧನವನ್ನು ಹಿಡಿದುಕೊಂಡು ಹೆಂಗಸರೂ, ಮಕ್ಕಳೂ, ಮುದುಕರೂ ಮೆಲ್ಲಮೆಲ್ಲನೆ ಹೊರಗೆ ಬಂದರು. ಭಗವಂತನು ಎಲ್ಲರೂ ನೋಡುವಂತೆ ಅನಾಯಾಸದಿಂದ ಆ ಪರ್ವತವನ್ನು ಪೂರ್ವದಂತೇ ಅದು ಇದ್ದಲ್ಲಿಯೇ ಇಟ್ಟನು. ತರುವಾಯ ಎಲ್ಲ ಗೋಪಾಲರೂ ಪ್ರೇಮವೇಗದಿಂದ[1] ಬಂದು ಕೃಷ್ಣನನ್ನು ಕಟ್ಟಿಕೊಂಡರು. ಗೋಪಿಯರೂ ಸ್ನೇಹದಿಂದ ಸಂತೋಷದಿಂದ ಪೂಜಿಸಿದರು. ಮೊಸರು ಮೊದಲಾದುವನ್ನು ಕೊಟ್ಟರು. ಆಶೀರ್ವಾದವನ್ನು ಮಾಡಿದರು. ಯಶೋದೆಯೂ, ರೋಹಿಣಿಯೂ, ನಂದಗೋಪನೂ, ಬಲರಾಮದೇವರೂ, ಕೃಷ್ಣಪರಮಾತ್ಮನನ್ನು ಆಲಂಗಿಸಿ ಸ್ನೇಹದಿಂದ ಆಶೀರ್ವಾದ ಮಾಡಿದರು. ಆಕಾಶದಲ್ಲಿ ದೇವತೆಗಳೂ, ಗಂಧರ್ವರೂ, ಸಿದ್ಧರೂ, ಚಾರಣರೂ, ಸ್ತೋತ್ರ ಮಾಡಿದರು. ಹೂವಿನಮಳೆಯನ್ನು ಸುರಿಸಿದರು. ಸ್ವರ್ಗದಲ್ಲಿ ಶಂಖದುಂದುಭಿಗಳನ್ನು ಬಾರಿಸಿದರು. ತುಂಬುರು ಮೊದಲಾದ ಗಂಧರ್ವರು ಸ್ತೋತ್ರ ಮಾಡಿದರು. ತರುವಾಯ ಪರಮಾತ್ಮನು ತನ್ನಲ್ಲಿ ಭಕ್ತಿಯುಳ್ಳ ಗೋಪಾಲರಿಂದ ಕೂಡಿಕೊಂಡು ಗೋಕುಲವನ್ನು ಪ್ರವೇಶಿಸಿದನು. ಗೋಪಿಯರು ಭಗವಂತನು ಮಾಡಿದ ಕಾರ್ಯಗಳನ್ನು ಸಂತೋಷದಿಂದ ಗಾಯನಮಾಡಿದರು.



1. ಭಕ್ತಿಯಿಂದ

# ಗೋಪರು ಆಶ್ಚರ್ಯಪಟ್ಟದ್ದು [1]

ಗೋಪಾಲರು ಈ ಪ್ರಕಾರವಾದ (ಕೃಷ್ಣನ) ಕರ್ಮಗಳನ್ನು ನೋಡಿ ಭಗವಂತನ ಮಹಿಮೆಯನ್ನು ತಿಳಿಯದೆ ಅತ್ಯಂತ ಆಶ್ಚರ್ಯವುಳ್ಳವರಾಗಿ ನಂದಗೋಪನ ಬಳಿಗೆ ಬಂದು ಹೇಳಿದರು. 'ನಂದಗೋಪನೇ! ನಿನ್ನ ಮಗನು ಇಂತಹ ಅದ್ಭುತಕರ್ಮಗಳನ್ನು ಮಾಡಿರುವನಲ್ಲಾ! ಇವನು ನಮ್ಮಂತಹ ಅಜ್ಞಾನಿಗಳ ಮಧ್ಯದಲ್ಲಿ ಹುಟ್ಟಲಿಕ್ಕೆ ಅರ್ಹನಾಗಿಲ್ಲ. ಏಳುವರ್ಷದ ಬಾಲಕನು ಒಂದು ಕೈಯಿಂದ ಹೇಗೆ ಎತ್ತಿಹಿಡಿಯುವನು? ಚಿಕ್ಕ ಕೂಸಾಗಿರುವಾಗ ಕಣ್ಣುಮುಚ್ಚಿಕೊಂಡು ಪೂತನೆಯ ಮೊಲೆಯನ್ನು ಪ್ರಾಣಸಹಿತವಾಗಿ ಪಾನಮಾಡಿದನು. ಕೆಳಗೆ ಮಲಗಿಕೊಂಡು ಕಾಲನ್ನು ಮೇಲೆ ತೂಕುವಾಗ ಬಂಡಿಯು ವಿಪರೀತವಾಗಿ ಬಿದ್ದಿತು. ಒಂದು ವರ್ಷದ ಬಾಲಕನಾಗಿರುವಾಗ ತೃಣಾವರ್ತನೆಂಬ ದೈತ್ಯನು ಆಕಾಶಮಾರ್ಗದಲ್ಲಿ ಎತ್ತಿಕೊಂಡು ಹೋಗಲು ಅವನನ್ನು ಸಂಹಸಿರಿದನು. ಬೆಣ್ಣೆಯನ್ನು ಕದ್ದುಕೊಳ್ಳಲು ತಾಯಿಯು ವರಳಲ್ಲಿ ಕಟ್ಟಿಹಾಕಲು ಅದನ್ನು ಸೆಳೆದುಕೊಂಡು ಹೋಗಿ ಸರಳೀಮರಗಳನ್ನು ಬೀಳಿಸಿದನು. ಬಾಲಕರಿಂದ, ಬಲರಾಮನಿಂದ ಕೂಡಿಕೊಂಡು ವನದಲ್ಲಿ ಕರುಗಳನ್ನು ಮೇಯಿಸುತ್ತಿರಲು ಕೊಲ್ಲಲಿಕ್ಕೆ ಬಂದ ಬಕಾಸುರನನ್ನು ಹಿಡಿದು ಕೈಗಳಿಂದ ಬಾಯಿಯಲ್ಲಿಯೇ ಸೀಳಿದನು. ಬಲರಾಮನಿಂದ ಕೂಡಿಕೊಂಡು ಕತ್ತೆಯ ರೂಪವನ್ನು ಅಸುರನನ್ನು ಸಂಹರಿಸಿ ತಾಲವನಕ್ಕೆ ಕ್ಷೇಮವನ್ನು ಉಂಟುಮಾಡಿದನು. ಬಲರಾಮನಿಂದ ಪ್ರಲಂಬಾಸುರನನ್ನು ಕೊಲ್ಲಿಸಿ ಗೋಕುಲದ ಪಶುಗಳನ್ನು ಗೋಪಾಲರನ್ನು ಕಾಡುಕಿಚ್ಚಿನಿಂದ ಬಿಡಿಸಿದನು. ಮಹಾಭಯಂಕರವಾದ ಸರ್ಪವನ್ನು ಬಲಾತ್ಕಾರದಿಂದ ಹೊರಡಿಸಿ ಯಮುನೆಯ ನೀರಿನಲ್ಲಿ ವಿಷವಿಲ್ಲದಂತೆ ಮಾಡಿದನು. ನಂದಗೋಪನೇ! ನಿನ್ನ ಮಗನಲ್ಲಿ ನಮಗೆಲ್ಲಾ ಇಷ್ಟು ಸ್ನೇಹವೇಕೆ ಉಂಟಾಗಿರುವುದು. ನಿನ್ನ ಮಗನಿಗೆ ಏಕೆ ಇಷ್ಟು ಸ್ನೇಹವಿರುವುದು? ಏಳು ವರ್ಷದ ಬಾಲಕನೆಲ್ಲಿ! ಆ ದೊಡ್ಡ ಪರ್ವತವನ್ನು ಎತ್ತಿಹಿಡಿದುವುದು ಎಲ್ಲಿ? ಇದರಿಂದ ನಿನ್ನ ಮಗನಲ್ಲಿ[2] ನಮಗೆ ಸಂದೇಹವುಂಟಾಗುತ್ತದೆ' ಎಂದು ಹೇಳಿದರು.

ಆಗ ನಂದಗೋಪನು ''ಗೋಪರೇ! ನನ್ನ ಮಾತನ್ನು ಕೇಳಿರಿ. ನನ್ನ ಮಗನ ಮೇಲಿನ ಸಂದೇಹವನ್ನು ಬಿಡಿರಿ. ನನ್ನ ಮಗನ ವಿಷಯವಾಗಿ ಗರ್ಗಾಚಾರ್ಯರು ಹೇಳಿರುವ ಮಾತನ್ನು ಕೇಳಿರಿ. 'ಇವನಿಗೆ ಒಂದೊಂದು ಯುಗದಲ್ಲಿ ಅವತರಿಸುವಾಗ

---

1. ಭಾ. X-24 ಮತ್ತು ಮ.ತಾ.ನಿ. ಅ-13 2. ಸಾಮಾನ್ಯ ವ್ಯಕ್ತಿಯಲ್ಲವೆಂದು

ಬಿಳಿ, ಕೆಂಪು, ಅರಸಿನ ರೂಪಗಳು ಆಗಿದ್ದವು. ಈಗ ಕೃಷ್ಣರೂಪವನ್ನು ಧರಿಸಿರುವನು. ನಿನ್ನ ಮಗನು ಪೂರ್ವದಲ್ಲಿ ಒಂದು ಸಮಯದಲ್ಲಿ ವಸುದೇವನ ಮಗನಾಗಿ ಹುಟ್ಟಿದ್ದನು. ಆದುದರಿಂದ ಇವನನ್ನು ವಾಸುದೇವ ಎಂದು ಜ್ಞಾನಿಗಳು ಹೇಳುವರು. ನಿನ್ನ ಮಗನಿಗೆ ಅವನ ಗುಣಕರ್ಮಗುಣಗಳನ್ನು ಅನುಸರಿಸಿರುವ (ಅನುಗುಣವಾಗಿ) ಬಹು ಹೆಸರುಗಳು ಇರುವುವು. ಅವುಗಳನ್ನು ನಾನು ತಿಳಿದಿರುವೆನು. ಜನರು ತಿಳಿಯಲಾರರು. ಇವನು ನಿಮಗೆ ಶ್ರೇಯಸ್ಸನ್ನು ಉಂಟುಮಾಡುವನು. ಇವನಿಂದ ಅನೇಕ ಆಪತ್ತುಗಳನ್ನು ದಾಟುವಿರಿ. ಪೂರ್ವದಲ್ಲಿ ಒಂದು ಸಂದರ್ಭದಲ್ಲಿ ರಾಜನು ಇಲ್ಲದಿರುವಾಗ ರಕ್ಷಿತರಾಗದೆ ಕಳ್ಳರಿಂದ ಪೀಡಿತರಾಗಿ ಇವನಿಂದ ಅಭಿವೃದ್ಧಿಯನ್ನು ಹೊಂದಿದವರಾಗಿ ಆ ಕಳ್ಳರನ್ನು ಜಯಿಸಿದರು. ಯಾರು ಈ ಮಹಾನುಭಾವನಲ್ಲಿ ಪ್ರೀತಿಯನ್ನು ಮಾಡುವರೋ ಅವರನ್ನು ಶತ್ರುಗಳು ಪೀಡಿಸಲಾರರು. ಆದುದರಿಂದ ನಿನ್ನ ಮಗನು ಕಾಂತಿಯಿಂದ ಕೀರ್ತಿಯಿಂದ ಮಹಿಮೆಯಿಂದ ಎಲ್ಲಾ ಗುಣಗಳಿಂದಲೂ ನಾರಾಯಣನಿಗೆ ಸಮಾನನು. ಆದುದರಿಂದ ಇವನು ಮಾಡುವ ಕರ್ಮಗಳಲ್ಲಿ ಆಶ್ಚರ್ಯಪಡುವುದು ಬೇಡ' ಈ ಪ್ರಕಾರವಾಗಿ ಹೇಳಿ ಗರ್ಗಾಚಾರ್ಯರು ತನ್ನ ಮನೆಗೆ ಹೋದರು. ಆದುದರಿಂದ ನಾನು ಅನಾಯಾಸದಿಂದ ಸರ್ವಕಾರ್ಯಗಳನ್ನು ಮಾಡುವ ಕೃಷ್ಣನನ್ನು ನಾರಾಯಣನ ಅಂಶನೆಂದು ತಿಳಿದುಕೊಂಡಿರುವೆನು'' ಎಂದು ಹೇಳಿದನು.

ಗೋಪಾಲರು ನಂದಗೋಪನು ಹೇಳಿದ ಗರ್ಗಾಚಾರ್ಯರ ಮಾತನ್ನು ಕೇಳಿ ಅಪರಿಮಿತ ತೇಜಸ್ಸುಳ್ಳ ಕೃಷ್ಣನ ಮಹಿಮೆಯನ್ನು ನೋಡಿ ಕೇಳಿದವರಾದ ಕಾರಣ ಸಂತೋಷವುಳ್ಳವರಾಗಿ ನಂದಗೋಪನನ್ನು ಕೃಷ್ಣಪರಮಾತ್ಮನನ್ನು ಸತ್ಕರಿಸಿದರು.



## ಗೋವಿಂದನ ಅಭಿಷೇಕ [1]

ಕೃಷ್ಣಪರಮಾತ್ಮನು ಗೋವರ್ಧನ ಪರ್ವತವನ್ನು ಎತ್ತಿ ಗೋಕುಲವನ್ನು ಮಳೆಯಿಂದ ರಕ್ಷಿಸಲು ಗೋಲೋಕದಿಂದ ಕಾಮಧೇನುವೂ ಸ್ವರ್ಗದಿಂದ ಇಂದ್ರದೇವರೂ ಬಂದು ಸೇರಿದರು. ಭಗವಂತನಿಗೆ ಅಪರಾಧ ಮಾಡಿದ ಇಂದ್ರದೇವರು ಲಜ್ಜೆಯುಳ್ಳವರಾಗಿ ಏಕಾಂತದಲ್ಲಿ ಬಂದು ಸೂರ್ಯನಂತೆ ಪ್ರಕಾಶವುಳ್ಳ ಕಿರೀಟದಿಂದ

1. ಭಾ. X-25 ಮತ್ತು ಮ.ತಾ.ನಿ. ಅ-13

ಪರಮಾತ್ಮನ ಪಾದವನ್ನು ಸ್ಪರ್ಶಮಾಡಿ ನಮಸ್ಕರಿಸಿದರು. ಅಪರಿಮಿತ ತೇಜಸ್ಸುಳ್ಳ ಕೃಷ್ಣಪರಮಾತ್ಮನ ಮಹಿಮೆಯನ್ನು ನೋಡಿದ ಕೇಳಿದ ಇಂದ್ರದೇವರು ತಾನು ತ್ರಿಲೋಕಾಧಿಪತಿಯೆಂಬ ಮದವನ್ನು ಬಿಟ್ಟವರಾಗಿ ಕೈಮುಗಿದುಕೊಂಡು ಸ್ತೋತ್ರಮಾಡಿದವರಾಗಿ 'ಭಗವಂತನೇ! ನನ್ನ ಯಜ್ಞವು ನಿಂತುಹೋಯಿತೆಂದು ಬಹಳ ಕೋಪದಿಂದ ಮಳೆಗಾಳಿಗಳಿಂದ ಗೋಕುಲವನ್ನು ನಾಶಮಾಡಬೇಕೆಂದು ಪ್ರಯತ್ನಿಸಿದೆನು. ಈಗ ನಿನ್ನಿಂದ ಅನುಗೃಹೀತನಾಗಿ ಅಹಂಕಾರರಹಿತನಾಗಿರುವೆನು. ವ್ಯರ್ಥವಾದ ಪ್ರಯತ್ನವುಳ್ಳವನಾಗಿರುವೆನು. ಸರ್ವಸಮರ್ಥನಾದ ಗುರುವಾದ ಸ್ವಾಮಿಯಾದ ನಿನ್ನನ್ನು ಮರೆಹೊಂದಿರುವೆನು' ಎಂದು ಹೇಳಿದರು.

ಆಗ ಕೃಷ್ಣಪರಮಾತ್ಮನು ಮಂದಹಾಸವನ್ನು ಬೀರುತ್ತಾ (ಮಾಡುತ್ತಾ) ಮೇಘದಂತೆ ಗಂಭೀರ ವಾದ ವಾಣಿಯಿಂದ 'ಇಂದ್ರನೇ! ನಿನಗೆ ಅನುಗ್ರಹ ಮಾಡಬೇಕೆಂದೇ ನಿನ್ನ ಯಜ್ಞಕ್ಕೆ ವಿಘ್ನವನ್ನು ಮಾಡಿದೆನು. ನನ್ನನ್ನು ಮರೆತುಬಿಟ್ಟ ನಿನಗೆ ನನ್ನ ಸ್ಮರಣೆಯುಂಟಾಗಲೆಂದೇ ಹಾಗೆ ಮಾಡಿದೆನು. ಐಶ್ವರ್ಯಮದಾಂಧನು ನಾನು ಶಿಕ್ಷಾಮಾಡುವವನು ಇರುವೆನೆಂದು ತಿಳಿಯುವುದಿಲ್ಲ. ನಾನು ಅಂತಹವನನ್ನು ಅನುಗ್ರಹಮಾಡುವ ಇಚ್ಛೆಯಿದ್ದರೆ ಸಂಪತ್ತನ್ನು ಅಪಹರಿಸುತ್ತೇನೆ. ಇಂದ್ರ! ಇನ್ನು ನೀನು ಹೋಗು. ನನ್ನ ಆಜ್ಞೆಯನ್ನು ಅನುಸರಿಸು. ಸ್ವರ್ಗಾಧಿಪತ್ಯವು (ನಶ್ವರವೆಂಬ) ಬುದ್ಧಿಯುಳ್ಳವನಾಗಿ ನಿನ್ನ ಅಧಿಕಾರದಲ್ಲಿ ಇರು' ಎಂದು ಹೇಳಿದನು.

ತರುವಾಯ ಕಾಮಧೇನುವು ತನ್ನ ಮಕ್ಕಳಾದ ಗೋವುಗಳೊಡನೆ ಮಾತಾಡಿಕೊಂಡು ಗೋಪರೂಪಿಯಾದ ಭಗವಂತನೊಡನೆ 'ಮಹಾಯೋಗಿ ಯಾದ ಶ್ರೀಕೃಷ್ಣನೇ! ಲೋಕನಾಥನಾದ ನಿನ್ನಿಂದ ನಾವು ಸನಾಥರಾದೆವು. ನೀನು ನಮಗೆ ಪರಮದೇವತೆಯು. ನಮಗೆ, ಇಂದ್ರನಿಗೆ, ಗೋವುಗಳಿಗೂ, ಬ್ರಾಹ್ಮಣರಿಗೂ, ದೇವತೆಗಳಿಗೂ, ಕ್ಷೇಮವನ್ನು ಉಂಟುಮಾಡು. ಬ್ರಹ್ಮದೇವರಿಂದ ಪ್ರೇರಿತರಾದ ನಾವು ನಮಗೆ ಇಂದ್ರನಾದ ನಿಮಗೆ ಅಭಿಷೇಕವನ್ನು ಮಾಡುವೆವು. ಭಗವಂತನೇ! ಭೂಮಿಯ ಭಾರವನ್ನು ಪರಿಹರಿಸುವುದಕ್ಕಾಗಿ ಭೂಮಿಯಲ್ಲಿ ಅವತರಿಸಿರುವಿ' ಎಂದು ಹೇಳಿ ತನ್ನ ಹಾಲಿನಿಂದಲೂ ಐರಾವತದ ಸೊಂಡಿಲಿನಿಂದ ತರಲ್ಪಟ್ಟ ಆಕಾಶ ಗಂಗೆಯ ನೀರಿನಿಂದಲೂ ಅಭಿಷೇಕ ಮಾಡಿದಳು. ಇಂದ್ರದೇವರು ದೇವಮಾತೃಗಳಿಂದ ಪ್ರೇರಿತರಾಗಿ ದೇವರ್ಷಿಗಳಿಂದ ಕೂಡಿಕೊಂಡು ಭಗವಂತನಿಗೆ ಅಭಿಷೇಕ ಮಾಡಿದರು. ಗೋವಿಂದ ಎಂದು ಸ್ತೋತ್ರ ಮಾಡಿದರು. ಅಲ್ಲಿಗೆ ನಾರದರೂ, ತುಂಬುರು ಮೊದಲಾದ ಗಂಧರ್ವರೂ, ವಿದ್ಯಾಧರರೂ, ಸಿದ್ಧರೂ,

ಚಾರಣರೂ ಬಂದರು. ಲೋಕದ ಪಾಪವನ್ನು ಪರಿಹರಿಸುವ ಭಗವಂತನ ಕೀರ್ತಿಯನ್ನು ಸ್ತೋತ್ರ ಮಾಡಿದರು. ದೇವತಾಸ್ತ್ರೀಯರು ನರ್ತನಮಾಡಿದರು. ದೇವಶ್ರೇಷ್ಠರು ಭಗವಂತನನ್ನು ಸ್ತೋತ್ರ ಮಾಡಿದರು. ಅದ್ಭುತ ಪುಷ್ಪದ ಮಳೆಯನ್ನು ಸುರಿಸಿದರು. ಮೂರುಲೋಕದ ಜನರೂ ಸಂತೋಷಪಟ್ಟರು. ಗೋವುಗಳು ಭೂಮಿಯಲ್ಲಿ ಹಾಲನ್ನು ಸುರಿಸಿದವು. ನದಿಗಳಲ್ಲಿ ನಾನಾ ರಸಗಳು ಬಂದವು. ಮರಗಳು ಮಧುರ ರಸವನ್ನು ಸುರಿಸಿದವು. ಕೃಷಿ ಮಾಡದೆ ಧಾನ್ಯಗಳು ಬೆಳೆದವು. ಪರ್ವತಗಳಲ್ಲಿ ಬೇಕಾದಷ್ಟು ರತ್ನಗಳು ಉಂಟಾದವು. ಸ್ವಭಾವದಿಂದ ಕ್ರೂರಗಳ ಪ್ರಾಣಿಗಳು ಪರಸ್ಪರ ವಿರೋಧವನ್ನು ಬಿಟ್ಟವು. ಕೃಷ್ಣಪರಮಾತ್ಮನ ಅಭಿಷೇಕವಾಗಲೂ ಇಷ್ಟು ಅದ್ಭುತಕಾರ್ಯಗಳು ನಡೆದವು. ಈರೀತಿಯಾಗಿ ಇಂದ್ರದೇವರು ಭಗವಂತನಿಗೆ ಅಭಿಷೇಕವನ್ನು ಮಾಡಿ ಭಗವಂತನಿಂದ ಅನುಜ್ಞೆಯನ್ನು ಪಡೆದು ದೇವತೆಗಳೇ ಮೊದಲಾದವರಿಂದ ಕೂಡಿಕೊಂಡು ಸ್ವರ್ಗಕ್ಕೆ ಹೊರಟುಹೋದರು.



## ನಂದನನ್ನು ವರುಣದೂತನು ಸೆಳೆದುಕೊಂಡುಹೋದದ್ದು[1]

ನಂದಗೋಪನು ಒಮ್ಮೆ ಏಕಾದಶಿಯಂದು ಉಪವಾಸಮಾಡಿ ಭಗವಂತನನ್ನು ಪೂಜಿಸಿ ಮರುದಿನ ದ್ವಾದಶಿಯಲ್ಲಿ ಬೇಗನೆ ಸ್ನಾನಮಾಡಬೇಕೆಂದು ಯಮುನೆಯ ನೀರಿನಲ್ಲಿ ಪ್ರವೇಶಿಸಿದನು. ಅವನು ತಿಳಿಯದೆ ಮಧ್ಯರಾತ್ರಿಕಾಲದಲ್ಲಿ ನೀರಿನಲ್ಲಿ ಇಳಿದ ಕಾರಣ ವರುಣದೇವರ ಭೃತ್ಯನಾದ ಒಬ್ಬ ಅಸುರನು ಅವನನ್ನು ಸೆಳೆದುಕೊಂಡು ವರುಣದೇವರ ಸಮೀಪಕ್ಕೆ ಹೋದನು. ಗೋಪಾಲರು ನಂದನನ್ನು ಕಾಣದೆ ಕೃಷ್ಣ ರಾಮ ಎಂದು ಕೂಗಿಕೊಂಡರು. ಭಗವಂತನು ಅದನ್ನು ಕೇಳಿ ತಂದೆಯನ್ನು ವರುಣದೂತನು ಕರೆದುಕೊಂಡ ಹೋಗಿರುವನೆಂದು ತಿಳಿದು ವರುಣದೇವರ ಸಮೀಪಕ್ಕೆ ಹೋದನು. ಲೋಕಪಾಲಕರಾದ ವರುಣದೇವರು ಬಂದಿರುವ ಭಗವಂತನನ್ನು ನೋಡಿ ಬಹುಸಂತೋಷವುಳ್ಳವರಾಗಿ ಮಹತ್ತಾದಪೂಜೆಯನ್ನು ಮಾಡಿ ಭಗವಂತನನ್ನು ಸ್ತೋತ್ರಮಾಡಿ 'ಕಾರ್ಯವನ್ನು ತಿಳಿಯದವನಾದ ಮದ್ದನಾದ ನನ್ನ ಭೃತ್ಯನೊಬ್ಬನು ನಿಮ್ಮ ತಂದೆಯನ್ನು ಕರೆದುಕೊಂಡು ಬಂದಿರುವನು. ನೀವು ಅದನ್ನು ಕ್ಷಮಿಸಬೇಕು. ನನ್ನ ಭೃತ್ಯನು ತಂದಿರುವ ನಿಮ್ಮ ತಂದೆಯನ್ನು ಕರೆದುಕೊಂಡು

1. ಭಾ. X-26 ಮತ್ತು ಮ.ತಾ.ನಿ. ಅ-13

ಹೋಗಿರಿ. ನನಗೂ ಅನುಗ್ರಹಮಾಡಿರಿ' ಎಂದು ಹೇಳಿದರು. ಈರೀತಿಯಾಗಿ ವರುಣದೇವರು ಪ್ರಾರ್ಥಿಸಲು ಶ್ರೀಭಗವಂತನು ತನ್ನ ತಂದೆಯನ್ನು ಕರೆದುಕೊಂಡು ಬಂದು ಬಂಧುಗಳಿಗೆ ಸಂತೋಷವನ್ನು ಉಂಟುಮಾಡಿದನು.

ನಂದಗೋಪನು ವರುಣದೇವರ ಅದ್ಭುತವಾದ ಭಾಗ್ಯವನ್ನು ವರುಣದೇವರೇ ಮೊದಲಾದವರು ಕೃಷ್ಣಪರಮಾತ್ಮನಿಗೆ ನಮಸ್ಕಾರ ಮಾಡಿದ್ದನ್ನು ನೋಡಿ ಆಶ್ಚರ್ಯವುಳ್ಳವರಾಗಿ ಬಂಧುಗಳಾದ ಗೋಪರೊಡನೆ ತಿಳಿಸಿದನು. ಅದನ್ನು ಕೇಳಿ ಗೋಪಾಲರು ಕೃಷ್ಣಪರಮಾತ್ಮನೊಡನೆ 'ನೀನು ಪರಬ್ರಹ್ಮನಾಗಿದ್ದರೆ ನಿನ್ನ ಲೋಕವನ್ನು ನಮಗೆ ತೋರಿಸಬೇಕು' ಎಂದು ಪ್ರಾರ್ಥಿಸಿಕೊಂಡರು. ಆಗ ಪರಮಾತ್ಮನು ನಿಮಗೆ ನನ್ನ ಲೋಕವನ್ನು ನೋಡಬೇಕೆಂಬ ಇಚ್ಛೆಯಿದ್ದರೆ ಶುದ್ಧವಾದ ದೃಷ್ಟಿಯು ಬೇಕು. ಅದಕ್ಕೆ ಈ ಯಮುನೆಯು ಮಡುವಿನಲ್ಲಿ ಮುಳುಗಿರಿ' ಎಂದು ಹೇಳಿದನು. ಅವರು ಪರಮಾತ್ಮನ ಮಾತಿನಂತೆ, ಮುಂದೆ ಯಾವ ಸ್ಥಳದಲ್ಲಿ ಅಕ್ರೂರನು ಪರಮಾತ್ಮನನ್ನು ನೋಡುವನೋ ಆ ಸ್ಥಳದಲ್ಲಿ ಮಳುಗಿದವರಾಗಿ ಶುದ್ಧದೃಷ್ಟಿಯಿಂದ ಪರಮಾತ್ಮನ ಲೋಕವನ್ನು ಅಲ್ಲಿ ಕೃಷ್ಣಪರಮಾತ್ಮನನ್ನು ನೋಡಿ ಸಂತೋಷಪಟ್ಟರು. ಆಶ್ಚರ್ಯವನ್ನು ಹೊಂದಿದರು.



## ಗೋಪಿಯರೊಡನೆ ಕೃಷ್ಣನ ವಿಹಾರ [1]

ಒಂದು ದಿನದಲ್ಲಿ ಕೃಷ್ಣಪರಮಾತ್ಮನು ರಾತ್ರಿಯಲ್ಲಿ ಚಂದ್ರೋದಯವಾದದ್ದನ್ನು ನೋಡಿ ಮನೋಹರವಾಗಿ ಗಾಯನಮಾಡಿದನು. ಮನ್ಮಥವಿಕಾರವನ್ನು ಹೆಚ್ಚಿಸುವ ಆ ಗಾಯನವನ್ನು ಕೇಳಿ ಕೃಷ್ಣನಲ್ಲಿ ಆಸಕ್ತವಾದ ಮನಸ್ಸುಳ್ಳವರಾಗಿ ಗೋಪಸ್ತ್ರೀಯರು ಒಬ್ಬರ ಅಭಿಪ್ರಾಯವು ಮತ್ತೊಬ್ಬರಿಗೆ ಗೊತ್ತಿಲ್ಲದೆ ಇದ್ದವರಾಗಿ ಕೃಷ್ಣಪರಮಾತ್ಮನು ಇದ್ದಲ್ಲಿಗೆ ಬಂದರು. ಹಾಲು ಕರಿಯುತ್ತಿದ್ದವರು ಹಾಲು ಕರೆಯುವುದನ್ನು ಬಿಟ್ಟು ಓಡಿಬಂದರು. ಹಾಲನ್ನು ಒಲೆಯ ಮೇಲೆ ಇಟ್ಟವರು ಕೆಳಗೆ ಇಳಿಸದೆ ಬಂದರು. ಊಟ ಬಡಿಸುತ್ತಾ ಇದ್ದವರು, ಹಾಗೆಯೇ ಓಡಿಬಂದರು. ಮಕ್ಕಳಿಗೆ ಹಾಲು ಕೊಡುತ್ತಿದ್ದವರು ಮಕ್ಕಳನ್ನು ಬಿಟ್ಟು ಓಡಿಬಂದರು. ಪತಿಸೇವೆಯನ್ನು ಮಾಡುತ್ತಾ ಇದ್ದವರು ಪತಿಯನ್ನು ಬಿಟ್ಟು ಬಂದರು. ಊಟ ಮಾಡುತ್ತಿದ್ದವರು ಊಟವನ್ನು ಬಿಟ್ಟು

1. ಭಾ. X-27 ಮತ್ತು ಮ.ತಾ.ನಿ. ಅ-13

ಬಂದರು. ಗಂಧವನ್ನು ಹಚ್ಚಿಕೊಳ್ಳುತ್ತಾ ಇದ್ದವರು, ಕಣ್ಣಿಗೆ ಕಪ್ಪು ಹಚ್ಚಿಕೊಳ್ಳುತ್ತಾ ಇದ್ದವರೂ ಹಾಗೆಯೇ ಬಿಟ್ಟುಹೋದರು. ವ್ಯತ್ಯಸ್ತವಾದ ವಸ್ತ್ರ ಆಭರಣವುಳ್ಳವರಾಗಿ ಕೃಷ್ಣನ ಬಳಿ ಹೋದರು. ಪತಿಗಳೂ, ತಂದೆತಾಯಿಗಳೂ, ಅಣ್ಣತಮ್ಮಂದಿರೂ, ಬೇಡವೆಂದು ತಡೆದರೂ ಕೇಳದೆ ಪರಮಾತ್ಮನಿಂದ ಅಪಹೃತವಾದ ಮನಸ್ಸುಳ್ಳವರಾಗಿ ಹಿಂದೆ ತಿರುಗದೆ ಕೃಷ್ಣನಿದ್ದಲ್ಲಿಗೆ ಓಡಿದರು. ಕೆಲ ಗೋಪಿಯರನ್ನು ಮಾತ್ರ ಪುರುಷರು ಹೊರಗೆ ಬರಲಿಕ್ಕೆ ಬಿಡಲೇ ಇಲ್ಲ. ಅವರು ಅಲ್ಲಿಯೇ ಕಣ್ಣುಮುಚ್ಚಿಕೊಂಡು ಭಗವಂತನನ್ನು ಧ್ಯಾನಮಾಡಿ ಅವನ ವಿರಹದುಃಖದಿಂದ ದೇಹವನ್ನು ಪರಿತ್ಯಾಗ ಮಾಡಿದರು.

ಶ್ರೀಭಗವಂತನು ತನ್ನ ಬಳಿಗೆ ಬಂದಿದ್ದ ಗೋಪಿಯರನ್ನು ನೋಡಿ ತನ್ನ ಮಾತುಗಳೆಂಬ ಪಾಶಗಳಿಂದ ಅವರನ್ನು ಮೋಹಗೊಳಿಸುತ್ತಾ 'ಮಹಾನುಭಾವರೇ! ಸ್ವಾಗತವು. ನಿಮಗೆ ಏನು ಪ್ರಿಯವನ್ನು ಮಾಡಲಿ? ಗೋಕುಲದಲ್ಲಿ ಎಲ್ಲರಿಗೂ ಕ್ಷೇಮವಷ್ಟೆ! ಇಲ್ಲಿಗೆ ಬಂದಿರುವ ಕಾರಣವನ್ನು ತಿಳಿಸಿರಿ. ಈ ರಾತ್ರಿಯು ಭಯಂಕರವಾಗಿರುವುದು. ಈ ಸಮಯದಲ್ಲಿ ಭಯಂಕರ ಪ್ರಾಣಿಗಳು ಸಂಚರಿಸು ವುವು. ನೀವು ಗೋಕುಲಕ್ಕೆ ಹಿಂದೆ ತಿರುಗಿ ಹೋಗಿರಿ. ಹೆಂಗಸರು ಇಲ್ಲಿ ಇರಬಾರದು. ನಿಮ್ಮ ತಾಯಿಯರೂ, ತಂದೆಯರೂ, ಮಕ್ಕಳೂ, ಸಹೋದರರೂ, ಪತಿಗಳೂ, ನಿಮ್ಮನ್ನು ನೋಡದೆ ಹುಡುಕುತ್ತಿರುವರು. ಬಂಧುಗಳಿಗೆ ಭಯವನ್ನು ಉಂಟು ಮಾಡಬೇಡಿರಿ. ಚಂದ್ರನ ಕಿರಣಗಳಿಂದ ಶೋಭಿಸುವ ಯಮುನೆಯ ಗಾಳಿಯ ನೀರಿನಿಂದ ನಡುಗುತ್ತಿರುವ ಮರಗಳ ಚಿಗುರುಗಳಿಂದ ಶೋಭಿಸುತ್ತಿರುವ ಪುಷ್ಪಭರಿತವಾದ ವನವನ್ನು ನೀವು ನೋಡಿಯಾಯಿತು. ಆದುದರಿಂದ ಬೇಗನೆ ಗೋಕುಲಕ್ಕೆ ಹೋಗಿರಿ. ಪತಿಗಳ ಸೇವೆಯನ್ನು ಮಾಡಿರಿ. ಮಕ್ಕಳು ಅಳುತ್ತಿರುವರು. ಅವರಿಗೆ ಹಾಲನ್ನು ಕುಡಿಸಿರಿ. ದನಗಳನ್ನು ಹಾಲು ಕರೆಯಿರಿ. ಅಥವಾ ನೀವು ನನ್ನ ಮೇಲಿನ ಸ್ನೇಹದಿಂದ ಯುಕ್ತರಾಗಿ ಬಂದಿರುವಿರಾದರೆ ಅದು ಯುಕ್ತವು. ನನ್ನ ಮೇಲೆ ಎಲ್ಲಾ ಪ್ರಾಣಿಗಳೂ ಪ್ರೀತಿಮಾಡುವುವು. ಸ್ತ್ರೀಯರಿಗೆ ಕಪಟವಿಲ್ಲದೆ ಗಂಡನ ಸೇವೆಯನ್ನು ಮಾಡುವುದೂ ಗಂಡನ ಬಂಧುಗಳಿಗೆ ಶ್ರೇಯಸ್ಸನ್ನು ಮಾಡುವುದೂ, ಮಕ್ಕಳನ್ನು ಪೋಷಿಸುವುದೂ ಧರ್ಮವು. ಗಂಡನು ದುಷ್ಟಸ್ವಭಾವವುಳ್ಳವ ನಾಗಿದ್ದರೂ, ದೌರ್ಭಾಗ್ಯವುಳ್ಳವನಾಗಿದ್ದರೂ, ಮುದುಕನಾಗಿದ್ದರೂ, ಮಡ್ಡನಾಗಿ ದ್ದರೂ, ರೋಗಿಯಾಗಿದ್ದರೂ, ದರಿದ್ರನಾಗಿದ್ದರೂ, ಬ್ರಹ್ಮಹತ್ಯಾದಿ ಮಹಾಪಾಪವನ್ನು ಮಾಡದೆ ಇದ್ದವನಾಗಿದ್ದರೆ ಸ್ತ್ರೀಯು ಅವನನ್ನು ಬಿಡಬಾರದು. ಕುಲಸ್ತ್ರೀಯು

ಪರಪುರುಷನನ್ನು ಹೊಂದುವುದು ನರಕಕ್ಕೆ ಕಾರಣವು. ಅಪಕೀರ್ತಿಕರವು. ತುಚ್ಛಫಲವುಳ್ಳದ್ದು, ಕಷ್ಟಕರವಾದದ್ದು. ಮರಣಾದಿಭಯಕ್ಕೆ ಕಾರಣವಾದದ್ದು. ಪರಮನಿಂದ್ಯವಾದದ್ದು. ನನ್ನ ವಿಷಯವನ್ನು ಕೇಳಿಯೋ ನನ್ನನ್ನು ನೋಡಿಯೋ ಧ್ಯಾನ ಮಾಡಿಯೋ ಕೀರ್ತನೆಯನ್ನು ಮಾಡಿಯೋ ಉಂಟಾಗುವ ಭಕ್ತಿಯು ನನ್ನ ಹತ್ತಿರವಿರುವುದರಿಂದ ಆಗಲಾರದು. ಆದುದರಿಂದ ಮನೆಗೆ ಹೊರಟುಹೋಗಿರಿ' ಎಂದು ಹೇಳಿದನು.

ಈಪ್ರಕಾರವಾಗಿ ಕೃಷ್ಣಪರಮಾತ್ಮನು ಹೇಳಿದ ಅಪ್ರಿಯವಾದ ಮಾತನ್ನು ಕೇಳಿ ಗೋಪಿಯರು ವಿಷಾದವುಳ್ಳವರಾಗಿ ಬಹಳ ಚಿಂತೆಗೆ ಒಳಗಾದರು. ಅತಿತಾಪದಿಂದ ಅವರ ತುಟಿಯು ಒಣಗಿಹೋಯಿತು. ಮುಖವನ್ನು ತಗ್ಗಿಸಿಕೊಂಡರು. ಕಾಲಿನಿಂದ ಭೂಮಿಯನ್ನು ಕೆರೆಯುತ್ತಾ ಕಣ್ಣೀರನ್ನು ಸುರಿಸುತ್ತಾ ಮಹಾದುಃಖವುಳ್ಳವರಾಗಿ ಸುಮ್ಮನೆ ನಿಂತುಕೊಂಡರು. ಆಮೇಲೆ ಭಗವಂತನಿಗಾಗಿಯೇ ಸಮಸ್ತವನ್ನು ಬಿಟ್ಟು ಬಂದಿದ್ದ ಅವರು ಕಣ್ಣೀರನ್ನು ಸುರಿಸಿ ಸ್ವಲ್ಪಕೋಪವುಳ್ಳವರಾಗಿ ಅನುರಾಗವುಳ್ಳವರಾಗಿ ಗದ್ಗದಸ್ವರದಿಂದ ಹೇಳಿದರು.

'ಪ್ರಭುವೇ! ಸರ್ವವನ್ನು ಬಿಟ್ಟು ನಿನ್ನ ಪಾದಮೂಲವನ್ನು ನಾನು ಹೊಂದಿರುವೆವು. ನಮ್ಮೊಡನೆ ಈರೀತಿಯಾಗಿ ಕ್ರೂರವಾದ ಮಾತನ್ನು ಹೇಳಬಾರದು. ನಮ್ಮನ್ನು ಪರಿತ್ಯಾಗ ಮಾಡಬಾರದು. ಪತಿಯನ್ನು, ಮಕ್ಕಳನ್ನೂ, ಬಂಧುಗಳನ್ನೂ, ಅನುಸರಿಸುವುದು ಧರ್ಮವೆಂದಿಯಲ್ಲಾ! ದೇವಶ್ರೇಷ್ಠನಾದ ನಿನ್ನನ್ನು ಭಜಿಸಿದರೆ ಅದೆಲ್ಲವೂ ಆಗುವುದು. ನೀನು ಎಲ್ಲರಿಗೂ ಅತ್ಯಂತ ಪ್ರಿಯನಾದವನು. ಸಾರಾಸಾರ ವಿವೇಕವುಳ್ಳವರು ಅನಿಮಿತ್ತಬಂಧುವಾದ ಸ್ವಾಮಿಯಾದ ನಿನ್ನಲ್ಲಿ ಆಸಕ್ತಿಯನ್ನು ಮಾಡುವರು. ದುಃಖವನ್ನು ಉಂಟುಮಾಡುವ ಅಪ್ರಿಯವಾದ ಪತಿಪುತ್ರಾದಿಗಳಿಂದ ಏನು ಪ್ರಯೋಜನವಿದೆ? ನಮಗೆ ಅನುಗ್ರಹವನ್ನು ಮಾಡು. ನಿನ್ನಲ್ಲಿ ಇಟ್ಟಿರುವ ನಮ್ಮ ಆಸೆಯನ್ನು ಭಂಗಗೊಳಿಸಬೇಡ. ಮಿತ್ರನೇ! ನಮ್ಮ ಮನಸ್ಸನ್ನು ನೀನು ಅಪಹರಿಸಿರುವಿ. ಆದುದರಿಂದ ಅದು ಮನೆಯ ವಿಷಯದಲ್ಲಿ ಹೋಗಲಾರದು. ನಮ್ಮ ಕೈಗಳೂ ಮನೆಯ ಕೆಲಸವನ್ನು ಮಾಡಲಾರವು. ಪಾದಗಳು ನಿನ್ನ ಪಾದಮೂಲದಿಂದ ಹೋಗಲಾರವು. ಆದುದರಿಂದ ನಾವು ಗೋಕುಲಕ್ಕೆ ಹೇಗೆ ಹೋಗುವೆವು? ಮನೆಗೆ ಹೋದರೂ ಏನು ಮಾಡುವೆವು? ಇತ್ಯಾದಿರೀತಿಯಾಗಿ ಪ್ರಾರ್ಥಿಸಿದರು. ಈರೀತಿಯಾಗಿ ಅವರ ಮಾತನ್ನು ಕೇಳಿ ಕೃಷ್ಣಪರಮಾತ್ಮನು ನಗುತ್ತಾ ದಯೆಯಿಂದ ಆ ಗೋಪಿಯರನ್ನು ಸಂತೋಷಪಡಿಸಿದನು. ಅವರೊಡನೆ

ನಾನಾವಿಧವಾಗಿ ಕ್ರೀಡೆಯನ್ನು ಮಾಡಿದನು. ಈರೀತಿಯಾಗಿ ಗೋಪಿಯರು ಕೃಷ್ಣನಿಂದ ಬಹುಮಾನವನ್ನು ಹೊಂದಿದವರಾಗಿ ತಮ್ಮನ್ನು ಭೂಮಿಯಲ್ಲಿ ಎಲ್ಲಾ ಹೆಂಗಸರಿಗಿಂತಲೂ ಉತ್ತಮರನ್ನಾಗಿ ತಿಳಿದುಕೊಂಡರು. ಅವರ ಅಹಂಕಾರವನ್ನು ನೋಡಿ ಪರಮಾತ್ಮನು ಅವರ ಅಹಂಕಾರ ಪರಿಹಾರಕ್ಕಾಗಿಯೂ ಅನುಗ್ರಹಮಾಡುವುದಕ್ಕಾಗಿಯೂ ಅಲ್ಲಿಯೇ ಮರೆಯಾದನು.



## ಗೋಪಿಯರು ಕೃಷ್ಣನನ್ನು ಹುಡುಕಿದ್ದು [1]

ಶ್ರೀಭಗವಂತನು ಮರೆಯಾಗಲು ಗೋಪಿಯರು ಪರಮಾತ್ಮನನ್ನು ಕಾಣದೆ ಪಶ್ಚಾತ್ತಾಪವನ್ನು ಹೊಂದಿದರು. ಭಗವಂತನ ಗಮನ, ಮಂದಹಾಸ, ನೋಡೋಣ, ಮನೋಹರವಾದ ಮಾತು ,ವಿಲಾಸ ಇತ್ಯಾದಿಗಳಿಂದ ಅಪಹೃತವಾದ ಮನಸ್ಸುಳ್ಳವರಾಗಿ ಆ ಭಗವಂತನ ಕ್ರೀಡೆಗಳನ್ನು ಅಭಿನಯಿಸಿದರು. ಎಲ್ಲರೂ ಒಟ್ಟಿಗೆ ಸೇರಿ ಭಗವಂತನನ್ನೇ ಗಾಯನಮಾಡುತ್ತಾ ಹುಚ್ಚುಹಿಡಿದವರಂತೆ ಒಂದು ವನದಿಂದ ಮತ್ತೊಂದು ವನಕ್ಕೆ ಸಂಚರಿಸಿದರು.

ಮರಗಳೊಡನೆಯೇ ಕೃಷ್ಣನ ವಿಷಯವನ್ನು ಕೇಳಿದರು. 'ಅಶ್ವತ್ಥಮರವೇ! ಪ್ಲಕ್ಷವೇ! ಆಲದಮರವೇ! ಕಿಂಶುಕಮರವೇ! ನಂದಗೋಪನ ಪುತ್ರನು ಮಂದಹಾಸದಿಂದ ನೋಡುತ್ತಾ ಇಲ್ಲಿಗೆ ಬಂದನೇ? ಕುರಬಕವೇ! ಅಶೋಕ ಮರವೇ! ಪುನ್ನಾಗವೃಕ್ಷವೇ! ನಾಗವೃಕ್ಷವೇ! ಸಂಪಿಗೆಮರವೇ! ಬಲರಾಮನ ತಮ್ಮನಾದ ಮಾನಿನಿಯರ ಅಭೀಷ್ಟಪ್ರದನಾದ ನಂದಕುಮಾರನನ್ನು ನೋಡಿದಿರಾ? ಪರಮಮಂಗಳೆಯಾದ ಗೋವಿಂದ ಚರಣಪ್ರಿಯೆಯಾದ ತುಲಸಿಯೇ! ಸಖಿಯ ರಿಂದ ಸಹಿತನಾದ ಅತಿಪ್ರಿಯನಾದ ಅಚ್ಯುತನನ್ನು ಕಂಡಿಯಾ? ಅಮ್ಮ ಮಾಲತಿ! ನೀನು ನೋಡಿದಿಯಾ? ಮಲ್ಲಿಗೆಯೇ ನೀನು ಕಂಡಿಯಾ? ವಾಸಂತಿಕೆಯೇ! ಮಾಧವನು ಹಸ್ತಸ್ಪರ್ಶದಿಂದ ನಿಮಗೆ ಸಂತೋಷವನ್ನು ಉಂಟುಮಾಡುತ್ತಾ ಈ ದಾರಿಯಿಂದ ಹೋದನೇ? ಮಾವಿನ ಮರವೇ! ಹಲಸಿನಮರವೇ! ಜಂಬೂ ನೇರಳೆಯ ಮರವೇ! ಬೇಗಡೆಯ ಮರವೇ! ಹುಣಿಸೆಯ ಮರವೇ! ಕದಂಬ ವೃಕ್ಷವೇ! ಇನ್ನೊಬ್ಬರಿಗಾಗಿಯೇ ಬದುಕಿರುವ ಯಮುನಾತೀರದಲ್ಲಿ ಬೆಳೆದಿರುವ

1. ಭಾ. X-27, 28 ಮತ್ತು ಮ.ತಾ.ನಿ. ಅ-13

ಇತರ ಮರಗಳೇ! ಸ್ವಾಮಿಯನ್ನು ಕಳೆದುಕೊಂಡು ಇರುವ ನಮಗೆ ಕೃಷ್ಣನ ಮಾರ್ಗವನ್ನು ಹೇಳಿರಿ.

ಅಮ್ಮಾ ಭೂದೇವಿ! ಏನು ಪುಣ್ಯ ಮಾಡಿರುವಿ? ಕೃಷ್ಣನ ಪಾದಸ್ಪರ್ಶದಿಂದ ಉಂಟಾದ ಸಂತೋಷದಿಂದ ರೋಮಾಂಚನಗಳಿಂದ ಶೋಭಿಸುವಿಯಾ? ಅಥವಾ ವರಾಹರೂಪಿಯಾದ ಭಗವಂತನ ಆಲಿಂಗನದಿಂದ ರೋಮಾಂಚಿತ ಗಾತ್ರಳಾಗಿರುವಿಯಾ? ಹೇ ಹೆಣ್ಣುಜಿಂಕೆಯೇ! ನಿಮ್ಮ ಈಶ್ವರನಾದ ಕೃಷ್ಣನು ಪ್ರಿಯೆಯಿಂದ ಕೂಡಿಕೊಂಡು ನಿನ್ನ ಕಣ್ಣಿಗೆ ಸಂತೋಷವನ್ನು ಉಂಟುಮಾಡುತ್ತಾ ಇಲ್ಲಿಗೆ ಬಂದನೇ! ಕಾಂತೆಯನ್ನು ಆಲಿಂಗಿಸುವಾಗ ಸ್ತನದ ಕುಂಕುಮದಿಂದ ಕೆಂಪಾದ ಗುಂಡುಮಲ್ಲಿಗೆ ಹೂವಿನ ಮಾಲೆಯ ವಾಸನೆಯು ಬರುತ್ತದೆ. ಮರಗಳೇ! ರಾಮನ ತಮ್ಮನು ಪ್ರಿಯೆಯ ಹೆಗಲಲ್ಲಿ ಕೈಯನ್ನು ಇಟ್ಟುಕೊಂಡು ತುಲಸೀ ಮೊದಲಾದ ಪುಷ್ಪಗಳ ಮಕರಂದದಲ್ಲಿ ಆಸೆಯುಳ್ಳ ಭ್ರಮರಗಳಿಂದ ಅನುಸೃತನಾಗಿ ಪ್ರೀತಿಯುಕ್ತವಾದ ನೋಟಗಳಿಂದ ನಿಮ್ಮ ನಮಸ್ಕಾರವನ್ನು ಅನುಮೋದಿಸಿದನೇ? ನೋಡಿರಿ! ಇಲ್ಲಿ ಲತೆಗಳೂ ಕೂಡ ಮರಗಳ ಕೊಂಬೆಗಳೆಂಬ ಬಾಹುಗಳನ್ನು ಆಲಿಂಗಿಸಿ ಕೃಷ್ಣನ ಉಗುರಿನ ಸ್ಪರ್ಶದಿಂದ ರೋಮಾಂಚವನ್ನು ಧರಿಸಿಕೊಂಡು ಇರುವುವು' ಈರೀತಿಯಾಗಿ ಗೋಪಿಯರು ಕೃಷ್ಣನ ಹುಚ್ಚುಹಿಡಿದವರಾಗಿ ವೃಂದಾವನದಲ್ಲಿ ಇದ್ದ ಮರಗಳೊಡನೆಯೂ ಲತೆಗಳೊಡನೆಯೂ ಕೃಷ್ಣನನ್ನು ಕೇಳುತ್ತಾ ವನಪ್ರದೇಶದಲ್ಲಿ ಭಗವಂತನ ಹೆಜ್ಜೆಗಳನ್ನು ನೋಡಿದರು. 'ಇವು ನಿಶ್ಚಯವಾಗಿಯೂ ಮಹಾನುಭಾವನಾದ ನಂದಕುಮಾರನ ಹೆಜ್ಜೆಗಳು. ಧ್ವಜ ಪದ್ಮ ವಜ್ರ ಅಂಕುಶರೇಖೆಗಳಿಂದ ತಿಳಿಯುತ್ತಿವೆ' ಎಂದು ಹೇಳಿದರು.

ತರುವಾಯ ಗೋಪಿಯರು ಆ ಹೆಜ್ಜೆಗಳನ್ನೇ ನೋಡುತ್ತಾ ಮುಂದೆ ಹೋಗುತ್ತಾ ಭಗವಂತನ ಹೆಜ್ಜೆಯ ಒಟ್ಟಿಗೆ ಒಂದು ಹೆಂಗಸಿನ ಹೆಜ್ಜೆಯನ್ನು ನೋಡಿದವರಾಗಿ ದುಃಖಿತರಾಗಿ 'ಕೃಷ್ಣನ ಹೆಗಲಲ್ಲಿ ಕೈಯಿಟ್ಟುಕೊಂಡು ನಡೆಯುವ ಯಾವ ಹೆಂಗಸಿನ ಹೆಜ್ಜೆಗಳಿವು? ಇವಳು ನಿಶ್ಚಯವಾಗಿಯೂ ಭಗವಂತನನ್ನು ಬಹಳವಾಗಿ ಆರಾಧಿಸಿರಬೇಕು. ಅದರಿಂದಲೇ ಗೋವಿಂದನು ನಮ್ಮನ್ನೆಲ್ಲರನ್ನು ಬಿಟ್ಟು ಪ್ರೀತಿಯಿಂದ ಇವಳನ್ನು ಏಕಾಂತದಲ್ಲಿ ಕರೆದುಕೊಂಡು ಹೋಗಿರುವನು. ಸಖಿಯರಿರಾ! ಶ್ರೀಕೃಷ್ಣನ ಪಾದಧೂಳಿಗಳು ಪರಮಧನ್ಯಗಳು. ಯಾವ ಈ ಧೂಳಿಗಳನ್ನು ಬ್ರಹ್ಮರುದ್ರರೂ ರಮಾದೇವಿಯರೂ ಶಿರಸಾ ಧರಿಸುತ್ತಿರುವರು. ಇವಳ ಈ ಹೆಜ್ಜೆಗಳು ನಮಗೆ ಬಹಳ ಮನಸ್ಸಿಗೆ ಕ್ಷೋಭೆಯನ್ನು ಉಂಟುಮಾಡುತ್ತಿರುವುವು. ಒಬ್ಬಳೇ ಏಕಾಂತದಲ್ಲಿ

ಅಚ್ಯುತನ ಅಧರಾಮೃತವನ್ನು ಅನುಭವಿಸುತ್ತಿರುವಳಲ್ಲಾ!' ಎಂದು ಹೇಳಿದರು. ಸ್ವಲ್ಪ ದೂರಕ್ಕೆ ಹೋದವರಾಗಿ ಆಮೇಲೆ ಗೋಪಿಯರು 'ಇಲ್ಲಿ ಅವಳ ಹೆಜ್ಜೆಗಳು ಕಾಣಿಸುವುದಿಲ್ಲ. ಹುಲ್ಲುಗಳಿಂದ ಶ್ರಮಪಡುವ ಮೃದು ಪಾದತಲಗಳುಳ್ಳ ಪ್ರೇಯಸಿಯನ್ನು ಅಚ್ಯುತನು ಎತ್ತಿಕೊಂಡು ಹೋಗಿರಬೇಕು ನೋಡಿ. ಇಲ್ಲಿ ಕೃಷ್ಣನು ಪ್ರಿಯೆಯನ್ನು ಹೊತ್ತುಕೊಂಡು ಹೋಗಿರುವ ಕಾರಣವೇ ಅವನ ಹೆಜ್ಜೆಗಳು ತುಂಬಾ ತಗ್ಗಾಗಿರುವುವು. ಇಲ್ಲಿ ಮಹಾನುಭಾವನಾದ ಕೃಷ್ಣನು ಹೂವನ್ನು ಕೊಯ್ಯುವುದಕ್ಕಾಗಿ ಕಾಂತೆಯನ್ನು ಕೆಳಗೆ ಇಳಿಸಿರುವನು. ಇಲ್ಲಿ ಪ್ರಿಯೆಗಾಗಿ ಹೂವನ್ನು ಕೊಯಿದಿರುವನು. ಆದುದರಿಂದಲೇ ಇಲ್ಲಿ ಹೆಜ್ಜೆಗಳಲ್ಲಿ ಪಾದಗಳ ಅಗ್ರಗಳು ಮಾತ್ರವೇ ಕಾಣಿಸುತ್ತಿರುವುವು. ಇಲ್ಲಿ ಪ್ರಿಯೆಗೆ ತಲೆಕಟ್ಟಿರುವನು. ಇಲ್ಲಿ ಪ್ರಿಯೆಗೆ ಹೂವನ್ನು ಮುಡಿಸಿರುವನು. ಇಲ್ಲಿ ಸ್ವರಮಣನಾದ ಭಗವಂತನು ಅವಳೊಡನೆ ರಮಿಸಿರುವನು. ಈರೀತಿಯಾಗಿ ಪ್ರಲಾಪವನ್ನು ಮಾಡುತ್ತಾ ಗೋಪಿಯರು ಸಂಚರಿಸುತ್ತಿದ್ದರು.

ಕೃಷ್ಣನು ಇತರ ಸ್ತ್ರೀಯರನ್ನು ಬಿಟ್ಟು ಯಾವ ಗೋಪಿಯನ್ನು ಕರೆದುಕೊಂಡು ಹೋದನೋ ಅವಳು ತನ್ನನ್ನು ಎಲ್ಲಾ ಸ್ತ್ರೀಯರಕಿಂತಲೂ ತಾನು ಶ್ರೇಷ್ಠಳೆಂದೂ ತಿಳಿದುಕೊಂಡಳು. ಆದುದರಿಂದಲೇ ಕೃಷ್ಣನು ತನ್ನನ್ನು ಕಾಮಿಸುತ್ತಿದ್ದ ಎಲ್ಲಾ ಗೋಪಿಯರನ್ನು ಬಿಟ್ಟು ತನ್ನನ್ನು ಕರಕೊಂಡು ಬಂದಿರವನು ಎಂದೂ ತಿಳಿದುಕೊಂಡಳು. ಆದುದರಿಂದ ಅವಳು ಸ್ವಲ್ಪದೂರ ಹೋದವಳಾಗಿ ದರ್ಪವುಳ್ಳವಳಾಗಿ 'ನನಗಿನ್ನು ಮುಂದೆ ನಡಿಯಲಿಕ್ಕೆ ಆಗಲಾರದು. ಎಲ್ಲಿಗೆ ಬೇಕೋ ಅಲ್ಲಿಗೆ ನನ್ನನ್ನು ಎತ್ತಿಕೊಂಡು ಹೋಗು' ಎಂದಳು. ಆದಕ್ಕೆ ಕೃಷ್ಣನು 'ಹೆಗಲ ಮೇಲೆ ಏರು' ಎಂದು ಹೇಳಿದನು. ತರುವಾಯ ಆಗಲೇ ಅಂತರ್ಧಾನ ಹೊಂದಿದನು. ತರುವಾಯ ಆ ಸ್ತ್ರೀಯೂ ಪಶ್ಚಾತ್ತಾಪ ಉಳ್ಳವಳಾದಳು. 'ಹಾನಾಥ! ರಮಣ, ಪ್ರಿಯ! ಎಲ್ಲಿ ಹೋಗಿರುವೆ? ಸಖನೇ! ನಿನ್ನ ದಾಸಿಗೆ ನಿನ್ನ ಸನ್ನಿಧಾನವನ್ನು ತೋರಿಸು' ಎಂದು ಹೇಳಿದಳು. ಇತ್ತ ಕೃಷ್ಣನನ್ನು ಹುಡುಕುತ್ತಾ ಬರುತ್ತಿದ್ದ ಗೋಪಿಯರು ಪ್ರಿಯವಿಯೋಗವನ್ನು ಹೊಂದಿ ದುಃಖಪಡುತ್ತಿದ್ದ ಆ ಗೋಪಿಯನ್ನು ನೋಡಿದರು. ಅವಳು ತನಗೆ ಕೃಷ್ಣಪರಮಾತ್ಮನು ಬಹುಮಾನ ಮಾಡಿದ್ದನ್ನು ತನ್ನ ದುರ್ಬುದ್ಧಿಯಿಂದ ಅವಮಾನ ಮಾಡಿದ್ದನ್ನೂ ಹೇಳಿಕೊಳ್ಳಲು ಗೋಪಿಯರು ಅದನ್ನು ಕೇಳಿ ಪರಮ ಆಶ್ಚರ್ಯವನ್ನು ಹೊಂದಿದರು. ಎಲ್ಲರೂ ಸೇರಿಕೊಂಡು ಬೆಳದಿಂಗಳು ಇರುವವರೆಗೆ ವನದಿಂದ ವನಕ್ಕೆ ಸಂಚರಿಸುತ್ತಾ ಇದ್ದರು. ಆಮೇಲೆ ಕತ್ತಲೆಯುಂಟಾಗಲು ಹಿಂದೆಯೇ ತಿರುಗಿಬಂದರು. ಭಗವಂತನಲ್ಲಿಯೇ ಮನಸ್ಸುಳ್ಳವರಾಗಿ ಭಗವಂತನ

ಮಾತ್ರೇ ಉಳ್ಳವರಾಗಿ ಅವನ ಗುಣಗಳನ್ನೇ ಧ್ಯಾನಮಾಡುವವರಾಗಿ ತಮ್ಮ ದೇಹಗಳನ್ನು ಮನೆಗಳನ್ನೂ ಮರೆತುಬಿಟ್ಟರು. ಪುನಃ ಯಮುನೆಯ ತೀರಕ್ಕೆ ಬಂದವರಾಗಿ ಕೃಷ್ಣಪರಮಾತ್ಮನನ್ನೇ ಧ್ಯಾನಮಾಡುವವರಾಗಿ ಒಟ್ಟಿಗೆ ಸೇರಿಕೊಂಡು ಕೃಷ್ಣನ ಆಗಮನವನ್ನೇ ಹಾರೈಸುತ್ತಾ ಕೃಷ್ಣಪರಮಾತ್ಮನನ್ನೇ ಗಾಯನಮಾಡಿದರು.



## ಗೋಪಿಗೀತೆಯು [1]

ಪ್ರಿಯನೇ! ನಿನ್ನ ಅವತಾರದಿಂದ ಗೋಕುಲವು ಅಧಿಕವಾಗಿ ಉತ್ಕೃಷ್ಟವಾಗಿರುವುದು. ಗೋಕುಲದಲ್ಲಿ ಈಗ ಇಂದಿರಾದೇವಿಯರು ಆಶ್ರಯಿಸಿಕೊಂಡಿರುವರು. ನಿನ್ನನ್ನು ನೋಡಲಿಕ್ಕೆ ಬಯಸುವ ನೀನು ಕಾಣಿಸು. ಈ ಗೋಪಿಯರೆಲ್ಲರೂ ನಿನ್ನಲ್ಲಿಯೇ ಪ್ರಾಣವುಳ್ಳವರಾಗಿ ನಿಮ್ಮನ್ನೇ ಹುಡುಕುತ್ತಿರುವರು.

ಗೋಕುಲದ ಜನರ ದುಃಖವನ್ನು ಪರಿಹರಿಸುವ ವೀರನೇ! ಸ್ವಕೀಯ ಜನರ ಗರ್ವವನ್ನು ನಾಶಮಾಡುವ ಮಂದಹಾಸವುಳ್ಳವನೇ! ಸ್ತ್ರೀಯರಾದ ನಮ್ಮ ಕಾಮಸಮೃದ್ಧಿಯನ್ನು ಪೂರೈಸು. ಮಿತ್ರನೇ! ಸುಂದರವಾದ ತಾವರೆಹೂವಿನಂತೆ ಇರುವ ನಿನ್ನ ಮುಖವನ್ನೇ ತೋರಿಸುತ್ತಾ ಪ್ರತಿಜನ್ಮದಲ್ಲಿಯೂ ನಿನ್ನ ದಾಸಿಯರಾದ ನಮ್ಮನ್ನು ಪಾಲಿಸು.

ಸುರತ ವೀರನೇ! ಶರತ್ಕಾಲದಲ್ಲಿ ಸರೋವರದಲ್ಲಿ ಚೆನ್ನಾಗಿ ಉಂಟಾದ ಅರಳಿದ ತಾವರೆಹೂವಿನ ಕೆಂಪಗಿರುವ ಒಳಗಿನ ದಳದ ಕಾಂತಿಯನ್ನು ಅಪಹರಿಸುವ ದೃಷ್ಟಿಯಿಂದ ವಶರಾದ ನಮಗೆ ಈ ರೀತಿಯಾಗಿ ಆಶಾಭಂಗವನ್ನು ಮಾಡುವ ನೀನು ನಮ್ಮನ್ನು ಕೊಂದಂತೆಯೇ ಆಗುವುದಿಲ್ಲವೋ?

ಶ್ರೇಷ್ಠನೇ! ನಮ್ಮನ್ನು ವಿಷಭರಿತವಾದ ಯಮುನೆಯ ಮಡುವಿನಿಂದಲೂ ಕಾಲಿಯ ಸರ್ಪನಿಂದಲೂ, ತೃಣಾವರ್ತನೆಂಬ ರಾಕ್ಷಸನಿಂದಲೂ, ಗಾಳಿಮಳೆ ಗಳಿಂದಲೂ, ವಿದ್ಯುತ್ಸಂಬಂಧಿಯಾದಅಗ್ನಿಯಿಂದಲೂ, ವೃಷಭಾಸುರನಿಂದಲೂ, ಸರ್ವಭಯದಿಂದಲೂ ಪುನಃ ಪುನಃ ರಕ್ಷಿಸಿರುವಿ.

ಮಿತ್ರನೇ! ಎಲ್ಲಾ ಜೀವರಲ್ಲಿಯೂ ಅಂತರ್ಯಾಮಿಯಾಗಿದ್ದುಕೊಂಡು, ಸಮಸ್ತ

1. ಭಾ. X-29 ಮತ್ತು ಮ.ತಾ.ನಿ. ಅ–13

ವನ್ನು ನೋಡುವ ಬ್ರಹ್ಮದೇವರಿಂದ ಪೂಜಿತನಾದ, ಗೋಪಿಯರನ್ನು ಸಂತೋಷ ಪಡಿಸುವ ನೀನು ಜಗತ್ತಿನ ರಕ್ಷಣೆಗಾಗಿ ಯದುವಂಶದಲ್ಲಿ ಅವತರಿಸಿದವನು.

ಯಾದವಶ್ರೇಷ್ಠನೇ! ಕಾಂತನೇ! ಸಂಸಾರಭಯದಿಂದ ನಿನ್ನನ್ನು ಮರೆಹೊಂದುವವರಿಗೆ ಅಭಯಪ್ರದಾನವನ್ನು ಮಾಡುವ ಅಭೀಷ್ಟಪ್ರದವಾದ ಶ್ರೀದೇವಿಯ ಹಸ್ತವನ್ನು ಗ್ರಹಣ ಮಾಡುವ ನಿನ್ನ ಕರಕಮಲವನ್ನು ನಮ್ಮ ತಲೆಯಮೇಲೆ ಇಡು.

ನಮಸ್ಕಾರಮಾಡುವ ಜನರ ಪಾಪವನ್ನು ಪರಿಹರಿಸುವ, ಪಶುಗಳನ್ನು ಅನುಸರಿಸಿ ಹೋಗುವ, ಕಾಂತಿಯುಕ್ತವಾದ ಕಾಲಿಯನ ಹೆಡೆಯಮೇಲೆ ಇಟ್ಟಿರುವ, ನಿನ್ನ ಪಾದಕಮಲವನ್ನು ನಮ್ಮ ಸ್ತನಗಳಲ್ಲಿ ಇಡು. ಕಾಮವನ್ನು ಪರಿಹರಿಸು.

ಕಮಲನಯನನೇ! ವೀರನೇ! ಸುಂದರ ವಾಕ್ಯಗಳುಳ್ಳ, ಪಂಡಿತರಿಗೂ ಮನೋಹರವಾದ ಮಾತಿನಿಂದ ನಿನ್ನ ದಾಸಿಯರಾದ ಮೋಹಿತರಾದ ಈ ನಮ್ಮನ್ನು ಅಧರಾಮೃತದಿಂದ ಬದುಕಿಸುವವನಾಗು.

ಸಂತಾಪವುಳ್ಳವರನ್ನು ಬದುಕಿಸುವ ಜ್ಞಾನಿಗಳಿಂದ ಸ್ತುತ್ಯವಾದ ದೋಷವನ್ನು ಪರಿಹರಿಸುವ ಶ್ರವಣಮಾತ್ರದಿಂದಲೇ ಮಂಗಲವನ್ನು ಉಂಟುಮಾಡುವ ಸಮೃದ್ಧಿಗೆ ಕಾರಣವಾದ ವಿಸ್ತೃತವಾದ ನಿನ್ನ ಕಥಾಮೃತವನ್ನು ಯಾರು ಸ್ತುತಿಸುವರೋ ಅವರು ತಮ್ಮ ಬಹುದುಃಖವನ್ನು ಪರಿಹರಿಸಿಕೊಳ್ಳುವರು.

ವಂಚಕನೇ! ಪ್ರಿಯನೇ! ನಿನ್ನ ಮಂದಹಾಸವೂ ಪ್ರೇಮದ ನೋಟವೂ ಧ್ಯಾನ ಮಾಡಿದರೆ ಮಂಗಲವನ್ನು ಉಂಟುಮಾಡುವ ನಿನ್ನ ವಿಹಾರವೂ ಮನೋಹರಗಳಾದ ರಹಸ್ಯದ ಮಾತುಗಳೂ ನಮ್ಮ ಮನಸ್ಸನ್ನು ಕ್ಷೋಭೆಗೊಳಿಸುತ್ತವೆ.

ಕಾಂತನೇ! ಯಾವಾಗ ನೀನು ಗೋವುಗಳನ್ನು ಮೇಯಿಸುತ್ತಾ ಗೋಕುಲದಿಂದ ಹೋಗುವಿಯೋ ಆಗ ನಾಥನೇ! ಸುಂದರವಾದ ನಿನ್ನ ಪಾದವು ಕಲ್ಲುಗಳಿಂದ ಹುಲ್ಲುಗಳಿಂದಲೂ ಶ್ರಮಪಡುವುದೆಂದು ನಮ್ಮ ಮನಸ್ಸು ಆಯಾಸಪಡುವುದು.

ವೀರನೇ! ಸಂಧ್ಯಾಕಾಲದಲ್ಲಿ ವನದಿಂದ ಬರುತ್ತಾ ಕಪ್ಪಾದ ಕೂದಲುಗಳಿಂದ ಕೂಡಿದ ಮುಖವನ್ನು ಧರಿಸಿರುವ ನೀನು ವನದ ಧೂಳಿಯಿಂದ ಕೂಡಿದ ಮುಖವನ್ನು ತೋರಿಸುತ್ತಾ ನಮ್ಮ ಮನಸ್ಸಿನಲ್ಲಿ ಪುನಃ ಪುನಃ ಕಾಮವನ್ನು ಉಂಟುಮಾಡುವಿ.

ಮನೋವ್ಯಥೆಯನ್ನು ಪರಿಹರಿಸುವ ರಮಣನೇ! ನಮಸ್ಕರಿಸುವ ಭಕ್ತರಿಗೆ

ಅಭೀಷ್ಟವನ್ನು ಕೊಡುವ, ರಮಾದೇವಿಯರಿಂದ ಪೂಜಿತವಾದ ಭೂಮಿಗೆ ಭೂಷಣವಾದ ಆಪತ್ತಿನ ಸಮಯದಲ್ಲಿ ಧ್ಯಾನಮಾಡಲಿಕ್ಕೆ ಯೋಗ್ಯವಾದ ಸುಖಕರವಾದ ನಿನ್ನ ಪಾದಕಮಲವನ್ನು ನಮ್ಮ ಸ್ತನದಲ್ಲಿ ಇಡು.

ವೀರನೇ! ಸುರತವನ್ನು ಅಭಿವೃದ್ಧಿಪಡಿಸುವ ಶೋಕವನ್ನು ಪರಿಹರಿಸುವ ಸ್ವರಯುಕ್ತವಾದ ಕೊಳಲಿನಿಂದ ಚೆನ್ನಾಗಿ ಚುಂಬಿತವಾದ ಜನರಿಗೆ ಇತರ ವಸ್ತುವಿನಲ್ಲಿ ಆಸೆಯನ್ನು ಮರೆಯಿಸುವ ನಿನ್ನ ಅಧರಾಮೃತವನ್ನು ನಮಗೆ ಕೊಡು.

ನೀನು ಯಾವಾಗ ಹಗಲಲ್ಲಿ ಕಾಡಿನಲ್ಲಿ ಸಂಚರಿಸುತ್ತಿರುವಿಯೋ ಆಗ ನಿನ್ನನ್ನು ನೋಡದೆ ಇರುವ ನಮಗೆ ಒಂದು ಕ್ಷಣವು ಯುಗದಂತೆ ಆಗುವುದು. ವಕ್ರವಾದ ಕೂದಲುಳ್ಳ ಕಾಂತಿಯುಕ್ತವಾದ ನಿನ್ನ ಮುಖವನ್ನು ರೆಪ್ಪೆಹಾಕದೆ ನೋಡುತ್ತಿರುವ ನಮ್ಮ ಪ್ರವೃತ್ತಿಯು ಜಡದಂತೆ ಆಗುವುದು. ಅಂದರೆ ನಿನ್ನನ್ನು ನೋಡುವ ನಮಗೆ ಬಹುಕಾಲವೂ ಕ್ಷಣದಂತೆ ಆಗುವುದು.

ಅಚ್ಯುತನೇ! ನಾವು ಗಂಡಂದಿರನ್ನು, ಮಕ್ಕಳನ್ನು, ಅಣ್ಣತಮ್ಮಂದಿರನ್ನು ಬಂಧುಗಳನ್ನು ಅತಿಕ್ರಮಿಸಿ ನಿನ್ನ ಬಳಿಗೆ ಬಂದಿರುವೆವು. ಆಕರ್ಷಣ ಮಾಡಲಿಕ್ಕೆ ತಿಳಿದವನಾದ ನಿನ್ನ ಗಾಯನದಿಂದ ಮೋಹಿತರಾಗಿರುವೆವು. ವಂಚಕನೇ! ಹೆಂಗಸರನ್ನು ರಾತ್ರಿಯಲ್ಲಿ ಯಾರು ಬಿಡುವರು?

ವೀರನೇ! ರಹಸ್ಯದ ನಿನ್ನ ಮಾತುಗಳನ್ನು ಕಾಮವನ್ನು ಹೆಚ್ಚಿಸುವ ಮಂದಹಾಸಯುಕ್ತವಾದ ಮುಖವನ್ನು ಪ್ರೇಮದ ನೋಟವನ್ನು ಶ್ರೀದೇವಿಯ ವಾಸಸ್ಥಾನವಾದ ವಿಶಾಲವಾದ ಎದೆಯನ್ನು ನೋಡಿ ಅತಿ ಆಸೆಯಿಂದ ನಮ್ಮ ಮನಸ್ಸು ಪುನಃ ಪುನಃ ಮೋಹವನ್ನು ಹೊಂದುವುದು.

ಪ್ರಿಯನೇ! ನಿನ್ನ ಅವತಾರವು ಗೋಕುಲವಾಸಿಗಳಾದವರ ಪಾಪವನ್ನು ಪರಿಹರಿಸುವುದು. ಜಗತ್ತಿಗೆ ಮಂಗಲವನ್ನು ಉಂಟುಮಾಡುವುದು. ನಿನ್ನಲ್ಲಿ ಆಸೆಯುಳ್ಳವರಾದ ನಮ್ಮ ಕಣ್ಣಿಗೆ ಕಾಣಿಸುವವನಾಗು. ಸ್ವಕೀಯ ಜನರ ಹೃದಯದಲ್ಲಿರುವ ರೋಗವನ್ನು ಪರಿಹರಿಸುವುದು ನಿನ್ನ ರೂಪವು.



# ರಾಸಕ್ರೀಡೆಯು [1]

ಈರೀತಿಯಾಗಿ ಗೋಪಿಯರು ಗಾಯನಮಾಡುತ್ತಾ ಪ್ರಲಾಪವನ್ನು ಮಾಡುತ್ತಾ ಸುಸ್ವರವಾಗಿ ಅಳುವವರಾದರು. ಅವರಿಗೆ ಪೀತಾಂಬರಧಾರಿಯಾದ ಹೂವಿನ ಮಾಲೆಯನ್ನು ಧರಿಸಿದ, ಮನ್ಮಥನ ಮನಸ್ಸನ್ನೂ ಅಪಹರಿಸುವ ಶ್ರೀಭಗವಂತನು ಮಂದಹಾಸವನ್ನು ಮಾಡುತ್ತಾ ಪ್ರತ್ಯಕ್ಷನಾದನು. ಬಂದ ಅತ್ಯಂತ ಪ್ರಿಯನಾದ ಭಗವಂತನನ್ನು ನೋಡಿ ಎಲ್ಲರೂ ಎದ್ದುನಿಂತರು. ಒಬ್ಬಳು ಭಗವಂತನ ಕೈಯನ್ನು ಹಿಡಿದಳು. ಒಬ್ಬಳು ಭಗವಂತನ ಬಾಹುವನ್ನು ತನ್ನ ಹೆಗಲಮೇಲೆ ಇಟ್ಟುಕೊಂಡಳು. ಇನ್ನೊಬ್ಬಳು ತನ್ನ ಕೈಯಿಂದ ಭಗವಂತನು ತಾಂಬೂಲ ತಿಂದದ್ದನ್ನು ಸ್ವೀಕರಿಸಿದಳು. ಮತ್ತೊಬ್ಬಳು ಭಗವಂತನ ಪಾದವನ್ನು ತನ್ನ ಸ್ತನದ ಮೇಲೆ ಇಟ್ಟುಕೊಂಡಳು. ಒಬ್ಬಳು ಪ್ರಣಯಕೋಪವುಳ್ಳವಳಾಗಿ ಹುಬ್ಬಿನ ವಿಲಾಸವುಳ್ಳವಳಾಗಿ ತುಟಿಯನ್ನು ಕಚ್ಚಿಕೊಂಡು ಕಟಾಕ್ಷದಿಂದ ಕೃಷ್ಣನನ್ನು ನೋಡಿದಳು. ಮತ್ತೊಬ್ಬಳು ರೆಪ್ಪೆಯನ್ನು ಕೂಡ ಹಾಕದೆ ಕೃಷ್ಣನನ್ನೇ ನೋಡುವವಳಾಗಿ ತೃಪ್ತಿರಹಿತಳಾಗಿ ಇದ್ದಳು. ಇನ್ನೊಬ್ಬಳು ಭಗವಂತನನ್ನು ಕಣ್ಣಿನಿಂದ ನೋಡಿ ಹಾಗೆಯೇ ಮನಸ್ಸಿನಲ್ಲಿ ಧ್ಯಾನಮಾಡುತ್ತಾ ರೋಮಾಂಚಿತ ಗಾತ್ರಳಾಗಿ ಸಂತೋಷದಿಂದ ಮುಳುಗಿದಳು. ಎಲ್ಲರೂ ಪರಮಾತ್ಮನ ದರ್ಶನದಿಂದ ಸಂತೋಷವುಳ್ಳವರಾಗಿ ಅವನ ವಿಯೋಗದಿಂದ ಉಂಟಾದ ದುಃಖವನ್ನು ಪರಿತ್ಯಜಿಸಿದರು. ಶೋಕರಹಿತರಾದ ಅವರಿಂದ ಕೂಡಿಕೊಂಡು ಪರಮಾತ್ಮನು ಅತ್ಯಂತ ಶೋಭಿಸಿದನು. ಅವರನ್ನು ಕರೆದುಕೊಂಡು ಬೆಳದಿಂಗಳಿನಿಂದ ಶೋಭಿಸುವ ಯಮುನಾತೀರಕ್ಕೆ ಹೋದನು. ಅಲ್ಲಿ ಗೋಪಿಯರು ಭಗವಂತನಿಗೆ ಕೂತುಕೊಳ್ಳಲಿಕ್ಕೆ ಉತ್ತರೀಯ ವಸ್ತ್ರವನ್ನು ಹಾಸಿದರು. ಗೋಪಿಯರ ಮಧ್ಯದಲ್ಲಿ ಕೂತುಕೊಂಡು ಪರಮಾತ್ಮನು ಅತ್ಯಂತ ಪ್ರಕಾಶಿಸಿದನು. ಮಧುರವಾದ ಮಾತುಗಳಿಂದ ಗೋಪಿಯರನ್ನು ಸಂತೋಷಪಡಿಸಿದನು.

ತರುವಾಯ ಸ್ತ್ರೀಯರಿಂದ ಕೂಡಿಕೊಂಡು ರಾಸಕ್ರೀಡೆಯನ್ನು ಆರಂಭಿಸಿದನು. ಗೋಪಿಯರು ಎಷ್ಟು ಜನರಿರುವರೋ ಅಷ್ಟೇ ರೂಪಗಳನ್ನು ಪರಮಾತ್ಮನು ಧರಿಸಿದನು. ಇಬ್ಬರು ಹೆಂಗಸರ ಮಧ್ಯದಲ್ಲಿ ಪರಮಾತ್ಮನು ಇದ್ದನು. ಪರಸ್ಪರ ಕೈಹಿಡಿದುಕೊಂಡು ಗುಂಡಗಾಕಾರವಾಗಿ ನಿಂತುಕೊಂಡು ನರ್ತನ ಮಾಡಿದರು. ರಾಸಕ್ರೀಡೆಯನ್ನು ನೋಡಲಿಕ್ಕೆ ಆಕಾಶಮಾರ್ಗದಲ್ಲಿ ವಿಮಾನದಲ್ಲಿ ಕೂತುಕೊಂಡು

1. ಭಾ. X-30, 31 ಮತ್ತು ಮ.ತಾ.ನಿ. ಅ-13

ದೇವತೆಗಳು ಸ್ತ್ರೀಯರಿಂದ ಸಹಿತರಾಗಿ ಬಂದಿದ್ದರು. ತರುವಾಯ ದುಂದುಭಿಯ ಶಬ್ದವಾಯಿತು. ಮೇಲಿನಿಂದ ಪುಷ್ಪದ ಮಳೆಯು ಸುರಿಯಿತು. ಗಂಧರ್ವಶ್ರೇಷ್ಠರು ಸ್ತ್ರೀಯರಿಂದ ಸಹಿತರಾಗಿ ನಿರ್ಮಲವಾದ ಭಗವಂತನ ಕೀರ್ತಿಯನ್ನು ಗಾಯನ ಮಾಡಿದರು. ಗೋಪಿಯರು ನರ್ತನ ಮಾಡುವಾಗ ಅವರ ಬಳೆಗಳ ಕಾಲಿನ ಆಭರಣಗಳ ಹೆಜ್ಜೆಗಳ ಶಬ್ದಗಳು ಬಹಳವಾಗಿ ಆಗುತ್ತಿದ್ದವು. ಆ ಹೆಂಗಸರ ಮಧ್ಯದಲ್ಲಿ ಶ್ರೀಭಗವಂತನು ಬಂಗಾರದ ಮಧ್ಯದಲ್ಲಿ ಇಂದ್ರನೀಲಮಣಿಯಂತೆ ಶೋಭಿಸಿದನು. ಗೋಪಿಯರು ಭಗವಂತನೊಡನೆ ನರ್ತನ ಮಾಡುತ್ತಾ ಮೇಘದಲ್ಲಿ ಮಿಂಚಿನಂತೆ ಶೋಭಿಸಿದರು. ಭಗವಂತನು ಅವರನ್ನು ಆಲಿಂಗಿಸುತ್ತಾ ನಾನಾ ವಿಲಾಸಗಳಿಂದ ಕ್ರೀಡಾಮಾಡಿದನು.

ಕೃಷ್ಣಪರಮಾತ್ಮನ ವಿಹಾರವನ್ನು ನೋಡಿ ದೇವಸ್ತ್ರೀಯರು ಕಾಮಪೀಡಿತರಾಗಿ ಮೂರ್ಛೆಯನ್ನು ಹೊಂದಿದರು. ಚಂದ್ರನೂ ಆಶ್ಚರ್ಯವನ್ನು ಹೊಂದಿದನು. ಭಗವಂತನು ಗೋಪಿಯರನ್ನು ಅಷ್ಟು ರೂಪಗಳನ್ನು ಧರಿಸಿ ಸಂತೋಷಪಡಿಸಿದನು. ಆಮೇಲೆ ಅವರೊಡನೆ ಜಲಕ್ರೀಡೆಯನ್ನು ಮಾಡಿದನು. ನೀರಿನಲ್ಲಿ ಯುವತಿಯರು ಭಗವಂತನ ಮೇಲೆ ನೀರನ್ನು ಎರಚುತ್ತಿದ್ದರು. ಮೇಲಿನಿಂದ ವಿಮಾನದಲ್ಲಿ ಕೂತುಕೊಂಡು ದೇವತೆಗಳು ಹೂವಿನಮಳೆಯನ್ನು ಸುರಿಸುತ್ತಾ ಸ್ತೋತ್ರಮಾಡುತ್ತಿದ್ದರು. ಈರೀತಿಯಾಗಿ ಭಗವಂತನು ಜಲವಿಹಾರವನ್ನು ಮಾಡುತ್ತಿದ್ದನು. ಆಮೇಲೆ ಸ್ತ್ರೀಯರಿಂದ ಕೂಡಿಕೊಂಡು ವನದಲ್ಲಿ ಸಂಚರಿಸುತ್ತಿದ್ದನು. ಈರೀತಿಯಾಗಿ ಸ್ತ್ರೀಯರು ಭಗವಂತನೊಡನೆ ವಿಹರಿಸುತ್ತಿರುವಾಗ ಭಗವಂತನ ಮಹಿಮೆಯಿಂದ ಅವರ ಪುರುಷರು ತಮ್ಮ ಸ್ತ್ರೀಯರು ತಮ್ಮ ಬಳಿಯಲ್ಲಿಯೇ ಇರುತ್ತಿರುವರೆಂದು ತಿಳಿದು ಕೊಂಡು ಭಗವಂತನ ಮೇಲೆ ಅಸೂಯಪಡುತ್ತಿದ್ದಿಲ್ಲ. ರಾತ್ರಿ ನಾಲ್ಕೂವರೆ ಗಂಟೆಯಾಗಲು ಹೆಂಗಸರೆಲ್ಲರೂ ಪರಮಾತ್ಮನ ಅನುಮತಿಯನ್ನು ಪಡೆಯುವವರಾಗಿ ತಮಗೆ ಇಚ್ಛೆಯಿಲ್ಲದೆ ಇದ್ದರೂ ಮನೆಗೆ ಹೋಗುತ್ತಿದ್ದರು. ಈರೀತಿಯಾಗಿ ಭಗವಂತನ ರಾಸಕ್ರೀಡೆಯನ್ನು ಶ್ರದ್ಧೆಯಿಂದ ಕೇಳುವವರು ಪರಮಾತ್ಮನಲ್ಲಿ ವಿಶೇಷವಾದ ಭಕ್ತಿಯನ್ನು ಹೊಂದುವರು.



# ಸುದರ್ಶನನ ಶಾಪಮೋಕ್ಷ [1]

ಒಂದು ಸಮಯದಲ್ಲಿ ಗೋಪಾಲರು ಅಂಬಿಕಾದೇವಿಯ ಮಹಿಮೆಯನ್ನು ಜನರ ಮಾತಿನಿಂದ ತಿಳಿದು ತಮಗೂ ಅಲ್ಲಿಗೆ ಹೋಗಿ ನೋಡಬೇಕೆಂದು ಕೂತೂಹಲವುಳ್ಳವರಾಗಿ ಎತ್ತುಗಳು ಸೆಳೆಯುವ ಬಂಡಿಗಳಲ್ಲಿ ಕೂತುಕೊಂಡು ಅಂಬಿಕಾವನಕ್ಕೆ ಹೋದರು. ಅಲ್ಲಿ ಸರಸ್ವತೀ ನದಿಯಲ್ಲಿ ಸ್ನಾನಮಾಡಿ ರುದ್ರದೇವರನ್ನು ಅಂಬಿಕಾದೇವಿಯನ್ನು ಪೂಜಿಸಿದರು. ಗೋಪಾಲರೆಲ್ಲರೂ ಆದರದಿಂದ ಬ್ರಾಹ್ಮಣರಿಗೆ ಗೋವುಗಳನ್ನು ಬಂಗಾರವನ್ನು ವಸ್ತ್ರವನ್ನು ಜೇನನ್ನು ಅನ್ನವನ್ನು ಭಗವಂತನು ಪ್ರೀತನಾಗಲಿ ಎನ್ನುತ್ತಾ ದಾನಮಾಡಿದರು. ನೀರನ್ನು ಮಾತ್ರ ಕುಡಿದು ಗೋಪಾಲರು ನಿಯಮವುಳ್ಳವರಾಗಿ ಸರಸ್ವತೀ ನದಿಯ ತೀರದಲ್ಲಿ ಆ ರಾತ್ರಿಯಲ್ಲಿ ವಾಸಮಾಡಿದರು.

ಆ ಕಾಡಿನಲ್ಲಿ ಅತಿಹಸಿವೆಯಿಂದ ಕೂಡಿದ ಒಂದು ಬೆಟ್ಟದ ಹಾವು ದೈವೇಚ್ಛೆಯಿಂದ ಅಲ್ಲಿಗೆ ಬಂದು ಮಲಗಿದ್ದ ನಂದಗೋಪನನ್ನು ನುಂಗಿತು. ಆಹಾವಿನ ಬಾಯಿಗೆ ಸಿಕ್ಕಿದ ನಂದಗೋಪನು 'ಕೃಷ್ಣಕೃಷ್ಣ! ಈ ದೊಡ್ಡ ಹಾವು ನನ್ನನ್ನು ನುಂಗುತ್ತಾ ಇದೆ. ನಿನ್ನನ್ನೇ ಮರೆಹೊಂದಿದ ನನ್ನನ್ನು ಬಿಡಿಸು' ಎಂದು ಕೂಗಿಕೊಂಡನು. ನಂದಗೋಪನ ಕೂಗನ್ನು ಕೇಳಿ ಗೋಪಾಲರೆಲ್ಲರೂ ಎದ್ದವರಾಗಿ ಹಾವಿನಿಂದ ನುಂಗಲ್ಪಡುತ್ತಿದ್ದ ನಂದಗೋಪನನ್ನು ನೋಡಿ ಸಂಭ್ರಮವುಳ್ಳವರಾಗಿ ಬೆಂಕಿಯ ಕೊಳ್ಳಿಗಳಿಂದ ಬಡೆದರು. ಬೆಂಕಿಯ ಕೊಳ್ಳಿಗಳಿಂದ ಬಡೆದರೂ ಹಾವು ನಂದಗೋಪನನ್ನು ಬಿಡಲೇ ಇಲ್ಲ. ಆಗ ಶ್ರೀಭಗವಂತನು ಬಂದು ತನ್ನ ಕಾಲಿನಿಂದ ಅದನ್ನು ಮೆಟ್ಟಿದನು. ಶ್ರೀಭಗವಂತನ ಪಾದವು ತಾಗಿದಕೂಡಲೇ ಪಾಪರಹಿತವಾಗಿ ಆ ಸರ್ಪರೂಪವನ್ನು ಬಿಟ್ಟು ಒಬ್ಬ ವಿದ್ಯಾಧರನಾದನು. ಶ್ರೀಭಗವಂತನು ಬಂಗಾರದ ಮಾಲೆಯನ್ನು ಧರಿಸಿದ್ದ ಪ್ರಕಾಶಮಾನವಾದ ದೇಹವುಳ್ಳ ನಮಸ್ಕಾರಮಾಡಿ ನಿಂತಿದ್ದ ಆ ವಿದ್ಯಾಧರನನ್ನು ನೋಡಿ ತಾನು ಎಲ್ಲವನ್ನೂ ತಿಳಿದವನಾದರೂ ಲೋಕದ ಜನರಂತೆ ತಿಳಿಯದವರಂತೆ ನಟನೆ ಮಾಡುತ್ತಾ 'ಬಹುಕಾಂತಿಯಿಂದ ಅದ್ಭುತವಾಗಿ ಕಾಣಿಸುವ ನೀನು ಯಾರು? ಇಂತಹ ನಿಂದ್ಯವಾದ ದೇಹವನ್ನು ಹೇಗೆ ಹೊಂದಿರುವಿ?' ಎಂದು ಕೇಳಿದನು.

ಅದಕ್ಕೆ ಅವನು 'ನಾನು ಸುದರ್ಶನ ಎಂದು ಹೆಸರುಳ್ಳ ವಿದ್ಯಾಧರನು.

---

1. ಭಾ. X-32 ಮತ್ತು ಮ.ತಾ.ನಿ. ಅ-13

ಮಹಾಕಾಂತಿಯುಳ್ಳವನಾಗಿ ವಿಮಾನದಲ್ಲಿ ಕೂತುಕೊಂಡು ಸಂಚರಿಸುತ್ತಾ ಇದ್ದೆನು. ನಾನು ರೂಪವಂತನೆಂದು ಅಹಂಕಾರವುಳ್ಳನಾಗಿ ರೂಪಹೀನರಾದ ಅಂಗಿರ ಋಷಿಗಳ ಮಕ್ಕಳನ್ನು ನೋಡಿ ಅಪಹಾಸಮಾಡಿದೆನು. ಆದರಿಂದ ಅವರು ಕೋಪಿಸಿ ಕೊಂಡು ಈ ದೇಹವು ಬರುವಂತೆ ಶಾಪವನ್ನು ಕೊಟ್ಟರು. ಕರುಣೆಯುಳ್ಳವರಾದ ಅವರು ನನಗೆ ಅನುಗ್ರಹ ಮಾಡಲಿಕ್ಕಾಗಿಯೇ ಶಾಪವನ್ನು ಕೊಟ್ಟರು. ಅವರಿಂದಾಗಿ ನಾನು ತಮ್ಮ ಪಾದಸ್ಪರ್ಶದಿಂದ ಪಾಪರಹಿತನಾದೆನು. ಸಂಸಾರಭಯದಿಂದ ಮರೆಹೊಂದಿದವರ ಭಯವನ್ನು ಪರಿಹರಿಸುವ ನಿಮ್ಮೊಡನೆ ಕೇಳಿಕೊಳ್ಳುತ್ತೇನೆ. ಮಹಾಪುರುಷನೇ! ನಿಮ್ಮನ್ನೇ ಮರೆಹೊಂದಿರುತ್ತೇನೆ. ನನಗೆ ಅನುಜ್ಞೆಯನ್ನು ಕೊಡಬೇಕು. ತಮ್ಮ ಅದ್ಭುತದರ್ಶನದಿಂದ ನಾನು ಬ್ರಾಹ್ಮಣಶಾಪದಿಂದ ಬಿಡುಗಡೆ ಹೊಂದಿರುವೆನು. ನಿಮ್ಮ ನಾಮವನ್ನು ಭಕ್ತಿಯಿಂದ ಉಚ್ಚರಿಸುವವನು ಕೇಳತಕ್ಕವರನ್ನು ತನ್ನನ್ನೂ ಪವಿತ್ರೀಕರಿಸುವನು. ನಿಮ್ಮ ಪಾದಸ್ಪರ್ಶವನ್ನು ಹೊಂದಿದವನು ಪವಿತ್ರನಾಗುವನೆಂದು ಏನು ಹೇಳಬೇಕು' ಎಂದು ಹೇಳಿ ಶ್ರೀಭಗವಂತನಿಗೆ ಪ್ರದಕ್ಷಿಣೆ ಬಂದು ನಮಸ್ಕಾರ ಮಾಡಿ ಸುದರ್ಶನನು ಸ್ವರ್ಗಕ್ಕೆ ಹೋದನು. ನಂದಗೋಪನು ಆಪತ್ತಿನಿಂದ ರಹಿತನಾದನು. ಭಗವಂತನ ಮಹಿಮೆಯನ್ನು ನೋಡಿ ಗೋಪಾಲ ರೆಲ್ಲರೂ ಆಶ್ಚರ್ಯದಿಂದ ಕೂಡಿದ ಮನಸ್ಸುಳ್ಳವರಾಗಿ ಅಲ್ಲಿಯ ನಿಯಮವನ್ನು ಮುಗಿಸಿ ಭಗವಂತನ ಮಹಿಮೆಯನ್ನು ಹೇಳುತ್ತಾ ಗೋಕುಲಕ್ಕೆ ಬಂದು ಸೇರಿದರು.



## ಶಂಖಚೂಡನ ಸಂಹಾರವು [1]

ಒಂದು ದಿವಸದಲ್ಲಿ ರಾತ್ರಿಯಲ್ಲಿ ಕೃಷ್ಣಬಲರಾಮರು ಗೋಕುಲದ ಸ್ತ್ರೀಯರ ಮಧ್ಯದಲ್ಲಿ ಇದ್ದುಕೊಂಡು ವಿಹಾರವನ್ನು ಮಾಡುತ್ತಿದ್ದರು. ತಮ್ಮಲ್ಲಿ ಅನುರಾಗವುಳ್ಳ ಗೋಪಿಯರಿಂದ ಮನೋಹರವಾಗಿ ಸ್ತೋತ್ರಮಾಡಲ್ಪಡುವವರಾಗಿ, ಅಲಂಕೃತರಾಗಿ ತಾವೂ ಎಲ್ಲಾ ಪ್ರಾಣಿಗಳಿಗೂ ಮನಸ್ಸಿಗೂ ಕಿವಿಗಳಿಗೂ ಸಂತೋಷವುಂಟಾಗುವಂತೆ ಗಾಯನಮಾಡುತ್ತಿದ್ದರು. ಗೋಪಿಯರು ಆ ಗಾನವನ್ನು ಕೇಳಿ ಮೋಹಿತರಾದರು. ತಮ್ಮ ತಲೆಕೂದಲು ಬಿಚ್ಚಿಹೋದದ್ದನ್ನೂ ತಮ್ಮ ಸೀರೆಯೇ ಜಾರಿಹೋದದ್ದನ್ನೂ ಅವರು ತಿಳಿಯಲಿಲ್ಲ. ಈರೀತಿಯಾಗಿ ಕೃಷ್ಣಬಲರಾಮರು ಕ್ರೀಡಾ ಮಾಡುತ್ತಾ, ಹಾಡು

1. ಭಾ. X-32 ಮತ್ತು ಮ.ತಾ.ನಿ. ಅ–13

ಹೇಳುತ್ತಾ ಇರುತ್ತಿರಲು ಶಂಖಚೂಡ ಎಂದು ಹೆಸರುಳ್ಳ ಕುಬೇರನ ಭೃತ್ಯನೊಬ್ಬನು ಅಲ್ಲಿಗೆ ಬಂದನು. ಅವನು ಉತ್ತರದಿಕ್ಕಿನಲ್ಲಿ ಬಂದು ಅಂಜಿಕೆಯಿಲ್ಲದೆ ಕೃಷ್ಣಬಲರಾಮರ ಹೆಂಗಸರನ್ನು ಓಡಿಸಲಿಕ್ಕೆ ಆರಂಭಿಸಿದನು. ಕೃಷ್ಣಬಲರಾಮರು ನೋಡುವಂತೆ ಓಡಿಸಲು ಆ ಹೆಂಗಸರು ಕೃಷ್ಣ! ರಾಮ! ಎಂದು ಕೂಗಿಕೊಂಡರು.

ಆಗ ಕೃಷ್ಣಬಲರಾಮರು 'ಭಯಪಡಬೇಡಿರಿ' ಎಂದು ಹೇಳುವವರಾಗಿ ಕೈಯಲ್ಲಿ ತಾಳೀವೃಕ್ಷವನ್ನು ಹಿಡಿದುಕೊಂಡು ಅವನಿದ್ದಲ್ಲಿ ಓಡಿಬಂದರು. ಅವರಿಬ್ಬರು ಬಂದದ್ದನ್ನು ನೋಡಿ ಶಂಖಚೂಡನು ಭಯವುಳ್ಳವನಾಗಿ ಹೆಂಗಸರನ್ನು ಬಿಟ್ಟು ತಾನು ಬದುಕಿರಬೇಕೆಂಬ ಆಸೆಯಿಂದ ಓಡಿದನು. ಬಲರಾಮದೇವರು ಹೆಂಗಸರನ್ನು ನೋಡಿಕೊಂಡು ಅಲ್ಲಿಯೇ ಇದ್ದರು. ಕೃಷ್ಣಪರಮಾತ್ಮನು ಶಂಖಚೂಡನ ತಲೆಯಲ್ಲಿ ಇರುವ ಮಣಿಯನ್ನು ಅಪಹರಿಸಬೇಕೆಂದು ಅವನು ಓಡುವಲ್ಲಿಗೆಲ್ಲಾ ಹಿಂದೆಯೇ ಹೋದನು. ಹತ್ತಿರವೇ ಬಂದು ದುರಾತ್ಮನಾದ ಅವನ ಮಣಿಯಿಂದ ಸಹಿತವಾದ ಶಿರಸ್ಸನ್ನು ಮುಷ್ಟಿಯಿಂದ ಅಪಹರಿಸಿದನು. ಈರೀತಿಯಾಗಿ ಶಂಖಚೂಡನನ್ನು ಸಂಹರಿಸಿ ಪ್ರಕಾಶಮಾನವಾದ ರತ್ನವನ್ನು ತೆಗೆದುಕೊಂಡು ಎಲ್ಲಾ ಹೆಂಗಸರೂ ನೋಡುವಂತೆ ಪ್ರೀತಿಯಿಂದ ಆ ಮಣಿಯನ್ನು ಅಣ್ಣನಾದ ಬಲರಾಮದೇವರಿಗೆ ಕೊಟ್ಟನು.



## ಯುಗಲಗೀತೆ [1]

ಹಗಲಲ್ಲಿ ಕೃಷ್ಣಪರಮಾತ್ಮನು ವನಕ್ಕೆ ಹೋಗಿರುವಾಗ ಗೋಪಿಯರು ಅವನಲ್ಲೇ ಹೋದ ಮನಸ್ಸುಳ್ಳವರಾಗಿ ಅವನ ಲೀಲೆಯನ್ನು ಗಾಯನ ಮಾಡುತ್ತಾ ದುಃಖದಿಂದ ಹಗಲುಗಳನ್ನು ಕಳೆಯುತ್ತಿದ್ದರು. ಅವರು ಒಟ್ಟಿಗೆ ಸೇರಿಕೊಂಡು ಹೀಗೆ ಪರಸ್ಪರವಾಗಿ ಹೇಳಿಕೊಳ್ಳುತ್ತಿದ್ದರು. ''ಗೋಪಿಯರೇ! ಕೇಳಿರಿ. ಯಾವಾಗ ಎಡಬಾಹುವಿನ ಬುಡದಲ್ಲಿ ಎಡ ಕಪೋಲವನ್ನು ಇಟ್ಟುಕೊಂಡು ಹುಬ್ಬನ್ನು ಹಾರಿಸುತ್ತಾ ಕೆಳತುಟಿಯಲ್ಲಿ ಕೊಳಲನ್ನು ಇಟ್ಟುಕೊಂಡು ಕೋಮಲ ಬೆರಳುಗಳಿಂದ ಕೊಳಲಿನ ರಂಧ್ರಗಳನ್ನು ಮುಚ್ಚುತ್ತಾ ಕೊಳಲಗಾನವನ್ನು ಮಾಡುವನೋ ಆಗ ಸಿದ್ಧರಿಂದ ಸಹಿತರಾಗಿ ವಿಮಾನದಲ್ಲಿ ಕೂತು ಕೇಳುತ್ತಿದ್ದ ಸಿದ್ಧಸ್ತ್ರೀಯರು ಅದನ್ನು ಕೇಳಿ ಆಶ್ಚರ್ಯವುಳ್ಳವರಾಗಿ,

1. ಭಾ. X-33 ಮತ್ತು ಮ.ತಾ.ನಿ. ಅ-13

ಲಜ್ಜೆಯುಳ್ಳವರಾಗಿ, ಮನ್ಮಥಬಾಣಪರವಶರಾಗಿ ತಮ್ಮ ಮೈಯಿಂದ ಸೀರೆಯು ಜಾರಿಹೋಗುವುದನ್ನು ತಿಳಿಯದೆ ಮೂರ್ಛೆಯನ್ನು ಹೊಂದುವರು'' ಎಂದು ಒಬ್ಬಳು ಗೋಪಿಯು ಹೇಳಿದಳು.

ಆಗ ಮತ್ತೊಬ್ಬ ಗೋಪಿಯು 'ಸುಂದರಿಯರೇ! ಈ ಆಶ್ಚರ್ಯವನ್ನು ಕೇಳಿರಿ. ಮುತ್ತಿನ ಸರದಿಂದ ಪ್ರಕಾಶಿಸುವ ಎದೆಯಲ್ಲಿ ಮಿಂಚಿನಂತೆ ಪ್ರಕಾಶಿಸುವ ಶ್ರೀವತ್ಸ ಚಿಹ್ನೆಯುಳ್ಳ ದುಃಖಿತರಾದ ಜನರಿಗೆ ಸುಖವನ್ನು ಉಂಟುಮಾಡುವ ನಂದಕುಮಾರನು ಯಾವಾಗ ಕೊಳಲನ್ನು ಊದುವನೋ ಆಗ ಗೋಕುಲದಲ್ಲಿರುವ ವೃಷಭಗಳೂ ಜಿಂಕೆಗಳೂ ದನಗಳೂ ಗುಂಪಾಗಿ ಬಂದು ಕೊಳಲಗಾಯನದಿಂದ ಅಪಹೃತವಾದ ಮನಸ್ಸುಳ್ಳವರಾಗಿ ಬಂದು ಹಾಗೆಯೇ ಬಾಯಿಯಲ್ಲಿ ಹುಲ್ಲನ್ನು ಕಚ್ಚಿಕೊಂಡು ಕಿವಿಗಳನ್ನು ನಿಶ್ಚಯವಾಗಿ ಮಾಡಿಕೊಂಡು ಕಾರ್ಯಾಂತರರಹಿತಗಳಾಗಿ ಚಿತ್ರದಲ್ಲಿ ಬರೆದ ಬೊಂಬೆಗಳಂತೆ ನಿಂತುಕೊಂಡಿದ್ದವು' ಎಂದು ನುಡಿದಳು.

ಮತ್ತೊಬ್ಬ ಗೋಪಿಯು 'ಸಖಿಯೇ! ನವಿಲಿನ ರೆಕ್ಕೆಗಳಿಂದಲೂ ಬೆಟ್ಟದಲ್ಲಿ ಸಿಕ್ಕುವ ಮನಃಶಿಲೆಯೆಂಬ ಧಾತುವಿನಿಂದಲೂ, ಚಿಗುರುಎಲೆಗಳಿಂದಲೂ, ಮಲ್ಲರ ವೇಷವನ್ನು ಧರಿಸಿದ ಕೃಷ್ಣನು ಅಣ್ಣನಿಂದಲೂ, ಗೋಪಾಲರಿಂದಲೂ, ಸಹಿತನಾಗಿ ಯಾವಾಗ ಗೋವುಗಳನ್ನು ಕೂಗುವನೋ, ಆಗ ಅನೇಕ ಪುಣ್ಯವುಳ್ಳ ಪ್ರೇಮದಿಂದ ನಡುಗಿದ ಅಲೆಗಳೆಂಬ ಭುಜಗಳುಳ್ಳ ಅಲ್ಪವಾದ ವೇಗವುಳ್ಳ ನದಿಗಳು ನಿಶ್ಚಲವಾದ ಪ್ರವಾಹವುಳ್ಳವುಗಳಾಗಿ ನೀರಿನಲ್ಲಿ ಗಾಳಿಯಿಂದ ತರಲ್ಪಡುವ ಕೃಷ್ಣನ ಪಾದಧೂಳಿ ಯನ್ನು ಸ್ಪರ್ಶ ಮಾಡಿದವು' ಎಂದಳು.

ಇನ್ನೊಬ್ಬ ಗೋಪಿಯು 'ತನ್ನ ಸಂಗಾತಿಗಳಿಂದ ವರ್ಣಿಸಲ್ಪಟ್ಟ ಮಹಿಮೆಯುಳ್ಳ ಸ್ಥಿರವಾದ ಐಶ್ವರ್ಯವುಳ್ಳ ವನದಲ್ಲಿ ಸಂಚರಿಸುವ ಕೃಷ್ಣನು ಬೆಟ್ಟದ ಪ್ರದೇಶಗಳಲ್ಲಿ ಸಂಚರಿಸುತ್ತಿರುವ ದನಗಳನ್ನು ಯಾವಾಗ ಕೂಗುವನೋ ಆಗ ಪುಷ್ಪಫಲಗಳಿಂದ ಕೂಡಿದ ನಮಸ್ಕಾರ ಮಾಡುತ್ತಿರುವ ಕೊಂಬೆಗಳಿಂದ ಕೂಡಿದ ಪ್ರೇಮದಿಂದ ರೋಮಾಂಚವುಳ್ಳ ವನದಲ್ಲಿ ಇರುವ ಮರಗಳೂ ಬಳ್ಳಿಗಳೂ ತಮ್ಮಲ್ಲಿ ಇರುವ ಪರಮಾತ್ಮನನ್ನು ವ್ಯಕ್ತಪಡಿಸುವಂತೆ ರಸಧಾರೆಗಳನ್ನು ಸುರಿಸುವುವು' ಎಂದಳು.

ಇನ್ನೊಬ್ಬ ಗೋಪಿಯು 'ಯಾವಾಗ ಶ್ರೀಕೃಷ್ಣನು ಕೊಳಲನ್ನು ಬಾರಿಸುತ್ತಾ ಸುಂದರಗಳಾದ ಅರಳಿದ ನೀಲೋತ್ಪಲಪುಷ್ಪಗಳ ಮಾಲೆಯ ದಿವ್ಯಗಂಧದಿಂದಲೂ ಕುಲಸಿಯ ಮಧುವಿನಿಂದ, ಮದಭರಿತಗಳಾದ ಭ್ರಮರಸಮೂಹಗಳಿಂದ, ಗಾನಮಾಡಲಿಕ್ಕೆ ಆರಂಭಿಸಿರುವ ಗಂಭೀರವಾದ ಗೀತವನ್ನು ಆದರಿಸುವನೋ ಆಗ

ಸರೋವರದಲ್ಲಿ ವಿಹಾರಮಾಡುತ್ತಿರುವ ಸಾರಸಹಂಸ ಇತ್ಯಾದಿ ಪಕ್ಷಿಗಳು ಮನೋಹರವಾದ ಗಾನದಲ್ಲಿ ಅಪಹೃತವಾದ ಮನಸ್ಸುಳ್ಳವುಗಳಾಗಿ ಏಕಾಗ್ರ ಮನಸ್ಸುಳ್ಳವರಾಗಿ ಅರ್ಧಮುಚ್ಚಿದ ಕಣ್ಣುಉಳ್ಳವುಗಳಾಗಿ ಮೌನವುಳ್ಳವುಗಳಾಗಿ ಒಟ್ಟಿಗೆ ಸೇರಿ ಪರಮಾತ್ಮನನ್ನು ಸೇವಿಸಿದವು' ಎಂದಳು.

ಆಗ ಬೇರೊಬ್ಬ ಗೋಪಿಯು 'ಗೋಕುಲದ ದೇವಿಯರೇ! ಬಲರಾಮನಿಂದ ಸಹಿತನಾದ ಹೂವಿನ ಮಾಲೆಯ ಮತ್ತು ಕಿವಿಯಲ್ಲಿದ್ದ ನೀಲೋತ್ಪಲಪುಷ್ಪದ ಕಾಂತಿಯುಳ್ಳ ಶ್ರೀಕೃಷ್ಣನು ಪರ್ವತಶಿಖರಗಳಲ್ಲಿ ಇದ್ದುಕೊಂಡು ಸಂತೋಷವುಳ್ಳವ ನಾಗಿ ಯಾವಾಗ ಕೊಳಲಿನ ಧ್ವನಿಯಿಂದ ಗೋವುಗಳನ್ನು ಕೂಗುವನೋ ಆಗ ಮೇಘವು ಗಟ್ಟಿಯಾಗಿ ಗರ್ಜನೆ ಮಾಡಿದರೆ ಕೃಷ್ಣಪರಮಾತ್ಮನಿಗೆ ಕಿವಿಯನ್ನು ಕಿವುಡಾಗುವಂತೆ ಮಾಡುವ ದೋಷಬರುವುದೆಂದು, ಸಂದೇಹಯುಕ್ತವಾದ ಮನಸ್ಸುಳ್ಳದ್ದಾಗಿ ಮೆಲ್ಲಮೆಲ್ಲನೆ ಕೊಳಲಿನ ಧ್ವನಿಗೆ ಅನುಕೂಲವಾಗಿ ಗರ್ಜನೆ ಮಾಡುವುದು. ತನ್ನಂತೆಯೇ ಬಣ್ಣವಿರುವ ಕಾರಣ ತನ್ನ ಮಿತ್ರನಾದ ಕೃಷ್ಣನ ಮೇಲೆ ಪುಷ್ಪದಂತೆ ಇರುವ ನೀರಿನ ಬಿಂದುಗಳನ್ನು ಸುರಿಸುವುದು. ನೆರಳಿನಿಂದ ಬಿಸಿಲನ್ನು ಪರಿಹರಿಸುವುದು' ಎಂದು ನುಡಿದಳು.

ಮತ್ತೊಬ್ಬ ಗೋಪಿಯು 'ಅಮ್ಮ ಯಶೋದೆ! ನಾನಾವಿಧಗಳಾದ ಗೋಪಾಲರ ಕರ್ಮಗಳಲ್ಲಿ ಪಂಡಿತನಾದ ನಿನ್ನ ಮಗನು ತುಟಿಯಲ್ಲಿ ಕೊಳಲನ್ನು ಇಟ್ಟುಕೊಂಡು ಕೊಳಲಿನ ವಿಷಯದಲ್ಲಿ ಕಿವಿಗೆ ಸುಖಕರವಾದ ತನ್ನ ಗಾನ ಶಿಕ್ಷೆಯನ್ನು ತೋರಿಸುವಾಗ ದೇವಸ್ತ್ರೀಯರೂ, ಇಂದ್ರರುದ್ರಬ್ರಹ್ಮದೇವರೇ ಮೊದಲಾದ ದೇವತೆಗಳೂ ಕೂಡ ಗಾನಶಾಸ್ತ್ರ ಪಾರಂಗತರಾದವರೂ ಶ್ರೀಕೃಷ್ಣನ ಕೊಳಲಗಾನವನ್ನು ಕೇಳಿ ಕುತ್ತಿಗೆಯನ್ನು ಬಗ್ಗಿಸಿಕೊಂಡು ಗೀತ ತತ್ವನಿಶ್ಚಯರಹಿತರಾಗಿ ಮೋಹವನ್ನು ಹೊಂದಿದರು' ಎಂದಳು.

ಇನ್ನೂ ಕೆಲವು ಗೋಪಿಯರು 'ಧ್ವಜವಜ್ರ ಪದ್ಮ ಅಂಕುಶರೇಖೆಗಳಿಂದ ಕೂಡಿದ ತನ್ನ ತಾವರೆಹೂವಿನಂತೆ ಇರುವ ಪಾದದ ಬೆರಳುಗಳಿಂದ ಭೂಮಿಗೆ ದನಗಳ ಪಾದಗಳಿಂದ ಆದ ಖೇದವನ್ನು ಪರಿಹರಿಸುತ್ತಾ ಮಹಾ ಶರೀರದಿಂದ ಕೂಡಿದ ಕೃಷ್ಣನು ಗೋಕುಲಕ್ಕೆ ಬರುವಾಗ ಅವನ ವಿಲಾಸದಿಂದ ಕೂಡಿದ ನೋಟದಿಂದ ಕಾಮೋದ್ರೇಕವುಳ್ಳವರಾಗಿ ಬ್ರಾಹ್ಮಮುಹೂರ್ತದಲ್ಲಿ ಗೋಕುಲ ದಲ್ಲಿರುವ ನಮ್ಮ ಮನೆಗೆ ಹೋದವರಾಗಿ ಮೋಹದಿಂದ ತಲೆಕೂದಲು ಬಿಚ್ಚಿಹೋದದ್ದನ್ನೂ ವಸ್ತ್ರವು ಜಾರಿಹೋದದ್ದನ್ನೂ ನಾವು ತಿಳಿಯಲೇ ಇಲ್ಲ' ಎಂದರು.

ಮತ್ತೊಬ್ಬ ಗೋಪಿಯು 'ಕೌಸ್ತುಭಮಣಿಯನ್ನು ಧರಿಸಿರುವ, ಪ್ರಿಯವಾದ

ಗಂಧವುಳ್ಳ ತುಲಸಿಮಾಲೆಯಿಂದ ಕೂಡಿದ ಮಿತ್ರನಾದ ಗೋಪಾಲನ ಹೆಗಲಲ್ಲಿ ತನ್ನ ಭುಜವನ್ನು ಇಟ್ಟುಕೊಂಡವನಾದ, ವನದಿಂದ ಗೋವುಗಳನ್ನು ಕರೆದುಕೊಂಡು ಬರುವ ಶ್ರೀಕೃಷ್ಣನು ಯಾವ ಸ್ಥಳದಲ್ಲಿ ಇದ್ದುಕೊಂಡು ಕೊಳಲಗಾನವನ್ನು ಮಾಡಿದನೋ ಆಗ ಅದರಲ್ಲಿ ಆಸೆಯುಳ್ಳ, ಮನಸ್ಸುಳ್ಳ, ಹೆಣ್ಣುಜಿಂಕೆಗಳು ಗುಣಗಣಗಳಿಂದ ಸಮುದ್ರದಂತೆ ಇರುವ ಕೊಳಲನ್ನು ಊದುತ್ತಿರುವ ಕೃಷ್ಣನ ಬಳಿಗೆ ಬಂದು ಪತಿಗಳನ್ನು ಬಿಟ್ಟು ಬಂದ ಗೋಪಿಯರಂತೆ ಸೇವಿಸುತ್ತಿರುವುವು' ಎಂದಳು.

ಇನ್ನೊಬ್ಬ ಗೋಪಿಯು 'ಪಾಪರಹಿತಳಾದ ಯಶೋದೆಯೇ! ಕುಂದಪುಷ್ಪಗಳ ಮಾಲೆಯಿಂದ ಮಾಡಿದ ಅಲಂಕಾರವುಳ್ಳ, ಗೋಪಾಲರಿಂದ ಕೂಡಿದ ಮಿತ್ರರಿಗೆ ಲೀಲಾಮಾತುಗಳಿಂದ ಆನಂದವನ್ನು ಉಂಟುಮಾಡುವ, ನಂದಕುಮಾರನು ಯಮುನೆಯಲ್ಲಿ ವಿಹಾರಮಾಡುವಾಗ ಸುವಾಸನೆಯುಳ್ಳ ಗಾಳಿಯು ಮೆಲ್ಲಮೆಲ್ಲನೆ ಬೀಸುತ್ತಿರುವುದು, ಗಂಧರ್ವರೂ ಮಂಗಲಪಾಠಕರೂ ವಾದ್ಯವನ್ನು ಬಾರಿಸುತ್ತಾ ಗಾಯನಮಾಡುತ್ತಾ ಪೂಜಾಸಾಮಗ್ರಿಯನ್ನು ಹಿಡಿದುಕೊಂಡು ಸುತ್ತಲೂ ಬಂದರು' ಎಂದಳು.

ಮತ್ತೊಬ್ಬ ಗೋಪಿಯು 'ಗೋವುಗಳ ವಿಷಯದಲ್ಲಿ ವಾತ್ಸಲ್ಯವುಳ್ಳ, ಗಂಭೀರವಾದ ದಾರಿಯಲ್ಲಿ ಜ್ಞಾನಿಗಳಿಂದ ಸ್ತುತ್ಯಗಳಾದ ಪಾದಗಳುಳ್ಳ ಶ್ರೀಕೃಷ್ಣನು ಸಾಯಂಕಾಲದಲ್ಲಿ ಗೋವುಗಳನ್ನು ಹಿಂದೆ ತಿರುಗಿಸಿ ಕೊಳಲಗಾಯನ ಮಾಡುತ್ತಾ ಮಿತ್ರರಿಂದ ಪ್ರಕಾಶಿತವಾದ ಕೀರ್ತಿಯುಳ್ಳವನಾಗಿ ಬರುತ್ತಿರುವ ವನಸಂಚಾರದಿಂದ ಶ್ರಮದಿಂದ ರಹಿತನಾದ ನೋಡುವವರ ಕಣ್ಣಿಗೆ ಸಂತೋಷವನ್ನು ಉಂಟುಮಾಡುವ ದನಗಳ ಪಾದಗಳ ಧೂಳಿಗಳಿಂದ ಕೂಡಿದ ಮಾಲೆಯುಳ್ಳ ದೇವಕೀದೇವಿಯ ಉದರದಿಂದ ಅಭಿವ್ಯಕ್ತನಾದ ಚಂದ್ರನಾದ ಶ್ರೀಕೃಷ್ಣಪರಮಾತ್ಮನು ಮಿತ್ರರಿಗೆ ಅಭೀಷ್ಟವನ್ನು ಕೊಡುವ ಇಚ್ಛೆಯಿಂದಲೇ ಬರುತ್ತಿರುವನು' ಎಂದಳು.

ಇನ್ನೊಬ್ಬಳು 'ಮದದಿಂದ ಸುತ್ತುವ ಕಣ್ಣುಗಳುಳ್ಳ ಮಿತ್ರರಿಗೆ ಸ್ವಲ್ಪ ಬಹುಮಾನವನ್ನು ಮಾಡುವ ವನಮಾಲೆಯುಳ್ಳ ಚಂದ್ರನಂತೆ ಸುಂದರವಾದ ಮುಖವುಳ್ಳ ಕಿವಿಯಲ್ಲಿ ಇರುವ ಕಡಕಿನಿಂದ ಕಪೋಲವನ್ನು ಪ್ರಕಾಶಗೊಳಿಸುವ ಗಜ ಶ್ರೇಷ್ಠದಂತೆ ವಿಹಾರವುಳ್ಳ ಸಂತೋಷಯುಕ್ತವಾದ ಮುಖವುಳ್ಳ ಬಲರಾಮನು ಚಂದ್ರನಂತೆ ಸಾಯಂಕಾಲದಲ್ಲಿ ಗೋವುಗಳ ಸಂತಾಪವನ್ನು ಪರಿಹರಿಸುತ್ತಾ ಬರುತ್ತಿರುವನು' ಎಂದಳು.

ಈರೀತಿಯಾಗಿ ಗೋಕುಲದ ಸ್ತ್ರೀಯರು ಕೃಷ್ಣಪರಮಾತ್ಮನ ಲೀಲೆಗಳನ್ನು ಗಾಯನ ಮಾಡುತ್ತಾ ಅವನಲ್ಲೇ ಮನಸ್ಸುಳ್ಳವರಾಗಿ ಹಗಲಲ್ಲಿ ವಿಹರಿಸುತ್ತಿದ್ದರು.

ಸರೋವರದಲ್ಲಿ ವಿಹಾರಮಾಡುತ್ತಿರುವ ಸಾರಸಹಂಸ ಇತ್ಯಾದಿ ಪಕ್ಷಿಗಳು ಮನೋಹರವಾದ ಗಾನದಲ್ಲಿ ಅಪಹೃತವಾದ ಮನಸ್ಸುಳ್ಳವುಗಳಾಗಿ ಏಕಾಗ್ರ ಮನಸ್ಸುಳ್ಳವರಾಗಿ ಅರ್ಧಮುಚ್ಚಿದ ಕಣ್ಣುಉಳ್ಳವುಗಳಾಗಿ ಮೌನವುಳ್ಳವುಗಳಾಗಿ ಒಟ್ಟಿಗೆ ಸೇರಿ ಪರಮಾತ್ಮನನ್ನು ಸೇವಿಸಿದವು' ಎಂದಳು.

ಆಗ ಬೇರೊಬ್ಬ ಗೋಪಿಯು 'ಗೋಕುಲದ ದೇವಿಯರೇ! ಬಲರಾಮನಿಂದ ಸಹಿತನಾದ ಹೂವಿನ ಮಾಲೆಯ ಮತ್ತು ಕಿವಿಯಲ್ಲಿದ್ದ ನೀಲೋತ್ಪಲಪುಷ್ಪದ ಕಾಂತಿಯುಳ್ಳ ಶ್ರೀಕೃಷ್ಣನು ಪರ್ವತಶಿಖರಗಳಲ್ಲಿ ಇದ್ದುಕೊಂಡು ಸಂತೋಷವುಳ್ಳವನಾಗಿ ಯಾವಾಗ ಕೊಳಲಿನ ಧ್ವನಿಯಿಂದ ಗೋವುಗಳನ್ನು ಕೂಗುವನೋ ಆಗ ಮೇಘವು ಗಟ್ಟಿಯಾಗಿ ಗರ್ಜನೆ ಮಾಡಿದರೆ ಕೃಷ್ಣಪರಮಾತ್ಮನಿಗೆ ಕಿವಿಯನ್ನು ಕಿವುಡಾಗುವಂತೆ ಮಾಡುವ ದೋಷಬರುವುದೆಂದು, ಸಂದೇಹಯುಕ್ತವಾದ ಮನಸ್ಸುಳ್ಳದ್ದಾಗಿ ಮೆಲ್ಲಮೆಲ್ಲನೆ ಕೊಳಲಿನ ಧ್ವನಿಗೆ ಅನುಕೂಲವಾಗಿ ಗರ್ಜನೆ ಮಾಡುವುದು. ತನ್ನಂತೆಯೇ ಬಣ್ಣವಿರುವ ಕಾರಣ ತನ್ನ ಮಿತ್ರನಾದ ಕೃಷ್ಣನ ಮೇಲೆ ಪುಷ್ಪದಂತೆ ಇರುವ ನೀರಿನ ಬಿಂದುಗಳನ್ನು ಸುರಿಸುವುದು. ನೆರಳಿನಿಂದ ಬಿಸಿಲನ್ನು ಪರಿಹರಿಸುವುದು' ಎಂದು ನುಡಿದಳು.

ಮತ್ತೊಬ್ಬ ಗೋಪಿಯು 'ಅಮ್ಮ ಯಶೋದೆ! ನಾನಾವಿಧಗಳಾದ ಗೋಪಾಲರ ಕರ್ಮಗಳಲ್ಲಿ ಪಂಡಿತನಾದ ನಿನ್ನ ಮಗನು ತುಟಿಯಲ್ಲಿ ಕೊಳಲನ್ನು ಇಟ್ಟುಕೊಂಡು ಕೊಳಲಿನ ವಿಷಯದಲ್ಲಿ ಕಿವಿಗೆ ಸುಖಕರವಾದ ತನ್ನ ಗಾನ ಶಿಕ್ಷೆಯನ್ನು ತೋರಿಸುವಾಗ ದೇವಸ್ತ್ರೀಯರೂ, ಇಂದ್ರರುದ್ರಬ್ರಹ್ಮದೇವರೇ ಮೊದಲಾದ ದೇವತೆಗಳೂ ಕೂಡ ಗಾನಶಾಸ್ತ್ರ ಪಾರಂಗತರಾದವರೂ ಶ್ರೀಕೃಷ್ಣನ ಕೊಳಲಗಾನವನ್ನು ಕೇಳಿ ಕುತ್ತಿಗೆಯನ್ನು ಬಗ್ಗಿಸಿಕೊಂಡು ಗೀತ ತತ್ವನಿಶ್ಚಯರಹಿತರಾಗಿ ಮೋಹವನ್ನು ಹೊಂದಿದರು' ಎಂದಳು.

ಇನ್ನೂ ಕೆಲವು ಗೋಪಿಯರು 'ಧ್ವಜವಜ್ರ ಪದ್ಮ ಅಂಕುಶರೇಖೆಗಳಿಂದ ಕೂಡಿದ ತನ್ನ ತಾವರೆಹೂವಿನಂತೆ ಇರುವ ಪಾದದ ಬೆರಳುಗಳಿಂದ ಭೂಮಿಗೆ ದನಗಳ ಪಾದಗಳಿಂದ ಆದ ಖೇದವನ್ನು ಪರಿಹರಿಸುತ್ತಾ ಮಹಾ ಶರೀರದಿಂದ ಕೂಡಿದ ಕೃಷ್ಣನು ಗೋಕುಲಕ್ಕೆ ಬರುವಾಗ ಅವನ ವಿಲಾಸದಿಂದ ಕೂಡಿದ ನೋಟದಿಂದ ಕಾಮೋದ್ರೇಕವುಳ್ಳವರಾಗಿ ಬ್ರಾಹ್ಮಮುಹೂರ್ತದಲ್ಲಿ ಗೋಕುಲದಲ್ಲಿರುವ ನಮ್ಮ ಮನೆಗೆ ಹೋದವರಾಗಿ ಮೋಹದಿಂದ ತಲೆಕೂದಲು ಬಿಚ್ಚಿಹೋದದ್ದನ್ನೂ ವಸ್ತ್ರವು ಜಾರಿಹೋದದ್ದನ್ನೂ ನಾವು ತಿಳಿಯಲೇ ಇಲ್ಲ' ಎಂದರು.

ಮತ್ತೊಬ್ಬ ಗೋಪಿಯು 'ಕೌಸ್ತುಭಮಣಿಯನ್ನು ಧರಿಸಿರುವ, ಪ್ರಿಯವಾದ

ಗಂಧವುಳ್ಳ ತುಲಸಿಮಾಲೆಯಿಂದ ಕೂಡಿದ ಮಿತ್ರನಾದ ಗೋಪಾಲನ ಹೆಗಲಲ್ಲಿ ತನ್ನ ಭುಜವನ್ನು ಇಟ್ಟುಕೊಂಡವನಾದ, ವನದಿಂದ ಗೋವುಗಳನ್ನು ಕರೆದುಕೊಂಡು ಬರುವ ಶ್ರೀಕೃಷ್ಣನು ಯಾವ ಸ್ಥಳದಲ್ಲಿ ಇದ್ದುಕೊಂಡು ಕೊಳಲಗಾನವನ್ನು ಮಾಡಿದನೋ ಆಗ ಅದರಲ್ಲಿ ಆಸೆಯುಳ್ಳ, ಮನಸ್ಸುಳ್ಳ, ಹೆಣ್ಣುಜಿಂಕೆಗಳು ಗುಣಗಣಗಳಿಂದ ಸಮುದ್ರದಂತೆ ಇರುವ ಕೊಳಲನ್ನು ಊದುತ್ತಿರುವ ಕೃಷ್ಣನ ಬಳಿಗೆ ಬಂದು ಪತಿಗಳನ್ನು ಬಿಟ್ಟು ಬಂದ ಗೋಪಿಯರಂತೆ ಸೇವಿಸುತ್ತಿರುವುವು' ಎಂದಳು.

ಇನ್ನೊಬ್ಬ ಗೋಪಿಯು 'ಪಾಪರಹಿತಳಾದ ಯಶೋದೆಯೇ! ಕುಂದಪುಷ್ಪಗಳ ಮಾಲೆಯಿಂದ ಮಾಡಿದ ಅಲಂಕಾರವುಳ್ಳ, ಗೋಪಾಲರಿಂದ ಕೂಡಿದ ಮಿತ್ರರಿಗೆ ಲೀಲಾಮಾತುಗಳಿಂದ ಆನಂದವನ್ನು ಉಂಟುಮಾಡುವ, ನಂದಕುಮಾರನು ಯಮುನೆಯಲ್ಲಿ ವಿಹಾರಮಾಡುವಾಗ ಸುವಾಸನೆಯುಳ್ಳ ಗಾಳಿಯು ಮೆಲ್ಲಮೆಲ್ಲನೆ ಬೀಸುತ್ತಿರುವುದು, ಗಂಧರ್ವರೂ ಮಂಗಲಪಾಠಕರೂ ವಾದ್ಯವನ್ನು ಬಾರಿಸುತ್ತಾ ಗಾಯನಮಾಡುತ್ತಾ ಪೂಜಾಸಾಮಗ್ರಿಯನ್ನು ಹಿಡಿದುಕೊಂಡು ಸುತ್ತಲೂ ಬಂದರು' ಎಂದಳು.

ಮತ್ತೊಬ್ಬ ಗೋಪಿಯು 'ಗೋವುಗಳ ವಿಷಯದಲ್ಲಿ ವಾತ್ಸಲ್ಯವುಳ್ಳ, ಗಂಭೀರವಾದ ದಾರಿಯಲ್ಲಿ ಜ್ಞಾನಿಗಳಿಂದ ಸ್ತುತ್ಯಗಳಾದ ಪಾದಗಳುಳ್ಳ ಶ್ರೀಕೃಷ್ಣನು ಸಾಯಂಕಾಲದಲ್ಲಿ ಗೋವುಗಳನ್ನು ಹಿಂದೆ ತಿರುಗಿಸಿ ಕೊಳಲಗಾಯನ ಮಾಡುತ್ತಾ ಮಿತ್ರರಿಂದ ಪ್ರಕಾಶಿತವಾದ ಕೀರ್ತಿಯುಳ್ಳವನಾಗಿ ಬರುತ್ತಿರುವ ವನಸಂಚಾರದಿಂದ ಶ್ರಮದಿಂದ ರಹಿತನಾದ ನೋಡುವವರ ಕಣ್ಣಿಗೆ ಸಂತೋಷವನ್ನು ಉಂಟುಮಾಡುವ ದನಗಳ ಪಾದಗಳ ಧೂಳಿಗಳಿಂದ ಕೂಡಿದ ಮಾಲೆಯುಳ್ಳ ದೇವಕೀದೇವಿಯ ಉದರದಿಂದ ಅಭಿವ್ಯಕ್ತನಾದ ಚಂದ್ರನಾದ ಶ್ರೀಕೃಷ್ಣಪರಮಾತ್ಮನು ಮಿತ್ರರಿಗೆ ಅಭೀಷ್ಟವನ್ನು ಕೊಡುವ ಇಚ್ಛೆಯಿಂದಲೇ ಬರುತ್ತಿರುವನು' ಎಂದಳು.

ಇನ್ನೊಬ್ಬಳು 'ಮದದಿಂದ ಸುತ್ತುವ ಕಣ್ಣುಗಳುಳ್ಳ ಮಿತ್ರರಿಗೆ ಸ್ವಲ್ಪ ಬಹುಮಾನವನ್ನು ಮಾಡುವ ವನಮಾಲೆಯುಳ್ಳ ಚಂದ್ರನಂತೆ ಸುಂದರವಾದ ಮುಖವುಳ್ಳ ಕಿವಿಯಲ್ಲಿ ಇರುವ ಕಡಕಿನಿಂದ ಕಪೋಲವನ್ನು ಪ್ರಕಾಶಗೊಳಿಸುವ ಗಜ ಶ್ರೇಷ್ಠದಂತೆ ವಿಹಾರವುಳ್ಳ ಸಂತೋಷಯುಕ್ತವಾದ ಮುಖವುಳ್ಳ ಬಲರಾಮನು ಚಂದ್ರನಂತೆ ಸಾಯಂಕಾಲದಲ್ಲಿ ಗೋವುಗಳ ಸಂತಾಪವನ್ನು ಪರಿಹರಿಸುತ್ತಾ ಬರುತ್ತಿರುವನು' ಎಂದಳು.

ಈರೀತಿಯಾಗಿ ಗೋಕುಲದ ಸ್ತ್ರೀಯರು ಕೃಷ್ಣಪರಮಾತ್ಮನ ಲೀಲೆಗಳನ್ನು ಗಾಯನ ಮಾಡುತ್ತಾ ಅವನಲ್ಲೇ ಮನಸ್ಸುಳ್ಳವರಾಗಿ ಹಗಲಲ್ಲಿ ವಿಹರಿಸುತ್ತಿದ್ದರು.

# ವೃಷಭಾಸುರನ ಸಂಹಾರವು [1]

ಒಂದು ದಿನದಲ್ಲಿ ಎತ್ತಿನ ಆಕಾರವುಳ್ಳ ಅರಿಷ್ಟಾಸುರನು ಭೂಮಿಯನ್ನು ನಡುಗಿಸುತ್ತಾ ಗೋಕುಲಕ್ಕೆ ಬಂದನು. ಕ್ರೂರವಾಗಿ ಕೂಗುತ್ತಾ ಪಾದದಿಂದ ಭೂಮಿಯನ್ನು ಕೆರೆಯುತ್ತಾ ಬಾಲವನ್ನು ಎತ್ತಿಕೊಂಡು ಕೊಂಬಿನ ಅಗ್ರಭಾಗದಿಂದ ಮೇಘಗಳನ್ನು ಓಡಿಸುತ್ತಾ ಸ್ವಲ್ಪಸ್ವಲ್ಪವೇ ಸೆಗಣಿಯನ್ನು ಹಾಕುತ್ತಾ ಮೂತ್ರವನ್ನು ಸುರಿಸುತ್ತಾ ಸ್ತಬ್ಧವಾದ ಕಣ್ಣುಗಳುಳ್ಳವನಾಗಿ ಬಂದನು. ಅವನ ಕಠಿಣವಾದ ಗರ್ಜನೆಯಿಂದ ಭಯದಿಂದ ಗೋವುಗಳ ಗರ್ಭವು ಸ್ರವಿಸಿಹೋಗುತ್ತಿತ್ತು. ಮೇಘಗಳು ಬೆಟ್ಟಗಳೆಂಬ ಸಂದೇಹದಿಂದ ಅವನ ಕೊಂಬುಗಳಲ್ಲಿ ಆಶ್ರಯಿಸುತ್ತಿದ್ದವು. ತೀಕ್ಷ್ಣಗಳಾದ ಕೊಂಬುಗಳುಳ್ಳ ಅವನನ್ನು ನೋಡಿ ಗೋಪರೂ, ಗೋಪಿಯರೂ, ಭಯಪಟ್ಟರು. ಪಶುಗಳು ಭಯವುಳ್ಳವುಗಳಾಗಿ ಗೋಕುಲವನ್ನು ಬಿಟ್ಟು ಓಡಿದವು. ಎಲ್ಲರೂ ಕೃಷ್ಣ! ಕೃಷ್ಣ! ಎಂದು ಹೇಳುತ್ತಾ ಭಗವಂತನನ್ನು ಮರೆಹೊಂದಿದರು.

ಪರಮಾತ್ಮನು ಭಯದಿಂದ ಓಡಿದ ಗೋವುಗಳ ಸಮೂಹವನ್ನು ನೋಡಿ ಭಯಪಡಬೇಡಿರಿ! ಎಂದು ಹೇಳಿ ಸಮಾಧಾನಪಡಿಸಿ ವೃಷಭಾಸುರನ ಬಳಿಗೆ ಯುದ್ಧಕ್ಕೆ ಹೋದನು. 'ಅಲ್ಪನೇ! ಪಶುಗಳನ್ನು ಪಶುಪಾಲಕರನ್ನು ಭಯಪಡಿಸಿ ಏನು ಪ್ರಯೋಜನ? ನಿನ್ನಂತಹ ದುರಾತ್ಮರ ಬಲದರ್ಪಗಳನ್ನು ಪರಿಹರಿಸಲು ನಾನು ಇರುವೆನು' ಎಂದು ಕೈಚಪ್ಪಾಳೆಯನ್ನು ಬಡಿದು ಅವನನ್ನು ಕೋಪಗೊಳಿಸಿ ಸಖನ ಹೆಗಲಮೇಲೆ ಕೈಯನ್ನು ಇಟ್ಟುಕೊಂಡು ನಿಂತುಕೊಂಡನು. ಈರೀತಿಯಾಗಿ ಕೋಪಗೊಂಡ ಅರಿಷ್ಟಾಸುರನು ಪಾದದಿಂದ ಭೂಮಿಯನ್ನು ಕೆರೆಯುತ್ತಾ ಬಾಲವನ್ನು ಎತ್ತಿಕೊಂಡು ಮೇಘಗಳನ್ನು ಓಡಿಸುತ್ತಾ ಕೋಪದಿಂದ ಕೃಷ್ಣನಿದ್ದಲ್ಲಿಗೆ ಓಡಿಬಂದನು. ಅವನು ಕೊಂಬುಗಳ ಅಗ್ರವನ್ನು ಮುಂದೆ ಮಾಡಿಕೊಂಡು ಸ್ತಬ್ಧಗಳಾದ ಕೆಂಪಾದ ಕಣ್ಣುಗಳುಳ್ಳವನಾಗಿ ಕಟಿಯನ್ನು ತೋರಿಸಿ ಓಡಿಬಂದನು. ಆಗ ಭಗವಂತನು ಅವನ ಕೊಂಬುಗಳಲ್ಲಿ ಹಿಡಿದು ಹದಿನೆಂಟು ಹೆಜ್ಜೆ ಹಿಂದೆ ತಳ್ಳಿದನು. ಹಿಂದೆ ಹೋಗಿ ಬಿದ್ದ ಅವನು ಬೇಗನೇ ಎದ್ದು ಮೈಯೆಲ್ಲಾ ಬೆವರು ಉಳ್ಳವನಾಗಿ ಕ್ರೋಧಪರವಶನಾಗಿ ದೀರ್ಘಶ್ವಾಸವನ್ನು ಬಿಡುತ್ತಾ ಓಡಿಬಂದನು. ಶ್ರೀಭಗವಂತನು ಅವನ ಕೊಂಬುಗಳನ್ನು ಹಿಡಿದು, ಕಾಲಿನಿಂದ ಒದೆದು, ಭೂಮಿಯಲ್ಲಿ ಬೀಳಿಸಿ ವಸ್ತ್ರವನ್ನು ಹಿಂಡುವಂತೆ ಪೀಡಿಸಿದನು. ಕೊಂಬನ್ನು ಕಿತ್ತಿ ಅದರಿಂದಲೇ ಬಡೆದನು. ಆದರಿಂದ

---

1. ಭಾ. X-34 ಮತ್ತು ಮ.ತಾ.ನಿ. ಅ–13

ರಾಕ್ಷಸನು ಬಿದ್ದನು. ಅವನು ರಕ್ತವನ್ನು ಕಾರುತ್ತಾ ಮಲಮೂತ್ರ ವಿಸರ್ಜನೆ ಮಾಡುತ್ತಾ ಕಾಲುಗಳನ್ನು ಆಡಿಸುತ್ತಾ ಕಣ್ಣುತೆರೆದುಹೋಗಿ ಹಾಗೆಯೇ ಪ್ರಾಣವನ್ನು ಬಿಟ್ಟನು. ದೇವತೆಗಳೆಲ್ಲರೂ ದೇವರ ಮೇಲೆ ಹೂವಿನ ಮಳೆಯನ್ನು ಸುರಿಸುತ್ತಾ ಸ್ತೋತ್ರ ಮಾಡಿದರು. ಈರೀತಿಯಾಗಿ ಶ್ರೀಭಗವಂತನು ವೃಷಭಾಕಾರವುಳ್ಳ ಆ ಅರಿಷ್ಟಾಸುರನನ್ನು ಸಂಹರಿಸಿ ಗೋಪಾಲರಿಂದ ಸ್ತೋತ್ರಮಾಡಲ್ಪಡುವವನಾಗಿ ಗೋಪಿಯರ ಮನಸ್ಸಿಗೆ ಸಂತೋಷವನ್ನು ಉಂಟುಮಾಡುತ್ತಾ ಗೋಕುಲವನ್ನು ಪ್ರವೇಶಿಸಿದನು.



## ಕಂಸನು ಗೋಕುಲಕ್ಕೆ ಅಕ್ರೂರನನ್ನು ಕಳುಹಿಸಿದ್ದು [1]

ಶ್ರೀಕೃಷ್ಣಪರಮಾತ್ಮನು ಗೋಕುಲದಲ್ಲಿ ಅರಿಷ್ಟಾಸುರನನ್ನು ಸಂಹರಿಸಿದ ಮೇಲೆ ನಾರದರು ಕಂಸನಿದ್ದಲ್ಲಿಗೆ ಹೋಗಿ 'ಹೆಣ್ಣುಮಗಳು ಯಶೋದೆಯ ಮಗಳೆಂದೂ, ಕೃಷ್ಣನು ದೇವಕಿಯ ಮಗನೆಂದೂ, ಬಲರಾಮನು ರೋಹಿಣಿಯ ಮಗನೆಂದೂ, ಅವರಿಬ್ಬರನ್ನೂ ವಸುದೇವನ ಭಯದಿಂದ ತನ್ನ ಮಿತ್ರನಾದ ನಂದಗೋಪನಲ್ಲಿ ಇಟ್ಟನೆಂದೂ, ಆ ಕೃಷ್ಣಬಲರಾಮರಿಂದಲೇ ನಿನ್ನಿಂದ ಕಳುಹಿಸಲ್ಪಟ್ಟ ಅಸುರರೆಲ್ಲರೂ ಸಂಹೃತರಾದರೆಂದೂ ತಿಳಿಸಿದರು. ಅದನ್ನು ಕೇಳಿ ಕಂಸನು ಕೋಪದಿಂದ ನಡುಗಿಹೋದನು. ವಸುದೇವನನ್ನು ಕೊಲ್ಲುವೆನೆಂದು ಖಡ್ಗವನ್ನು ತೆಗೆದನು. ಆಗ ನಾರದರು ಅವನನ್ನು ತಡೆದರು. ತರುವಾಯ ಕಂಸನು ಕೃಷ್ಣಬಲರಾಮದೇವರು ತನ್ನ ಮೃತ್ಯುವೆಂದು ತಿಳಿದುಕೊಂಡು ಪತ್ನಿಸಹಿತನಾದ ವಸುದೇವನನ್ನು ಲೋಹಮಯ ಪಾಶಗಳಿಂದ ಬಂಧಿಸಿದನು. ನಾರದರು ಹೊರಟುಹೋದ ಮೇಲೆ ಕಂಸನು ಕೇಶಿ ಯೆಂಬ ಅಸುರನಿಗೆ ಸಮಾಧಾನಪಡಿಸಿ ಕೃಷ್ಣಬಲರಾಮರನ್ನು ಸಂಹರಿಸಬೇಕೆಂದು ಕಳುಹಿಸಿದನು.

ತರುವಾಯ ಚಾಣೂರ, ಮುಷ್ಟಿಕ, ಶಲ, ತೋಶಲ ಮೊದಲಾದ ಮಲ್ಲರನ್ನು, ಮಂತ್ರಿಗಳನ್ನು, ಆನೆಯ ಮಾವುತರನ್ನು, ಕರೆದು ಕಂಸನು ಹೇಳಿದನು. 'ವೀರನಾದ ಚಾಣೂರನೇ! ಮುಷ್ಟಿಕನೇ! ನಾನು ಹೇಳುವ ಮಾತನ್ನು ಕೇಳಬೇಕು. ವಸುದೇವನ ಮಕ್ಕಳು ಗೋಕುಲದಲ್ಲಿ ಇರುವರು. ಆ ರಾಮಕೃಷ್ಣರು ನನ್ನ ಮೃತ್ಯುಗಳಂತೆ. ಇಲ್ಲಿ

1. ಭಾ. X-34 ಮತ್ತು ಮ.ತಾ.ನಿ. ಅ-13

ಬಂದ ಆವರಿಬ್ಬರನ್ನು ನೀವು ಮಲ್ಲಕ್ರೀಡೆಯಿಂದ ಸಂಹರಿಸಬೇಕು. ಮಲ್ಲಕ್ರೀಡೆಯನ್ನು ನೋಡಲಿಕ್ಕೆ ಮಂಚಗಳನ್ನು ಇಡಬೇಕು. ಊರಿನ ಜನರೆಲ್ಲರೂ ಇಚ್ಛಾನುಸಾರವಾಗಿ ಆ ಯುದ್ಧವನ್ನು ನೋಡಲಿ. ಆನೆಯ ಮಾವುತನೇ! ನನ್ನ ಮಾತನ್ನು ಕೇಳು! ಕುವಲಯಾಪೀಡವೆಂಬ ಆನೆಯ ಸೊಂಡಿಲಿನಲ್ಲಿ ಮುದ್ಗರವೆಂಬ ಆಯುಧವನ್ನು ಕೊಟ್ಟು ರಂಗಸ್ಥಳದ ಬಾಗಿಲಲ್ಲಿ ನಿಲ್ಲಿಸಬೇಕು. ಆ ಆನೆಯಿಂದ ಬಂದ ಕೃಷ್ಣಬಲರಾಮರನ್ನು ಕೊಲ್ಲಿಸಬೇಕು' ಎಂದು ಹೇಳಿದನು. ಅದನ್ನು ಕೇಳಿ ವ್ಯಾಕುಲ ಬುದ್ಧಿಯುಳ್ಳ ಅವನು ಕಂಸಮಹಾರಾಜರ ತಂಗಿಯ ಮಕ್ಕಳಾದ ಅವರನ್ನು ನಾನು ಹೇಗೆ ಕೊಲ್ಲಲಿ ಎಂದು ಕೇಳಿದನು. ಅದನ್ನು ಕೇಳಿ ದುರ್ಬುದ್ಧಿಯುಳ್ಳ ಕಂಸನು ಎಲ್ಲರೂ ಕೇಳುವಂತೆ ಹೇಳಿದನು. 'ಎಲ್ಲರೂ ನಾನು ಹೇಳುವ ಮಾತನ್ನು ಕೇಳಬೇಕು. ಕೇಳಿ ಹಾಗೆಯೇ ಮನಸ್ಸಿನಲ್ಲಿ ಇಟ್ಟುಕೊಳ್ಳಿರಿ. ನಾನು ಬಂಧುಗಳಲ್ಲಿ ಈರೀತಿಯಾಗಿ ವಿರೋಧವನ್ನು ಮಾಡಲಿಕ್ಕೆ ಕಾರಣವನ್ನು ಹೇಳುವೆನು.

ಒಂದು ದಿವಸದಲ್ಲಿ ಮಹಾನುಭಾವಳಾದ ನನ್ನ ತಾಯಿಯು ಸುಂದರವಾದ ಮನೆಯ ಉದ್ಯಾನದಲ್ಲಿ ವಸಂತಋತುವಿನಲ್ಲಿ ಸಂಚರಿಸುತ್ತಿದ್ದಳು. ಹಾಗೆ ಸಂಚರಿಸುವಾಗ ಋತುಸ್ನಾತಳಾದ ಅವಳು ಕಾಮಸಂತಾಪವುಳ್ಳವಳಾಗಿ ಪತಿಯನ್ನು ಸ್ಮರಿಸಿಕೊಂಡಳು. ಅಲ್ಲಿಯೇ ಒಬ್ಬ ಗಂಧರ್ವನ ಮಗನಾದ ದ್ರುಮಿಲ ಎಂಬ ರಾಕ್ಷಸನು ಮರೆಯಾಗಿ ಸಂಚರಿಸುತ್ತಾ ಒಬ್ಬಳೇ ಸಂಚರಿಸುತ್ತಾ ಇದ್ದ ನನ್ನ ತಾಯಿಯನ್ನು ನೋಡಿ ಸರ್ವಪ್ರಾಣಿಗಳ ಮನಸ್ಸಿನಲ್ಲಿರುವ ಅಭಿಪ್ರಾಯವನ್ನು ತಿಳಿಯುವ ಸಾಮರ್ಥ್ಯವುಳ್ಳವನಾಗಿದ್ದ ಕಾರಣ ತಾಯಿಯ ಅಭಿಪ್ರಾಯವನ್ನು ತಿಳಿದವನಾಗಿ ಉಗ್ರಸೇನನಂತೆಯೇ ರೂಪವನ್ನು ಧರಿಸಿಕೊಂಡು ಮುಗುಳು ನಗೆಯನ್ನು ಮಾಡುತ್ತಾ ಅವಳ ಹತ್ತಿರಕ್ಕೆ ಬಂದನು. ಆಗ ಅವನು ರಾಕ್ಷಸನೆಂದು ತಿಳಿಯದೆ ತಾಯಿಯು ಅವನೊಡನೆ ರಮಿಸಿದಳು. ಆಮೇಲೆ ಅವನು ತನ್ನ ಗಂಡನಲ್ಲವೆಂದು ತಿಳಿದವಳಾಗಿ ತುಂಬಾದುಃಖವನ್ನು ಹೊಂದಿದಳು. 'ವಂಚಕನೇ ನೀನು ಯಾರು? ದುರಾತ್ಮನಾದ ನೀನು ಇಂತಹ ಕಾರ್ಯವನ್ನು ಮಾಡಿದೆ' ಎಂದು ಹೇಳಿದಳು. ಆಗ ದ್ರುಮಿಲನು ಅವಳನ್ನು ಸಮಾಧಾನಪಡಿಸುತ್ತಾ 'ಪ್ರಿಯೆ! ನಾವು ಗಂಧರ್ವಕುಲದಲ್ಲಿ ಹುಟ್ಟಿದವರು. ದೇವತೆಗಳಿಗೆ ಸಮಾನರು. ಇಂದ್ರದೇವರಿಗೆ ಪ್ರಿಯರಾದವರು. ನಿನ್ನಂತಹ ಮನುಷ್ಯಸ್ತ್ರೀಯರಿಗೆ ಸಿಗುವವರಲ್ಲ. ಹುಟ್ಟೋಣ ಮುದಿತನ ಇತ್ಯಾದಿಗಳುಳ್ಳ ಮನುಷ್ಯರಿಗೂ ದೇವತೆಗಳಿಗೂ ಬಹಳ ವ್ಯತ್ಯಾಸ ವಿರುವುದು' ಎಂದು ಹೇಳಿದನು.

ಆಗ ನನ್ನ ತಾಯಿಯು ಕೋಪವುಳ್ಳವಳಾಗಿ 'ಇಂತಹ ದುಷ್ಟವ್ಯಾಪಾರವನ್ನು ಮಾಡಿ ನನ್ನನ್ನು ಪುನಃ ಸಮಾಧಾನಪಡಿಸುವಿಯಾ? ಅಗ್ನಿ ಸೂರ್ಯ ಇತ್ಯಾದಿ ಕರ್ಮಸಾಕ್ಷಿ ದೇವತೆಗಳನ್ನು ತಿರಸ್ಕರಿಸಿ ಕಾಡಿನ ಆನೆಯು ಸರೋವರನ್ನು ಕೆಡಿಸುವಂತೆ ಕೆಡಿಸಿದೆ. ಅಧಮನೇ! ಪುನಃ ನನ್ನನ್ನು ಏಕೆ ಸಮಾಧಾನಪಡಿಸುವಿ?' ಎಂದು ಹೇಳಿದಳು. ಆಗ ದ್ರುಮಿಲನು ತನಗೆ ಅವಳು ಶಾಪವನ್ನು ಕೊಡುವಳೆಂದು ಸಂದೇಹವುಳ್ಳವನಾಗಿ 'ಸುಂದರಿಯೇ! ಮನುಷ್ಯ ಸ್ತ್ರೀಯರಲ್ಲಿ ದೇವತೆಗಳ ಸಂಬಂಧವು ಅನುಕೂಲವೇ ವಿರುದ್ಧವಲ್ಲ. ದೇವತಾ ಸ್ತ್ರೀಯರಲ್ಲಿ ಮನುಷ್ಯರಲ್ಲಿ ಸಂಗಮವು ವಿರುದ್ಧವಾದದ್ದು. ಆದುದರಿಂದ ನಾನು ಅಪರಾಧವನ್ನು ಮಾಡಿದವನಲ್ಲವೆಂದು ತಿಳಿಯುವವಳಾಗು. ಅದರಿಂದ ನಿನಗೆ ಒಬ್ಬ ಮಗನು ಹುಟ್ಟುವನು. ನನ್ನ ವೀರ್ಯವು ವ್ಯರ್ಥವಾಗಲಾರದು. ಹಣವಂತನಾದ ಬುದ್ಧಿವಂತನಾದ ಮಹಾಉತ್ಸಾಹಶಾಲಿಯಾದ ಮಗನು ಹುಟ್ಟುವನು. ನನ್ನ ಮಾತು ಸುಳ್ಳಾಗಲಾರದು' ಎಂದು ಹೇಳಿದನು. ಆಗ ನನ್ನ ತಾಯಿಯು ಕೋಪವುಳ್ಳವಳಾಗಿ ದುರ್ಲಭವಾದ ಪಾತಿವ್ರತ್ಯವನ್ನು ಕಳಕೊಂಡವಳಾದ ಕಾರಣ ಸಂತಾಪವುಳ್ಳವರಾಗಿ 'ಧರ್ಮವನ್ನು ಮೀರಿದ ಪಾಪಿಯಾದ ಕ್ರೂರನಾದ ನಿನಗೆ ಸಾಹಸಿಯಾದ ದಯಾಹೀನನಾದ ದೇವತೆಗಳ ಋಷಿಗಳ ಅನುಗ್ರಹಕ್ಕೆ ಪಾತ್ರನಾಗದೆ ಇರುವವನು ಹುಟ್ಟುವನು' ಎನ್ನಲು ದ್ರುಮಿಲನು ಇನ್ನು ಇಲ್ಲಿಯೇ ತಾನು ಇದ್ದರೆ ಶಾಪಕೊಡುವಳೆಂದು ಅಂಜುವವನಾಗಿ 'ನಿಮ್ಮವರಿಗೆಲ್ಲಾ ಶತ್ರುವಾಗುವನು' ಎಂದು ಹೇಳಿ ಮರೆಯಾದನು.

ಅವನು ಹೊರಟುಹೋದ ಮೇಲೆ ನನ್ನ ತಾಯಿಯು ಆ ಉದ್ಯಾನದಿಂದ ಮನೆಗೆ ಬಂದಳು. ಈ ವೃತ್ತಾಂತವು ಒಬ್ಬರಿಗೂ ತಿಳಿಯಲಿಲ್ಲ. ತರುವಾಯ ಅವಳು ಹಾಗೆಯೇ ಗರ್ಭಿಣಿಯಾಗಿ ನನ್ನನ್ನು ಹಡೆದಳು. ಈ ವಿಷಯವನ್ನು ಒಂದು ದಿವಸದಲ್ಲಿ ನಾರದರು ಬಂದು ಹೇಳಿದರು. ಆಗಲೇ ಆರಂಭಿಸಿ ನಾನು ಈ ಬಂಧುಗಳಾದ ದುಷ್ಟರನ್ನು ತಿಳಿದಿರುವೆನು. ನೀವೂ ನೋಡುವಿರಲ್ಲಾ! ಇವರೆಲ್ಲರೂ ನನ್ನನ್ನು ದ್ವೇಷಿಸುತ್ತಿರುವರು. ದುರ್ಬುದ್ಧಿಯುಳ್ಳ ಉಗ್ರಸೇನನನ್ನು ದುಷ್ಟ ಅಭಿಪ್ರಾಯವುಳ್ಳ ಆಹುಕನನ್ನು ವಂಚಕನಾದ ವಸುದೇವನನ್ನು, ಅವನನ್ನು ಆಶ್ರಯಿಸಿದ ಇತರರನ್ನು ಕೊಂದರೂ ಆಗಂಧರ್ವ ಪುತ್ರನಿಂದ ಹುಟ್ಟಿದ ನನಗೆ ದೋಷವುಂಟಾಗಲಾರದು. ಅದರಿಂದ ಇಷ್ಟು ಕ್ರೂರವಾಗಿ ಕೃಷ್ಣಬಲರಾಮರನ್ನು ಕೊಲ್ಲಿರಿ ಎಂದು ಆಜ್ಞಾಪಿಸುತ್ತಿರುವೆನು. ಬಲಿಷ್ಠವಾದ ಆನೆಯಿಂದ ಆ ಕೃಷ್ಣಬಲರಾಮರನ್ನು

ಕೊಂದಮೇಲೆ ಅವರೆಲ್ಲರೂ ಅವರ ಮಾರ್ಗವನ್ನು ಹೊಂದಲಿ. ವಸುದೇವ ಉಗ್ರಸೇನರೂ ನಂದಗೋಪ, ದೇವಕರೂ, ಗೋಪಾಲರೂ, ಯಾದವರೂ ಎಲ್ಲರೂ ಸಂಹಾರಮಾಡಲ್ಪಡುತ್ತಿರುವ ಆ ಬಾಲಕರನ್ನು ನೋಡಲಿ. ಊರಜನರೆಲ್ಲರೂ ಕೂಗಿರಿ. ಎಲ್ಲರೂ ನನ್ನ ಪೌರುಷವನ್ನು ನೋಡಲಿ. ಮಾವುತನೇ! ನೀನು ರಂಗಸ್ಥಳದ ದ್ವಾರದಲ್ಲಿ ಕುವಲಯಾಪೀಡವೆಂಬ ಆನೆಯನ್ನು ನಿಲ್ಲಿಸು. ಆದರಿಂದ ನನ್ನ ಶತ್ರುಗಳನ್ನು ಕೊಲ್ಲಿಸು. ಚತುರ್ದಶಿ ದಿವಸದಲ್ಲಿ ವಿಧಿಪ್ರಕಾರವಾಗಿ ಧನುರ್ಯಾಗವು ಆರಂಭಿಸಲ್ಪಡಲಿ. ರುದ್ರದೇವರಿಗಾಗಿ ಪಶುಗಳನ್ನು ಕೊಲ್ಲಿರಿ'' ಎಂದು ಹೇಳಿದನು.

ತರುವಾಯ ಅವನು ಯಾದವಶ್ರೇಷ್ಠನಾದ ಅಕ್ರೂರನನ್ನು ಕರೆದು ಅವನ ಕೈಯನ್ನು ಹಿಡಿದುಕೊಂಡು 'ದಾನ ಮಾಡುವವರಲ್ಲಿ ಶ್ರೇಷ್ಠನಾದ ಅಕ್ರೂರನೇ! ನನಗೆ ನೀನು ಮಿತ್ರಕಾರ್ಯವನ್ನು ಮಾಡಬೇಕು. ನನಗೆ ನೀನು ಹೊರತು ಇತರರು ಹಿತಮಾಡುವವರು ಇಲ್ಲ. ಆದುದರಿಂದ ಕಾರ್ಯಸಾಧಕನಾದ ನಿನ್ನನ್ನು ಆಶ್ರಯಿಸಿರುವೆನು. ನೀನೀಗ ನಂದಗೋಕುಲಕ್ಕೆ ಹೋಗಬೇಕು. ಅಲ್ಲಿ ವಸುದೇವನ ಬಾಲಕರು ಇದ್ದಾರೆ. ಅವರನ್ನು ಇಲ್ಲಿಗೆ ರಥದಿಂದ ಕರೆದುಕೊಂಡು ಬಾ. ಆ ಬಾಲಕರನ್ನು ನನಗೆ ಮೃತ್ಯುವೆಂದು ದೇವತೆಗಳು ಕ್ಲೃಪ್ತಮಾಡಿರುವರು. ಕಾಣಿಕೆ ಸಹಿತ ನಂದಗೋಪಾದಿಗಳಿಂದ ಕೂಡಿಕೊಂಡು ಅವರಿಬ್ಬರನ್ನು ಕರೆದುಕೊಂಡುಬಾ. ಇಲ್ಲಿಗೆ ಬಂದ ಅವರಿಬ್ಬರನ್ನು ಯಮನಂತೆ ಇರುವ ಆನೆಯಿಂದ ಕೊಲ್ಲಿಸುವೆನು. ಆದರಿಂದ ತಪ್ಪಿಸಿಕೊಂಡರೆ ಮಲ್ಲರಿಂದ ಕೊಲ್ಲಿಸುವೆನು. ಅವರು ಸತ್ತಮೇಲೆ ಸಂತಾಪವನ್ನು ಹೊಂದಿರುವ ವಸುದೇವನೇ ಮೊದಲಾದ ಅವರ ಬಂಧುಗಳಾದ ಯಾದವರನ್ನು ಕೊಲ್ಲಿಸುವೆನು. ನನ್ನ ತಂದೆಯಾದ ಮುದುಕನಾದ ರಾಜ್ಯದಲ್ಲಿ ಆಸೆಯುಳ್ಳವನಾದ, ಉಗ್ರಸೇನನನ್ನು, ಅವನ ತಮ್ಮನಾದ ದೇವಕನನ್ನೂ, ಇತರ ದ್ವೇಷಿಗಳನ್ನು ಕೊಲ್ಲಿಸುವೆನು. ತರುವಾಯ ನನಗೆ ಈ ಭೂಮಿಯು ಶತ್ರುರಹಿತವಾಗುವುದು. ಜರಾಸಂಧನು ನನ್ನ ಗುರುವು. ವಿವಿದನು ನನ್ನ ಪ್ರಿಯಮಿತ್ರನು. ಶಂಬರ, ನರಕ, ಬಾಣ ಇವರೆಲ್ಲರೂ ನನ್ನಲ್ಲಿಯೇ ಸ್ನೇಹವುಳ್ಳವರು. ಅವರಿಂದ ನಾನು ದೇವಪಕ್ಷದವರಾದ ರಾಜರನ್ನು ಸಂಹರಿಸಿ ಭೂಮಿಯನ್ನು ಅನುಭವಿಸುವೆನು. ಇದನ್ನೆಲ್ಲಾ ಮನಸ್ಸಿನಲ್ಲಿ ಇಟ್ಟುಕೊಂಡು ಬಾಲಕರಾದ ಕೃಷ್ಣಬಲರಾಮರನ್ನು ಧನುರ್ಯಾಗವನ್ನು ನೋಡುವುದಕ್ಕೂ ಮಧುರಾ ಪಟ್ಟಣದ ಕಾಂತಿಯನ್ನು ನೋಡುವುದಕ್ಕೂ ಕರೆದುಕೊಂಡು ಬಾ' ಎಂದು ಹೇಳಿದನು. ಆಗ ಅಕ್ರೂರನು

'ನೀನು ಸರಿಯಾದ ಕಾರ್ಯವನ್ನು ಮಾಡಿರುವಿ. ಮರಣವನ್ನು ತಿಳಿದೂ ಕೂಡ ಪರಿಹಾರ ಪ್ರಯತ್ನವನ್ನು ಮಾಡಿಲ್ಲವೆಂಬ ಅಪವಾದವನ್ನು ಪರಿಹಾರ ಮಾಡಿಕೊಂಡಿರುವಿ. ಫಲವನ್ನು ಎದುರುನೋಡದೆ ನಾವು ಮಾಡುವ ಕಾರ್ಯವನ್ನು ಮಾಡಬೇಕು. ಫಲಸಿದ್ಧಿಯು ಭಗವಂತನ ಅಧೀನವು. ಆದರೂ ನಿನ್ನ ಆಜ್ಞೆಯಂತೆ ನಾನು ಮಾಡುವೆನು? ಎಂದು ಹೇಳಿದನು. ಕಂಸನು ಈ ರೀತಿಯಾಗಿ ಅಕ್ರೂರನನ್ನು ಆಜ್ಞಾಪಿಸಿ ಮಂತ್ರಿಗಳನ್ನು ಕಳುಹಿಸಿ ತಾನು ತನ್ನ ಮನೆಗೆ ಹೋದನು.



## ಕೇಶಿಯ ವಧವು [1]

ಕಂಸನಿಂದ ಕಳುಹಿಸಲ್ಪಟ್ಟ ಕುದುರೆಯ ಆಕಾರವುಳ್ಳ ಕೇಶಿಯೆಂಬ ದೈತ್ಯನು ಪಾದಗಳಿಂದ ಭೂಮಿಯನ್ನು ಕೆರೆಯುತ್ತಾ ಕಂಸನ ಹಿತವನ್ನು ಮಾಡುವ ಇಚ್ಛೆಯುಳ್ಳವನಾಗಿ ಗೋಕುಲವನ್ನೇ ನಡುಗಿಸುತ್ತಾ ಬಂದನು. ತನ್ನ ಗರ್ಜನೆಯಿಂದ ಗೋಕುಲವನ್ನು ಬೆದರಿಸುತ್ತಾ ಬಾಲದಿಂದ ಮೇಘಗಳನ್ನು ಓಡಿಸುತ್ತಾ, ತನ್ನನ್ನು ಜಗಳಕ್ಕಾಗಿ ಹುಡುಕುತ್ತಾ ಇದ್ದ ಅವನನ್ನು ಶ್ರೀಭಗವಂತನು ಕೂಗಿ ಸಿಂಹದಂತೆ ಗರ್ಜನೆಯನ್ನು ಮಾಡಿದನು. ಅದನ್ನು ಕೇಳಿ ಕೇಶಿಯು ಭಗವಂತನ ಎದುರಾಗಿ ಆಕಾಶವನ್ನು ನೋಡುತ್ತಾ ಓಡಿಬಂದನು. ಮಹಾವೇಗವುಳ್ಳ, ಕ್ರೂರನಾದ ಅವನು ತನ್ನ ಪಾದಗಳಿಂದ ಭಗವಂತನನ್ನು ಒದೆಯುವವನಾದನು. ಆಗ ಶ್ರೀಭಗವಂತನು ಆ ಪಾದಪ್ರಹಾರವನ್ನು ತಪ್ಪಿಸಿಕೊಳ್ಳುವವನಾಗಿ ರೋಷದಿಂದ ಎರಡು ಕೈಗಳಿಂದ ಹಿಡಿದು ಪಾದಗಳಲ್ಲಿ ಪೀಡಿಸಿ ನೂರು ಧನುಸ್ಸಿನಷ್ಟು ದೂರಕ್ಕೆ ತಳ್ಳಿ ಅಲಕ್ಷ್ಯದಿಂದ ನಿಂತುಕೊಂಡಿದ್ದನು. ಮೂರ್ಛಿತನಾಗಿ ಬಿದ್ದ ಆ ಅಸುರನು ಪುನಃ ಎದ್ದು ಬಾಯಿಯನ್ನು ತೆರೆದುಕೊಂಡು ಭಗವಂತನಿದ್ದಲ್ಲಿಗೆ ವೇಗದಿಂದ ಓಡಿಬಂದನು. ಆಗ ಭಗವಂತನು ನಗುತ್ತಾ ತನ್ನ ಕೈಯನ್ನು ಅವನ ಬಾಯಿಯೊಳಗೆ ಇಟ್ಟನು. ಆಗ ಭಗವಂತನ ಭುಜವು ತಾಗಲು ಕೇಶಿಯ ಹಲ್ಲುಗಳೆಲ್ಲವೂ ಉದುರಿ ಕೆಳಗೆ ಬಿದ್ದವು. ಅವನ ದೇಹವನ್ನು ಪ್ರವೇಶಿಸಿದ ಭಗವಂತನ ಭುಜವು ಬೆಳೆಯಿತು. ದೇವರ ಕೈಯು ದೊಡ್ಡದಾಗಿ ಬೆಳೆಯಲು ಕೇಶಿಗೆ ಶ್ವಾಸವನ್ನು ಬಿಡಲಿಕ್ಕೆ ಆಗಲಿಲ್ಲ. ಮೈಯೆಲ್ಲಾ ಬೆವರು ಸುರಿಯಿತು. ಕಣ್ಣಿನ ಗುಡ್ಡು ಮೇಲಕ್ಕೆ ಬಂದಿತು. ಕಾಲುಗಳನ್ನು ಬಡೆದುಕೊಂಡು,

---

1. ಭಾ. X-34 ಮತ್ತು ಮ.ತಾ.ನಿ. ಅ-13

ಮಲವನ್ನು ವಿಸರ್ಜನೆ ಮಾಡಿ ಸತ್ತು ಕೆಳಗೆ ಬಿದ್ದನು. ತರುವಾಯ ಶ್ರೀಭಗವಂತನು ಮೃತನಾದ ಅವನ ದೇಹದಿಂದ ತನ್ನ ಕೈಯನ್ನು ಸೆಳೆದು ತೆಗೆದನು. ದೇವತೆಗಳೆಲ್ಲರೂ ಶ್ರೀಭಗವಂತನನ್ನು ಸ್ತುತಿಸುತ್ತಾ ಹೂವಿನ ಮಳೆಯನ್ನು ಸುರಿಸಿದರು.



## ನಾರದರ ಆಗಮನವು [1]

ಅಷ್ಟರಲ್ಲಿ ದೇವರ್ಷಿಗಳಾದ ನಾರದರು ಅಲ್ಲಿಗೆ ಬಂದು ರಹಸ್ಯದಲ್ಲಿ ಶ್ರೀಭಗವಂತನೊಡನೆ ಈ ಪ್ರಕಾರವಾಗಿ ಹೇಳಿದರು. ಜಗದೀಶ್ವರ! ಶ್ರೀಕೃಷ್ಣ! ಯಾದವೋತ್ತಮ! ನೀನು ಎಲ್ಲರಿಗೂ ಅಂತರ್ಯಾಮಿಯಾಗಿರುವವನು. ನೀನೇ ಸತ್ತ್ವಾದಿಗುಣಗಳಿಂದ ಸೃಷ್ಟಿ ಸ್ಥಿತಿ ಸಂಹಾರಗಳನ್ನು ಮಾಡುವಿ. ನೀನು ಭೂಮಿಗೆ ಭಾರಭೂತರಾದ ಅಸುರರನ್ನು ಸಂಹರಿಸುವುದಕ್ಕಾಗಿಯೂ ಸಜ್ಜನರ ರಕ್ಷಣೆಯನ್ನು ಮಾಡುವುದಕ್ಕಾಗಿಯೂ ಅವತರಿಸಿರುವಿ. ಈ ಕುದುರೆಯ ಆಕಾರವುಳ್ಳ ದೈತ್ಯನನ್ನು ಅನಾಯಾಸದಿಂದ ಸಂಹರಿಸಿರುವಿ. ಇವನ ಗರ್ಜನೆಯಿಂದ ಭಯಪಟ್ಟು ದೇವತೆಗಳು ಸ್ವರ್ಗವನ್ನು ಬಿಟ್ಟು ಓಡಿಹೋಗುತ್ತಿದ್ದರು. ನಾಳೆದು ನೀನು ಚಾಣೂರನನ್ನು, ಇತರ ಮಲ್ಲರನ್ನು, ಆನೆಯ ಮಾವುತನನ್ನು, ಕಂಸನನ್ನು, ಸಂಹರಿಸುವುದನ್ನೂ ನಾನು ನೋಡುವೆನು. ಆಮೇಲೆ ಪಂಚಜನ ಎಂಬ ಅಸುರನನ್ನು ಕಾಲಯವನ, ಮುರ, ನರಕಾಸುರರನ್ನು ಸಂಹರಿಸುವುದನ್ನು ನೋಡುವೆನು. ಪಾರಿಜಾತ ವೃಕ್ಷದ ಅಪಹಾರವನ್ನು ಇಂದ್ರದೇವರ ಪರಾಜಯವನ್ನು ವೀರ್ಯದಿಂದ ಕನ್ಯೆಯರನ್ನು ವಿವಾಹವಾಗುವುದನ್ನು, ನೃಗರಾಜನನ್ನು ಓತಿಯ ದೇಹದಿಂದ ಬಿಡಿಸುವುದನ್ನು ಸ್ಯಮಂತಕರತ್ನವನ್ನು ಪತ್ನಿಯ ಸಹ ತೆಗೆದುಕೊಂಡು ಬರುವುದನ್ನು ಬ್ರಾಹ್ಮಣನ ಮೃತಪುತ್ರರನ್ನು ತನ್ನ ಲೋಕದಿಂದ ತಂದುಕೊಡುವುದನ್ನು, ಪೌಂಡ್ರಕವಾಸುದೇವನನ್ನು, ಸಂಹರಿಸುವುದನ್ನು, ಕಾಶೀಪಟ್ಟಣವನ್ನು ಸುಡುವುದನ್ನು ದಂತವಕ್ತ್ರನ ಸಂಹಾರವನ್ನು ರಾಜಸೂಯಯಾಗದಲ್ಲಿ ಶಿಶುಪಾಲನ ಸಂಹಾರವನ್ನು, ಇನ್ನು ನೀನು ದ್ವಾರಕಾಪಟ್ಟಣದಲ್ಲಿ ಇದ್ದುಕೊಂಡು ಮಾಡುವ ಎಲ್ಲಾ ಕಾರ್ಯಗಳನ್ನು ನೋಡುವೆನು. ಆಮೇಲೆ ನೀನು ಅರ್ಜುನನ ಸಾರಥಿಯಾಗಿದ್ದುಕೊಂಡು ಅಕ್ಷೌಹಿಣೀ ಸೈನ್ಯಗಳನ್ನು ಸಂಹಾರಮಾಡಿಸುವುದನ್ನು ನೋಡುವೆನು. ಕ್ರೀಡೆಗಾಗಿ ಮನುಷ್ಯರಂತೆ ಇರುವ ದೇಹವನ್ನು ಧರಿಸಿರುವ ನಿನಗೆ ನಮಸ್ಕರಿಸುವೆನು''

1. ಭಾ. X-34 ಮತ್ತು ಮ.ತಾ.ನಿ. ಅ-13

ಈರೀತಿಯಾಗಿ ನಾರದರು ಶ್ರೀಕೃಷ್ಣಪರಮಾತ್ಮನನ್ನು ಸ್ತುತಿಸಿ ನಮಸ್ಕರಿಸಿ ಭಗವಂತನ ದರ್ಶನದಿಂದ ಸಂತೋಷವುಳ್ಳವರಾಗಿ ಅನುಜ್ಞೆಯನ್ನು ಪಡೆದು ಹೊರಟು ಹೋದರು. ಭಗವಂತನೂ ಕೇಶಿಯನ್ನು ಸಂಹರಿಸಿ ಸಂತುಷ್ಟರಾದ ಗೋಪಾಲರಿಂದ ಕೂಡಿಕೊಂಡು ಪಶುಗಳನ್ನು ರಕ್ಷಣೆ ಮಾಡಿದನು.



## ವ್ಯೋಮಾಸುರನ ಸಂಹಾರವು [1]

ಒಂದು ದಿವಸದಲ್ಲಿ ಗೋಪಾಲರು ಪರ್ವತಪ್ರದೇಶದಲ್ಲಿ ಗೋವುಗಳನ್ನು ಮೇಯಿಸುತ್ತಾ ಕಳ್ಳರ ಆಟವನ್ನು ಆಡುತ್ತಿದ್ದರು. ಅವರಲ್ಲಿ ಕೆಲವರು ಕಳ್ಳರಾಗಿದ್ದರು. ಕೆಲವರು ಕಳ್ಳರನ್ನು ಹಿಡಿಯುವವರಾಗಿದ್ದರು. ಕೆಲವರು ಮೇಕೆಗಳಾಗಿದ್ದರು. ಈರೀತಿಯಾಗಿ ಭಯವಿಲ್ಲದೆ ಆಟವಾಡುತ್ತಿದ್ದರು. ಆ ಸಮಯದಲ್ಲಿ ಮಹಾಮಾಯೆಯುಳ್ಳವನಾದ ಮಯಾಸುರನ ಮಗನಾದ ವ್ಯೋಮನೆಂಬ ರಾಕ್ಷಸನು ಗೋಪಾಲರೂಪದಿಂದ ಬಂದವನಾಗಿ ಇವರೊಡನೆ ಆಟದಲ್ಲಿ ಸೇರಿಕೊಂಡನು. ಅವನು ಕಳ್ಳನ ವೇಷವನ್ನು ಧರಿಸಿದವನಾಗಿ ಮೇಕೆಗಳ ವೇಷವನ್ನು ಧರಿಸಿದ ಗೋಪಾಲರನ್ನು ಅಪಹರಿಸಿಕೊಂಡು ಹೋಗಿ ಒಂದು ಪರ್ವತದ ಗುಹೆಯೊಳಗೆ ಇಟ್ಟು ಅದರ ದ್ವಾರವನ್ನು ಕಲ್ಲಿನಿಂದ ಮುಚ್ಚಿ ಇಡುತ್ತಿದ್ದನು. ಹೀಗೆ ಎಲ್ಲರನ್ನು ಕರೆದುಕೊಂಡು ಹೋಗಲು ನಾಲ್ಕೈದು ಜನ ಗೋಪಾಲರು ಮಾತ್ರ ಉಳಿದರು. ಶ್ರೀಭಗವಂತನು ಅವನ ಕರ್ಮವನ್ನು ತಿಳಿದು ಗೋಪಾಲರನ್ನು ಅಪಹರಿಸಿಕೊಂಡು ಹೋಗುತ್ತಿದ್ದ ಅವನನ್ನು ಸಿಂಹವು ತೋಳವನ್ನು ಹಿಡಿಯುವಂತೆ ಹಿಡಿದನು. ಆಗ ಅವನು ಬೆಟ್ಟದಂತೆ ಇರುವ ತನ್ನ ನಿಜರೂಪವನ್ನು ಧರಿಸಿ ತನ್ನನ್ನು ಬಿಡಿಸಿಕೊಳ್ಳಲು ಪ್ರಯತ್ನ ಮಾಡುವವನಾಗಿ ಬಿಡಿಸಿಕೊಳ್ಳಲು ಸಮರ್ಥನಾಗಲಿಲ್ಲ. ಶ್ರೀಭಗವಂತನು ಅವನನ್ನು ಎರಡು ಕೈಗಳಿಂದ ಹಿಡಿದು ಭೂಮಿಯಲ್ಲಿ ಬೀಳಿಸಿ ದೇವತೆಗೆಲ್ಲರೂ ನೋಡುತ್ತಿರುವಂತೆ ಪಶುವನ್ನು ಕೊಲ್ಲುವಂತೆ ಕೊಲ್ಲುವವನಾದನು. ತರುವಾಯ ಗುಹೆಯನ್ನು ಮುಚ್ಚಿದ್ದ ಕಲ್ಲನ್ನು ತೆಗೆದು ಗೋಪಾಲರನ್ನು ಹೊರಗೆ ಕರೆದುಕೊಂಡು ಬಂದು ದೇವತೆಗಳಿಂದಲೂ ಗೋಪಾಲರಿಂದಲೂ ಸ್ತೋತ್ರಮಾಡಲ್ಪಡುವವನಾಗಿ ಗೋಕುಲಕ್ಕೆ ಪ್ರವೇಶಿಸಿದನು.



1. ಭಾ. X-35 ಮತ್ತು ಮ.ತಾ.ನಿ. ಅ–13

# ಗೋಕುಲಕ್ಕೆ ಅಕ್ರೂರನ ಆಗಮನ [1]

ಕಂಸನು ಆಜ್ಞಾ ಮಾಡಿದ ರಾತ್ರಿಯನ್ನು ಅಕ್ರೂರನು ಮಧುರಾಪಟ್ಟಣದಲ್ಲಿಯೇ ಕಳೆದು ಮರುದಿನ ರಥದಲ್ಲಿ ಕೂತುಕೊಂಡು ನಂದಗೋಕುಲಕ್ಕೆ ಹೋದನು. ಹೋಗುವಾಗ ದಾರಿಯಲ್ಲಿ ಶ್ರೀಭಗವಂತನಲ್ಲಿ ಅತ್ಯಂತ ಭಕ್ತಿಯುಳ್ಳವನಾಗಿ ಈರೀತಿಯಾಗಿ ಯೋಚಿಸಿದನು. 'ನಾನು ಪೂರ್ವಜನ್ಮದಲ್ಲಿ ಏನು ಮಂಗಳ ಕಾರ್ಯವನ್ನು ಮಾಡಿರಬೇಕು. ಏನು ತಪಸ್ಸನ್ನು ಮಾಡಿರಬೇಕು. ಏನು ಸತ್ಪಾತ್ರರಲ್ಲಿ ದಾನ ಮಾಡಿರಬೇಕು? ಅದರಿಂದಲೇ ಈ ದಿನದಲ್ಲಿ ನಾನು ಭಗವಂತನನ್ನು ನೋಡುವೆನು. ವಿಷಯದಲ್ಲಿ ಮುಳುಗಿರುವ ನನಗೆ ಶ್ರೀಭಗವಂತನ ದರ್ಶನವು ದುರ್ಲಭವೆಂದು ತಿಳಿಯುವೆನು. ಅಥವಾ ನನ್ನನ್ನು ನಾನೇ ಅವಮಾನ ಮಾಡಿ ಕೊಳ್ಳುವುದಿಲ್ಲ. ನನಗೆ ಭಗವಂತನ ದರ್ಶನವಾಗಿಯೇ ಆಗುವುದು. ಸಜ್ಜೀವನು ಕಾಲಕ್ರಮದಿಂದ ಒಂದು ದಿನ ಉದ್ಧಾರವನ್ನು ಹೊಂದಿಯೇ ಹೊಂದುವನು. ನಾನು ಈ ದಿನದಲ್ಲಿ ಭಗವಂತನ ಪಾದಕಮಲವನ್ನು ನಮಸ್ಕರಿಸುವೆನಾದ ಕಾರಣ ಈ ದಿನದಲ್ಲಿ ನನ್ನ ಅಮಂಗಲವು ನಷ್ಟವಾಯಿತು. ನನ್ನ ಜನ್ಮವು ಸಾರ್ಥಕವಾಯಿತು. ಕಂಸನು ನನಗೆ ಬಹಳ ಅನುಗ್ರಹವನ್ನು ಮಾಡಿದನು. ಅವನಿಂದ ಕಳುಹಿಸಲ್ಪಟ್ಟವನಾಗಿಯೇ ಈದಿನ ಶ್ರೀಭಗವಂತನ ಪಾದವನ್ನು ನೋಡುವೆನು. ಯಾವ ಪಾದವು ಬ್ರಹ್ಮರುದ್ರಾದಿದೇವತೆಗಳಿಂದಲೂ, ಶ್ರೀದೇವಿಯರಿಂದಲೂ, ಮುನಿಗಳಿಂದಲೂ, ಪೂಜಿಸಲ್ಪಟ್ಟಿರುವುದೋ, ಗೋವುಗಳನ್ನು ಮೇಯಿಸುವುದಕ್ಕಾಗಿ ವನದಲ್ಲಿ ಸಂಚರಿಸಿರುವುದೋ, ಗೋಪಿಕಾಸ್ತ್ರೀಯರ ಸ್ತನದ ಕುಂಕುಮದಿಂದ ಯುಕ್ತವಾಗಿರುವುದೋ, ಅಂತಹ ಪಾದವನ್ನು ಇಂದು ನಾನು ನೋಡುವೆನು.

ಸುಂದರವಾದ ಕಪೋಲವುಳ್ಳ ಮುಕುಂದನ ಮುಖವನ್ನು ನಿಶ್ಚಯವಾಗಿಯೇ ಈ ದಿನದಲ್ಲಿ ನೋಡುವೆ. ಮೃಗಗಳು ನನಗೆ ಪ್ರದಕ್ಷಿಣೆಯಾಗಿ ಹೋಗುತ್ತವೆ. ಈದಿನ ನನಗೆ ಭೂಭಾರವನ್ನು ಪರಿಹರಿಸುವುದಕ್ಕಾಗಿ ತನ್ನ ಇಚ್ಛೆಯಿಂದ ಮನುಷ್ಯರಂತೆ ಅವತರಿಸಿರುವ ಸುಂದರನಾದ ಶ್ರೀಭಗವಂತನನ್ನು ನೋಡಿದರೇನೇ ನನ್ನ ಕಣ್ಣಿಗೆ ಫಲವುಂಟಾಗುವುದು. ಸರ್ವೋತ್ತಮನಾದ ತನ್ನ ಧರ್ಮಮರ್ಯಾದೆ ಯನ್ನು ರಕ್ಷಿಸುವ ದೇವತೆಗಳಿಗೆ ಸುಖವನ್ನು ಉಂಟುಮಾಡುವ ಆ ಭಗವಂತನು ಯದುವಂಶ ದಲ್ಲಿ ಅವತರಿಸಿರುವನು. ತನ್ನ ಕೀರ್ತಿಯನ್ನು ವಿಸ್ತರಿಸುತ್ತಾ ಗೋಕುಲದಲ್ಲಿ ಇರುವನು.

---

1. ಭಾ. X-36 ಮತ್ತು ಮ.ತಾ.ನಿ. ಅ–13

ಮಂಗಳಕರವಾದ ಅವನ ಕೀರ್ತಿಯನ್ನು ದೇವತೆಗಳೂ ಗಾಯನ ಮಾಡುತ್ತಿರುವರು. ಅಂತಹ ಭಗವಂತನನ್ನು ನಾನಿಂದು ನೋಡುವೆನು. ನನಗೆ ಈದಿನದ ಪ್ರಾತಃಕಾಲವು ಶುಭಪ್ರದವಾಯಿತು. ಶ್ರೀಭಗವಂತನು ತನ್ನ ಪಾದದ ಬುಡದಲ್ಲಿ ಬಿದ್ದ ನನ್ನ ತಲೆಯ ಮೇಲೆ ಕಾಲಭಯವುಳ್ಳವರಾಗಿ ತನ್ನನ್ನು ಮರೆಹೊಂದಿದ ಜನರಿಗೆ ಅಭಯಪ್ರದಾನ ಮಾಡುವ ತನ್ನ ಹಸ್ತಕಮಲವನ್ನು ಇಡುವನೇ? ಯಾವ ಪಾದದಲ್ಲಿ ಪೂಜೆಯನ್ನು ಮಾಡಿ ಇಂದ್ರದೇವರು ತ್ರಿಲೋಕಾಧಿಪತ್ಯವನ್ನು ಹೊಂದಿರುವರು? ಬಲಿಯೂ ಹಾಗೆಯೇ ಮಾಡಿರುವನು. ನನ್ನನ್ನು ಕಂಸನು ಕಳುಹಿಸಿದ್ದರೂ ಎಲ್ಲವನ್ನು ತಿಳಿದವ ನಾದ ಕಾರಣ ಶ್ರೀಭಗವಂತನು ನನ್ನಲ್ಲಿ ಅಪ್ರಿಯಬುದ್ಧಿಯನ್ನು ಹೊಂದಲಾರನು. ಪಾದಗಳ ಬುಡದಲ್ಲಿ ಕೈಮುಗಿದುಕೊಂಡು ಬಿದ್ದಿರುವ ನನ್ನನ್ನು ಶ್ರೀಭಗವಂತನು ಮಂದಹಾಸಯುಕ್ತವಾದ ದೃಷ್ಟಿಯಿಂದ ನೋಡುವನೇ? ಹಾಗೆ ಮಾಡಿದರೆ ಪಾಪಪರಿಹಾರವುಳ್ಳವನಾಗಿ ಸಂತೋಷವನ್ನು ಹೊಂದುವೆನು. ಶ್ರೀಭಗವಂತನು ಭಕ್ತನಾದ ನನ್ನನ್ನು ಎರಡು ಕೈಗಳಿಂದ ಆಲಿಂಗಿಸುವನೇ? ಹಾಗೆ ಮಾಡಿದರೆ ನನ್ನ ದೇಹವು ಪವಿತ್ರವಾಗುವುದು. ಬಂಧವೂ ಬಿಟ್ಟುಹೋಗುವುದು. ನಮಸ್ಕರಿಸಿ ಕೈಮುಗಿದುಕೊಂಡಿರುವ ನನ್ನನ್ನು ಆಲಿಂಗಿಸಿ ತಾತ! ಅಕ್ರೂರ! ಎಂದು ಕರೆಯುವನೇ? ಮಹಾನುಭಾವರಿಂದ ಆದರಿಸಲ್ಪಡದೆ ಇದ್ದವನ ಬಾಳಿಗೆ ಧಿಕ್ಕಾರವಿರಲಿ.

ಆ ಭಗವಂತನಿಗೆ ಯೋಗ್ಯತೆಯನ್ನು ಮೀರಿ ಯಾರೂ ಮಿತ್ರ ರೆಂದಾಗಲೀ, ಶತ್ರುಗಳೆಂದಾಗಲೀ, ಉಪೇಕ್ಷಣೀಯರೆಂದಾಗಲೀ ಇಲ್ಲವೇ ಇಲ್ಲ. ಹಾಗಿದ್ದರೂ ಕಲ್ಪವೃಕ್ಷವು ತನ್ನನ್ನು ಆಶ್ರಯಿಸಿದವರಿಗೆ ಪುರುಷಾರ್ಥವನ್ನು ಕೊಡುವಂತೆ ತನ್ನನ್ನು ಭಜಿಸಿದವರಿಗೆ ಸರಿಯಾದ ಫಲವನ್ನು ಕೊಡುವನು. ಮತ್ತು ಕೃಷ್ಣನ ಅಣ್ಣನು ದನವನ್ನು ಕರೆಯುವಾಗ ಅದರ ಕಾಲನ್ನು ಕಟ್ಟಲಿಕ್ಕೆ ಬೇಕಾದ ಹಗ್ಗವನ್ನು ಹೆಗಲಲ್ಲಿ ಇಟ್ಟುಕೊಂಡೇ ಆಲಿಂಗಿಸಿ ಮನೆಯೊಳಗೆ ಪ್ರವೇಶಿಸಿ ಸತ್ಕರಿಸಿ ಕಂಸನ ವಿಷಯವನ್ನು ಕೇಳುವನೇ? ಇತ್ಯಾದಿ ರೀತಿಯಿಂದ ದಾರಿಯಲ್ಲಿ (ಅಕ್ರೂರನು) ಯೋಚಿಸುತ್ತಾ ರಥದಲ್ಲಿ ಕೂತುಕೊಂಡು ಗೋಕುಲಕ್ಕೆ ಬಂದು ಸೇರಿದನು. ಸೂರ್ಯನೂ ಮುಳುಗಲಿಕ್ಕೆ ಹೋದನು. ಅಲ್ಲಿ ಪದ್ಮ ಯವ ಅಂಕುಶ ಇತ್ಯಾದಿ ರೇಖೆಗಳಿಂದ ಕೂಡಿದ ಶ್ರೀಭಗವಂತನ ಹೆಜ್ಜೆಗಳನ್ನು ನೋಡಿದನು. ಅವುಗಳನ್ನು ನೋಡಿ ಅಕ್ರೂರನಿಗೆ ಸಂತೋಷವು ಉಕ್ಕಿಬಂದಿತು. ಮೈಯೆಲ್ಲಾ ರೋಮಾಂಚನವಾಯಿತು. ಕಣ್ಣುಗಳಲ್ಲಿ ಆನಂದಬಾಷ್ಪಗಳುಂಟಾದವು. ರಥದಿಂದ ಕೆಳಗೆ ಹಾರಿ 'ಇವು ನನ್ನ ಪ್ರಭುವಿನ ಪಾದಧೂಳಿಗಳು' ಎಂದು ಹೇಳುತ್ತಾ ಹೊರಳಾಡಿದನು.

ತರುವಾಯ ಗೋಕುಲಕ್ಕೆ ಹೋಗಿ ದನಕರೆಯುತ್ತಿದ್ದ ಕೃಷ್ಣಬಲರಾಮರನ್ನು ನೋಡಿದನು. ಅಕ್ರೂರನು ಅವರನ್ನು ನೋಡಿ ರಥದಿಂದ ಕೆಳಗೆ ಹಾರಿ ಸ್ನೇಹಪರವಶನಾಗಿ ಕೃಷ್ಣಬಲರಾಮರ ಪಾದಗಳ ಬುಡದಲ್ಲಿ ಬಿದ್ದನು. ಭಗವಂತನ ದರ್ಶನದಿಂದ ಆನಂದಬಾಷ್ಪವುಳ್ಳವನಾಗಿ ರೋಮಾಂಚಿತ ಗಾತ್ರನಾಗಿ ಮಾತಾಡಲಿಕ್ಕೇ ಅಸಮರ್ಥನಾದನು. ಭಗವಂತನು ಅದನ್ನು ತಿಳಿದು ಅವನನ್ನು ಸೆಳೆದು ಆಲಂಗಿಸಿದನು. ಬಲರಾಮದೇವರೂ ನಮಸ್ಕರಿಸಿದ ಅಕ್ರೂರನನ್ನು ಆಲಿಂಗಿಸಿ ಅವನ ಕೈಯಲ್ಲಿ ಹಿಡಿದುಕೊಂಡು ಕೃಷ್ಣಪರಮಾತ್ಮನಿಂದ ಸಹಿತನಾಗಿ ಮನೆಯನ್ನು ಪ್ರವೇಶಿಸಿದರು. ಚೆನ್ನಾಗಿ ಉಪಚರಿಸಿ ಭೋಜನಮಾಡಿಸಿ ತಾಂಬೂಲಾದಿಗಳಿಂದ ಸತ್ಕರಿಸಿದರು.



## ಅಕ್ರೂರನು ಭಗವಂತನನ್ನು ಮಧುರಾಪಟ್ಟಣಕ್ಕೆ ಕರೆದುಕೊಂಡು ಹೋದದ್ದು [1]

ಅಕ್ರೂರನು ಕೃಷ್ಣಬಲರಾಮರ ಅನುಮತಿಯನ್ನು ಹೊಂದಿದವನಾಗಿ ಸುಖವಾಗಿ ಮಂಚದಲ್ಲಿ ಕೂತುಕೊಂಡು ತಾನು ದಾರಿಯಲ್ಲಿ ಬರುವಾಗ ಆಸೆಪಟ್ಟಿದ್ದ ಎಲ್ಲಾ ಇಷ್ಟಗಳನ್ನು ಹೊಂದಿದನು. ಶ್ರೀಕೃಷ್ಣಪರಮಾತ್ಮನು ರಾತ್ರಿಯ ಭೋಜನವನ್ನು ಮುಗಿಸಿದವನಾಗಿ ಮಿತ್ರರ ವಿಷಯದಲ್ಲಿ ಕಂಸನ ನಡವಳಿಕೆಗಳನ್ನು ಕೇಳಿದನು. ಆಗ ಅಕ್ರೂರನು ಭಗವಂತನೊಡನೆ ಕಂಸನು ಯಾದವರಲ್ಲಿ ವೈರವನ್ನು ಮಾಡುವುದನ್ನೂ, ಅವನು ವಸುದೇವನನ್ನು ಸಂಹರಿಸಲಿಕ್ಕೆ ಉದ್ಯೋಗವನ್ನು ಮಾಡಿದ್ದನ್ನೂ, ತಾನು ಯಾರ ದೂತನಾಗಿ ಯಾರಿಂದ ಕಳುಹಿಸಲ್ಪಟ್ಟವನಾಗಿ ಬಂದೆನೆಂಬುದನ್ನೂ, ನಾರದರು ಕೃಷ್ಣನು ವಸುದೇವನ ಮಗನೆಂದು ಹೇಳಿದ ವಿಷಯವನ್ನೂ ಹೇಳಿದನು. ಅದನ್ನು ಕೇಳಿ ಕೃಷ್ಣಪರಮಾತ್ಮನೂ ಬಲರಾಮದೇವರೂ ನಗುವವರಾಗಿ ತಂದೆಯಾದ ನಂದಗೋಪನೊಡನೆ ಕಂಸನ ಆಜ್ಞೆಯನ್ನು ತಿಳಿಸಿದರು. ನಂದಗೋಪನು ಎಲ್ಲಾ ಗೋಪಾಲರೊಡನೆ 'ಎಲ್ಲರೂ ಹಾಲುಮೊಸರು ಮೊದಲಾದ ಗೋರಸಗಳನ್ನು ಸಂಗ್ರಹಿಸಿ ಕಾಣಿಕೆ ಹಿಡಿದುಕೊಂಡು ಬಂಡಿಕಟ್ಟಿಕೊಂಡು ನಾಳೆ ಮಧುರಾಪಟ್ಟಣಕ್ಕೆ ಹೋಗೋಣ. ರಾಜನಿಗೆ ತುಪ್ಪ ಬಂಗಾರ ಇತ್ಯಾದಿಗಳನ್ನು ಕೊಡೋಣ. ಜನರೆಲ್ಲರೂ

1. ಭಾ. X-37 ಮತ್ತು ಮ.ತಾ.ನಿ. ಅ-13

ಹೋಗುತ್ತಿರುವಂತೆ ಮಹತ್ತಾದ ಧನುರ್ಯಾಗೋತ್ಸವವನ್ನು ನೋಡೋಣ' ಎಂದು ತಿಳಿಸಿದನು. ಈರೀತಿಯಾಗಿ ನಂದಗೋಪನು ತನ್ನ ಸಾರಥಿಯಿಂದ ಡಂಗುರ ಸಾರಿಸಿದನು.

ಗೋಪಿಯರು ಆ ವರ್ತಮಾನವನ್ನು ಕೇಳಿ ತುಂಬಾ ದುಃಖವುಳ್ಳವರಾದರು. ಕೃಷ್ಣಬಲರಾಮರನ್ನು ಕರೆದುಕೊಂಡು ಹೋಗಲಿಕ್ಕೆ ಅಕ್ರೂರನು ಬಂದಿರುವನೆಂಬ ವರ್ತಮಾನವನ್ನು ಕೇಳಿ ಕೆಲವು ಗೋಪಿಯರು ದೀರ್ಘಶ್ವಾಸವುಳ್ಳವರಾಗಿ ಬಾಡಿಹೋದ ಮುಖವುಳ್ಳವರಾದರು. ಕೆಲವರು ತಲೆಕೂದಲು ಉಟ್ಟವಸ್ತ್ರವೂ ಸರಿದು ಹೋದದ್ದನ್ನು ತಿಳಿಯಲಿಲ್ಲ. ಕೆಲವರು ಕೃಷ್ಣನನ್ನೇ ಧ್ಯಾನಮಾಡುತ್ತಾ ಸಮಸ್ತವ್ಯಾಪಾರವನ್ನೂ ಬಿಟ್ಟವರಾದರು. ಇನ್ನೂ ಕೆಲವರು ಭಗವಂತನ ಮನೋಹರಗಳಾದ ಮಾತುಗಳನ್ನು ಸ್ಮರಿಸುತ್ತಾ ಮೂರ್ಛೆಯನ್ನು ಹೊಂದಿದರು. ಎಲ್ಲರೂ ಭಗವಂತನ ಚರಿತ್ರೆಯನ್ನು ಚಿಂತಿಸುತ್ತಾ ಅವನು ಬಿಟ್ಟುಹೋಗುವನೆಂಬ ಭಯವುಳ್ಳವರಾಗಿ ಗುಂಪುಗುಂಪಾಗಿ ಸೇರಿ ಕಣ್ಣೀರು ಸುರಿಸುತ್ತಾ ಭಗವಂತನಲ್ಲಿಯೇ ಮನಸ್ಸುಳ್ಳವರಾಗಿ ಮಾತಾಡಿಕೊಂಡರು. ''ಬ್ರಹ್ಮದೇವರೇ! ನಿಮಗೆ ಸ್ವಲ್ಪವೂ ದಯೆಯಿಲ್ಲವಲ್ಲಾ! ಜನರನ್ನು ಪ್ರೇಮದಿಂದ ಸೇರಿಸಿ ಅವರು ಕೃತಾರ್ಥರಾಗುವ ಮೊದಲೇ ಅವರನ್ನು ದೂರಮಾಡುವಿರಲ್ಲ! ನಿಮ್ಮ ವ್ಯಾಪಾರವು ಹುಡುಗರ ವ್ಯಾಪಾರದಂತೆ ಇರುವುದಲ್ಲಾ! ನೀವು ಅತಿಸುಂದರವಾದ ಭಗವಂತನ ಮುಖವನ್ನು ತೋರಿಸಿ ಮರೆಮಾಡುವಿರಲ್ಲಾ! ನಿಮ್ಮ ವ್ಯಾಪಾರವು ಚೆನ್ನಾಗಿಲ್ಲವಲ್ಲಾ! ಶಾಂತರೆಂಬ ಹೆಸರಿನಿಂದ ಪ್ರಸಿದ್ಧರಾಗಿರುವ ನೀವು ಕ್ರೂರರಾಗಿರುವಿರೆಂದು ತಿಳಿಯುತ್ತದೆ. ಯಾವ ಕಣ್ಣಿನಿಂದ ಶ್ರೀಕೃಷ್ಣನಲ್ಲಿ ಸರ್ವಸೌಂದರ್ಯವನ್ನು ನೋಡುತ್ತಿದ್ದೆವೋ ಆ ಕಣ್ಣನ್ನೇ ಅಪಹಾರ ಮಾಡಿದಂತೆ ಮಾಡಿರುವಿರಲ್ಲಾ! ಕೃತಘ್ನರಂತೆ ಮಾಡುವಿರಲ್ಲಾ! ನಂದಕುಮಾರನು ಕ್ಷಣಿಕವಾದ ಸ್ನೇಹವುಳ್ಳವನು. ತನಗಾಗಿ ಮನೆಗಳನ್ನು ಸ್ವಕೀಯರನ್ನು ಪತಿಪುತ್ರರನ್ನು ಬಿಟ್ಟು ತನ್ನ ದಾಸ್ಯವನ್ನು ಕೈಕೊಂಡ ನಮ್ಮನ್ನು ಯೋಚಿಸುವುದೇ ಇಲ್ಲ.

ಮಧುರಾಪಟ್ಟಣದ ಸ್ತ್ರೀಯರಿಗೆ ರಾತ್ರಿಯು ಶುಭಪ್ರದವಾಗುವುದು. ಅವರು ಅಲ್ಲಿಗೆ ಪ್ರವೇಶಿಸಿದ ಶ್ರೀಕೃಷ್ಣನ ಮುಖವನ್ನು ನೋಡುವರು. ಆ ಹೆಂಗಸರ ಮಧುರಮಾತುಗಳಿಂದ ವಶವಾದ ಮನಸ್ಸುಳ್ಳವನಾಗಿ ಕೃಷ್ಣನು ಪುನಃ ಇಲ್ಲಿಗೆ ಎಲ್ಲಿ ಬರುವನು? ಅಲ್ಲಿ ಇರುವ ಯಾದವರಿಗೂ ದಾರಿಯಲ್ಲಿ ಕೃಷ್ಣನನ್ನು ನೋಡುವವರಿಗೂ ಕಣ್ಣುಗಳಿಗೆ ಬಹುಸಂತೋಷವಾಗುವುದು. ಈ ಪ್ರಕಾರವಾಗಿರುವ ಈ

ಪುರುಷನಿಗೆ ಅಕ್ರೂರ ಎಂಬ ಹೆಸರು ಇರಬಾರದಿತ್ತು. ಇವನು ಅತಿಕ್ರೂರನು. ಯಾವ ಇವನು ಅತಿದುಃಖದಿಂದ ಇರುವ ನಮ್ಮನ್ನು ಸಮಾಧಾನ ಪಡಿಸದೆ ನಮ್ಮ ಅತ್ಯಂತ ಪ್ರಿಯನಾದವನನ್ನು ಅತಿದೂರ ಕರೆದುಕೊಂಡು ಹೋಗು ತ್ತಿರುವನು? ಮನಸ್ಸಿನಲ್ಲಿ ಸ್ನೇಹಯಿಲ್ಲದಿರುವ ಕೃಷ್ಣನು ರಥದಲ್ಲಿ ಕೂತಿರುವನು. ಈ ದುರಹಂಕಾರಿಗಳಾದ ಗೋಪರೂ ಅವಸರಪಡಿಸುತ್ತಿರುವರು. ದೊಡ್ಡವರು ನಮ್ಮನ್ನು ಉಪೇಕ್ಷಿಸಿರುವರು. ದೈವವೂ ನಮಗೆ ವಿರುದ್ಧವಾಗಿರುವುದು. ನಾವು ಹೋಗಿ ಕೃಷ್ಣನನ್ನು ತಡೆಯುವ ಅರ್ಧನಿಮಿಷವೂ ಬಿಡಲಿಕ್ಕೆ ಆಗದಿರುವ ಮುಕುಂದನ ಸಂಗದಿಂದ ರಹಿತರಾದ ದೀನರಾದ ನಮಗೆ ಕುಲವೃದ್ಧರೂ, ಬಂಧುಗಳೂ, ಏನು ಮಾಡುವರು? ಸಾಯಂಕಾಲದಲ್ಲಿ ಗೋಪಾಲರಿಂದ ಕೂಡಿಕೊಂಡು ದನಗಳ ಪಾದಗಳ ಧೂಳಿಯಿಂದ ಕೂಡಿದ ಮಾಲೆಯುಳ್ಳವನಾಗಿ ಕೊಳಲನ್ನು ಊದುತ್ತಾ ಕಟಾಕ್ಷದಿಂದ ನೋಡುತ್ತಾ ನಮ್ಮ ಮನಸ್ಸನ್ನು ಅಪಹರಿಸುತ್ತಿದ್ದ ಆ ಕೃಷ್ಣನನ್ನು ಬಿಟ್ಟು ನಾವು ಹೇಗೆ (ಇರಲಿ) ಇರೋಣ?'' ಈ ಪ್ರಕಾರವಾಗಿ ಹೇಳುತ್ತಾ ಕೃಷ್ಣನ ವಿಯೋಗದಿಂದ ದುಃಖವುಳ್ಳವರಾಗಿ ಕೃಷ್ಣನಲ್ಲಿಯೇ ಆಸಕ್ತನಾದ ಮನಸ್ಸುಳ್ಳವರಾಗಿ ಲಜ್ಜೆಯನ್ನು ಬಿಟ್ಟು ಗೋವಿಂದ! ದಾಮೋದರ! ಮಾಧವ ಎಂದು ಸುಸ್ವರವಾಗಿ ಅಳುವವರಾದರು.

ಈರೀತಿಯಾಗಿ ಗೋಪಿಯರು ಅಳುತ್ತಿರುವಂತೆ ಸೂರ್ಯೋದಯವಾಗಲು ಅಕ್ರೂರನು ಪ್ರಾತಃಕಾಲದ ಆಹ್ನಿಕವನ್ನು ತೀರಿಸಿಕೊಂಡು ರಥವನ್ನು ಓಡಿಸಿದನು. ನಂದಗೋಪನೇ ಮೊದಲಾದವರು ಬಂಡಿಗಳಲ್ಲಿ ಕೂತುಕೊಂಡು ಹಿಂದೆಯೇ ಹೋಗುತ್ತಿದ್ದರು. ಗೋಪಿಯರು ಕೃಷ್ಣನ ಹಿಂದೆಯೇ ಹೋಗಿ ಅವನ ಪ್ರತಿವಚನ ವನ್ನು ಅಪೇಕ್ಷಿಸುವವರಾಗಿ ನಿಂತಿದ್ದರು. ಭಗವಂತನು ತನ್ನ ಪ್ರಯಾಣದ ಸಮಯದಲ್ಲಿ ದುಃಖಪಡುತ್ತಿದ್ದ ಅವರನ್ನು ನೋಡಿ 'ಇಲ್ಲಿಗೆ ಪುನಃ ಬಂದು ಸೇರುತ್ತೇನೆ' ಎಂದು ದೂತರಿಂದ ಹೇಳಿ ಕಳುಹಿಸಿ ಸಮಾಧಾನಪಡಿಸಿದನು. ಗೋಪಿಯರು ಮೊದಲು ರಥಧ್ವಜವು ಕಾಣಿಸುವರೆಗೂ ಆಮೇಲೆ ಧೂಳಿಯು ಕಾಣಿಸುವವರೆಗೂ ಅಲ್ಲಿಯೇ ಮನಸ್ಸನ್ನು ಕಳುಹಿಸಿ ಚಿತ್ರದಲ್ಲಿ ಬರೆದ ಬೊಂಬೆಗಳಂತೆ ನಿಂತುಕೊಂಡರು. ತರುವಾಯ ಶ್ರೀಭಗವಂತನು ಹಿಂದೆ ತಿರುಗಿ ಬರುವ ವಿಷಯದಲ್ಲಿ ಆಸೆಯನ್ನು ಬಿಡುವವರಾಗಿ ಹಿಂದೆ ತಿರುಗಿ ಬರುವವರಾಗಿ ಭಗವಂತನ ಮಹಿಮೆಗಳನ್ನು ವರ್ಣಿಸುತ್ತಾ ಶೋಕರಹಿತರಾಗಿ ದಿವಸಗಳನ್ನು ಕಳೆಯುವವರಾದರು.

ಇತ್ತ ಕೃಷ್ಣಬಲರಾಮರೂ, ಅಕ್ರೂರನೂ ವಾಯುವೇಗವುಳ್ಳ ರಥದಿಂದ ಪಾಪಪರಿಹಾರಕವಾದ ಕಾಲಿಂದಿನದಿಯನ್ನು ಹೊಂದಿದರು. ಕೃಷ್ಣಪರಮಾತ್ಮನು

ಬಲರಾಮದೇವರಿಂದ ಸಹಿತನಾಗಿ ಆಚಮನವನ್ನು ಮಾಡಿ ನೀರನ್ನು ಕುಡಿದು ರಥದಲ್ಲಿ ಬಂದು ಕೂತುಕೊಂಡನು. ಅಕ್ರೂರನು ಅವರಿಬ್ಬರೊಡನೆ ಕೇಳಿಕೊಂಡು ಅವರನ್ನು ರಥದಲ್ಲಿ ಕೂತುಕೊಳ್ಳಿಸಿ ಕಾಲಿಂದಿಗೆ ಬಂದು ವಿಧಿಪ್ರಕಾರವಾಗಿ ಸ್ನಾನವನ್ನು ಮಾಡಿದನು. ಅಘಮರ್ಷಣ ಮಂತ್ರವನ್ನು ಜಪಿಸುತ್ತಾ ಮುಳುಗಿದಾಗ ನೀರಿನೊಳಗೆ ಕೃಷ್ಣಬಲರಾಮರನ್ನು ನೋಡಿದನು. 'ರಥದಲ್ಲಿ ಇದ್ದ ಕೃಷ್ಣಬಲರಾಮರು ಇಲ್ಲಿಗೆ ಹೇಗೆ ಬಂದರು? ಹಾಗಾದರೆ ಈಗ ರಥದಲ್ಲಿ ಇಲ್ಲವೇ?' ಎಂದು ಹೇಳಿಕೊಂಡು ನೀರಿನ ಮೇಲಕ್ಕೆ ಬಂದು ನೋಡಿದನು. ಅಲ್ಲಿ ರಥದಲ್ಲಿ ಕೂತಿದ್ದ ಅವರನ್ನು ನೋಡಿದನು. ಆಮೇಲೆ ಪುನಃ ಮುಳುಗಿದನು. ಅವನು ನಿತ್ಯವೂ ಸ್ನಾನಮಾಡುವಾಗ ಶೇಷದೇವರನ್ನು ಮಾತ್ರ ನೋಡುತ್ತಿದ್ದನು. ಆಗ ಅವನು ಶೇಷದೇವರನ್ನು ಅವರ ಮೇಲೆ ಇದ್ದ ಬ್ರಹ್ಮರುದ್ರಾದಿದೇವತೆಗಳಿಂದಲೂ ಸನಕಾದಿಯೋಗಿಗಳಿಂದಲೂ ಸ್ತುತಿಸಲ್ಪಡುತ್ತಿದ್ದ ಶ್ರೀಭಗವಂತನನ್ನು ನೋಡಿದನು. ನೋಡಿ ಭಕ್ತಿಯಿಂದ ಅವನನ್ನು ಸ್ತೋತ್ರ ಮಾಡಿದನು. ಸ್ತೋತ್ರ ಮಾಡುತ್ತಿರುವಂತೆ ಪರಮಾತ್ಮನು ಮರೆಯಾದನು.

ತರುವಾಯ ಅಕ್ರೂರನು ಮೇಲಕ್ಕೆ ಬಂದು ಕರ್ತವ್ಯವನ್ನು ಮುಗಿಸಿಕೊಂಡು ಆಶ್ಚರ್ಯವುಳ್ಳವನಾಗಿ ರಥವನ್ನು ಏರಿದನು. ಆಗ ಭಗವಂತನು ಅವನೊಡನೆ ಏನಾದರೂ ಆಶ್ಚರ್ಯವನ್ನು ನೋಡಿದೆಯಾ ಎಂದು ಕೇಳಿದನು. ಅದಕ್ಕೆ ಅಕ್ರೂರನು ನಿನ್ನನ್ನು ನೋಡಿದರೆ ಎಲ್ಲಾ ಆಶ್ಚರ್ಯವನ್ನು ನೋಡಿದಂತೆ ಆಯಿತು ಎಂದು ಹೇಳಿ ರಥವನ್ನು ಓಡಿಸಿದನು. ದಾರಿಯಲ್ಲಿ ಜನರು ಬಂದು ಕೃಷ್ಣಬಲರಾಮರನ್ನು ನೋಡಿ ಅವರ ಮೇಲಿನ ದೃಷ್ಟಿಯನ್ನು ತೆಗೆಯಲೇ ಇಲ್ಲ. ಅಷ್ಟರಲ್ಲಿ ನಂದಗೋಪನೇ ಮೊದಲಾದ ಗೋಪಾಲರು ಊರಿನ ಹತ್ತಿರದ ಉಪವನದಲ್ಲಿ ಇಳಿದುಕೊಂಡು ಎದುರು ನೋಡುತ್ತಿದ್ದರು. ಅವರ ಸಮೀಪಕ್ಕೆ ಬಂದು ಶ್ರೀಭಗವಂತನು ಅಕ್ರೂರ ನೊಡನೆ ಅವನ ಕೈಯನ್ನು ಹಿಡಿದುಕೊಂಡು 'ನೀನು ಮುಂದೆ ರಥಸಹಿತವಾಗಿ ಪಟ್ಟಣಕ್ಕೆ ಹೋಗು. ನಾವು ಇಲ್ಲಿಯೇ ಇದ್ದುಕೊಂಡು ಆಮೇಲೆ ಪಟ್ಟಣವನ್ನು ನೋಡುವೆವು' ಎಂದು ಹೇಳಿದನು. ಅದಕ್ಕೆ ಅಕ್ರೂರನು ನಿಮ್ಮಿಬ್ಬರನ್ನು ಹೊರತು ನಾನು ಮಧುರಾಪಟ್ಟಣವನ್ನು ಪ್ರವೇಶಿಸಲಾರೆನು. ಭಕ್ತನಾದ ನನ್ನ ಕೈಬಿಡಬಾರದು. ನಮ್ಮ ಮನೆಗೆ ಎಲ್ಲರಿಂದ ಸಹಿತನಾಗಿ ಬರಬೇಕು' ಎಂದು ಹೇಳಿಕೊಂಡನು. ಆಗ ಭಗವಂತನು 'ಯದುವರ್ಗದ್ರೋಹಿಯಾದ ಕಂಸನನ್ನು ಸಂಹರಿಸಿ ಅಣ್ಣನನ್ನು ಕರೆದುಕೊಂಡು ನಿನ್ನ ಮನೆಗೆ ಬರುವೆನು' ಎಂದು ಹೇಳಿದನು. ಈರೀತಿಯಾಗಿ ಭಗವಂತನು ಹೇಳಲು ಮನಸ್ಸಿನಲ್ಲಿಯೇ ನೊಂದುಕೊಳ್ಳುವವನಾಗ ಪಟ್ಟಣವನ್ನು ಪ್ರವೇಶಿಸಿ ಕಂಸನೊಡನೆ ತಿಳಿಸಿ ತನ್ನ ಮನೆಗೆ ಹೋದನು.

## ಕೃಷ್ಣನು ಮಧುರಾ ಪಟ್ಟಣವನ್ನು ನೋಡಲಿಕ್ಕೆ ಹೋದದ್ದು [1]

ತೆರುವಾಯ ಮಧ್ಯಾಹ್ನದ ಮೇಲೆ ಕೃಷ್ಣಪರಮಾತ್ಮನು ಬಲರಾಮದೇವರಿಂದ ಸಹಿತನಾಗಿ ಗೋಪಾಲರಿಂದಲೂ ಕೂಡಿಕೊಂಡು ಪಟ್ಟಣವನ್ನು ನೋಡಬೇಕೆಂದು ಮಧುರೆಯನ್ನು ಪ್ರವೇಶಿಸಿದನು. ಸ್ಫಟಿಕಮಣಿಯಿಂದ ಮಾಡಿದ್ದ ವಿಸ್ತಾರವಾದ ಗೋಪುರಗಳುಳ್ಳ, ಪ್ರಕಾಶಮಾನವಾದ ಬಂಗಾರದ ಬಾಗಿಲುಗಳಿಂದಲೂ ತೋರಣದಿಂದಲೂ ಕೂಡಿದ ಉದ್ಯಾನಾದಿಗಳಿಂದ ಅಲಂಕೃತವಾದ ಬಂಗಾರದಿಂದ ಅಲಂಕೃತಗಳಾದ ನಾಲ್ಕು ರಸ್ತೆಗಳಿಂದಲೂ ಹಣವಂತರ ಮನೆಗಳಿಂದಲೂ, ಛತ್ರಗಳಿಂದಲೂ, ಸಭೆಗಳಿಂದಲೂ, ಮಾಡಿನಲ್ಲಿ ವೈಡೂರ್ಯ ಇತ್ಯಾದಿ ರತ್ನಗಳಿಂದ ಕೂಡಿದ ಅತಿಸುಂದರವಾದ ಅಲಂಕೃತವಾದ ಪಟ್ಟಣವನ್ನು ಪ್ರವೇಶಿಸಿದರು. ಮಿತ್ರರಿಂದ ಸಹಿತರಾಗಿ ರಾಜಮಾರ್ಗದಲ್ಲಿ ಬರುತ್ತಿರುವ ಕೃಷ್ಣಬಲರಾಮರನ್ನು ನೋಡುವುದಕ್ಕಾಗಿ ಊರಿನ ಹೆಂಗಸರು ಬೇಗನೆ ಬಂದರು. ಇನ್ನು ಕೆಲವರು ಅವರನ್ನು ನೋಡುವುದಕ್ಕಾಗಿ ಮಹಡಿಯನ್ನು ಹತ್ತಿಹೋದರು. ಕೆಲವರು ವಸ್ತ್ರಾಭರಣಗಳನ್ನು ವಿಪರೀತವಾಗಿ ಧರಿಸಿದವರಾಗಿಯೂ ಇನ್ನು ಕೆಲವರು ಒಂದು ಕಿವಿಗೆ ಆಭರಣ ಒಂದು ಕೈಗೆ ಆಭರಣ ಹೀಗೆ ಧರಿಸಿದವರಾಗಿಯೂ, ಕೆಲವರು ಒಂದೇ ಕಣ್ಣಿಗೆ ಕಪ್ಪನ್ನು ಹಾಕಿಕೊಂಡವರಾಗಿಯೂ ಹೋದರು. ಕೆಲವರು ಊಟಮಾಡುತ್ತಿದ್ದವರು ಊಟವನ್ನು ಬಿಟ್ಟು ಬಂದರು. ಎಣ್ಣೆಹಚ್ಚಿಕೊಂಡು ಇದ್ದವರು ಸ್ನಾನಮಾಡದೇ ಹಾಗೆಯೇ ಬಂದರು. ಮಲಗಿದ್ದವರು ಶಬ್ದವನ್ನು ಕೇಳಿ ಓಡಿಬಂದರು. ಮಕ್ಕಳಿಗೆ ಹಾಲನ್ನು ಕೊಡುತ್ತಿದ್ದವರು ಮಕ್ಕಳನ್ನು ಬಿಟ್ಟು ಓಡಿಬಂದರು. ಶ್ರೀಭಗವಂತನು ಅವರ ಮನಸ್ಸನ್ನು ಅಪಹರಿಸಿದನು. ಅವರು ಭಗವಂತನ್ನು ನೋಡಿ ಸಂತೋಷವನ್ನು ಹೊಂದಿದರು. ಹೆಂಗಸರು ಮಹಡಿಯ ಮೇಲೆ ಹತ್ತಿ ಪ್ರೀತಿಯಿಂದ ಅರಳಿದ ಮುಖವುಳ್ಳವರಾಗಿ ಕೃಷ್ಣಬಲರಾಮರ ಮೇಲೆ ಹೂವಿನ ಮಳೆಯನ್ನು ಸುರಿಸಿದರು. ಅಲ್ಲಲ್ಲಿ ಬ್ರಾಹ್ಮಣರು ಮೊಸರು ಮಂತ್ರಾಕ್ಷತೆ ಪುಷ್ಪ ಗಂಧ ಇತ್ಯಾದಿಗಳಿಂದ ಸಂತೋಷದಿಂದ ಪೂಜಿಸಿದರು.

ಮುಂದೆ ಹೋಗುತ್ತಿರಲು ಒಬ್ಬನು ಅಗಸನು ಬರುತ್ತಿರುವುದನ್ನು ನೋಡಿ ಭಗವಂತನು ಅವನೊಡನೆ ಮಡಿಮಾಡಿದ ಉತ್ತಮ ವಸ್ತ್ರಗಳನ್ನು ಯಾಚಿಸಿದನು. 'ನಮಗೆ ಯೋಗ್ಯವಸ್ತ್ರಗಳನ್ನು ಕೊಡು, ಕೊಟ್ಟರೆ ನಿನಗೆ ಶ್ರೇಯಸ್ಸಾಗುವುದು' ಎಂದು

1. ಭಾ. X-39 ಮತ್ತು ಮ.ತಾ.ನಿ. ಅ-13

ಹೇಳಿದನು. ಪರಿಪೂರ್ಣನಾದ ಶ್ರೀಭಗವಂತನು ಯಾಚಿಸಲು ದುರಹಂಕಾರಿಯಾದ ರಾಜನ ಮನೆಯ ವಸ್ತ್ರವನ್ನು ಮಡಿಮಾಡುವವನಾದ ಆ ಅಗಸನು ಆಕ್ಷೇಪಿಸುವವನಾಗಿ 'ಬೆಟ್ಟದಲ್ಲಿ ಕಾಡಿನಲ್ಲಿ ವಾಸಿಸುವ ನೀವು ನಿತ್ಯವೂ ಇಂತಹ ವಸ್ತ್ರಗಳನ್ನೇ ಧರಿಸುತ್ತಿರುವಿರಾ? ರಾಜನಿಗೆ ಸೇರುವ ವಸ್ತ್ರವನ್ನು ಕೇಳುವಿರಾ? ಹುಡುಗರೇ! ನಿಮಗೆ ಬದುಕುವ ಆಸೆಯಿದ್ದರೆ ಹೀಗೆ ಕೇಳಬೇಡಿರಿ. ಗೊತ್ತಾದರೆ ರಾಜರು ನಿಮ್ಮನ್ನು ಬಂಧಿಸುವರು. ಕೊಲ್ಲುವರು. ಕೈಕಾಲು ಮುರಿದು ಹಾಕುವರು' ಎಂದು ಬೆದರಿಸಿದನು.

ಶ್ರೀಭಗವಂತನು ಕೋಪವುಳ್ಳವನಾಗಿ ಈರೀತಿಯಾಗಿ ಕೂಗುತ್ತಿದ್ದ ಅಗಸನ ತಲೆಯನ್ನು ಕೈಯಿಂದ ಬಡಿದು ಹಾರಿಸಿದನು. ಆಗ ಅವನ ಒಟ್ಟಿಗೆ ಇದ್ದ ಅಗಸರೆಲ್ಲರೂ ವಸ್ತ್ರರಾಶಿಗಳನ್ನು ಬಿಟ್ಟು ಓಡಿಹೋದರು. ಶ್ರೀಭಗವಂತನು ತನಗೆ ಬೇಕಾದ ವಸ್ತ್ರಗಳನ್ನು ಧರಿಸಿ, ಬಲರಾಮದೇವರಿಗೆ ಬೇಕಾದ ವಸ್ತ್ರಗಳನ್ನು ಕೊಟ್ಟು, ಉಳಿದ ವಸ್ತ್ರಗಳನ್ನು ಗೋಪಾಲರಿಗೆ ಕೊಟ್ಟು, ಉಳಿದ ವಸ್ತ್ರಗಳನ್ನು ರಸ್ತೆಯಲ್ಲಿ ಹಾಸಿ ಅದರ ಮೇಲೆ ಕಾಲನ್ನು ಇಟ್ಟುಕೊಂಡು ಹೋದನು. ತರುವಾಯ ವಸ್ತ್ರವನ್ನು ಹೊಲಿಯುವವನೊಬ್ಬನು ಪ್ರೀತಿಯುಳ್ಳವನಾಗಿ ಕೃಷ್ಣಬಲರಾಮರಿಗೆ ಅದ್ಭುತವಾದ ಅಲಂಕಾರವನ್ನು ಮಾಡಿದನು. ಶ್ರೀಭಗವಂತನು ಪ್ರಸನ್ನನಾಗಿ ತನ್ನ ಸಾರೂಪ್ಯವನ್ನು ಲೋಕದಲ್ಲಿ ಬೇಕಾದ ಸಂಪತ್ತನ್ನೂ ದೇಹಸಾಮರ್ಥ್ಯ ಮೊದಲಾದವನ್ನೂ ಕೊಟ್ಟನು. ಹಾಗೆಯೇ ಶ್ರೀಭಗವಂತನು ಲೋಕದ ಜನರಂತೆ ನಟಿಸುತ್ತಾ ಕ್ಷೌರ ಮಾಡಿಸಿ ಕೊಂಡು, ಕ್ಷೌರ ಮಾಡಿದವನಿಗೂ ಉತ್ತಮವಾದ ಲೋಕವನ್ನು ಕೊಟ್ಟನು. ಹಾಗೆಯೇ ಮಾಲೆಯನ್ನು ಕಟ್ಟುವವನ ಮನೆಗೆ ಹೋಗಲು ಅವನೂ ಕೃಷ್ಣಬಲರಾಮರಿಗೆ ಬೇಕಾದ ಹೂವಿನ ಮಾಲೆಗಳನ್ನು ಕೊಟ್ಟನು. ಭಗವಂತನು ಅವನಿಗೂ ಅನುಗ್ರಹ ಮಾಡಿದನು. ಆ ಕ್ಷೌರಮಾಡಿದವನೂ, ಮಾಲೆ ಕಟ್ಟುವವನೂ ವೈಕುಂಠ ಲೋಕದಲ್ಲಿ ಪೂರ್ವದಲ್ಲಿಯೂ ಕ್ಷೌರ ಮಾಡುವವನೂ, ಮಾಲೆ ಕಟ್ಟುವವನೂ ಆಗಿದ್ದರು. ಭಗವಂತನ ಸೇವೆಗಾಗಿ ಭೂಮಿಗೆ ಬಂದಿದ್ದರು. ಆದುದರಿಂದ ಭಗವಂತನು ಅವರಿಬ್ಬರಿಗೂ ಅನುಗ್ರಹ ಮಾಡಿದನು.



# ಧನುರ್ಭಂಗವು [1]

ತರುವಾಯ ಶ್ರೀಕೃಷ್ಣನು ರಾಜಮಾರ್ಗದಲ್ಲಿ ಹೋಗುತ್ತಿರುವಾಗ ಗಂಧದ ಪಾತ್ರೆಯನ್ನು ಹಿಡಿದುಕೊಂಡು ಬರುತ್ತಿರುವ ವಕ್ರಶರೀರವುಳ್ಳ ತರುಣಿಯನ್ನು ನೋಡಿ ತನ್ನ ಮಾತಿನಿಂದ ಸಂತೋಷಪಡಿಸುತ್ತಾ 'ಸುಂದರಿ! ನೀನು ಯಾರು? ಈ ಗಂಧವನ್ನು ಯಾರಿಗೆ ತೆಗೆದುಕೊಂಡು ಹೋಗುತ್ತಿರುವಿ? ಹೇಳು. ಉತ್ತಮವಾದ ಗಂಧವನ್ನು ನಮಗೆ ಕೊಡು. ಅದರಿಂದ ನಿನಗೆ ಬೇಗನೇ ಶ್ರೇಯಸ್ಸು ಉಂಟಾಗುವುದು' ಎಂದು ಹೇಳಿದನು. ಅದನ್ನು ಕೇಳಿ ಆ ಸ್ತ್ರೀಯು 'ದೇವಶ್ರೇಷ್ಠ! ನಾನು ನಿನ್ನ ದಾಸಿಯು. ನನ್ನ ಹೆಸರು ತ್ರಿವಕ್ರೆಯೆಂದು. ಕಂಸನಿಗೆ ಗಂಧವನ್ನು ಕೊಡುವವಳು. ನಾನು ಮಾಡಿದ ಗಂಧವೇ ಕಂಸನಿಗೆ ಪ್ರಿಯವಾಗಿರುವುದು. ಈಗ ನೀವಿಬ್ಬರನ್ನು ಬಿಟ್ಟು ಈ ಗಂಧಕ್ಕೆ ಬೇರೆ ಯಾರು ಅರ್ಹರಾಗುವರು?' ಎಂದು ಹೇಳಿದಳು. ಅವಳು ಶ್ರೀಭಗವಂತನ ಸೌಂದರ್ಯ, ಮಾಧುರ್ಯ, ಕಟಾಕ್ಷ ಇತ್ಯಾದಿಗಳಿಂದ ವಶಳಾಗಿ ಕೃಷ್ಣಬಲರಾಮರಿಗೆ ಗಂಧವನ್ನು ಕೊಟ್ಟಳು. ಅವರಿಬ್ಬರೂ ಗಂಧವನ್ನು ಹಚ್ಚಿಕೊಂಡು ಶೋಭಿಸಿದರು. ಪರಮಾತ್ಮನು ಪ್ರಸನ್ನನಾಗಿ ಬಗ್ಗಿದ್ದ ಅವಳನ್ನು ಸರಿಯನ್ನಾಗಿ ಮಾಡಬೇಕೆಂದು ಅಭಿಪ್ರಾಯಪಟ್ಟನು. ತನ್ನ ಪಾದಗಳಿಂದ ಅವಳ ಪಾದಗಳನ್ನು ಒತ್ತಿಹಿಡಿದು ಎರಡು ಬೆರಳಿನಿಂದ ಅವಳ ಗಲ್ಲವನ್ನು ಹಿಡಿದು ಎತ್ತಿದನು. ಆಗ ಅವಳು ಸರಿಯಾದ ದೇಹವುಳ್ಳವಳಾಗಿ ಪರಮಾತ್ಮನ ಸ್ಪರ್ಶದಿಂದ ಪರಮಸುಂದರಿಯಾದಳು.

ತರುವಾಯ ಅವಳು ಕೃಷ್ಣಪರಮಾತ್ಮನ ಹೊದ್ದುಕೊಂಡಿದ್ದ ವಸ್ತ್ರದ ಕೊನೆಯನ್ನು ಹಿಡಿದು ಸೆಳೆಯುತ್ತಾ 'ವೀರ! ನನ್ನ ಮನೆಗೆ ಬಾ. ಹೋಗುವ. ನಿನ್ನನ್ನು ಬಿಡಲಾರೆನು. ನಿನ್ನಿಂದ ಅಪಹೃತವಾದ ಮನಸ್ಸುಳ್ಳ ನನ್ನ ಮೇಲೆ ಅನುಗ್ರಹ ಮಾಡಬೇಕು' ಎಂದಳು. ಬಲರಾಮದೇವರು ನೋಡುವಂತೆ ಈರೀತಿಯಾಗಿ ಸ್ತ್ರೀಯಿಂದ ಪ್ರಾರ್ಥಿಸಲ್ಪಟ್ಟ ಕೃಷ್ಣಪರಮಾತ್ಮನು ಮಿತ್ರರಾದ ಗೋಪಾಲರ ಮುಖವನ್ನು ನೋಡುತ್ತಾ ನಗುತ್ತಾ 'ಸುಂದರಿ! ಪುರುಷರ ಮನೋವ್ಯಥೆಯನ್ನು ಪರಿಹರಿಸುವ ನಿನ್ನ ಮನೆಗೆ ಅವಶ್ಯವಾಗಿ ಕಾರ್ಯವನ್ನು ಸಾಧಿಸಿಕೊಂಡುಬರುವೆನು. ಮನೆಯಿಲ್ಲದ ದಾರಿಗರಿಗೆ ನೀನೇ ಆಶ್ರಯಳು' ಎಂದು ಮಧುರವಾದ ವಾಣಿಯಿಂದ ಕಳುಹಿಸಿ ರಾಜಮಾರ್ಗದಲ್ಲಿ ಹೋಗುತ್ತಿರುವಾಗ ಕೃಷ್ಣಪರಮಾತ್ಮನಿಗೂ, ಬಲರಾಮದೇವರಿಗೂ ವೈಶ್ಯರೆಲ್ಲರೂ ಗಂಧಪುಷ್ಪ ಕಾಣಿಕೆಗಳನ್ನು ಕೊಟ್ಟು ಪೂಜಿಸಿದರು.

---

1. ಭಾ. X-40 ಮತ್ತು ಮ.ತಾ.ನಿ. ಅ-13

ತರುವಾಯ ಶ್ರೀಭಗವಂತನು ಊರಿನ ಜನರೊಡನೆ ಕೇಳುತ್ತಾ ಧನುಸ್ಸಿರುವ ಸ್ಥಾನವನ್ನು ಪ್ರವೇಶಿಸಿದನು. ಅಲ್ಲಿ ಬಹುಜನರಿಂದ ರಕ್ಷಿತವಾದ ಮಹತ್ತಾದ ಧನುಸ್ಸನ್ನು ನೋಡಿದನು. ಜನರೆಲ್ಲರೂ ತಡೆಯುತ್ತಿರುವಂತೆಯೇ ಶ್ರೀಭಗವಂತನು ಬಲಾತ್ಕಾರದಿಂದ ಧನುಸ್ಸನ್ನು ತೆಗೆದನು. ಅನಾಯಾಸದಿಂದ ಎಡಗೈಯಿಂದ ಎತ್ತಿ ಒಂದೇ ನಿಮಿಷದಲ್ಲಿ ಎತ್ತಿ ಅದರ ಹಗ್ಗವನ್ನು ಬಿಗಿದು ಜನರು ನೋಡುತ್ತಿರುವಂತೆ ಮದಭರಿತವಾದ ಆನೆಯು ಕಬ್ಬಿನ ಕೋಲನ್ನು ಮುರಿಯುವ ರೀತಿಯಿಂದ ಅನಾಯಾಸದಿಂದ ಮುರಿದು ಹಾಕಿದನು. ಧನುಸ್ಸು ಮುರಿಯುವಾಗ ಮಹಾಶಬ್ದವು ಉಂಟಾಗಿ ಆ ಶಬ್ದವು ಆಕಾಶದಲ್ಲಿಯೂ, ಭೂಮಿಯಲ್ಲಿಯೂ ವ್ಯಾಪಿಸಿಹೋಯಿತು. ಅದನ್ನು ಕೇಳಿ ಕಂಸನು ಭಯವನ್ನು ಹೊಂದಿದನು. ಆಗ ಧನುಸ್ಸನ್ನು ರಕ್ಷಿಸುತ್ತಿದ್ದ ಜನರು ಕೋಪವುಳ್ಳವರಾಗಿ 'ಹಿಡಿಯಿರಿ, ಕೊಲ್ಲಿರಿ' ಎಂದು ಹೇಳುತ್ತಾ ಭಗವಂತನನ್ನು ಹಿಡಿಯಬೇಕೆಂಬ ಅಭಿಪ್ರಾಯದಿಂದ ಬಂದರು. ಕೃಷ್ಣಬಲರಾಮರು ದುರಭಿಪ್ರಾಯವುಳ್ಳ ಅವರನ್ನು ನೋಡಿ ಕೋಪವುಳ್ಳವರಾಗಿ ಧನುಸ್ಸಿನ ಎರಡು ತುಂಡುಗಳನ್ನು ಇಬ್ಬರು ಹಿಡಿದುಕೊಂಡು ಬಂದವರೆಲ್ಲರನ್ನೂ ಬಡಿದುಹಾಕಿದರು. ಆಮೇಲೆ ಈ ವರ್ತಮಾನವನ್ನು ಕೇಳಿ ಕಂಸನು ಕಳುಹಿಸಿಕೊಟ್ಟ ಸೈನ್ಯವನ್ನು ಸಂಹರಿಸಿ ಕೃಷ್ಣಬಲರಾಮರು ಧನುಶ್ಶಾಲೆಯಿಂದ ಹೊರಗೆ ಬಂದವರಾಗಿ ಸಂತೋಷದಿಂದ ಊರಿನ ಸಂಪತ್ತನ್ನು ನೋಡುತ್ತಾ ಸಂಚರಿಸಿದರು. ಊರಿನ ಜನರು ಕೃಷ್ಣಬಲರಾಮರ ಅದ್ಭುತವಾದ ಪರಾಕ್ರಮವನ್ನು ತೇಜಸ್ಸನ್ನು ರೂಪವನ್ನು ನೋಡಿ ದೇವತೆಗಳೆಂದೇ ತಿಳಿದುಕೊಂಡರು. ಅವರು ಇಚ್ಛಾನುಸಾರವಾಗಿ ಸಂಚರಿಸುತ್ತಿರುವಾಗಲೇ ಸೂರ್ಯನು ಮುಳುಗಿದನು. ಕೃಷ್ಣಬಲರಾಮರು ಗೋಪಾಲರಿಂದ ಕೂಡಿಕೊಂಡು ತಾವು ಇಳಿದುಕೊಂಡು ಇದ್ದ ಸ್ಥಳಕ್ಕೆ ಹೋದರು. ಅಲ್ಲಿ ಕಾಲು ತೊಳೆದುಕೊಂಡು ಹಾಲನ್ನು ಹಾಕಿಕೊಂಡು ಅನ್ನವನ್ನು ಊಟಮಾಡಿದವರಾಗಿ ಕಂಸನ ಅಭಿಪ್ರಾಯವನ್ನು ತಿಳಿದುಕೊಂಡು ಸುಖವಾಗಿ ರಾತ್ರಿಯಲ್ಲಿ ವಾಸಮಾಡಿದರು.

ಕಂಸನು ಧನುಸ್ಸನ್ನು ಮುರಿದದ್ದನ್ನೂ ಧನುಸ್ಸಿನ ರಕ್ಷಕರನ್ನೂ ತಾನು ಕಳುಹಿಸಿದ ಬಲವನ್ನು ಸಂಹಾರ ಮಾಡಿದ್ದನ್ನೂ ಇತರ ಕೃಷ್ಣಬಲರಾಮರ ಕ್ರೀಡೆಯನ್ನು ಕೇಳಿ ಭಯವುಳ್ಳವನಾಗಿ ರಾತ್ರಿಯಲ್ಲಿ ನಿದ್ರೆಯನ್ನೇ ಮಾಡಲಿಲ್ಲ. ಸ್ವಲ್ಪ ನಿದ್ರೆಯು ಬಂದಾಗಲೂ ನಾನಾವಿಧವಾದ ಕೆಟ್ಟ ಕನಸುಗಳನ್ನು ನೋಡಿದನು. ನಾನಾ ದುರ್ನಿಮಿತ್ತಗಳನ್ನು ಎಚ್ಚರಕಾಲದಲ್ಲಿಯೂ ನೋಡಿದನು. ಕನ್ನಡಿ ನೋಡಿದರೆ ಅವನಿಗೆ ಅವನ ತಲೆಯು ಕಾಣಿಸುತ್ತಿರಲಿಲ್ಲ. ಒಂದು ದೀಪವನ್ನು ನೋಡಿದಾಗ

ಎರಡು ದೀಪವಾಗಿ ಕಾಣಿಸುತ್ತಿತ್ತು. ನೆರಳಿನಲ್ಲಿ ಮಧ್ಯದಲ್ಲಿ ಒಡಕು ಕಾಣಿಸುತ್ತಿತ್ತು. ಕಿವಿ ಮುಚ್ಚಿಕೊಳ್ಳುವಾಗ ಕೇಳಿಸುತ್ತಿದ್ದ ಶಬ್ದವು ಅವನಿಗೆ ಕೇಳಿಸುತ್ತಿರಲಿಲ್ಲ. ಮರಗಳನ್ನು ನೋಡುವಾಗ ಬಂಗಾರದ ಛಾಯೆಯು ಕಾಣಿಸುತ್ತಿತ್ತು. ತನ್ನ ಹೆಜ್ಜೆಯು ಕಾಣಿಸುತ್ತಿರಲಿಲ್ಲ. ಕನಸಿನಲ್ಲಿ ಹೆಣವನ್ನು ಅಪ್ಪಿಕೊಂಡಂತೆ ತೋರುತ್ತಿತ್ತು. ಕತ್ತೆಯ ಮೇಲೆ ಕೂತುಕೊಂಡು ಪದ್ಮದ ಗೆಡ್ಡೆಯನ್ನು ತಿನ್ನುತ್ತಾ ನಲದ ಎಂಬ ಹೂವಿನ ಮಾಲೆಯನ್ನು ಹಾಕಿಕೊಂಡು ಎಣ್ಣೆಯನ್ನು ಹಚ್ಚಿಕೊಂಡು ದಿಗಂಬರನಾಗಿ ಹೋಗುತ್ತಿರುವಂತೆಯೂ ತೋರುತ್ತಿತ್ತು. ಇನ್ನು ಹೀಗೆಯೇ ಅನೇಕ ದುಃಶಕುನಗಳನ್ನು ನೋಡಿದನು. ಸಾಯುವೆನೆಂಬ ಭಯವುಳ್ಳವನಾಗಿ ರಾತ್ರಿಯಲ್ಲಿ ನಿದ್ರೆಯನ್ನೇ ಮಾಡಲಿಲ್ಲ.



## ಕುವಲಯಾಪೀಡದ ಸಂಹಾರವು [1]

ಮರುದಿನ ಸೂರ್ಯೋದಯವಾಗಲು ಕಂಸನು ಮಲ್ಲರ ಕ್ರೀಡೆಯ ಉತ್ಸವವನ್ನು ಮಾಡಿಸಿದನು. ಪುರುಷರು ರಂಗಸ್ಥಳವನ್ನು ಅಲಂಕರಿಸಿದರು. ನಾನಾ ವಾದ್ಯಗಳನ್ನು ಬಾರಿಸಿದರು. ನಗಾರಿಯನ್ನು ಬಡಿದರು. ಅಲ್ಲಿ ಮಂಚಗಳೆಲ್ಲವನ್ನೂ ಪುಷ್ಪಾದಿಗಳಿಂದ ಅಲಂಕರಿಸಿದರು. ಮಂಚಗಳಲ್ಲಿ ಊರಿನ ಜನರೆಲ್ಲರೂ ಹೋಗಿ ಕೂತುಕೊಂಡರು. ಅನೇಕ ರಾಜರೂ ಬಂದು ಕುಳಿತರು. ಕಂಸನೂ ಅಲ್ಲಿಗೆ ಬಂದು ಮನಸ್ಸಿನಲ್ಲೇ ಸಂತಾಪಪಡುತ್ತಾ ರಾಜರ ಮಧ್ಯದಲ್ಲಿ ಎತ್ತರವಾದ ಮಂಚದಲ್ಲಿ ಕೂತುಕೊಂಡನು. ವಾದ್ಯಗಳನ್ನು ಬಾರಿಸುತ್ತಿರಲು ಅಲಂಕೃತರಾದ ಮಲ್ಲರು ತಮ್ಮ ಗುರುಗಳಿಂದ ಸಹಿತರಾಗಿ ಪ್ರವೇಶಿಸಿದರು. ಚಾಣೂರನೂ, ಮುಷ್ಟಿಕನೂ, ಕೂಟನೂ, ಶಲನೂ, ತೋಶಲನೂ (ಕೋಸಲ) ಸಂತೋಷದಿಂದ ಬಂದರು. ಕಂಸನಿಂದ ಕೂಗಲ್ಪಟ್ಟ ನಂದಗೋಪನೇ ಮೊದಲಾದ ಗೋಪಾಲರೂ ತಮ್ಮ ಕಾಣಿಕೆಯನ್ನು ಒಪ್ಪಿಸಿ ಒಂದು ಸ್ಥಳದಲ್ಲಿ ಮಂಚಗಳಲ್ಲಿ ಕೂತಿದ್ದರು.

ತರುವಾಯ ಕೃಷ್ಣಬಲರಾಮರು ಶೌಚವನ್ನು ಮಾಡಿಕೊಂಡು ಮಲ್ಲರ ವಾದ್ಯಘೋಷವನ್ನು ಕೇಳಿ ನೋಡಲಿಕ್ಕೆ ಹೋದರು. ಶ್ರೀಕೃಷ್ಣನು ರಂಗಸ್ಥಳದ ದ್ವಾರದಲ್ಲಿ ನಿಂತಿದ್ದ ತನ್ನ ಮೇಲೆ ಮಾವುತನಿಂದ ಪ್ರೇರಿತವಾದ ಆನೆಯನ್ನು

1. ಭಾ. X-40, 41 ಮತ್ತು ಮ.ತಾ.ನಿ. ಅ–13

ನೋಡಿದನು. ಆಗ ಭಗವಂತನು ಮಧ್ಯಕ್ಕೆ ವಸ್ತ್ರವನ್ನು ಬಿಗಿದುಕೊಂಡು ತಲೆ ಕೂದಲುಗಳನ್ನು ಮೇಲೆ ಕಟ್ಟಿಕೊಂಡು ಮೇಘದಂತೆ ಗಂಭೀರವಾದ ವಾಣಿಯಿಂದ 'ಮಾವುತನೇ! ಬೇಗನೇ ನಮಗೆ ಮಾರ್ಗವನ್ನು ಕೊಡು. ದೂರ ಹೋಗು. ಇಲ್ಲದಿದ್ದರೆ ನಿನ್ನನ್ನು ನಿನ್ನ ಆನೆಯನ್ನು ಈಗಲೇ ಯಮಲೋಕಕ್ಕೆ ಕಳುಹಿಸುವೆನು' ಎಂದು ಹೇಳಿದನು.

ಈರೀತಿಯಾಗಿ ಬೆದರಿಸಲ್ಪಟ್ಟ ಮಾವುತನು ಕೋಪವುಳ್ಳವನಾಗಿ ಕೋಪವುಳ್ಳ ಆನೆಯನ್ನು ಕೃಷ್ಣನ ಮೇಲೆ ಬಿಟ್ಟನು. ಆನೆಯು ಓಡಿಬಂದು ಕೃಷ್ಣನನ್ನು ಸೊಂಡಿಲಿನಿಂದ ಹಿಡಿಯಿತು. ಕೂಡಲೇ ಪರಮಾತ್ಮನು ಸೊಂಡಿಲಿನಿಂದ ತಪ್ಪಿಸಿಕೊಂಡು, ಆನೆಗೆ ಬಡಿದು ಅದರ ಕಾಲುಗಳ ಕೆಳಗೆ ಅಡಗಿಕೊಂಡನು. ಆನೆಯು ಕೃಷ್ಣನನ್ನು ನೋಡದೆ ಕೋಪಿಸಿಕೊಂಡು ಸೊಂಡಿಲಿನಿಂದ ಹಿಡಿಯಲಿಕ್ಕೆ ಹೋಯಿತು. ಆಗ ಭಗವಂತನು ಬಲಾತ್ಕಾರದಿಂದ ಹೊರಗೆ ಹೋದನು. ಶ್ರೀಭಗವಂತನು ಅತಿಬಲಿಷ್ಠವಾದ ಆ ಆನೆಯ ಬಾಲವನ್ನು ಹಿಡಿದುಕೊಂಡು ಇಪ್ಪತ್ತೈದು ಮಾರು ಹಿಂದೆ ಸೆಳೆದನು. ಎಡಕ್ಕೆ ಬಲಕ್ಕೆ ಆನೆಯನ್ನು ಕೈಯಿಂದ ಬಡೆದು ಓಡಿದನು. ಆನೆಯೂ ಅವನ ಹಿಂದೆಯೇ ಓಡಿತು. ಭಗವಂತನು ಓಡುತ್ತಾ ಹೋಗಿ ಆಟಕ್ಕಾಗಿ ಬಿದ್ದು ಆಗಲೇ ಬಿದ್ದು ಓಡಿದನು. ಆನೆಯೂ ಹಿಂದೆಯೇ ಹೋಗಿ ಕೃಷ್ಣನು ಬಿದ್ದಿರುವನೆಂದು ತಿಳಿದುಕೊಂಡು ದಂತಗಳಿಂದ ಭೂಮಿಯನ್ನೇ ತಿವಿಯಿತು. ತನ್ನ ಪ್ರಯಾಸವು ವ್ಯರ್ಥವಾಗಲು ಆನೆಯು ಕೋಪವುಳ್ಳದ್ದಾಗಿ ಮಾವುತನಿಂದಲೂ ಪ್ರೇರಿತವಾಗಿ ರೋಷದಿಂದ ಕೃಷ್ಣನನ್ನು ಅಟ್ಟಿಸಿಕೊಂಡು ಹೋಯಿತು. ಶ್ರೀಭಗವಂತನು ಬರುತ್ತಿದ್ದ ಆನೆಯನ್ನು ಹೊಂದಿ ಕೈಯಿಂದ ಸೊಂಡಿಲನ್ನು ಹಿಡಿದು ಭೂಮಿಯಲ್ಲಿ ಬೀಳಿಸಿದನು. ಕೆಳಗೆ ಬಿದ್ದ ಆನೆಯನ್ನು ಕಾಲಿನಿಂದ ಒಡೆದು ದಂತವನ್ನು ಸೆಳೆದು ಅದರಿಂದ ಆನೆಯ ಮಾವುತರನ್ನು ಬಡಿದುಕೊಂದನು. ಆಮೇಲೆ ಸತ್ತುಹೋದ ಆನೆಯನ್ನು ಬಿಟ್ಟು ಕೃಷ್ಣಬಲರಾಮರು ಆನೆಯ ದಂತಗಳನ್ನು ಹಿಡಿದುಕೊಂಡು ಪ್ರಕಾಶಿಸಿದರು. ಕೃಷ್ಣಬಲರಾಮರು ಆನೆಯ ದಂತಗಳನ್ನು ಹೆಗಲಲ್ಲಿ ಇಟ್ಟುಕೊಂಡು ರಕ್ತಬಿಂದುಗಳಿಂದ ಕೂಡಿದವರಾಗಿ ಮುಖದಲ್ಲಿ ಬೆವರಿನ ಹನಿಯುಳ್ಳವರಾಗಿ ಕೆಲವು ಗೋಪರಿಂದ ಸಹಿತರಾಗಿ ರಂಗಸ್ಥಳದೊಳಗೆ ಪ್ರವೇಶಿಸಿದರು. ಶ್ರೀಭಗವಂತನು ಮಲ್ಲರಿಗೆ ಪಿಡಿಗಿನಂತೆ ಕಾಣಿಸುತ್ತಿದ್ದನು. ಜನರಿಗೆ ಮನುಷ್ಯಶ್ರೇಷ್ಠನೆಂದೂ, ಸ್ತ್ರೀಯರಿಗೆ ಮೂರ್ತಿಮತ್ತಾದ ಮನ್ಮಥನೆಂದೂ, ಗೋಪಾಲರಿಗೆ ಸ್ವಜನನೆಂದೂ, ದುಷ್ಟರಾಜರಿಗೆ ಶಿಕ್ಷಕನೆಂದೂ, ವಸುದೇವ ದೇವಕಿಯರಿಗೆ ಮಗನೆಂದೂ, ಕಂಸನಿಗೆ ದೇವರಿಂದ

ವಿಹಿತನಾದ ಮೃತ್ಯುವೆಂದೂ, ಯೋಗಿಗಳಿಗೆ ಪರಬ್ರಹ್ಮನೆಂದೂ ಯಾದವರಿಗೆ ತಮ್ಮ ಪತಿಯೆಂದು ಕಾಣಿಸುತ್ತಿದ್ದನು. ಈರೀತಿಯಾಗಿ ಭಗವಂತನು ಶೋಭಿಸಿದನು.



## ಚಾಣೂರ ಮುಷ್ಟಿಕರ ಸಂಹಾರವು [1]

ಕೃಷ್ಣಬಲರಾಮರು ರಂಗಸ್ಥಳದಲ್ಲಿ ಪ್ರವೇಶ ಮಾಡಿದ್ದನ್ನು ನೋಡಿ ಅಲ್ಲಿದ್ದ ಜನರೆಲ್ಲರೂ ಆದರದಿಂದ ನೋಡಿದರು. ಶ್ರೀನಾರಾಯಣನೇ ಕೃಷ್ಣನಾಗಿ ಅವತರಿಸುವನೆಂದು ಹೇಳಿ ಶ್ರೀಕೃಷ್ಣನ ಬಾಲ್ಯಚರಿತ್ರೆಯನ್ನು ಪರಸ್ಪರವಾಗಿ ಹೇಳಿಕೊಂಡರು. ಜನರು ಪರಸ್ಪರವಾಗಿ ಮಾತಾಡಿಕೊಳ್ಳುತ್ತಿರಲು ಚಾಣೂರನು ಕೃಷ್ಣಬಲರಾಮರನ್ನು ಕರೆದು ಮಾತಾಡಿದನು. 'ಕೃಷ್ಣ! ರಾಮ! ನೀವು ಪರಾಕ್ರಮಶಾಲಿಗಳಿಗೆ ಸಮ್ಮತರು. ನೀವು ದ್ವಂದ್ವ ಯುದ್ಧದಲ್ಲಿ ಸಮರ್ಥರಾಗಿರುವಿರಿ ಎಂದು ಕೇಳಿ ರಾಜರು ನಿಮ್ಮನ್ನು ನೋಡಬೇಕೆಂದು ನಿಮ್ಮನ್ನು ಕರೆಸಿರುವರು. ರಾಜನಿಗೆ ಪ್ರಿಯವನ್ನು ಮಾಡುವ ಪ್ರಜೆಗಳು ಶ್ರೇಯಸ್ಸನ್ನು ಹೊಂದುವರು. ಆದುದರಿಂದ ನೀವೂ ನಾವೂ ರಾಜರ ಪ್ರಿಯವನ್ನು ಮಾಡುವ. ಆಗ ಎಲ್ಲರೂ ಸಂತೋಷವನ್ನು ಹೊಂದುವರು' ಎಂದು ಹೇಳಿದನು. ಅದನ್ನು ಕೇಳಿ ಶ್ರೀಕೃಷ್ಣಪರಮಾತ್ಮನು ದೇಶಕಾಲೋಚಿತವಾದ ಮಾತನ್ನು ಹೇಳಿದನು. 'ನೀವು ರಾಜರ ಪ್ರಜೆಗಳು ನಾವು ನಿತ್ಯವೂ ವನದಲ್ಲಿ ಸಂಚರಿಸುವರು. ಆದರೂ ನಾವು ನಿತ್ಯವೂ ರಾಜರಿಗೆ ಪ್ರಿಯವನ್ನು ಮಾಡುವೆವು. ಅದು ನಮಗೆ ಪರಮಾನುಗ್ರಹವೇ. ಬಾಲಕರಾದ ನಾವು ನಮಗೆ ಸಮಾನವಾದ ಬಲವುಳ್ಳವರಿಂದ ಆಡುತ್ತಿರುವೆವು. ಸಭೆಯಲ್ಲಿ ಕೂತವರಿಗೆ ಅಧರ್ಮವುಂಟಾಗಬಾರದು' ಎಂದು ಹೇಳಿದನು. ಅದಕ್ಕೆ ಚಾಣೂರನು 'ನೀನು ಬಾಲಕನಲ್ಲ. ಬಲಿಷ್ಠರಲ್ಲಿ ಬಲವಂತನು. ಯಾವ ನೀನು ಸಾವಿರ ಆನೆಯ ಬಲವುಳ್ಳ ಆನೆಯನ್ನು ಅನಾಯಾಸದಿಂದ ಕೊಂದಿರುವಿ. ಆದುದರಿಂದ ನೀವು ಇಬ್ಬರೂ ಬಲಿಷ್ಠರಾದ ನಮ್ಮೊಬ್ಬರೊಡನೆ ಯುದ್ಧ ಮಾಡಬೇಕು. ಇದರಲ್ಲಿ ಅನ್ಯಾಯವಿಲ್ಲ. ಕೃಷ್ಣ! ನೀನು ನನ್ನೊಡನೆ ಯುದ್ಧ ಮಾಡು. ಮುಷ್ಟಿಕನು ಬಲರಾಮನೊಡನೆ ಯುದ್ಧವನ್ನು ಮಾಡಲಿ' ಎಂದು ಹೇಳಿದನು.

ತರುವಾಯ ಕೃಷ್ಣಪರಮಾತ್ಮನು ಚಾಣೂರನೊಡನೆಯೂ, ಬಲರಾಮದೇವರು

1. ಭಾ. X-41, 42 ಮತ್ತು ಮ.ತಾ.ನಿ. ಅ-13

ಮುಷ್ಟಿಕನೊಡನೆಯೂ ಯುದ್ಧವನ್ನು ಮಾಡಿದರು. ಅವರು ಮಲ್ಲರು ಯುದ್ಧ ಮಾಡುವ ಕ್ರಮವೆಲ್ಲವನ್ನು ತೋರಿಸಿದರು. ಕೃಷ್ಣಬಲರಾಮರ ಮಹಿಮೆಯನ್ನು ತಿಳಿಯದೆ ಹೆಂಗಸರು ಅವರು ಯುದ್ಧವನ್ನು ಮಾಡುವುದನ್ನು ನೋಡಿ ಅವರ ಮಹಿಮೆಯನ್ನು ಹೇಳಿಕೊಂಡರು. ತರುವಾಯ ಚಾಣೂರನ್ನು ಕೊಲ್ಲಬೇಕೆಂದು ಭಗವಂತನು ಯೋಚಿಸಿದನು. ಇಬ್ಬರೂ ಭಯಂಕರವಾದ ಯುದ್ಧವನ್ನು ಮಾಡಿಕೊಂಡರು. ಭಗವಂತನ ಪ್ರಹಾರದಿಂದ ಚಾಣೂರನು ಬಹಳ ಶ್ರಮವನ್ನು ಹೊಂದಿದನು. ಅವನು ಹದ್ದುಪಕ್ಷಿಯಂತೆ ವೇಗವುಳ್ಳವನಾಗಿ ಎರಡು ಕೈಗಳನ್ನೂ ಮುಷ್ಟಿಹಿಡಿದು ಎದೆಗೆ ಗುದ್ದಿದನು. ಆ ಪ್ರಹಾರದಿಂದ ಭಗವಂತನು ಸ್ವಲ್ಪವೂ ನಡುಗಲಿಲ್ಲ. ಅವನನ್ನು ಹಿಡಿದು ಅನೇಕಬಾರಿ ತಿರುಗಿಸಿ ಭೂಮಿಯಲ್ಲಿ ಅಪ್ಪಳಿಸಿದನು. ಚಾಣೂರನು ಮರಣವನ್ನು ಹೊಂದಿದನು. ಹಾಗೆಯೇ ಮೊದಲು ಬಲರಾಮ ದೇವರಿಗೆ ಮುಷ್ಟಿಯಿಂದ ಹೊಡೆದು ಆಮೇಲೆ ಬಲರಾಮದೇವರು ಅವನ ತಲೆಯ ಮೇಲೆ ಬಡೆಯಲು ರಕ್ತವನ್ನು ಕಾರಿ ಕೆಳಗೆ ಬಿದ್ದು ಪ್ರಾಣವನ್ನು ಬಿಟ್ಟನು. ತರುವಾಯ ಕೂಟ ಎಂಬ ಮಲ್ಲನನ್ನು ಬಲರಾಮದೇವರು ಎಡಮುಷ್ಟಿಯಿಂದ ಅಲಕ್ಷ್ಯವಾಗಿ ಬಡೆದು ಕೊಂದು ಹಾಕಿದರು. ಹಾಗೆಯೇ ಶಲನನ್ನು ಕೃಷ್ಣಪರಮಾತ್ಮನು ಕಾಲಿನಿಂದ ತಲೆಯನ್ನು ಮೆಟ್ಟಿಕೊಂದನು. ಹಾಗೆಯೇ ತೋಶಲನೆಂಬ ಮಲ್ಲನೂ ಕೃಷ್ಣಪರಮಾತ್ಮ ನಿಂದ ಮೃತನಾದನು. ಉಳಿದ ಮಲ್ಲರೆಲ್ಲರೂ ಓಡಿಹೋದರು. ತರುವಾಯ ಕೃಷ್ಣಬಲರಾಮರು ವಾದ್ಯಗಳನ್ನು ಬಾರಿಸುತ್ತಿರಲು ಮಿತ್ರರಾದ ಗೋಪಾಲರನ್ನು ಸೆಳೆದುಕೊಂಡು ನರ್ತನ ಮಾಡಲಿಕ್ಕೆ ಆರಂಭಿಸಿದರು.



## ಕಂಸನ ಸಂಹಾರವು [1]

ಕೃಷ್ಣ ಪರಮಾತ್ಮನೂ, ಬಲರಾಮದೇವರೂ ಗೋಪಾಲರನ್ನು ಕಟ್ಟಿಕೊಂಡು ವಾದ್ಯಗೋಷದೊಡನೆ ನರ್ತನ ಮಾಡುತ್ತಿರಲು ಕಂಸನನ್ನು ಬಿಟ್ಟು ಮತ್ತೆ ಎಲ್ಲರೂ ಸರಿ ಸರಿ ಎಂದು ಹೇಳುತ್ತಾ ಸಂತೋಷಪಟ್ಟರು. ಕೆಲವರು ಮಲ್ಲರು ಸಾಯಲು ಉಳಿದ ಮಲ್ಲರು ಓಡಿಹೋಗಲು ಕಂಸನು ವಾದ್ಯಗಳನ್ನು ನಿಲ್ಲಿಸಿದನು. ''ದುರಾತ್ಮರಾದ ಈ ವಸುದೇವನ ಮಕ್ಕಳನ್ನು ಹೊರಗೆ ತಳ್ಳಿರಿ. ಗೋಪಾಲರ ಹಣವನ್ನು ಸೆಳೆದುಕೊಳ್ಳಿರಿ. ದುರ್ಬುದ್ಧಿಯುಳ್ಳ ನಂದಗೋಪನನ್ನು ಕಟ್ಟಿಹಾಕಿರಿ. ದುರ್ಬುದ್ಧಿಯುಳ್ಳ ಅಯೋಗ್ಯ

1. ಭಾ. X-42 ಮತ್ತು ಮ.ತಾ.ನಿ. ಅ-13

ನಾದ ವಸುದೇವನನ್ನು ಕೊಲ್ಲಿರಿ. ಶತ್ರುಪಕ್ಷದವನಾದ ತಂದೆಯಾದ ಉಗ್ರಸೇನನನ್ನು ಕೊಲ್ಲಿರಿ'' ಎಂದು ಹೇಳಿದನು.

ಈರೀತಿಯಾಗಿ ಕಂಸನು ಹೇಳುತ್ತಿರಲು ಶ್ರೀಕೃಷ್ಣನು ಕೋಪಿಸಿಕೊಂಡವನಾಗಿ ಲಾಘವದಿಂದ ಕಂಸನು ಕೂತಿದ್ದ ಮಂಚದ ಮೇಲೆ ಹಾರಿದನು. ಕಂಸನು ತನ್ನ ಮೃತ್ಯುವಾದ ಕೃಷ್ಣನು ಬರುವುದನ್ನು ನೋಡಿ ಆಕ್ಷಣದಲ್ಲಿ ಎದ್ದು ಖಡ್ಗಚರ್ಮಗಳನ್ನು ಧರಿಸಿದನು. ಖಡ್ಗವನ್ನು ಬೀಸುತ್ತಾ ಶ್ಯೇನ ಪಕ್ಷಿಯಂತೆ (ಹದ್ದು) ಸಂಚರಿಸುತ್ತಿದ್ದ ಅವನನ್ನು ಗರುಡದೇವರು ಹಾವನ್ನು ಹಿಡಿಯುವಂತೆ ಹಿಡಿದರು. ತರುವಾಯ ಅವನು ತಲೆಕೂದಲಿನಲ್ಲಿ ಹಿಡಿದು ಮಂಚದ ಕೆಳಗೆ ತಳ್ಳಿ ತಾನೂ ಅವನ ಮೇಲೆ ಹಾರಿದನು. ಸರ್ವಜಗತ್ತನ್ನು ಧರಿಸಿದವನಾದ ಶ್ರೀಕೃಷ್ಣನು ಮೇಲೆ ಹಾರಿ ಪೀಡಿಸಲು ಕಂಸನು ಒಂದೇ ನಿಮಿಷದಲ್ಲಿ ಪ್ರಾಣವನ್ನು ಪರಿತ್ಯಜಿಸಿದನು. ಸಿಂಹವು ಆನೆಯನ್ನು ಸೆಳೆಯುವಂತೆ ಶ್ರೀಕೃಷ್ಣನು ಎಲ್ಲರೂ ನೋಡುವಂತೆ ಮೃತನಾದ ಕಂಸನನ್ನು ಭೂಮಿಯಲ್ಲಿ ಸೆಳೆದುಕೊಂಡು ಹೋದನು. ಆಗ ಎಲ್ಲರ ಜನರ ಬಾಯಿಯಲ್ಲಿಯೂ ಹಾಹಾ ಎಂಬ ಶಬ್ದವು ಉಂಟಾಯಿತು. ಕಂಸನ ದೇಹದಲ್ಲಿ ಇದ್ದ ವಾಯುದೇವರು ಭಗವಂತನನ್ನು ಪ್ರವೇಶಿಸಿದರು. ಭಗವಂತನ ದ್ವೇಷಿಯಾದ ಕಾಲನೇಮಿಯು ಅಂಧಂತಮಸ್ಸನ್ನು ಹೊಂದಿದನು.

ತರುವಾಯ ಅವನ ತಮ್ಮಂದಿರು ಎಂಟು ಜನರು ಶಂಕ, ನ್ಯಗ್ರೋಧ ಇತ್ಯಾದಿಗಳು ಕೋಪಿಸಿಕೊಂಡವರಾಗಿ ಅಣ್ಣನ ಋಣವನ್ನು ತೀರಿಸಿಕೊಳ್ಳಬೇಕೆಂದು ಓಡಿಬಂದರು. ಅತಿಕೋಪದಿಂದ ಬಂದ ಅವರನ್ನು ಬಲರಾಮದೇವರು ಪರಿಘ ವೆಂಬ ಆಯುಧದಿಂದ (ಆಯುಧವನ್ನು ತೆಗೆದು) ಕೊಂದು ಹಾಕಿದರು. ಆಗ ಆಕಾಶದಲ್ಲಿ ದುಂದುಭಿಯೆಂಬ ವಾದ್ಯವನ್ನು ಬಾರಿಸಿದರು. ಬ್ರಹ್ಮರುದ್ರಾದಿ ದೇವತೆಗಳು ಹೂವಿನ ಮಳೆಯನ್ನು ಸುರಿಸುತ್ತಾ ಸ್ತೋತ್ರ ಮಾಡಿದರು. ಅಪ್ಸರ ಸ್ತ್ರೀಯರು ನರ್ತನ ಮಾಡಿದರು. ಆಗ ಕಂಸಾದಿಗಳ ಸ್ತ್ರೀಯರು ಪತಿಗಳ ಮರಣ ದಿಂದ ದುಃಖವುಳ್ಳವರಾಗಿ ಕಣ್ಣೀರನ್ನು ಸುರಿಸುತ್ತಾ ತಲೆಬಡಿದುಕೊಂಡು ಓಡಿ ಬಂದರು. ವೀರಶಯ್ಯೆಯಲ್ಲಿ ಮಲಗಿದ್ದ ಪತಿಗಳನ್ನು ಆಲಿಂಗಿಸಿ ದುಃಖಪಡುತ್ತ ಸುಸ್ವರದಿಂದ ಅಳುವವರಾದರು. ಶ್ರೀಭಗವಂತನು ರಾಜಪತ್ನಿಯರನ್ನು ಸಮಾಧಾನ ಪಡಿಸಿ ಮೃತರಾದವರಿಗೆ ಮಾಡ ಬೇಕಾದ ಸಂಸ್ಕಾರಗಳನ್ನು ಮಾಡಿಸಿದನು. ಕೃಷ್ಣಬಲರಾಮರು ತಂದೆತಾಯಿಗಳನ್ನು ಬಂಧನದಿಂದ ಬಿಡಿಸಿ ಶಿರಸ್ಸಿನಿಂದ ಪಾದಗಳಿಗೆ ನಮಸ್ಕರಿಸಿದರು. ಆಗ ವಸುದೇವ ದೇವಕಿಯರು ಕೃಷ್ಣಬಲರಾಮರನ್ನು ಆಲಿಂಗನ ಮಾಡದೆ ಕೈಮುಗಿದುಕೊಂಡು ನಿಂತುಕೊಂಡಿದ್ದರು.

# ಉಗ್ರಸೇನನ ಪಟ್ಟಾಭಿಷೇಕವು [1]

ಶ್ರೀಭಗವಂತನು ವಸುದೇವ ದೇವಕಿಯರ ತತ್ತ್ವಜ್ಞಾನವನ್ನು ನೋಡಿ ಅಷ್ಟು ಜ್ಞಾನವು ಬೇಡವೆಂದು ಜನಮೋಹಕವಾದ ತನ್ನ ಬಂಧಕಶಕ್ತಿಯನ್ನು ಬೀರಿದನು. ವಿನಯದಿಂದ ಅಮ್ಮ ಅಪ್ಪ ಎಂದು ಹೇಳುತ್ತಾ 'ನಮಗೆ ಬಾಲ್ಯದಲ್ಲಿ ನಿಮ್ಮ ಬಳಿಯಲ್ಲಿ ಇರುವ ಭಾಗ್ಯವು ಬರಲಿಲ್ಲ. ಮಕ್ಕಳು ತಂದೆತಾಯಿಗಳ ಬಳಿಯಲ್ಲಿ ಇರುವವರು ಸಂತೋಷಪಡುವರು. ಅದೃಷ್ಟಹೀನರಾದ ನಮಗೆ ಆ ಭಾಗ್ಯವು ಬರಲಿಲ್ಲ. ಸರ್ವಪುರುಷಾರ್ಥಕ್ಕೂ ಕಾರಣವಾದ ದೇಹವು ತಂದೆತಾಯಿಗಳಿಂದ ಉಂಟಾಗುವುದು. ಪೋಷಿತರಾಗುವುದು. ಅಂತಹ ತಂದೆತಾಯಿಗಳಿಗೆ ನೂರು ವರ್ಷ ಆಯುಷ್ಯದಿಂದಲೂ ಪ್ರತ್ಯುಪಕಾರವನ್ನು ಮಾಡಲಿಕ್ಕೆ ಆಗಲಾರದು. ದೇಹದಿಂದಲೂ ಹಣದಿಂದಲೂ ಸಮರ್ಥನಾದ ಯಾವ ಮಗನು ತಂದೆತಾಯಿಗಳ ರಕ್ಷಣೆಯನ್ನು ಮಾಡಲಾರನೋ ಅವನನ್ನು ಮರಣಾನಂತರದಲ್ಲಿ ಅವನ ಮಾಂಸವನ್ನೇ ತಿನ್ನಿಸುವರು. ಸಮರ್ಥನಾಗಿರುವ ಪುರುಷನು ತಾಯಿಯನ್ನು ತಂದೆಯನ್ನು ಪತಿವ್ರತೆಯಾದ ಹೆಂಡತಿಯನ್ನು ಚಿಕ್ಕಮಗುವನ್ನು ಗುರುವನ್ನೂ ಬ್ರಾಹ್ಮಣನನ್ನು ಮೊರೆ ಹೊಂದಿದವನನ್ನು ರಕ್ಷಣೆ ಮಾಡದೆ ಇದ್ದರೆ ಅವನುಜೀವನ್ಮೃತನಾಗುವನು. ಆದುದರಿಂದ ಅಸಮರ್ಥರಾದ ಕಂಸನಿಂದ ಭಯವುಳ್ಳವರಾದ ನಿಮ್ಮನ್ನು ರಕ್ಷಣೆ ಮಾಡದೆ ಇದ್ದ ನಮಗೆ ಇಷ್ಟುದಿವಸಗಳು ವ್ಯರ್ಥವಾಗಿ ಕಳೆದುಹೋದವು. ಪರಾಧೀನರಾಗಿ ನಿಮ್ಮ ಸೇವೆಯನ್ನು ಮಾಡದೆ ಇದ್ದ ನಮ್ಮನ್ನು ಕ್ಷಮಿಸಬೇಕು'' ಎಂದು ಶ್ರೀಭಗವಂತನು ಹೇಳಿದ ಮಾತನ್ನು ಕೇಳಿ ವಸುದೇವ ದೇವಕಿಯರು ಮೋಹಿತರಾಗಿ ತೊಡೆಯಮೇಲೆ ಕೂತುಕೊಳ್ಳಿಸಿಕೊಂಡು ಆಲಿಂಗನ ಮಾಡಿ ಸಂತೋಷವನ್ನು ಹೊಂದಿದರು. ಕಣ್ಣೀರಿನ ಧಾರೆಯನ್ನು ಸುರಿಸುತ್ತಾ ಸ್ನೇಹಪಾಶದಿಂದ ಕೂಡಿದವರಾಗಿ ಕುತ್ತಿಗೆಯು ಬಿಗಿದುಹೋಗಿ ಒಂದು ಮಾತನ್ನೂ ಆಡಲಿಲ್ಲ.

ಶ್ರೀಭಗವಂತನು ಹೀಗೆ ತಂದೆತಾಯಿಗಳನ್ನು ಸಮಾಧಾನಪಡಿಸಿ ಮಾತಾಮಹನಾದ ಉಗ್ರಸೇನನನ್ನು ಯಾದವರಿಗೆಲ್ಲಾ ರಾಜನನ್ನಾಗಿ ಮಾಡಿದನು. ತರುವಾಯ ಅವನನ್ನು ಸಮಾಧಾನ ಪಡಿಸಿ ಕಂಸನ ಭಯದಿಂದ ದೇಶಾಂತರಕ್ಕೆ ಓಡಿಹೋಗಿದ್ದ ಯಾದವರನ್ನು ಕರೆಯಿಸಿ (ತರಿಸಿ) ಅವರಿಗೆ ಬೇಕಾದ ಹಣವನ್ನು ಕೊಟ್ಟು ಅವರವರ ಮನೆಯಲ್ಲಿ ವಾಸಮಾಡಿಸಿದನು. ಕೃಷ್ಣ ಬಲರಾಮರ ಭುಜದಿಂದ ರಕ್ಷಿತರಾಗಿ

---

1. ಭಾ. X-43 ಮತ್ತು ಮ.ತಾ.ನಿ. ಅ–13

ಮನೋರಥವನ್ನು ಹೊಂದಿ ಎಲ್ಲರೂ ತಮ್ಮ ಮನೆಗಳಲ್ಲಿ ಸಂತೋಷದಿಂದ ಇದ್ದರು. ನಿತ್ಯವೂ ಕೃಷ್ಣಪರಮಾತ್ಮನ ಮುಖವನ್ನು ನೋಡುತ್ತಾ ಪ್ರೀತಿಯುಳ್ಳವರಾಗಿ ಮುದುಕರಾಗಿದ್ದವರೂ ಯೌವನವುಳ್ಳವ ರಾಗಿದ್ದರು.

ತರುವಾಯ ಭಗವಂತನು ನಂದಗೋಪನ ಬಳಿಗೆ ಬಂದು ಬಲರಾಮ ದೇವರಿಂದ ಸಹಿತನಾಗಿ ಆಲಿಂಗನ ಮಾಡಿ 'ನೀವು ನಮ್ಮನ್ನು ಚೆನ್ನಾಗಿ ಪೋಷಿಸಿದರು. ತಂದೆತಾಯಿಗಳಿಗಿಂತಲೂ ಹೆಚ್ಚಾಗಿ ನಮ್ಮಲ್ಲಿ ಪ್ರೀತಿಯನ್ನು ಮಾಡಿದರು. ರಕ್ಷಣೆ ಮಾಡಲಿಕ್ಕೆ ಸೌಕರ್ಯವಿಲ್ಲದೆ ತಂದೆತಾಯಿಗಳಿಂದ ಬಿಡಲ್ಪಟ್ಟ ಮಕ್ಕಳನ್ನು ರಕ್ಷಿಸುವರೋ ಅವರೇ ತಂದೆಯು, ಅವರೇ ತಾಯಿಯು. ನೀವೀಗ ಗೋಕುಲಕ್ಕೆ ಹೋಗಿರಿ. ಇಲ್ಲಿರುವ ಮಿತ್ರರನ್ನು ಸಮಾಧಾನಪಡಿಸಿ ನಿಮ್ಮನ್ನು ನೋಡಲಿಕ್ಕೆ ಬರುವೆವು' ಎಂದು ಸಮಾಧಾನಪಡಿಸಿ ವಸ್ತ್ರಾದಿಗಳಿಂದ ಸತ್ಕರಿಸಿದನು. ತರುವಾಯ ನಂದಗೋಪನು ಕೃಷ್ಣಬಲರಾಮರನ್ನು ಆಲಿಂಗಿಸಿ ಕಣ್ಣಿನಲ್ಲಿ ನೀರನ್ನು ತುಂಬಿರೊಂಡು ಗೋಪಾಲರಿಂದ ಕೂಡಿಕೊಂಡು ಗೋಕುಲಕ್ಕೆ ಹೋದನು.

ತರುವಾಯ ವಸುದೇವನು ಪುರೋಹಿತರಾದ ಗರ್ಗಾಚಾರ್ಯರಿಂದ ಇತರ ಬ್ರಾಹ್ಮಣರಿಂದಲೂ ಕೂಡಿಕೊಂಡು ಕೃಷ್ಣಬಲರಾಮರಿಗೆ ಉಪನಯನವನ್ನು ಮಾಡಿದನು. ಬ್ರಾಹ್ಮಣರಿಗೆ ಅಲಂಕರಿಸಿ ಬಂಗಾರದ ಮಾಲೆಗಳಿಂದ ಅಲಂಕೃತಗಳಾದ ದನಗಳನ್ನು ದಾನಮಾಡಿದನು. ಮತ್ತು ಕೃಷ್ಣಬಲರಾಮರ ಜನ್ಮನಕ್ಷತ್ರ ಸಮಯದಲ್ಲಿ ಸಂಕಲ್ಪಮಾಡಿದ್ದ ಗೋದಾನಗಳನ್ನೂ ಕಂಸನು ಅಧರ್ಮದಿಂದ ಅಪಹರಿಸಿದ ದನಗಳನ್ನು ಕೊಟ್ಟು ಪೂರಯಿಸಿದನು.

ತರುವಾಯ ಲೋಕಶಿಕ್ಷೆಗಾಗಿ ಗುರುಕುಲವಾಸಮಾಡಬೇಕೆಂದು ಕಾಶ್ಯಪ ಗೋತ್ರದ, ಅವಂತಿಪುರದಲ್ಲಿ ವಾಸಮಾಡುತ್ತಿದ್ದ ಸಾಂದೀಪನಿ ಆಚಾರ್ಯರ ಬಳಿಗೆ ಹೋಗಿ ಅವರ ಸೇವೆಯನ್ನು ಮಾಡಿ ಅರುವತ್ತು ನಾಲ್ಕು ದಿವಸಗಳಲ್ಲಿ ಎಲ್ಲಾ ವಿದ್ಯೆಗಳನ್ನು ಅಭ್ಯಾಸ ಮಾಡಿದರು. ತರುವಾಯ ಗುರುದಕ್ಷಿಣೆಯಾಗಿ ಏನನ್ನು ಕೊಡಬೇಕಾಗಿ ಕೇಳಿದರು. ಸಾಂದೀಪನಿ ಆಚಾರ್ಯರು ಅವರ ಅದ್ಭುತವಾದ ಮಹಿಮೆಯನ್ನು ಕೇಳಿ ಪತ್ನಿಯೊಡನೆ ಯೋಚಿಸಿ ಪ್ರಭಾಸದಲ್ಲಿ ಸಮುದ್ರದಲ್ಲಿ ಮೃತನಾದ ಮಗನನ್ನು ತಂದುಕೊಂಡಬೇಕೆಂದು ಕೇಳಿದರು. ತರುವಾಯ ಕೃಷ್ಣಬಲರಾಮದೇವರು ಹಾಗೆಯೇ ಆಗಲಿ ಎಂದು ಹೇಳಿ ಸಮುದ್ರತೀರಕ್ಕೆ ಹೋಗಿ ಕೂತಿರಲು, ಸಮುದ್ರರಾಜನು ಬಂದು ಬಹುಮಾನ ಮಾಡಿದನು. ಗುರುಪುತ್ರನನ್ನು ತಂದುಕೊಡೆನ್ನಲು ನಾನು ಅಪಹರಿಸಿಲ್ಲ ಪಂಚಜನ ಎಂಬ ರಾಕ್ಷಸನು

ಅಪಹರಿಸಿರುವನು ಎಂದನು. ಕೃಷ್ಣಬಲರಾಮದೇವರು ಆ ರಾಕ್ಷಸನನ್ನು ಕೊಂದು ಅವನ ದೇಹದಿಂದ ಪಾಂಚಜನ್ಯ ಎಂಬ ಶಂಖವನ್ನು ಮಾಡಿಕೊಂಡನು. ಅವನ ಉದರದಲ್ಲಿ ಗುರುಪುತ್ರನನ್ನು ಕಾಣದೆ ಯಮಲೋಕಕ್ಕೆ ಹೋಗಿ ಯಮದೇವ ರೊಡನೆ ಗುರುಪುತ್ರನನ್ನು ಕೊಡಬೇಕೆಂದು ಹೇಳಲು ಯಮದೇವರು ಒಪ್ಪಿಸಿದರು. ಕೃಷ್ಣಬಲರಾಮದೇವರು ಗುರುಗಳಿಗೆ ಅವನ ಮಗನನ್ನು ಒಪ್ಪಿಸಿ ಅವರಿಂದ ಅನುಜ್ಞೆಯನ್ನು ಪಡೆದು ಮಧುರೆಗೆ ಬಂದು ಜನರನ್ನು ಸಂತೋಷಪಡಿಸುತ್ತಾ ಇದ್ದರು.



## ಯಶೋದಾನಂದಗೋಪರು ಕೃಷ್ಣನನ್ನು ನೋಡಿದ್ದು[1]

ಯಶೋದೆಯೂ, ನಂದಗೋಪನೂ, ಕೃಷ್ಣಪರಮಾತ್ಮನೂ, ಬಲರಾಮ ದೇವರೂ, ಗೋವರ್ಧನಪರ್ವತದಲ್ಲಿ ಬಂದಿರುವರು ಎಂಬ ವರ್ತಮಾನವನ್ನು ಕೇಳಿ ಕೃಷ್ಣಪರಮಾತ್ಮನನ್ನು ನೋಡಬೇಕೆಂಬ ಆಸೆಯುಳ್ಳವರಾಗಿ ಸಂತೋಷದಿಂದ ಬೆಣ್ಣೆ ಮೊಸರು ಪಾಯಸ ಪುಷ್ಪ ಇತ್ಯಾದಿಗಳನ್ನು ಹಿಡಿದುಕೊಂಡು ಇತರ ಗೋಪಾಲ ರಿಂದಲೂ ಗೋಪಿಯರಿಂದಲೂ ಕೂಡಿಕೊಂಡು ಗೋವರ್ಧನ ಪರ್ವತಕ್ಕೆ ಬಂದರು. ಒಂದು ಮರದ ಬುಡದಲ್ಲಿ ಇದ್ದ ಕೃಷ್ಣಪರಮಾತ್ಮನನ್ನೂ ಬಲರಾಮ ದೇವರನ್ನು ನೋಡಿದರು. ಸಂತೋಷದಿಂದ ಅವರಿಬ್ಬರಿಗೂ ನಮಸ್ಕರಿಸಿದರು. ತಾವು ತಂದಿದ್ದ ಪಾಯಸ ಇತ್ಯಾದಿಗಳನ್ನೂ ತೋರಿಸಿದರು. ಆಗ ಕೃಷ್ಣಪರಮಾತ್ಮನು 'ತಂದೆಯೇ! ತಾಯಿಯೇ! ನೀವೆಲ್ಲರೂ ಗೋಕುಲದಲ್ಲಿ ಸೌಖ್ಯದಿಂದ ಇರುವಿರಾ? ದನಗಳು ಚೆನ್ನಾಗಿ ಹಾಲು ಕೊಡುತ್ತವೋ? ಕರುಗಳು ಸೌಖ್ಯದಿಂದ ಇದ್ದಾವೋ? ಹಾಲು ಚೆನ್ನಾಗಿದೆಯಾ? ಮಕ್ಕಳೂ ಕರುಮೇಯಿಸುವವರೂ ಹಾಲನ್ನು ಸರಿಯಾಗಿ ಕುಡಿಯುತ್ತಿದ್ದಾರೋ? ಬಹಳವಾಗಿ ಹಗ್ಗಗಳೂ ಅಗಳಿಗಳೂ ಇವೆಯಷ್ಟೆ? ಹುಲ್ಲು ಚೆನ್ನಾಗಿ ಬೆಳೆಯುತ್ತದೆಯಷ್ಟೆ! ಭಂಡಿಗಳೆಲ್ಲಾ ಚೆನ್ನಾಗಿ ಇವೆಯಷ್ಟೆ? ಗೋಪಿಯರು ಮಕ್ಕಳನ್ನು ಹಡೆದಿರುವಷ್ಟೆ! ಅಮ್ಮ! ಗಡಿಗೆಗಳು ಒಡೆಯದೆ ಇವೆಯಷ್ಟೆ! ಗೋವುಗಳು ನಿತ್ಯವೂ ತುಂಬಾ ಹಾಲು ಕೊಡುತ್ತಿವೆಯಷ್ಟೆ! ಹಾಲು ಮೊಸರು ತುಪ್ಪ ಎಲ್ಲಾ ಸರಿಯಾಗಿ ಆಗುತ್ತವೆಯಷ್ಟೆ! ಗೋವುಗಳೆಲ್ಲಾ ರೋಗರಹಿತವಾಗಿ ಇವೆಯಷ್ಟೆ!' ಎಂದು ಕೇಳಿದನು.

---

1. ಹ.ವಂ. ಭ.ಪ. ಅ–12

ನಂದಗೋಪನು 'ಯದುಶ್ರೇಷ್ಠನೇ! ಎಲ್ಲರೂ ರೋಗರಹಿತ ರಾಗಿರುವೆವು. ಗೋವುಗಳು ಯಾವಾಗಲೂ ಕ್ಷೇಮದಿಂದಲೇ ಇವೆ. ನಿನ್ನನ್ನು ನೋಡದೆ ಇರುವುದು ಇದೊಂದೇ. ಯಾವಾಗಲೂ ದುಃಖವಿರುವುದು. ಈ ಮಹಾದುಃಖದಿಂದಲೇ ನಮ್ಮ ಮನಸ್ಸು ಸೀಳಿಹೋಗುವಂತೆ ಆಗುತ್ತದೆ' ಇತ್ಯಾದಿರೀತಿಯಾಗಿ ವಿಲಾಪವನ್ನು ಮಾಡಲು ಭಗವಂತನು ಅವನನ್ನು ಮನೆಗೆ ಹೋಗುವಂತೆ ಹೇಳಿದನು. ಯಶೋದೆ ಯೊಡನೆ 'ಅಮ್ಮ! ನೀನೂ ಮನೆಗೆ ಹೋಗು. ನಿನ್ನನ್ನು ಯಾರು ಹೇಳುವರೋ ಅವರು ಸ್ವರ್ಗವನ್ನು ಹೊಂದುವರು. ಯಾರು ನಿನಗೆ ನಮಸ್ಕರಿಸುವರೋ ಅವರು ನನಗೆ ಯಾವಾಗಲೂ ಅತ್ಯಂತ ಪ್ರಿಯರೂ ನನ್ನ ಭಕ್ತರೂ ಯಾವಾಗಲೂ ಆಗಲಿ. ನೀನೀಗ ಹೋಗು' ಎಂದು ಹೇಳಿದನು. ಅವರಿಬ್ಬ ರನ್ನೂ ಗಟ್ಟಿಯಾಗಿ ಆಲಿಂಗನ ಮಾಡಿ ಕಳುಹಿಸಿದನು. ಅವರು ತಮ್ಮ ಮನೆಗೆ ಹೋದರು. ತರುವಾಯ ಕೃಷ್ಣ ಪರಮಾತ್ಮನು ಯಾದವರಿಂದ ಸಹಿತನಾಗಿ ದ್ವಾರಕಾ ಪಟ್ಟಣಕ್ಕೆ ಹೋಗಲಿಕ್ಕೆ ಇಚ್ಛೈಸಿದನು.

ಪರಮಾತ್ಮನು ಅಲ್ಲಿಂದ ಹೋಗುತ್ತಾ ಪುಷ್ಕರಕ್ಕೆ ಹೋಗಿ ಅಲ್ಲಿದ್ದ ಋಷಿಗಳನ್ನೆಲ್ಲಾ ನೋಡಿದನು. ಅವರೆಲ್ಲರೂ ಬಂದು ಭಗವಂತನಿಗೆ ಅರ್ಘ್ಯಾದಿ ಸತ್ಕಾರಗಳನ್ನು ಮಾಡಿ 'ಶ್ರೀಭಗವಂತನೇ! ನಿನ್ನ ಪರಾಕ್ರಮವು ಅತ್ಯದ್ಭುತವಾಗಿರುವುದು. ಆದುದರಿಂದ ಯುದ್ಧದಲ್ಲಿ ಹಂಸಡಿಭಿಕರನ್ನು ಸಂಹರಿಸಿದಿ. ಆ ವಿಚಕ್ರ ಎಂಬ ರಾಕ್ಷಸನನ್ನು ದೇವತೆಗಳಿಗೂ ಕೊಲ್ಲಲಿಕ್ಕೆ ಆಗುತ್ತಿದ್ದಿಲ್ಲ. ಅಂತಹನನ್ನು ಯುದ್ಧದಲ್ಲಿ ಸಂಹರಿಸಿ. ಇದು ಇನ್ನೊಬ್ಬರಿಂದ ಆಗದಿರುವ ಕಾರ್ಯವೆಂದು ನಮಗೆ ತೋರುತ್ತದೆ. ತಪಸ್ಸು ಮಾಡುತ್ತಿರುವ ನಮಗೆ ಸರ್ವಕಾರ್ಯದಲ್ಲಿಯೂ ಕ್ಷೇಮವುಂಟಾಯಿತು. ನಿನ್ನ ಸಂಸ್ಮರಣೆಯಿಂದ ಪಾಪರಹಿತರಾಗುವೆವು. ನಿನ್ನನ್ನು ಧ್ಯಾನಮಾಡುವವರ ಎಲ್ಲಾ ದುಃಖವನ್ನು ಸರ್ವದಾ ಪರಿಹರಿಸುವಿ. ನಿನ್ನನ್ನು ಸ್ಮರಣೆ ಮಾಡುವುದು ಬಹು ಪುಣ್ಯಕರವಾದದ್ದು. ನೀನು ಸರ್ವೋತ್ತಮನು. ನಿನಗೆ. ನಮಸ್ಕಾರವು. ಇತ್ಯಾದಿ ರೀತಿಯಾಗಿ ಸ್ತೋತ್ರ ಮಾಡಿದರು. ಆಮೇಲೆ ಶ್ರೀಭಗವಂತನು ದ್ವಾರಕಾಪಟ್ಟಣಕ್ಕೆ ಹೋಗಿ ಯಾದವರಿಂದ ಸಹಿತನಾಗಿ ಸಂತೋಷದಿಂದ ಇದ್ದನು.



# ಶ್ರೀಕೃಷ್ಣನು ವಿಪ್ರಶಿಶುವನ್ನು ತಂದುಕೊಟ್ಟದ್ದು [1]

ಪೂರ್ವದಲ್ಲಿ ಸರಳ ಮಂಚದಲ್ಲಿ ಮಲಗಿದ್ದ ಭೀಷ್ಮಾಚಾರ್ಯರಿಂದ ಪ್ರೇರಿತನಾಗಿ ಅರ್ಜುನನು ಎಲ್ಲಾ ರಾಜರ ಮಧ್ಯದಲ್ಲಿ ಧರ್ಮರಾಜನೊಡನೆ ಕೃಷ್ಣಪರಮಾತ್ಮನ ಮಹಿಮೆಯನ್ನು ಹೇಳಿದನು. ''ಪೂರ್ವದಲ್ಲಿ ನಾನು ಸಂಬಂಧಿಗಳನ್ನು ನೋಡುವುದಕ್ಕಾಗಿ ದ್ವಾರಕಾಪಟ್ಟಣಕ್ಕೆ ಹೋಗಿ ಅಲ್ಲಿ ಯಾದವರಿಂದ ಸತ್ಕೃತನಾಗಿ ವಾಸಮಾಡುತ್ತಿದ್ದೆನು. ಒಂದು ದಿವಸದಲ್ಲಿ ಕೃಷ್ಣಪರಮಾತ್ಮನು ಒಂದೇ ದಿವಸದಲ್ಲಿ ಅಶ್ವಮೇಧ ಯಾಗವನ್ನು ಮಾಡಬೇಕೆಂದು ಉದ್ಯುಕ್ತನಾದನು. ಭಗವಂತನು ದೀಕ್ಷಿತನಾಗಿ ಕೂತಿರುವ ಸಮಯದಲ್ಲಿ ಒಬ್ಬ ಬ್ರಾಹ್ಮಣನು ಪರಮಾತ್ಮನ ಬಳಿಗೆ ಬಂದು 'ಭಗವಂತನೇ! ನೀನು ರಕ್ಷಿಸುವ ಅಧಿಕಾರವುಳ್ಳವನು. ನನ್ನನ್ನು ರಕ್ಷಿಸು. ರಕ್ಷಣೆ ಮಾಡುವವನು ಜನರು ಮಾಡುವ ಧರ್ಮದಲ್ಲಿ ನಾಲ್ಕನೇ ಒಂದು ಭಾಗವನ್ನು ಹೊಂದುವರಲ್ಲವೇ!' ಎಂದು ಹೇಳಿದನು.

ಆಗ ಭಗವಂತನು 'ಬ್ರಾಹ್ಮಣೋತ್ತಮ! ಭಯಪಡದಿರು. ನಿನ್ನನ್ನು ನಾನು ರಕ್ಷಿಸುವೆನು. ನಿನ್ನನ್ನು ಯಾವ ಭಯದಿಂದ ರಕ್ಷಿಸಬೇಕು? ಅಶಕ್ಯವಾದ ಕಾರ್ಯವಾಗಿದ್ದರೂ ನಾನು ಅವಶ್ಯವಾಗಿ ಮಾಡುವೆನು' ಎಂದನು.

ಬ್ರಾಹ್ಮಣನು 'ನನ್ನ ಮಗುವು ಹುಟ್ಟಿದ ಕೂಡಲೇ ಮರೆಯಾಗುತ್ತದೆ. ಯಾರೋ ತೆಗೆದುಕೊಂಡು ಹೋಗುತ್ತಾರೆ. ಹೀಗೆ ಮೂರು ಮಕ್ಕಳು ಹೋದರು. ಈಗ ನಾಲ್ಕನೇ ಮಗುವು ಹುಟ್ಟುವುದು. ಅದನ್ನು ನೀನು ರಕ್ಷಿಸಬೇಕು' ಎಂದನು. ಮತ್ತು 'ನನ್ನ ಹೆಂಡತಿಯು ಈಗ ಹಡೆಯುವ ಕಾಲವು. ಈಗ ರಕ್ಷಣೆ ಮಾಡಬೇಕು. ನನ್ನ ಮಗುವು ನನಗೆ ಉಳಿಯುವಂತೆ ಮಾಡಬೇಕು' ಎಂದು ಹೇಳಿದನು.

ಅದಕ್ಕೆ ಪರಮಾತ್ಮನು 'ಅರ್ಜುನ! ನಾನೀಗ ಯಾಗದಲ್ಲಿ ದೀಕ್ಷಿತನಾಗಿರುವೆನು. ಆದರೆ ಯಾವ ಅವಸ್ಥೆಯಲ್ಲಿ ಇದ್ದರೂ ಬ್ರಾಹ್ಮಣರನ್ನು ರಕ್ಷಿಸಬೇಕು. ಏನು ಮಾಡಲಿ' ಎಂದನು. ಅದಕ್ಕೆ ನಾನು 'ಗೋವಿಂದ! ನನ್ನನ್ನು ನೀನು ಆಜ್ಞಾಪಿಸು. ನಾನು ಬ್ರಾಹ್ಮಣನನ್ನು ಭಯದಿಂದ ರಕ್ಷಿಸುವೆನು' ಎಂದೆನು. ಆಗ ಪರಮಾತ್ಮನು ಮಂದಹಾಸವನ್ನು ಮಾಡುತ್ತಾ 'ನೀನು ರಕ್ಷಿಸುವಿಯಾ?' ಎಂದು ಕೇಳಿದನು. ದೇವರು ಹಾಗೆ ಕೇಳಲು ನನಗೆ ನಾಚಿಕೆಯಾಯಿತು. ನಾಚಿಕೆಯುಳ್ಳ ನನ್ನೊಡನೆ ಭಗವಂತನು 'ಅರ್ಜುನ! ನಿನ್ನಿಂದ ರಕ್ಷಿಸಲು ಸಾಧ್ಯವಾಗುವುದಾದರೆ ಹೋಗು. ನಿನ್ನಂತೆ ಮುಂದೆ

1. ಹ.ವಂ.ವಿ.ಪ. ಅ. 111-114

ಮಾಡಿಕೊಂಡು ಯಾದವರೂ ಬರಲಿ. ಬಲರಾಮದೇವರು ಪ್ರದ್ಯುಮ್ನ ಅನಿರುದ್ಧ ಇವರನ್ನು ಹೊರತು ಮತ್ತೆ ಎಲ್ಲರೂ ಸಹಾಯಕ್ಕೆ ಬರಲಿ' ಎಂದು ಹೇಳಿದನು. ನಾನು ಮಹತ್ತಾದ ಯಾದವಸೈನ್ಯದಿಂದ ಕೂಡಿದವನಾಗಿ ಬ್ರಾಹ್ಮಣನನ್ನು ಮುಂದೆ ಮಾಡಿಕೊಂಡು ಹೋದೆನು.

ಒಂದು ಮುಹೂರ್ತದಲ್ಲಿಯೇ ನಾವು ಬ್ರಾಹ್ಮಣನ ಗ್ರಾಮವನ್ನು ಸೇರಿಶ್ರಮ ಪರಿಹರಿಸಿಕೊಂಡೆವು. ಸುತ್ತಲೂ ಯಾದವ ಸೈನ್ಯದಿಂದ ಸಹಿತನಾಗಿ ಗ್ರಾಮದ ಮಧ್ಯದಲ್ಲಿ ನಾನು ಇದ್ದೆನು. ತರುವಾಯ ಪಕ್ಷಿಗಳೂ ಮೃಗಗಳೂ ಕ್ರೂರವಾಗಿ ಕೂಗುತ್ತಾ ಭಯವನ್ನು ಸೂಚಿಸಿದವು. ಸೂರ್ಯನು ಕೆಂಪಾಗಿ ಕಾಂತಿರಹಿತನಾದನು. ಭೂಕಂಪವಾಯಿತು. ಈರೀತಿಯಾಗಿ ಅಪಶಕುನಗಳನ್ನು ನೋಡಿ ಸೈನ್ಯಕ್ಕೆಲ್ಲಾ ಯುದ್ಧಮಾಡಲಿಕ್ಕೆ ಸಿದ್ಧರಾಗಿರುವಂತೆ ಹೇಳಿದೆನು. ಸಾತ್ಯಕಿಯೇ ಮೊದಲಾದ ಯಾದವ ಶ್ರೇಷ್ಠರೆಲ್ಲರೂ ರಥದಲ್ಲಿ ಕೂತುಕೊಂಡು ಯುದ್ಧಕ್ಕೆ ಸಿದ್ಧರಾಗಿದ್ದರು. ನಾನೂ ಹಾಗೆಯೇ ಸಿದ್ಧನಾಗಿದ್ದೆನು. ಮಧ್ಯರಾತ್ರಿ ಸಮಯದಲ್ಲಿ ಬ್ರಾಹ್ಮಣನು ಭಯದಿಂದ ಓಡಿ ಬಂದು ನನ್ನ ಹೆಂಡತಿಯು ಹಡೆಯುವ ಸಮಯದಲ್ಲಿ ವಂಚನೆಯು ನಡೆಯದಂತೆ ನೀವು ಸಿದ್ಧರಾಗಿರಬೇಕು ಎಂದು ಹೇಳಿದನು. ಒಂದು ಮುಹೂರ್ತಕಾಲದಲ್ಲಿಯೇ ಆ ಬ್ರಾಹ್ಮಣನ ಮನೆಯಲ್ಲಿ 'ಕೂಸನ್ನು ತೆಗೆದುಕೊಂಡು ಹೋಗುತ್ತಾರೆ, ತೆಗೆದುಕೊಂಡು ಹೋಗುತ್ತಾರೆ' ಎಂದು ಅಳುವ ಶಬ್ದವು ಕೇಳಿಸಿತು. ಆಮೇಲೆ ಮಗುವು ಅಳುವ ಶಬ್ದವು ಕೇಳಿಸಿತು. ಯಾವ ರಾಕ್ಷಸನು ತೆಗೆದುಕೊಂಡು ಹೋಗುತ್ತಾನೋ ಗೊತ್ತಾಗಲೇ ಇಲ್ಲ.

ತರುವಾಯ ನಾವೆಲ್ಲರೂ ಸುತ್ತಲೂ ಬಾಣದ ಮಳೆಯನ್ನು ಸುರಿಸಿ ಎಲ್ಲ ದಿಕ್ಕುಗಳನ್ನೂ ಬಂಧಿಸಿದೆವು. ಆದರೆ ಕೂಸು ಮಾತ್ರ ಹೋಗಿಯೋ ಹೋಯಿತು. ಆಗ ಬ್ರಾಹ್ಮಣನು ಅಳುತ್ತಾ ಓಡಿಬಂದು ನನಗೆ ಅನೇಕ ಕಠಿಣ ಮಾತುಗಳನ್ನು ಆಡಿದನು. ಯಾದವರಿಗೆಲ್ಲರಿಗೂ ಏನು ಮಾಡಬೇಕೆಂದು ತೋರಲಿಲ್ಲ. ನನಗೂ ಕೂಡ ಹಾಗೆಯೇ ಆಯಿತು. ಆಗ ಬ್ರಾಹ್ಮಣನು ವಿಶೇಷವಾಗಿ ನನ್ನೊಡನೆ 'ದುರ್ಬುದ್ಧಿಯುಳ್ಳವನೇ! ರಕ್ಷಿಸುವೆನೆಂದು ಹೇಳಿರಿ. ರಕ್ಷಿಸಲಿಲ್ಲವಲ್ಲಾ! ನನ್ನ ಮಾತನ್ನು ಕೇಳು. ನೀನು ಸುಮ್ಮನೆ ಕೃಷ್ಣನೊಡನೆ ಸ್ಪರ್ಧಿಸುವಿ. ಈಗ ಇಲ್ಲಿ ಕೃಷ್ಣನಿರುತ್ತಿದ್ದರೆ ಇಂತಹ ಅನ್ಯಾಯವು ನಡೆಯುತ್ತಿದ್ದಿಲ್ಲ. ರಕ್ಷಣೆ ಮಾಡುವವನು ಹೇಗೆ ಧರ್ಮದ ನಾಲ್ಕನೇ ಒಂದು ಭಾಗವನ್ನು ಹೊಂದುವನೋ ಹಾಗೆಯೇ ರಕ್ಷಣೆ ಮಾಡದೆ ಇರುವವನು. ಪಾಪದ ನಾಲ್ಕನೇ ಒಂದು ಭಾಗವನ್ನು ಹೊಂದುವನು. ರಕ್ಷಣೆ

ಮಾಡುವೆನೆಂದು ಹೇಳಿದಿ. ರಕ್ಷಣೆ ಮಾಡಲಿಕ್ಕೆ ನಿನ್ನಿಂದ ಆಗಲಿಲ್ಲ. ನಿನ್ನ ಗಾಂಡೀವಧನುಸ್ಸು ವ್ಯರ್ಥವು. ನಿನ್ನ ಪರಾಕ್ರಮವೂ ನಿನ್ನ ಕೀರ್ತಿಯೂ ವ್ಯರ್ಥವು' ಎಂದು ಹೇಳಿದನು. ನಾನು ಒಂದೂ ಮಾತಾಡದೆ ಯಾದವರಿಂದ ಕೂಡಿಕೊಂಡು ಕೃಷ್ಣಪರಮಾತ್ಮನಿದ್ದಲ್ಲಿಗೆ ಹೋದೆನು. ನಾನು ದ್ವಾರಕಾಪಟ್ಟಣಕ್ಕೆ ಹೋಗಿ ಭಗವಂತ ನನ್ನು ನೋಡಿ ತುಂಬಾ ನಾಚಿಕೆಯುಳ್ಳವನಾದೆನು. ತುಂಬಾ ದುಃಖವನ್ನು ಹೊಂದಿದೆನು. ಬ್ರಾಹ್ಮಣನು ಅಲ್ಲಿಯೂ ಲಜ್ಜೆಪಡುತ್ತಿರುವ ನನ್ನನ್ನು ನೋಡಿ ಕೃಷ್ಣಪರಮಾತ್ಮನ ಬಳಿಯಲ್ಲಿ ನನ್ನನ್ನು ನಿಂದಿಸುತ್ತಾ 'ನನ್ನ ಮೂರ್ಖತನವನ್ನು ನೋಡಿರಿ. ಈ ನಪುಂಸಕನ ಹೊಗಳಿಕೆಯ ಮಾತನ್ನು ನಾನು ನಂಬಿಬಿಟ್ಟೆನು. ಪ್ರದ್ಯುಮ್ನನಾಗಲೀ ಅನಿರುದ್ಧನಾಗಲೀ ಬಲರಾಮನಾಗಲೀ ಶ್ರೀಕೃಷ್ಣನಾಗಲೀ ಯಾರನ್ನು ರಕ್ಷಿಸಲಿಲ್ಲವೋ ಅವನನ್ನು ರಕ್ಷಿಸಲು ಇನ್ನು ಯಾರು ಸಮರ್ಥರಾಗುವರು? ಅರ್ಜುನನ ವ್ಯರ್ಥವಾದ ಗರ್ಜನೆಗೆ ಧಿಕ್ಕಾರವಿರಲಿ. ವ್ಯರ್ಥವಾಗಿ ತನ್ನನ್ನೇ ಸ್ತೋತ್ರ ಮಾಡಿಕೊಳ್ಳುವವನ ಧನುಸ್ಸಿಗೆ ಧಿಕ್ಕಾರವಿರಲಿ. ದೈವವಶನಾದ ದುರ್ಬುದ್ಧಿಯುಳ್ಳ ಇವನು ಮೂರ್ಖತನದಿಂದ ತಾನು ರಕ್ಷಿಸುತ್ತೇನೆಂದು ಬಂದಿರುವನು' ಎಂದು ಶಪಿಸುತ್ತಿದ್ದನು.

ಆಗ ನಾನು ವೈಷ್ಣವವಿದ್ಯೆಯ ಸಾಮರ್ಥ್ಯದಿಂದ ಯಮದೇವರು ಇರುವ ಸಂಯಮನೀನಗರಿಗೆ ಹೋದೆನು. ಅಲ್ಲಿ ಬ್ರಾಹ್ಮಣಶಿಶುವನ್ನು ಕಾಣದೆ ಅಮರಾವತಿಗೆ ಹೋದೆನು. ಆ ಇಂದ್ರದೇವರ ಪಟ್ಟಣದಲ್ಲಿಯೂ ನೋಡದೆ ಅಗ್ನಿಲೋಕಕ್ಕೂ ನಿಋತಿಯ ಲೋಕಕ್ಕೂ ಚಂದ್ರಲೋಕಕ್ಕೂ ವರುಣಲೋಕಕ್ಕೂ ರಸಾತಲಕ್ಕೂ ಇತರಲೋಕಗಳಿಗೂ ಆಯುಧಧಾರಿಯಾಗಿ ಹೋದೆನು. ಎಲ್ಲಿಯೂ ಬ್ರಾಹ್ಮಣನ ಶಿಶುವನ್ನು ನೋಡದೆ ಪ್ರತಿಜ್ಞೆಯು ಸಫಲವಾಗದ ಕಾರಣ ಅಗ್ನಿಪ್ರವೇಶ ಮಾಡಲಿಕ್ಕೆ ಉದ್ಯುಕ್ತನಾದೆನು. ಆಗ ಕೃಷ್ಣಪರಮಾತ್ಮನೂ ಪ್ರದ್ಯುಮ್ನನೂ ನನ್ನನ್ನು ತಡೆದರು. ಭಗವಂತನು 'ಅರ್ಜುನ! ನಿನಗೆ ಬ್ರಾಹ್ಮಣಶಿಶುವನ್ನು ತೋರಿಸುವೆನು. ಆತ್ಮಹತ್ಯೆಯನ್ನು ಮಾಡಿಕೊಳ್ಳಬೇಡ. ಇದರಿಂದ ನಿನಗೆ ಹೆಚ್ಚಾದ ಕೀರ್ತಿಯನ್ನು ಹೇಳುವರು' ಎಂದು ಸ್ನೇಹದಿಂದ ನನ್ನೊಡನೆ ಮಾತಾಡಿ ನನ್ನನ್ನು ಸಮಾಧಾನಪಡಿಸಿ ಬ್ರಾಹ್ಮಣನನ್ನು ಸಮಾಧಾನಪಡಿಸಿ ದಾರುಕನೊಡನೆ 'ಸುಗ್ರೀವ, ಶೈಬ್ಯ, ಮೇಘಪುಷ್ಪ, ಬಲಾಹಕ ಎಂಬ ಕುದುರೆಗಳನ್ನು ರಥಕ್ಕೆ ಕಟ್ಟು' ಎಂದು ಹೇಳಿದನು. ತರುವಾಯ ಭಗವಂತನು ಬ್ರಾಹ್ಮಣನನ್ನು ರಥದಲ್ಲಿ ಕೂತುಕೊಳ್ಳಲಿಕ್ಕೆ ಹೇಳಿ ದಾರುಕನನ್ನು ಕೆಳಗೆ ಇಳಿಯಲಿಕ್ಕೆ ಹೇಳಿ ನನ್ನೊಡನೆ ಸಾರಥ್ಯವನ್ನು ಮಾಡಲಿಕ್ಕೆ ಹೇಳಿದನು. ತರುವಾಯ ನಾನೂ ಕೃಷ್ಣಪರಮಾತ್ಮನೂ ಬ್ರಾಹ್ಮಣನೂ ಮೂರು ಜನರು ರಥದಲ್ಲಿ ಕೂತುಕೊಂಡು ಉತ್ತರದಿಕ್ಕಿಗೆ ಹೋದೆವು.

ತರುವಾಯ ಅನೇಕ ಪರ್ವತಗಳನ್ನೂ ನದಿಗಳನ್ನೂ ವನಗಳನ್ನೂ ದಾಟಿ ಸಮುದ್ರವನ್ನು ನೋಡಿದೆನು. ಸಮುದ್ರರಾಜನು ಅರ್ಘ್ಯವನ್ನು ಹಿಡಿದುಕೊಂಡು ಬಂದು ಕೈಮುಗಿದುಕೊಂಡು 'ನಾನೇನು ಮಾಡಲಿ' ಎಂದು ಕೇಳಿದೆನು. ಭಗವಂತನು ಸಮುದ್ರರಾಜನು ಮಾಡಿದ ಪೂಜೆಯನ್ನು ಸ್ವೀಕರಿಸಿ ನನ್ನ ರಥವು ಹೋಗಲಿಕ್ಕೆ ದಾರಿಯನ್ನು ಕೊಡಬೇಕು ಎಂದು ಹೇಳಿದನು. ಅದಕ್ಕೆ ಸಮುದ್ರರಾಜನು ಕೈಮುಗಿದುಕೊಂಡು ಭಗವಂತನೊಡನೆ 'ಭಗವಂತನೇ ಕ್ಷಮಿಸಬೇಕು ನಾನು ಹೀಗೆ ಮಾಡಿದರೆ ಇನ್ನು ಮುಂದೆ ಇನ್ನೊಬ್ಬನೂ ಹೀಗೆಯೇ ಹೋಗುವನು. ನೀನೇ ನನ್ನನ್ನು ಗಂಭೀರನಾಗಿರುವಂತೆ ಆಜ್ಞಾಪಿಸಿರುವಿರಿ. ನಿನ್ನ ಆಜ್ಞೆಯಂತೆ ಇರುತ್ತಿರುವೆನು. ನೀನೊಬ್ಬನು ನನ್ನಲ್ಲಿ ಇಳಿದು ಹೋರೆ ಇತರ ರಾಜರೂ ದರ್ಪದಿಂದ ಹೀಗೆಯೇ ಮಾಡುವರು. ಇದನ್ನೆಲ್ಲಾ ಯೋಚಿಸಿ ಯಾವುದು ಯುಕ್ತವೋ ಅದನ್ನು ಮಾಡು' ಎಂದನು. ಅದಕ್ಕೆ ಭಗವಂತನು 'ಸಮುದ್ರ! ಬ್ರಾಹ್ಮಣನಿಗೋಸ್ಕರವೂ ನನಗೋಸ್ಕರವೂ ನನ್ನ ಮಾತಿನಂತೆ ಮಾಡು. ನಾನು ಹೊರತು ಇನ್ನೊಬ್ಬನು ನಿನ್ನನ್ನು ಎದುರಿಸುವವನು ಇಲ್ಲ' ಎಂದನು. ಆಗ ಸಮುದ್ರರಾಜನು 'ಹಾಗಾದರೆ ನಾನು ನಿನ್ನ ಭಯದಿಂದ ದಾರಿಯನ್ನು ಕೊಡುತ್ತೇನೆ. ನನ್ನ ನೀರನ್ನೆಲ್ಲಾ ಆರಿಸಿಕೊಳ್ಳುತ್ತೇನೆ. ನೀರು ಆರಿಹೋದ ಮೇಲೆ ಸಾರಥಿ ಧ್ವಜಗಳಿಂದ ಯುಕ್ತವಾದ ರಥದಿಂದ ಆ ಮಾಗದಲ್ಲಿ ಹೋದಮೇಲೆ ಸಾರಥಿಧ್ವಜಗಳಿಂದ ಯುಕ್ತವಾದ ರಥದಿಂದ ಆ ಮಾರ್ಗದಲ್ಲಿ ಹೋಗುವಿ' ಎಂದನು.

ಅದಕ್ಕೆ ಭಗವಂತನು 'ನಿನ್ನ ನೀರೆಲ್ಲಾ ಆರಿ (ಬತ್ತಿ) ಹೋಗದಂತೆ ನಾನೇ ಪೂರ್ವದಲ್ಲಿ ವರವನ್ನು ಕೊಟ್ಟಿರುವೆನು. ನೀರೆಲ್ಲಾ ಬತ್ತಿಹೋದರೆ ಮನುಷ್ಯರು ನಿನ್ನಲ್ಲಿ ಇರುವ ರತ್ನಸಮೂಹಗಳನ್ನು ನೋಡುವರು. ನೀರನ್ನು ಸ್ತಂಭನೆಮಾಡು. ನೀರಿನ ಮೇಲೆಯೇ ನಾನು ರಥದಲ್ಲಿ ಕೂತುಕೊಂಡು ಹೋಗುವೆನು. ನಿನ್ನಲ್ಲಿ ಇರುವ ರತ್ನಗಳ ಪರಿಮಿತಿಯನ್ನು ಜನರೊಬ್ಬರೂ ತಿಳಿಯಬಾರದು' ಎಂದನು. ಸಮುದ್ರರಾಜನು ಹಾಗೆಯೇ ಆಗಲಿ ಎಂದನು. ತರುವಾಯ ನಾವು ನೀರಿನ ಮೇಲೆಯೇ ಹೋದೆವು. ಸಮುದ್ರವನ್ನು ದಾಟಿ ಹೋದೆವು. ತರುವಾಯ ಜಯಂತ ವೈಜಯಂತ ನೀಲ ರಜತಪರ್ವತ ಮಹಾಮೇರು ಕೈಲಾಸ ಇಂದ್ರಕೂಟ ಎಂಬ ಏಳು ಪರ್ವತಗಳ ಅಭಿಮಾನಿಗಳು ಅದ್ಭುತವಾದ ನಾನಾವಿಧವಾದ ರೂಪವುಳ್ಳವರಾಗಿ ಭಗವಂತನ ಸಮೀಪಕ್ಕೆ ಬಂದು ನಾವೇನು ಮಾಡಲಿ ಎಂದು ಕೇಳಿದವು. ಭಗವಂತನು ಅವುಗಳಿಗೆ ಸತ್ಕಾರವನ್ನು ಮಾಡಿ ನಮಸ್ಕಾರ ಮಾಡಿ ಬಗ್ಗಿ ನಿಂತಿರುವ

ಅವುಗಳೊಡನೆ ರಥವು ಹೋಗಲಿಕ್ಕೆ ಮಾರ್ಗವನ್ನು ಬಿಡಿರಿ ಎಂದು ಹೇಳಿದನು. ಅವುಗಳು ಪರಮಾತ್ಮನ ಮಾತನ್ನು ಕೇಳಿ ಹಾಗೆಯೇ ರಥವು ಹೋಗಲಿಕ್ಕೆ ದಾರಿಯನ್ನು ಬಿಟ್ಟುಕೊಟ್ಟವು. ಆಪರ್ವತಾಭಿಮಾನಿ ಗಳೆಲ್ಲರೂ ಅಲ್ಲಿಯೇ ಮರೆಯಾದವು. ಅದನ್ನು ನೋಡಿ ನನಗೆ ತುಂಬಾ ಆಶ್ಚರ್ಯವಾಯಿತು. ಮೇಘಗಳ ಸಮೂಹದಲ್ಲಿ ಸೂರ್ಯನು ಹೋಗುವಂತೆ ಯಾವ ತಡೆಯೂ ಇಲ್ಲದೆ ರಥವು ಹೋಗುತ್ತಾ ಇತ್ತು. ಏಳು ದ್ವೀಪಗಳನ್ನೂ ಏಳು ಸಮುದ್ರಗಳನ್ನೂ ಏಳು ಪರ್ವತಗಳನ್ನೂ ದಾಟಿ ಲೋಕಾಲೋಕಪರ್ವತವನ್ನು ದಾಟಿ ರಥವು ಅಂಧಂತಮಸ್ಸನ್ನು ಪ್ರವೇಶಿಸಿತು. ಅಲ್ಲಿ ಕೆಸರಿನಂತೆ ಮಹಾಕತ್ತಲೆಯು ಸ್ಪರ್ಶಕ್ಕೆ ತಿಳಿಯುತ್ತಿತ್ತು. ಮಹಾಪರ್ವತದಂತೆ ಇರುವ ಆ ಕತ್ತಲೆಯನ್ನು ಹೊಂದಿದಮೇಲೆ ಕುದುರೆಗಳಾದ ಮುಂದೆ ಹೋಗಲು ಆಗಲಿಲ್ಲ.

ತರುವಾಯ ಕೃಷ್ಣಪರಮಾತ್ಮನು ಚಕ್ರಾಯುಧದಿಂದ ಕತ್ತಲೆಯನ್ನು ಸೀಳಿ ಅವಕಾಶವನ್ನು ಮಾಡಿಕೊಟ್ಟರು. ಕತ್ತಲೆಯನ್ನು ದಾಟಿ ರಥವು ಬೆಳಕಿದ್ದಲ್ಲಿಗೆ ಹೋದಮೇಲೆ ನಾನು ಬದುಕಿದೆನು ಎಂದು ತಿಳಿದುಕೊಂಡೆನು. ತರುವಾಯ ಮೇಲೆ ಪುರುಷಾಕಾರವುಳ್ಳ ಒಂದು ತೇಜಸ್ಸು ಲೋಕವನ್ನು ವ್ಯಾಪಿಸಿಕೊಂಡಿರುವುದನ್ನು ನೋಡಿದೆನು. ಶ್ರೀಕೃಷ್ಣಪರಮಾತ್ಮನು ಹೋಗಿ ಆ ತೇಜಸ್ಸನ್ನು ಪ್ರವೇಶಿಸಿದನು. ನಾನೂ ಆ ಬ್ರಾಹ್ಮಣನೂ ರಥದಲ್ಲಿಯೇ ಇದ್ದೆವು: ಒಂದು ಮುಹೂರ್ತಕಾಲದಲ್ಲಿಯೇ ಕೃಷ್ಣಪರಮಾತ್ಮನು ನಾಲ್ಕು ಜನ ಬ್ರಾಹ್ಮಣಕುಮಾರರನ್ನು ಹಿಡಿದುಕೊಂಡು ಬಂದು ಬ್ರಾಹ್ಮಣನಿಗೆ ಕೊಟ್ಟನು. ಮೂರುಜನರು ಪೂರ್ವದಲ್ಲಿ ಅಪಹೃತರಾದವರು. ಒಬ್ಬನು ಆಗಲೇ ಅಪಹೃತ ನಾದವನು. ಆ ಮಕ್ಕಳನ್ನು ನೋಡಿ ಬ್ರಾಹ್ಮಣನು ಸಂತೋಷ ಪಟ್ಟನು. ನನಗೂ ಪರಮಸಂತೋಷವಾಯಿತು. ಆಶ್ಚರ್ಯವೂ ಆಯಿತು. ಆಮೇಲೆ ನಾನೂ ಆ ಬ್ರಾಹ್ಮಣನೂ ಬ್ರಾಹ್ಮಣನ ಮಕ್ಕಳೂ ಹಿಂದೆ ತಿರುಗಿ ಬಂದೆವು. ಒಂದೇ ಕ್ಷಣದಲ್ಲಿ ನಾವು ದ್ವಾರಕಾಪಟ್ಟಣಕ್ಕೆ ಬಂದು ಸೇರಿದೆವು. ಅಂದರೆ ನಾವು ಅಷ್ಟು ದೂರಕ್ಕೆ ಹೋಗಿ ಬರುವಾಗಲೂ ಅರ್ಧದಿವಸವೂ ಮೀರಲಿಲ್ಲ. ಕೃಷ್ಣಪರಮಾತ್ಮನು ಮಕ್ಕಳಿಂದ ಸಹಿತನಾದ ಆ ಬ್ರಾಹ್ಮಣನನ್ನು ಭೋಜನ ಮಾಡಿಸಿ ಹಣದ ಮಳೆಯನ್ನು ಸುರಿಸಿ ಮನೆಗೆ ಕಳುಹಿಸಿದನು.

ತರುವಾಯ ಕೃಷ್ಣಪರಮಾತ್ಮನು ನೂರಾರು ಬ್ರಾಹ್ಮಣ ಭೋಜನಮಾಡಿಸಿದನು. ತರುವಾಯ ನಾನೂ ಭಗವಂತನೂ ಯಾದವರೂ ಎಲ್ಲರೂ ಭೋಜನ ಮಾಡಿದೆವು. ಆಮೇಲೆಯೂ ಭಗವಂತನು ಅನೇಕ ಕಥೆಗಳನ್ನು ಹೇಳಿದನು. ಕಥೆಗಳು ಮುಗಿದ ಮೇಲೆ ಪರಮಾತ್ಮನೊಡನೆ ನಾನು ನೋಡಿದ ವಿಷಯವನ್ನೆಲ್ಲಾ ಕೇಳಿದೆನು. 'ನಮ್ಮ

ರಥವು ಹೋಗುವಾಗ ಸಮುದ್ರದ ನೀರು ಹೇಗೆ ಗಟ್ಟಿಯಾಯಿತು? ಪರ್ವತಗಳು ಹೇಗೆ ದಾರಿಬಿಟ್ಟವು? ಆ ಘೋರವಾದ ಕತ್ತಲೆಯು ಚಕ್ರದಿಂದ ಹೇಗೆ ಕತ್ತರಿಸಲ್ಪಟ್ಟಿತು? ಆ ಉತ್ತಮವಾದ ತೇಜಸ್ಸನ್ನು ಹೇಗೆ ಪ್ರವೇಶಿಸಿದಿ? ಆ ಬಾಲಕರು ಏಕೆ ಅಪಹೃತರಾದರು? ಅಷ್ಟು ದೂರವಾದ ಮಾರ್ಗವನ್ನು ಅಷ್ಟು ಬೇಗ ಹೋಗಿ ಬರುವಂತೆ ಹೇಗೆ ಸಂಕ್ಷೇಪಮಾಡಿದಿ? ಅಷ್ಟು ಬೇಗನೆ ಅಷ್ಟು ದೂರ ಹೇಗೆ ಹೋಗಿಬರಲಿಕ್ಕೆ ಆಯಿತು? ಈ ಎಲ್ಲಾ ವಿಷಯವನ್ನೂ ನನಗೆ ತಿಳಿಸಬೇಕು' ಎಂದು ಭಗವಂತನೊಡನೆ ಕೇಳಿಕೊಂಡನು.

ಅದಕ್ಕೆ ಭಗವಂತನು 'ನನ್ನ ದರ್ಶನಕ್ಕಾಗಿಯೇ ಆ ಬಾಲಕರು ಅಪಹೃತರಾದರು. ಬ್ರಾಹ್ಮಣರ ಕಾರ್ಯಕ್ಕಾಗಿ ಕೃಷ್ಣನು ಬರುವನು. ಇಲ್ಲದಿದ್ದರೆ ಬರಲಾರನು ಎಂಬ ಅಭಿಪ್ರಾಯದಿಂದ ಆ ಬಾಲಕರ ಅಪಹಾರವಾಯಿತು. ಪುರುಷಾಕಾರವುಳ್ಳ ತೇಜಸ್ಸನ್ನು ನೋಡಿದೆಯಲ್ಲಾ ಅದು ನನ್ನ ರೂಪವೇ. ಅನಂತಾಸನ ಎಂಬ ರೂಪವು ಸಮುದ್ರದ ನೀರನ್ನು ಗಟ್ಟಿಯನ್ನಾಗಿ ಮಾಡಿದವನು ನಾನೇ ಆ ಏಳು ಪರ್ವತಗಳೂ ಆ ಕತ್ತಲೆಯೂ ನನ್ನ ಅಧೀನವೇ. ಆ ಕತ್ತಲೆಯನ್ನು ಸೀಳಿದವನೂ ನಾನೇ. ಕಾಲ, ಧರ್ಮ, ಚಂದ್ರ, ಸೂರ್ಯ, ಪರ್ವತಗಳು, ನದಿಗಳು, ಸರೋವರಗಳು ನಾಲ್ಕು ದಿಕ್ಕುಗಳು ಎಲ್ಲವೂ ನನ್ನ ಅಧೀನವಾದವುಗಳು. ನಾಲ್ಕು ವರ್ಣಗಳೂ ನಾಲ್ಕು ಆಶ್ರಮಗಳೂ ಎಲ್ಲವೂ ನನ್ನಿಂದ ಸೃಷ್ಟವಾದವುಗಳು' ಎಂದು ಹೇಳಿದನು. ತರುವಾಯ ಶ್ರೀಭಗವಂತನು ತಾನು ಸರ್ವನಿಯಾಮಕನೆಂಬುದನ್ನು ವಿಸ್ತಾರವಾಗಿ ವಿವರಣಮಾಡಿ ಹೇಳಿದನು'' ಎಂದು ಅರ್ಜುನನು ಧರ್ಮರಾಜನೊಡನೆ ಹೇಳಿದನು. ಇದನ್ನು ಕೇಳಿ ಧರ್ಮರಾಜನು ವಿಶೇಷವಾಗಿ ಕೃಷ್ಣಪರಮಾತ್ಮನನ್ನು ಪೂಜಿಸಿದನು.

(ಕೃಷ್ಣಪರಮಾತ್ಮನು ತನಗೆ ಬಲರಾಮದೇವರೂ ಪ್ರದ್ಯುಮ್ನನೂ ಅನಿರುದ್ಧನೂ ಅತ್ಯಂತ ಪ್ರಿಯರಾದ ಕಾರಣ ಅವರಿಗೆ ಅವಮಾನವಾಗಬಾರದೆಂದು ಅವರನ್ನು ಅರ್ಜುನನೊಡನೆ ಬ್ರಾಹ್ಮಣಪುತ್ರನನ್ನು ರಕ್ಷಿಸಲಿಕ್ಕೆ ಕಳುಹಿಸಲಿಲ್ಲ.)



# ಪಾರಿಜಾತ ವೃಕ್ಷವು

ಒಂದು ಸಮಯದಲ್ಲಿ ನಾರದರು ಸ್ವರ್ಗದಿಂದ ಪಾರಿಜಾತ ಪುಷ್ಪವನ್ನು ತಂದು ಕೃಷ್ಣಪರಮಾತ್ಮನಿಗೆ ಕೊಟ್ಟರು. ಪರಮಾತ್ಮನು ಅದನ್ನು ರುಕ್ಮಿಣೀದೇವಿಯರಿಗೆ ಕೊಟ್ಟನು. ಇದರಿಂದ ಸತ್ಯಭಾಮಾದೇವಿಯರು ಲೋಕದಲ್ಲಿ ಇರುವ ಹೆಂಗಸರ ಸ್ವಭಾವವನ್ನು ತಿಳಿಸುತ್ತಾ ತುಂಬಾ ಕೋಪಿಸಿಕೊಂಡಂತೆ ನಟನೆ ಮಾಡಿದರು. ಆಗ ಪರಮಾತ್ಮನು ನಿನಗೆ ಪಾರಿಜಾತದ ಮರವನ್ನೇ ತಂದುಕೊಡುವೆನು ಎಂದು ಹೇಳಿ ಸಮಾಧಾನಪಡಿಸಿದನು. ತರುವಾಯ ಸತ್ಯಭಾಮಾದೇವಿಯರಿಂದ ಸಹಿತನಾಗಿ ನಾರದರಿಗೆ ಮನೆಯಲ್ಲಿ ಭೋಜನ ಮಾಡಿಸಿದನು.

ತರುವಾಯ ನಾರದರು ಪರಮಾತ್ಮನೊಡನೆ 'ನಾನು ಸ್ವರ್ಗಕ್ಕೆ ಹೋಗಿದ್ದೆನು. ಆ ಸ್ವರ್ಗದಿಂದ ತಂದಿದ್ದ ಪಾರಿಜಾತ ಪುಷ್ಪವನ್ನು ನಿನಗೆ ನಾನು ಕೊಟ್ಟಿರುವೆನು. ಆ ಹೂವು ದೇವತೆಗಳಿಂದ ಭೋಗ್ಯವಾದದ್ದು. ಆ ವೃಕ್ಷವು ಶಚಿಗೆ ತುಂಬಾ ಇಷ್ಟವಾದದ್ದು. ಆ ಮರವನ್ನು ನಿತ್ಯವೂ ಪೂಜಿಸುತ್ತಾ ಇದ್ದರೆ ಸೌಭಾಗ್ಯವನ್ನು ಉಂಟುಮಾಡುವುದು. ಅದಿತಿದೇವಿಯು ಪುಣ್ಯ ಎಂಬ ವ್ರತವನ್ನು ಮಾಡುವುದಕ್ಕಾಗಿ ಕಶ್ಯಪರು ಆ ಮರವನ್ನು ಸೃಷ್ಟಿಮಾಡಿದರು. ಆ ಮರದಲ್ಲಿ ಸರ್ವಾಭೀಷ್ಟವನ್ನು ಕೊಡುವ ಯಾವಾಗಲೂ ವಾಸನೆಯಿಂದ ಯುಕ್ತವಾಗಿರುವ ಪುಷ್ಪಗಳಿರುವುವು. ಅದರಲ್ಲಿ ಬಹುರೂಪವುಳ್ಳ ಅನೇಕ ಪುಷ್ಪಗಳಿರುವುವು. ಮಂದಾರವೃಕ್ಷದಿಂದ ಸಾರವನ್ನು ತೆಗೆದು ಕಶ್ಯಪರು ಈ ಮರವನ್ನು ಮಾಡಿರುವರು. ಆದುದರಿಂದ ಇದು ಮಂದಾರ ವೃಕ್ಷಕ್ಕಿಂತಲೂ ಶ್ರೇಷ್ಠವಾಗಿರುವುದು. ಅದಿತಿಯು ಕಶ್ಯಪರನ್ನು ಆ ಪಾರಿಜಾತ ವೃಕ್ಷದಲ್ಲಿ ಬಂಧಿಸಿ ಪುಣ್ಯಕ್ಕಾಗಿಯೂ ಸೌಭಾಗ್ಯಕ್ಕಾಗಿಯೂ ನನಗೆ ದಾನ ಮಾಡಿದಳು. ಪಾರಿಜಾತ ಹೂವಿನ ಮಾಲೆಯನ್ನು ಕಶ್ಯಪರ ಕುತ್ತಿಗೆಗೆ ಹಾಕಿ ಕಶ್ಯಪರನ್ನು ನನಗೆ ದಾನ ಮಾಡಿದಳು. ಆಮೇಲೆ ಕಶ್ಯಪರಿಗೆ ಪ್ರತಿನಿಧಿಯಾಗಿ ಬೇರೆ ದಾನವನ್ನು ಕೊಟ್ಟು ಅವರನ್ನು ಬಿಡಿಸಿಕೊಂಡಳು. ಅದೇರೀತಿಯಾಗಿ ಶಚೀದೇವಿಯೂ ಇಂದ್ರದೇವರನ್ನು ದಾನಮಾಡಿರುವರು. ರೋಹಿಣೀದೇವಿಯು ಚಂದ್ರನನ್ನು, ಋದ್ಧಿದೇವಿಯು ಕುಬೇರನನ್ನು ಪಾರಿಜಾತವೃಕ್ಷ ಸಹಿತವಾಗಿ ದಾನಮಾಡಿ ಪ್ರತಿನಿಧಿಯನ್ನು ಕೊಟ್ಟು ಬಿಡಿಸಿಕೊಂಡಿರುವರು. ಈರೀತಿಯಾಗಿ ಪಾರಿಜಾತವೃಕ್ಷ ಸಹಿತವಾಗಿ ಪತಿಯನ್ನು ದಾನಮಾಡುವುದು. ಪತಿಗೆ ಪ್ರತಿನಿಧಿಯನ್ನು ಕೊಟ್ಟು ಬಿಡಿಸಿಕೊಳ್ಳುವುದು

1. ಹ.ವಂ.ವಿ.ಪ. ಅ–67 ರಿಂದ 73

ಸಂಪ್ರದಾಯವಾಗಿ ಬಂದಿರುತ್ತದೆ. ಈರೀತಿಯಾಗಿ ಪಾರಿಜಾತವೃಕ್ಷವು ಸೌಭಾಗ್ಯಕ್ಕೆ ಕಾರಣವಾಗಿರುವುದು. ಗಂಗೆಯ ಮೇಲೆ ಹುಟ್ಟಿದ ಕಾರಣ ಈ ಮರಕ್ಕೆ ಪಾರಿಜಾತ ಎಂದು ಹೆಸರು. ಬಹುಮಾನ ಮಾಡಲಿಕ್ಕೆ ಯೋಗ್ಯಗಳಾದ ಕಾರಣ ಮಂದಾರ ಎಂದು ಹೆಸರುಳ್ಳ ಪುಷ್ಪಗಳನ್ನು ಧರಿಸಿರುವ ಕಾರಣ ಮಂದಾರವೆಂದೂ ಕರೆಯಲ್ಪಡುವುದು. ಇದು ಯಾವ ಮರವೆಂದು ಜನರು ತಿಳಿಯುವುದಿಲ್ಲ. ಇದರಿಂದ ಇದಕ್ಕೆ ಕೋವಿದಾರ ಎಂದೂ ಹೆಸರಿರುವುದು. ಮಂದಾರ ಕೋವಿದಾರ ಪಾರಿಜಾತ ಎಂಬ ಮೂರು ಹೆಸರುಗಳಿಂದ ಶೋಭಿಸುತ್ತಿರುವ ಆ ಮರದ ಪುಷ್ಪವನ್ನೇ ನಾನು ತಂದುಕೊಟ್ಟಿರುವೆನು' ಎಂದು ಹೇಳಿದರು.

ತರುವಾಯ ಸ್ವರ್ಗಕ್ಕೆ ಹೊರಟಿರುವ ನಾರದರೊಡನೆ ಕೃಷ್ಣಪರಮಾತ್ಮನು ''ನೀವು ಸ್ವರ್ಗಕ್ಕೆ ಹೋದವರು. ಇಂದ್ರದೇವರನ್ನು ಬಹುಮಾನ ಮಾಡಿ ಅವ ರೊಡನೆ ನನ್ನದೊಂದು ಮಾತನ್ನು ಹೇಳಬೇಕು. 'ಕಶ್ಯಪರು ಸೃಷ್ಟಿ ಮಾಡಿರುವ ಸೌಭಾಗ್ಯಪ್ರದವಾದ ಪಾರಿಜಾತವೃಕ್ಷವನ್ನು ಕೇಳಿ ನನ್ನ ಪತ್ನಿಯರೂ ಅಪೇಕ್ಷಿಸುತ್ತಾರೆ. ಪುಣ್ಯ ಎಂಬ ವ್ರತವನ್ನು ಮಾಡುವುದಕ್ಕಾಗಿ ಅಪೇಕ್ಷಿಸುತ್ತಾರೆ. ಆ ವ್ರತವನ್ನು ಮಾಡಿಯಾದ ಮೇಲೆ ಪುನಃ ಸ್ವರ್ಗಕ್ಕೇನೇ ಆ ಮರವನ್ನು ತೆಗೆದುಕೊಂಡು ಹೋಗಬಹುದು'. ಈರೀತಿಯಾಗಿ ನೀವು ಇಂದ್ರದೇವರೊಡನೆ ಹೇಳಬೇಕು. ಇಂದ್ರ ದೇವರು ನನಗೆ ಪಾರಿಜಾತವೃಕ್ಷವನ್ನು ಕೊಡುವಂತೆ ನೀವು ಪ್ರಯತ್ನಮಾಡಬೇಕು' ಎಂದು ಲೋಕದ ಜನರನ್ನು ಅನುಕರಣೆ ಮಾಡುತ್ತಾ ಹೇಳಿದನು.

ಆಗ ನಾರದರು ಪರಮಾತ್ಮನ ಮಾತಿಗೆ ಅನುಸಾರವಾಗಿ 'ಭಗವಂತನೇ! ನಾನು ಹೋಗಿ ಈ ಮಾತನ್ನು ಹೇಳುತ್ತೇನೆ. ಆದರೆ ದೇವೇಂದ್ರನು ಎಷ್ಟು ಮಾತ್ರಕ್ಕೂ ಆ ಮರವನ್ನುಕೊಡಲಾರನು. ಮಂದರ ಪರ್ವತದಿಂದ ರುದ್ರದೇವರೇ ಪಾರಿಜಾತ ವೃಕ್ಷವು ಬೇಕೆಂದು ಹೇಳಿ ಕಳುಹಿಸಿದರು. ಆಗ ಇಂದ್ರನೇ ರುದ್ರದೇವರಿದ್ದಲ್ಲಿಗೆ ಹೋಗಿ 'ಅದು ಶಚಿಯ ಕ್ರೀಡಾವೃಕ್ಷವು. ಅದನ್ನು ಬಿಟ್ಟುಬಿಡಬೇಕು' ಎಂದು ಯಾಚನೆ ಮಾಡಿಕೊಂಡನು. ಆಗ ರುದ್ರದೇವರು ಹಾಗೆಯೇ ಆಗಲಿ ಎಂದು ಹೇಳಿ ಆ ಮರವನ್ನು ಬಿಟ್ಟುಬಿಟ್ಟರು. ತೆಗೆದುಕೊಂಡು ಹೋಗಲಿಲ್ಲ. ಆಮೇಲೆ ರುದ್ರದೇವರು ಪಾರ್ವತೀದೇವಿಯ ಪ್ರೀತಿಗಾಗಿ ಮಂದರಪರ್ವತದಲ್ಲಿ ಇನ್ನೂರು ಮೈಲು ವಿಸ್ತೀರ್ಣವಾದ ಪಾರಿಜಾತವೃಕ್ಷಗಳ ವನವನ್ನೇ ಸೃಷ್ಟಿಮಾಡಿದರು. ಆ ಪರ್ವತದಲ್ಲಿ ಸೂರ್ಯನ ಪ್ರಕಾಶವು ಪ್ರವೇಶಿಸುವುದಿಲ್ಲ. ಚಂದ್ರನ ಕಿರಣವೂ ಅತಿತಣ್ಣಗಾಗಿ ಇರುವುದಿಲ್ಲ. ಅತಿತಣ್ಣಗಾದ ಗಾಳಿಯೂ ಪ್ರವೇಶಿಸುವುದಿಲ್ಲ. ಅಲ್ಲಿ ಶೀತೋಷ್ಣಗಳು

ಪಾರ್ವತೀದೇವಿಯ ಇಚ್ಛಾನುಸಾರವಾಗಿ ಇರುತ್ತವೆ. ರುದ್ರದೇವರ ತೇಜಸ್ಸಿನಿಂದ ಆ ವನವು ಸ್ವಯಂಪ್ರಕಾಶಮಾನವಾಗಿರುವುದು. ಸಪರಿವಾರರಾದ ರುದ್ರದೇವರನ್ನೂ ನನ್ನನ್ನೂ ಬಿಟ್ಟು ಮತ್ತೆ ಯಾರೂ ಆ ದಿವ್ಯವನಕ್ಕೆ ಹೋಗುವವರಿಲ್ಲ. ಅಲ್ಲಿ ಪಾರಿಜಾತಮರಗಳು ಸರ್ವಸ್ಥಳಗಳಲ್ಲಿ ಬೇಕಾದ ರತ್ನಗಳನ್ನು ಸುರಿಸುತ್ತವೆ. ರುದ್ರದೇವರ ಗಣಗಳು ರುದ್ರದೇವರ ಆಜ್ಞೆಯಿಂದ ಅವುಗಳನ್ನು ಅನುಭವಿಸುತ್ತವೆ. ಅಂಧಕ ಎಂದು ಹೆಸರುಳ್ಳ ಬಲಿಷ್ಠನಾದ ರಾಕ್ಷಸನು ಅಹಂಕಾರದಿಂದ ಆ ವನಕ್ಕೆ ಹೋದನು. ವೃತ್ರಾಸುರನಿಂದಲೂ ಹತ್ತುಪಾಲು ಬಲಿಷ್ಠನಾದ ಅವನನ್ನು ರುದ್ರ ದೇವರು ಕೊಂದುಹಾಕಿರುವರು. ಈರೀತಿಯಾಗಿ ಇಂದ್ರದೇವರು ಪಾರಿಜಾತ ಮರವನ್ನು ರುದ್ರದೇವರಿಗೂ ಕೊಡಲಿಲ್ಲ. ಅದು ಯಾವಾಗಲೂ ಶಚೀದೇವಿಗೆ ತುಂಬಾ ಪ್ರಿಯವಾದದ್ದು. ಇಂದ್ರನಿಗೂ ಇಷ್ಟವಾದದ್ದು. ಅದನ್ನು ನಿನಗೆ ಕೊಡ ಲಾರನು' ಎಂದು ಹೇಳಿದರು.

ಅದಕ್ಕೆ ಕೃಷ್ಣಪರಮಾತ್ಮನು 'ನಾರದರೇ! ಶಚಿಯ ಹೆಸರನ್ನು ಹೇಳಲು ರುದ್ರದೇವರು ಪಾರಿಜಾತ ಮರವನ್ನು ಬಿಟ್ಟದ್ದು ನ್ಯಾಯವಾಗಿದೆ. ಏಕೆಂದರೆ ಅವರು ಎಲ್ಲರಿಗೂ ದೊಡ್ಡವರು. ಆ ಮಹತ್ವಕ್ಕೆ ಸರಿಯಾಗಿ ಅವರು ನಡೆದುಕೊಂಡರು. ನಾನು ಇಂದ್ರನಿಗೆ ತಮ್ಮನಾಗಿ ಅವತರಿಸಿವೆನಷ್ಟೆ. ಆದುದರಿಂದ ತಮ್ಮನಾದ ಕಾರಣ ಜಯಂತನಂತೆ ಆದರಕ್ಕೆ ಪಾತ್ರನು. ನೀವು ಸರ್ವಪ್ರಕಾರದಿಂದಲೂ ಪ್ರಯತ್ನವನ್ನು ಮಾಡಿರಿ. ನಾನು ಸತ್ಯಭಾಮೆಯೊಡನೆ ಸ್ವರ್ಗಲೋಕದಿಂದ ಇಲ್ಲಿಗೆ ಪಾರಿಜಾತ ಮರವನ್ನು ತರುತ್ತೇನೆ ಎಂದು ಪ್ರತಿಜ್ಞೆಯನ್ನು ಮಾಡಿಯಾಯಿತು. ಆ ಪ್ರತಿಜ್ಞೆಯು ಸುಳ್ಳಾಗಬಾರದು. ನಾನು ಇಷ್ಟರವರೆಗೆ ಸುಳ್ಳು ಹೇಳಲಿಕ್ಕೆ ಆರಂಭಿಸಿ ಲೋಕವೇ ಹಾಳಾಗಬಾರದು. ದೇವತೆಗಳೋ ಗಂಧರ್ವರೋ ರಾಕ್ಷಸರೋ ಯಕ್ಷರೋ ಸರ್ಪಗಳೋ ನನ್ನ ಪ್ರತಿಜ್ಞೆಯನ್ನು ಭಂಗಗೊಳಿಸಲಿಕ್ಕೆ ಸಮರ್ಥರಾಗಲಾರರು. ನೀವು ಎಷ್ಟು ಕೇಳಿಕೊಂಡರೂ ಇಂದ್ರನು ಪಾರಿಜಾತಮರವನ್ನು ನೀನು ಕೊಡದೆ ಇರುವುದಾದರೆ ಶಚಿಯು ಗಂಧವನ್ನು ಹಚ್ಚಿರುವ ಅವನ ಎದೆಗೆ ಗದೆಯಿಂದ ಬಡೆಯುವೆನು ಎಂದು ಹೇಳಿದನೆಂದು ತಿಳಿಸಬೇಕು. ನಾನಂತೂ ಪಾರಿಜಾತವನ್ನು ತರಲಿಕ್ಕೆ ಹೋಗುವುದು ನಿಶ್ಚಯವಾದದ್ದು' ಎಂದು ಹೇಳಿದನು.

ತರುವಾಯ ನಾರದರು ಸ್ವರ್ಗಕ್ಕೆ ಹೋದರು. ಅಲ್ಲಿ ದೇವತೆಗಳೂ ಋಷಿಗಳೂ ರಾಜರೂ ಎಲ್ಲರೂ ಬಂದು ಸೇರಿದ್ದರು. ವಿಶೇಷವಾಗಿ ಸಂಭ್ರಮದಿಂದ ರುದ್ರ ದೇವರಿಗೆ ಉತ್ಸವವನ್ನು ಮಾಡಿದರು. ರುದ್ರದೇವರು ಆ ಉತ್ಸವವನ್ನು ತಾನು

ಪ್ರೀತಿಯಿಂದ ಸ್ವೀಕರಿಸಿದರು. ಆಮೇಲೆ ಅವರು ಹೊರಟುಹೋಗಲು ಎಲ್ಲಾ ರಾಜರೂ ಹೊರಟುಹೋದರು. ದೇವತೆಗಳೂ ಇಂದ್ರದೇವರಿಂದ ಸತ್ಕೃತರಾಗಿ ತಮ್ಮ ತಮ್ಮ ಸ್ಥಾನಕ್ಕೆ ಹೋದರು.

ತರುವಾಯ ಎಲ್ಲರೂ ಹೊರಟುಹೋದಮೇಲೆ ತನ್ನ ಸಭಿಕರಿಂದ ಸಹಿತರಾಗಿ ಕೂತಿದ್ದ ಇಂದ್ರದೇವರ ಬಳಿಗೆ ನಾರದರು ಹೊರಟುಹೋದರು. ಆಗ ಇಂದ್ರ ದೇವರು ಎದ್ದು ನಾರದರನ್ನು ಸತ್ಕರಿಸಿದರು. ಅವರಿಗೆ ದರ್ಭೆಯಿಂದ ಕೂಡಿದ ಆಸನವನ್ನು ಕೊಟ್ಟರು. ತರುವಾಯ ಮಹಾತೇಜಸ್ವಿಯಾದ ನಾರದರು ಇಂದ್ರ ದೇವರೊಡನೆ 'ದೇವೇಂದ್ರ! ನಾನು ಕೃಷ್ಣಪರಮಾತ್ಮನ ದೂತನಾಗಿ ಬಂದಿರುವೆನು. ಒಂದು ಕಾರ್ಯಕ್ಕಾಗಿ ಆ ಮಹಾನುಭಾವನು ನನ್ನನ್ನು ಕಳುಹಿಸಿರುವನು' ಎಂದು ಹೇಳಿದರು. ಆಗ ಇಂದ್ರದೇವರು 'ಪುರುಷಶ್ರೇಷ್ಠನಾದ ಕೃಷ್ಣನು ಏನು ಹೇಳಿರು ವನು? ಬಹುಕಾಲದ ಮೇಲೆ ಮಹಾನುಭಾವನಾದ ಕೃಷ್ಣನಿಗೆ ನನ್ನ ಸ್ಮರಣೆಯು ಉಂಟಾಯಿತು' ಎಂದರು. ನಾರದರು 'ದೇವೇಂದ್ರ! ನಿನ್ನ ತಮ್ಮನಾದ ಕೃಷ್ಣನನ್ನು ನೋಡಲಿಕ್ಕೆ ನಾನು ದ್ವಾರಕಾಪಟ್ಟಣಕ್ಕೆ ಹೋದೆನು. ರೈವತಪರ್ವತದಲ್ಲಿ ರುಕ್ಮಿಣೀ ದೇವಿಯಿಂದ ಸಹಿತನಾಗಿದ್ದ ಆ ಕೃಷ್ಣಪರಮಾತ್ಮನನ್ನು ನೋಡಿದೆನು. ಕೃಷ್ಣನ ಪತ್ನಿಯರಿಗೆ ಆಶ್ಚರ್ಯವನ್ನು ಉಂಟುಮಾಡುವುದಕ್ಕಾಗಿ ಕೃಷ್ಣನಿಗೆ ಒಂದು ಪಾರಿಜಾತ ಪುಷ್ಪವನ್ನು ಕೊಟ್ಟೆನು.

ಆ ಹೂವನ್ನು ನೋಡಿ ಅವನ ಹೆಂಡತಿಯರೆಲ್ಲರೂ ಬಹು ಆಶ್ಚರ್ಯ ಹೊಂದಿದರು. ನಾನು ಅವರಿಗೆ ಆ ಪುಷ್ಪಗಳ ಗುಣಗಳನ್ನು ವಿವರಿಸಿ ಹೇಳಿದೆನು. ಕಶ್ಯಪರು ಆ ವೃಕ್ಷವನ್ನು ಸೃಷ್ಟಿಮಾಡಿದ ವಿಷಯವನ್ನು ಆ ಪುಷ್ಪದ ಮಾಲೆಯನ್ನು ಹಾಕಿ ಕಶ್ಯಪರನ್ನು ಅದಿತಿಯು ಪುಣ್ಯ ಎಂದು ವ್ರತವಾಗಿ ದಾನಮಾಡಿದ್ದನ್ನು ಅವರ ಪತ್ನಿಯರು ದಾನಮಾಡಿದನ್ನು, ಆಮೇಲೆ ಸರಿಯಾದ ಪ್ರತಿನಿಧಿಯನ್ನು ಕೊಟ್ಟು ತಮ್ಮ ಗಂಡಂದಿರನ್ನು ಬಿಡಿಸಿಕೊಂಡ ಕಥೆಯನ್ನು ಹೇಳಿದೆನು. ಅದನ್ನು ಕೇಳಿ ಕೃಷ್ಣನ ಪತ್ನಿಯರಲ್ಲಿ ಸತ್ಯಭಾಮೆಯೆಂದು ಪ್ರಸಿದ್ಧಳಾದವಳು. ಪುಣ್ಯಕ ಎಂಬ ಆ ವ್ರತವನ್ನು ಮಾಡಬೇಕೆಂದು ಅಪೇಕ್ಷಿಸಿ ತನ್ನ ಗಂಡನೊಡನೆ ಕೇಳಿಕೊಂಡಳು. ಆಗ ನಿನ್ನ ತಮ್ಮನು ಅವಳೊಡನೆ ಆಗಲಿ ಎಂದು ಪ್ರತಿಜ್ಞೆ ಮಾಡಿದನು. ತರುವಾಯ ಕೃಷ್ಣನು ನನ್ನೊಡನೆ ಪಾರಿಜಾತಮರವನ್ನು ತಾನು ತರಬೇಕೆಂದು ಹೇಳಿಕೊಂಡನು. 'ದೇವೇಂದ್ರ! ನಿನ್ನ ತಮ್ಮನ ಪತ್ನಿಯ ಮನಸ್ಸಿನ ಅಭಿಲಾಷೆಯು ಸಫಲವಾಗಲಿ. ನನ್ನ ಪ್ರಭಾವದಿಂದ ಮನುಷ್ಯರೂ ದೇವಲೋಕದ ಮಂಗಳಕರವಾದ ಮರವನ್ನು ನೋಡಲಿ' ಎಂದು ನಿನಗೆ ತಿಳಿಸಲು ನನ್ನೊಡನೆ ಹೇಳಿರುವನು' ಎಂದರು.

ಈರೀತಿಯಾಗಿ ಕೃಷ್ಣಪರಮಾತ್ಮನು ಹೇಳಿಕಳುಹಿಸಿರುವ ಮಾತನ್ನು ಕೇಳಿ ಇಂದ್ರದೇವರು ನಾರದರೊಡನೆ 'ನಾರದರೇ! ನೀವು ಆಸನದಲ್ಲಿ ಕೂತುಕೊಳ್ಳಿರಿ ಆಮೇಲೆ ನಾನು ಹೇಳಿ ಕಳುಹಿಸುವ ಮಾತನ್ನು ಹೇಳುತ್ತೇನೆ' ಎಂದು ಹೇಳಿ ನಾರದರು ಕೂತಮೇಲೆ ತಾನೂ ಕೂತುಕೊಂಡು ''ನಾರದರೇ! ಕೃಷ್ಣನ ಹತ್ತಿರ ನೀವು ಕುಶಲಪ್ರಶ್ನೆಯನ್ನು ಮಾಡಿ ನನ್ನ ಮಾತನ್ನು ಹೇಳಬೇಕು. 'ನೀನು ನನ್ನ ತಮ್ಮನಾದ ಕಾರಣ ನನ್ನ ಅನಂತರದಲ್ಲಿ ನೀನು ಎಲ್ಲದಕ್ಕೂ ಯಜಮಾನನು. ಪಾರಿಜಾತ ವೃಕ್ಷಗಳೂ ಇತರ ರತ್ನಗಳೂ ನಿನಗೆ ಸೇರಿದವುಗಳೇ. ಆದರೆ ನೀನೀಗ ಭೂಭಾರ ವನ್ನು ಪರಿಹರಿಸಲು ಭೂಮಿಗೆ ಹೋಗಿರುವಿ. ಕಾರ್ಯಸಿದ್ಧಿಗಾಗಿ ಮನುಷ್ಯ ನಾಗಿರುವಿ. ನೀನು ಪ್ರತಿಜ್ಞೆಯನ್ನು ಮುಗಿಸಿಕೊಂಡು ಸ್ವರ್ಗಕ್ಕೆ ಬಂದಮೇಲೆ ನಿನ್ನ ಪತ್ನಿಯ ಅಭೀಷ್ಟವನ್ನು ನಾನು ನೆರವೇರಿಸುವೆನು. ಸ್ವರ್ಗದಲ್ಲಿ ಇರುವ ರತ್ನಗಳನ್ನು ಭೂಮಿಗೆ ತೆಗೆದುಕೊಂಡು ಹೋಗಬಾರದು. ಅದೂ ಸ್ವಲ್ಪ ಕಾರ್ಯಕ್ಕಾಗಿ ತೆಗೆದುಕೊಂಡು ಹೋಗಬಾರದು. ನಾನು ದೇವತೆಗಳ ಮರ್ಯಾದೆಯನ್ನು ತಪ್ಪಿ ನಡೆದರೆ ಪ್ರಜೇಶ್ವರರು ಏನು ಹೇಳುವರು? ಬ್ರಹ್ಮದೇವರೂ ಅವರ ಮಕ್ಕಳೂ ಮೊಮ್ಮಕ್ಕಳೂ ಸರ್ವಕಾರ್ಯಗಳಿಗೂ ನಿಯಮಗಳನ್ನು ಏರ್ಪಡಿಸಿರುವರು. ಬ್ರಹ್ಮದೇವರು ಮಾಡಿರುವ ಮಾರ್ಗವನ್ನು ತಪ್ಪಿ ನಡೆದರೆ ನನಗೆ ಬ್ರಹ್ಮದೇವರು ಶಾಪವನ್ನು ಕೊಡಬಹುದು. ನಾವು ಧರ್ಮ ಮರ್ಯಾದೆಯನ್ನು ಮೀರಿದರೆ ದೈತ್ಯರೂ ದೈತ್ಯಪಕ್ಷದವರೂ ಮೀರುವರು. ಮಾತ್ರವಲ್ಲದೆ ಒಂದು ಹೆಂಗಸಿನ ನಿಮಿತ್ತವಾಗಿ ಇಲ್ಲಿಂದ ಪಾರಿಜಾತವೃಕ್ಷವನ್ನು ತೆಗೆದುಕೊಂಡು ಹೋದರೆ ಸ್ವರ್ಗದಲ್ಲಿ ಇರುವವರೆಲ್ಲರೂ ವೈಮನಸ್ಸುವುಳ್ಳವ ರಾಗುವರು. ಮನುಷ್ಯರಿಗೆ ಬೇಕಾದ ಭೋಗಸಾಧನಗಳನ್ನು ಬ್ರಹ್ಮದೇವರು ನಿರ್ಮಿಸಿರುವರು. ನನ್ನ ತಮ್ಮನು ಅವುಗಳಿಂದಲೇ ಸಂತೋಷಪಡಲಿ.

ಸ್ವರ್ಗದಲ್ಲಿ ಇರುವ ನನ್ನ ಎಲ್ಲಾ ವಸ್ತುಗಳನ್ನೂ ಸ್ವರ್ಗಕ್ಕೆ ಬಂದ ಮೇಲೆ ಅನುಭವಿಸಲಿ. ಕೃಷ್ಣನು ಮಾಂಸಭಕ್ಷಣೆಯನ್ನು ಮಾಡಿ ಅಹಂಕಾರದಿಂದ ಧರ್ಮವನ್ನು ಬಿಟ್ಟು ಅಧರ್ಮವನ್ನೇ ಅನುಸರಿಸುತ್ತಿರುವನು. ಕೃಷ್ಣನಿಗೆ ಸ್ತ್ರೀವಶನಾಗಿರುವನೆಂದು ಅಪಕೀರ್ತಿಯೂ ಬಹಳವಾಗಿ ಲೋಕದಲ್ಲಿ ಬರಲಿಕ್ಕೆ ಇದೆ. ಸ್ವರ್ಗದಲ್ಲಿರುವ ವಸ್ತುವನ್ನು ತೆಗೆದುಕೊಂಡು ಹೋದರೆ ನನ್ನನ್ನು ಬಲಾತ್ಕಾರ ಮಾಡಿದಂತೆ ಆಗುವುದು. ಅದು ನನಗೆ ತುಂಬಾ ಅವಮಾನಕರವಾಗಿರುವುದು. ಕೃಷ್ಣನು ಬ್ರಹ್ಮದೇವರಿಂದ ನಿರ್ಮಿತಗಳಾದ ಧರ್ಮ ಅರ್ಥ ಕಾಮಗಳನ್ನು ಕ್ರಮದಿಂದ

ಅನುಭವಿಸಲಿ. ಪಾರಿಜಾತವೃಕ್ಷವನ್ನು ನಾನು ಭೂಮಿಗೆ ಕಳುಹಿಸಿಬಿಟ್ಟರೆ ಶಚಿಯನ್ನು ಆರಂಭಿಸಿ ಯಾರು ನನಗೆ ಬಹುಮಾನ ಮಾಡುವರು?

ಭೂಮಿಯಲ್ಲಿಯೇ ಪಾರಿಜಾತವೃಕ್ಷವನ್ನು ನೋಡಿ ಸ್ವರ್ಗದ ಫಲವೇ ಭೂಮಿಯಲ್ಲಿರುವ ಕಾರಣ ಸ್ವರ್ಗಕ್ಕಾಗಿ ಯಾರೂ ಪ್ರಯತ್ನ ಮಾಡಲಾರರು. ಮನುಷ್ಯರು ಪಾರಿಜಾತದ ಗುಣಗಳನ್ನು ಅನುಭವಿಸುವುದಾದರೆ ದೇವತೆಗಳಿಗೂ ಮನುಷ್ಯರಿಗೂ ವಿಶೇಷವಿಲ್ಲವೆಂದಾಗುತ್ತದೆ. ಒಬ್ಬರೂ ಸ್ವರ್ಗಕ್ಕಾಗಿ ಪ್ರಯತ್ನ ಮಾಡುವುದಿಲ್ಲ. ಒಬ್ಬರೂ ಯಜ್ಞವನ್ನು ಮಾಡುವುದಿಲ್ಲ. ಅನ್ನದಾನಾದಿಗಳನ್ನು ಮಾಡುವುದಿಲ್ಲ. ಮನುಷ್ಯರಾದವರು ಸ್ವರ್ಗವನ್ನು ಇಚ್ಛಿಸುವವರಾಗಿ ಶ್ರದ್ಧೆಯಿಂದ ಯಜ್ಞ ತಪ ಇತ್ಯಾದಿಗಳಿಂದ ನಮ್ಮನ್ನು ಸಂತೋಷಪಡಿಸುತ್ತಿರುವರು. ಪಾರಿಜಾತ ವೃಕ್ಷವು ಭೂಮಿಯಲ್ಲಿ ಇರುವುದಾದರೆ ಭೂಮಿಯೇ ಸ್ವರ್ಗದಂತೆ ಆಗುವುದರಿಂದ ಒಬ್ಬರೂ ಇದನ್ನೆಲ್ಲಾ ಮಾಡಲಾರರು. ನಾವೆಲ್ಲರೂ ತೇಜೋಹೀನರಾಗುವೆವು. ನಾವು ಇಲ್ಲಿಂದ ಕೊಡುವ ಮಳೆಯಿಂದ ಸಸ್ಯಗಳು ಬೆಳೆದು ಮನುಷ್ಯರು ಜೀವಿಸುತ್ತಾರೆ. ದಾನ ಯಜ್ಞಗಳಿಂದ ನಮ್ಮನ್ನು ಸಂತೋಷಪಡಿಸುತ್ತಾರೆ. ಪಾರಿಜಾತವೃಕ್ಷದಿಂದ ಭೂಮಿಯಲ್ಲಿರುವ ಮನುಷ್ಯರಿಗೆ ಹಸಿವೆದಾಹಗಳು ಇಲ್ಲದೆ ಹೋದರೆ ರೋಗವಾರ್ಧಕ್ಯಮರಣಗಳು ಇಲ್ಲದೆ ಅವರು ಯಾಕೆ ಸ್ವರ್ಗಕ್ಕೆ ಪ್ರಯತ್ನ ಮಾಡುವರು? ಆದುದರಿಂದ ಎಷ್ಟು ಮಾತ್ರಕ್ಕೂ ಪಾರಿಜಾತವೃಕ್ಷವನ್ನು ತೆಗೆದು ಕೊಂಡು ಹೋಗುವುದು ಸಾಧ್ಯವಲ್ಲ ಎಂದು ಕೃಷ್ಣನೊಡನೆ ಹೇಳಬೇಕು. ನನ್ನ ತಮ್ಮನು ಇನ್ನೆಲ್ಲಾ ವಿಚಾರಿಸಿ ಹೇಗೆ ಸಂತೋಷಪಡುವನೋ ಹಾಗೆ ಮಾಡಬೇಕು. ಮುತ್ತಿನ ಸರಗಳನ್ನು ರತ್ನಗಳನ್ನು ಗಂಧಗಳನ್ನೂ ವಸ್ತ್ರಗಳನ್ನೂ ಕೃಷ್ಣನ ಹೆಂಡತಿಗಾಗಿ ದ್ವಾರಕೆಗಾಗಿ ತೆಗೆದುಕೊಂಡು ಹೋಗಿರಿ. ಮನುಷ್ಯರಿಗೆ ಯೋಗ್ಯವಸ್ತುಗಳನ್ನು ಕೃಷ್ಣನು ಎಷ್ಟನ್ನು ಇಚ್ಛಿಸುತ್ತಾನೋ ಅಷ್ಟನ್ನೂ ತೆಗೆದುಕೊಂಡು ಹೋಗಿರಿ. ಸ್ವರ್ಗವನ್ನೇ ಅಪಹಾರ ಮಾಡುವುದು ಸರಿಯಲ್ಲ. ಬೇಕಾದ ರತ್ನಗಳನ್ನೂ ಆಭರಣಗಳನ್ನೂ ಕೊಡುವೆನು. ದೇವತೆಗಳಿಗೆ ಪ್ರಿಯವಾದ ಪಾರಿಜಾತ ವೃಕ್ಷವನ್ನು ಮಾತ್ರ ಎಷ್ಟು ಮಾತ್ರಕ್ಕೂ ಕೊಡಲಾರೆನು' ಎಂದು ಹೇಳಿದರು.

ಆಗ ನಾರದರು 'ದೇವೇಂದ್ರ! ನಾನು ಅವಶ್ಯವಾಗಿ ಹಿತವಚನವನ್ನು ಹೇಳಬೇಕು. ನನಗೆ ನಿನ್ನಲ್ಲಿ ಬಹುಮಾನವಿದೆ. ನಾನು ನಿನ್ನ ಅಭಿಪ್ರಾಯವನ್ನೆಲ್ಲಾ ಮೊದಲೇ ತಿಳಿದವನಾಗಿ ಕೃಷ್ಣನೊಡನೆ ಎಲ್ಲವನ್ನೂ ಹೇಳಿರುವೆನು. ರುದ್ರದೇವರಿಗೂ ನೀನು ಪಾರಿಜಾತವೃಕ್ಷವನ್ನು ಕೊಟ್ಟಿಲ್ಲ ಎಂದು ತಿಳಿಸಿರುವೆನು. ಅದರ ಕಾರಣಗಳನ್ನು

ನಾನು ತಿಳಿಸಿರುವೆನು. ಆದರೆ ಅದೆಲ್ಲವೂ ಕೃಷ್ಣನ ಮನಸ್ಸಿಗೆ ಬರಲಿಲ್ಲ. ನಾನು ಏನೇನು ಹೇಳಿದರೂ ಅವನ ಮನಸ್ಸು ತಿರುಗಲಿಲ್ಲ. ಅವನು ಕೊನೆಗೆ ರೋಷವುಳ್ಳವನಾಗಿ 'ದೇವತೆಗಳೂ ಗಂಧರ್ವರೂ ರಾಕ್ಷಸರೂ ಸರ್ಪಗಳೂ ನನ್ನ ಪ್ರತಿಜ್ಞೆಯನ್ನು ತಪ್ಪಿಸಲಿಕ್ಕೆ ಸಮರ್ಥರಾಗಲಾರರು. ನಾನು ಯಾಚನೆ ಮಾಡುವಾಗಲೂ ಇಂದ್ರನು ಪಾರಿಜಾತವೃಕ್ಷವನ್ನು ಕೊಡದೆ ಇರುವುದಾದರೆ ಶಚಿಯು ಗಂಧವನ್ನು ಹಚ್ಚಿರುವ ಅವನ ಎದೆಗೆ ಗದೆಯಿಂದ ಬಡೆಯುವೆನು' ಎಂದು ಹೇಳಿರುವನು. ಈರೀತಿಯಾಗಿ ನಿನ್ನ ತಮ್ಮನ ನಿಶ್ಚಯವಿರುವುದು. ಹೇಗೆ ಮಾಡಬೇಕೋ ಹಾಗೆ ಮಾಡು. ನಿನಗೆ ನಾನು ಹಿತವನ್ನು ಹೇಳುತ್ತೇನೆ. ಕೇಳಬೇಕು. ಪಾರಿಜಾತವನ್ನು ದ್ವಾರಕಾಪಟ್ಟಣಕ್ಕೆ ತೆಗೆದುಕೊಂಡು ಹೋಗುವುದೇ ಒಳ್ಳೆಯದೆಂದು ನನಗೆ ತೋರುತ್ತದೆ' ಎಂದು ಹೇಳಿದರು.

ಇದನ್ನು ಕೇಳಿ ಇಂದ್ರದೇವರಿಗೆ ಅಸುರಾವೇಶದಿಂದ ಬಹಳ ರೋಷವುಂಟಾಯಿತು. 'ನಾರದರೇ! ನಿರಪರಾಧಿಯಾದ ಅಣ್ಣನ ವಿಷಯದಲ್ಲಿ ಕೃಷ್ಣನು ಹೀಗೆ ಮಾಡಲಿಕ್ಕೆ ಹೋದರೆ ಏನು ಮಾಡಲಿಕ್ಕೆ ಆಗುವುದು? ಅವನು ನನಗೆ ಬಹಳ ಅಪರಾಧಗಳನ್ನು ಮಾಡಿದನು. ಅದನ್ನೆಲ್ಲಾ ನಾನು ತಮ್ಮನೆಂದು ಸಹಿಸಿಕೊಂಡೆನು. ಖಾಂಡವವನದಲ್ಲಿ ಅರ್ಜುನನ ರಥವನ್ನು ನಡೆಸುತ್ತಾ ಅಗ್ನಿಯನ್ನು ಆರಿಸುತ್ತಿದ್ದ ನಾನು ಕಳುಹಿಸಿದ ಮೇಘಗಳನ್ನು ತಡೆದನು. ಗೋವರ್ಧನ ಪರ್ವತವನ್ನು ಎತ್ತಿ ಹಿಡಿದು ನಮಗೆ ಅಪ್ರಿಯವನ್ನು ಮಾಡಿದನು. ಹಾಗೆಯೇ ವೃತ್ರಾಸುರನ ಸಂಹಾರಕಾಲದಲ್ಲಿ ನಾನು ಸಹಾಯ ಮಾಡಬೇಕೆಂದು ಕೇಳಿದಾಗ ನಾನು ಎಲ್ಲರಿಗೂ ಸಮಾನನು ಎಂದು ಹೇಳಿಬಿಟ್ಟನು. ಕೊನೆಗೆ ನನ್ನ ಬಾಹುಬಲದಿಂದಲೇ ವೃತನನ್ನು ಕೊಲ್ಲಬೇಕಾಯಿತು. ದೇವಾಸುರ ಯುದ್ಧವು ಸಂಭವಿಸುವಾಗ ಅವನು ನನ್ನ ಮನಸ್ಸಿಗೆ ಬಂದರೆ ಯುದ್ಧ ಮಾಡುವನು. ಇಲ್ಲದಿದ್ದರೆ ಇಲ್ಲ. ಇದೆಲ್ಲಾ ನಿಮಗೆ ತಿಳಿದ ವಿಷಯವೇ ಆಗಿರುವುದು. ಹೆಚ್ಚಿಗೆ ಏನು ಹೇಳಲಿ. ದೈವೇಚ್ಛೆಯಿಂದ ಏನು ನಡೆಯಲಿಕ್ಕೆ ಇದೆಯೋ ಅದೆಲ್ಲವೂ ನಡೆಯಲಿ. ನನ್ನ ಎದೆಗೆ ಗದೆಯಿಂದ ಒಡೆಯಲಿಕ್ಕೆ ಉದ್ಯುಕ್ತನಾಗಿದ್ದರೆ ಶಚಿಯ ಹೆಸರನ್ನು ಹೇಳಿ ಅವನಿಗೆ ಏನು ಗುಣವಿದೆ? ನನ್ನ ತಂದೆಯೂ ತಾಯಿಯೂ ನೀರಿನಲ್ಲಿ ತಪಸ್ಸು ಮಾಡಲಿಕ್ಕೆ ಹೋಗಿರುವರು. ಇದು ಅವರ ಮಾತು ಇದ್ದರೂ ಇರಬಹುದು. ನನ್ನ ತಮ್ಮನು ಮನೋಜಯ ರಹಿತನಾದವನು. ಹೆಂಡತಿಯ ಮಾತನ್ನು ಕೇಳಿ ಅಣ್ಣನಾದ ನನಗೆ ಹೀಗೆ ಹೇಳಿರುವನು. ಸರ್ವಥಾ ರಾಜ್ಯಕ್ಕೆ ಧಿಕ್ಕಾರವಿರಲಿ. ಕೃಷ್ಣನು ಹೆಂಡತಿಯ ವಶನಾಗಿ ನನಗೆ ಹೀಗೆ ಹೇಳಿಬಿಟ್ಟನಲ್ಲ. ನಾನು ಅವನಿಗೆ ಎಷ್ಟೋ

ಉಪಕಾರವನ್ನು ಮಾಡಿರುವೆನು. ಅದನ್ನೆಲ್ಲಾ ಅವನು ಮನಸ್ಸಿಗೆ ತಂದುಕೊಳ್ಳಲೇ ಇಲ್ಲ. ಆದರೂ ನಾನು ತಮ್ಮನೆಂದು ಎಲ್ಲವನ್ನೂ ಸಹಿಸಿಕೊಂಡೇ ಇದ್ದೇನೆ. ಆಗಲಿ. ನಾರದರೇ! ನೀವು ಹೋಗಿ ನನ್ನ ಮಾತನ್ನು ಕೃಷ್ಣನೊಡನೆ ಹೇಳಿರಿ. ಶತ್ರುಗಳು ನನ್ನನ್ನು ಯುದ್ಧಕ್ಕೆ ಕರೆದಾಗ ನಾನು ಹಿಂದಿರುಗಲಾರೆನು. ನಿನಗೆ ಯುದ್ಧ ಮಾಡುವ ಇಚ್ಛೆಯಿರುವುದಾದರೆ ಬಾ. ಹೆಂಡತಿಯ ಮಾತನ್ನು ಕೇಳುವವನೇ! ನಿನ್ನ ಮನಸ್ಸಿಗೆ ಬಂದರೆ ಮೊದಲು ನೀನೇ ನನ್ನನ್ನು ಹೊಡೆ(ಬಡಿಯು). ಚಕ್ರದಿಂದಲೂ ಶಾಂರ್ಙಧನುಸ್ಸಿನಿಂದಲೂ ನಂದಕ ಖಡ್ಗದಿಂದಲೋ ಬಡಿಯು. ಗರುಡನ ಮೇಲೆ ಗಟ್ಟಿಯಾಗಿ ಕೂತುಕೊಂಡು ಬಡಿಯು. ನೀನು ಬಡಿದಮೇಲೆ ನಾನು ಶಕ್ತಿಯನ್ನು ಅನುಸರಿಸಿ ಬಡಿಯುವೆನು. ಸ್ನೇಹವು ಮಾತ್ರ ನನ್ನನ್ನು ತಡೆಯದೆ ಇರಬೇಕು. ನಾರದರೇ! ಯುದ್ಧರಂಗದಲ್ಲಿ ಕೃಷ್ಣನೊಡನೆ ಸೋತುಹೋಗದೆ ನಾನು ಪಾರಿಜಾತ ಮರವನ್ನು ಕೊಡುವುದಿಲ್ಲ. ತಮ್ಮನಾದ ಅವನು ಅಣ್ಣನಾದ ನನ್ನನ್ನು ಯುದ್ಧಕ್ಕೆ ಕರೆಯುವನಂತೆ. ಹೆಂಡತಿಯ ಮಾತನ್ನು ಕೇಳುವ ಆ ಹರಿಯನ್ನು ನಾನು ಯಾಕೆ ಸಹಿಸಬೇಕು? ಈಗಲೇ ನೀವು ಕೃಷ್ಣಪರಮಾತ್ಮನಿಂದ ರಕ್ಷಿತವಾದ ದ್ವಾರಕಾಪಟ್ಟಣಕ್ಕೆ ಹೋಗಿರಿ. ನಾನು ಜಗಳಕ್ಕೆ ಸಿದ್ಧನಾಗಿದ್ದೇನೆಂದು ತಿಳಿಸಬೇಕು. ಯುದ್ಧದಲ್ಲಿ ಸೋತುಹೋಗದೆ ಪಾರಿಜಾತದ ಎಲೆಯ ಚೂರನ್ನು ಕೂಡ ಕೊಡಲಾರೆನು ಎಂದು ತಿಳಿಸಿರಿ. ಪುನಃ ನೀವು ಕೃಷ್ಣನೊಡನೆ 'ಮಾಯೆಯಿಂದ ಮರವನ್ನು ಅಪಹರಿಸಿಕೊಂಡು ಹೋಗ ಬಾರದು. ಸರಿಯಾದ ಯುದ್ಧವೇ ನಡೆಯಲಿ. ನಿನ್ನ ಕಪಟಕ್ಕೆ ಧಿಕ್ಕಾರವಿರಲಿ' ಎಂದು ತಿಳಿಸಬೇಕು' ಎಂದು ಹೇಳಿದರು.

ಆಗ ನಾರದರು 'ದೇವೇಂದ್ರ! ಯದ್ಯಪಿ ರಾಜರೊಡನೆ ಪ್ರಿಯಮಾತುಗಳನ್ನೇ ಆಡಬೇಕು. ಆದರೂ ನಾನೀಗ ಅಪ್ರಿಯವಾಗಿದ್ದರೂ ಹಿತಕರವಾದ ಮಾತನ್ನು ಆಡುತ್ತೇನೆ. ಯಾವ ಸಂದರ್ಭದಲ್ಲಿಯೂ ನನ್ನೊಡನೆ ಏನು ಮಾಡಬೇಕು? ಏನು ಮಾಡಬಾರದು ಎಂದು ಕೇಳುತ್ತಿರುವಿ. ಆದುದರಿಂದ ಈಗಲೂ ಹೇಳಿಬಿಡುತ್ತೇನೆ. ಇಷ್ಟವಿದ್ದರೆ ಸ್ವೀಕರಿಸು. ಕೇಳದೆ ಇದ್ದರೂ ಮಿತ್ರನು ಹಿತವನ್ನು ಹೇಳಬೇಕು. ನಾವು ಒಂದು ಕಾರ್ಯವನ್ನು ಆರಂಭಿಸುವಾಗ ಯೋಚಿಸಿಕೊಂಡು ಆರಂಭಿಸಬೇಕು. ಯಾವ ಕಾರ್ಯವನ್ನು ಆರಂಭಿಸುವುದರಿಂದ ಕೊನೆಗೆ ಸಂತಾಪವುಂಟಾಗ ಬಹುದೋ ಅಂತಹ ಕಾರ್ಯವನ್ನು ಆರಂಭಿಸಲೇಬಾರದು. ನೀನು ಆರಂಭಿಸಿರುವ ಕಾರ್ಯದ ಕೊನೆಯು ಸುಖಕರವಾಗಿ ಆಗುವುದು ಎಂದು ನನಗೆ ತೋರುವುದಿಲ್ಲ. ಆ ಕೃಷ್ಣನು ಸರ್ವೋತ್ತಮನು. ಬ್ರಹ್ಮಾದಿಗಳನ್ನೆಲ್ಲಾ ಅವನೇ ಸೃಷ್ಟಿಮಾಡಿದವನು.

ಅವನು ತನ್ನ ಇಚ್ಛೆಯಿಂದ ಅಂತಿಮ ಪ್ರಾರ್ಥನೆಯಿಂದ ಅದಿತಿಪುತ್ರನಾಗಿ ಅವತರಿಸಿರುವನು. ಅವನು ಎಲ್ಲಾ ದೇವತೆಗಳಿಗೂ ಪೂಜ್ಯನು. ಅವನು ಒಂದೊಂದು ಯುಗದಲ್ಲಿ ಅವತರಿಸುವನು. ಹಿರಣ್ಯಕಶಿಪು ಹಿರಣ್ಯಾಕ್ಷ ಇತ್ಯಾದಿ ಅಸುರರನ್ನು ಸಂಹರಿಸಿರುವನು. ನಿನ್ನ ಪ್ರೀತಿಗಾಗಿಯೇ ಅನೇಕ ದೈತ್ಯರನ್ನು ಸಂಹರಿಸಿ ರುವನು. ಈಗಲೂ ಲೋಕದ ಹಿತಕ್ಕಾಗಿ ಮನುಷ್ಯಲೋಕದಲ್ಲಿ ವಾಸಮಾಡು ತ್ತಿರುವನು. ಅವನು ಅವಶ್ಯವಾಗಿ ಪಾರಿಜಾತ ವೃಕ್ಷವನ್ನು ಅಪಹರಿಸಿಕೊಂಡು ಹೋಗುವನು. ನಾನು ಸತ್ಯವನ್ನೇ ಹೇಳುವೆನು. ತಮ್ಮನ ಮೇಲಿನ ಸ್ನೇಹದಿಂದ ನೀನು ಯುದ್ಧ ಮಾಡುವುದಿಲ್ಲ. ಕೃಷ್ಣನೂ ಅಣ್ಣನಾದ ನಿನಗೆ ಅತ್ಯಂತವಾಗಿ ಬಡಿಯಲಾರನು. ನನ್ನ ಮಾತನ್ನು ಕೇಳದೆ ಇರುವುದಾದರೂ ನೀತಿಯನ್ನು ತಿಳಿದ ನಿನಗೆ ಹಿತವನ್ನು ಮಂತ್ರಿಗಳೊಡನೆ ಕೇಳುವವನಾಗು' ಎಂದು ಹೇಳಿದರು. ಇಂದ್ರದೇವರು 'ನಾರದರೇ! ಈ ಪ್ರಕಾರವಾಗಿ ಕೃಷ್ಣನ ಪ್ರಭಾವವನ್ನು ಹೇಳುವಿರಲ್ಲಾ! ಇದು ಸರಿಯೇ! ಇದನ್ನು ನಾನು ಅನೇಕ ಬಾರಿ ಕೇಳಿರುವೆನು. ಈಪ್ರಕಾರವಾಗಿ ಮಹಾನುಭಾವನಾದ ಕಾರಣವೇ ಆ ಕೃಷ್ಣನಿಗೆ ನಾನು ಪಾರಿಜಾತವನ್ನು ಕೊಡುವುದಿಲ್ಲ. ಮಹಾಪ್ರಭಾವ ವುಳ್ಳವರು ಯಾವಾಗಲೂ ಸಹನಗುಣವುಳ್ಳವರಾಗಿರುತ್ತಾರೆ. ಮಹಾನುಭಾವನಾದ ಕೃಷ್ಣನು ಅಲ್ಪಕಾರ್ಯಕ್ಕಾಗಿ ಅಣ್ಣನೊಡನೆ ವಿರೋಧವನ್ನು ಮಾಡುವುದು ಸರಿಯಲ್ಲ. ನನ್ನ ತಾಯಿಗೆ ವರಕೊಟ್ಟಂತೆ ಅಣ್ಣನಾದ ನನ್ನನ್ನು ಬಹುಮಾನಿಸಬೇಕು. ಹೇಗೆ ತನ್ನ ಇಚ್ಛೆಯಿಂದಲೇ ಉಪೇಂದ್ರನಾಗಿ ಅವತರಿಸಿದನೋ ಹಾಗೆಯೇ ಅಣ್ಣನಾದ ನನಗೆ ಬಹುಮಾನವನ್ನು ಮಾಡಬೇಕು? ಇತ್ಯಾದಿ ರೀತಿಯಾಗಿ ಹೇಳಿದರು. ಇಂದ್ರದೇವರ ನಿಶ್ಚಯವನ್ನು ನೋಡಿ ನಾರದರು ದ್ವಾರಕಾಪಟ್ಟಣಕ್ಕೆ ಬಂದು ಸೇರಿದರು.

ನಾರದರು ದ್ವಾರಕಾಪಟ್ಟಣದಲ್ಲಿ ತನ್ನ ಮನೆಯಲ್ಲಿ ಸತ್ಯಭಾಮಾದೇವಿಯ ರೊಡನೆ ಸುಖವಾಗಿ ಕೂತಿದ್ದ ಯೋಚನೆ ಮಾಡುವಂತೆ ನಟನೆ ಮಾಡುತ್ತಿದ್ದ ಕೃಷ್ಣಪರಮಾತ್ಮನನ್ನು ನೋಡಿದರು. ಅವನಿಂದ ಸತ್ಕೃತರಾಗಿ ಎಲ್ಲಾ ವಿಷಯವನ್ನೂ ತಿಳಿಸಿದರು. ಅದನ್ನೆಲ್ಲಾ ಕೃಷ್ಣಪರಮಾತ್ಮನು ಕೇಳಿ ನಾರದರೊಡನೆ 'ನಾಳೆ ನಾನು ಅಮರಾವತಿಗೆ ಹೋಗುವೆನು' ಎಂದು ಹೇಳಿ ನಾರದರನ್ನು ಕರೆದುಕೊಂಡು ಸಮುದ್ರತೀರಕ್ಕೆ ಹೋದರು. ಅಲ್ಲಿ ನಾರದರೊಡನೆ 'ನಾರದರೇ! ಈಗ ಇಂದ್ರನ ಸಮೀಪಕ್ಕೆ ಹೋಗಿ ನಮಸ್ಕಾರ ಮಾಡಿ. 'ನೀನು ಯುದ್ಧಕ್ಕೆ ಮುಂದೆ ಬಂದು ನಿಲ್ಲುವುದು ಸರಿಯಲ್ಲ. ಆದರೆ ನಾನು ಪಾರಿಜಾತವನ್ನು ತೆಗೆದುಕೊಂಡು ಹೋಗಲಿಕ್ಕೆ ನಿಶ್ಚಯ ಮಾಡಿರುವೆನು' ಎಂದು ಹೇಳಿರಿ'' ಎಂದು ಹೇಳಿ ಅವರನ್ನು ಕಳುಹಿಸಿದನು.

ಉಪಕಾರವನ್ನು ಮಾಡಿರುವೆನು. ಅದನ್ನೆಲ್ಲಾ ಅವನು ಮನಸ್ಸಿಗೆ ತಂದುಕೊಳ್ಳಲೇ ಇಲ್ಲ. ಆದರೂ ನಾನು ತಮ್ಮನೆಂದು ಎಲ್ಲವನ್ನೂ ಸಹಿಸಿಕೊಂಡೇ ಇದ್ದೇನೆ. ಆಗಲಿ. ನಾರದರೇ! ನೀವು ಹೋಗಿ ನನ್ನ ಮಾತನ್ನು ಕೃಷ್ಣನೊಡನೆ ಹೇಳಿರಿ. ಶತ್ರುಗಳು ನನ್ನನ್ನು ಯುದ್ಧಕ್ಕೆ ಕರೆದಾಗ ನಾನು ಹಿಂದಿರುಗಲಾರೆನು. ನಿನಗೆ ಯುದ್ಧ ಮಾಡುವ ಇಚ್ಛೆಯಿರುವುದಾದರೆ ಬಾ. ಹೆಂಡತಿಯ ಮಾತನ್ನು ಕೇಳುವವನೇ! ನಿನ್ನ ಮನಸ್ಸಿಗೆ ಬಂದರೆ ಮೊದಲು ನೀನೇ ನನ್ನನ್ನು ಹೊಡೆ(ಬಡಿಯು). ಚಕ್ರದಿಂದಲೂ ಶಾಂರ್ಜಧನುಸ್ಸಿ ನಿಂದಲೂ ನಂದಕ ಖಡ್ಗದಿಂದಲೋ ಬಡಿಯು. ಗರುಡನ ಮೇಲೆ ಗಟ್ಟಿಯಾಗಿ ಕೂತುಕೊಂಡು ಬಡಿಯು. ನೀನು ಬಡಿದಮೇಲೆ ನಾನು ಶಕ್ತಿಯನ್ನು ಅನುಸರಿಸಿ ಬಡಿಯುವೆನು. ಸ್ನೇಹವು ಮಾತ್ರ ನನ್ನನ್ನು ತಡೆಯದೆ ಇರಬೇಕು. ನಾರದರೇ! ಯುದ್ಧರಂಗದಲ್ಲಿ ಕೃಷ್ಣನೊಡನೆ ಸೋತುಹೋಗದೆ ನಾನು ಪಾರಿಜಾತ ಮರವನ್ನು ಕೊಡುವುದಿಲ್ಲ. ತಮ್ಮನಾದ ಅವನು ಅಣ್ಣನಾದ ನನ್ನನ್ನು ಯುದ್ಧಕ್ಕೆ ಕರೆಯುವನಂತೆ. ಹೆಂಡತಿಯ ಮಾತನ್ನು ಕೇಳುವ ಆ ಹರಿಯನ್ನು ನಾನು ಯಾಕೆ ಸಹಿಸಬೇಕು? ಈಗಲೇ ನೀವು ಕೃಷ್ಣಪರಮಾತ್ಮನಿಂದ ರಕ್ಷಿತವಾದ ದ್ವಾರಕಾಪಟ್ಟಣಕ್ಕೆ ಹೋಗಿರಿ. ನಾನು ಜಗಳಕ್ಕೆ ಸಿದ್ಧನಾಗಿದ್ದೇನೆಂದು ತಿಳಿಸಬೇಕು. ಯುದ್ಧದಲ್ಲಿ ಸೋತುಹೋಗದೆ ಪಾರಿಜಾತದ ಎಲೆಯ ಚೂರನ್ನು ಕೂಡ ಕೊಡಲಾರೆನು ಎಂದು ತಿಳಿಸಿರಿ. ಪುನಃ ನೀವು ಕೃಷ್ಣನೊಡನೆ 'ಮಾಯೆಯಿಂದ ಮರವನ್ನು ಅಪಹರಿಸಿಕೊಂಡು ಹೋಗ ಬಾರದು. ಸರಿಯಾದ ಯುದ್ಧವೇ ನಡೆಯಲಿ. ನಿನ್ನ ಕಪಟಕ್ಕೆ ಧಿಕ್ಕಾರವಿರಲಿ' ಎಂದು ತಿಳಿಸಬೇಕು' ಎಂದು ಹೇಳಿದರು.

ಆಗ ನಾರದರು 'ದೇವೇಂದ್ರ! ಯದ್ಯಪಿ ರಾಜರೊಡನೆ ಪ್ರಿಯಮಾತುಗಳನ್ನೇ ಆಡಬೇಕು. ಆದರೂ ನಾನೀಗ ಅಪ್ರಿಯವಾಗಿದ್ದರೂ ಹಿತಕರವಾದ ಮಾತನ್ನು ಆಡುತ್ತೇನೆ. ಯಾವ ಸಂದರ್ಭದಲ್ಲಿಯೂ ನನ್ನೊಡನೆ ಏನು ಮಾಡಬೇಕು? ಏನು ಮಾಡಬಾರದು ಎಂದು ಕೇಳುತ್ತಿರುವಿ. ಆದುದರಿಂದ ಈಗಲೂ ಹೇಳಿಬಿಡುತ್ತೇನೆ. ಇಷ್ಟವಿದ್ದರೆ ಸ್ವೀಕರಿಸು. ಕೇಳದೆ ಇದ್ದರೂ ಮಿತ್ರನು ಹಿತವನ್ನು ಹೇಳಬೇಕು. ನಾವು ಒಂದು ಕಾರ್ಯವನ್ನು ಆರಂಭಿಸುವಾಗ ಯೋಚಿಸಿಕೊಂಡು ಆರಂಭಿಸಬೇಕು. ಯಾವ ಕಾರ್ಯವನ್ನು ಆರಂಭಿಸುವುದರಿಂದ ಕೊನೆಗೆ ಸಂತಾಪವುಂಟಾಗ ಬಹುದೋ ಅಂತಹ ಕಾರ್ಯವನ್ನು ಆರಂಭಿಸಲೇಬಾರದು. ನೀನು ಆರಂಭಿಸಿರುವ ಕಾರ್ಯದ ಕೊನೆಯು ಸುಖಕರವಾಗಿ ಆಗುವುದು ಎಂದು ನನಗೆ ತೋರುವುದಿಲ್ಲ. ಆ ಕೃಷ್ಣನು ಸರ್ವೋತ್ತಮನು. ಬ್ರಹ್ಮಾದಿಗಳನ್ನೆಲ್ಲಾ ಅವನೇ ಸೃಷ್ಟಿಮಾಡಿದವನು.

ಅವನು ತನ್ನ ಇಚ್ಛೆಯಿಂದ ಅಂತಿಮ ಪ್ರಾರ್ಥನೆಯಿಂದ ಅದಿತಿಪುತ್ರನಾಗಿ ಅವತರಿಸಿರುವನು. ಅವನು ಎಲ್ಲಾ ದೇವತೆಗಳಿಗೂ ಪೂಜ್ಯನು. ಅವನು ಒಂದೊಂದು ಯುಗದಲ್ಲಿ ಅವತರಿಸುವನು. ಹಿರಣ್ಯಕಶಿಪು ಹಿರಣ್ಯಾಕ್ಷ ಇತ್ಯಾದಿ ಅಸುರರನ್ನು ಸಂಹರಿಸಿರುವನು. ನಿನ್ನ ಪ್ರೀತಿಗಾಗಿಯೇ ಅನೇಕ ದೈತ್ಯರನ್ನು ಸಂಹರಿಸಿ ರುವನು. ಈಗಲೂ ಲೋಕದ ಹಿತಕ್ಕಾಗಿ ಮನುಷ್ಯಲೋಕದಲ್ಲಿ ವಾಸಮಾಡು ತ್ತಿರುವನು. ಅವನು ಅವಶ್ಯವಾಗಿ ಪಾರಿಜಾತ ವೃಕ್ಷವನ್ನು ಅಪಹರಿಸಿಕೊಂಡು ಹೋಗುವನು. ನಾನು ಸತ್ಯವನ್ನೇ ಹೇಳುವೆನು. ತಮ್ಮನ ಮೇಲಿನ ಸ್ನೇಹದಿಂದ ನೀನು ಯುದ್ಧ ಮಾಡುವುದಿಲ್ಲ. ಕೃಷ್ಣನೂ ಅಣ್ಣನಾದ ನಿನಗೆ ಅತ್ಯಂತವಾಗಿ ಬಡಿಯಲಾರನು. ನನ್ನ ಮಾತನ್ನು ಕೇಳದೆ ಇರುವುದಾದರೂ ನೀತಿಯನ್ನು ತಿಳಿದ ನಿನಗೆ ಹಿತವನ್ನು ಮಂತ್ರಿಗಳೊಡನೆ ಕೇಳುವವನಾಗು' ಎಂದು ಹೇಳಿದರು. ಇಂದ್ರದೇವರು 'ನಾರದರೇ! ಈ ಪ್ರಕಾರವಾಗಿ ಕೃಷ್ಣನ ಪ್ರಭಾವವನ್ನು ಹೇಳುವಿರಲ್ಲಾ! ಇದು ಸರಿಯೇ! ಇದನ್ನು ನಾನು ಅನೇಕ ಬಾರಿ ಕೇಳಿರುವೆನು. ಈಪ್ರಕಾರವಾಗಿ ಮಹಾನುಭಾವನಾದ ಕಾರಣವೇ ಆ ಕೃಷ್ಣನಿಗೆ ನಾನು ಪಾರಿಜಾತವನ್ನು ಕೊಡುವುದಿಲ್ಲ. ಮಹಾಪ್ರಭಾವ ವುಳ್ಳವರು ಯಾವಾಗಲೂ ಸಹನಗುಣವುಳ್ಳವರಾಗಿರುತ್ತಾರೆ. ಮಹಾನುಭಾವನಾದ ಕೃಷ್ಣನು ಅಲ್ಪಕಾರ್ಯಕ್ಕಾಗಿ ಅಣ್ಣನೊಡನೆ ವಿರೋಧವನ್ನು ಮಾಡುವುದು ಸರಿಯಲ್ಲ. ನನ್ನ ತಾಯಿಗೆ ವರಕೊಟ್ಟಂತೆ ಅಣ್ಣನಾದ ನನ್ನನ್ನು ಬಹುಮಾನಿಸಬೇಕು. ಹೇಗೆ ತನ್ನ ಇಚ್ಛೆಯಿಂದಲೇ ಉಪೇಂದ್ರನಾಗಿ ಅವತರಿಸಿದನೋ ಹಾಗೆಯೇ ಅಣ್ಣನಾದ ನನಗೆ ಬಹುಮಾನವನ್ನು ಮಾಡಬೇಕು? ಇತ್ಯಾದಿ ರೀತಿಯಾಗಿ ಹೇಳಿದರು. ಇಂದ್ರದೇವರ ನಿಶ್ಚಯವನ್ನು ನೋಡಿ ನಾರದರು ದ್ವಾರಕಾಪಟ್ಟಣಕ್ಕೆ ಬಂದು ಸೇರಿದರು.

ನಾರದರು ದ್ವಾರಕಾಪಟ್ಟಣದಲ್ಲಿ ತನ್ನ ಮನೆಯಲ್ಲಿ ಸತ್ಯಭಾಮಾದೇವಿಯ ರೊಡನೆ ಸುಖವಾಗಿ ಕೂತಿದ್ದ ಯೋಚನೆ ಮಾಡುವಂತೆ ನಟನೆ ಮಾಡುತ್ತಿದ್ದ ಕೃಷ್ಣಪರಮಾತ್ಮನನ್ನು ನೋಡಿದರು. ಅವನಿಂದ ಸತ್ಕೃತರಾಗಿ ಎಲ್ಲಾ ವಿಷಯವನ್ನೂ ತಿಳಿಸಿದರು. ಅದನ್ನೆಲ್ಲಾ ಕೃಷ್ಣಪರಮಾತ್ಮನು ಕೇಳಿ ನಾರದರೊಡನೆ 'ನಾಳೆ ನಾನು ಅಮರಾವತಿಗೆ ಹೋಗುವೆನು' ಎಂದು ಹೇಳಿ ನಾರದರನ್ನು ಕರೆದುಕೊಂಡು ಸಮುದ್ರತೀರಕ್ಕೆ ಹೋದರು. ಅಲ್ಲಿ ನಾರದರೊಡನೆ 'ನಾರದರೇ! ಈಗ ಇಂದ್ರನ ಸಮೀಪಕ್ಕೆ ಹೋಗಿ ನಮಸ್ಕಾರ ಮಾಡಿ. 'ನೀನು ಯುದ್ಧಕ್ಕೆ ಮುಂದೆ ಬಂದು ನಿಲ್ಲುವುದು ಸರಿಯಲ್ಲ. ಆದರೆ ನಾನು ಪಾರಿಜಾತವನ್ನು ತೆಗೆದುಕೊಂಡು ಹೋಗಲಿಕ್ಕೆ ನಿಶ್ಚಯ ಮಾಡಿರುವೆನು' ಎಂದು ಹೇಳಿರಿ'' ಎಂದು ಹೇಳಿ ಅವರನ್ನು ಕಳುಹಿಸಿದನು.

ನಾರದರು ಇಂದ್ರನ ಸಮೀಪಕ್ಕೆ ಹೋಗಿ ಹಾಗೆಯೇ ಹೇಳಿದರು. ತರುವಾಯ ಇಂದ್ರದೇವರು ಬೃಹಸ್ಪತ್ಯಾಚಾರ್ಯರ ಹತ್ತಿರ ಈ ವಿಷಯವನ್ನೆಲ್ಲಾ ಹೇಳಿದರು. ಆಗ ಬೃಹಸ್ಪತ್ಯಾಚಾರ್ಯರು 'ನಾನು ಬ್ರಹ್ಮಸಭೆಗೆ ಹೋಗಿರುವಾಗ ಇಂತಹ ಭಯಂಕರವಾದ ಕಾರ್ಯವನ್ನು ಆರಂಭಿಸಿರುವೆಯಲ್ಲಾ! ನನ್ನೊಡನೆ ತಿಳಿಸದೆ ಈ ಕಾರ್ಯವನ್ನು ಹೇಗೆ ಆರಂಭಿಸಿದೆ? ಅಥವಾ ಎಲ್ಲಾ ಜಗತ್ತು ಅದೃಷ್ಟಪ್ರೇರಕ ಪರಮಾತ್ಮನ ಇಚ್ಛೆಯಂತೆ ನಡೆಯುವುದು. ಅವನ ಇಚ್ಛೆಯನ್ನು ಮೀರಲಿಕ್ಕೆ ಯಾರಿಂದಲೂ ಆಗಲಾರದು. ವಿಚಾರಮಾಡದೆ ಯಾವ ಕಾರ್ಯವನ್ನು ಆರಂಭಿಸುವುದು ಪ್ರಶಸ್ತವಲ್ಲ. ಈ ಕಾರ್ಯವನ್ನು ವಿಚಾರಮಾಡದೆ ಆರಂಭಿಸಿದಿ. ಇದು ಲಾಘವಕ್ಕೆ ಕಾರಣವಾಗುವುದು' ಎಂದು ಹೇಳಿದರು. ಅದಕ್ಕೆ ಇಂದ್ರದೇವರು ಬೃಹಸ್ಪತ್ಯಾಚಾರ್ಯರೊಡನ 'ಆಗುವುದು ಆಗಿಹೋಯಿತು. ಇನ್ನು ಏನು ಮಾಡಬೇಕೆಂದು ನೀವು ತಿಳಿಸಬೇಕು' ಎಂದು ಹೇಳಿದರು. ಆಗ ತ್ರಿಕಾಲಜ್ಞಾನಿಗಳಾದ ಬೃಹಸ್ಪತ್ಯಾಚಾರ್ಯರು ಮುಖವನ್ನು ತಗ್ಗಿಸಿಕೊಂಡು ಯೋಚನೆಮಾಡಿ 'ಮಗನೊಡನೆ ಪ್ರಯತ್ನ ಮಾಡು. ಕೃಷ್ಣಪರಮಾತ್ಮನೊಡನೆ ಯುದ್ಧಮಾಡು. ಹೇಗೆ ನ್ಯಾಯವಾಗುತ್ತದೋ ಹಾಗೆ ಮಾಡುತ್ತೇನೆ' ಎಂದು ಹೇಳಿದರು.

ಆಮೇಲೆ ಬೃಹಸ್ಪತ್ಯಾಚಾರ್ಯರು ಕ್ಷೀರ ಸಮುದ್ರಕ್ಕೆ ಹೋಗಿ ಅಲ್ಲಿ ಇದ್ದ ಕಶ್ಯಪರೊಡನೆ ಎಲ್ಲವನ್ನು ತಿಳಿಸಿದರು. ಅದನ್ನು ಕೇಳಿ ಕಶ್ಯಪರು ಕೋಪಿಸಿಕೊಳ್ಳುವವರಾಗಿ ಬೃಹಸ್ಪತ್ಯಾಚಾರ್ಯರೊಡನೆ 'ಇದೇ ರೀತಿಯಾಗಿ ಅವಶ್ಯವಾಗಿ ನಡೆಯಬೇಕಾಗಿದೆ. ಇಂದ್ರನು ಗೌತಮರ ಪತ್ನಿಯಾದ ಅಹಲ್ಯೆಯನ್ನು ಬಲಾತ್ಕಾರ ಮಾಡಿದ್ದಕ್ಕೆ ಈರೀತಿಯಾಗಿ ಭಯವು ಬರಬೇಕಾಗಿದೆ. ಗೌತಮರ ಶಾಪವು ಹಾಗೆ ಇದೆ. ಈ ದೋಷಶಾಂತಿಗಾಗಿಯೇ ಇಲ್ಲಿ ತಪಸ್ಸು ಆರಂಭಿಸಿದ್ದೇನೆ. ಆದರೂ ಈ ಸಂದರ್ಭವು ಬಂದೇ ಸೇರಿತು. ಯುದ್ಧಮಧ್ಯದಲ್ಲಿ ನಾನು ಅದಿತಿಯಿಂದ ಸಹಿತನಾಗಿ ಬಂದು ದೈವೇಚ್ಛೆಯು ಅನುಕೂಲವಿದ್ದರೆ ಅವರಿಬ್ಬರನ್ನು ತಡೆಯುತ್ತೇನೆ' ಎಂದು ಹೇಳಿದರು. ಬೃಹಸ್ಪತ್ಯಾಚಾರ್ಯರು ಅವರೊಡನೆ ಆ ಸಮಯದಲ್ಲಿ ಅಲ್ಲಿಗೆ ನೀವು ಬರಬೇಕು ಎಂದರು. ಕಶ್ಯಪರು ಆಗಲಿ ಎಂದರು. ಬೃಹಸ್ಪತ್ಯಾಚಾರ್ಯರು ಹೊರಟು ಹೋದರು. ಕಶ್ಯಪರು ಅದಿತಿಯಿಂದ ಸಹಿತರಾಗಿ ರುದ್ರದೇವರನ್ನು ಪೂಜಿಸಿ ಸ್ತೋತ್ರ ಮಾಡಿದರು. ಆಗ ರುದ್ರದೇವರು ಕಶ್ಯಪರಿಗೆ ಕಾಣಿಸಿಕೊಂಡರು. ಪ್ರಸನ್ನರಾಗಿ 'ಯಾವ ಕಾರಣಕ್ಕಾಗಿ ಸ್ತೋತ್ರ ಮಾಡುತ್ತಿರುವಿಯೋ ಆ ಕಾರ್ಯವನ್ನು ನಾನು ತಿಳಿದಿರುವೆನು. ಇಂದ್ರ ಉಪೇಂದ್ರರು ಪೂರ್ವಸ್ವಭಾವವನ್ನೇ ಹೊಂದುವರು.

ಶ್ರೀಭಗವಂತನು ಪಾರಿಜಾತ ವೃಕ್ಷವನ್ನು ತೆಗೆದುಕೊಂಡು ಹೋಗುವನು. ಇಂದ್ರನು ಗೌತಮರ ಪತ್ನಿಯಾದ ಅಹಲ್ಯೆಯನ್ನು ಬಲಾತ್ಕಾರ ಮಾಡಿ ಅವರ ಶಾಪಕ್ಕೆ ಒಳಗಾಗಿರುವನು. ಅದಿತಿಯಿಂದ ಸಹಿತನಾಗಿ ಇಂದ್ರನ ಮನೆಗೆ ಹೋಗು. ನಿನ್ನ ಮಕ್ಕಳಿಗೆ ಶ್ರೇಯಸ್ಸಾಗುತ್ತದೆ' ಎಂದು ಹೇಳಿ ದರು. ಕಶ್ಯಪರು ರುದ್ರದೇವರಿಗೆ ನಮಸ್ಕರಿಸಿ ದೇವಲೋಕಕ್ಕೆ ಹೊರಟುಹೋದರು.

ದ್ವಾರಕಾಪಟ್ಟಣದಲ್ಲಿ ಕೃಷ್ಣಪರಮಾತ್ಮನು ಸೂರ್ಯೋದಯವಾಗಿ ಒಂದು ಮುಹೂರ್ತವಾದ ಮೇಲೆ ಕೃಷ್ಣಪರಮಾತ್ಮನು ಮೃಗಬೇಟೆ ಆಡುವ ನೆಪದಿಂದ ರೈವತಪರ್ವತಕ್ಕೆ ಹೋದನು. ಒಂದೇ ರಥದಲ್ಲಿ ಸಾತ್ಯಕಿಯನ್ನು ಕೂಡಿಸಿ (ಕೂತುಕೊಳ್ಳಿಸಿ)ಕೊಂಡು ಪ್ರದ್ಯುಮ್ನನೊಡನೆ ನೀನು ಹಿಂದಿನಿಂದ ಬಾ ಎಂದು ಹೇಳಿ ಹೊರಟುಹೋದನು. ಶ್ರೀಪರಮಾತ್ಮನು ರೈವತಪರ್ವತಕ್ಕೆ ಹೋಗಿ ದಾರುಕನೊಡನೆ 'ನನ್ನ ರಥವನ್ನು ಹಿಡಿದುಕೊಂಡು ಇಲ್ಲಿಯೇ ಅರ್ಧದಿವಸದವರೆಗೆ ಇರು. ನಾನು ರಥದಲ್ಲಿ ಕೂತುಕೊಂಡು ದ್ವಾರಕೆಯನ್ನು ಪ್ರವೇಶಿಸುವೆನು' ಎಂದು ಹೇಳಿ ಸಾತ್ಯಕಿಯಿಂದ ಸಹಿತನಾಗಿ ಗರುಡದೇವರನ್ನು ಏರಿದನು. ಆಕಾಶದಲ್ಲಿ ಸಂಚರಿಸುವ ಪ್ರತ್ಯೇಕ ರಥದಲ್ಲಿ ಕೂತುಕೊಂಡು ಪ್ರದ್ಯುಮ್ನನು ಕೃಷ್ಣಪರಮಾತ್ಮನನ್ನು ಅನುಸರಿಸಿ ಹೋದನು. ಒಂದೇ ನಿಮಿಷದಲ್ಲಿ ಪರಮಾತ್ಮನು ಪಾರಿಜಾತವೃಕ್ಷವನ್ನು ಅಪಹರಿಸುವ ಇಚ್ಛೆಯಿಂದ ನಂದನವನಕ್ಕೆ ಹೋದನು. ಭಗವಂತನು ಅಲ್ಲಿ ನಾನಾ ವಿಧಗಳಾದ ಆಯುಧಗಳನ್ನು ಧರಿಸಿರುವ ದೇವತೆಗಳ ಸೈನಿಕರನ್ನು ನೋಡಿದನು. ಅವರೆಲ್ಲರೂ ನೋಡುತ್ತಿರು ವಾಗಲೇ ಶ್ರೀಭಗವಂತನು ಪಾರಿಜಾತಮರವನ್ನು ಕಿತ್ತು ಗರುಡದೇವರ ಮೇಲೆ ಇಟ್ಟನು. ಆ ಮರವು ಮೂರ್ತಿಮತ್ತಾಗಿ ತಾನಾಗಿ ಬಂದಿತು. ಭಗವಂತನು ನೀನು ಭಯಪಡಬೇಡ ಎಂದು ಆ ಮರಕ್ಕೆ ಸಮಾಧಾನ ಹೇಳಿದನು. ಪಾರಿಜಾತವೃಕ್ಷವು ಹೊರಟದ್ದನ್ನು ನೋಡಿ ಭಗವಂತನು ಅಮರಾವತಿಗೆ ಪ್ರದಕ್ಷಿಣೆ ಮಾಡಿದನು. ನಂದನವನ್ನು ಪಾಲಿಸುತ್ತಿದ್ದ ಜನರು ಹೋಗಿ ದೇವೇಂದ್ರನೊಡನೆ ಪಾರಿಜಾತ ವೃಕ್ಷವನ್ನು ಕೃಷ್ಣನು ಅಪಹರಿಸುತ್ತಿರುವನು ಎಂದು ಹೇಳಿದರು.

ತರುವಾಯ ಇಂದ್ರದೇವರು ಐರಾವತದ ಮೇಲೆ ಕೂತುಕೊಂಡು ಹೊರಟು ಬಂದರು. ಜಯಂತನೂ ರಥದಲ್ಲಿ ಕೂತುಕೊಂಡು ಅವರ ಹಿಂದೆಯೇ ಬಂದನು. ಪೂರ್ವದಿಕ್ಕಿನ ಬಾಗಿಲಲ್ಲಿ ಬಂದಿದ್ದ ಕೃಷ್ಣಪರಮಾತ್ಮನನ್ನು ನೋಡಿ 'ಕೃಷ್ಣ! ಏನು ಮಾಡಿದಿ' ಎಂದು ಇಂದ್ರನು ಕೇಳಿದನು. ಗರುಡದೇವರ ಮೇಲೆ ಕೂತಿದ್ದ ಕೃಷ್ಣ ಪರಮಾತ್ಮನು ಇಂದ್ರದೇವರಿಗೆ ವಂದಿಸಿ 'ನಿನ್ನ ತಮ್ಮನ ಹೆಂಡತಿಗೆ ಪುಣ್ಯಕವ್ರತವನ್ನು

ಮಾಡುವುದಕ್ಕಾಗಿ ಈ ಮರವನ್ನು ತೆಗೆದುಕೊಂಡು ಹೋಗುತ್ತಿದ್ದೇನೆ' ಎಂದನು. ಇಂದ್ರದೇವರು 'ನನ್ನೊಡನೆ ಯುದ್ಧವನ್ನು ಮಾಡದೆ ಈ ಮರವನ್ನು ತೆಗೆದುಕೊಂಡು ಹೋಗಬಾರದು. ಮೊದಲು ನೀನೆ ನನಗೆ ಬಡಿಯುವವನಾಗು. ಗದೆಯನ್ನು ನನ್ನ ಮೇಲೆ ಬಿಟ್ಟು ನಿನ್ನ ಪ್ರತಿಜ್ಞೆಯು ಸಫಲವಾಗಲಿ' ಎಂದು ಹೇಳಿದರು. ತರುವಾಯ ಕೃಷ್ಣಪರಮಾತ್ಮನು ನಗುತ್ತಾ ತೀಕ್ಷ್ಣಬಾಣಗಳಿಂದ ಐರಾವತವನ್ನು ಸೀಳಿದರು. ಇಂದ್ರದೇವರು ದಿವ್ಯಬಾಣಗಳಿಂದ ಗರುಡದೇವರನ್ನು ಬಡಿದರು. ಪರಮಾತ್ಮನು ಬಿಟ್ಟ ಬಾಣಗಳನ್ನು ಕತ್ತರಿಸಿದರು. ಇಂದ್ರದೇವರು ಬಿಟ್ಟ ಬಾಣಗಳನ್ನು ಪರಮಾತ್ಮನು ಕತ್ತರಿಸಿದನು. ಪರಮಾತ್ಮನು ಬಿಟ್ಟ ಬಾಣಗಳನ್ನು ಇಂದ್ರದೇವರು ಕತ್ತರಿಸಿದರು. ಇಂದ್ರದೇವರ ಧನುಸ್ಸಿನ ಶಬ್ದದಿಂದಲೂ ಶಾಂರ್ಜದ ಶಬ್ದದಿಂದಲೂ ಸ್ವರ್ಗವಾಸಿಗಳೆಲ್ಲ ಮೋಹಿತರಾದರು.

ಈರೀತಿಯಾಗಿ ಅವರಿಬ್ಬರಿಗೆ ಯುದ್ಧವು ನಡೆಯುತ್ತಿರಲು ಗರುಡದೇವರ ಮೇಲೆ ಇದ್ದ ಪಾರಿಜಾತಮರವನ್ನು ಅಪಹರಿಸಲು ಜಯಂತನು ಉದ್ಯುಕ್ತನಾದನು. ಆಗ ಪರಮಾತ್ಮನು ಪ್ರದ್ಯುಮ್ನನೊಡನೆ ಜಯಂತನನ್ನು ತಡೆಯಲಿಕ್ಕೆ ಹೇಳಿದನು. ರಥದಲ್ಲಿ ಕೂತಿದ್ದ ಜಯಂತನು ನಗುತ್ತಾ ಪ್ರದ್ಯುಮ್ನನ ಸರ್ವಾವಯವಗಳಲ್ಲಿಯೂ ಬಾಣಗಳಿಂದ ಬಡಿದನು. ಪ್ರದ್ಯುಮ್ನನು ರಥದಲ್ಲಿ ಇದ್ದುಕೊಂಡೇ ಬಾಣಗಳಿಂದ ಜಯಂತನನ್ನು ಪೀಡಿಸಿದನು. ಅವರಿಬ್ಬರ ಯುದ್ಧವು ಅತಿಭಯಂಕರವಾಗಿ ನಡೆಯಿತು. ದೇವತೆಗಳೂ ಮುನಿಗಳೂ ಆಶ್ಚರ್ಯವುಳ್ಳವರಾಗಿ ಅವರ ಯುದ್ಧವನ್ನು ನೋಡಿದರು. ತರುವಾಯ ಮಹಾಬಲವಂತನಾದ ಪ್ರವರ ಎಂಬ ದೇವದೂತನು ಪಾರಿಜಾತ ಮರವನ್ನು ಅಪಹರಿಸಲು ಇಚ್ಛಿಸಿದನು. ಆ ಪ್ರವರನು ಇಂದ್ರದೇವರ ಮಿತ್ರನು. ಮಹಾಅಸ್ತ್ರಜ್ಞಾನಿಯೂ ಬ್ರಹ್ಮದೇವರ ವರದಿಂದ ಮರಣರಹಿತನಾಗಿದ್ದನು. ಜಂಬೂದ್ವೀಪದಲ್ಲಿ ಬ್ರಾಹ್ಮಣನು ತಪಸ್ಸಿನಿಂದ ಸಿದ್ಧಿಯನ್ನು ಹೊಂದಿ ಸ್ವರ್ಗವನ್ನು ಹೊಂದಿ ಇಂದ್ರನ ಮಿತ್ರನಾಗಿದ್ದನು. ಬರುತ್ತಿದ್ದ ಅವನನ್ನು ನೋಡಿ ಕೃಷ್ಣನು ಸಾತ್ಯಕಿಯೊಡನೆ ಇಲ್ಲಿ ಇದ್ದುಕೊಂಡೇ ಬಾಣಗಳಿಂದ ಪ್ರವರವನ್ನು ತಡೆಯುವವನಾಗು ಎಂದು ಹೇಳಿದನು. ಮತ್ತು 'ಸಾತ್ಯಕಿಯೇ! ಅವನಿಗೆ ನಿರ್ದಯವಾಗಿ ಬಾಣಗಳನ್ನು ಬಿಡಬಾರದು. ಬ್ರಾಹ್ಮಣನ ಚಾಪಲ್ಯವನ್ನು ತಡೆದುಕೊಳ್ಳಬೇಕು' ಎಂದು ಹೇಳಿದನು.

ತರುವಾಯ ಬ್ರಾಹ್ಮಣನಾದ ಆ ಪ್ರವರನು ಗರುಡದೇವರ ಮೇಲೆ ಕೂತಿದ್ದ ಸಾತ್ಯಕಿಗೆ ಅರವತ್ತು ಬಾಣಗಳಿಂದ ಬಡೆದನು. ಸಾತ್ಯಕಿಯು ಅಷ್ಟು ಬಾಣಗಳನ್ನು

ಬಿಡುವ ಅವನ ಧನುಸ್ಸನ್ನು ಕತ್ತರಿಸಿದನು. 'ಬ್ರಾಹ್ಮಣನನ್ನು ಕೊಲ್ಲಬಾರದು. ನಿನ್ನ ಧರ್ಮದಲ್ಲಿ ಇರು. ಬ್ರಾಹ್ಮಣರು ಅತ್ಯಂತ ಅಪರಾಧ ಮಾಡಿದ್ದಾದರೂ ಯಾದವರಿಗೆ ಅವಧ್ಯರು' ಎಂದನು. ಆದರೆ ಪ್ರವರನು ನಗುತ್ತಾ 'ಶೂರನೇ! ನೀನು ಕ್ಷಮಿಸಿದ್ದು ಸಾಕು. ಚೆನ್ನಾಗಿ ಯುದ್ಧವನ್ನು ಮಾಡು. ನಾನು ಪರಶುರಾಮದೇವರ ಶಿಷ್ಯನು. ಪ್ರವರ ಎಂದು ಹೆಸರುಳ್ಳವನು. ಇಂದ್ರದೇವರ ಮಿತ್ರನು. ಕೃಷ್ಣನಿಗೆ ಬಹುಮಾನ ಮಾಡುವವರಾಗಿ ದೇವತೆಗಳು ಸರಿಯಾಗಿ ಯುದ್ಧವನ್ನು ಮಾಡಲಿಕ್ಕೆ ಇಚ್ಛಿಸುವುದಿಲ್ಲ. ನಾನೀಗ ಇಂದ್ರದೇವರು ನನ್ನಲ್ಲಿ ಮಾಡಿದ ಸ್ನೇಹಕ್ಕಾಗಿ ಋಣಪರಿಹಾರ ಮಾಡಿ ಕೊಳ್ಳುತ್ತೇನೆ' ಎಂದು ಹೇಳಿದನು. ತರುವಾಯ ಅವರಿಬ್ಬರಿಗೂ ದಿವ್ಯಅಸ್ತ್ರಗಳಿಂದ ಯುದ್ಧವು ನಡೆಯಿತು. ಪ್ರದ್ಯುಮ್ನನೂ ಜಯಂತನೂ 'ಬಡಿ ಹೊಡಿ' ಇತ್ಯಾದಿ ಮಾತುಗಳನ್ನು ಹೇಳುತ್ತಾ ಸರಿ ಸರಿಯಾಗಿ ಯುದ್ಧವನ್ನು ಮಾಡುತ್ತಿದ್ದರು. ಜಯಂತನು ದಿವ್ಯವಾದ ಅಸ್ತ್ರವನ್ನು ಪ್ರದ್ಯುಮ್ನನಿಗೆ ಬಿಟ್ಟನು. ಪ್ರದ್ಯುಮ್ನನು ಅದನ್ನು ಬಾಣಗಳಿಂದ ತಡೆದನು. ಆದರೂ ಅದು ಬಂದು ಪ್ರದ್ಯುಮ್ನನ ರಥವನ್ನು ಸುಟ್ಟುಹಾಕಿತು. ಪ್ರದ್ಯುಮ್ನನನ್ನು ಸುಡಲಿಲ್ಲ. ಅಗ್ನಿಯು ಅಗ್ನಿಯನ್ನು ಸುಡುವುದಿಲ್ಲವಷ್ಟೆ. ಹಾಗೆಯೇ ಆ ಅಸ್ತ್ರವೂ ತೇಜಸ್ವಿಯಾದ ಪ್ರದ್ಯುಮ್ನನನ್ನು ಸುಡಲಿಲ್ಲ. ರಥವು ಸುಟ್ಟುಹೋಗಲು ಅದರಿಂದ ಪ್ರದ್ಯುಮ್ನನು ಕೆಳಗೆ ಹಾರಿದನು.

ತರುವಾಯ ರಥರಹಿತನಾದ ನಾರಾಯಣಪುತ್ರನಾದ ಪ್ರದ್ಯುಮ್ನನು ಧನುರ್ಧಾರಿಯಾಗಿ ಆಕಾಶದಲ್ಲಿ ನಿಂತುಕೊಂಡು ಜಯಂತನೊಡನೆ 'ಇಂದ್ರನ ಮಗನೇ! ನೀನು ಯಾವ ದಿವ್ಯವಾದ ಅಸ್ತ್ರವನ್ನು ಬಿಟ್ಟಿರುವಿಯೋ ಅಂತಹ ಅನೇಕ ನೂರು ಅಸ್ತ್ರಗಳಿಂದಲೂ ನನ್ನನ್ನು ಸಂಹಾರಮಾಡಲಿಕ್ಕೆ ಆಗಲಾರದು. ನೀನು ಅಭ್ಯಾಸ ಮಾಡಿದ್ದನ್ನೆಲ್ಲಾ ತೋರಿಸು. ಯುದ್ಧದಲ್ಲಿ ನನ್ನನ್ನು ಮೀರುವವರು ಇಲ್ಲ. ಪೂರ್ವದಲ್ಲಿ ರಥದಲ್ಲಿ ಇದ್ದ ಆಯುಧಧಾರಿಯಾದ ನಿನ್ನನ್ನು ನೋಡಿ ನನಗೆ ಭಯವಿದ್ದಿತು. ಇನ್ನು ಮುಂದೆ ನಾನು ಭಯವನ್ನು ಹೊಂದುವುದಿಲ್ಲ. ಯುದ್ಧದಲ್ಲಿ ನಿನ್ನ ಬಲವನ್ನು ನೋಡಿಯಾಯಿತು. ಪಾರಿಜಾತಮರವನ್ನು ಮನಸ್ಸಿನಿಂದ ಸ್ಮರಣೆ ಮಾಡಿಕೊ. ಕೈಗಳಿಂದ ಮುಟ್ಟಲಿಕ್ಕೆ ಇನ್ನುಮುಂದೆ ಆಗಲಾರದು. ಮಾಯಾಮಯವಾದ ನನ್ನ ಯಾವ ರಥವನ್ನು ದಿವ್ಯವಾದ ಅಸ್ತ್ರದಿಂದ ಸುಟ್ಟುಹಾಕಿದೆಯೋ ಇಂತಹ ಸಾವಿರಾರು ರಥಗಳನ್ನು ಮಾಯೆಯಿಂದ ಸೃಷ್ಟಿಮಾಡಲು ಸಮರ್ಥನಾಗಿರುವೆನು' ಎಂದು ಹೇಳಿದನು. ಜಯಂತನು ದಿವ್ಯವಾದ ಅಸ್ತ್ರವನ್ನು ಬಿಟ್ಟನು. ಮಹಾವೇಗವುಳ್ಳ ಆ ಅಸ್ತ್ರವನ್ನು ಪ್ರದ್ಯುಮ್ನನು ಬಾಣಗಳಿಂದ ತಡೆದನು. ಜಯಂತನು ಬೇರೆ ನಾಲ್ಕು

ಅಸ್ತ್ರಗಳನ್ನು ಬಿಟ್ಟನು. ಅವು ನಾಲ್ಕು ದಿಕ್ಕುಗಳಲ್ಲಿ ಪ್ರದ್ಯುಮ್ನನನ್ನು ತಡೆದವು. ಜಯಂತನು ಐದನೆಯ ಅಸ್ತ್ರವನ್ನೂ ಬಿಟ್ಟನು. ಅವುಗಳೆಲ್ಲವನ್ನೂ ಪ್ರದ್ಯುಮ್ನನು ತಡೆದನು. ಜಯಂತನನ್ನು ಬೇರೆ ಬಾಣಗಳಿಂದ ತಡೆದನು. ತರುವಾಯ ಪ್ರದ್ಯುಮ್ನನ ಸ್ಥೈರ್ಯವನ್ನು ವೇಗವನ್ನು ನೋಡಿ ದೇವತೆಗಳು ಶಬ್ದವನ್ನು ಮಾಡಿದರು.

ಸಾತ್ಯಕಿಯು ಬಾಣಗಳಿಂದ ಪ್ರವರನ ಧನುಸ್ಸನ್ನು ಕತ್ತರಿಸಿದನು. ಪ್ರವರನು ಇಂದ್ರದೇವರು ಕೊಟ್ಟ ಮತ್ತೊಂದು ದೊಡ್ಡ ಧನುಸ್ಸನ್ನು ಧರಿಸಿದನು. ಅದರಿಂದ ಅನೇಕ ಬಾಣಗಳನ್ನು ಬಿಟ್ಟನು. ಸಾತ್ಯಕಿಯ ಧನುಸ್ಸನ್ನು ಕತ್ತರಿಸಿದನು. ಅವನ ಸರ್ವಾವಯಗಳಿಗೂ ಬಾಣಗಳನ್ನು ಬಿಟ್ಟನು. ತರುವಾಯ ಸಾತ್ಯಕಿಯು ಬೇರೊಂದು ಧನುಸ್ಸನ್ನು ತೆಗೆದು ಪ್ರವರನನ್ನು ಬಡಿದನು. ತರುವಾಯ ಇಬ್ಬರೂ ಪರಸ್ಪರವಾಗಿ ಕವಚಗಳನ್ನು ಸೀಳಿಕೊಂಡರು. ಮರ್ಮವನ್ನು ಭೇದಿಸುವ ಬಾಣಗಳಿಂದ ಪರಸ್ಪರ ಮಾಂಸವನ್ನು ಕಿತ್ತಿಕೊಂಡರು. ಆಮೇಲೆ ಪ್ರವರನು ಸಾತ್ಯಕಿಯ ಧನುಸ್ಸನ್ನು ಕತ್ತರಿಸಿ ಅವನನ್ನು ಮೂರು ಬಾಣಗಳಿಂದ ಬಡಿದನು. ಬೇರೊಂದು ಧನುಸ್ಸನ್ನು ಧರಿಸಬೇಕೆಂದು ಯೋಚಿಸುತ್ತಿದ್ದ ಸಾತ್ಯಕಿಯನ್ನು ಗದೆಯಿಂದ ಬಡಿದನು. ಸಾತ್ಯಕಿಯು ನಗುತ್ತಾ ಖಡ್ಗವನ್ನು ಚರ್ಮವನ್ನು ಹಿಡಿದನು. ಧನುಸ್ಸನ್ನು ತೆಗೆಯಲಿಲ್ಲ. ಆಗ ಪ್ರವರನು ನೂರಾರು ಬಾಣಗಳನ್ನು ಬಿಟ್ಟನು. ಸಾತ್ಯಕಿಗೆ ಪ್ರದ್ಯುಮ್ನನು ಖಡ್ಗವನ್ನು ಕೊಟ್ಟಿದ್ದನು. ಆ ಖಡ್ಗವನ್ನು ಚರ್ಮವನ್ನು ಪ್ರವರನು ಕತ್ತರಿಸಿದನು. ಶಕ್ತಿಯೆಂಬ ಆಯುಧದಿಂದ ಸಾತ್ಯಕಿಯ ಎದೆಗೆ ಬಡಿದು ಗರ್ಜನೆ ಮಾಡಿದನು. ಸಾತ್ಯಕಿಯು ಯುದ್ಧದಲ್ಲಿ ಸೋತುಹೋದನೆಂದು ತಿಳಿದುಕೊಂಡು ಪ್ರವರನು ಪಾರಿಜಾತವನ್ನು ಅಪಹರಿಸುವ ಇಚ್ಛೆಯಿಂದ ರಥದಿಂದಲೇ ಗರುಡದೇವರ ಬಳಿಗೆ ಬಂದನು. ಗರುಡದೇವರು ರೆಕ್ಕೆಯ ವೇಗದಿಂದ ಅವನನ್ನು ದೂರಬಿಸಾಡಿದರು. ಪ್ರವರನು ರಥಸಹಿತನಾಗಿ ಎರಡು ಮೈಲು ದೂರದಲ್ಲಿ ಹೋಗಿ ಬಿದ್ದನು. ಮೂರ್ಛಿತನಾದನು. ಅವನನ್ನು ಬೇಗನೇ ಬೇಗನೇ ಜಯಂತನು ಸಮಾಧಾನಪಡಿಸಿ ರಥದಲ್ಲಿ ಕುಳ್ಳಿರಿಸಿ (ಕೂತುಕೊಳ್ಳಿಸಿ)ದನು. ಮೂರ್ಛೆಯನ್ನು ಹೊಂದುತ್ತಿದ್ದ ಸಾತ್ಯಕಿಯನ್ನು ಪ್ರದ್ಯುಮ್ನನು ಸಮಾಧಾನ ಪಡಿಸುತ್ತಾ ಆಲಿಂಗನ ಮಾಡಿದನು. ಶ್ರೀಭಗವಂತನೂ ತನ್ನ ಎಡಕೈಯಿಂದ ಆ ಸಾತ್ಯಕಿಯನ್ನು ಮುಟ್ಟಿದನು. ಆ ಸ್ಪರ್ಶಮಾತ್ರದಿಂದಲೇ ಸಾತ್ಯಕಿಯು ಶ್ರಮರಹಿತ ನಾದನು.

ತರುವಾಯ ಒಂದೇ ರಥದಿಂದ ಬರುತ್ತಿದ್ದ ಜಯಂತನನ್ನು ಪ್ರವರನನ್ನು ನೋಡಿ ಇಂದ್ರದೇವರು ನೋಡಿ ನಗುತ್ತಾ 'ಗರುಡನ ಹತ್ತಿರ ಹೋಗಬೇಡಿ.

ಗರುಡನು ಪಕ್ಷಿಗಳಿಗೆಲ್ಲಾ ಮಹಾಬಲಿಷ್ಠನಾದ ರಾಜನು. ಎಡಬಲಪಾರ್ಶ್ವಗಳಲ್ಲಿ ಆಯುಧಧಾರಿಗಳಾಗಿ ಯುದ್ಧಮಾಡುತ್ತಿರುವ ನನ್ನನ್ನು ನೋಡುತ್ತಾ ಇರುವವರಾಗಿರಿ' ಎಂದರು. ತರುವಾಯ ಅವರು ಯುದ್ಧಮಾಡುತ್ತಿರುವ ಕೃಷ್ಣಪರಮಾತ್ಮನನ್ನು ಇಂದ್ರದೇವರನ್ನು ನೋಡುತ್ತಾ ಇದ್ದರು. ಇಂದ್ರದೇವರು ಗರುಡದೇವರನ್ನು ಬಾಣಗಳಿಂದ ಬಡೆದರು. ಗರುಡದೇವರು ಆ ಬಾಣಗಳನ್ನು ಲಕ್ಷ್ಯಮಾಡದೆ ಐರಾವತದ ಎದುರಾಗಿ ಹೋದರು. ಐರಾವತವೂ ಗರುಡದೇವರೂ ಯುದ್ಧಮಾಡಿ ಕೊಂಡರು. ಒಂದು ಮುಹೂರ್ತಕಾಲ ಇಬ್ಬರಿಗೂ ಭಯಂಕರವಾದ ಯುದ್ಧವು ನಡೆಯಿತು. ಗರುಡದೇವರು ಐರಾವತದ ತಲೆಗೆ ಪಾದಗಳಿಂದ ಬಲವಾಗಿ ಬಡೆದರು. ಆ ಪೆಟ್ಟಿನಿಂದ ಶ್ರಮವನ್ನು ಹೊಂದಿದ ಐರಾವತವು ಸ್ವರ್ಗದಿಂದ ಕೆಳಗೆ ಪಾರಿಯಾತ್ರ ಎಂಬ ಪರ್ವತದಲ್ಲಿ ಹೋಗಿಬಿದ್ದಿತು. ಬಿದ್ದಂತ ಐರಾವತವನ್ನು ಇಂದ್ರದೇವರು ಕರುಣೆಯಿಂದ ಬಿಡಲಿಲ್ಲ, ಅದರ ಒಟ್ಟಿಗೇ ಹೋದರು. ಕೃಷ್ಣಪರಮಾತ್ಮನೂ ಪಾರಿಜಾತವೃಕ್ಷವನ್ನು ಧರಿಸಿದ್ದ ಗರುಡ ಒಟ್ಟಿಗೆ ಆ ಇಂದ್ರದೇವರ ಒಟ್ಟಿಗೇ ಹೋದರು. ಇಂದ್ರದೇವರು ಪಾರಿಯಾತ್ರ ಪರ್ವತದಲ್ಲಿ ನಿಂತರು. ಐರಾವತವು ಶ್ರಮಪರಿಹಾರ ಮಾಡಿಕೊಂಡಮೇಲೆ ಪುನಃ ಯುದ್ಧವಾಯಿತು. ತರುವಾಯ ಇಂದ್ರದೇವರು ಅನೇಕ ಬಾರಿ ವಜ್ರಾಯುಧವನ್ನು ಗರುಡದೇವರ ಮೇಲೆ ಹಾಕಿದರು. ಗರುಡದೇವರು ಆ ಪ್ರಹಾರಗಳನ್ನು ತಡೆದುಕೊಂಡರು. ವಜ್ರಾಯುಧಕ್ಕೆ ಮರ್ಯಾದೆಯನ್ನು ಕೊಡುವುದಕ್ಕಾಗಿ ಒಂದೊಂದು ಪ್ರಹಾರಕ್ಕೆ ಒಂದೊಂದು ಗರಿಯನ್ನು ಬಿಟ್ಟರು. ಗರುಡದೇವರಿಂದ ಆಕ್ರಮಿಸಲ್ಪಟ್ಟದ್ದಾಗಿ ಆ ಪರ್ವತವು ಸುತ್ತಲೂ ಸೀಳಿಹೋಗಿ ಭೂಮಿಯನ್ನು ಪ್ರವೇಶಿಸಿತು. ಭಗವಂತನ ಮೇಲೆ ಬಹುಮಾನದಿಂದ ಕೂಗಿಕೊಂಡಿತು. ಸ್ವಲ್ಪವಾಗಿ ಉಳಿದ ಆ ಪರ್ವತವನ್ನು ನೋಡಿ ಅದನ್ನು ಬಿಟ್ಟು ಗರುಡಾರೂಢರಾಗಿ ಆಕಾಶದಲ್ಲಿ ಇದ್ದರು. ಆಗ ಪ್ರದ್ಯುಮ್ನನೊಡನೆ 'ನೀನು ಇಲ್ಲಿಂದ ದ್ವಾರಕೆಗೆ ಹೋಗಿ ದಾರುಕನಿಂದ ಸಹಿತವಾದ ನನ್ನ ರಥವನ್ನು ಬೇಕೆಂದು ಬೇಗನೆ ತೆಗೆದುಕೊಂಡು ಬಾ. ಬಲರಾಮರೊಡನೆ ಉಗ್ರಸೇನರಾಜರೊಡನೆ ನಾಳೆ ಇಂದ್ರನನ್ನು ಜಯಿಸಿ ದ್ವಾರಕಾಪಟ್ಟಣಕ್ಕೆ ಬರುವೆನೆಂದು ತಿಳಿಸು' ಎಂದು ಹೇಳಿದನು. ಪರಮಾತ್ಮನು ಹೇಳಿದ ಮಾತನ್ನು ಕೇಳಿ ಪ್ರದ್ಯುಮ್ನನು ಹಾಗೆಯೇ ಆಗಲಿ ಎಂದು ಹೇಳಿ ಹೊರಟುಹೋಗಿ ಹಾಗೆಯೇ ಉಗ್ರಸೇನ ಬಲರಾಮದೇವರೊಡನೆ ತಿಳಿಸಿ ಒಂದೇ ಘಳಿಗೆಯಲ್ಲೇ ದಾರುಕನಿಂದ ಸಹಿತವಾದ ರಥವನ್ನು ಹಿಡಿದುಕೊಂಡು ಬಂದನು.

ಕೃಷ್ಣಪರಮಾತ್ಮನು ಆ ರಥದಲ್ಲಿ ಕೂತುಕೊಂಡು ಪಾರಿಯಾತ್ರ ಪರ್ವತಕ್ಕೆ ಹೋದನು. ಅಲ್ಲಿ ಇಂದ್ರದೇವರು ಐರಾವತದ ಮೇಲೆ ಕೂತುಕೊಂಡು ಇದ್ದರು. ಬರುತ್ತಿದ್ದ ಪರಮಾತ್ಮನನ್ನು ನೋಡಿ ಪರಮಾತ್ಮನ ಪ್ರಭಾವವನ್ನು ತಿಳಿದ ಪಾರಿಯಾತ್ರಪರ್ವತವು ಪರಮಾತ್ಮನ ಪ್ರೀತಿಗಾಗಿ ಚಿಕ್ಕರೂಪವನ್ನು ಧರಿಸಿ ಭೂಮಿಯನ್ನು ಪ್ರವೇಶಿಸಿತು. ಪರಮಾತ್ಮನು ಆ ಪರ್ವತದ ಮೇಲೆ ಪ್ರೀತಿಯನ್ನು ಹೊಂದಿದನು. ತರುವಾಯ ಯುದ್ಧಕ್ಕಾಗಿ ಹೊರಟ ಪರಮಾತ್ಮನ ಹಿಂದೆಯೇ ಪಾರಿಜಾತವೃಕ್ಷದಿಂದ ಸಹಿತರಾಗಿ ಗರುಡದೇವರು ಹೋದರು. ಪ್ರದ್ಯುಮ್ನನೂ ಸಾತ್ಯಕಿಯೂ ಗರುಡದೇವರ ಮೇಲೆ ಕೂತುಕೊಂಡೇ ಪಾರಿಜಾತಮರವನ್ನು ರಕ್ಷಿಸುವುದಕ್ಕಾಗಿ ಹೋದರು. ತರುವಾಯ ಸೂರ್ಯನು ಮುಳುಗಿದನು. ರಾತ್ರಿಯಾಯಿತು. ಇಂದ್ರದೇವರಿಗೂ ಕೃಷ್ಣಪರಮಾತ್ಮನಿಗೂ ಯುದ್ಧವು ನಡೆಯಿತು. ಪ್ರಹಾರದಿಂದ ಅತ್ಯಂತ ಶ್ರಮಪಟ್ಟಿದ್ದ ಐರಾವತವನ್ನು ಕಂಡು ಕೃಷ್ಣಪರಮಾತ್ಮನು ಇಂದ್ರದೇವರೊಡನೆ ಗರುಡನಿಂದ ಪೀಡಿತವಾಗಿ ಐರಾವತವು ಸಾಮರ್ಥ್ಯರಹಿತವಾಗಿದೆ. ರಾತ್ರಿಯೂ ಬಂದಿದೆ. ನಾಳೆ ಬೆಳಿಗ್ಗೆ ಇಚ್ಛೆ ಬಂದಂತೆ ಮಾಡು' ಎಂದು ಹೇಳಿದನು. ಇಂದ್ರದೇವರು ಹಾಗೆಯೇ ಆಗಲಿ ಎಂದು ಹೇಳಿದರು.

ಇಂದ್ರದೇವರು ಪುಷ್ಕರದ ಸಮೀಪದಲ್ಲಿ ಪರ್ವತಗಳ ಆವರಣವನ್ನು ಮಾಡಿಕೊಂಡು ವಾಸಮಾಡಿದರು. ತರುವಾಯ ಬ್ರಹ್ಮದೇವರೂ, ಕಶ್ಯಪರೂ, ಅದಿತಿಯೂ, ಎಲ್ಲಾ ದೇವತೆಗಳೂ, ಮುನಿಗಳೂ, ಸಾಧ್ಯರೂ, ವಿಶ್ವೇದೇವತೆಗಳೂ, ಅಶ್ವಿನೀ ದೇವತೆಗಳೂ, ಆದಿತ್ಯರೂ, ರುದ್ರರೂ, ವಸುಗಳೂ ಅಲ್ಲಿಗೆ ಬಂದರು. ಕೃಷ್ಣಪರಮಾತ್ಮನು ಪ್ರದ್ಯುಮ್ನನಿಂದಲೂ ಸಾತ್ಯಕಿಯಿಂದಲೂ ಕೂಡಿಕೊಂಡು ಸಂತೋಷದಿಂದ ಮನೋಹರವಾದ ಪಾರಿಯಾತ್ರಪರ್ವತದಲ್ಲಿ ವಾಸಮಾಡಿದನು. ಪಾರಿಯಾತ್ರ ಪರ್ವತವು ಕೃಷ್ಣಪರಮಾತ್ಮನಲ್ಲಿ ಭಕ್ತಿಯಿಂದ ಶಾಣ ಎಂಬ ಒಂದು ಗಿಡದಷ್ಟು ಚಿಕ್ಕಪರಿಮಾಣವನ್ನು ಧರಿಸಿದ್ದುದರಿಂದ ಪರಮಾತ್ಮನು ಸಂತುಷ್ಟನಾಗಿ 'ನೀನು ಶಾಣಪಾದ ಎಂದು ಪ್ರಸಿದ್ಧಿಯನ್ನು ಹೊಂದಿ ಹಿಮವತ್ಪರ್ವತದಿಂದ ಉಂಟಾಗುವ ಪುಣ್ಯದ ಅರ್ಧದಷ್ಟು ಪುಣ್ಯಕ್ಕೆ ಕಾರಣವಾಗುವಿ. ಮೇರುಪರ್ವತದೊಡನೆ ಸ್ಪರ್ಧೆಯನ್ನು ಮಾಡುತ್ತಾ ಅನೇಕ ವಿಚಿತ್ರ ಮೃಗಗಳಿಂದ ಯುಕ್ತನಾಗಿರುವಿ. ಅನೇಕ ವಿಚಿತ್ರ ಮರಗಳಿಂದ ಕೂಡಿರುವ ನಿನ್ನನ್ನು ನೋಡುತ್ತಾ ಸಂತೋಷಪಡುವೆನು' ಎಂದನು. ಕೃಷ್ಣಪರಮಾತ್ಮನು ಈರೀತಿಯಾಗಿ ಪರ್ವತಕ್ಕೆ ವರವನ್ನು ಕೊಟ್ಟು ಗಂಗೆಯನ್ನು ಸ್ಮರಿಸಿದನು. ನದೀಶ್ರೇಷ್ಠಳಾದ ಗಂಗೆಯು ಭಗವಂತನು

ಸ್ಮರಿಸುವ ಮಾತ್ರದಲ್ಲಿ ಬಂದಳು. ಶ್ರೀಪರಮಾತ್ಮನು ಗಂಗೆಯನ್ನು ಸತ್ಕರಿಸಿ ಗಂಗೆಯಲ್ಲಿ ಸ್ನಾನಮಾಡಿದನು.

ಸರ್ವೋತ್ತಮನಾದ ಪರಮಾತ್ಮನು ದುಷ್ಟ ಜನಮೋಹಕ್ಕಾಗಿ ನೀರನ್ನು ಬಿಲ್ವಪತ್ರವನ್ನು ಹಿಡಿದುಕೊಂಡು ರುದ್ರದೇವರನ್ನು ಆವಾಹನಮಾಡಿದನು. ಆಗ ರುದ್ರದೇವರು ಬಂದು ಆ ಗಂಗಾನೀರಿನಲ್ಲಿಯೂ ಬಿಲ್ವದ ಮೇಲೆಯೂ ನಿಂತರು. ಪರಮಾತ್ಮನು ದುಷ್ಟಜನ ಮೋಹಕ್ಕಾಗಿ ಪಾರಿಜಾತಪುಷ್ಪಗಳಿಂದ ಆ ರುದ್ರದೇವರನ್ನು ಪೂಜಿಸಿದಂತೆ ನಟನೆ ಮಾಡಿದನು. ನಾನಾ ವಿಧವಾಗಿ ಸ್ತೋತ್ರಮಾಡಿದನು. ಲೋಕವನ್ನು ಮೋಹಗೊಳಿಸುವ ಉದ್ದೇಶವು ಭಗವಂತನದ್ದೆಂದು ತಿಳಿದು ರುದ್ರದೇವರೂ ಅದಕ್ಕೆ ಅನುಕೂಲವಾಗಿ ನಡೆದುಕೊಂಡರು. ಕೈಯನ್ನು ಮುಂದೆ ನೀಡಿ 'ದೇವೋತ್ತಮನೇ! ನಿನ್ನ ಅಭೀಷ್ಟ ಪ್ರಾಪ್ತಿಯಾಗುವುದು. ಪಾರಿಜಾತ ಮರವನ್ನು ತೆಗೆದುಕೊಂಡು ಹೋಗುವಿ. ಮನಸ್ಸಿನಲ್ಲಿ ವ್ಯಥೆಯನ್ನು ಹೊಂದಬೇಡ. ನಾನಿಲ್ಲಿ ಬಿಲ್ವೋದಕೇಶ್ವರನೆಂದು ಪ್ರಸಿದ್ಧನಾಗಿ ಇರುವೆನು. ಇಲ್ಲಿ ಯಾರು ನನ್ನಲ್ಲಿ ಭಕ್ತಿಯುಳ್ಳವನಾಗಿ ಮೂರು ರಾತ್ರಿ ಉಪವಾಸವಿರುವನೋ ಅವನಿಗೆ ಬೇಕಾದ ಅಭೀಷ್ಟವು ಸಿದ್ಧಿಯನ್ನು ಹೊಂದುವುದು. ಇಲ್ಲಿ ಅವಿಂಧ್ಯಾ ಎಂಬ ಹೆಸರಿನಿಂದ ಗಂಗೆಯು ಇರುವಳು. ಗಂಗೆಯ ಮಂತ್ರವನ್ನು ಹೇಳುವುದರಿಂದಲೇ ಇಲ್ಲಿ ಗಂಗಾಸ್ನಾನ ಮಾಡಿದ ಫಲವು ಬರುವುದು. ಇಲ್ಲಿಯೇ ಭೂಮಿಯ ಕೆಳಗೆ ಷಟ್ಪುರವೆಂದು ಪ್ರಸಿದ್ಧವಾದ ದಾನವರ ನಗರವಿರುವುದು. ಆದೈತ್ಯರು ಲೋಕಕ್ಕೆ ಶತ್ರುಗಳಾದ ರಾಕ್ಷಸರು ಈ ಪರ್ವತದ ಶಿಖರದಲ್ಲಿ ಮರೆಯಾಗಿ ವಾಸಮಾಡು ತ್ತಿದ್ದಾರೆ. ಬ್ರಹ್ಮದೇವರ ವರದಿಂದ ಅವರು ದೇವತೆಗಳಿಂದ ಸಾಯುವವರಲ್ಲ. ಮನುಷ್ಯರಂತೆ ಅವತರಿಸಿದ ನೀನೇ ಅವರನ್ನು ಸಂಹರಿಸಬೇಕು' ಈರೀತಿಯಾಗಿ ಹೇಳಿ ಮಹಾನುಭಾವನಾದ ಪರಮಾತ್ಮನನ್ನು ಆಲಿಂಗನ ಮಾಡಿ ಮರೆಯಾಗಿ ಹೋದರು. ರುದ್ರದೇವರು ಹೊರಟುಹೋಗಲು ರಾತ್ರಿಯು ಹೋಗಿ ಬೆಳಗಾಗಲು ಪರಮಾತ್ಮನು ಆ ಪರ್ವತವನ್ನು ಸ್ತೋತ್ರಮಾಡಿ 'ಪರ್ವತಶ್ರೇಷ್ಠನೇ! ನಿನ್ನ ಕೆಳಗೆ ಬ್ರಹ್ಮದೇವರ ವರದಿಂದ ದೇವತೆಗಳಿಂದ ಸಾಯದವರಾದ ಮಹಾಸುರರು ವಾಸಮಾಡುತ್ತಿರುವರು. ನಾನು ಅವರನ್ನು ತಡೆದು ಹೊರಗೆ ಬಾರದಂತೆ ಮಾಡು ತ್ತೇನೆ. ಆಗ ಅವರು ನನ್ನ ಆಜ್ಞೆಯಿಂದ ಅಲ್ಲಿಯೇ ಸಾಯುವರು. ನಿನ್ನಲ್ಲಿ ನಾನು ಸನ್ನಿಹಿತನಾಗಿರುವೆನು. ನಿನ್ನ ಶಿಖರದಲ್ಲಿ ಏರಿ ನನ್ನ ರೂಪವನ್ನು ದರ್ಶನ ಮಾಡುವರು ಸಾವಿರ ಗೋದಾನ ಮಾಡಿದ ಫಲವನ್ನು ಹೊಂದುವರು. ನಿನ್ನಲ್ಲಿರುವ ಕಲ್ಲಿನಿಂದ ನನ್ನ

ಪ್ರತಿಮೆಯನ್ನು ಮಾಡಿ ಯಾರು ಪೂಜಿಸುವರೋ ಅವರು ನನ್ನ ಲೋಕವನ್ನು ಹೊಂದುವರು' ಎಂದು ಹೇಳಿ ಅನುಗ್ರಹ ಮಾಡಿದನು. ಆ ಸಮಯವನ್ನು ಆರಂಭಿಸಿ ಪರಮಾತ್ಮನು ಆ ಪರ್ವತದಲ್ಲಿ ಸನ್ನಿಹಿತನಾಗಿರುವನು. ಪರಮಾತ್ಮನಲೋಕವನ್ನು ಹೊಂದುವ ಇಚ್ಛಿಸುವವರು, ಅಲ್ಲಿಯ ಕಲ್ಲುಗಳಿಂದ ಪ್ರತಿಮೆಗಳನ್ನು ಮಾಡಿಸಿ ಪೂಜಿಸುತ್ತಿರುವರು.

ತರುವಾಯ ಕೃಷ್ಣಪರಮಾತ್ಮನು ಅಸುರಜನರ ಮೋಹಕ್ಕಾಗಿ ಬಿಲ್ವೇಶ್ವರನೆಂದು ಹೆಸರುಳ್ಳ ರುದ್ರದೇವರನ್ನು ನಮಸ್ಕರಿಸಿ ರಥದಲ್ಲಿ ಕೂತುಕೊಂಡು ಇಂದ್ರದೇವ ರಿದ್ದಲ್ಲಿಗೆ ಹೋಗಿ ಪುಷ್ಕರದ ಸಮೀಪದಲ್ಲಿ ಎಲ್ಲಾ ದೇವತೆಗಳಿಂದ ಕೂಡಿಕೊಂಡು ಸತ್ಕಾರವನ್ನು ಹೊಂದಿದ್ದ ಆ ಇಂದ್ರದೇವರನ್ನು ಯುದ್ಧಕ್ಕೆ ಕರೆದನು. ತರುವಾಯ ಇಂದ್ರದೇವರೂ ಜಯಂತನೂ ರಥವನ್ನು ಏರಿದರು. ತರುವಾಯ ಪಾರಿಜಾತ ವೃಕ್ಷಕ್ಕಾಗಿ ಯುದ್ಧವು ನಡೆಯಿತು. ಯುದ್ಧದಲ್ಲಿ ಪರಮಾತ್ಮನು ಬಾಣಗಳಿಂದ ಇಂದ್ರದೇವರ ಸೈನಿಕರನ್ನು ಬಡೆದನು. ಪರಮಾತ್ಮನು ಇಂದ್ರದೇವರನಾಗಲೀ ಇಂದ್ರದೇವರು ಪರಮಾತ್ಮ ನನ್ನಾಗಲೀ ಬಡಿಯಲಿಲ್ಲ. ಪರಮಾತ್ಮನು ಇಂದ್ರದೇವರ ಒಂದೊಂದು ಕುದುರೆಯನ್ನು ಹತ್ತು ಹತ್ತು ತೀಕ್ಷ್ಣ ಬಾಣಗಳಿಂದ ಬಡಿದನು. ಇಂದ್ರದೇವರೂ ಶೈಬ್ಯ ಸುಗ್ರೀವ ಇತ್ಯಾದಿ ಪರಮಾತ್ಮನ ರಥದ ಕುದುರೆಗಳನ್ನು ಬಾಣಗಳಿಂದ ಮರೆಮಾಡಿದರು. ಪರಮಾತ್ಮನು ಐರಾವತದ ಮೇಲೆ ಸಾವಿರ ಬಾಣಗಳನ್ನು ಸುರಿಸಿದನು. ಇಂದ್ರದೇವರು ಗರುಡದೇವರ ಮೇಲೆ ಬಾಣಗಳನ್ನು ಸುರಿಸಿದರು. ಈರೀತಿಯಾಗಿ ಅವರಿಬ್ಬರೂ ಯುದ್ಧವನ್ನು ಮಾಡಿಕೊಂಡರು. ಆಗ ಭೂಮಿಯು ನಡುಗಿತು. ಅನೇಕ ಅಪಶಕುನಗಳಾದವು. ಆಗ ಮುನಿಗಳೆಲ್ಲರೂ ಜಗತ್ತಿಗೆ ಹಿತವಾಗಲಿ ಎಂದು ಮಂತ್ರಗಳನ್ನು ಜಪಿಸಿದರು. ಆಗ ಬ್ರಹ್ಮದೇವರು ಕಶ್ಯಪರೊಡನೆ 'ಪತ್ನಿಯಾದ ಅದಿತಿಯೊಡನೆ ಹೋಗಿ ಇಬ್ಬರು ಮಕ್ಕಳನ್ನು ಯುದ್ಧದಿಂದ ನಿಲ್ಲಿಸು' ಎಂದು ಹೇಳಿದರು. ಕಶ್ಯಪರು ಬ್ರಹ್ಮದೇವರೊಡನೆ ಹಾಗೆಯೇ ಆಗಲಿ ಎಂದು ಹೇಳಿ ರಥದಲ್ಲಿ ಕೂತುಕೊಂಡು ಯುದ್ಧವು ನಡೆಯುವಲ್ಲಿಗೆ ಹೋದರು.

ಅದಿತಿಯೊಡನೆ ಬಂದಿರುವ ಕಶ್ಯಪರನ್ನು ನೋಡಿ ಇಂದ್ರದೇವರೂ ಪರಮಾತ್ಮನೂ ಇಬ್ಬರೂ ರಥದಿಂದ ಕೆಳಗೆ ಇಳಿದರು. ಇಬ್ಬರೂ ಶಸ್ತ್ರವನ್ನು ಕೆಳಗೆ ಹಾಕುವವರಾಗಿ ಅದಿತಿ ಕಶ್ಯಪರಿಗೆ ನಮಸ್ಕರಿಸಿದರು. ಅದಿತಿಯು ಇಬ್ಬರ ಕೈಗಳಲ್ಲಿ ಹಿಡಿದುಕೊಂಡು ಅಣ್ಣತಮ್ಮಂದಿರು ಅಲ್ಲದಿರುವವರಂತೆ ಒಬ್ಬರನ್ನೊಬ್ಬರು ಕೊಲ್ಲಲಿಕ್ಕೆ

ಯಾಕೆ ಇಚ್ಛಿಸಿರುವಿರಿ? ಸ್ವಲ್ಪ ಕಾರ್ಯಕ್ಕಾಗಿ ನನ್ನ ಮಕ್ಕಳು ಈ ಭಯಂಕರವಾದ ಕಾರ್ಯವನ್ನು ಮಾಡುವುದು ಸರಿಯಲ್ಲವೆಂದು ನಾನು ತಿಳಿಯುವೆನು. ತಾಯಿತಂದೆಗಳ ಮಾತನ್ನು ಕೇಳುವಿಯಾದರೆ ಅಸ್ತ್ರಗಳನ್ನು ಕೆಳಗಿಟ್ಟು ನಾನು ಹೇಳಿದಂತೆ ಮಾಡಿರಿ' ಎಂದು ಹೇಳಿದಳು. ಇಬ್ಬರೂ ಹಾಗೆಯೇ ಆಗಲಿ ಎಂದು ಹೇಳಿ ಪರಸ್ಪರ ಮಾತಾಡಿಕೊಂಡು ಗಂಗೆಗೆ ಸ್ನಾನಮಾಡಲಿಕ್ಕೆ ಹೋದರು. ಆಗ ಇಂದ್ರದೇವರು 'ನೀನೇ ನನ್ನನ್ನು ಲೋಕಗಳಿಗೆ ರಾಜನೆಂದು ಸ್ಥಾಪಿಸಿರುವಿ. ನೀನೇ ಈಗ ನನ್ನನ್ನು ಹೇಗೆ ಅವಮಾನ ಮಾಡುವಿ? ನನ್ನನ್ನು ಅಣ್ಣನೆಂದು ಒಪ್ಪಿಕೊಂಡು ಹೇಗೆ ಸಂಹರಿಸಲಿಕ್ಕೆ ಇಚ್ಛಿಸುವಿ?' ಎಂದು ಹೇಳಿದರು. ತರುವಾಯ ಅವರಿಬ್ಬರೂ ಗಂಗೆಯಲ್ಲಿ ಸ್ನಾನಮಾಡಿ ಅದಿತಿ ಕಶ್ಯಪರಿದ್ದಲ್ಲಿಗೆ ಬಂದರು. ಎಲ್ಲಿ ಅವರು ಅದಿತಿಕಶ್ಯಪರೊಡನೆ ಸೇರಿದರೋ ಆ ಸ್ಥಳವನ್ನು ಮುನಿಗಳು ಪ್ರಿಯಸಂಗಮನ ಎಂದು ಕರೆದರು. ತರುವಾಯ ಕೃಷ್ಣಪರಮಾತ್ಮನು ಇಂದ್ರದೇವರಿಗೆ ಬಾಯಿಯಿಂದ ಅಭಯಪ್ರದಾನಮಾಡಿದನು.

ಆಮೇಲೆ ಎಲ್ಲಾ ದೇವತೆಗಳೂ ವಿಮಾನದಲ್ಲಿ ಕೂತುಕೊಂಡು ಸ್ವರ್ಗಕ್ಕೆ ಹೋದರು. ಕಶ್ಯಪರೂ ಅದಿತಿಯೂ ಇಂದ್ರದೇವರೂ ಪರಮಾತ್ಮನೂ ಒಂದು ವಿಮಾನದಲ್ಲಿ ಕೂತುಕೊಂಡು ಸ್ವರ್ಗಕ್ಕೆ ಹೋದರು. ಅವರೆಲ್ಲರೂ ಇಂದ್ರದೇವರ ಮನೆಗೆ ಹೋಗಿ ಸಂತೋಷದಿಂದ ವಾಸಮಾಡಿದರು. ಶಚೀದೇವಿಯು ಕಶ್ಯಪರಿಗೂ ಅದಿತಿಗೂ ಉಪಚರಿಸಿದಳು. ತರುವಾಯ ಆ ರಾತ್ರಿಯು ಕಳೆದು ಮರುದಿನ ಬೆಳಗ್ಗೆ ಆಗಲು ಅದಿತಿಯು 'ಕೃಷ್ಣ! ನಿನ್ನ ಪತ್ನಿಯ ಮನಸ್ಸಿನಲ್ಲಿರುವ ಪುಣ್ಯಕವ್ರತವನ್ನು ಮಾಡುವುದಕ್ಕಾಗಿ ಪಾರಿಜಾತವೃಕ್ಷವನ್ನು ದ್ವಾರಕೆಗೆ ತೆಗೆದುಕೊಂಡು ಹೋಗು. ಸತ್ಯಭಾಮೆಯು ಆ ವ್ರತವನ್ನು ಮಾಡಿ ಆದಮೇಲೆ ಪಾರಿಜಾತವೃಕ್ಷವನ್ನು ನಂದನ ವನದಲ್ಲಿಯೇ ಸ್ಥಾಪಿಸಬೇಕು' ಎಂದು ಹೇಳಿದಳು. ಕೃಷ್ಣಪರಮಾತ್ಮನು ಹಾಗೆಯೇ ಆಗಲಿ' ಎಂದನು. ತರುವಾಯ ಪರಮಾತ್ಮನು ಲೋಕಶಿಕ್ಷೆಗಾಗಿ ಕಶ್ಯಪರಿಗೂ ಅದಿತಿಗೂ ಇಂದ್ರದೇವರಿಗೂ ಶಚೀದೇವಿಗೂ ನಮಸ್ಕರಿಸಿ ದ್ವಾರಕೆಗೆ ಹೊರಟನು. ಆಗ ಶಚೀದೇವಿಯು ಕೃಷ್ಣಪರಮಾತ್ಮನ ಎಲ್ಲಾ ಪತ್ನಿಯರಿಗೂ ಯೋಗ್ಯವಸ್ತುಗಳನ್ನು ಪ್ರೀತಿಯಿಂದ ಕೊಟ್ಟಳು. ದಿವ್ಯರತ್ನಗಳನ್ನು ಸೀರೆಗಳನ್ನೂ ಕೊಟ್ಟಳು. ಪರಮಾತ್ಮನು ಎಲ್ಲವನ್ನೂ ಸ್ವೀಕರಿಸಿ ದ್ವಾರಕಾಪಟ್ಟಣಕ್ಕೆಂದು ಹೊರಟನು. ಗಂಧರ್ವಾದಿಗಳಿಂದ ಸತ್ಕೃತನಾಗಿ ಸಾತ್ಯಕಿಯಿಂದಲೂ ಪ್ರದ್ಯುಮ್ನನಿಂದಲೂ ಸಹಿತನಾಗಿ ರೈವತಪರ್ವತಕ್ಕೆ ಬಂದನು.

ಪರಮಾತ್ಮನು ಅಲ್ಲಿಯೇ ಪಾರಿಜಾತವೃಕ್ಷವನ್ನು ಇಟ್ಟು 'ಇಂದ್ರಲೋಕದಿಂದ ಪಾರಿಜಾತವೃಕ್ಷವನ್ನು ತಂದಿರುವೆನು. ಈದಿನವೇ ಅದನ್ನು ದ್ವಾರಕಾಪಟ್ಟಣಕ್ಕೆ ತೆಗೆದುಕೊಂಡು ಬರುವೆನು. ಆದುದರಿಂದ ಊರನ್ನೆಲ್ಲಾ ಅಲಂಕಾರ ಮಾಡಬೇಕು' ಎಂದು ಹೇಳಿ ಸತ್ಯಕನನ್ನು ಕಳುಹಿಸಿದನು. ಸತ್ಯಕನು ಊರ ಒಳಗೆ ಹೋಗಿ ಸಾಂಬನೇ ಮೊದಲಾದವರನ್ನು ಕರೆದುಕೊಂಡು ಪುನಃ ಬಂದನು. ತರುವಾಯ ಪ್ರದ್ಯುಮ್ನನು ಗರುಡದೇವರ ಮೇಲೆ ಪಾರಿಜಾತವೃಕ್ಷವನ್ನು ಇಟ್ಟುಕೊಂಡು ಮನೋಹರವಾದ ದ್ವಾರಕಾಪಟ್ಟಣಕ್ಕೆ ಪ್ರವೇಶಮಾಡಿದನು. ಶೈಬ್ಯಾದಿ ಕುದುರೆಗಳಿಂದ ಕೂಡಿದ ರಥದಲ್ಲಿ ಕೂತಕೊಂಡು ಪರಮಾತ್ಮನು ಹಿಂದೆಯೇ ಹೋದನು. ಸಾಂಬ ಸತ್ಯಕ ಇತ್ಯಾದಿ ಯಾದವರು ರಥದಲ್ಲಿ ಕೂತುಕೊಂಡು ಪರಮಾತ್ಮನ ರಥದ ಹಿಂದೆಯೇ ಹೋದರು. ಸತ್ಯಕನಿಂದ ಎಲ್ಲ ವಿಸ್ತಾರವನ್ನು ಕೇಳಿ ಯಾದವರೆಲ್ಲರೂ ಬಹು ಆಶ್ಚರ್ಯವನ್ನು ಹೊಂದಿದರು. ಆ ಅದ್ಭುತವಾದ ಮರವನ್ನು ನೋಡಿದ ಮುದುಕ ರೆಲ್ಲರೂ ಯೌವನ ಉಳ್ಳವರಾದರು. ಕುರುಡರಿಗೆ ಆ ಮರದ ವಾಸನೆಯನ್ನು ಮೂಸಿಯೇ ಕಣ್ಣುಬಂದಿತು. ರೋಗಿಗಳ ರೋಗ ಪರಿಹಾರವಾಯಿತು. ಎಲ್ಲರೂ ಸಂತೋಷವುಳ್ಳವರಾಗಿ ಪರಮಾತ್ಮನಿಗೆ ನಮಸ್ಕರಿಸಿದರು. ಆ ಮರದ ಹತ್ತಿರ ಹೋದಜನರು ನಾನಾ ವಿಧ ವಾದ್ಯಗಳ ಶಬ್ದಗಳನ್ನು ಹಾಡುಗಳನ್ನು ಕೇಳುತ್ತಿದ್ದರು. ಯಾರು ಯಾವ ಸುವಾಸನೆಯನ್ನು ಬಯಸಿಕೊಂಡು ಆ ಮರದ ಹತ್ತಿರ ಹೋಗುವವನೋ ಅವನಿಗೆ ಆ ವಾಸನೆಯು ಬರುತ್ತಿತ್ತು.

ತರುವಾಯ ಪರಮಾತ್ಮನು ದ್ವಾರಕಾಪಟ್ಟಣವನ್ನು ಪ್ರವೇಶಿಸಿ ವಸುದೇವನಿಗೂ ದೇವಕಿಗೂ ನಮಸ್ಕರಿಸಿದನು. ಉಗ್ರಸೇನನಿಗೂ ಬಲರಾಮದೇವರಿಗೂ ಉಳಿದ ವಯಸ್ಸಿನಲ್ಲಿ ದೊಡ್ಡವರಾದ ಯಾದವರಿಗೂ ನಮಸ್ಕರಿಸಿದನು. ಎಲ್ಲರಿಗೂ ಸತ್ಕರಿಸಿ ಕಳುಹಿಸಿ ಪರಮಾತ್ಮನು ತನ್ನ ಮನೆಗೆ ಹೋದನು. ಭಗವಂತನು ಪಾರಿಜಾತವೃಕ್ಷವನ್ನು ಹಿಡಿದುಕೊಂಡು ಸತ್ಯಭಾಮಾದೇವಿಯರ ಮನೆಯಒಳಗೆ ಪ್ರವೇಶಿಸಿದನು. ಸತ್ಯಭಾಮಾದೇವಿಯರು ಸಂತೋಷದಿಂದ ಪರಮಾತ್ಮನನ್ನು ಪೂಜಿಸಿದರು. ಪಾರಿಜಾತವೃಕ್ಷವನ್ನು ಸ್ವೀಕರಿಸಿದರು. ಪರಮಾತ್ಮನ ಇಚ್ಛೆಯಿಂದ ಆ ಪಾರಿಜಾತ ಮರವು ಚಿಕ್ಕದೂ ಆಗುತ್ತಿತ್ತು. ದೊಡ್ಡದೂ ಆಗುತ್ತಿತ್ತು. ಕೆಲವು ಸಮಯ ದ್ವಾರಕಾ ಪಟ್ಟಣವನ್ನೆಲ್ಲಾ ವ್ಯಾಪಿಸಿಕೊಂಡು ಇರುವುದು. ಕೆಲವು ಸಮಯದಲ್ಲಿ ಹೆಬ್ಬೆಟ್ಟಿನಷ್ಟೇ ದೊಡ್ಡದಾಗಿರುವುದು. ಸತ್ಯಭಾಮಾದೇವಿಯರು ತನ್ನ ಮನೋಭೀಷ್ಟವನ್ನು ಹೊಂದಿ ಸಂತೋಷಪಟ್ಟರು. ಅವರು ಪುಣ್ಯಕ ಎಂಬ ವ್ರತವನ್ನು ಮಾಡುವುದಕ್ಕಾಗಿ

ಸಾಮಗ್ರಿಗಳನ್ನು ಸಂಗ್ರಹಿಸಲಿಕ್ಕೆ ಆರಂಭಿಸಿದರು. ಜಂಬೂದ್ವೀಪದಲ್ಲೇ ಯಾವಯಾವ ಯೋಗ್ಯವಸ್ತುಗಳಿವೆಯೋ ಅವುಗಳನ್ನೆಲ್ಲಾ ಶ್ರೀಭಗವಂತನು ತರಿಸಿದನು. ವ್ರತದಲ್ಲಿ ಕೊಡುವ ದಾನವನ್ನು ತೆಗೆದುಕೊಳ್ಳುವುದಕ್ಕಾಗಿ ನಾರದರನ್ನು ಸ್ಮರಿಸಿದನು. ಆಗಲೇ ನಾರದರು ಬಂದು ಸೇರಿದರು.

ಶ್ರೀಭಗವಂತನು ಲೋಕಶಿಕ್ಷೆಗಾಗಿ ನಾರದರು ಶಾಸ್ತ್ರದಲ್ಲಿ ಹೇಳಿದಂತೆ ಪೂಜಿಸಿ ದಾನವನ್ನು ತೆಗೆದುಕೊಳ್ಳಬೇಕೆಂದು ಹೇಳಿದನು. ತರುವಾಯ ಸ್ನಾನಮಾಡಿ ಬಂದ ನಾರದರಿಗೆ ಗಂಧಪುಷ್ಪಾದಿಗಳಿಂದ ಪೂಜೆಯನ್ನು ಮಾಡಿ ಭೋಜನ ಮಾಡಿಸಿದನು. ಸತ್ಯಭಾಮಾದೇವಿಯರಿಂದ ಕೂಡಿದವನಾಗಿ ಸಂತೋಷದಿಂದ ಇಚ್ಛಾನುಸಾರವಾಗಿ ಭೋಜನ ಮಾಡಿಸಿದನು. ಪುಣ್ಯಕವ್ರತವನ್ನು ಮಾಡುವ ಪ್ರಕಾರವನ್ನು ಅನುಸರಿಸಿ ಸತ್ಯಭಾಮಾ ದೇವಿಯರು ಹೂವಿನಮಾಲೆಯನ್ನು ಪರಮಾತ್ಮನ ಕುತ್ತಿಗೆಯಲ್ಲಿ ಹಾಕಿ ಪರಮಾತ್ಮನನ್ನು ಪಾರಿಜಾತಮರದಲ್ಲಿ ಕಟ್ಟಿದರು. ಆಮೇಲೆ ಪರಮಾತ್ಮನ ಅನುಜ್ಞೆಯನ್ನು ಪಡೆದು ಪರಮಾತ್ಮನನ್ನು ಜಲಸಹಿತವಾಗಿ ನಾರದರಿಗೆ ದಾನ ಮಾಡಿದರು. ಮತ್ತೂ ನಾರದರಿಗೆ ಸಾವಿರದನಗಳನ್ನು ಬೆಳ್ಳಿಬಂಗಾರ ರತ್ನ ಎಳ್ಳು ಇತರ ಧಾನ್ಯಗಳನ್ನು ದಾನಮಾಡಿದರು. ನಾರದರು ಎಲ್ಲವನ್ನೂ ತೆಗೆದುಕೊಂಡವರಾಗಿ ಸಂತೋಷದಿಂದ 'ಕೃಷ್ಣ! ಸತ್ಯಭಾಮಾದೇವಿಯು ನಿನ್ನನ್ನು ನನಗೆ ದಾನ ಮಾಡಿರುವಳು. ಆದುದರಿಂದ ನೀನೀಗ ನನ್ನವನಾದಿ. ನನ್ನ ಹಿಂದೆಯೇ ಬಾ. ನಾನು ಹೇಳಿದಂತೆಲ್ಲಾ ಮಾಡು' ಎಂದು ಹೇಳಿದರು. ಆಗ ಪರಮಾತ್ಮನು 'ತಾವು ಹೇಳುವ ಮಾತು ನ್ಯಾಯವು. ದಾಸನು ಸ್ವಾಮಿಯ ಕಾರ್ಯವನ್ನು ಮಾಡಬೇಕು' ಎಂದು ಹೇಳುತ್ತಾ ನಾರದರ ಹಿಂದೆಯೇ ಹೋದನು. ನಾರದರು 'ಅದನ್ನು ತೆಗೆದುಕೊಂಡು ಬಾ ಇದನ್ನು ತೆಗೆದುಕೊಂಡು ಬಾ' ಇತ್ಯಾದಿ ರೀತಿಯಾಗಿ ಬಹಳ ವಿಧವಾಗಿ ಪರಿಹಾಸವನ್ನು ಮಾಡುವವರಾಗಿ 'ಶ್ರೀಭಗವಂತನೇ! ನಾನು ಹೋಗಿ ಬರುವೆನು. ನೀನು ಇಲ್ಲೇ ಇರು' ಎಂದು ಹೇಳಿ ದೇವರ ಕುತ್ತಿಗೆಯಿಂದ ಸತ್ಯಭಾಮಾದೇವಿಯರು ಹಾಕಿದ್ದ ಪುಷ್ಪದ ಮಾಲೆಯನ್ನು ತೆಗೆದು 'ಭಗವಂತನೇ! ಕರುಸಹಿತವಾದ ಕಪಿಲ ಗೋವನ್ನು ಕೃಷ್ಣಾಜಿನದಲ್ಲಿ ಎಳ್ಳನ್ನು ಬಂಗಾರವನ್ನು ತುಂಬಿಸಿಯೂ ನನಗೀಗ ಕೊಡಬೇಕು. ಪುಣ್ಯಕವ್ರತದಲ್ಲಿ ಹೆಂಗಸು ಗಂಡನನ್ನು ದಾನಮಾಡಿದ ಮೇಲೆ ಗಂಡನನ್ನು ಪುನಃ ಬಿಡಿಸಿಕೊಳ್ಳುವುದಕ್ಕಾಗಿ ದಾನ ತೆಗೆದುಕೊಂಡವರಿಗೆ ಇವುಗಳನ್ನು ಕೊಡಬೇಕೆಂದು ರುದ್ರದೇವರು ನಿಯಮವನ್ನು ಮಾಡಿರುವರು' ಎಂದು ಹೇಳಿದರು. ಪರಮಾತ್ಮನು ಹಾಗೆಯೇ ಆಗಲಿ ಎಂದು ಹೇಳಿ ನಗುತ್ತಾ ಅವುಗಳನ್ನು ಕೊಟ್ಟನು.

ತರುವಾಯ ಭಗವಂತನು 'ನಾರದ! ನಿನ್ನ ಮೇಲೆ ನನಗೆ ಪರಮಪ್ರೀತಿಯಿದೆ. ನಿನಗೆ ಏನು ವರವು ಬೇಕಾಗಿದೆಯೋ ಅದನ್ನು ಕೇಳಿಕೊ. ನಾನು ಕೊಡುವೆನು' ಎಂದು ಹೇಳಿದನು. ಆಗ ನಾರದರು 'ಭಗವಂತನೇ! ಯಾವಾಗಲೂ ನನ್ನಲ್ಲಿ ಪ್ರೀತಿಯುಳ್ಳವನಾಗಿರು. ನಿನ್ನ ಅನುಗ್ರಹದಿಂದ ನಾನು ನಿನ್ನ ಸಾಲೋಕ್ಯವನ್ನು ಹೊಂದಬೇಕು. ನಾನು ಸ್ತ್ರೀಯ ಹೊಟ್ಟೆಯಲ್ಲಿ ಹುಟ್ಟಬಾರದು. ಇತರ ಜನ್ಮಗಳಲ್ಲಿಯೂ ಬ್ರಾಹ್ಮಣನೇ ಆಗಬೇಕು' ಎಂದು ಕೇಳಿಕೊಂಡರು. ಪರಮಾತ್ಮನು ಹಾಗೆಯೇ ಆಗಲಿ ಎಂದರು. ನಾರದರು ಸಂತೋಷಪಟ್ಟರು. ಸತ್ಯಭಾಮಾ ದೇವಿಯರು ಆ ವ್ರತಕ್ಕೆ ಪರಮಾತ್ಮನ ಹದಿನಾರು ಸಾವಿರಸ್ತ್ರೀಯರನ್ನು ಕರೆದಿದ್ದರು. ಅವರಿಗೆಲ್ಲಾ ಶಚೀದೇವಿಯು ಪರಮಾತ್ಮನ ಕೈಯಿಂದ ಕಳುಹಿಸಿದ್ದ ದಿವ್ಯ ವಸ್ತ್ರ ಆಭರಣಾದಿಗಳನ್ನು ವಿಭಾಗಮಾಡಿ ಕೊಟ್ಟರು. ಪರಮಾತ್ಮನ ಅಪ್ಪಣೆಯಿಂದ ನಾರದ ರಿಂದ ಕರೆಯಲ್ಪಟ್ಟ ಎಲ್ಲಾ ಬಂಧುಗಳೂ ಬಂದು ಪಾರಿಜಾತ ಮರದ ವೈಭವವನ್ನು ನೋಡಿದರು. ಪರಮಾತ್ಮನು ಕುಂತೀದೇವಿಯಿಂದಲೂ, ದ್ರೌಪದೀದೇವಿ ಯಿಂದಲೂ, ಸುಭದ್ರೆಯಿಂದಲೂ, ಸಹಿತರಾದ ಪಾಂಡವರನ್ನು ಸುತಶ್ರವಾದೇವಿ ಯನ್ನು ಮಗನಿಂದ ಸಹಿತನಾಗಿ ಸಂತೋಷದಿಂದ ಇದ್ದನು. ಒಂದು ವರ್ಷವಾದ ಮೇಲೆ ಪರಮಾತ್ಮನು ಪಾರಿಜಾತಮರವನ್ನು ಹಿಡಿದುಕೊಂಡು ಸ್ವರ್ಗಕ್ಕೆ ಹೋದನು. ಅಲ್ಲಿ ಅದಿತಿಕಶ್ಯಪರನ್ನು ಇಂದ್ರದೇವರಿಂದ ಸಹಿತರಾಗಿ ಹೋಗಿ ನಮಸ್ಕರಿಸಿದನು. ಆಗ ಅದಿತಿಯು ದೇವೋತ್ತಮನೇ! ಹೀಗೆಯೇ ಯಾವಾಗಲೂ ನಿಮಗೆ ಸಹೋದರ ಭಾವವು ಇರಲಿ. ನೀನು ನನ್ನ ಮನಸ್ಸಿನ ಅಭೀಷ್ಟವನ್ನು ಪೂರಯಿಸು' ಎಂದು ಹೇಳಿದಳು. ಅದಕ್ಕೆ ಪರಮಾತ್ಮನು ಹಾಗೆಯೇ ಆಗಲಿ ಎಂದನು.

ತರುವಾಯ ಭಗವಂತನು ಅದಿತಿಕಶ್ಯಪರೊಡನೆ ಹೋಗಿ ಬರುತ್ತೇನೆ ಎಂದು ಹೇಳಿಕೊಂಡು ಇಂದ್ರದೇವರೊಡನೆ 'ಭೂಮಿಯೊಳಗೆ ಇರುವ ಅವಧ್ಯರಾದ ಅಸುರರನ್ನು ಸಂಹರಿಸಬೇಕೆಂದು ರುದ್ರದೇವರು ಹೇಳಿರುವರು. ಈದಿನದಿಂದ ಹತ್ತುದಿನಗಳಲ್ಲಿ ನಾನು ಆ ಅಸುರರನ್ನು ಸಂಹರಿಸುವೆನು. ಅವರು ದೇವತೆಗಳಿಂದ ಸಾಯಲಾರರು. ಮನುಷ್ಯರೂಪಧರಿಸಿದ ನಾವು ಸಂಹರಿಸಬೇಕಾಗಿದೆ. ಅದಕ್ಕೆ ಪ್ರವರ ಎಂಬ ಬ್ರಾಹ್ಮಣನೂ ಜಯಂತನೂ ಸಹಾಯಕ್ಕೆ ಬರಬೇಕು' ಎಂದು ಹೇಳಿದನು. ಇಂದ್ರದೇವರು ಹಾಗೆಯೇ ಆಗಲಿ ಎಂದು ಹೇಳಿದರು. ಇಬ್ಬರೂ ಆಲಿಂಗಿಸಿಕೊಂಡರು. ಭಗವಂತನು ದ್ವಾರಕಾಪಟ್ಟಣಕ್ಕೆ ಬಂದು ಸೇರಿದನು.



# ಷಟ್ಪುರವಧ [1]

ರುದ್ರದೇವರು ತ್ರಿಪುರಾಸುರರನ್ನು ಸಂಹರಿಸಿದ ಮೇಲೆ ಆ ತ್ರಿಪುರಾಸುರರಿಗೆ ಜ್ಞಾತಿಗಳಾದ ಅನೇಕ ರಾಕ್ಷಸರು ಸಂತಾಪವುಳ್ಳವರಾಗಿ ಮಹರ್ಷಿಗಳಿಂದ ಸೇವಿತವಾದ ಜಂಬೂದ್ವೀಪದಲ್ಲಿ ಸೂರ್ಯನಿಗೆ ಎದುರಾಗಿ ನಿಂತುಕೊಂಡು ಗಾಳಿ ಆಹಾರವುಳ್ಳವರಾಗಿ ಬ್ರಹ್ಮದೇವರನ್ನು ಸ್ತೋತ್ರಮಾಡುತ್ತಾ, ನೂರು ಸಾವಿರ ವರ್ಷ ವಿದ್ದರು. ಅವರಲ್ಲಿ ಒಂದು ಸಮೂಹವು ಅತ್ತಿಯ ಮರವನ್ನು ಆಶ್ರಯಿಸಿಕೊಂಡು ತಪಸ್ಸು ಮಾಡುತ್ತಿತ್ತು. ಕೆಲವರು ಬೆಳದ ಹಣ್ಣಿನ ವನದಲ್ಲಿಯೂ, ಇನ್ನು ಕೆಲವರು ಸೃಗಾಲ ಎಂಬ ಮರಗಳ ವನದಲ್ಲಿಯೂ ಮತ್ತು ಕೆಲವರು ಆಲದ ಮರದ ಬುಡದಲ್ಲಿಯೂ ತಪಸ್ಸು ಮಾಡುತ್ತಿದ್ದರು. ಅವರ ತಪಸ್ಸಿಗೆ ಸಂತೋಷಪಟ್ಟು ಬ್ರಹ್ಮದೇವರು ಅವರಿಗೆ ವರವನ್ನು ಕೊಡಲಿಕ್ಕೆ ಬಂದರು. ಆಗ ಅವರು ನಾವು ರುದ್ರದೇವರಿಗೆ ದ್ರೋಹವನ್ನು ಮಾಡಬೇಕು. ಬೇರೆ ವರವು ಬೇಕಾಗಿಲ್ಲ ಎಂದರು. ಅದಕ್ಕೆ ಬ್ರಹ್ಮದೇವರು ಜಗತ್ತನ್ನೇ ಸಂಹರಿಸುವ ರುದ್ರದೇವರಿಗೆ ದ್ರೋಹಮಾಡಿ ಬದುಕಲಿಕ್ಕೆ ಆಗುವುದೇ? ಈ ವಿಷಯದಲ್ಲಿ ವ್ಯರ್ಥವಾಗಿ ಶ್ರಮವನ್ನು ಹೊಂದಬೇಡಿರಿ ಎಂದು ಹೇಳಿದರು. ಅವರಲ್ಲಿ ಕೆಲವರು ಬ್ರಹ್ಮದೇವರ ಮಾತನ್ನು ಅಂಗೀಕರಿಸಲಿಲ್ಲ. ಇನ್ನು ಕೆಲವರು ದೀರ್ಘಯೋಚನೆಯುಳ್ಳವರು ಅಂಗೀಕರಿಸಿ ದರು. ಯಾರು ಅಂಗೀಕರಿಸಲಿಲ್ಲವೋ ಅವರೊಡನೆ ರುದ್ರದೇವರ ದ್ರೋಹವನ್ನು ಬಿಟ್ಟು ಬೇರೆ ವರವನ್ನು ಕೇಳಿಕೊಳ್ಳಿರಿ ಎಂದು ಹೇಳಿದರು. ಅದಕ್ಕೆ ಅವರು 'ನಾವು ಎಲ್ಲಾ ದೇವತೆಗಳಿಂದಲೂ ಅವಧ್ಯರಾಗಬೇಕು. ಭೂಮಿಯ ಕೆಳಗೆ ನಮಗೆ ಆರು ಪಟ್ಟಣಗಳು ಇರಬೇಕು. ಆ ಆರು ಪಟ್ಟಣಗಳಲ್ಲಿಯೂ ಎಲ್ಲಾ ಅಭೀಷ್ಟಗಳೂ ಇರಬೇಕು. ನಾವು ಅಲ್ಲಿ ಸುಖವಾಗಿ ವಾಸಮಾಡುವೆವು. ನಮ್ಮ ಜ್ಞಾತಿಗಳಾದ ತ್ರಿಪುರವನ್ನು ಸಂಹರಿಸಿದ ರುದ್ರದೇವರಿಂದ ನಮಗೆ ಭಯವುಂಟಾಗಬಾರದು. ಅವರು ತ್ರಿಪುರಾಸುರರನ್ನು ಸಂಹರಿಸಿದ್ದನ್ನು ನೋಡಿ ನಾವು ತುಂಬಾ ಭಯವುಳ್ಳವರಾಗಿರುವೆವು' ಎಂದು ಹೇಳಿದರು.

'ನೀವು ಸನ್ಮಾರ್ಗದಲ್ಲಿ ಇರುವ ಬ್ರಾಹ್ಮಣರನ್ನು ಪೀಡಿಸದೆ ಇರುವದಾದರೆ ದೇವತೆಗಳಿಂದಲೂ ರುದ್ರದೇವರಿಂದಲೂ ಮರಣರಹಿತರಾಗುವಿರಿ. ಮೋಹದಿಂದ ಬ್ರಾಹ್ಮಣರಿಗೆ ಏನಾದರೂ ಪೀಡೆಯನ್ನು ಮಾಡುವಿರಾದರೆ ನಾಶವನ್ನು ಹೊಂದುವಿರಿ.

1. ಹ.ವಂ.ಪ. ಅ–33

ಬ್ರಾಹ್ಮಣರಿಗೆ ಅಹಿತವನ್ನು ಮಾಡುವವರು ನಾರಾಯಣರೂಪಿ ಪರಮಾತ್ಮನಿಂದ ಭಯಪಡಬೇಕಾಗುತ್ತದೆ' ಎಂದು ಹೇಳಿದರು. ಈರೀತಿಯಾಗಿ ಬ್ರಹ್ಮದೇವರಿಂದ ವರವನ್ನು ಪಡೆದವರು ಹೊರಟುಹೋದರು. ಇನ್ನು ಯಾರು ರುದ್ರದೇವರ ಮೇಲೆ ದ್ವೇಷವನ್ನು ಬಿಟ್ಟು ಅವರಲ್ಲಿ ಭಕ್ತಿಯನ್ನು ಹೊಂದಿದರೋ ಅವರಿಗೆ ರುದ್ರದೇವರು ಪಾರ್ವತೀ ಸಹಿತರಾಗಿ ಬಿಳಿ ವೃಷಭದ ಮೇಲೆ ಕೂತುಕೊಂಡು ಬಂದು ತನ್ನ ದರ್ಶನವನ್ನು ಕೊಟ್ಟರು. ಅವರೊಡನೆ 'ನೀವು ವೈರವನ್ನು ದಂಭವನ್ನೂ ಹಿಂಸೆಯನ್ನೂ ಬಿಟ್ಟು ನನ್ನನ್ನೇ ಆಶ್ರಯಿಸಿರುವಿರಾದ ಕಾರಣ ನಿಮಗೆ ನಾನು ವರವನ್ನು ಕೊಡುವೆನು. ಸತ್ಕರ್ಮಾನುಷ್ಠಾನದಲ್ಲಿ ಆಸಕ್ತರಾದ ಯಾವ ಋಷಿಗಳಿಂದ ನೀವು ದೀಕ್ಷೆಯನ್ನು ಹೊಂದಿರುವಿರೋ ಅವರೊಡನೆ ನೀವು ಸ್ವರ್ಗವನ್ನು ಹೊಂದಿರಿ. ನಿಮ್ಮಲ್ಲಿ ನಾನು ಪ್ರೀತಿಯುಳ್ಳವನಾಗಿರುವೆನು. ಯಾರು ಈ ಬೆಳದ ಹಣ್ಣಿನ ಮರದ ವನದಲ್ಲಿ ವಾನಪ್ರಸ್ಥಧರ್ಮವನ್ನು ಮಾಡುತ್ತಾ ಇರುವರೋ ಅವರು ಸಾವಿರ ವರ್ಷ ತಪಸ್ಸು ಮಾಡಿದ ಫಲವನ್ನು ಹೊಂದುವರು. ಇಲ್ಲಿ ಮೂರು ರಾತ್ರಿ ತಪಸ್ಸು ಮಾಡಿದರೆ ಅಭೀಷ್ಟವನ್ನು ಹೊಂದುವರು. ಶ್ವೇತವಾಹನ ಎಂಬ ಹೆಸರುಳ್ಳ ನನ್ನನ್ನು ಯಾರು ಪೂಜಿಸುವನೋ ಅವನು ನನ್ನ ಲೋಕವನ್ನು ಹೊಂದುವನು. ಅತ್ತಿಯಮರದ ವನದಲ್ಲಿ ಆಲದಮರದ ಬುಡದಲ್ಲಿ ಬೆಳೆದ ಹಣ್ಣಿನ ಮರಗಳ ವನದಲ್ಲಿ ಸೃಗಾಲ ಎಂಬ ಮರಗಳ ವನದಲ್ಲಿ ತಪಸ್ಸು ಮಾಡುತ್ತಿರುವ ಋಷಿಗಳನ್ನು ಯಾರು ಪೂಜಿಸುವರೋ ಅವರೂ ಅಭೀಷ್ಟವನ್ನು ಹೊಂದುವರು. ಈರೀತಿಯಾಗಿ ಹೇಳಿ ಆ ಅಸುರರನ್ನು ಕರೆದುಕೊಂಡೇ ರುದ್ರಲೋಕಕ್ಕೆ ಹೋದರು.

ಆ ಸಮಯದಲ್ಲಿಯೇ ನಾಲ್ಕು ವೇದಗಳನ್ನೂ ಆರು ಅಂಗಶಾಸ್ತ್ರಗಳನ್ನೂ ಓದಿದ ಯಾಜ್ಞವಲ್ಕ್ಯರ ಶಿಷ್ಯರಾದ ಯಜುಃ ಶಾಖೆಯವರಾದ ಧರ್ಮಿಷ್ಠನಾದ ಬ್ರಹ್ಮದತ್ತನೆಂಬ ಬ್ರಾಹ್ಮಣನಿದ್ದನು. ಅವನು ಅಶ್ವಮೇಧಯಾಗವನ್ನು ಮಾಡಿದನು. ಅವನು ಷಟ್ಪುರದಲ್ಲಿ ಆವರ್ತ ಎಂಬ ನದಿಯ ತೀರದಲ್ಲಿ ದೀಕ್ಷಿತನಾಗಿದ್ದನು. ಅವನು ವಸುದೇವನಿಗೆ ಮಿತ್ರನೂ ಒಟ್ಟಿಗೆ ಓದಿದವನೂ ಅಧ್ವರ್ಯುವೂ ಆಗಿದ್ದನು. ಷಟ್ಪುರದಲ್ಲಿ ಯಾಗ ಮಾಡುತ್ತಿದ್ದ ಅವನ ಬಳಿಗೆ ವಸುದೇವನು ದೇವಕಿಯಿಂದ ಸಹಿತನಾಗಿ ಹೋದನು. ಅಲ್ಲಿ ಬ್ರಹ್ಮದತ್ತನ ಯಜ್ಞವು ನಡೆಯುತ್ತಿತ್ತು. ಬಹು ಅನ್ನದಾನವನ್ನು ಮಾಡುತ್ತಿದ್ದರು. ಬಹುಮುನಿಗಳು ಸೇರಿದ್ದರು. ವೇದವ್ಯಾಸ ದೇವರೇ ಮೊದಲಾದವರು ಬಂದಿದ್ದರು. ಅಲ್ಲಿ ಬಂದವರೆಲ್ಲರಿಗೆಲ್ಲಾ ಬೇಕಾದದ್ದನ್ನು ದೇವಕಿಯು ಕೊಡುತ್ತಿದ್ದಳು. ಶ್ರೀಕೃಷ್ಣಪರಮಾತ್ಮನ ಸಹಾಯದಿಂದ ಆ ಯಜ್ಞವು

ನಡೆಯುತ್ತಿರಲು ಷಟ್ಪುರದಲ್ಲಿ ಇದ್ದ ನಿಕುಂಭನೇ ಮೊದಲಾದ ದೈತ್ಯರು ಬಂದು ಬ್ರಹ್ಮದೇವರ ವರದಿಂದ ಅಹಂಕಾರವುಳ್ಳವರಾಗಿ 'ನಮಗೆಲ್ಲಾ ಯಜ್ಞದಲ್ಲಿ ಹದಿರ್ಭಾಗವನ್ನು ಕೊಡಬೇಕು. ನಾವೂ ಸೋಮಪಾನವನ್ನು ಮಾಡುವೆವು. ಬ್ರಹ್ಮದತ್ತನಿಗೆ ಅನೇಕ ರೂಪವತಿಯರಾದ ಹೆಣ್ಣುಮಕ್ಕಳಿರುವಲ್ಲಾ! ಆದುದರಿಂದ ನಮಗೆ ಕೆಲವು ಹೆಣ್ಣುಮಕ್ಕಳನ್ನು ನಮಗೆ ಕೊಡಲಿ. ಬ್ರಹ್ಮದತ್ತನು ನಮಗೆ ರತ್ನಗಳನ್ನು ಕೊಡಲಿ. ಇಲ್ಲದಿದ್ದರೆ ಯಾಗವನ್ನು ಮಾಡಬಾರದು. ನಾವು ಆಜ್ಞೆಯನ್ನು ಮಾಡುತ್ತಿರುವೆವು' ಎಂದು ಹೇಳಿದರು.

ಅದನ್ನು ಕೇಳಿ ಬ್ರಹ್ಮದತ್ತನು 'ಅಸುರ ಶ್ರೇಷ್ಠರೇ! ಪುರಾಣದಲ್ಲಿ ನಿಮಗೆ ಯಜ್ಞಭಾಗವು ವಿಹಿತವಾಗಿಲ್ಲ. ಆದುದರಿಂದ ನಾನು ನಿಮಗೆ ಈ ಯಾಗದಲ್ಲಿ ಸೋಮಪಾನ ಮಾಡಲಿಕ್ಕೆ ಬಿಡಲಿಕ್ಕೆ ಹೇಗೆ ಸಾಧ್ಯವಾಗುವುದು? ವೇದಾರ್ಥಗಳನ್ನು ತಿಳಿದಿರುವ ಇಲ್ಲಿರುವ ಎಲ್ಲಾ ಮುನಿಗಳ ಹತ್ತಿರ ಕೇಳಿರಿ. ಕನ್ಯೆಯರನ್ನು ದಾನಮಾಡಬೇಕಾಗಿದೆ. ಅದೂ ನಾನು ಸಂಕಲ್ಪಿಸಿದ್ದೇನೆ. ಯಜ್ಞಮಾಡುವ ಸ್ಥಳದಲ್ಲಿ ಯೋಗ್ಯರನ್ನು ನೋಡಿಯೇ ಕೊಡಬೇಕು. ರತ್ನಗಳನ್ನು ಬೇಕಾದರೆ ಕೊಡುತ್ತೇನೆ. ಆದರೆ ಸಮಾಧಾನದಿಂದ ಕೊಡುತ್ತೇನೆ. ಕೃಷ್ಣ ಪರಮಾತ್ಮನನ್ನು ನಾನು ಆಶ್ರಯಿಸಿರುವೆ ನಾದ ಕಾರಣ ನೀವು ಬಲಾತ್ಕಾರ ಮಾಡುವುದಾದರೆ ಅವುಗಳನ್ನು ಕೊಡಲಾರೆನು' ಎಂದು ಹೇಳಿದನು. ಅದನ್ನು ಕೇಳಿ ನಿಕುಂಭನೇ ಮೊದಲಾದ ಅಸುರರು ಯಜ್ಞಶಾಲೆ ಯನ್ನು ಹಾಳು ಮಾಡಿದರು. ಬ್ರಹ್ಮದತ್ತನ ಕನ್ಯೆಯರನ್ನು ಅಪಹರಿಸಿದರು. ಅದನ್ನು ನೋಡಿ ಅಲ್ಲಿಯೇ ಇದ್ದ ವಸುದೇವನು ಕೃಷ್ಣಪರಮಾತ್ಮನನ್ನು ಬಲರಾಮದೇವರನ್ನೂ ಗದನನ್ನು ಸ್ಮರಿಸಿದನು. ಆಗ ಎಲ್ಲವನ್ನು ತಿಳಿದ ಪರಮಾತ್ಮನು ಪ್ರದ್ಯುಮ್ನನೊಡನೆ 'ಮಗನೇ! ಬೇಗನೇ ನೀನು ಹೋಗಿ ಮಾಯೆಯಿಂದ ಬ್ರಹ್ಮದತ್ತನ ಕನ್ಯೆಯರನ್ನು ರಕ್ಷಿಸು. ನಾನು ಯಾದವಸೈನ್ಯದಿಂದ ಸಹಿತನಾಗಿ ಷಟ್ಪುರಕ್ಕೆ ಬರುವೆನು' ಎಂದು ಹೇಳಿದನು.

ಪ್ರದ್ಯುಮ್ನನು ಹಾಗೆಯೇ ಆಗಲಿ ಎಂದು ಹೇಳಿ ಷಟ್ಪುರಕ್ಕೆ ಹೋದನು. ಒಂದೇ ನಿಮಿಷದಲ್ಲಿಯೇ ಹೋಗಿ ಆ ಕನ್ಯೆಯರನ್ನು ಮಾಯೆಯಿಂದ ಅಪಹರಿಸಿದನು. ಮಾಯೆಯಿಂದ ಕನ್ಯೆಯರನ್ನು ಮಾಡಿ ಅಲ್ಲಿ ಇಟ್ಟನು. ಅಸುರರು ಮಾಯೆಯಿಂದ ನಿರ್ಮಿತರಾದ ಕನ್ಯೆಯರನ್ನು ಹಿಡಿದುಕೊಂಡು ಸಂತೋಷವುಳ್ಳವರಾಗಿ ಷಟ್ಪುರವನ್ನು ಪ್ರವೇಶಿಸಿದರು. ಬ್ರಹ್ಮದತ್ತನ ಯಾಗವು ನಡೆಯುತ್ತಲೇ ಇದ್ದಿತು. ಆ ಸಮಯಯದಲ್ಲಿ ಅಲ್ಲಿಗೆ ಮೊದಲೇ ಬ್ರಹ್ಮದತ್ತನಿಂದ ಕೂಗಲ್ಪಟ್ಟ ಜರಾಸಂಧ ಶಿಶುಪಾಲ ದಂತವಕ್ರ

ಪಾಂಡವರು ಕೌರವರು ಇತ್ಯಾದಿ ಅನೇಕ ರಾಜರು ಬಂದರು. ಅವರನ್ನೆಲ್ಲಾ ಷಟ್ಪುರದ ಸಮೀಪದಲ್ಲೇ ಇಳಿಸಿದ್ದರು. ಅವರನ್ನು ನೋಡಿ ನಾರದರು 'ಇಲ್ಲಿಗೆ ಕ್ಷತ್ರಿಯರು ಯಾದವರೂ ಬರುವರು. ಅವರಿಗೆಲ್ಲಾ ಯುದ್ಧವಾಗುವಂತೆ ನಾನು ಪ್ರಯತ್ನ ಮಾಡುವೆನು' ಎಂದು ಯೋಚಿಸಿ ನಿಕುಂಭನ ಮನೆಗೆ ಹೋದರು. ನಿಕುಂಭನಿಂದಲೂ ಇತರ ದಾನವರಿಂದಲೂ ಪೂಜಿತರಾಗಿ ನಿಕುಂಭನೊಡನೆ 'ನೀವೆಲ್ಲರೂ ಯಾದವರೊಡನೆ ವಿರೋಧವನ್ನು ಮಾಡಿ ಸುಮ್ಮನೆ ಹೇಗೆ ಇರುವಿರಿ? ಆ ಬ್ರಹ್ಮದತ್ತನಿಗೆ ಕೃಷ್ಣಪರಮಾತ್ಮನು ಸಹಾಯ ಮಾಡುವನು. ಬ್ರಹ್ಮದತ್ತನಿಗೆ ಐನೂರು ಹೆಂಡತಿಯರಿರುವರು. ಅವರೆಲ್ಲರೂ ಯಜ್ಞಶಾಲೆಗೆ ಬಂದಿರುವರು. ಅವರಲ್ಲಿ ಇನ್ನೂರು ಜನರು ಬ್ರಾಹ್ಮಣಸ್ತ್ರೀಯರು. ನೂರು ಜನರು ಕ್ಷತ್ರಿಯಸ್ತ್ರೀಯರು. ನೂರು ವೈಶ್ಯಸ್ತ್ರೀಯರು. ನೂರು ಶೂದ್ರಸ್ತ್ರೀಯರು. ಅವರಿಂದ ಸೇವಿತರಾಗಿ ದುರ್ವಾಸನು ಅವರಿಗೆ 'ಒಬ್ಬೊಬ್ಬಳಿಗೂ ಒಂದು ಹೆಣ್ಣುಮಗಳೂ ಒಂದು ಗಂಡುಮಗುವೂ ಹುಟ್ಟುವರು. ಹೆಣ್ಣುಮಕ್ಕಳು ಅತಿರೂಪವತಿಯಾಗುವರು. ಅವರ ಸಂಬಂಧ ಮಾಡಿದಂತೆ ವಿಚಿತ್ರವಾದ ಹೂವಿನ ಸುವಾಸನೆಯು ಉಂಟಾಗುವುದು. ಅವರು ಯಾವಾಗಲೂ ಯೌವನವುಳ್ಳವರಾಗಲಿ. ಪತಿವ್ರತೆಯರಾಗಲಿ, ಅಪ್ಸರಸ್ತ್ರೀಯರ ನರ್ತನಗಾ ಇತ್ಯಾದಿ ಸಮಸ್ತ ಗುಣಗಳನ್ನು ತಿಳಿದವರಾಗಲಿ. ಗಂಡುಮಕ್ಕಳೂ ರೂಪವಂತರಾಗಿ ಅಸ್ತ್ರಶಸ್ತ್ರಸಂಪನ್ನರಾಗಲಿ' ಎಂದು ವರವನ್ನು ಕೊಟ್ಟಿದ್ದರು. ಬ್ರಹ್ಮದತ್ತನು ತನ್ನ ಹೆಣ್ಣುಮಕ್ಕಳಲ್ಲಿ ಅನೇಕರನ್ನು ಯಾದವರಿಗೆ ಮದುವೆ ಮಾಡಿಕೊಟ್ಟಿರುವನು. ನೀನು ಅಪಹರಿಸಿಕೊಂಡು ಬಂದಿರುವ ನೂರು ಜನರು ಮಾತ್ರ ಉಳಿದಿರುವರು. ಅದಕ್ಕಾಗಿ ನೀನು ಯಾದವರೊಡನೆ ಯುದ್ಧ ಮಾಡಬೇಕಾಗಿ ಬರುವುದು. ಸಹಾಯಕ್ಕಾಗಿ ರಾಜರನ್ನೆಲ್ಲಾ ಕೇಳಿಕೊ. ಸಹಾಯ ಮಾಡುವುದಕ್ಕಾಗಿ ರಾಜರಿಗೆಲ್ಲಾ ಆತಿಥ್ಯವನ್ನು ಮಾಡು. ಅಲ್ಲಿಗೆ ಎಲ್ಲಾ ರಾಜರೂ ಬರುವರು' ಎಂದು ಹೇಳಿದರು.

ಅದನ್ನು ಕೇಳಿ ಅಸುರರು ಸಂತೋಷದಿಂದ ಹೋಗಿ ರಾಜರಿಗೆಲ್ಲಾ ನಾನಾ ವಿಧ ರತ್ನಗಳನ್ನು ಕೊಟ್ಟರು. ಒಂದೇ ನಿಮಿಷದಲ್ಲಿ ನಾರದರು ಹೋಗಿ ಪಾಂಡವರೊಡನೆ ವಿಷಯವನ್ನು ತಿಳಿಸಿದ ಕಾರಣ ಪಾಂಡವರು ಮಾತ್ರ ಆ ಅಸುರರ ಸತ್ಕಾರವನ್ನು ಸ್ವೀಕರಿಸಲಿಲ್ಲ. ನಿಕುಂಭನು ರಾಜರನ್ನೆಲ್ಲಾ ಸತ್ಕರಿಸಿ ಯುದ್ಧದಲ್ಲಿ ನೀವು ನನಗೆ ಸಹಾಯವನ್ನು ಮಾಡಬೇಕೆಂದು ಹೇಳಿದನು. ಪಾಂಡವರು ಹೊರತು ಉಳಿದ ರಾಜರೆಲ್ಲರೂ ತಾವು ಯುದ್ಧದಲ್ಲಿ ಸಹಾಯಮಾಡುವಂತೆ ಒಪ್ಪಿಕೊಂಡರು.

ಕ್ಷತ್ರಿಯರೆಲ್ಲರೂ ಯುದ್ಧಕ್ಕೆ ಸಿದ್ಧರಾಗಿ ಅಲ್ಲಿಯೇ ಇದ್ದರು. ಬ್ರಹ್ಮದತ್ತನ ಪತ್ನಿಯರು ಯಜ್ಞಶಾಲೆಯಲ್ಲಿ ಇದ್ದರು. ಕೃಷ್ಣಪರಮಾತ್ಮನು ಷಟ್ಪುರದ ಅಸುರರನ್ನು ಕೊಲ್ಲ ಬೇಕೆಂದು ರುದ್ರದೇವರು ಹೇಳಿದ್ದ ಮಾತನ್ನು ಮನಸ್ಸಿನಲ್ಲೇ ಇಟ್ಟುಕೊಂಡು ದ್ವಾರಕಾಪಟ್ಟಣದಲ್ಲಿ ಆಹುಕ ರಾಜನನ್ನು ಇಟ್ಟು ಸೈನ್ಯ ಸಹಿತನಾಗಿ ಷಟ್ಪುರಕ್ಕೆ ಹೋದನು. ಯಜ್ಞ ಶಾಲೆಗಿಂತ ಸ್ವಲ್ಪ ದೂರದಲ್ಲಿಯೇ ಸೈನ್ಯವನ್ನು ನಿಲ್ಲಿಸಿದನು. ಸೈನ್ಯವನ್ನು ನೋಡಿಕೊಳ್ಳಲಿಕ್ಕೆ ಪ್ರದ್ಯುಮ್ನನೊಡನೆ ಹೇಳಿದನು.

ಮರುದಿನ ಬೆಳಿಗ್ಗೆ ಸೂರ್ಯನು ಉದಯಿಸಿ ಒಂದು ಮುಹೂರ್ತ ಕಾಲವಾಗಲು ಬಲರಾಮದೇವರೂ ಕೃಷ್ಣಪರಮಾತ್ಮನೂ ಸಾತ್ಯಕಿಯೂ ರುದ್ರದೇವರ ವರವುಳ್ಳ ಆವರ್ತ ಎಂಬ ನದಿಯ ನೀರಿನಲ್ಲಿ ಸ್ನಾನಮಾಡಿ ಕವಚಾದಿಗಳನ್ನು ಧರಿಸಿದವರಾಗಿ ಬಿಲ್ವೋದಕೇಶ್ವರ ಎಂಬ ರುದ್ರದೇವರಿಗೆ ನಮಸ್ಕರಿಸಿ ಗರುಡ ದೇವರ ಮೇಲೆ ಕೂತುಕೊಂಡರು. ಸೈನ್ಯದ ರಕ್ಷೆಗಾಗಿ ಮೇಲೆ ಆಕಾಶದಲ್ಲಿ ಪ್ರದ್ಯುಮ್ನನನ್ನು ಇರುವಂತೆ ಹೇಳಿ ಯಜ್ಞಶಾಲೆಯ ರಕ್ಷೆಗಾಗಿ ಪಾಂಡವರನ್ನು ಇಟ್ಟು ಉಳಿದ ಸೈನ್ಯವನ್ನು ಗುಹಾದ್ವಾರದಲ್ಲಿ ಇಟ್ಟು ಜಯಂತನನ್ನೂ ಪ್ರವರ ಎಂಬ ಬ್ರಾಹ್ಮಣನನ್ನೂ ಸ್ಮರಿಸಿದನು. ಆಗ ಅವರಿಬ್ಬರೂ ಬಂದರು. ಅವರನ್ನು ಪರಮಾತ್ಮನು ಪ್ರದ್ಯುಮ್ನನಂತೆ ಆಕಾಶದಲ್ಲಿಯೇ ಇರುವಂತೆ ಹೇಳಿದನು. ತರುವಾಯ ಕೃಷ್ಣ ಪರಮಾತ್ಮನ ಮಾತಿನಿಂದ ರಣದುಂದುಭಿಯನ್ನು ಬಾರಿಸಿದರು. ಮಕರವ್ಯೂಹವನ್ನು ಮಾಡಿದರು. ಯಾದವರೆಲ್ಲರೂ ಯುದ್ಧಕ್ಕೆ ಸಿದ್ಧರಾಗಿದ್ದರು. ಯುದ್ಧದಲ್ಲಿ ದುರಹಂಕಾರವುಳ್ಳ ರಾಕ್ಷಸರೂ ಮೇಘದಂತೆ ಶಬ್ದವುಳ್ಳ ಕತ್ತೆಗಳ ಮೇಲೆಯೂ ಆನೆಯ ಮೇಲೆಯೂ ಮತ್ತು ಮೊಸಳೆ ಚೇಳು ಕೋಣ ಖಡ್ಗಮೃಗ ಒಂಟೆ ಆಮೆ ಇತ್ಯಾದಿಗಳು ಸೆಳೆಯುವ ರಥಗಳಲ್ಲಿ ಕೂತುಕೊಂಡು ಗರ್ಜನೆ ಮಾಡುತ್ತಾ ಷಟ್ಪುರದಿಂದ ಹೊರಗೆ ಬಂದರು. ಅವರ ಮುಂಭಾಗದಲ್ಲಿ ನಿಕುಂಭನು ಬಂದನು.

ಅಸುರರೆಲ್ಲರೂ ಗರ್ಜನೆ ಮಾಡುತ್ತಾ ಭೂಮಿಯಿಂದ ಆಕಾಶದವರೆಗೆ ವ್ಯಾಪಿಸಿದರು. ಅಸುರರ ಸಹಾಯಕ್ಕಾಗಿ ಪಾಂಡವರು ಹೊರತು ಇತರ ರಾಜರೂ ರಥದಲ್ಲಿ ಕೂತುಕೊಂಡು ಸಿದ್ಧರಾಗಿದ್ದರು. ಎಲ್ಲರೂ ಯಾದವರೊಡನೆ ಯುದ್ಧ ಮಾಡಲಿಕ್ಕೆ ಸಿದ್ಧರಾಗಿದ್ದರು. ಯುದ್ಧವು ಆರಂಭವಾಯಿತು. ನಿಕುಂಭನು ಘೋರಬಾಣಗಳಿಂದ ಯುದ್ಧವನ್ನು ಮಾಡಿದನು. ತರುವಾಯ ಮಾಯೆಯಿಂದ ಅನಾಧೃಷ್ಟಿಯೆಂಬ ಯಾದವನನ್ನು ಸ್ತಂಭನಮಾಡಿ ಅವನನ್ನು ಷಟ್ಪುರವೆಂಬ ಒಂದು ಗುಹೆಯೊಳಗೆ ತೆಗೆದುಕೊಂಡು ಹೋಗಿ ಇಟ್ಟು ಬಂದನು. ಆಮೇಲೆ ಪುನಃ ಬಂದು

ಕೃತವರ್ಮ ಚಾರುದೇಷ್ಣ ಇತ್ಯಾದಿ ಯಾದವರನ್ನೆಲ್ಲಾ ಹಾಗೆಯೇ ಮಾಡಿದನು. ಹೀಗೆ ಅನೇಕ ಯಾದವರನ್ನು ಮಾಡಿದನು. ಯಾದವರನ್ನು ತೆಗೆದುಕೊಂಡು ಹೋಗುತ್ತಿದ್ದ ಅವನ ದೇಹವು ಮಾಯೆಯಿಂದ ಕಾಣಿಸುತ್ತಿರಲಿಲ್ಲ. ಈರೀತಿಯಾಗಿ ಅವನು ಘೋರವಾಗಿ ಯಾದವರನ್ನು ಹಿಂಸಿಸುವುದನ್ನು ನೋಡಿ ಕೃಷ್ಣಪರಮಾತ್ಮನೂ ಬಲರಾಮದೇವರೂ ಇನ್ನು ಪ್ರದ್ಯುಮ್ನ ಸಾಂಬ ಇತ್ಯಾದಿಗಳೂ ಕೋಪಿಸಿಕೊಂಡರು. ಕೃಷ್ಣಪರಮಾತ್ಮನು ಅಸುರರಿಗೆಲ್ಲಾ ಭಯಂಕರಗಳಾದ ಬಾಣಗಳನ್ನು ಬಿಟ್ಟನು. ಅಸುರರು ಬಹಳವಾಗಿ ಯುದ್ಧಮಾಡಿ ಪರಮಾತ್ಮನ ಬಾಣಗಳನ್ನು ತಡೆಯಲಿಕ್ಕೆ ಆಗಲಾರದೆ ಆಕಾಶದಲ್ಲಿ ಮೇಲೆ ಓಡತೊಡಗಿದರು. ಅಲ್ಲಿ ಜಯಂತನೂ ಪ್ರವರನೂ ಸೇರಿಕೊಂಡು ಅವರನ್ನು ಬಾಣಗಳಿಂದ ಬಡೆಯ ತೊಡಗಿದರು. ತಾಳಿಯ ಹಣ್ಣುಗಳಂತೆ ರಾಕ್ಷಸರ ತಲೆಗಳು ಕೆಳಗೆ ಬಿದ್ದವು. ಹಾಗೆಯೇ ಕೈಗಳೂ ಕತ್ತರಿಸಿ ಕೆಳಗೆ ಬಿದ್ದವು.

ತರುವಾಯ ಪ್ರದ್ಯುಮ್ನನು ಭಯಂಕರವಾದ ಹೊರಗೆ ಬರಲಿಕ್ಕೆ ಆಗಲಾರದ ಗುಹೆಯನ್ನು ಮಾಯೆಯಿಂದ ಮಾಡಿ ಅದರಲ್ಲಿ ರಾಜರನ್ನೆಲ್ಲಾ ಹಾಕಬೇಕೆಂದು ನಿಶ್ಚಯಿಸಿದರು. ತರುವಾಯ ಸಾಂಬಾದಿಗಳಿಂದ ಕೂಡಿಕೊಂಡು ಕರ್ಣ ದುರ್ಯೋಧನ ವಿರಾಟದ್ರುಪದ ಶಿಶುಪಾಲ ರುಕ್ಮಿ ಇತ್ಯಾದಿ ರಾಜರೊಡನೆ ನಿಮ್ಮ ಸಂಬಂಧವನ್ನು ಗುರುತ್ವವನ್ನು ಬಹುಮಾನ ಮಾಡುತ್ತೇನೆ. ಆದರೂ ಬಿಲ್ವೋದಕೇಶ್ವರ ಎಂಬ ರುದ್ರದೇವರ ಆಜ್ಞೆಯಿಂದ ನಿಮ್ಮನ್ನೆಲ್ಲಾ ಘೋರವಾಗ ಗುಹೆಯಲ್ಲಿ ಹಾಕುತ್ತೇನೆ. ನಿಕುಂಭನು ಗುಹೆಯಲ್ಲಿ ಇಟ್ಟಿರುವ ಯಾದವರನ್ನೆಲ್ಲಾ ಬಿಡಿಸುವೆನು' ಎಂದು ಹೇಳಿದನು. ಆಗ ನಂದಿಯು ಸಾವಿರಾರು ಪಾಶಗಳನ್ನು ತಂದುಕೊಟ್ಟನು. ಪ್ರದ್ಯುಮ್ನನು ಯುದ್ಧ ಮಾಡುತ್ತಿರುವ ರಾಜರನ್ನೆಲ್ಲಾ ಎಳೆದುಕೊಂಡು ಹೋಗಿ ಗುಹೆಯಲ್ಲಿ ಹಾಕಿದನು. ಅನಿರುದ್ಧನನ್ನು ಅವರನ್ನು ಹೊರಗೆ ಬರದಂತೆ ನೋಡಿಕೊಳ್ಳಲಿಕ್ಕೆ ಮಾಡಿದನು. ಎಲ್ಲ ರಾಜರನ್ನು ಅವರ ಸೈನ್ಯವನ್ನು ಬಂಧನದಲ್ಲಿ ಇಟ್ಟನು. ತರುವಾಯ ದೈತ್ಯರನ್ನೆಲ್ಲಾ ಸಂಹರಿಸಲಿಕ್ಕೆ ಉದ್ಯುಕ್ತನಾದನು. ಬ್ರಹ್ಮದತ್ತನೊಡನೆ 'ನಿನ್ನ ಯಾಗವು ಸರಿಯಾಗಿ ನಡೆಯುತ್ತಿರಲಿ. ನಿನಗೆ ಭಯವಿಲ್ಲ. ಅರ್ಜುನನು ಇದ್ದಾನೆ. ನೋಡು. ಯಾರಿಗೆ ಪಾಂಡವರು ರಕ್ಷಕರಾಗಿರುವರೋ ಅವರಿಗೆ ದೇವತೆಗಳಿಂದಲೂ ಅಸುರರಿಂದಲೂ ಸರ್ಪಗಳಿಂದಲೂ ಭಯವಿರ ಲಾರದು. ನಿನ್ನ ಹೆಣ್ಣುಮಕ್ಕಳನ್ನು ಅಸುರರು ಮನಸ್ಸಿನಿಂದಲೂ ಸ್ಪರ್ಶ ಮಾಡಲಿಲ್ಲ. ನೋಡು ನಾನು ಯಜ್ಞಶಾಲೆಯಲ್ಲಿಯೇ ಮಾಯೆಯಿಂದ ಇಟ್ಟಿರುತ್ತೇನೆ.

ಪ್ರದ್ಯುಮ್ನನು ಸಪರಿವಾರರಾದ ರಾಜರನ್ನೆಲ್ಲಾ ಮಾಯಾ ಗುಹೆಯಲ್ಲಿ ಬಂಧನದಲ್ಲಿ ಇಡಲು ಅಸುರರಿಗೆಲ್ಲರಿಗೂ ಭಯವುಂಟಾಯಿತು. ಕೃಷ್ಣಪರಮಾತ್ಮ ಬಲರಾಮ ಮೊದಲಾದ ಯಾದವರಿಂದ ಬಡಿಯಲ್ಪಟ್ಟವರಾಗಿ ಹತ್ತುದಿಕ್ಕುಗಳಿಗೆ ಓಡಿದರು. ಆಗ ನಿಕುಂಭನೆಂಬ ರಾಕ್ಷಸಶ್ರೇಷ್ಠನು ರೋಷವುಳ್ಳವನಾಗಿ 'ಮಾಡಿದ ಪ್ರತಿಜ್ಞೆಯನ್ನು ಬಿಟ್ಟು ಭಯವುಳ್ಳವರಾಗಿ ಮೋಹದಿಂದ ಯಾಕೆ ಓಡುತ್ತಿರುವಿರಿ. ಪ್ರತಿಜ್ಞೆಯನ್ನು ಬಿಟ್ಟವರಾಗಿ ಓಡಿಹೋಗಿ ಯಾವ ಲೋಕಕ್ಕೆ ಹೋಗುತ್ತೀರಿ? ಶತ್ರುವನ್ನು ಜಯಿಸಿ ಫಲವನ್ನು ಅನುಭಿಸಬೇಕು. ಅಥವಾ ಯುದ್ಧದಲ್ಲಿ ಸತ್ತು ಸ್ವರ್ಗವನ್ನು ಅನುಭವಿಸಬೇಕು. ಯುದ್ಧದಿಂದ ಓಡಿಹೋದವರಾಗಿ ಮನೆಗೆ ಹೋಗಿ ಯಾರಿಗೆ ಮುಖವನ್ನು ತೋರಿಸುವಿರಿ? ಹೆಂಡತಿಯ ಹತ್ತಿರ ಏನು ಹೇಳುವಿರಿ? ನಿಮಗೇಕೆ ಸ್ವಲ್ಪವೂ ನಾಚಿಕೆಯಾಗುವುದಿಲ್ಲ? ನಿಮಗೆ ಧಿಕ್ಕಾರವಿರಲಿ' ಎಂದು ಹೇಳಲು ರಾಕ್ಷಸರು ಹಿಂದೆ ತಿರುಗಿ ಪೂರ್ವಕ್ಕಿಂತ ಎರಡು ಪಾಲು ಅಧಿಕವಾಗಿ ಯುದ್ಧಮಾಡಿದರು.

ಯಜ್ಞಶಾಲೆಗೆ ಬಂದವರನ್ನೆಲ್ಲಾ 'ಅರ್ಜುನನೂ ಭೀಮಸೇನ ದೇವರೂ ನಕುಲ ಸಹದೇವರೂ ಧರ್ಮರಾಜ ಸಂಹರಿಸಿದರು. ಆಕಾಶಮಾರ್ಗದಲ್ಲಿ ಹೋಗುತ್ತಿದ್ದ ರಾಕ್ಷಸರನ್ನು ಜಯಂತನೂ ಪ್ರವರನು ಬಡಿಯುವವರಾರು. ತರುವಾಯ ಅಸುರರ ರಕ್ತದಿಂದ ಕಾಲಿವೆಯೇ ಹರಿಯುತ್ತಾ ಹೋಯಿತು ತರುವಾಯ ನಿಕುಂಭನು ತನ್ನ ಸಹಾಯಕರನ್ನೆಲ್ಲಾ ಸತ್ತವರನ್ನು ನೋಡಿ ವೀರ್ಯ ದಿಂದ ಮೇಲೆ ಹಾರಿದನು. ಅಲ್ಲಿ ಜಯಂತನಿಂದಲೂ ಪ್ರವರ ಎಂಬ ಬ್ರಾಹ್ಮಣ ಶ್ರೇಷ್ಠನೂ ವಜ್ರದಂತೆ ಇರುವ ಬಾಣಗಳಿಂದ ತಡೆದರು. ಆಮೇಲೆ ಹಿಂದಿರುಗಿ ತುಟಿಯನ್ನು ಕಚ್ಚಿಕೊಂಡು ನಿಕುಂಭನು ಪ್ರವರನನ್ನು ಬಡಿದನು. ಅವನು ಭೂಮಿಯಲ್ಲಿ ಬಿದ್ದನು. ಜಯಂತನು ಭೂಮಿಯಲ್ಲಿ ಬಿದ್ದ ಅವನನ್ನು ಬಾಹುಗಳಿಂದ ಆಲಿಂಗನ ಮಾಡಿದನು. ಅವನು ಪ್ರಾಣಸಹಿತನಾಗಿರುವನು ಎಂದು ತಿಳಿದು ಅವನನ್ನು ಬಿಟ್ಟು ನಿಕುಂಭನ ಬಳಿಗೆ ಓಡಿಬಂದನು. ನಿಕುಂಭನನ್ನು ಖಡ್ಗದಿಂದ ಬಡಿದನು. ಅವನು ಜಯಂತನನ್ನು ಪರಿಘದಿಂದ ಬಡಿದನು. ಜಯಂತನು ಯುದ್ಧದಲ್ಲಿ ನಿಕುಂಭನಿಗೆ ಬಹಳ ಗಾಯಗಳನ್ನು ಮಾಡಿದನು. ಈರೀತಿಯಾಗಿ ಬಡಿಯಲ್ಪಟ್ಟ ದೈತ್ಯನು 'ತನ್ನ ಶತ್ರುವಾದ ಜ್ಞಾತಿಗಳನ್ನು ಸಂಹರಿಸಿದ ಕೃಷ್ಣನೊಡನೆ ಯುದ್ಧಮಾಡಬೇಕು. ಈ ಜಯಂತನೊಡನೆ ಯಾಕೆ ಶ್ರಮಪಡಬೇಕು' ಎಂದು ಯೋಚಿಸಿ ಅಂತರ್ಧಾನವನ್ನು ಹೊಂದಿದನು. ಕೃಷ್ಣಪರಮಾತ್ಮನು ಇದ್ದಲ್ಲಿಗೆ ಯುದ್ಧಮಾಡುವುದಕ್ಕಾಗಿ ಹೋದನು. ಇಂದ್ರದೇವರು

ಐರಾವತದ ಮೇಲೆ ಕೂತುಕೊಂಡು ದೇವತೆಗಳಿಂದ ಸಹಿತರಾಗಿ ಸಂತೋಷದಿಂದ ಆ ಯುದ್ಧವನ್ನು ನೋಡಲಿಕ್ಕೆ ಬಂದರು. 'ಸಾಧು, ಸಾಧು' ಎಂದು ಹೇಳುತ್ತಾ ಸಂತೋಷದಿಂದ ಮಗನನ್ನು ಆಲಿಂಗಿಸಿದರು. ಯುದ್ಧದಲ್ಲಿ ಜಯಿಸುತ್ತಿರುವ ಜಯಂತನನ್ನು ನೋಡಿ ಇಂದ್ರದೇವರ ಆಜ್ಞೆಯಿಂದ ದೇವದುಂದುಭಿಗಳನ್ನು ಬಾರಿಸಿದರು.

ತರುವಾಯ ನಿಕುಂಭನು ಯಜ್ಞಶಾಲೆಯ ಬಳಿಯಲ್ಲಿ ಅರ್ಜುನನಿಂದ ಸಹಿತನಾಗಿ ನಿಂತಿರುವ ಕೃಷ್ಣಪರಮಾತ್ಮನನ್ನು ನೋಡಿದನು. ಕೂಡಲೇ ಮಹಾ ಗರ್ಜನೆಯನ್ನು ಮಾಡಿ ಘೋರವಾದ ಪರಿಘದಿಂದ ಗರುಡದೇವರನ್ನು ಬಡಿದನು. ಹಾಗೆಯೇ ಬಲರಾಮದೇವರನ್ನು, ಸತ್ಯಕನನ್ನು, ಪರಮಾತ್ಮನನ್ನು, ಅರ್ಜುನನನ್ನು, ಭೀಮಸೇನದೇವರನ್ನು, ಧರ್ಮರಾಜನನ್ನು, ನಕುಲಸಹದೇವರನ್ನು, ಸಾಂಬನನ್ನು, ಕಾಮನನ್ನು ಎಲ್ಲರೂ ನೋಡಿ ಎಲ್ಲರೊಡನೆಯೂ ಮಾಯೆಯಿಂದ ಯುದ್ಧವನ್ನು ಮಾಡಿದನು. ಸರ್ವಶಸ್ತ್ರ ಪಂಡಿತರಾದ ಅರ್ಜುನಾದಿಗಳು ಅವನನ್ನು ನೋಡಲಿಲ್ಲ. ಆಗ ಅವರು ಬಿಲ್ವೋದಕೇಶ್ವರ ಎಂದು ಹೆಸರುಳ್ಳ ರುದ್ರದೇವರನ್ನು ಧ್ಯಾನ ಮಾಡಿದರು. ಆಗ ಎಲ್ಲರೂ ಬಿಲ್ವೋದಕೇಶ್ವರನ ಪ್ರಭಾವದಿಂದ ಮಾಯಾವುಳ್ಳವ ರಲ್ಲಿ ಶ್ರೇಷ್ಠನಾದ ಕೈಲಾಸಶಿಖರದಂತೆ ಇರುವ ಎಲ್ಲರನ್ನು ನುಂಗುವಂತೆ ಇರುವ ಯುದ್ಧದಲ್ಲಿ ಕೃಷ್ಣಪರಮಾತ್ಮನನ್ನು ಕೂಗುತ್ತಿರುವ ನಿಕುಂಭನನ್ನು ನೋಡಿದರು. ಆಗ ಅರ್ಜುನನು ಗಾಂಡೀವ ಧನುಸ್ಸನ್ನು ಬಗ್ಗಿಸಿ ಆ ರಾಕ್ಷಸನ ಮೇಲೆಯೂ ಅವನ ಪರಿಘದ ಮೇಲೆಯೂ ಬಾಣಗಳನ್ನು ಬಿಟ್ಟನು. ಅರ್ಜುನನು ಬಿಟ್ಟ ತೀಕ್ಷ್ಣಗಳಾದ ಬಾಣಗಳು ಅವನ ಮೈಗೆ ತಾಗಿ ಕೊನೆಯಲ್ಲಿ ಬಗ್ಗಿಹೋಗಿ ಕೆಳಗೆ ಬಿದ್ದವು. ತನ್ನ ಬಾಣಗಳು ಹೀಗೆ ವ್ಯರ್ಥವಾದದ್ದನ್ನು ನೋಡಿ ಅರ್ಜುನನು ಕೃಷ್ಣ ಪರಮಾತ್ಮನೊಡನೆ 'ಭಗವಂತನೇ! ನನ್ನ ವಜ್ರದಂತೆ ಇರುವ ಬಾಣಗಳು ಪರ್ವತಗಳನ್ನೂ ಕೂಡ ಸೀಳುವುವು. ಇದೇನು ಹೀಗಾಗುತ್ತಿದೆ? ನನಗೆ ಬಹಳ ಆಶ್ಚರ್ಯವಾಗುತ್ತಿದೆ' ಎಂದು ಕೇಳುವವನಾದನು.

ಅದಕ್ಕೆ ಕೃಷ್ಣಪರಮಾತ್ಮನು ಮಂದಹಾಸವನ್ನು ಮಾಡುತ್ತಾ 'ಈ ನಿಕುಂಭ ಎನ್ನುವವನು ದೊಡ್ಡ ಭೂತವು. ಈ ಮಹಾಸುರನು ಪೂರ್ವದಲ್ಲಿ ಉತ್ತರಕುರುದೇಶಕ್ಕೆ ಹೋಗಿ ನೂರು ಸಾವಿರವರ್ಷ ತಪಸ್ಸು ಮಾಡಿದನು. ಆಗ ರುದ್ರದೇವರು ಪ್ರತ್ಯಕ್ಷರಾಗಿ ವರಗಳನ್ನು ಕೇಳಲಿಕ್ಕೆ ಹೇಳಿದರು. ಅವನು ಸುರಾಸುರರಿಂದ ಸಾಯದೆ ಇರುವ ಮೂರು ರೂಪಗಳನ್ನು ಕೇಳಿಕೊಂಡನು. ಆಗ

ರುದ್ರದೇವರು ಅವನೊಡನೆ 'ನೀನು ನನಗೋ ಬ್ರಾಹ್ಮಣರಿಗೋ ವಿಷ್ಣುವಿಗೋ ಅಪ್ರಿಯವನ್ನು ಮಾಡಿದ್ದಾದರೆ ಪರಮಾತ್ಮನಿಂದ ಸಾಯುವಿ. ಇನ್ನೊಬ್ಬರಿಂದ ಸಾಯಲಾರಿ. ನಾನು ವಿಷ್ಣುವೂ ಬ್ರಾಹ್ಮಣರಲ್ಲಿ ಪ್ರಿಯರಾಗಿರುವೆವು. ಈ ದೈತ್ಯನು ಸರ್ವಶಸ್ತ್ರಗಳಿಂದಲೂ ಅಕಾರಣದಿಂದ ಸಾಯುವವನಲ್ಲ. ಮೂರು ದೇಹವುಳ್ಳ ವನು. ಇವನು ಪೂರ್ವದಲ್ಲಿ ಭಾನುಮತಿಯನ್ನು ಅಪಹರಿಸುವಾಗ ಇವನ ಒಂದು ದೇಹವನ್ನು ನಾನು ಸಂಹರಿಸಿರುವೆನು. ಇವನ ಇನ್ನೊಂದು ದೇಹವು ತಪಸ್ಸನ್ನು ಮಾಡುತ್ತಾ ದಿತಿಯನ್ನು ಸೇವಿಸುತ್ತಾ ಇದೆ. ಇದು ಷಟ್ಪುರದಲ್ಲಿ ವಾಸಮಾಡುತ್ತಿದ್ದ ರೂಪವು ಈರೀತಿಯಾಗಿ ಸಮಸ್ತವಾದ ನಿಕುಂಭನ ಚರಿತ್ರೆಯನ್ನು ಹೇಳಿದೆನು. ಈತನ ಸಂಹಾರವನ್ನು ಬೇಗನೇ ಮಾಡಬೇಕು. ಕಥೆಯನ್ನು ಆಮೇಲೆ ಹೇಳಬಹುದು' ಎಂದು ಹೇಳಿದನು.

ಈರೀತಿಯಾಗಿ ಕೃಷ್ಣಾರ್ಜುನರು ಮಾತಾಡುತ್ತಿರುವಾಗಲೇ ನಿಕುಂಭನು ಷಟ್ಪುರ ಎಂದು ಹೆಸರುಳ್ಳ ಗುಹೆಯೊಳಗೆ ಪ್ರವೇಶಿಸಿದನು. ತರುವಾಯ ಭಗವಂತನು ಲೋಕದ ಜನರಂತೆ ನಟನೆ ಮಾಡುತ್ತಾ ಅವನನ್ನು ಹುಡುಕುವಂತೆ ತೋರಿಸುತ್ತಾ ಷಟ್ಪುರ ಎಂದೂ ಹೆಸರುಳ್ಳ ಆ ಘೋರವಾದ ಗುಹೆಯನ್ನು ಪ್ರವೇಶಿಸಿದನು. ಅಲ್ಲಿ ನಿಕುಂಭನು ಹಿಡಿದಿಟ್ಟಿರುವ ಯಾದವರನ್ನೆಲ್ಲಾ ನೋಡಿದನು. ನಿಕುಂಭನೊಡನೆ ಯುದ್ಧವನ್ನು ಮಾಡಿದನು. ಕೃಷ್ಣಪರಮಾತ್ಮನ ಹಿಂದೆಯೇ ಬಲರಾಮದೇವರೇ ಮೊದಲಾದ ಯಾದವರೂ ಪಾಂಡವರೂ ಆ ಗುಹೆಯೊಳಗೆ ಪ್ರವೇಶಿಸಿದರು. ಎಲ್ಲರೂ ಕೃಷ್ಣಪರಮಾತ್ಮನ ಅನುಮತಿಯಿಂದ ಒಟ್ಟಿಗೆ ಗುಹೆಯೊಳಗೆ ಪ್ರವೇಶಿಸಿದರು. ತರುವಾಯ ಪ್ರದ್ಯುಮ್ನನು ಕೃಷ್ಣಪರಮಾತ್ಮನಿಂದ ಆಜ್ಞಪ್ತನಾಗಿ ನಿಕುಂಭನು ಬಂಧನದಲ್ಲಿ ಇಟ್ಟಿದ್ದ ಯಾದವರನ್ನೆಲ್ಲಾ ಬಿಡಿಸಿ ಕರೆದುಕೊಂಡು ಹೋದನು. ಪ್ರದ್ಯುಮ್ನನಿಂದ ಬಿಡಿಸಲ್ಪಟ್ಟ ಅವರೆಲ್ಲರೂ ಸಂತೋಷವುಳ್ಳವರಾಗಿ ನಿಕುಂಭನ ವಧೆಯನ್ನು ಅಪೇಕ್ಷಿಸುವವರಾಗಿ ಕೃಷ್ಣಪರಮಾತ್ಮನಿದ್ದಲ್ಲಿಗೆ ಬಂದರು. ಆಮೇಲೆ ರಾಜ ರನ್ನು 'ಬಿಟ್ಟುಬಿಡು' ಎಂದು ಪರಮಾತ್ಮನ ಆಜ್ಞೆಯಿಂದ ಪ್ರದ್ಯುಮನು ದುರ್ಯೋಧ ನಾದಿ ರಾಜರನ್ನು ಬಂಧನದಿಂದ ಬಿಟ್ಟನು. ಅವರೆಲ್ಲರೂ ಲಜ್ಜೆಯುಳ್ಳವರಾಗಿ ಕಾಂತಿಹೀನರಾಗಿ ಮೌನವುಳ್ಳವರಾಗಿ ಮುಖವನ್ನು ತಗ್ಗಿಸಿಕೊಂಡು ನಿಂತರು. ತರುವಾಯ ಪರಮಾತ್ಮನು ತನ್ನ ಶತ್ರುವಾದ ನಿಕುಂಭನೊಡನೆ ಯುದ್ಧವನ್ನು ಮಾಡಿದನು. ನಿಕುಂಭನು ಕೃಷ್ಣನಿಗೆ ಪರಿಘದಿಂದ ಬಡೆದನು. ಪರಮಾತ್ಮನು ಅವನಿಗೆ ಗದೆಯಿಂದ ಬಡೆದನು. ಅಸುರನು ಮೂರ್ಛಿತನಾದನು. ಸರ್ವಸಮರ್ಥನಾದ

ಶ್ರೀಭಗವಂತನೂ ದುಷ್ಟಜನರ ಮೋಹಕ್ಕಾಗಿ ಮೂರ್ಛೆಯನ್ನು ಹೊಂದಿದಂತೆ ತೋರಿಸಿದನು. ಅದನ್ನು ನೋಡಿ ವ್ಯಥೆಯನ್ನು ಹೊಂದಿದ ಪಾಂಡವರನ್ನು ಯಾದವರನ್ನು ನೋಡಿ ಮುನಿಗಳೆಲ್ಲರೂ ಕೃಷ್ಣಪರಮಾತ್ಮನಿಗೆ ಹಿತವಾಗಲಿ ಎಂದು ಜಪವನ್ನು ಮಾಡಿದರು. ವೇದಗಳಲ್ಲಿ ಹೇಳಿದ ಸ್ತೋತ್ರಗಳಿಂದ ಸ್ತುತಿಸಿದರು.

ಭಗವಂತನಿಗೆ ಯಾವಾಗಲೂ ಅಶಕ್ತಿಯೂ ಇಲ್ಲ. ಇನ್ನೊಬ್ಬರ ಮಂತ್ರದಿಂದ ಬಲಬರುವುದೂ ಇಲ್ಲ. ಸದಾ ಸರ್ವತ್ರಪೂರ್ಣವಾದ ಬಲವುಳ್ಳವನು. ಆದರೂ ದುಷ್ಟಜನರ ಮೋಹಕ್ಕಾಗಿ ಋಷಿಗಳ ಮಂತ್ರದಿಂದ ಬಲಬಂದಂತೆ ತೋರಿಸುವವ ನಾಗಿ ಎದ್ದು ನಿಂತನು. ಆಗ ದಾನವನೂ ಎದ್ದು ನಿಂತನು. ಇಬ್ಬರೂ ಪುನಃ ಯುದ್ಧವನ್ನು ಮಾಡಿಕೊಂಡರು. ಆಗ ಬಿಲ್ವೋದಕೇಶ್ವರ ಎಂಬ ರುದ್ರದೇವರು ಬ್ರಾಹ್ಮಣಕಂಟಕನಾದ ಚಕ್ರಾಯುಧದಿಂದ ನಾಶಗೊಳಿಸಬೇಕೆಂದು ಕೇಳಿಕೊಂಡರು. ಆಗ ಪರಮಾತ್ಮನು ಹಾಗೆಯೇ ಆಗಲಿ ಎಂದು ಹೇಳಿ ಅಸುರವ್ಯಾಮೋಹಕ್ಕಾಗಿ ರುದ್ರದೇವರಿಗೆ ನಮಸ್ಕರಿಸಿ ಸುದರ್ಶನವೆಂಬ ಚಕ್ರವನ್ನು ಬಿಟ್ಟರು. ಆ ಸುದರ್ಶನ ಚಕ್ರವು ನಿಕುಂಭನ ತಲೆಯನ್ನು ಕತ್ತರಿಸಿತು. ಈರೀತಿಯಾಗಿ ನಿಕುಂಭನು ಸಾಯಲು ರುದ್ರದೇವರು ಸಂತೋಷವನ್ನು ಹೊಂದಿದರು. ಇಂದ್ರದೇವರು ಪುಷ್ಪದ ಮಳೆಯನ್ನು ಸುರಿಸಿದರು. ದೇವ ದುಂದುಭಿಗಳನ್ನು ಬಾರಿಸಿದರು. ಜಗತ್ತೆಲ್ಲವೂ ಸಂತೋಷವನ್ನು ಹೊಂದಿತು. ಭಗವಂತನು ನೂರಾರು ದೈತ್ಯಕನ್ಯೆಯರನ್ನು ಯಾದವರಿಗೆ ಮದುವೆಮಾಡಿಕೊಟ್ಟನು. ಕ್ಷತ್ರಿಯರನ್ನು ಸಮಾಧಾನಪಡಿಸಿ ಅವರಿಗೆ ವಿಚಿತ್ರರತ್ನಗಳನ್ನೂ ವಸ್ತ್ರಗಳನ್ನೂ ಕೊಟ್ಟನು. ಸತ್ರಯಾಗವು ಮುಗಿದಮೇಲೆ ಭಗವಂತನು ಎಲ್ಲಾ ಕ್ಷತ್ರಿಯರನ್ನೂ ಪಾಂಡವರನ್ನೂ ಕಳುಹಿಸಿ ಬಿಲ್ವೋದಕೇಶ್ವರ ಎಂದು ಹೆಸರುಳ್ಳ ರುದ್ರದೇವರಿಗೆ ಮಾಂಸಾದಿಗಳಿಂದ ಕೂಡಿದ ಬಲಿಯನ್ನು ಹಾಕಿಸಿದರು. ಮಲ್ಲರೊಡನೆ ಯುದ್ಧಮಾಡಿಸಿ ಅವರಿಗೆ ಬಹಳವಾದ ಹಣವನ್ನು ವಸ್ತ್ರಗಳನ್ನು ಕೊಟ್ಟನು. ಕೃಷ್ಣಪರಮಾತ್ಮನು ಬ್ರಹ್ಮದತ್ತನಿಗೆ ನಮಸ್ಕರಿಸಿ ತಂದೆತಾಯಿಗಳಿಂದ ಕೂಡಿಕೊಂಡು ದ್ವಾರಕಾಪಟ್ಟಣಕ್ಕೆ ಹೋದನು. ಈಪ್ರಕಾರವಾದ ಷಟ್ಪುರದಲ್ಲಿ ಇದ್ದ ಅಸುರರನ್ನು ಭಗವಂತನು ಜಯಿಸಿದ ಕಥೆಯನ್ನು ಓದಿದವರಿಗೆ ಯುದ್ಧದಲ್ಲಿ ಜಯವಾಗುವುದು. ಅವರವರಿಗೆ ಬೇಕಾದ ಫಲವುಂಟಾಗುವುದು.



# ಭಾನುಮತೀಹರಣ [1]

ಭಗವಂತನು ದ್ವಾರಕಾಪಟ್ಟಣದಲ್ಲಿ ವಾಸಮಾಡುತ್ತಿರುವಾಗ ಒಂದು ಸಮಯದಲ್ಲಿ ಸಮುದ್ರದಲ್ಲಿ ಜಲಕ್ರೀಡೆಯನ್ನು ಮಾಡಬೇಕೆಂದು ಇಚ್ಛಿಸಿದನು. ಊರನ್ನು ನೋಡಿಕೊಳ್ಳಲಿಕ್ಕೆ ವಸುದೇವನನ್ನು ಉಗ್ರಸೇನನನ್ನೂ ನಿಲ್ಲಿಸಿ ಮತ್ತೆ ಎಲ್ಲರೂ ಹೊರಟುಹೋದರು. ಪಿಂಡಾರಕ ಎಂಬ ಸ್ಥಳಕ್ಕೆ ಹೋದರು. ಅನೇಕ ವೇಶ್ಯಾಸ್ತ್ರೀಯರು ಬಂದಿದ್ದರು. ಬಲರಾಮದೇವರು ರೇವತಿಯೆಂಬ ತನ್ನ ಪತ್ನಿಯಿಂದ ಸಹಿತರಾಗಿ ಹೋದರು. ಸಮುದ್ರದಲ್ಲಿ ಜಲಕ್ರೀಡೆಯನ್ನು ಮಾಡಿದರು. ಶ್ರೀಭಗವಂತನು ಹದಿನಾರು ಸಾವಿರ ಸ್ತ್ರೀಯರನ್ನೂ ಅಷ್ಟುರೂಪಗಳನ್ನು ಧರಿಸಿ ಸಂತೋಷಪಡಿಸಿದನು. ಆಗ ಭಗವಂತನ ಆಜ್ಞೆಯಿಂದ ಸಮುದ್ರ ನೀರು ಉಪ್ಪಿಲ್ಲದೆ ಸಿಹಿಯಾಗಿತ್ತು. ಸುವಾಸನೆಯಾಗಿತ್ತು. ಹೆಂಗಸರಿಗೆಲ್ಲಾ ಇಚ್ಛೆಬಂದಂತೆ ಮೊಳಕಾಲಿನವರೆಗೋ ಸೊಂಟದವರೆಗೋ ಕುತ್ತಿಗೆಯವರೆಗೋ ನೀರು ಬರುತ್ತಿತ್ತು. ಭಗವಂತನ ಪತ್ನಿಯರು ಭಗವಂತನ ಮೇಲೆ ನೀರನ್ನು ಎರಚುತ್ತಿದ್ದರು. ಪರಮಾತ್ಮನು ಅವರ ಮೇಲೆಯೂ ನೀರನ್ನು ಎರಚುತ್ತಿದ್ದನು. ಕೆಲವರು ರೈವತಪರ್ವತಕ್ಕೆ ಹೋಗಿ ಪುನಃ ಬರುತ್ತಿದ್ದರು. ದೇವರ ಅಪ್ಪಣೆಯಿಂದ ಸಮುದ್ರದ ನೀರೆಲ್ಲವೂ ಕುಡಿಯುವಂತೆ ಆಗಿತ್ತು. ಕೆಲವರು ಇಚ್ಛೆಯಿಂದ ನೀರಿನ ಮೇಲೆ ನೆಲದಲ್ಲಿ ಓಡುವಂತೆ ಓಡಿದರು. ಕೆಲವರು ಹೆಂಗಸರು ನೀರಿನಲ್ಲಿ ಮುಳುಗುತ್ತಿದ್ದರು. ಭಕ್ಷ್ಯಭೋಜ್ಯ ಲೇಹ್ಯ ಪೇಯ ಎಲ್ಲವೂ ಯೋಚನೆ ಮಾಡುವ ಮಾತ್ರದಿಂದಲೇ ಬಂದು ಸೇರುತ್ತಿತ್ತು. ಹೆಂಗಸರೆಲ್ಲರೂ ಬಾಡಿ ಹೋಗದೆ ಇದ್ದ ಹೂವಿನಮಾಲೆಗಳನ್ನು ಧರಿಸಿದ್ದರು. ಇಚ್ಛಾನುಸಾರವಾಗಿ ಏಕಾಂತದಲ್ಲಿ ವಿಹಾರವನ್ನು ಮಾಡುತ್ತಿದ್ದರು. ದೋಣಿಯಲ್ಲಿ ವಿಹಾರಮಾಡಿದರು. ವಿಶ್ವಕರ್ಮನು ದೋಣಿಗಳಲ್ಲಿಯೇ ಮಂದರ ಕೈಲಾಸ ಇತ್ಯಾದಿ ಪರ್ವತಗಳಂತೆ ಇರುವ ಮಹಡಿಯನ್ನು ಮಾಡಿದ್ದನು. ಅದರಲ್ಲಿ ಕ್ರೀಡಾಮಾಡುತ್ತಿದ್ದರು. ಭಗವಂತನ ಅನುಗ್ರಹದಿಂದ ಅಲ್ಲಿ ಕ್ರೀಡಾಮಾಡುವವರಿಗೆ ಹಸಿವೆಯೇ ಆಗುತ್ತಿದ್ದಿಲ್ಲ. ಈರೀತಿಯಾಗಿ ಇಚ್ಛಾನುಸಾರವಾಗಿ ಸಮುದ್ರದಲ್ಲಿ ವಿಹಾರ ಮಾಡಿದರು. ಹೆಂಗಸರೂ ಗಂಡಸರೂ ನಾನಾವಿಧವಾಗಿ ಹಾಡುಹೇಳುತ್ತಾ ಇದ್ದರು. ತರುವಾಯ ವಿಹಾರವು ಮುಗಿದ ಮೇಲೆ ಯಾದವರು ತಮ್ಮ ಮನೆಗಳಿಗೆ ಹೋದರು. ಸ್ವರ್ಗದಿಂದ ಬಂದ ಅಪ್ಸರಸ್ತ್ರೀಯರು ಸ್ವರ್ಗಕ್ಕೇ ಹೋದರು.

---

1. ಹ.ವಂ.ವಿ. ಅ–90

ಈ ರೀತಿಯಾಗಿ ಯಾದವರೆಲ್ಲರೂ ಕ್ರೀಡೆಯಲ್ಲಿ ಆಸಕ್ತರಾಗಿರುವಾಗ ನಿಕುಂಭ ಎಂಬ ದಾನವನು ಭಾನು ಎಂಬ ಯಾದವನ ಮಗಳಾದ ಭಾನುಮತಿಯೆಂಬ ಕನ್ಯೆಯನ್ನು ಅಪಹರಿಸಿಕೊಂಡು ಹೋದನು. ಅವನು ಪೂರ್ವವೈರವನ್ನು ಸ್ಮರಿಸಿಕೊಂಡು ಮಾಯೆಯಿಂದ ಮರೆಯಾಗಿ ಬಂದು ಯಾದವರ ಹೆಂಗಸರನ್ನೆಲ್ಲಾ ಮೋಹಗೊಳಿಸಿ ಭಾನುಮತಿಯನ್ನು ಮಾತ್ರ ಅಪಹರಿಸಿದನು. ಅವನ ಸಹೋದರನಾದ ವಜ್ರನಾಭನ ಮಗಳಾದ ಪ್ರಭಾವತಿಯನ್ನು ಪ್ರದ್ಯುಮ್ನನು ಅಪಹರಿಸಿದ್ದನು. ಮಾತ್ರವಲ್ಲದೆ ವಜ್ರನಾಭನನ್ನೇ ಸಂಹರಿಸಿದ್ದನು. ಆಗ ಕನ್ಯಾಪುರದಲ್ಲಿ ಬಹಳ ಆರ್ತಧ್ವನಿಯು ಉಂಟಾಯಿತು. ವಸುದೇವನೂ ಆಹುಕನೂ ಇಬ್ಬರೂ ಭಾನುವಿನ ಅಂತಃಪುರದಲ್ಲಿ ಆರ್ತಧ್ವನಿಯನ್ನು ಕೇಳಿ ಹೊರಗೆ ಬಂದು ನೋಡಿದರು. ಶತ್ರುವು ಅವರ ಕಣ್ಣಿಗೆ ಬೀಳಲಿಲ್ಲ. ತರುವಾಯ ಈ ವಿಷಯವನ್ನು ಕೇಳಿ ಭಗವಂತನು ಅರ್ಜುನನಿಂದ ಸಹಿತನಾಗಿ ಗರುಡದೇವರನ್ನು ಏರಿದನು. ಪ್ರದ್ಯುಮ್ನನೊಡನೆ ನೀನು ರಥದಲ್ಲಿ ಕೂತುಕೊಂಡು ನನ್ನ ಹಿಂದೆಯೇ ಬಾ ಎಂದು ಹೇಳಿ ಗರುಡದೇವರೊಡನೆ ಬಹುವೇಗದಿಂದ ಹೋಗು ಎಂದನು. ನಿಕುಂಭನು ವಜ್ರನಗರಕ್ಕೆ ಹೋಗುತ್ತಿರಲು ಕೃಷ್ಣಾರ್ಜುನರು ಅವನ ಸಮೀಪಕ್ಕೆ ಹೋದರು. ಮಾಯಾವುಳ್ಳವರಲ್ಲಿ ಶ್ರೇಷ್ಠನಾದ ತೇಜಸ್ವಿಯಾದ ಪ್ರದ್ಯುಮ್ನನೂ ಹೋದನು. ನಿಕುಂಭನು ಅವರನ್ನು ನೋಡಿ ತಾನು ಮೂರು ರೂಪಗಳನ್ನು ಧರಿಸಿದನು. ನಗುತ್ತಾ ಮೂರು ರೂಪಗಳಿಂದ ಮೂರು ಜನರೊಡನೆಯೂ ಯುದ್ಧವನ್ನು ಮಾಡಿದನು. ಬಹುಮುಳ್ಳುಗಳಿಂದ ಕೂಡಿದ ಗದೆಗಳಿಂದ ಯುದ್ಧವನ್ನು ಮಾಡಿದನು. ಎಡಕೈಯಿಂದ ಭಾನುಮತಿಯನ್ನು ಹಿಡಿದುಕೊಂಡು ಬಲಕೈಯಿಂದ ಗದೆಯನ್ನು ಹಿಡಿದುಕೊಂಡು ಬಡಿಯುತ್ತಿದ್ದನು. ಕನ್ಯೆಗೋಸ್ಕರವಾಗಿ ಕೃಷ್ಣಾರ್ಜುನರಾಗಲೀ ಪ್ರದ್ಯುಮ್ನನಾಗಲೀ ನಿರ್ದಯವಾಗಿ ಬಡಿಯುತ್ತಿರಲಿಲ್ಲ. ಶತ್ರುವನ್ನು ಸಂಹರಿಸಲು ಸಮರ್ಥರಾಗಿದ್ದರೂ ಭಾನುಮತಿಗೆ ತಾಗುತ್ತದೋ ಏನೋ ಎಂದು ದಯೆಯಿಂದ ದೀರ್ಘಶ್ವಾಸಬಿಡುತ್ತಿದ್ದರು.

ತರುವಾಯ ಅರ್ಜುನನು ಅಸ್ತ್ರಲಾಘವವನ್ನು ತೋರಿಸುತ್ತಾ ಒಬ್ಬ ಬೇಡನು ಒಂದು ಒಂಟೆಗೆ ಹೆಬ್ಬಾವು ಸುತ್ತುಹಾಕಿರಲು ಅಸ್ತ್ರಪ್ರಯೋಗ ಸಾಮರ್ಥ್ಯದಿಂದ ಹಾವನ್ನು ಮಾತ್ರ ಬಡಿದು ಒಂಟೆಗೆ ತಾಗದಂತೆ ಬಾಣಬಿಟ್ಟು ಒಂಟೆಯನ್ನು ಬಿಡಿಸಿದಂತೆ ಕನ್ಯೆಗೆ ತಾಗದಂತೆ ನಿಕುಂಭನನ್ನು ಮಾತ್ರ ಬಡಿದನು. ಆಗ ನಿಕುಂಭನು ಕನ್ಯೆಯಿಂದ ಸಹಿತನಾಗಿ ಮರೆಯಾದನು. ಕೃಷ್ಣಾರ್ಜುನರೂ ಪ್ರದ್ಯುಮ್ನನೂ ಅವನ ಹಿಂದೆಯೇ ಹೋದರು. ಅರ್ಜುನನು ಪುನಃ ಕನ್ಯೆಗೆ ತಾಗದಂತೆ ಅಸುರನಿಗೆ ಮಾತ್ರ

ತಾಗುವಂತೆ ಬಾಣಗಳನ್ನು ಬಿಟ್ಟನು. ಅವನು ಕೃಷ್ಣಾರ್ಜುನಪ್ರದ್ಯುಮ್ನರಿಂದ ಅನುಸರಿಸಲ್ಪಟ್ಟವನಾಗಿ ಸಮಸ್ತಭೂಮಿಯನ್ನು ಸಂಚರಿಸಿದನು. ಗೋಕರ್ಣದ ಮೇಲಿನ ಭಾಗದಲ್ಲಿ ಹೋಗುತ್ತಿರುವಾಗ ಮಾತ್ರ ಕನ್ಯೆಯಿಂದ ಸಹಿತನಾಗಿ ಕೆಳಗೆ ಗಂಗೆಯ ಉಸುಬಿ(ಗಿ)ನಲ್ಲಿ ಬಿದ್ದು ಬಿಟ್ಟನು. ದೇವತೆಗಳಾಲೀ ಅಸುರರಾಗಲೀ ರುದ್ರದೇವರ ತೇಜಸ್ಸಿನಿಂದ ರಕ್ಷಿತವಾದ ಗೋಕರ್ಣವನ್ನು ದಾಟುತ್ತಿರಲಿಲ್ಲ. ಅವನು ದಾಟಿಹೋದ ಕಾರಣ ಕೆಳಗೆ ಬಿದ್ದುಬಿಟ್ಟನು. ಆ ಸಮಯವನ್ನು ನೋಡಿ ಪ್ರದ್ಯುಮ್ನನು ಹೋಗಿ ಭಾನುಮತಿಯನ್ನು ಹಿಡಿದುಬಿಟ್ಟನು. ಕೃಷ್ಣಾರ್ಜುನರು ತೀಕ್ಷ್ಣಗಳಾದ ಬಾಣಗಳಿಂದ ಅವನನ್ನು ಬಡೆದರು. ತರುವಾಯ ನಿಕುಂಭನು ದಕ್ಷಿಣದಿಕ್ಕಿಗೆ ಆಕಾಶಮಾರ್ಗದಲ್ಲಿಯೇ ಹೋದನು. ಅವನ ಹಿಂದೆಯೇ ಕೃಷ್ಣಾರ್ಜುನರು ಗರುಡದೇವರ ಮೇಲೆ ಕೂತುಕೊಂಡು ಹೋದರು. ನಿಕುಂಭನು ತನ್ನ ಜ್ಞಾತಿಗಳು ವಾಸಮಾಡುವ ಸ್ಥಳವಾದ ಷಟ್ಪುರವನ್ನು ಪ್ರವೇಶಿಸಿದನು. ಅಲ್ಲಿ ಗುಹಾದ್ವಾರದಲ್ಲಿಯೇ ಕೃಷ್ಣಾರ್ಜುನರು ಪ್ರದ್ಯುಮ್ನನಿಂದ ಸಹಿತರಾಗಿ ನಿಕುಂಭನನ್ನು ಕೊಲ್ಲಬೇಕೆಂದು ಆರಾತ್ರಿಯಲ್ಲಿ ವಾಸಮಾಡಿದರು. ತರುವಾಯ ಆ ಗುಹೆಯಿಂದ ಅತಿಬಲಿಷ್ಠನಾದ ನಿಕುಂಭನು ಯುದ್ಧಮಾಡುವುದಕ್ಕಾಗಿ ಹೊರಗೆ ಬಂದನು. ಅವನು ಬರುತ್ತಿರುವಾಗ ಅರ್ಜುನನು ತೀಕ್ಷ್ಣಬಾಣಗಳಿಂದ ಮಾರ್ಗವನ್ನು ತಡೆದನು. ಆಗ ನಿಕುಂಭನು ಬಂದು ಬಹುಮುಳ್ಳಗಳುಳ್ಳ ಗದೆಯಿಂದ ಅರ್ಜುನನ ತಲೆಯಲ್ಲಿ ಬಡೆದನು. ಮರೆಯಾಗಿ ಬಂದು ದೈತ್ಯನು ಹೀಗೆ ಬಡೆಯಲು ಅರ್ಜುನನು ರಕ್ತವನ್ನು ಕಾರಿ ಮೂರ್ಛೆಯನ್ನು ಹೊಂದಿದನು. ಆಗ ಅಸುರನು ನಗುತ್ತಾ ಮರೆಯಾಗಿ ಪ್ರದ್ಯುಮ್ನನನ್ನು ಬಡೆದನು. ಅವನೂ ಮೂರ್ಛೆಯನ್ನು ಹೊಂದಿದನು.

ಈರೀತಿಯಾಗಿ ಇಬ್ಬರೂ ಮೂರ್ಛಿತರಾದದ್ದನ್ನು ನೋಡಿ ಭಗವಂತನು ಕೋಪವುಳ್ಳವನಾಗಿ ಕೌಮೋದಕೀ ಎಂಬ ಗದೆಯನ್ನು ಹಿಡಿದುಕೊಂಡು ಓಡಿದನು. ಐರಾವತದಲ್ಲಿ ಕೂತುಕೊಂಡು ಇಂದ್ರದೇವರು ಈ ಯುದ್ಧವನ್ನು ನೋಡಿದರು. ಎಲ್ಲಾ ದೇವತೆಗಳೂ ನೋಡಿದರು. ಭಗವಂತನು ದೇವತೆಗಳನ್ನೂ ನೋಡಿ ವಿಚಿತ್ರ ಯುದ್ಧಗಳಿಂದ ದೇವತೆಗಳ ಹಿತಕ್ಕಾಗಿ ಅಸುರನನ್ನು ಕೊಲ್ಲಬೇಕೆಂದು ಇಚ್ಛಿಸಿದರು. ಇಬ್ಬರು ಭಯಂಕರವಾದ ಯುದ್ಧವನ್ನು ಮಾಡಿಕೊಂಡರು. ನಿಕುಂಭನು ಗದೆಯಿಂದ ಕೃಷ್ಣಪರಮಾತ್ಮನನ್ನು ಬಡಿದು ಗರ್ಜನೆ ಮಾಡಿದನು. ಆಗಲೇ ಕೃಷ್ಣಪರಮಾತ್ಮನೂ ಕೌಮೋದಕೀ ಗದೆಯಿಂದ ನಿಕುಂಭನ ತಲೆಯಲ್ಲಿ ಬಡಿದನು. ಸರ್ವಸಮರ್ಥನಾದ ಭಗವಂತನು ಅಸುರರಿಗೆ ಮೋಹಗೊಳಿಸುವುದಕ್ಕಾಗಿ ನಿಕುಂಭನ ಪೆಟ್ಟಿನಿಂದ

ಕೌಮೋದಕೀ ಗದೆಯನ್ನೂ ಊರಿಕೊಂಡು ಸ್ವಲ್ಪಹೊತ್ತು ನಿಂತುಕೊಂಡಿದ್ದು ಆಮೇಲೆ ಮೂರ್ಛೆ ಬಂದಂತೆ ನಟಿಸಿದನು. ಅದನ್ನು ನೋಡಿ ಅಜ್ಞ ಜನರೆಲ್ಲರೂ ಹಾಹಾಕಾರವನ್ನು ಮಾಡಿದರು.

ಆಗ ಇಂದ್ರದೇವರು ಅಮೃತಮಿಶ್ರವಾದ ಆಕಾಶಗಂಗೆಯ ನೀರನ್ನು ಶ್ರೀಭಗವಂತನ ಮೇಲೆ ಸುರಿಸಿದರು. ಆಮೇಲೆ ಪರಮಾತ್ಮನು ಜ್ಞಾನಬಂದಂತೆ ನಟನೆ ಮಾಡುತ್ತಾ ಎದ್ದನು. ಈರೀತಿಯಾಗಿ ಭಗವಂತನು ತನ್ನ ಇಚ್ಛೆಯಿಂದಲೇ ಮಾಡುವವನಾಗಿ ಚಕ್ರವನ್ನು ತೆಗೆದನು. ಇದನ್ನು ಸಹಿಸಿಕೊ ಎಂದನು. ಆಗಲೇ ಮಾಯಾವಿಯಾದ ನಿಕುಂಭನು ಆ ಶರೀರವನ್ನು ಪರಿತ್ಯಜಿಸಿ ಹೋದನು. ಸರ್ವಜ್ಞನಾದ ಭಗವಂತನು ಅದನ್ನು ತಿಳಿಯದಂತೆ ನಟನೆ ಮಾಡಿದನು. 'ಇವನು ಸಾಯಲಿಕ್ಕೆ ಹೊರಟಿರುವನು. ಅಥವಾ ಸತ್ತಿರುವನು' ಎಂದು ತಿಳಿದುಕೊಂಡಂತೆ ತೋರಿಸಿದನು. ತರುವಾಯ ಪ್ರದ್ಯುಮ್ನನೂ ಅರ್ಜುನನೂ ಮೂರ್ಛೆಯಿಂದ ಎದ್ದು ಬಂದರು. ಮಾಯೆಯನ್ನು ತಿಳಿದವನಾದ ಪ್ರದ್ಯುಮ್ನನು ಕೃಷ್ಣಪರಮಾತ್ಮನೊಡನೆ ಅತ್ಯಂತ ದುರ್ಬುದ್ಧಿಯುಳ್ಳವ ನಾದ ನಿಕುಂಭನು ಇಲ್ಲಿ ಇಲ್ಲ, ಎಲ್ಲಿಯೇ ಹೋಗಿರುವನು ಎಂದನು. ಪ್ರದ್ಯುಮ್ನನು ಹೀಗೆ ಹೇಳುತ್ತಿರಲು ನಿಕುಂಭನ ದೇಹವು ಮರೆಯಾಯಿತು. ಆಗ ಭಗವಂತನೂ ಅರ್ಜುನನೂ ನೆಗಾಡಿದರು. ಆಗಲೇ ಅನೇಕ ಸಾವಿರ ನಿಕುಂಭರ ರೂಪಗಳನ್ನು ಭೂಮಿಯಲ್ಲಿಯೂ ಆಕಾಶದಲ್ಲಿಯೂ ನೋಡಿದರು. ಹಾಗೆಯೇ ಸಾವಿರಾರು ಕೃಷ್ಣರನ್ನು ಸಾವಿರಾರು ಪ್ರದ್ಯುಮ್ನರನ್ನು ನೋಡಿದರು. ಕೆಲವರು ಬಂದು ಅರ್ಜುನನ ಧನುಸ್ಸನ್ನು ಹಿಡಿದುಕೊಂಡರು. ಕೆಲವರು ಅವನ ಬಾಣಗಳನ್ನು ಹಿಡಿದರು. ಹೀಗೆ ಅವರು ಅರ್ಜುನನನ್ನು ಹಿಡಿದುಕೊಂಡು ಆಕಾಶದಲ್ಲಿ ಮೇಲಕ್ಕೆ ಹೋದರು. ಹೀಗೆ ಕೋಟಿ ಅರ್ಜುನರನ್ನು ಹಿಡಿದುಕೊಂಡು ಹೋದರು. ಕೊನೆಯೇ ಕಾಣಿಸಲಿಲ್ಲ, ನಿಕುಂಭನನ್ನು ಕತ್ತರಿಸಲು ಎಲ್ಲಾ ನಿಕುಂಭರೂ ಸೀಳಿಹೋದಂತೆ ತೋರಿದರು. ತರುವಾಯ ಸರ್ವಜ್ಞನಾದ ಪರಮಾತ್ಮನು ಚಕ್ರಾಯುಧದಿಂದ ನಿಕುಂಭನ ತಲೆಯನ್ನು ಕತ್ತರಿಸಿದನು. ಆಗ ನಿಕುಂಭನು ಅರ್ಜುನನನ್ನು ಬಿಟ್ಟು ಕತ್ತರಿಸಿದ ಬುಡವುಳ್ಳ ಮರದಂತೆ ಕೆಳಗೆ ಬಿದ್ದನು. ತರುವಾಯ ಆಕಾಶದಿಂದ ಕೆಳಗೆ ಬೀಳುತ್ತಿರುವ ಅರ್ಜುನನನ್ನು ಪರಮಾತ್ಮನ ಮಾತಿನಿಂದ ಪ್ರೇರಿತನಾದ ಪ್ರದ್ಯುಮ್ನನು ಆಕಾಶದಲ್ಲಿಯೇ ಹೋಗಿ ಹಿಡಿದನು.

ನಿಕುಂಭನು ಸತ್ತುಬಿದ್ದ ಮೇಲೆ ಅರ್ಜುನನನ್ನು ಸಮಾಧಾನಪಡಿಸಿ ಶ್ರೀಭಗವಂತನು ಅರ್ಜುನ ಕಾಮರಿಂದ ಕೂಡಿಕೊಂಡು ದ್ವಾರಕಾಪಟ್ಟಣಕ್ಕೆ

ಹೋದನು. ಭಗವಂತನು ದ್ವಾರಕಾಪಟ್ಟಣದಲ್ಲಿ ಲೋಕಶಿಕ್ಷೆಗಾಗಿ ನಾರದರಿಗೆ ನಮಸ್ಕರಿಸಿದನು. ತರುವಾಯ ಮಹಾತೇಜಸ್ವಿಯಾದ ನಾರದರು ಭಾನು ಎಂಬ ಯಾದವರೊಡನೆ ''ಭಾನುವೇ! ಮಗಳನ್ನು ದೈತ್ಯನು ಅಪಹಾರ ಮಾಡಿಕೊಂಡು ಹೋದನೆಂದು ದೈನ್ಯವನ್ನು ಹೊಂದಬೇಡ. ಅದಕ್ಕೆ ಕಾರಣವನ್ನು ಹೇಳುತ್ತೇನೆ ಕೇಳು. ನಿನ್ನ ಮಗಳು ರೈವತಪರ್ವತದಲ್ಲಿ ಆಡುತ್ತಿರುವಾಗ ದುರ್ವಾಸರಿಗೆ ಕೋಪಬರುವಂತೆ ಮಾಡಿದಳು. ಆಗ ಅವರು ರೋಷದಿಂದ ಇವಳು ಶತ್ರುವಿನ ವಶಳಾಗಲಿ ಎಂದು ಶಾಪವನ್ನು ಕೊಟ್ಟರು. ಆಗ ನಾನು ಅನೇಕ ಮುನಿಗಳಿಂದ ಸಹಿತನಾಗಿ ಅವರನ್ನು ಸಮಾಧಾನಪಡಿಸಿದೆನು. 'ಪೂಜ್ಯರೇ! ನಿರಪರಾಧಿನಿಯಾದ ವ್ರತವುಳ್ಳವಳಾದ ಈ ಕನ್ಯೆಯನ್ನು ಹೇಗೆ ಶಪಿಸಿದಿರಿ. ತಾವು ಅವಳಲ್ಲಿ ಅನುಗ್ರಹಮಾಡಬೇಕು. ನಾವೆಲ್ಲರೂ ವಿಜ್ಞಾಪನೆ ಮಾಡಿಕೊಳ್ಳುತ್ತೇವೆ' ಎಂದು ನಾವೆಲ್ಲರೂ ಹೇಳಿದೆವು.

ನಾವೆಲ್ಲರೂ ಹೀಗೆ ಹೇಳಲು ದುರ್ವಾಸರು ಒಂದು ಮುಹೂರ್ತದವರೆಗೆ ತಲೆಯನ್ನು ತಗ್ಗಿಸಿಕೊಂಡು ಇದ್ದವರಾಗಿ ಕೃಪಾವುಳ್ಳವರಾಗಿ 'ನಾನು ಹೇಳಿದ ಮಾತು ಹಾಗೆ ನಡದೇ ಆಗಬೇಕು. ಬೇರೆ ವಿಧವಾಗಲಿಕ್ಕಿಲ್ಲ. ಇವಳು ಅವಶ್ಯವಾಗಿಯೂ ಶತ್ರುಹಸ್ತಕ್ಕೆ ಸಿಕ್ಕುತ್ತಾಳೆ. ಆದರೂ ಅವಳು ದೂಷಿತಳಾಗದೆಯೇ ಒಳ್ಳೆಯ ಗಂಡನನ್ನು ಹೊಂದಿ ಬಹುಮಕ್ಕಳನ್ನು ಪಡೆಯುತ್ತಾಳೆ. ಬಹು ಹಣವುಳ್ಳವಳಾಗುತ್ತಾಳೆ. ಸೌಭಾಗ್ಯವುಳ್ಳವಳಾಗುತ್ತಾಳೆ' ಇತ್ಯಾದಿ ರೀತಿಯಾಗಿ ಹೇಳಿದರು. ಈಪ್ರಕಾರವಾಗಿ ಇರುವ ಭಾನುಮತಿಯನ್ನು ಸಹದೇವನಿಗೆ ಮದುವೆ ಮಾಡಿಕೊಡು'' ಎಂದು ಹೇಳಿದರು. ಭಾನುವು ತರುವಾಯ ನಾರದರ ಮಾತನ್ನು ಸ್ಮರಿಸಿಕೊಂಡು ಭಾನುಮತಿಯನ್ನು ಸಹದೇವನಿಗೆ ಮದುವೆ ಮಾಡಿಕೊಟ್ಟನು. ಸಹದೇವನು ಬಂದು ಮದುವೆ ಮಾಡಿಕೊಂಡು ಪತ್ನೀಸಹಿತನಾಗಿ ಹೊರಟು ಹೋದನು. ಯಾರು ಈ ಪ್ರಕಾರವಾಗಿ ಪರಮಾತ್ಮನ ಜಯವನ್ನು ಹೇಳುತ್ತಾರೋ ಕೇಳುತ್ತಾರೋ ಅವರಿಗೆ ಸರ್ವಕಾರ್ಯದಲ್ಲಿಯೂ ಜಯವಾಗುವುದು.



# ಧನ್ಯಾಶ್ಚರ್ಯೋಪಾಖ್ಯಾನ [1]

ಒಂದು ದಿವಸದಲ್ಲಿ ಪಾಂಡವರೇ ಮೊದಲಾದವರೂ ದುರ್ಯೋಧನಾದಿಗಳೂ ಇತರ ರಾಜರೂ ಕೃಷ್ಣಪರಮಾತ್ಮನ ದರ್ಶನವನ್ನು ಮಾಡಬೇಕೆಂದು ರೈವತಪರ್ವತಕ್ಕೆ ಬಂದಿದ್ದರು. ಆ ದಿವಸ ರುಕ್ಮಿಣೀದೇವಿಯರು ಭಗವಂತನನ್ನು ವಿಶೇಷ ಪ್ರೀತಿಪಡಿಸುವುದಕ್ಕಾಗಿ ಒಂದು ವ್ರತವನ್ನು ಮಾಡಿ ಪಾರಣೆಮಾಡುವ ದಿವಸ ವಾಗಿದ್ದಿತು. ಲೋಕದ ಜನರು ಹೀಗೆ ನಡೆಯಬೇಕು ಎಂದು ತೋರಿಸಲು ಅವತರಿಸಿರುವ ಶ್ರೀಕೃಷ್ಣಪರಮಾತ್ಮನು ಬ್ರಾಹ್ಮಣರಿಗೆಲ್ಲಾ ಭೋಜನ ಮಾಡಿಸಿದನು. ಅಲ್ಲಿ ದೇವರ ಮಕ್ಕಳೆಲ್ಲರೂ ಬಂದಿದ್ದರು. ಹದಿನಾರುಸಾವಿರ ನೂರ ಎಂಟು ಪತ್ನಿಯರೂ ಬಂದಿದ್ದರು. ಭಗವಂತನು ಬ್ರಾಹ್ಮಣರಿಗೆ ಭೋಜನಮಾಡಿಸಿ ಎಲ್ಲ ಬಂಧುಗಳಿಗೂ ಬೇಕಾದಂತೆ ಸತ್ಕರಿಸಿದರು. ಈ ವ್ರತವು ಮುಗಿದ ಮೇಲೆ ಶ್ರೀಭಗವಂತನು ರುಕ್ಮಿಣೀದೇವಿಯಲ್ಲಿ ವಿಶೇಷಪ್ರೀತಿಯನ್ನು ತೋರಿಸಿದನು. ತರುವಾಯ ಪರಮಾತ್ಮನು ತನ್ನ ದರ್ಶನಕ್ಕಾಗಿ ರಾಜರು ರೈವತಪರ್ವತಕ್ಕೆ ಬಂದಿರುವುದನ್ನು ತಿಳಿದು ರುಕ್ಮಿಣೀದೇವಿಯರಿಂದ ಸಹಿತನಾಗಿ ಅಲ್ಲಿ ಅವರಿಗೆ ದರ್ಶನವನ್ನು ಕೊಟ್ಟನು. ಶ್ರೀಕೃಷ್ಣಪರಮಾತ್ಮನು ರಾಜರ ಸಭೆಯ ಮಧ್ಯದಲ್ಲಿ ಸಿಂಹಾಸನದಲ್ಲಿ ರುಕ್ಮಿಣೀದೇವಿಯರಿಂದ ಕೂಡಿಕೊಂಡು ಕುಳಿತಿದ್ದನು. ಎಲ್ಲಾ ರಾಜರೂ ಭಗವಂತನಿಗೆ ನಮಸ್ಕರಿಸಿದರು.

ಈ ಸಮಯದಲ್ಲಿ ನಾರದರು ಆಕಾಶದಿಂದ ಕೆಳಗೆ ಇಳಿದು ಬಂದು ತ್ವಂ ಆಶ್ಚರ್ಯಃ ತ್ವಂ ಧನ್ಯಃ (ನೀನೇ ಸರ್ವೋತ್ತಮನು. ನಿನ್ನಂತೆ ಇರುವವರು ಇಲ್ಲ) ಎಂದು ಹೇಳಿದರು. ಆಗ ಕೃಷ್ಣಪರಮಾತ್ಮನು 'ದಕ್ಷಿಣಾಭಿಃ ಸಾಕಂ' ಎಂದು ಹೇಳಿದನು. ಆಗ ಅಲ್ಲಿದ್ದ ರಾಜರೆಲ್ಲರೂ ಇದಕ್ಕೆ ಏನು ಅರ್ಥ ಎಂದು ಕೇಳಿದರು. ಅದಕ್ಕೆ ಕೃಷ್ಣಪರಮಾತ್ಮನು ನಾರದರೇ ನೀವೇ ಹೇಳಿರಿ ಎಂದನು.

ಅದಕ್ಕೆ ನಾರದರು 'ನಾನು ಗಂಗೆಗೆ ಹೋಗಿದ್ದೆನು. ಅಲ್ಲಿ ಒಂದು ದೊಡ್ಡ ಆಮೆಯನ್ನು ನೋಡಿದೆನು. ಅದನ್ನು ನೋಡಿ ನಾನು ಆಮೆಯೇ! ತ್ವಂ ಆಶ್ಚರ್ಯಃ ತ್ವಂಧನ್ಯಃ ಎಂದರೆ ನೀನೇ ಸರ್ವೋತ್ತಮನು ನಿನ್ನಂತೆ ಇರುವರು ಇನ್ನೊಬ್ಬರು ಇಲ್ಲ ಎಂದು ಹೇಳಿದೆನು. ಅದಕ್ಕೆ ಆ ಆಮೆಯು ನನ್ನಂತೆ ಇರುವ ಸಾವಿರಾರು ಪ್ರಾಣಿಗಳಿಂದ ಯುಕ್ತವಾಗಿರುವ ಗಂಗಾದೇವಿಯು ನನ್ನಿಂದ ಉತ್ತಮಳು.

1. ಹ.ವಂ.ಪ. ಅ-12

ಆದುದರಿಂದ ನೀವು ಗಂಗಾದೇವಿಯೊಡನೆ ಈ ಮಾತನ್ನು ಹೇಳಿರಿ' ಎಂದಿತು. ಆಗ ಗಂಗಾದೇವಿಯ ಬಳಿಗೆ ಹೋಗಿ ತ್ವಂ ಆಶ್ಚರ್ಯಾ. ತ್ವಂ ಧನ್ಯಾ ಎಂದು ಹೇಳಿದೆನು. ಆಗ ನದಿಯಲ್ಲಿ ಗಂಗಾದೇವಿಯು ನನ್ನ ಪತಿಯಾದ ಕಾರಣ ವರುಣದೇವರು ನನಗಿಂತ ಆಶ್ಚರ್ಯರು ಧನ್ಯರು' ಎಂದಳು. ಆಗ ನಾನು ಸಮುದ್ರದ ಬಳಿಗೆ ಹೋಗಿ 'ಸಮುದ್ರರಾಜನಾದ ವರುಣನೇ! ನೀನೇ ಆಶ್ಚರ್ಯನು. ನೀನೇ ಧನ್ಯನು' ಎಂದು ಹೇಳಿದೆನು. ಅದಕ್ಕೆ ವರುಣದೇವರು 'ನನಗೂ ನನ್ನಂತೆ ಇರುವ ಇತರ ದೇವತೆಗಳಿಗೂ ಆಧಾರಭೂತಳಾದ ಪೃಥಿವಿಯು ಅಂದರೆ ಪ್ರಸಿದ್ಧಳಾದ ಕಾರಣ ಪೃಥಿವೀ ಎಂದು ಹೆಸರುಳ್ಳ ಪಾರ್ವತೀದೇವಿಯರು ನನಗಿಂತ ಆಶ್ಚರ್ಯರು ಧನ್ಯರು ಎಂದರು. ಆಗ ನಾನು ಪೃಥಿವೀ ಎಂದು ಹೆಸರುಳ್ಳ ಪಾರ್ವತೀದೇವಿಯರ ಬಳಿಗೆ ಹೋಗಿ ತ್ವಂ ಆಶ್ಚರ್ಯಾ ತ್ವಂಧನ್ಯಾ ಎಂದು ಹೇಳಿದೆನು. ಆಗ ಪೃಥಿವೀ ಎಂದು ಹೆಸರುಳ್ಳ ಪಾರ್ವತೀದೇವಿಯರು 'ನನ್ನನ್ನೂ ನನಗೆ ಸಮಾನರಾದ ಸೌಪರ್ಣೀ ವಾರುಣೀ ಎಂಬ ದೇವಿಯರನ್ನೂ ಧರಿಸಿರುವ ಪ್ರಯುಕ್ತ ಪರ್ವತಗಳು ಅಂದರೆ ಇತರರನ್ನು ರಕ್ಷಿಸುವ ಕಾರಣ ಪರ್ವತ ಎಂದು ಹೆಸರುಳ್ಳ ಗರುಡ, ಶೇಷ, ರುದ್ರರು ನನ್ನಿಂದಲೂ ಉತ್ತಮರು. ಆದುದರಿಂದ ಅವರನ್ನು ಹೇಳಿರಿ' ಎಂದರು.

ಆಗ ನಾನು ಗರುಡ, ಶೇಷ, ರುದ್ರ ಬಳಿಗೆ ಹೋಗಿ 'ನೀವು ಆಶ್ಚರ್ಯರು. ನೀವು ಧನ್ಯರು ಎಂದು ಹೇಳಿದೆನು. ಆಗ ಅವರು ನಮಗಿಂತ ಬ್ರಹ್ಮದೇವರು ಉತ್ತಮರು. ಅವರನ್ನು ಹೇಳಿರಿ' ಎಂದರು. ನಾನು ಬ್ರಹ್ಮದೇವರ ಬಳಿಗೂ ಹೋಗಿ ತ್ವಂ ಆಶ್ಚರ್ಯ ತ್ವಂ ಧನ್ಯಃ ಎಂದು ಹೇಳಿದೆನು. ಅದಕ್ಕೆ ಬ್ರಹ್ಮದೇವರು 'ನನ್ನ ತಾಯಿಯಾದ ವೇದಕ್ಕೆ ಅಭಿಮಾನಿಯಾದ ಕಾರಣ ವೇದ ಎಂದು ಹೆಸರುಳ್ಳ ಲಕ್ಮೀದೇವಿಯರು ಉತ್ತಮರು. ಅವರೊಡನೆ ಹೇಳಿರಿ' ಎಂದರು. ನಾನು ವೇದ ಎಂದು ಹೆಸರುಳ್ಳ ಲಕ್ಷ್ಮೀದೇವಿಯರ ಬಳಿಗೆ ಹೋಗಿ ನೀವೇ ಆಶ್ಚರ್ಯರು. ನೀವೇ ಧನ್ಯರು ಎಂದು ಹೇಳಿದೆನು. ಆಗ ಒಬ್ಬರೇ ಆದರೂ ಅನೇಕ ರೂಪದಿಂದ ಇದ್ದ ವೇದಾಭಿಮಾನಿಯಾದ ವೇದ ಎಂದು ಹೆಸರುಳ್ಳ ಲಕ್ಷ್ಮೀದೇವಿಯರು 'ಸರ್ವಜ್ಞನಾದ ಕಾರಣ ಜ್ಞ ಎಂದು ಹೆಸರುಳ್ಳ ನಾರಾಯಣನಿಂದ ಪ್ರವಿಷ್ಟವಾದ ಕಾರಣವೂ ಯಜ್ಞಗಳಿಗೆ ಅಭಿಮಾನಿಯಾದ ಕಾರಣವೂ ಯಜ್ಞವೆಂದು ಹೆಸರುಳ್ಳ ನನ್ನದೇ ಇನ್ನೊಂದು ರೂಪವಿದೆ. ನನ್ನ ಈ ವೇದ ಎಂಬ ರೂಪಕ್ಕಿಂತ ಆ ಯಜ್ಞ ಎಂಬ ರೂಪವು ಶ್ರೇಷ್ಠವು. ಆ ರೂಪದೊಡನೆ ನೀವು ಹೋಗಿ ಹೇಳಿರಿ' ಎಂದರು.

ಆಗ ನಾನು ಯಜ್ಞ ಎಂಬ ಲಕ್ಷ್ಮೀದೇವಿಯರ ಬಳಿಗೆ ಹೋಗಿ ನೀವೇ

ಆಶ್ಚರ್ಯರು. ನೀವೇ ಧನ್ಯರು ಎಂದೆನು. ಆಗ ದೇವರ ತೊಡೆಯಲ್ಲಿ ಕುಳಿತಿದ್ದ ದೇವರ ಆವೇಶವುಳ್ಳ ಯಜ್ಞ ಎಂದು ಹೆಸರುಳ್ಳ ಆ ಲಕ್ಷ್ಮೀದೇವಿಯರು 'ನನಗಿಂತ ನನ್ನ ಪತಿಯಾದ ಭಗವಂತನು ಉತ್ತಮರಾಗಿರುವರು. ಆ ಭಗವಂತನೊಡನೆ ನೀವು ಹೋಗಿ ಆಶ್ಚರ್ಯ ಧನ್ಯ ಎಂಬ ಮಾತುಗಳನ್ನು ಹೇಳಿರಿ' ಎಂದರು. ಈರೀತಿಯಾಗಿ ಲಕ್ಷ್ಮೀದೇವಿಯರು ಹೇಳಲು ಪರಮಾತ್ಮನ ಅವತಾರ ರೂಪಗಳಿಗೂ ಮೂಲರೂಪಕ್ಕೂ ಭೇದವಿಲ್ಲವೆಂದು ಕೃಷ್ಣಭಗವಂತನ ಬಳಿಗೆ ಬಂದು ನೀನು ಆಶ್ಚರ್ಯನು. ನೀನು ಧನ್ಯನು ಎಂದೆನು. ಅದಕ್ಕೆ ಕೃಷ್ಣಪರಮಾತ್ಮನು ದಕ್ಷಿಣಾಭಿಃ ಸಾಕಂ ಎಂದು ಹೇಳಿದನು. ಅದಕ್ಕೆ ಏನು ಅಭಿಪ್ರಾಯವೆಂದರೆ 'ನನ್ನ ತೊಡೆಯಲ್ಲಿ ಕೂತಿರುವ ಲಕ್ಷ್ಮೀದೇವಿಯಿಂದ ಮಾತ್ರ ನಾನು ಉತ್ತಮನಲ್ಲ. ದಕ್ಷಿಣಾ ಎಂಬ ಲಕ್ಷ್ಮೀದೇವಿಗಿಂತಲೂ ನಾನೇ ಉತ್ತಮನು. ದಕ್ಷಿಣಾಭಿಃ ಸಾಕಂ ಎಂದರೆ ದಕ್ಷಿಣೆ ಎಂದು ಹೆಸರುಳ್ಳ ಲಕ್ಷ್ಮೀದೇವಿಯಿಂದ ಸಹಿತನಾಗಿರುವಾಗಲೂ ನಾನೇ ಉತ್ತಮನು ಎಂದು ಭಗವಂತನು ಹೇಳಿದನು. ಭಗವಂತನ ಒಂದು ರೂಪದಲ್ಲಿ ಅರ್ಧದೇಹ ದಲ್ಲಿ ಲಕ್ಷ್ಮೀದೇವಿಯೂ ಅರ್ಧದೇಹದಲ್ಲಿ ಪರಮಾತ್ಮನೂ ಇರುವನು. ಆಗ ಭಗವಂತನ ರೂಪಕ್ಕೆ ಅರ್ಧನಾರಾಯಣ ಎಂದು ಹೆಸರು. ಎಡ ಅರ್ಧದಲ್ಲಿ, ಲಕ್ಷ್ಮೀ ದೇವಿಯರು ಇರುವರು. ಬಲ ಅರ್ಧದಲ್ಲಿ ಪರಮಾತ್ಮನು ಇರುವನು. ಆದುದರಿಂದ ಆ ಲಕ್ಷ್ಮೀದೇವಿಯರ ರೂಪಕ್ಕೆ ಬಲಪಾರ್ಶ್ವದಲ್ಲಿ ಸ್ವಾಮಿಯಾದ ಭಗವಂತನು ಇರುವ ಕಾರಣ (ದಕ್ಷೇ ಇನಃ ಯಸ್ಯಾಃ ಸಾ) ದಕ್ಷಿಣಾ ಎಂದು ಹೆಸರು. ಆ ದಕ್ಷಿಣಾ ಎಂಬ ರೂಪವೇ ಯಜ್ಞದಲ್ಲಿ ಕೊಡುವ ದಕ್ಷಿಣೆಗೆ ಅಭಿಮಾನಿಯು. ಈರೀತಿಯಾಗಿ ಅರ್ಧದೇಹದಲ್ಲಿಯೇ ದಕ್ಷಿಣಾ ಎಂದು ಹೆಸರುಳ್ಳ ಲಕ್ಷ್ಮಿಯು ಇರುವ ಪ್ರಯುಕ್ತ ನಾನೂ ಲಕ್ಷ್ಮಿಯೂ ಸಮಾನರು ಎಂದು ತಿಳಿಯಬಾರದು. ಆ ರೂಪ ದಲ್ಲಿಯೂ ಕೂಡ ತಾನು ಲಕ್ಷ್ಮಿಯಿಂದ ಉತ್ತಮನೇ ಎಂದು ತಿಳಿಸುವುದಕ್ಕಾಗಿ ಭಗವಂತನು ದಕ್ಷಿಣಾಭಿಃ ಸಾಕಂ ಎಂದು ಹೇಳಿದನು. ದಕ್ಷಿಣಾ ಎಂದು ಹೆಸರುಳ್ಳ ಲಕ್ಷ್ಮೀದೇವಿ ಯರು ಇತರ ಎಲ್ಲರಿಂದ ಉತ್ತಮರು. ಆ ಲಕ್ಷ್ಮೀದೇವಿಯರಿಂದಲೂ ಭಗವಂತನು ಉತ್ತಮನು ಎಂದು ಪರಮಾತ್ಮನ ಅಭಿಪ್ರಾಯವು'' ಎಂದು ಹೇಳಿದರು.

ಮತ್ತೂ ನಾರದರು 'ರಾಜರೇ! ನೋಡಿ. ಈ ರುಕ್ಮಿಣೀದೇವಿಯರೇ ದಕ್ಷಿಣಾ ದೇವಿಯರು. ಇವನೇ ಪರಮಾತ್ಮನು. ಈ ಪರಮಾತ್ಮನು ರುಕ್ಮಿಣೀದೇವಿಯರಿಂದ ಉತ್ತಮನಾಗಿರುವನು. ನಿಮಗೆಲ್ಲರಿಗೂ ಈ ಕೃಷ್ಣಪರಮಾತ್ಮನ ಪರಾಕ್ರಮವು ಪ್ರಸಿದ್ಧವಾಗಿರುವುದು' ಎಂದರು.

ಆಗ ಕುಂತೀದೇವಿಯು ಕೃಷ್ಣಪರಮಾತ್ಮನ ಪರಾಕ್ರಮವನ್ನು ನೋಡಬೇಕು ಎಂದರು. ಆಗ ಪರಮಾತ್ಮನು ತನ್ನ ಪರಾಕ್ರಮವನ್ನು ತೋರಿಸಿದನು. ಪಾಂಡವರನ್ನೂ ಕೌರವರನ್ನೂ ಭೀಷ್ಮ ದ್ರೋಣ ಅಶ್ವತ್ಥಾಮ ಕೃಪಕರ್ಣ ಮೊದಲಾದ ಎಲ್ಲಾ ರಾಜರನ್ನೂ ಯುದ್ಧಮಾಡಿ ಒಂದೇ ಕ್ಷಣದಲ್ಲಿ ಆಯುಧರಹಿತರನ್ನಾಗಿ ಮಾಡಿದರು. ಭೀಮಸೇನದೇವರು ಮಾತ್ರ ''ನನಗೆ 'ಭಗವಂತನನ್ನು ಎದುರಿಸಲಾರೆನು' ಎಂಬ ವ್ರತವಿದೆ''ಯೆಂದರು. ಆಗ ಭಗವಂತನು ಹಾಗಾದರೆ ರಥದ ಚಕ್ರವನ್ನು ಹಿಡಿಯೆಂದರು. ಭೀಮಸೇನದೇವರು ಭಗವಂತನನ್ನು ನಮಸ್ಕರಿಸಿ ಚಕ್ರವನ್ನು ಹಿಡಿದರು. ಭಗವಂತನು ರಥವನ್ನು ಮುಂದೆ ಹಾರಿಸಿದನು. ಇದರಿಂದ ಭೀಮಸೇನದೇವರನ್ನು ಜಯಿಸಿದಂತೆ ಆಯಿತು. ಈರೀತಿಯಾಗಿ ಆಟಕ್ಕಾದರೂ ಎಲ್ಲಾ ರಾಜರೂ ತಮ್ಮ ಶಕ್ತಿಯಿದ್ದಷ್ಟು ಪ್ರಯತ್ನ ಮಾಡಿದರು. ಭಗವಂತನಿಂದ ಸೋತು ಹೋದರು. ತರುವಾಯ ಎಲ್ಲರೂ ಭಗವಂತನಿಗೆ ನಮಸ್ಕರಿಸಿದರು. ಕುಂತೀದೇವಿಯೂ ಆಶ್ಚರ್ಯವುಳ್ಳವಳಾಗಿ ಕೃಷ್ಣಪರಮಾತ್ಮನಿಗೆ ನಮಸ್ಕರಿಸಿದರು. ಆಗ ನಾರದರು 'ರಾಜರೇ! ಇದೇ ರೀತಿಯಾಗಿ ಭಗವಂತನಲ್ಲಿ ಅನೇಕ ಆಶ್ಚರ್ಯಗಳನ್ನು ನೀವು ನೋಡಿರುವಿರಿ. ಆದುದರಿಂದ ಈ ಪರಮಾತ್ಮನೇ ಆಶ್ಚರ್ಯನು. ಇವನೇ ಧನ್ಯನು' ಎಂದು ಹೇಳಲು ಎಲ್ಲರೂ ಪುನಃ ಪರಮಾತ್ಮನಿಗೆ ನಮಸ್ಕರಿಸಿದರು. ತರುವಾಯ ನಾರದರು ಕೃಷ್ಣಪರಮಾತ್ಮನಿಗೆ ಪಾರಿಜಾತ ಪುಷ್ಪವನ್ನು ಕೊಟ್ಟರು. ಆ ಭಗವಂತನು ಆ ಪುಷ್ಪವನ್ನು ತನ್ನ ಸಮೀಪದಲ್ಲೇ ಕುಳಿತಿದ್ದ ರುಕ್ಮಿಣೀದೇವಿಯರಿಗೆ ಕೊಟ್ಟನು. ಪರಮ ಸುಂದರಿಯಾದ ರುಕ್ಮಿಣೀದೇವಿಯರು ಆ ಪುಷ್ಪವನ್ನು ತೆಗೆದುಕೊಂಡು ಪರಮಾತ್ಮನ ಅಭಿಪ್ರಾಯವನ್ನು ತಿಳಿದುಕೊಂಡು ತನ್ನ ತಲೆಯಲ್ಲಿ ಮುಡಿದುಕೊಂಡರು. ಮೂರುಲೋಕದಲ್ಲಿಯೂ ಪರಮ ಸುಂದರಿ ಯಾದ ರುಕ್ಮಿಣೀದೇವಿಯರು ಆ ಹೂವನ್ನು ಮುಡಿದುಕೊಂಡು ಮೊದಲಿಗಿಂತ ಎರಡು ಪಾಲಾಗಿ ಪ್ರಕಾಶಿಸಿದರು. ಆಗ ನಾರದರು ರುಕ್ಮಿಣೀದೇವಿಯರನ್ನು ನೋಡಿ 'ಪತಿವ್ರತೆಯಾದ ದೇವಿ! ಈ ಪುಷ್ಪವು ನಿಮಗೇ ಯೋಗ್ಯವಾಗಿದೆ. ನೀವು ಮುಡಿದುಕೊಂಡ ಕಾರಣ ಈ ಪುಷ್ಪಕ್ಕೇ ಕಾಂತಿಉಂಟಾಗಿರುವುದು. ನೀವೂ ಇದರಿಂದ ಅತ್ಯಂತ ಶೋಭಿಸುತ್ತಾ ಇರುವಿರಿ.

ಕಲ್ಯಾಣಗುಣಗಳಿಂದ ಕೂಡಿದ ಪತಿಭಕ್ತಿಯುಳ್ಳ ದೇವಿ! ಈ ಪುಷ್ಪವು ಯಾವಾಗಲೂ ಬಾಡದೆ ಇರುವುದು. ಒಂದುವರ್ಷಕಾಲ ಪುಷ್ಪವು ಹಾಗೆಯೇ ಇರುವುದು. ಬೇಕಾದ ವಾಸನೆಯನ್ನು ಕೊಡುವುದು. ಛಳಿ ಬಿಸಿ ಬೇಕಾದದ್ದನ್ನು

ಕೊಡುವುದು. ಮನಸ್ಸಿನಲ್ಲಿ ಅಪೇಕ್ಷಿಸಿದ ರಸಗಳನ್ನು ಸುರಿಸುವುದು. ಸೌಭಾಗ್ಯವನ್ನು ಉಂಟುಮಾಡುವುದು. ಯಾವ ಬೇರೆ ವಾಸನೆಯುಳ್ಳ ಪುಷ್ಪಗಳನ್ನು ಕೊಡುವುದು. ಅದನ್ನು ಮುಡಿದುಕೊಂಡಿರುವ ಸಮಯದಲ್ಲಿ ಮನಸ್ಸು ದುಷ್ಟವಿಷಯದಲ್ಲಿ ಹೋಗಲಾರದು. ಆ ಪುಷ್ಪವು ಯಾವ ಬಣ್ಣವನ್ನು ಬೇಕಾದರೂ ಹೊಂದುವುದು. ಚಿಕ್ಕದೂ ಆಗುವುದು. ದೊಡ್ಡದೂ ಆಗುವುದು. ರಾತ್ರಿಯಲ್ಲಿ ಬೆಳಕನ್ನು ಉಂಟುಮಾಡುವುದು. ಅದನ್ನು ಮುಡಿದುಕೊಂಡಿರುವಾಗ ಯಾವ ಹಾಡನ್ನು ಕೇಳಬೇಕೆಂದು ಯೋಚಿಸಿದರೂ ಆ ಹಾಡು ಕೇಳಿಸುವುದು. ಒಂದು ವರ್ಷವೂ ಸಂಪೂರ್ಣವಾಗಲು ಈ ಪುಷ್ಪವು ಮರವನ್ನೇ ಹೋಗಿ ಸೇರುವುದು. ರುದ್ರದೇವರ ಪ್ರೀತಿಪಾತ್ರಳಾದ ಪಾರ್ವತೀದೇವಿಯರು ಈ ಪುಷ್ಪವನ್ನು ಯಾವಾಗಲೂ ಧರಿಸಿಕೊಂಡಿರುವಳು. ಹಾಗೆಯೇ ಅದಿತಿ, ಶಚೀ ಇತ್ಯಾದಿ ದೇವತಾಸ್ತ್ರೀಯರು ಧರಿಸಿರುವರು. ಎಲ್ಲರ ತಲೆಯಲ್ಲಿಯೂ ಈ ಹೂವು ಒಂದು ವರ್ಷಕಾಲ ಇರುವುದು. ಹದಿನಾರು ಸಾವಿರದ ನೂರಎಂಟು ಜನ ಭಗವಂತನ ಪತ್ನಿಯರ ಮಧ್ಯದಲ್ಲಿ ನೀವು ಶ್ರೇಷ್ಠರು. ಭಗವಂತನಿಗೆ ಅತ್ಯಂತ ಪ್ರೀತಿಪಾತ್ರರು. ನಿಮಗೆ ಈ ಪುಷ್ಪವನ್ನು ಕೊಟ್ಟ ಪ್ರಯುಕ್ತ ನಿಮ್ಮ ಇತರ ಎಲ್ಲಾ ಸಪತ್ನಿಯರೂ ಅವಮಾನವನ್ನು ಹೊಂದಿರುವರು. ತಾನೇ ಸೌಭಾಗ್ಯವತಿಯೆಂದು ತಿಳಿದುಕೊಂಡಿರುವ ಸತ್ಯಭಾಮಾದೇವಿಯರೂ ಈಗ ನಿಮ್ಮ ಮಹತ್ವವನ್ನು ತಿಳಿಯುವರು. ಹಾಗೆಯೇ ಜಾಂಬವತೀಯೇ ಮೊದಲಾದವರೂ ತಿಳಿಯುವರು. ತಮ್ಮ ಮಹತ್ವಾಕಾಂಕ್ಷೆಯನ್ನು ಬಿಟ್ಟುಬಿಡುವರು. ಮೂರು ಲೋಕದಲ್ಲಿಯೂ ಶ್ರೇಷ್ಠವಾದ ಈ ಪುಷ್ಪವನ್ನು ನಿನಗೆ ಭಗವಂತನು ಕೊಟ್ಟಿರುವ ಪ್ರಯುಕ್ತ ನೀವು ಭಗವಂತನಿಗೆ ಪ್ರಾಣಕ್ಕಿಂತಲೂ ಪ್ರಿಯರಾದವರು ಎಂದು ತಿಳಿದುಕೊಂಡಿರುವೆನು' ಈರೀತಿಯಾಗಿ ಹೇಳಿದರು.

ನಾರದರು ಹೇಳಿದ ಈ ಮಾತನ್ನು ಸತ್ಯಭಾಮಾದೇವಿಯರ ದಾಸಿಯರೂ ಇತರ ಭಗವಂತನ ಪತ್ನಿಯರ ದಾಸಿಯರೂ ಕೇಳಿದರು. ಸ್ತ್ರೀಸ್ವಭಾವದಿಂದ ಅವರು ಅಂತಃಪುರಕ್ಕೆ ಹೋಗಿ ತಮ್ಮ ಯಜಮಾನಿನಿಯರೊಡನೆ ಈ ಎಲ್ಲಾ ವಿಷಯಗಳನ್ನೂ ಹೇಳಿದರು. ಇದನ್ನು ಇತರ ಎಲ್ಲಾ ಭಗವಂತನ ಪತ್ನಿಯರೂ ಕೇಳಿ ರುಕ್ಮಿಣೀದೇವಿಯರು ಈ ಬಹುಮಾನಕ್ಕೆ ಅರ್ಹರು ಜ್ಯೇಷ್ಠರು ಇತ್ಯಾದಿ ರೀತಿಯಾಗಿ ಸಂತೋಷದಿಂದಲೇ ಹೇಳಿದರು. ಆದರೆ ಸತ್ಯಭಾಮಾದೇವಿಯರು ಮಾತ್ರ ಇದನ್ನು ಕೇಳಿ ಸಹಿಸಲಿಲ್ಲ. ಸತ್ಯಭಾಮಾದೇವಿಯರು ಯಾವಾಗಲೂ ಕೃಷ್ಣಪರಮಾತ್ಮನಿಗೆ ಅತ್ಯಂತ ಪ್ರಿಯರಾಗಿದ್ದರು. ರೂಪಯೌವನವುಳ್ಳವರಾಗಿದ್ದರು. ಸೌಭಾಗ್ಯದಿಂದ

ಗರ್ವವುಳ್ಳವರಾಗಿದ್ದರು. ಅಭಿಮಾನವುಳ್ಳವರಾಗಿದ್ದರು. ಆದರೂ ಲೋಕದೃಷ್ಟಿಯಿಂದ ಅವರಿಗೆ ಅಸೂಯೆ ಯುಂಟಾಯಿತು. ಕುಂಕುಮಬಣ್ಣವುಳ್ಳ ಶ್ರೇಷ್ಠವಾದ ಸೀರೆಯನ್ನು ಬಿಟ್ಟು ಒಂದು ಬಿಳೀಸೀರೆಯನ್ನು ಉಟ್ಟುಕೊಂಡರು. ತುಂಬಾ ಸಂತಾಪವುಳ್ಳವರಾಗಿ ಅತ್ಯಂತ ಕ್ರೋಧವುಳ್ಳವರಾಗಿ ಕ್ರೋಧದಿಂದ ಇರುವ ಮನೆಯ ಒಳಗೆ ಹೋದರು. ರೋಷದ ಚಿಹ್ನೆಯಾಗಿ ಹಣೆಗೆ ಒಂದು ಬಿಳಿವಸ್ತ್ರವನ್ನು ಸುತ್ತಿಕೊಂಡರು. ಹಣೆಯ ಬದಿಗೆಲ್ಲಾ ಕೆಂಪಾದ ಗಂಧವನ್ನು ಹಚ್ಚಿಕೊಂಡರು. ಸಖಿಯರು ಹೇಳಿದ ಮಾತನ್ನೇ ಸ್ಮರಿಸುತ್ತಾ ರೋಷದಿಂದ ನಡುಗುತ್ತಾ ಆಭರಣಗಳನ್ನೆಲ್ಲಾ ತೆಗೆದುಹಾಕಿ ತಲೆದಿಂಬಿನಿಂದ ಕೂಡಿದ ಹಾಸಿಗೆಯ ಮೇಲೆ ಜಡೆಯನ್ನು ಬಿಟ್ಟುಕೊಂಡು ಕೂತುಕೊಂಡರು. ದೀರ್ಘಶ್ವಾಸವನ್ನು ಬಿಡುತ್ತಾ ಕಮಲಪುಷ್ಪವನ್ನು ಕೈಯಲ್ಲಿ ಹಿಡಿದುಕೊಂಡು ಪುಡಿಪುಡಿ ಮಾಡುತ್ತಾ ಇದ್ದರು.

ತರುವಾಯ ಇಲ್ಲಿ ಪರಮಾತ್ಮನು ಎಲ್ಲವನ್ನು ತಿಳಿದವನಾಗಿ ನಾರದರಿಗೆ ಉಪಚಾರ ಮಾಡಲಿಕ್ಕೆ ಪ್ರದ್ಯುಮ್ನನನ್ನು ನಿಲ್ಲಿಸಿ ತಾನು ಏನೋ ಒಂದು ನೆಪವನ್ನು ಹೇಳಿ ಸತ್ಯಭಾಮಾದೇವಿಯರ ಮನೆಗೆ ಬಂದನು. ದೇವಿಯು ರೋಷದಿಂದ ಇರುವಳೆಂದು ತಿಳಿದುಕೊಂಡು ತುಂಬಾ ಅಂಜುತ್ತಾ ಮೆಲ್ಲನೆ ಬಂದನು. ಸೇವಕನನ್ನು ಬಾಗಿಲಲ್ಲೇ ನಿಲ್ಲಲಿಕ್ಕೆ ಹೇಳಿ ತಾನು ಒಳಗೆ ಪ್ರವೇಶಿಸಿದನು. ದೂರದಲ್ಲಿಯೇ ಕ್ರೋಧದ ಮನೆಯಲ್ಲಿದ್ದ ಕೋಪದಿಂದ ದೀರ್ಘಶ್ವಾಸವನ್ನು ಬಿಡುತ್ತಾ ಇದ್ದ ಕೈಯಲ್ಲಿದ್ದ ಕಮಲಪುಷ್ಪವನ್ನು ಮುಖಕ್ಕೆ ಒತ್ತಿಕೊಂಡು ದೀರ್ಘಶ್ವಾಸಬಿಡುತ್ತಾ ಪುನಃಪುನಃ ನಗುತ್ತಾ ಇದ್ದ ತನ್ನ ಕಾಲಬೆರಳಿನಿಂದ ಭೂಮಿಯನ್ನು ಕೆರೆಯುತ್ತಾ ಇದ್ದ ಮುಖವನ್ನು ಓರೆಮಾಡಿಕೊಂಡು ಮಾತಾಡುತ್ತಾ ಇದ್ದ ಎಡಕೈಯಮೇಲೆ ತನ್ನ ಮುಖವನ್ನು ಇಟ್ಟುಕೊಂಡು ಏನೋ ಯೋಚನೆಯನ್ನು ಮಾಡುತ್ತಾ ಇದ್ದ ಸಖಿಯ ಕೈಯಿಂದ ಗಂಧವನ್ನು ತೆಗೆದುಕೊಂಡು ಹುಚ್ಚುಹಿಡಿದವರಂತೆ ಮಾತಾಡುತ್ತಾ ಎದೆಯಮೇಲೆ ತಿಕ್ಕಿಕೊಂಡಿದ್ದ ಹಾಸಿಗೆಯಿಂದ ಎದ್ದು ಬೀಳುತ್ತಾ ಇದ್ದ ಸತ್ಯಭಾಮಾದೇವಿಯರನ್ನು ನೋಡಿದನು. ನೋಡುತ್ತಾ ಇರುವಾಗ ಸತ್ಯಭಾಮಾ ದೇವಿಯರು ತಲೆಗೆ ಹೊದ್ದುಕೊಂಡು ತಲೆಯನ್ನು ತಲೆದಿಂಬಿನ ಮೇಲೆ ಇಟ್ಟುಕೊಂಡರು. ಇದೇ ಸಮಯವೆಂದು ಕೃಷ್ಣಪರಮಾತ್ಮನು ಒಳಗೆ ಪ್ರವೇಶಿಸಿ ನಾನು ಬಂದುದನ್ನು ಒಬ್ಬರೂ ತಿಳಿಸಬೇಡಿರಿ ಎಂದು ಸಂಜ್ಞೆಮಾಡಿ ಹತ್ತಿರ ಹೋಗಿ ಬೀಸಣಿಗೆಯನ್ನು ಹಿಡಿದು ಮೆಲ್ಲನೆ ಬೀಸಿದರು. ಮೆಲ್ಲನೆ ನಗಾಡಿದರು. ಭಗವಂತನು ಪಾರಿಜಾತಪುಷ್ಪವನ್ನು ಧರಿಸಿದ್ದ ಪ್ರಯುಕ್ತ ಆ ಹೂವಿನ ವಾಸನೆಯು ದೇವರ

ಮೈಯಲ್ಲಿ ಇದ್ದಿತು. ಒಳ್ಳೇ ಸುವಾಸನೆಯು ಬರಲು ಸತ್ಯಭಾಮಾದೇವಿಯರು ಆಶ್ಚರ್ಯವುಳ್ಳವರಾಗಿ ಮುಖದ ವಸ್ತ್ರವನ್ನು ತೆಗೆದು ದಾಸಿಯರೊಡನೆ ಇದೇನು ವಾಸನೆ ಎಂದು ಕೇಳಿದರು. ಕೃಷ್ಣನ ಪರಮಾತ್ಮನು ಹಿಂದಿನ ಪಾರ್ಶ್ವದಲ್ಲಿ ನಿಂತಿದ್ದ ಕಾರಣ ಸತ್ಯಭಾಮಾದೇವಿಯರು ನೋಡಿರಲಿಲ್ಲ. ಸತ್ಯಭಾಮಾದೇವಿಯರು ದಾಸಿಯ ರೊಡನೆ ಈರೀತಿಯಾಗಿ ಸುವಾಸನೆಯು ಎಲ್ಲಿಂದ ಬರುವುದು ಎಂದು ಕೇಳಲು ಅವರೆಲ್ಲರೂ ಮಾತಾಡದೆ ಮೊಳಕಾಲನ್ನು ಊರಿ ನಮಸ್ಕರಿಸಿ ಮುಖವನ್ನು ತಗ್ಗಿಸಿಕೊಂಡು ಮಾತಾಡದೆ ಕೈಮುಗಿದುಕೊಂಡು ನಿಂತುಕೊಂಡರು. ಆಗ ಸತ್ಯಭಾಮಾದೇವಿಯರು ಈ ಅಪೂರ್ವಗಂಧವು ಎಲ್ಲಿಂದ ಬರುವುದೆಂದು ಸುತ್ತಲೂ ನೋಡಿದರು. ಭಗವಂತನನ್ನು ನೋಡಿದರು. ಆಗಲೇ ಕಣ್ಣಲ್ಲಿ ಅವರಿಗೆ ಧಾರೆಧಾರೆಯಾಗಿ ಕಣ್ಣೀರು ಸುರಿಯಿತು. ತುಟಿಯು ನಡುಗಿತು. ದೀರ್ಘ ಶ್ವಾಸವನ್ನು ಬಿಡುತ್ತಾ ಮುಖವನ್ನು ತಗ್ಗಿಸಿದರು. ಆಮೇಲೆ ಪರಮಾತ್ಮನು ಇದ್ದ ಕಡೆ ನೋಡದೆ ಬೇರೆ ಕಡೆ ಮುಖಮಾಡಿದರು.

ಆಗ ಭಗವಂತನು 'ಹುಬ್ಬಿನ ವಿಲಾಸವನ್ನು ಮಾಡುತ್ತಾ ಕಣ್ಣುಗಳನ್ನು ಹಾರಿಸುತ್ತಾ ಕೈಯಲ್ಲಿ ಮುಖವನ್ನು ಇಟ್ಟುಕೊಂಡು ಅತ್ಯಂತ ಶೋಭಿಸುತ್ತಾ ಇರುವಿಯಲ್ಲಾ ಸತ್ಯಭಾಮಾ' ಎಂದು ಹೇಳಿದನು. ಆಗ ಸತ್ಯಭಾಮಾ ದೇವಿಯರ ಕಣ್ಣುಗಳಿಂದ ಧಾರೆಧಾರೆಯಾಗಿ ನೀರು ಸುರಿಯಿತು. ದೇವರು ಓಡಿ ಬಂದು ಆ ಕಣ್ಣೀರನ್ನು ಕೈಯಲ್ಲಿ ಹಿಡಿದರು. ಎದೆಯ ಮೇಲೆ ಬೀಳುತ್ತಿರುವ ಸತ್ಯಭಾಮಾದೇವಿಯರ ಕಣ್ಣೀರನ್ನು ಭಗವಂತನು ವರಸಿ 'ಸತ್ಯಭಾಮೆ! ಯಾಕೆ ಹೀಗೆ ನಿನ್ನ ಕಣ್ಣುಗಳಿಂದ ನೀರು ಸುರಿಯುತ್ತಿರುವುದು? ನಿನಗೆ ಕುಂಕುಮಬಣ್ಣದ ಸೀರೆಯ ಪ್ರಿಯವಷ್ಟೆ! ನೀನೇಕೆ ಬಿಳಿ ಸೀರೆಯನ್ನು ಉಟ್ಟುಕೊಂಡಿರುವಿ? ದೇವರ ಪೂಜೆ ಮಾಡುವಾಗ ಮಾತ್ರ ಬಿಳಿಸೀರೆ ಉಡಬೇಕು. ಬೇರೆ ಸಮಯದಲ್ಲಿ ಉಡಬಾರದು. ಆಭರಣಗಳನ್ನೆಲ್ಲಾ ಏಕೆ ತೆಗೆದಿಟ್ಟಿರುವೆ? ತಲೆಗೆ ಏಕೆ ಬಿಳಿವಸ್ತ್ರವನ್ನು ಸುತ್ತಿಕೊಂಡಿರುವಿ. ಹಣೆಗೆ ಗಂಧವನ್ನು ಏಕೆ ಹಚ್ಚಿಕೊಂಡಿರುವಿ? ಪೂರ್ಣಚಂದ್ರನಂತೆ ಇರುವ ಮುಖದಿಂದ ಬಹು ಮಾತಾಡುವವಳು. ಯಾಕೆ ಒಂದು ಮಾತನ್ನೂ ಆಡುವುದಿಲ್ಲ? ಕಣ್ಣನ್ನು ಅರ್ಧಮುಚ್ಚಿಕೊಂಡು ಯಾಕೆ ನೋಡದೆ ಇರುವಿ? ದೀರ್ಘಶ್ವಾಸವನ್ನು ಏಕೆ ಬಿಡುವಿ? ಕಣ್ಣೀರನ್ನು ಯಾಕೆ ಸುರಿಸುವಿ? ಸುಂದರಿ' ಅಳುವನ್ನು ನಿಲ್ಲಿಸು. ಕಣ್ಣೀರನ್ನು ಸುರಿಸಬೇಡ. ದೇವಿ! ನಾನು ನಿನ್ನ ದಾಸನು. ನನಗೇಕೆ ಆಜ್ಞಾಪಿಸುವುದಿಲ್ಲ? ನಾನು ನಿನಗೆ ಏನು ಅಪ್ರಿಯವನ್ನು ಮಾಡಿದೆನು? ಯಾಕೆ ಇಷ್ಟು ನಿನ್ನನ್ನು ಆಯಾಸ

ಪಡಿಸಿಕೊಳ್ಳುವಿ? ಮನಸ್ಸಿನಿಂದಲೂ ಕರ್ಮದಿಂದಲೂ ಮಾತಿನಿಂದಲೂ ನಿನ್ನನ್ನು ನಾನು ಅತಿಕ್ರಮಿಸಿಲ್ಲ. ನಾನು ಹೇಳುವ ಮಾತು ಸತ್ಯವು. ಇನ್ನೊಬ್ಬ ಸ್ತ್ರೀಯರಲ್ಲಿ ಬಹುಮಾನ ಮಾಡಿದಂತೆ ತೋರಿಸುವುದು ಮಾತ್ರ. ಸರಿಯಾದ ಸ್ನೇಹವೂ ಬಹುಮಾನವೂ ನಿನ್ನಲ್ಲಿ ಮಾತ್ರವೇ! ಭೂಮಿ ಮೊದಲಾದುವಲ್ಲ. ಕ್ಷಮಾದಿಗುಣಗಳು ಸ್ವಾಭಾವಿಕವಾಗಿ ಇರುವಂತೆ ನನಗೆ ನಿನ್ನಲ್ಲಿ ಇರುವ ಸ್ನೇಹವು ಸ್ವಾಭಾವಿಕವಾದದ್ದೇ! ನಿನ್ನಲ್ಲಿ ನನ್ನ ಶಾಶ್ವತವಾದ ಸ್ನೇಹವಿರುವುದು' ಎಂದು ಹೇಳಿದನು.

ಈಪ್ರಕಾರವಾಗಿ ಹೇಳುತ್ತಿರುವ ಕೃಷ್ಣಪರಮಾತ್ಮನೊಡನೆ ಸತ್ಯಭಾಮಾದೇವಿ ಯರು ಕಣ್ಣೀರನ್ನು ಒರಸಿಕೊಂಡು ಮೆಲ್ಲನೆ 'ನೀವು ಪೂರ್ವದಲ್ಲಿ ನನ್ನವರಾಗಿಯೂ ಅತ್ಯಂತ ಪ್ರಿಯರಾಗಿಯೂ ಇರುವಿರಿ ಎಂದು ನನ್ನ ಮನಸ್ಸು ತಿಳಿದುಕೊಂಡಿತ್ತು. ಆದರೆ ಈಗ ನೋಡುವಾಗ ಎಲ್ಲರಲ್ಲಿಯೂ ಇರುವಷ್ಟೇ ಸ್ನೇಹವು ನನ್ನಲ್ಲೂ ನಿಮಗೆ ಇರುವುದು. ಕಾಲವು ಹೀಗೆ ಆಗುವುದು ಎಂದು ನಾನು ಮೊದಲು ತಿಳಿದಿರಲಿಲ್ಲ. ಈಗ ಲೋಕದ ಸ್ಥಿತಿಯನ್ನೆಲ್ಲಾ ಸರಿಯಾಗಿ ತಿಳಿದುಕೊಂಡೆನು. ನಾನು ಬದುಕಿಕೊಂಡೇ ಎರಡನೇ ಜನ್ಮವನ್ನು ಹೊಂದಿದೆನು ಎಂದೂ ಊಹಿಸುತ್ತೇನೆ. ಭಗವಂತನೇ! ಹೆಚ್ಚಿಗೆ ಏಕೆ ಮಾತು? ನಿಮ್ಮ ಮನಸ್ಸನ್ನು ನಾನು ತಿಳಿದಿರುವೆನು. ನೀವು ಬರೇ ಬಾಯಿಯಿಂದ ಮಾತ್ರ ಚೆನ್ನಾಗಿ ಮಾತಾಡುವಿರಿ. (ರುಕ್ಮಿಣೀದೇವಿಯಲ್ಲಿ) ಸ್ವಾಭಾವಿಕವಾದದ್ದು. ಪುರುಷೋತ್ತಮ! ಸರಳವಾದ ಸ್ವಭಾವವುಳ್ಳ ನಿಮ್ಮ ಭಕ್ತಳಾದ ನನ್ನನ್ನು ಅವಮಾನ ಮಾಡುತ್ತಿರುವಿರಿ. ತಿಳಿದವರಾಗಿಯೂ ಕಪಟ ವೃತ್ತಿಯನ್ನು ಅವಲಂಬಿಸಿರುವಿರಿ. ಇಷ್ಟೇ ಸಾಕು. ನೋಡಬೇಕಾದದ್ದು ನೋಡಿಯಾಯಿತು. ಕೇಳಬೇಕಾದದ್ದನ್ನು ಕೇಳಿ ಯಾಯಿತು. ನಿಮ್ಮ ಸ್ನೇಹದ ಫಲವನ್ನು ನೋಡಿಯಾಯಿತು. ನನಗೆ ಅನುಗ್ರಹ ಮಾಡಬೇಕೆಂಬ ಅಭಿಪ್ರಾಯವಿದ್ದರೆ ನನಗೆ ತಾವು ಅನುಜ್ಞೆಯನ್ನು ಕೊಡಬೇಕು. ನಾನು ತಪಸ್ಸನ್ನು ಮಾಡುವೆನು. ಸ್ತ್ರೀಯರು ತಪಸ್ಸನ್ನೋ ವ್ರತಗಳನ್ನೋ ಗಂಡನ ಆಜ್ಞೆಯಿಂದ ಮಾಡಬೇಕು. ಗಂಡನ ಆಜ್ಞೆಯಿಲ್ಲದೆ ಮಾಡಿದರೆ ಅವು ವ್ಯರ್ಥವಾಗುವುವು' ಈರೀತಿಯಾಗಿ ಹೇಳಿ ಪುನಃ ಮುಖದ ಮೇಲೆ ಬಟ್ಟೆಯನ್ನು ಹಾಕಿಕೊಂಡು ಧಾರೆಧಾರೆಯಾಗಿ ಕಣ್ಣೀರನ್ನು ಸುರಿಸಿದರು.

ಆಗ ಕೃಷ್ಣಪರಮಾತ್ಮನು ಸತ್ಯಭಾಮಾದೇವಿಯರೊಡನೆ 'ಸತ್ಯಭಾಮೆ! ನೀನು ದುಃಖಪಡುವುದನ್ನು ನೋಡಿದರೆ ನನ್ನ ಮೈಯೆಲ್ಲಾ ಸುಡುವಂತೆ ಆಗುತ್ತದೆ. ನೀನು ಯಾವ ಕಾರಣದಿಂದ ಇಷ್ಟು ದುಃಖಪಡುವೆ? ನನ್ನ ಪ್ರಾಣದ ಆಣೆಯನ್ನು ಇಟ್ಟುಹೇಳುತ್ತೇನೆ. ನಾನು ನಿನ್ನ ಭಕ್ತನು. ಅವಶ್ಯವಾಗಿಯೂ ನಿನ್ನ ದುಃಖದ ಕಾರಣವನ್ನು ಹೇಳಬೇಕು' ಎಂದು ಹೇಳಿದನು.

ತರುವಾಯ ಸತ್ಯಭಾಮೆಯರು ಮುಖವನ್ನು ತಗ್ಗಿಸಿಕೊಂಡೇ ಕಣ್ಣೀರು ಸುರಿಸುತ್ತಾ ಗದ್ಗದ ಸ್ವರದಿಂದ 'ಭಗವಂತನೇ! ನೀವೇ ಮೊದಲು ನನಗೆ ಪ್ರಸಿದ್ಧವಾದ ಸೌಭಾಗ್ಯವನ್ನು ಮಹತ್ವವನ್ನು ಕೊಟ್ಟಿರಿ. ಆದರಿಂದ ನಿಮಗೆ ನಾನು ಅತ್ಯಂತ ಪ್ರಿಯಳೆಂದು ಗರ್ವವುಳ್ಳವಳಾಗಿ ಪತಿಯ ಮೇಲೆ ಹತ್ತುತ್ತಿದ್ದೇನೆ. ಸರ್ವಸ್ತ್ರೀಯರಿಗೂ 'ಸತ್ಯಭಾಮೆಯಂತೆ ಇರಬೇಕು' ಎಂದು ಆಸೆಬರುವಂತೆ ಇದ್ದೆನು. ಈಗ ದಾಸಿಯರು ಹೇಳಿದ ಸತ್ಯವಾದ ಮಾತನ್ನು ಕೇಳಿ ಸಪತ್ನಿಯರಿಗೂ ಇತರ ಜನರಿಗೂ ಅಪಹಾಸಕ್ಕೆ ವಿಷಯಳಾಗಿದ್ದೇನೆ. ನಾರದರು ತಮಗೆ ಯಾವುದೊಂದು ಪಾರಿಜಾತ ಹೂವನ್ನು ಕೊಟ್ಟರೋ ಅದನ್ನು ನಿಮಗೆ ಬೇಕಾದ ಜನಕ್ಕೆ ಕೊಟ್ಟಿರಲ್ಲಾ? ನನ್ನನ್ನು ಬಿಟ್ಟು ಬಿಟ್ಟಿರಲ್ಲಾ? ಶ್ರೇಷ್ಠವಾದ ಆ ವಸ್ತುವನ್ನು ಕೊಟ್ಟ ಕಾರಣ ನಿಮಗೆ ಆ ಜನರಲ್ಲಿ ಸ್ನೇಹವೂ ಬಹುಮಾನವೂ ಅಧಿಕವಾಗಿ ಇರುವುದೆಂದು ಪ್ರಸಿದ್ಧವಾಯಿತು. ತಮಗೆ ಬೇಕಾದ ಆ ಜನವನ್ನು ನಿಮ್ಮ ಎದುರಲ್ಲೇ ಸ್ತೋತ್ರಮಾಡಿದರಲ್ಲಾ! ಆಗ ನೀವು ನಿಮ್ಮ ಪ್ರೀತಿಪಾತ್ರೆಯ ಸ್ತೋತ್ರವನ್ನು ಕೇಳುತ್ತಾ ಸಂತೋಷಪಟ್ಟಿರಲ್ಲಾ! ಆಜನವನ್ನು ಸ್ತೋತ್ರ ಮಾಡಬೇಕೆಂದು ಆಸೆಯಿದ್ದರೆ ನಾರದರು ನಿಮ್ಮ ಎದುರಲ್ಲಿ ಆ ಜನವನ್ನು ಬೇಕಾದಷ್ಟು ಸ್ತೋತ್ರ ಮಾಡಲಿ. ಈ ದೌರ್ಭಾಗ್ಯವುಳ್ಳ ಜನದ ಹೆಸರನ್ನು ಯಾಕೆ ಹೇಳಬೇಕು? ಇಷ್ಟರವರೆಗೆ ನನ್ನಲ್ಲಿ ಅತಿಪ್ರೀತಿಯನ್ನು ಮಾಡಿ ಈಗ ನಿಮಗೇ ಪಶ್ಚಾತ್ತಾಪವುಂಟಾಗುವ ಪಕ್ಷದಲ್ಲಿ ನನಗೆ ತಪಸ್ಸು ಮಾಡಲು ಹೋಗಲು ಅನುಜ್ಞೆಯನ್ನು ಕೊಡಿರಿ. ಹೀಗೆಲ್ಲಾ ಆಗುವುದೆಂದು ನಾನು ಸ್ವಪ್ನದಲ್ಲಿಯೂ ಯೋಚನೆ ಮಾಡಿರಲಿಲ್ಲ. ನಿಮಗೆ ನನಗಿಂತ ಇತರರಲ್ಲಿ ಹೆಚ್ಚಿಗೆ ಪ್ರೇಮವಿರುವುದೆಂಬುದನ್ನು ಯಾವುದನ್ನು ನಾನು ಸ್ವಪ್ನದಲ್ಲಿಯೂ ನಂಬಲಿಲ್ಲವೋ ಅದೇ ನಡೆದುಹೋಯಿತು. ಎಂಬುದನ್ನು ನಾನು ಕೇಳಿದೆನು. ನಾರದರು ಬೇಕಾದರೆ ಆ ಜನವನ್ನು ಎಷ್ಟುಬೇಕಾದರೂ ಸ್ತೋತ್ರ ಮಾಡಿಕೊಳ್ಳಲಿ. ಆದರೆ ನೀವು ಅಲ್ಲಿಯೇ ಇದ್ದುಕೊಂಡು ಕೇಳಿಕೊಂಡು ಇದ್ದಿರಲ್ಲಾ' ಅದು ನನಗೆ ಕೋಪಬರುತ್ತದೆ. ಲೋಕದಲ್ಲಿ ಮರ್ಯಾದೆಗಾಗಿ ಸಜ್ಜನರು ಜೀವಿಸುವರು ಎಂದು ನೀವೇ ಹೇಳಿರುವಿರಿ. ಈಗ ಮರ್ಯಾದೆಯು ಹೋದಮೇಲೆ ನನಗೆ ಬದುಕುವ ಆಸೆಯಿಲ್ಲ. ನನಗೆ ಯಾರಿಂದ ರಕ್ಷಣೆಯುಂಟಾಯಿತೋ ಅವರಿಂದಲೇ ಈಗ ಭಯವು ಬಂದಿದೆ. ಯಾರು ಎಲ್ಲರನ್ನೂ ರಕ್ಷಿಸುವರೋ ಅವರು ಈಗ ನನ್ನನ್ನು ರಕ್ಷಿಸುವುದಿಲ್ಲ. ಹಾ ದೇವ! ನಿಮ್ಮಿಂದ ಪರಿತ್ಯಾಗವನ್ನು ಹೊಂದಿದ ನಾನು ಯಾವ ಗತಿಯನ್ನು ಹೊಂದಲಿ? ಪೂರ್ವದಲ್ಲಿ ಅಜ ಎಂಬ ರಾಜನ ಹೆಂಡತಿಯಾದ ಕುಮುದ್ವತಿಯು ಗಂಡನ ಎದುರಲ್ಲೇ ಪ್ರಾಣಬಿಟ್ಟಳು. ಅದೇ ಗತಿಯು ನನಗೂ

ಆಗುವುದು. ನಾನು ದೊಡ್ಡವರಿಗೆ ಏನು ಪ್ರಿಯ ಅಪ್ರಿಯಗಳನ್ನು ಮಾಡಿದ್ದೆನೋ? ಅದರಿಂದಲೇ ಮೊದಲು ಪ್ರಿಯಳಾಗಿ ಈಗ ಅಪ್ರಿಯಳಾಗಿರುವೆನು. ವಸಂತಋತುವಿನ ಪುಷ್ಪಗಳಿಂದ ಕೂಡಿದ ರೈವತಪರ್ವತವನ್ನು ನಿಮಗೆ ಪ್ರಿಯಳಾಗಿದ್ದುಕೊಂಡು ಈಗ ನಮಗೆ ಅಪ್ರಿಯಳಾಗಿ ಹೇಗೆ ನೋಡಲಿ? ಕೋಕಿಲೆಯ ಧ್ವನಿಯಿಂದ ಕೂಡಿದ ಪುಷ್ಪವಾಸನೆಯಿಂದ ಕೂಡಿದ ಗಾಳಿಯನ್ನು ನಿಮಗೆ ದ್ವೇಷಕ್ಕೆ ವಿಷಯಳಾಗಿ ನಾನು ಹೇಗೆ ಅನುಭವಿಸಲಿ? ನಿಮ್ಮೊಡನೆ ಸಮುದ್ರದಲ್ಲಿ ಜಲಕ್ರೀಡೆಯನ್ನು ಮಾಡಿದವಳು ಈಗ ಯಾವ ಮುಖದಿಂದ ಸಮುದ್ರವನ್ನು ನೋಡಲಿ? 'ಸತ್ಯಭಾಮಾ! ನನಗೆ ನಿನಗಿಂತ ಹೆಚ್ಚಿನ ಪ್ರೀತಿಪಾತ್ರರು ಬೇರೆ ಯಾರೂ ಇಲ್ಲ' ಎಂದು ಹೇಳಿದಿರಲ್ಲಾ! ಆಮಾತು ಎಲ್ಲಿಗೆ ಹೋಯಿತು? ಅಥವಾ ಆ ಮಾತು ಈಗ ಯಾರಿಗೆ ಜ್ಞಾಪಕವಿರುವುದು? ಯಾವ ಅತ್ತೆಯು ಪೂರ್ವದಲ್ಲಿ ನಿಮ್ಮಿಂದ ಬಹುಮಾನಿತಳಾದವಳನ್ನು ನೋಡಿದರೋ ಅವರೇ ಈಗ ನಿಮ್ಮಿಂದ ಅವಮಾನವನ್ನು ಹೊಂದಿರುವ ದೌರ್ಭಾಗ್ಯವುಳ್ಳವಳಾದ ನನ್ನನ್ನು ನೋಡುತ್ತಿರುವರು. ನೀವು ಇಷ್ಟು ಮೋಸಮಾಡುವವರು, ವಂಚಕರು ಎಂದು ನಾನು ತಿಳಿದಿರಲಿಲ್ಲ, ಈಗ ತಿಳಿಯಿತು. ನೀವು ಆಜನರ ಪಕ್ಷದಲ್ಲಿಯೇ ಇರುವವರು. ವಂಚಕರು. ನೀವು ಕಳ್ಳರು. ನಿಮ್ಮ ಸ್ವರ ಆಕಾರ ಚೇಷ್ಟೆ ಇವುಗಳಿಂದ ಎಷ್ಟು ಮರೆಮಾಡಿದರೂ ನಿಮ್ಮ ಅಭಿಪ್ರಾಯವು ನನಗೆ ತಿಳಿದುಹೋಯಿತು. ನಿಮಗೆ ಆ ಜನದಲ್ಲಿಯೇ ಸ್ನೇಹವಿರುವುದೂ ನನ್ನೊಡನೆ ಬಾಯಿಯಲ್ಲಿ ಮಾತ್ರ ಚೆನ್ನಾಗಿ ಮಾತಾಡುವಿರಷ್ಟೆ' ಎಂದು ಹೇಳಿದರು.

ಈರೀತಿಯಾಗಿ ಮಾತ್ಸರ್ಯವುಳ್ಳವರಾದ ಅಭಿಮಾನವುಳ್ಳವರಾದ ಸತ್ಯಭಾಮ ದೇವಿಯರನ್ನು ಶ್ರೀಭಗವಂತನು ಸಮಾಧಾನಪಡಿಸಿದನು. 'ಪ್ರಿಯೆ! ಪ್ರಾಣೇಶ್ವರಿ! ಹೀಗೆ ಹೇಳಬೇಡ. ಹೆಚ್ಚಿಗೆ ಯಾಕೆ ಹೇಳಲಿ. ನಾನು ನಿನ್ನವನು ಎಂದು ತಿಳಿಯುವವಳಾಗು. ಆ ಪಾರಿಜಾತಪುಷ್ಪವನ್ನು ನಾರದರು ನನಗೆ ಪ್ರಿಯವನ್ನು ಮಾಡುವುದಕ್ಕಾಗಿ ನನ್ನ ಎದುರಲ್ಲಿ ದಾಕ್ಷಿಣ್ಯದಿಂದ ಅವಳಿಗೆ ಕೊಟ್ಟರು. ಇದು ತಪ್ಪು ತಾನೇ. ಈ ಒಂದು ಅಪರಾಧವನ್ನು ನೀನು ಕ್ಷಮಿಸು. ಪಾರಿಜಾತಪುಷ್ಪವನ್ನು ನೀನು ಅಪೇಕ್ಷಿಸುವ ಪಕ್ಷದಲ್ಲಿ ಅವನ್ನು ನಿನಗೆ ನಾನು ತಂದುಕೊಡುತ್ತೇನೆ. ಸ್ವರ್ಗದಿಂದ ಪಾರಿಜಾತದ ಮರವನ್ನೇ ತಂದು ನಿನ್ನ ಮನೆಯ ಅಂಗಳದಲ್ಲಿಯೇ ಇಡುವೆನು. ನೀನು ಎಷ್ಟುಕಾಲ ಇಚ್ಛಿಸುವಿಯೋ ಅಷ್ಟು ಕಾಲದವರೆಗೆ ನಿನ್ನ ಮನೆಯ ಅಂಗಳದಲ್ಲೇ ಆ ಮರವಿರುವುದು'.

ಈರೀತಿಯಾಗಿ ಭಗವಂತನು ಹೇಳಲು ಸತ್ಯಭಾಮಾದೇವಿಯರು

'ಪಾರಿಜಾತದ ಮರವನ್ನು ಇಲ್ಲಿ ತರಲಿಕ್ಕೆ ನಿಮಗೆ ಸಾಧ್ಯವಾಗುವ ಪಕ್ಷದಲ್ಲಿ ನನ್ನ ಕೋಪವು ಶಾಂತವಾಯಿತು. ಆಗ ಎಲ್ಲಾ ಸ್ತ್ರೀಯರಲ್ಲಿಯೂ ನಾನು ಶ್ರೇಷ್ಠಳಾಗುವೆನು' ಎಂದರು. ಭಗವಂತನು ಹಾಗೆಯೇ ಮಾಡುವೆನೆಂದನು. ಸತ್ಯಭಾಮಾದೇವಿಯರು ಸಂತೋಷವನ್ನು ಹೊಂದಿದರು. ತರುವಾಯ ಪರಮಾತ್ಮನು ಸ್ನಾನಮಾಡಿ ನಿತ್ಯಾಹ್ನಿಕ ವನ್ನು ತೀರಿಸಿಕೊಂಡು ನಾರದರನ್ನು ಸ್ಮರಿಸಿಕೊಂಡನು. ನಾರದರೂ ಸಮುದ್ರದಲ್ಲಿ ಸ್ನಾನಮಾಡಿ ಬಂದರು. ಲೋಕಶಿಕ್ಷೆಗಾಗಿ ಸತ್ಯಭಾಮೆಯರಿಂದ ಕೂಡಿಕೊಂಡು ಪರಮಾತ್ಮನು ನಾರದರನ್ನು ಪೂಜಿಸಿದನು. ಬಂಗಾರದ ಪಾತ್ರೆಯಲ್ಲಿ ನೀರನ್ನು ಪರಮಾತ್ಮನು ತಂದನು. ಸತ್ಯಭಾಮಾದೇವಿಯರು ಆ ನೀರಿನಿಂದ ನಾರದರ ಕಾಲನ್ನು ತೊಳೆದರು. ತರುವಾಯ ನಾರದರಿಗೆ ಭೋಜನ ಮಾಡಿಸಿ ಬೇಕಾದ ಸತ್ಕಾರವನ್ನು ಮಾಡಿ ಕಳುಹಿಸಿದನು. (ಲಕ್ಷ್ಮೀದೇವಿಯರಿಗೇ ಶ್ರೀ ಭೂ ದುರ್ಗಾ ಎಂಬ ಮೂರು ರೂಪಗಳಿರುವುವು. ಅವುಗಳಲ್ಲಿ ಶ್ರೀದೇವಿಯರೇ ರುಕ್ಮಿಣೀದೇವಿಯರು ಭೂದೇವಿಯರೇ ಸತ್ಯಭಾಮಾದೇವಿಯರು. ಆದುದರಿಂದ ಸತ್ಯಭಾಮಾದೇವಿ ಯರಿಗೂ ರುಕ್ಮಿಣೀದೇವಿಯರಿಗೂ ಯಾವ ಅಸೂಯಾದಿ ದೋಷಗಳೂ ಇರುವುದಿಲ್ಲ. ಆದರೂ ಲೋಕದಲ್ಲಿ ಸ್ತ್ರೀಯರ ಸ್ವಭಾವವು ಹೀಗೆ ಇರುವುದೆಂದು ತಿಳಿಸುವುದಕ್ಕೋಸ್ಕರ ಅಸೂಯಾದಿಗಳನ್ನು ತೋರಿಸಿದರು. ಅದೇ ರೀತಿಯಾಗಿ ಭಗವಂತನು ಲೋಕದಲ್ಲಿ ಕಾಮುಕರು ಈ ರೀತಿಯಾಗಿ ಕೋಪಿಸಿಕೊಂಡಿರುವ ಸ್ತ್ರೀಯರನ್ನು ಸಮಾಧಾನಪಡಿಸುವರು ಎಂಬುದನ್ನು ಮಾಡಿ ತೋರಿಸಿದನಷ್ಟೆ. ಆದುದರಿಂದ ಸತ್ಯಭಾಮಾದೇವಿಯರಲ್ಲಾಗಲೀ ಕೃಷ್ಣಪರಮಾತ್ಮನಲ್ಲಾಗಲೀ ಯಾವ ದೋಷವನ್ನೂ ನಾವು ತಿಳಿದುಕೊಳ್ಳಬಾರದು.)



# ನರಕಾಸುರನ ವಧೆ [1]

ಶ್ರೀಕೃಷ್ಣಪರಮಾತ್ಮನು ದ್ವಾರಕಾಪಟ್ಟಣದಲ್ಲಿ ಇರುತ್ತಿರಲು ಒಂದು ದಿನದಲ್ಲಿ ಇಂದ್ರದೇವರು ದೈನ್ಯವುಳ್ಳವರಾಗಿ ಮುಖವನ್ನು ಬಾಡಿಸಿಕೊಂಡು ಸ್ವರ್ಗದಿಂದ ಬಂದರು. ಅದೇ ಸಮಯದಲ್ಲೇ ಶ್ರೀಭಗವಂತನು ಸತ್ಯಭಾಮಾದೇವಿಯರನ್ನು ಪಾರಿಜಾತಮರವನ್ನು ತಂದುಕೊಡುವೆನೆಂದು ಸಮಾಧಾನಪಡಿಸಿದ್ದನು. ಇಂದ್ರದೇವರು ಬಂದವರು ಶ್ರೀಕೃಷ್ಣಪರಮಾತ್ಮನಿಂದ ಸತ್ಕೃತರಾಗಿ ನರಕಾಸುರನು ತಾಯಿಯಾದ ಅದಿತಿದೇವಿಯರ ಕಿವಿಯ ಬೆಂಡೋಲೆಯನ್ನೂ (ತೋಡನ್ನೂ) ವರುಣದೇವರ ಛತ್ರವನ್ನೂ ಮಣಿಮಯಪರ್ವತವನ್ನೂ ಅಪಹರಿಸಿದ ವಿಷಯವನ್ನು ತಿಳಿಸಿದರು. ಶ್ರೀಭಗವಂತನು ಇಂದ್ರದೇವರನ್ನು ಸಮಾಧಾನಪಡಿಸಿ ಸತ್ಕರಿಸಿ ಕಳುಹಿಸಿದನು. ಅದೇ ಸಮಯದಲ್ಲೇ ನರಕಾಸುರನಿಂದ ಪೀಡಿತರಾದ ಅನೇಕ ಮುನಿಗಳು ಬದರಿಕಾಶ್ರಮದಿಂದ ಬಂದು ವೇದಪಂಚರಾತ್ರಗಳಲ್ಲಿ ಹೇಳಿದ ಸ್ತೋತ್ರಗಳಿಂದ ಸ್ತುತಿಸಿ ನರಕಾಸುರನನ್ನು ಸಂಹರಿಸುವಂತೆ ಪ್ರಾರ್ಥಿಸುವವರಾದರು. ಈರೀತಿಯಾಗಿ ದೇವತೆಗಳಿಂದ ಸಹಿತರಾದ ಇಂದ್ರದೇವರಿಂದಲೂ ಮುನಿಗಳಿಂದಲೂ ಪ್ರಾರ್ಥಿತರಾಗಿ ಗರುಡದೇವರನ್ನು ಸ್ಮರಿಸಿದನು. ಸ್ಮರಣೆ ಮಾಡುವ ಮಾತ್ರದಿಂದಲೇ ಗರುಡದೇವರು ಬಂದು ಸೇರಿದರು. ನಮಸ್ಕಾರ ಮಾಡಿ ಮುಂದೆ ನಿಂತುಕೊಂಡರು. ಸತ್ಯಭಾಮಾದೇವಿಯರು ಸಾಕ್ಷಾತ್ ಲಕ್ಷ್ಮೀದೇವಿಯರ ಅವತಾರ ಭೂತರಾಗಿದ್ದರೂ ಲೋಕಜನರಿಗೆ ತಿಳಿಸುವುದಕ್ಕಾಗಿ ಏಕಾದಶೀ ಉಪವಾಸಮಾಡಿ ದ್ವಾದಶೀದಿನದಲ್ಲಿ ಕೋಟಿ ನೀರಿನ ಧಾರೆಯಲ್ಲಿ ಸ್ನಾನಮಾಡಿದರು. ಲಕ್ಷ್ಮೀದೇವಿಯರಿಗೆ ಯಾವ ವ್ರತಗಳನ್ನು ಮಾಡಿಯೂ ಯಾವ ಫಲವೂ ಆಗಬೇಕಾಗಿಲ್ಲ. ಕೇವಲ ಭಗವಂತನ ಪ್ರೀತಿಗಾಗಿಯೇ ಮಾಡುವುದು. ಅದೇರೀತಿಯಾಗಿ ಸತ್ಯಭಾಮಾ ರೂಪದಲ್ಲಿಯೂ ಶ್ರೀಭಗವಂತನ ಪ್ರೀತಿಗಾಗಿಯೇ ಆ ವ್ರತವನ್ನು ಮಾಡಿದರು. ತರುವಾಯ ಶ್ರೀಕೃಷ್ಣಪರಮಾತ್ಮನು ಸತ್ಯಭಾಮಾದೇವಿಯರಿಂದ ಸಹಿತನಾಗಿ ಗರುಡದೇವರ ಮೇಲೆ ಕೂತುಕೊಂಡು ನರಕಾಸುರನನ್ನು ಸಂಹರಿಸುವುದಕ್ಕಾಗಿ ವಾಯವ್ಯದಿಕ್ಕಿಗೆ ಹೋದರು. ಬಹುದೂರ ಇಂದ್ರದೇವರು ಭಗವಂತನ ಹಿಂದೆಯೇ ಬಂದರು. ತರುವಾಯ ಪರಮಾತ್ಮನು ಇಂದ್ರದೇವರಿಗೆ ಅನುಜ್ಞೆಯನ್ನು ಕೊಟ್ಟು ಮುಂದೆ ಹೋದನು.

---

1. ಹ.ವಂ.ಪ. ಅ-12. ಮ.ತಾ.ನಿ.ಅ-20 ಭಾಗ.X ಅ-63, 64.

ನರಕಾಸುರನು ಬ್ರಹ್ಮದೇವರ ತಪಸ್ಸುಮಾಡಿ ಮರಣವಿಲ್ಲದಂತೆ ವರವನ್ನು ಪಡೆದಿದ್ದನು. ಶಸ್ತ್ರಧರಿಸಿರುವ ಒಬ್ಬರಿಂದಲೂ ನೀನು ಸೋತು ಹೋಗಲಾರೆ ಎಂದು ವರವನ್ನು ಕೊಟ್ಟಿದ್ದರು. ನರಕಾಸುರನಿಗೆ ಪೀಠ, ಮುರ, ನಿಸುಂಭ, ಹಯಗ್ರೀವ, ಪಂಚಜನ ಎಂಬ ಐದು ರಾಕ್ಷಸ ಮಂತ್ರಿಗಳು ಇದ್ದರು. ಅವರಿಗೆ ಬ್ರಹ್ಮದೇವರು ಮರಣವಿಲ್ಲದಂತೆಯೂ ನರಕಾಸುರನಿಂದ ಸೋಲುವಂತೆಯೂ ವರವನ್ನು ಕೊಟ್ಟಿದ್ದರು. ನರಕಾಸುರನು ವರಾಹರೂಪಿಯಾದ ಪರಮಾತ್ಮನಿಂದ ಪಂಚಭೂತ ಗಳಲ್ಲಿ ಸೇರಿದ ಪೃಥಿವಿಗೆ ಅಭಿಮಾನಿನಿಯಾದ ಲಕ್ಷ್ಮೀದೇವಿಯರ ಭೂರೂಪದ ಆವೇಶವುಳ್ಳ ಭೂಮಿ ಎಂಬ ದೇವತೆಯಲ್ಲಿ ಹುಟ್ಟಿದವನು. ಅವನಿಗೆ ಬ್ರಹ್ಮದೇವರು ಇರಲಿಕ್ಕೆ ಪ್ರಾಗ್ಜ್ಯೋತಿಷ ಎಂಬ ದುರ್ಗವನ್ನು ಕೊಟ್ಟಿದ್ದರು. ಅದು ಹಿಮವತ್ಪರ್ವತದ ಎತ್ತರವಾದ ಶಿಖರದಲ್ಲಿ ಇರುವುದು. ಅದರ ಸುತ್ತಲೂ ಹೊರಗೇ ಪರ್ವತಗಳೇ ಗೋಡೆಯಂತೆ ಸುತ್ತಲೂ ಇರುವುವು. ಅವುಗಳೇ ಪರ್ವತದುರ್ಗವು. ಅದರ ಒಳಗಡೆ ನೀರಿನ ದುರ್ಗವೂ, ಅದರ ಒಳಗೆ ಕತ್ತಿಯ ಬಾಯಿಯಂತೆ ಇರುವ ಮುರಾಸುರ ಪಾಶದುರ್ಗವಿರುವುದು. ಆರುಸಾವಿರ ಘೋರಪಾಶಗಳಿದ್ದವು. ಶತ್ರು ಗಳು ಈ ದುರ್ಗಗಳನ್ನು ಭೇದಿಸದಂತೆಯೂ ದಾಟಿಬರದಂತೆಯೂ ಬ್ರಹ್ಮದೇವರು ವರವನ್ನು ಕೊಟ್ಟಿದ್ದರು. ನರಕಾಸುರನು ತನ್ನ ಮಂತ್ರಿಗಳು ಲೋಕಪಾಲಕರೆಂದೂ ತಾನು ಬ್ರಹ್ಮದೇವರೆಂದೂ ಹೇಳಿಕೊಂಡು ಆ ಪ್ರಾಗ್ಜ್ಯೋತಿಷನಗರದಲ್ಲಿ ಇದ್ದನು.

ಶ್ರೀಭಗವಂತನು ಆ ನರಕಾಸುರನನ್ನು ಸಂಹರಿಸಲು ಅಲ್ಲಿಗೆ ಹೋದವನಾಗಿ ಮೊದಲು ಪರ್ವತದುರ್ಗವನ್ನು ಗದೆಯಿಂದ ಪುಡಿಮಾಡಿದನು. ವಾಯವ್ಯಾಸ್ತ್ರದಿಂದ ನೀರನ್ನು ಹಾರಿಸಿಬಿಟ್ಟನು. ಖಡ್ಗದಿಂದ ಮುರನ ಪಾಶಗಳನ್ನೆಲ್ಲಾ ಕತ್ತರಿಸಿದನು. ಚಕ್ರದಿಂದಲೂ ಕತ್ತರಿಸಿದನು. ಶಸ್ತ್ರದುರ್ಗಗಳನ್ನು ಬಾಣಗಳಿಂದ ಕತ್ತರಿಸಿದನು. ವಾರುಣಾಸ್ತ್ರದಿಂದ ಅಗ್ನಿದುರ್ಗವನ್ನು ಆರಿಸಿದನು. ಎಲ್ಲಾ ದುರ್ಗಗಳನ್ನೂ ನಾಶಮಾಡಿ ಶಂಖಧ್ವನಿಯನ್ನು ಮಾಡಿ ಎಲ್ಲರ ಮನಸ್ಸನ್ನೂ ಅಪಹರಿಸಿದನು. ಆಗ ಮುರ ಪೀಠ ನಿಸುಂಭ ಹಯಗ್ರೀವ ಪಂಚಜನ ಎಂಬ ಐವರು ಮಂತ್ರಿಗಳೂ ಯುದ್ಧಕ್ಕೆ ಬಂದರು. ಅಸ್ತ್ರಶಸ್ತ್ರಗಳನ್ನು ಸುರಿಸುತ್ತಿದ್ದ ಅವರ ತಲೆಗಳನ್ನು ಚಕ್ರದಿಂದ ಕತ್ತರಿಸಿದನು. ಆಮೇಲೆ ಒಬ್ಬೊಬ್ಬರ ಏಳು ಏಳು ಒಟ್ಟಿಗೆ ಮೂವತ್ತೈದು ಮಕ್ಕಳು ರುದ್ರದೇವರ ವರದಿಂದ ಮರಣರಹಿತರಾದವರು ಯುದ್ಧಕ್ಕೆ ಬಂದರು. ಅವರೆಲ್ಲರನ್ನೂ ಭಗವಂತನು ಸಂಹರಿಸಿದರು. ತರುವಾಯ ಬೇಗನೇ ದೂತರು ಹೋಗಿ ನರಕಾಸುರನೊಡನೆ ಮಂತ್ರಿಪುತ್ರರು ಮೃತರಾದ ವಿಷಯವನ್ನು ತಿಳಿಸಿದರು.

ನರಕಾಸುರನು ತನ್ನ ಸೇನಾನಾಯಕರೆಲ್ಲರೂ ಭಗವಂತನ ಚಕ್ರಾಯುಧ ದಿಂದಲೂ ಬಾಣಗಳಿಂದಲೂ ಮೃತರಾದದ್ದನ್ನು ಕೇಳಿ ಕೋಪಿಸಿಕೊಂಡನು. ಮದಜಲವನ್ನು ಸುರಿಸುವ ಅನೇಕ ಕ್ಷೀರಸಮುದ್ರದಲ್ಲಿ ಹುಟ್ಟಿದ ಆನೆಗಳಿಂದಲೂ ಅನೇಕ ಸಾವಿರ ರಥಗಳಿಂದಲೂ ಸಹಿತನಾಗಿ ಮಹಾಸೈನ್ಯದಿಂದ ಕೂಡಿದವನಾಗಿ ಯುದ್ಧಕ್ಕೆ ಬಂದನು. ಸೂರ್ಯನ ಮೇಲಿನ ಭಾಗದಲ್ಲಿ ಮಿಂಚಿನಿಂದ ಸಹಿತವಾದ ಮೇಘವು ಪ್ರಕಾಶಿಸುವಂತೆ ಇದ್ದ ಗರುಡದೇವರ ಮೇಲೆ ಕೂತಿದ್ದ ಸತ್ಯಭಾಮಾದೇವಿಯರಿಂದ ಸಹಿತನಾದ ಶ್ರೀಕೃಷ್ಣಪರಮಾತ್ಮನನ್ನು ನೋಡಿದನು. ನೀಲಮೇಘದಂತೆ ಇದ್ದ ಆನೆಯ ಮೇಲೆ ಕೂತಿದ್ದ ನರಕಾಸುರನನ್ನು ನೋಡಿ ಧನುಸ್ಸು ಶಂಖ ಚಕ್ರ ಗದೆಗಳನ್ನು ಧರಿಸಿದ್ದ ನಾಲ್ಕು ಭುಜಗಳುಳ್ಳ ಪರಮಾತ್ಮನು ಶಂಖವನ್ನು ಊದಿ ಸಿಂಹಗರ್ಜನೆಯನ್ನು ಮಾಡಿದನು. ನರಕಾಸುರನೊಡನೆ ಮೂವತ್ತು ಅಕ್ಷೌಹಿಣೀಸೈನ್ಯವು ಬಂದಿತ್ತು. ಅದರಲ್ಲಿ ನಾಲ್ಕನೇ ಒಂದು ಭಾಗವನ್ನು ಗರುಡದೇವರು ತನ್ನ ರೆಕ್ಕೆಗಳಿಂದ ಬಡಿದು ಕೊಂದು ಹಾಕಿದರು. ಉಳಿದ ಸೇನೆ ಯನ್ನು ಭಗವಂತನು ಬಾಣಗಳಿಂದ ಸಂಹರಿಸಿದನು. ತರುವಾಯ ನರಕಾಸುರನೇ ಅಸ್ತ್ರಶಸ್ತ್ರಗಳನ್ನು ಸುರಿಸುತ್ತಾ ಯುದ್ಧಕ್ಕೆ ಬಂದನು. ಭಗವಂತನು ಅವನನ್ನು ಅನೇಕ ಬಾಣಗಳಿಂದ ಬಡೆದನು. ತರುವಾಯ ನರಕಾಸುರನು ಬ್ರಹ್ಮದೇವರು ತನಗೆ ಕೊಟ್ಟಿದ್ದ ಶತಘ್ನೀ ಎಂಬ ಆಯುಧವನ್ನು ಭಗವಂತನ ಮೇಲೆ ಬಿಟ್ಟನು. ಆಗ ಭಗವಂತನು ಸೀಳಲಿಕ್ಕೆ ಅಶಕ್ಯವಾದ ನಿತ್ಯವಾದ ಜ್ಞಾನಾನಂದಾತ್ಮಕವಾದ ಶರೀರ ವುಳ್ಳವನಾಗಿದ್ದರೂ ಪೂರ್ಣಶಕ್ತಿಯುಳ್ಳವನಾಗಿದ್ದರೂ ಶ್ರಮವುಳ್ಳಂತೆ ತೋರಿಸಿದನು. ತಾನು ಬ್ರಹ್ಮದೇವರ ಅನೇಕ ವರಗಳನ್ನು ವ್ಯರ್ಥವಾಗಿ ಮಾಡಿದ್ದರಿಂದ ಈಗ ಸ್ವಲ್ಪ ಬ್ರಹ್ಮದೇವರಿಗೆ ಬಹುಮಾನ ಕೊಡುವ ಎಂಬ ಅಭಿಪ್ರಾಯವುಳ್ಳವನಾಗಿ ಆ ಶತಘ್ನೀ ಎಂಬ ಆಯುಧವನ್ನು ನುಂಗುವವನಾಗಿ ನಿತ್ಯವೂ ಶ್ರಮರಹಿತನಾದ ಪರಮಾತ್ಮನು ತಾನು ಶ್ರಮಪಟ್ಟಂತೆ ತೋರಿಸುತ್ತಾ ಸುಮ್ಮನೆ ಕೂತನು.

ಆಗ ಅಹಂಕಾರಪಡುತ್ತಿದ್ದ ನರಕಾಸುರನನ್ನು ನೋಡಿ ಸತ್ಯಭಾಮಾದೇವಿಯರು ದೇವರ ಕೈಯಿಂದ ಶಾರ್ಙ್ಗ ಎಂಬ ಧನುಸ್ಸನ್ನು ತೆಗೆದುಕೊಂಡು ಯುದ್ಧ ಮಾಡಿದರು. ಒಂದೇ ಕ್ಷಣದಲ್ಲಿ ಅವನ ರಥವನ್ನು ಆಯುಧಗಳನ್ನು ನಾಶಮಾಡಿದರು. ತರುವಾಯ ಭಗವಂತನು ಸತ್ಯಭಾಮಾದೇವಿಯರನ್ನು ಆಲಂಗಿಸಿ ಬೇರೊಂದು ರಥದಲ್ಲಿ ಕೂತುಕೊಂಡು ಯುದ್ಧ ಮಾಡುತ್ತಿದ್ದ ನರಕಾಸುರನ ಆಯುಧಗಳನ್ನೆಲ್ಲಾ ನಾಶಮಾಡಿದನು. ಕೊನೆಗೆ ನರಕಾಸುರನ ಆಯುಧಗಳನ್ನೆಲ್ಲಾ

ನಾಶಮಾಡಿದನು. ಕೊನೆಗೆ ನರಕಾಸುರನು ಆನೆಯ ಮೇಲೆ ಕೂತುಕೊಂಡು ಭಗವಂತನನ್ನು ಸಂಹರಿಸಬೇಕೆಂದು ಶೂಲವನ್ನು ತೆಗೆದನು. ಅವನು ಶೂಲವನ್ನು ಬಿಡುವ ಪೂರ್ವದಲ್ಲಿಯೇ ಪರಮಾತ್ಮನು ಆನೆಯ ಮೇಲೆ ಕೂತಿದ್ದ ಅವನ ತಲೆಯನ್ನು ಚಕ್ರಾಯುಧದಿಂದ ಕತ್ತರಿಸಿದನು. ಅವನು ತನ್ನ ಮಂತ್ರಿಗಳಿಂದ ಕೂಡಿಕೊಂಡು ಅಂಧಂತಮಸ್ಸಿಗೆ ಹೋದನು. ಅವನಲ್ಲಿ ಇದ್ದ ವಾಯುದೇವರು ಪರಮಾತ್ಮನನ್ನೇ ಪ್ರವೇಶಿಸಿದರು. ಕುಂಡಲಗಳಿಂದಲೂ ಕಿರೀಟದಿಂದಲೂ ಕೂಡಿದ ಅವನ ತಲೆಯು ಭೂಮಿಯಲ್ಲಿ ಬಿದ್ದಿತು. ರಾಕ್ಷಸರು ಹಾ! ಹಾ!! ಎಂದರು. ಋಷಿಗಳು ಸರಿ! ಸರಿ!! ಎಂದರು. ದೇವತೆಗಳು ಪರಮಾತ್ಮನ ಶಿರಸ್ಸಿನಲ್ಲಿ ಹೂವಿನಮಳೆಯನ್ನು ಸುರಿಸುತ್ತಾ ಸ್ತೋತ್ರ ಮಾಡಿದರು.

ಈರೀತಿಯಾಗಿ ಶ್ರೀಭಗವಂತನು ಅಸುರಶ್ರೇಷ್ಠನಾದ ನರಕಾಸುರನನ್ನು ಸಂಹರಿಸಿ ಊರಜನರು ಬಂದು ಕರೆಯಲು ಪ್ರಾಗ್ಜ್ಯೋತಿಷನಗರವನ್ನು ನೋಡುವುದ ಕ್ಕಾಗಿ ದೇವತೆಗಳಿಂದಲೂ ಲೋಕಪಾಲಕರಿಂದಲೂ ಕೂಡಿಕೊಂಡು ಪತ್ನೀಸಹಿತ ನಾಗಿ ಒಳಗೆ ಪ್ರವೇಶಿಸಿದನು. ಶ್ರೀಕೃಷ್ಣಪರಮಾತ್ಮನು ಅಲ್ಲಿ ವಿಚಿತ್ರವಾದ ಮಣಿಪರ್ವತ ವನ್ನೂ ನೀರನ್ನು ಸುರಿಸುವ ವರುಣದೇವರ ಛತ್ರವನ್ನು ನೋಡಿದನು. (ಮಣಿಪರ್ವತವನ್ನು ಇಂದ್ರದೇವರಿಗೆ ಕೊಟ್ಟು ಕಳುಹಿಸಿದನು. ವರುಣದೇವರಿಗೆ ಛತ್ರವನ್ನೂ ದೈತ್ಯರಿಂದ ಕೊಟ್ಟು ಕಳುಹಿಸಿದನು.) ತರುವಾಯ ಭಗವಂತನು ದೇವತೆಗಳನ್ನೆಲ್ಲಾ ಕಳುಹಿಸಿ ನರಕಾಸುರನ ಮನೆಯೊಳಗೆ ಪ್ರವೇಶಿಸಿದನು. ತರುವಾಯ ಧರಾದೇವಿಯು ಅದಿತಿ ದೇವಿಯ ಕುಂಡಲಗಳನ್ನು ಹಿಡಿದುಕೊಂಡು ಭಗದತ್ತನೆಂದು ಹೆಸರುಳ್ಳ ಮೊಮ್ಮಗನನ್ನು ಕರೆದುಕೊಂಡು ಬಂದು ನಮಸ್ಕರಿಸಿ ಸ್ತೋತ್ರ ಮಾಡಿ, 'ಇವನು ನರಕಾಸುರನ ಮಗನು. ನಿನ್ನ ಪಾದಕಮಲವನ್ನು ಮರೆಹೊಂದಲು ಭಯಪಡುತ್ತಿರುವನು. ಇವನ ತಲೆಯಮೇಲೆ ಕೈಯಿಟ್ಟು ಇವನನ್ನು ರಕ್ಷಿಸಬೇಕು' ಎಂದು ಪ್ರಾರ್ಥಿಸಿಕೊಂಡಳು. ಭಗವಂತನು ಅವನನ್ನು ರಾಜ್ಯದಲ್ಲಿ ಸ್ಥಾಪಿಸಿ ಅವನ ಮಂತ್ರಿಗಳನ್ನೂ ಮಂತ್ರಿಪದವಿಯಲ್ಲಿ ಸ್ಥಾಪಿಸಿ ನರಕಾಸುರನ ಅಂತಃಪುರವನ್ನು ಪ್ರವೇಶಿಸಿದನು. ಮತ್ತು ರುದ್ರದೇವರು ಕುಬೇರನಿಗೆ ಕೊಟ್ಟಿರುವ, ನರಕಾಸುರನು ಕುಬೇರನನ್ನು ಜಯಿಸಿ ತಂದಿರುವ, ಸುಪ್ರತೀಕವೆಂಬ ಆನೆಯನ್ನು ಭಗವಂತನು ಭಗದತ್ತನಿಗೆ ಕೊಟ್ಟನು. ಉಳಿದ ಕ್ಷೀರಸಮುದ್ರದಲ್ಲಿ ಹುಟ್ಟಿದ ನಾಲ್ಕು ದಂತಗಳುಳ್ಳ ಆರು ಸಾವಿರ ಆನೆಗಳನ್ನು ದ್ವಾರಕಾಪಟ್ಟಣಕ್ಕೆ ಕಳುಹಿಸಿದನು. ನರಕಾಸುರನು ರಾಜರನ್ನು ದೇವಗಂಧರ್ವ ನಾಗರನ್ನು ಜಯಿಸಿ ತಂದಿರುವ ಇನ್ನೂರು

ಯೋಜನ ಸುತ್ತಳತೆಯುಳ್ಳ ಬಂಗಾರ ಮತ್ತು ರತ್ನಗಳ ರಾಶಿಯನ್ನು ಆ ನರಕಾಸುರನೇ ನಿಯುತಿಯನ್ನು ಜಯಿಸಿ ಕರೆತಂದಿರುವ ಮಹಾಪರಾಕ್ರಮವುಳ್ಳ ರಾಕ್ಷಸರಿಂದ ದ್ವಾರಕಾಪಟ್ಟಣಕ್ಕೆ ಕಳುಹಿಸಿದನು. ಮತ್ತು ಬಿಳಿಯಾದ ಅರವತ್ತು ಆನೆಗಳನ್ನು ದ್ವಾರಕಾಪಟ್ಟಣಕ್ಕೆ ಕಳುಹಿಸಿದನು. ತರುವಾಯ ನರಕಾಸುರನ ಅಂತಃಪುರವನ್ನು ಪ್ರವೇಶಿಸಿದನು. ನರಕಾಸುರನು ರಾಜರನ್ನು ಜಯಿಸಿ ತಂದು ಇಟ್ಟಿರುವ ಹದಿನಾರು ಸಾವಿರದ ನೂರು ಪರಮರೂಪವತಿಯರಾದ ಪುರುಷ ಸಂಬಂಧರಹಿತರಾದ ಉತ್ತಮ ವ್ರತಸ್ಥರಾದ ರಾಜಕನ್ಯೆಯರನ್ನು ನೋಡಿದನು. ಅವರಲ್ಲಿ ಕೆಲವರು ದೇವಗಂಧರ್ವಕನ್ಯೆಯರೂ ಇದ್ದರು. ಅವರಲ್ಲಿ ತ್ವಷ್ಟೃ ಎಂದು ಹೆಸರುಳ್ಳ ಆದಿತ್ಯನ ಮಗಳಾದ ಕಶೇರು ಎನ್ನುವವಳು ಶ್ರೇಷ್ಠಳು. ಆ ಹದಿನಾರು ಸಾವಿರದ ನೂರು ಜನರೂ ಪೂರ್ವದಲ್ಲಿ ಅಗ್ನಿದೇವರ ಗಂಡುಮಕ್ಕಳಾಗಿದ್ದರು. ಅವರು ಶ್ರೀಪರಮಾತ್ಮನಿಗೆ ಹೆಂಡತಿಯರಾಗುವ ಆಸೆಯಿಂದ ಸ್ತ್ರೀಯರಾಗಿ ಹುಟ್ಟಬೇಕೆಂದು ವಾಯುದೇವರನ್ನು ತಪಸ್ಸು ಮಾಡಿದ್ದರು. ವಾಯುದೇವರು ಹಾಗೆಯೇ ವರವನ್ನು ಕೊಟ್ಟರು. ತರುವಾಯ ಅವರು ಸ್ತ್ರೀದೇಹವುಳ್ಳವರಾಗಿ ಬದರಿಕಾಶ್ರಮಕ್ಕೆ ಹೋಗಿ ಅಲ್ಲಿ ನಾರಾಯಣದೇವರನ್ನು ಸೇವಿಸುವವರಾಗಿ ಅಪ್ಸರ ಸ್ತ್ರೀಯರಾಗಿ ಹುಟ್ಟಿ ಕೆಲವರು ರಾಜವಂಶದಲ್ಲಿ ಹುಟ್ಟಿದರು. ಕೆಲವು ಸ್ವರ್ಗದಲ್ಲಿ ಇದ್ದರು. ಅವರು ಅಜಾನದೇವತೆಗಳಿಗೆ ಸಮಾನರು. ಪರಮಾತ್ಮನ ಪ್ರೀತಿಯಿರುವ ಕಾಲದಲ್ಲಿ ಸ್ವಲ್ಪ ಶ್ರೇಷ್ಠರಾಗಿರುವರು. ಅವರೆಲ್ಲರೂ ಅಂತಃಪುರಕ್ಕೆ ಪ್ರವೇಶಿಸಿ ಶ್ರೀಕೃಷ್ಣಪರಮಾತ್ಮನನ್ನು ನೋಡಿ ಅವನನ್ನೇ ಪತಿಯನ್ನಾಗಿ ಸ್ವೀಕರಿಸಿದರು. ಶ್ರೀಭಗವಂತನು ಅವರನ್ನು ಮೇನೆಯಲ್ಲಿ ಕೂತುಕೊಳ್ಳಿಸಿ ದ್ವಾರಕಾಪಟ್ಟಣಕ್ಕೆ ಕಳುಹಿಸಿದನು. ತರುವಾಯ ಭಗವಂತನು ಇನ್ನೂರು ಯೋಜನ ಸುತ್ತಳತೆಯುಳ್ಳ ಇಂದ್ರದೇವರ ರತ್ನಪರ್ವತವನ್ನು ನಿತ್ಯವೂ ನೀರನ್ನು ಸುರಿಸುವ ವರುಣದೇವರ ಛತ್ರವನ್ನು ಎರಡು ಕೈಗಳಿಂದ ಗರುಡದೇವರ ಮೇಲೆ ಇಟ್ಟನು. ತಾನೂ ಸತ್ಯಭಾಮಾದೇವಿಯರಿಂದ ಸಹಿತನಾಗಿ ಗರುಡದೇವರ ಮೇಲೆ ಕೂತುಕೊಂಡನು. ಗರುಡದೇವರು ಅನಾಯಾಸದಿಂದ ಅವರನ್ನು ಹೊತ್ತುಕೊಂಡು ಸ್ವರ್ಗಲೋಕಕ್ಕೆ ಹೋದರು.



# ಪಾರಿಜಾತವು [1]

ಶ್ರೀಕೃಷ್ಣಪರಮಾತ್ಮನು ಅತಿಭಯಂಕರನಾದ ನರಕಾಸುರನನ್ನು ಸಂಹರಿಸಿ ಗರುಡದೇವರ ಮೇಲೆ ಕೂತುಕೊಂಡು ಪ್ರಾಗ್ಜ್ಯೋತಿಷನಗರದಿಂದ ಹೊರಟು ಹೋದನು. ಭಗವಂತನು ಆಕಾಶಮಾರ್ಗದಲ್ಲಿ ಹೋಗುತ್ತಾ ದೇವತೆಗಳ ತಾಯಿಯಾದ ಅದಿತಿದೇವಿಯನ್ನು ನಮಸ್ಕರಿಸುವುದಕ್ಕಾಗಿ ಸತ್ಯಭಾಮಾದೇವಿಯರಿಂದ ಕೂಡಿಕೊಂಡು ಸ್ವರ್ಗಲೋಕಕ್ಕೆ ಹೋದನು. ಶ್ರೀಭಗವಂತನು ಸ್ವರ್ಗದ ಬಾಗಿಲಿಗೆ ಹೋಗಿ ತನ್ನ ಪಾಂಚಜನ್ಯ ಶಂಖವನ್ನು ಊದಿದನು. ಆ ಶಂಖದ ಶಬ್ದವನ್ನು ಕೇಳಿ ಶ್ರೀಭಗವಂತನೇ ಬಂದಿರುವನೆಂದು ತಿಳಿದುಕೊಂಡು ಅರ್ಘ್ಯಪಾದ್ಯಗಳನ್ನು ಹಿಡಿದುಕೊಂಡು ದೇವತೆಗಳು ಬಂದರು. ಶ್ರೀಕೃಷ್ಣಪರಮಾತ್ಮನು ಭಕ್ತಿಯಿಂದ ಪೂರ್ಣರಾದ ದೇವತೆಗಳಿಂದ ಪೂಜಿತನಾಗಿ ಮನೋಹರವಾದ ದಿವ್ಯವಾದ ಇಂದ್ರದೇವರ ಮನೆಗೆ ಪ್ರವೇಶಿಸಿದನು. ಅಲ್ಲಿ ಇಂದ್ರದೇವರು ಶಚೀದೇವಿಯರಿಂದ ಕೂಡಿಕೊಂಡು ರತ್ನಗಳಿಂದಲೂ ಆಭರಣಗಳಿಂದಲೂ ದಿವ್ಯಗಂಧಪುಷ್ಪಗಳಿಂದಲೂ ಪೂಜಾ ಮಾಡಿದರು. ತರುವಾಯ ಭಗವಂತನು ಪತ್ನಿಯಾದ ಸತ್ಯಭಾಮಾ ದೇವಿಯರಿಂದ ಕೂಡಿಕೊಂಡು ಅದಿತಿದೇವಿಯರಿದ್ದಲ್ಲಿಗೆ ಹೋಗಿ ಅದಿತಿಗೆ ನಮಸ್ಕರಿಸಿದನು. ಆಗ ಅದಿತಿಯು ಆಸುರಾವೇಶದಿಂದ ಶ್ರೀಕೃಷ್ಣನನ್ನು ಪರಮಾತ್ಮನು ಎಂಬ ಜ್ಞಾನವಿಲ್ಲದೆ ಇದ್ದವಳಾಗಿ ಆಶೀರ್ವಾದ ಮಾಡಿದಳು. ನಂತರದಲ್ಲಿ ಸತ್ಯಭಾಮಾದೇವಿಯರು ಶ್ರೀಭಗವಂತನಿಂದ ಪ್ರೇರಿತರಾಗಿ ಅದಿತಿಯ ಪಾದಗಳಲ್ಲಿ ನರಕಾಸುರನನ್ನು ಸಂಹರಿಸಿ ತಂದಿರುವ ಅದಿತಿಯ ತೋಡುಗಳನ್ನು (ಬೆಂಡೋಲೆಗಳನ್ನು) ಇಟ್ಟು ನಮಸ್ಕರಿಸಿದರು. ಆಗಲೂ ಅದಿತಿದೇವಿಯು ಅಸುರಾವೇಶದಿಂದ ಸತ್ಯಭಾಮಾದೇವಿಯರು ಸಾಕ್ಷಾತ್ ಲಕ್ಷ್ಮೀದೇವಿಯರು ಎಂಬ ಜ್ಞಾನವಿಲ್ಲದವಳಾಗಿ 'ಸತ್ಯಭಾಮಾ! ನಿನಗೆ ನನ್ನ ಅನುಗ್ರಹದಿಂದ ಮುದಿತನವೂ ಸೌಂದರ್ಯ ಇಲ್ಲದೆ ಇರೋಣವೂ ಗಂಡನೊಡನೆ ಜಗಳವೂ ಯಾವಾಗಲೂ ಆಗದೆ ಇರಲಿ' ಎಂದು ಆಶೀರ್ವದಿಸಿದಳು. ತರುವಾಯ ಶ್ರೀಭಗವಂತನು ಅದಿತಿದೇವಿಯೊಡನೆಯೂ ದೇವತೆಗಳೊಡನೆಯೂ ಹೋಗಿಬರುತ್ತೇನೆ ಎಂದು ಹೇಳಿಕೊಂಡು ಸತ್ಯಭಾಮಾದೇವಿಯರೊಡನೆ ಗರುಡದೇವರ ಮೇಲೆ ಕೂತುಕೊಂಡು ಹೊರಟುಹೋದನು.

---

1. ಹ.ವಂ.ಪ. ಅ-12. ಮ.ತಾ.ನಿ. ಅ-20

ಶ್ರೀಭಗವಂತನೂ ಸತ್ಯಭಾಮಾದೇವಿಯರೂ ಗರುಡದೇವರ ಮೇಲೆ ಕೂತುಕೊಂಡು ಆಕಾಶಮಾರ್ಗದಲ್ಲಿ ಹೋಗುತ್ತಿರುವಾಗ ಕೆಳಗೆ ವಿಚಿತ್ರವಾದ ಇಂದ್ರದೇವರಿಗೆ ಪ್ರಿಯವಾದ ನಂದನವನವನ್ನು ನೋಡಿದರು. ದಿವ್ಯಸುವಾಸನೆಯು ಬರುವ ವಿಚಿತ್ರ ಪುಷ್ಪಗಳಿಂದ ಕೂಡಿರುವ ಆ ವನವನ್ನು ನೋಡಿ ಸತ್ಯಭಾಮಾದೇವಿಯರು ದೇವರ ಕೈಯಲ್ಲಿ ಹಿಡಿದು 'ಈ ವನದಲ್ಲಿ ಪ್ರವೇಶಿಸಿ ಒಂದು ಮುಹೂರ್ತಕಾಲ ವಿಹಾರ ಮಾಡಬೇಕೆಂದು ನನಗೆ ಅಪೇಕ್ಷೆಯಾಗಿದೆ ಎಂದು ಹೇಳಿದರು. ತರುವಾಯ ಶ್ರೀಕೃಷ್ಣಪರಮಾತ್ಮನು ಸತ್ಯಭಾಮಾದೇವಿಯರ ಮಾತಿನ ಮೇಲಿನ ಗೌರವದಿಂದ ಗರುಡದೇವರಿಂದ ಕೆಳಗೆ ಇಳಿದು ಇಂದ್ರದೇವರಿಂದ ರಕ್ಷಿತವಾದ ನಂದನವನವನ್ನು ಪ್ರವೇಶಿಸಿದರು. ಅಲ್ಲಿ ಸತ್ಯಭಾಮಾದೇವಿಯರು ಶ್ರೀಭಗವಂತನೊಡನೆ ಸಂಚರಿಸುತ್ತಾ ಭ್ರಮರಗಳು ಶಬ್ದಮಾಡುತ್ತಿರುವ ಹಣ್ಣುಗಳ ಭಾರದಿಂದ ಬಗ್ಗಿರುವ ಅನೇಕ ಪುಷ್ಪಗಳಿಂದ ಕೂಡಿದ ಪಕ್ಷಿಗಳ ಧ್ವನಿಯಿಂದ ಅಲಂಕೃತಗಳಾದ ಮರಗಳನ್ನು ನೋಡಿದರು. ಹಾಗೆಯೇ ಸಂಚರಿಸುತ್ತಾ ಪಾರಿಜಾತಮರವನ್ನು ನೋಡಿದರು. ಆ ಮರವನ್ನು ನೋಡಿ ಸತ್ಯಭಾಮಾದೇವಿಯರು ಆಶ್ಚರ್ಯವುಳ್ಳವರಂತೆ ತೋರಿಸುತ್ತಾ 'ದೇವ! ಮೂರು ಲೋಕದಲ್ಲಿಯೂ ವಿಚಿತ್ರವಾದ ಈ ಮರವು ಯಾವುದು? ಈ ಮರದ ಫಲವನ್ನು ಹೊಂದುವವರು ಕೃತಾರ್ಥರು. ಈ ಮರದ ಬೇರು ಹವಳಮಯವಾಗಿದೆ. ಮಧ್ಯವು ಬಂಗಾರ ಮಯವಾಗಿದೆ. ಇಂದ್ರನೀಲಮಣಿಯ ಎಲೆಗಳು. ಸುತ್ತಲೂ ವೈಡೂರ್ಯ ಮಣಿಗಳಿಂದ ಮಾಡಿದ ಕಟ್ಟೆಯಿದೆ. ಮಾಣಿಕ್ಯರತ್ನದ ಪುಷ್ಪಗಳು. ಮುತ್ತುಗಳೆಂಬ ಹಣ್ಣುಗಳು. ಮರಕತರತ್ನದ ನೂರಾರು ಕೋಟಿಗಳಿಂದ ಪ್ರಕಾಶಿತವಾಗಿದೆ. ಜಗನ್ನಾಥ! ಈ ಮರವು ನನ್ನ ಮನಸ್ಸು ತುಂಬಾ ಅಪಹರಿಸುತ್ತದೆ. ನಾನು ನಿಮಗೆ ಬೇಕಾದವಳಾಗಿದ್ದರೆ ಅವಶ್ಯವಾಗಿ ಈ ಮರವನ್ನು ನಮ್ಮ ಊರಿಗೆ ತೆಗೆದುಕೊಂಡು ಹೋಗಬೇಕು. ನಾನು ನನ್ನ ಮನೆಯ ಅಂಗಳದಲ್ಲಿ ಈ ಮರದ ನೆರಳಿನಲ್ಲಿ ಕೂತಿರುವುದನ್ನು ನೋಡಿ ನಿಮ್ಮ ಇತರ ಹೆಂಡತಿಯರೆಲ್ಲರೂ ನಾನು ನಿಮಗೆ ಎಲ್ಲರಿಂದಲೂ ಅತ್ಯಂತಪ್ರಿಯರು ಎಂದು ತಿಳಿಯುವರು.

ಈರೀತಿಯಾಗಿ ಸತ್ಯಭಾಮಾದೇವಿಯರು ಸ್ತ್ರೀಯರ ಸ್ವಭಾವದಂತೆ ಹೇಳಲು ಕೃಷ್ಣಪರಮಾತ್ಮನು 'ಸತ್ಯಭಾಮಾ! ನಾವು ಈ ಮರವನ್ನು ನಂದನವನದಿಂದ ತೆಗೆದುಕೊಂಡು ಹೋಗಬಾರದು. ಈ ಮರವು ಪೂರ್ವದಲ್ಲಿ ಕ್ಷೀರಸಮುದ್ರವನ್ನು ಮಥನ ಮಾಡುವಾಗ ಉಂಟಾಯಿತು. ಇದನ್ನು ಎಲ್ಲರೂ ಇಂದ್ರದೇವರಿಗೆ ಕೊಟ್ಟರು.

ಧರ್ಮವನ್ನು ಅನುಸರಿಸುವ ನಾವು ಮಿತ್ರನಾದ ಇಂದ್ರನನ್ನು ಅಲಕ್ಷ್ಯಮಾಡಿ ಈ ಶ್ರೇಷ್ಠವಾದ ಮರವನ್ನು ತೆಗೆದುಕೊಂಡು ಹೋಗಬಾರದು. ಮಾತ್ರವಲ್ಲದೆ ನಾವು ತೆಗೆದುಕೊಂಡು ಹೋದರೆ ಜಯವನ್ನು ಅಪೇಕ್ಷಿಸುವ ದೇವತೆಗಳೊಡನೆ ಭಯಂಕರವಾದ ಯುದ್ಧವು ನಡೆಯುವುದು' ಎಂದು ಹೇಳಿದನು.

ಶ್ರೀಭಗವಂತನು ಈರೀತಿಯಾಗಿ ಹೇಳಲು ಸತ್ಯಭಾಮಾದೇವಿಯರು 'ಭಗವಂತನೇ! ಸುಳ್ಳು ಮಾತುಗಳಿಂದ ನನ್ನನ್ನು ಭಯಪಡಿಸುವಿರಾ? ದುಷ್ಟಳಾದ ಶಚಿಯು ನಾನು ಮನೆಗೆ ಬಂದಿರುವಾಗ ಸರಿಯಾದ ಉಪಚಾರವನ್ನು ಮಾಡಲೇ ಇಲ್ಲ. ಹೀಗೆ ಅವಳು ಅಹಂಕಾರಪಡಲಿಕ್ಕೆ ಈ ಮರವೇ ಕಾರಣವು. ಮತ್ತು ತನ್ನ ಗಂಡನು ಬಹುಪರಾಕ್ರಮಿ ಎಂದು ಅಹಂಕಾರಪಡುತ್ತಿರುವಳು. ಏನಾದರೂ ಈ ಮರವನ್ನು ತೆಗೆದುಕೊಂಡು ಹೋಗಲೇಬೇಕು. ನಾನು ನಿಮಗೆ ಬೇಕಾದವಳಾಗಿದ್ದ ಪಕ್ಷದಲ್ಲಿ ತೆಗೆದುಕೊಂಡು ಹೋಗಿರಿ. ಇಲ್ಲದಿದ್ದರೆ ಬಿಡಿರಿ' ಎಂದು ಹೇಳಿದರು.

ಈರೀತಿಯಾಗಿ ಸತ್ಯಭಾಮಾದೇವಿಯರು ಹೇಳಲು ಶ್ರೀಕೃಷ್ಣಪರಮಾತ್ಮನು ವನಪಾಲರನ್ನು ಲಕ್ಷ್ಯಮಾಡದೆ ಪಾರಿಜಾತಮರವನ್ನು ಕಿತ್ತು ಗರುಡದೇವರ ಮೇಲೆ ಇಟ್ಟನು. ತರುವಾಯ ವನಪಾಲಕರು ಕೆಲವರು ತಡೆದರು. ಕೆಲವರು ಇಂದ್ರದೇವ ರೊಡನೆ ತಿಳಿಸಲು ಓಡಿದನು. 'ಕೃಷ್ಣ! ಕೃಷ್ಣ! ದೇವತೆಗಳಿಂದ ಸತ್ಕೃತವಾದ ಮರವನ್ನು ತೆಗೆದುಕೊಂಡು ಹೋಗಬೇಡ. ನೀನು ತೆಗೆದುಕೊಂಡು ಹೋದರೆ ಈಗಲೇ ಅದರ ಫಲವನ್ನು ಅನುಭವಿಸಿ. ಈ ಮರವನ್ನು ಹಿಡಿದುಕೊಂಡು ಊರಿಗೆ ಹೋಗಿ ಸೇರಲಾರಿ. ನಿನ್ನ ಹಿಂದೆಯೇ ಆಯುಧವನ್ನು ಧರಿಸಿಕೊಂಡು ಬರುವ ದೇವೇಂದ್ರನನ್ನು ನೋಡುವೆ' ಎಂದು ವನಪಾಲಕರು ಹೇಳಿದರು.

ತರುವಾಯ ಬೇಗನೇ ಇಂದ್ರದೇವರ ಬಳಿಗೆ ಹೋಗಿ ಶಚೀದೇವಿಯೊಡನೆ ಕೂತಿರುವ ಇಂದ್ರದೇವರನ್ನು ನೋಡಿ 'ಕೃಷ್ಣನ ಹೆಂಡತಿಯು ನಮ್ಮನ್ನೆಲ್ಲಾ ತಿರಸ್ಕರಿಸಿ, ನಿಮ್ಮನ್ನೂ ಶಚೀದೇವಿಯರನ್ನೂ ಕೂಡ ತಿರಸ್ಕರಿಸಿ, ಪಾರಿಜಾತಮರವನ್ನು ಅಪಹರಿಸಿದಳು. ನಾವೆಲ್ಲರೂ ತಡೆಯಲಿಕ್ಕೆ ಹೋಗಲು ತನ್ನ ಗಂಡನ ಪೌರುಷದಿಂದ ಅಹಂಕಾರವುಳ್ಳವಳಾಗಿ ನಮ್ಮನ್ನೆಲ್ಲಾ ಅತ್ಯಂತ ಬೆದರಿಸಿ ಆ ಮರವನ್ನು ತೆಗೆದುಕೊಂಡೇ ಹೋದಳು' ಎಂದು ಹೇಳಿದರು.

ಇಂದ್ರದೇವರು ವನಪಾಲರು ಹೇಳಿದ ಮಾತನ್ನು ಕೇಳಿ ತುಂಬಾ ಕೋಪ ವುಳ್ಳವರಾದರು. ಅಸುರಾವೇಶದಿಂದ ಶ್ರೀಕೃಷ್ಣಪರಮಾತ್ಮನು ಸಾಕ್ಷಾತ್ ಭಗವಂತನು ಎಂಬುದನ್ನು ಮರೆತುಬಿಟ್ಟರು. ತನ್ನ ಹತ್ತಿರದಲ್ಲಿಯೇ ಕೂತಿದ್ದ ಶಚೀದೇವಿಯನ್ನು

ನೋಡಿಯಂತೂ ತನಗೆ ಬಂದ ಪರಾಜಯವನ್ನು ಸಹಿಸಲಾರರಾದರು. ಎಲ್ಲರೂ ಯುದ್ಧಕ್ಕೆ ಬರಬೇಕೆಂದು ಸೂಚನೆ ಮಾಡಲು ಭೇರಿಯನ್ನು ಒಡೆಯಲಿಕ್ಕೆ ಹೇಳಿ ಎಲ್ಲಾ ಸೈನಿಕರನ್ನು ಸೇರಿಸಿ ಲೋಕಪಾಲಕರನ್ನೆಲ್ಲಾ ಯುದ್ಧಕ್ಕೆ ಕರೆದು ನಾಲ್ಕು ದಂತಗಳುಳ್ಳ ಐರಾವತದ ಮೇಲೆ ಕೂತುಕೊಂಡು ವಜ್ರಾಯುಧವನ್ನು ಹಿಡಿದುಕೊಂಡು ಯುದ್ಧಕ್ಕೆ ಹೋದರು. ಅವರ ಹಿಂದೆಯೇ ದೇವತೆಗಳು ಹೋದರು.

ಅಗ್ನಿದೇವರು ಕುದುರೆಯ ಮೇಲೆ ಕೂತುಕೊಂಡು ಶತಘ್ನೀ ಎಂಬ ಆಯುಧವನ್ನು ಹಿಡಿದುಕೊಂಡು ಯುದ್ಧಕ್ಕೆ ಸಿದ್ಧರಾಗಿ ಹೋದರು. ಯಮದೇವರು ಕೋಣದ ಮೇಲೆ ಕೂತುಕೊಂಡು ದಂಡವನ್ನು ಹಿಡಿದುಕೊಂಡು ಮೃತ್ಯು, ಕಾಲ ಇತ್ಯಾದಿ ದೂತರಿಂದ ಸಹಿತರಾಗಿ ಯುದ್ಧಕ್ಕಾಗಿ ಹೋದರು. ನಿಋತಿಯು ಘೋರನಾದ ಪುರುಷನ ಮೇಲೆ ಕೂತುಕೊಂಡು ಕತ್ತಿಯನ್ನು ಹಿಡಿದುಕೊಂಡು ಹೋದನು. ವರುಣ ದೇವರು ಮೊಸಳೆಯ ಮೇಲೆ ಕೂತುಕೊಂಡು ಕೈಯಲ್ಲಿ ಪಾಶವನ್ನು ಹಿಡಿದುಕೊಂಡು ಹೋದರು. ಕೋಣವಾಯುವು ಕೃಷ್ಣಮೃಗದ ಮೇಲೆ ಕೂತುಕೊಂಡು ತೋಮರವನ್ನು ಹಿಡಿದುಕೂತುಕೊಂಡು ಮುದ್ಗರವನ್ನು ಹಿಡಿದುಕೊಂಡು ಹೋದನು. ರುದ್ರದೇವರು ವೃಷಭದ ಮೇಲೆ ಕೂತುಕೊಂಡು ತ್ರಿಶೂಲವನ್ನು ಹಿಡಿದುಕೊಂಡು ಕೋಟಿಭೂತಗಳಿಂದ ಸಹಿತರಾಗಿ ಹೋದರು. ದೇವತೆಗಳ ಸೈನಿಕರೆಲ್ಲರೂ ಕೋಲಾಹಲವನ್ನು ಮಾಡುತ್ತಾ ಸಿಂಹದ ಬಳಿಗೆ ನರಿಗಳು ಓಡುವಂತೆ ಪರಮಾತ್ಮನ ಬಳಿಗೆ ಹೋದರು.

ಈರೀತಿಯಾಗಿ ಅಸುರಾವೇಶದಿಂದ ಯುದ್ಧಕ್ಕೆ ಬಂದಿರುವ ಅವರನ್ನೆಲ್ಲಾ ನೋಡಿ ಶ್ರೀಕೃಷ್ಣಪರಮಾತ್ಮನು 'ಸತ್ಯಭಾಮಾ! ನಿನ್ನ ಬೀಗರು ಬಂದಿರುವರು. ನೀನೇ ಉಪಚಾರವನ್ನು ಮಾಡು' ಎಂದು ಹೇಳಿದನು. ಪರಮಾತ್ಮನು ಹಾಗೆ ಹೇಳುತ್ತಿರಲು ದೇವಸೈನಿಕರು ಬಂದು ಗರ್ಜನೆ ಮಾಡುತ್ತಾ ಬಾಣಗಳ ಮಳೆಯನ್ನು ಸುರಿಸಿದರು. ಆಗ ಸತ್ಯಭಾಮಾದೇವಿಯರು ಸ್ವಲ್ಪವೂ ಭಯಪಡದೆ ದೇವರ ಕೈಯಿಂದ ಶಾರ್ಙ್ಗ ಎಂಬ ಧನುಸ್ಸನ್ನು ತೆಗೆದುಕೊಂಡು ದೇವಸೈನಿಕರು ಬಿಟ್ಟಿರುವ ಬಾಣಗಳನ್ನೆಲ್ಲಾ ಕತ್ತರಿಸಿದರು. ತರುವಾಯ ಅನೇಕ ಯಕ್ಷರಿಂದ ಕೂಡಿಕೊಂಡು ಕುಬೇರನು ಯುದ್ಧಕ್ಕೆ ಬಂದನು. ಸತ್ಯಭಾಮಾದೇವಿಯರು ಕುಬೇರನ ದೊಡ್ಡ ಹೊಟ್ಟೆಗೆ ಬಾಣವನ್ನು ಬಿಟ್ಟರು. ಕುಬೇರನೂ ಸತ್ಯಭಾಮಾದೇವಿಯರಿಗೆ ಬಾಣವನ್ನು ಬಿಟ್ಟನು. ಬಹುಹೊತ್ತು ಭಯಂಕರವಾದ ಯುದ್ಧವು ನಡೆದಮೇಲೆ ಕುಬೇರನ ಧನುಸ್ಸನ್ನೇ ತುಂಡುಮಾಡಿದರು. ಆಗ ಕುಬೇರನು ಘೋರವಾದ ಮುದ್ಗರವನ್ನು ತೆಗೆದು

ಸತ್ಯಭಾಮಾದೇವಿಯರ ಮೇಲೆ ಬಿಸಾಡಿದನು. ಆಗ ಭಗವಂತನು ಬರುತ್ತಿರುವ ಘೋರವಾದ ಮುದ್ಗರಾಯುಧವನ್ನು ಎಡಕೈಯಲ್ಲಿ ಹಿಡಿದನು. ಗಟ್ಟಿಯಾಗಿ ನಗಾಡಿದನು. ತರುವಾಯ ಕುಬೇರನು ಯುದ್ಧವನ್ನು ಬಿಟ್ಟು ಓಡಿಹೋದನು. ಶ್ರೀಕೃಷ್ಣಪರಮಾತ್ಮನು ಸತ್ಯಭಾಮಾದೇವಿಯರನ್ನು ಆಲಂಗಿಸಿ ಸ್ತೋತ್ರಮಾಡಿದನು.

ಕುಬೇರನು ಓಡಿಹೋಗಲು ವರುಣದೇವರು ಪಾಶವನ್ನು ಎತ್ತಿಕೊಂಡು ಯುದ್ಧಕ್ಕೆ ಬಂದರು. ಅವರನ್ನು ನೋಡಿ ಗರುಡದೇವರು ಹುಲಿಯು ಎತ್ತಿನ ಬಳಿಗೆ ಜಗಳಕ್ಕೆ ಹೋಗುವಂತೆ ಹೋದರು. ವರುಣದೇವರಿಗೂ ಗರುಡದೇವರಿಗೂ ಭಯಂಕರವಾದ ಯುದ್ಧವು ನಡೆಯಿತು. ವರುಣದೇವರು ಗರುಡದೇವರ ಕುತ್ತಿಗೆಗೆ ಪಾಶವನ್ನು ಹಾಕಿ ಎಳೆದರು. ಗರುಡದೇವರು ವರುಣದೇವರನ್ನು ತನ್ನ ರೆಕ್ಕೆಗಳಿಂದ ಎತ್ತಿಹಿಡಿದು ಅವರು ಕೂತಿದ್ದ ಅವರ ವಾಹನವಾದ ಮೊಸಳೆಯನ್ನು ಕಾಲಿನಿಂದ ಸಮುದ್ರಕ್ಕೆ ಬಿಸಾಡಿದರು. ತರುವಾಯ ವರುಣದೇವರು ಬಹುಕಷ್ಟದಿಂದ ತನ್ನ ಪಾಶವನ್ನು ಹಿಡಿದುಕೊಂಡು ಕಾಲು ನಡೆಯಿಂದಲೇ ಯುದ್ಧವನ್ನು ಬಿಟ್ಟು ಹೊರಟುಹೋದರು.

ವರುಣದೇವರು ಯುದ್ಧರಂಗದಿಂದ ಓಡಿಹೋಗಲು ಕೋಣವಾಯುವೂ ಅಗ್ನಿಯೂ ಇಬ್ಬರೂ ಒಟ್ಟಿಗೇ ಯುದ್ಧಕ್ಕೆ ಹೋದರು. ಆಗ ಶ್ರೀಕೃಷ್ಣಪರಮಾತ್ಮನು ನಗುತ್ತಾ ಒಂದು ಬಾಣದಿಂದ ಅಗ್ನಿದೇವರನ್ನು ಬಡಿದನು. ಕೋಣವಾಯುವನ್ನು ಏಳು ಬಾಣಗಳಿಂದ ಬಡಿದನು. ಅಗ್ನಿದೇವರು ಬಲವಾದ ಒಂದು ಬಾಣದ ಪೆಟ್ಟು ತಾಗಲು ಅಸುರಾವೇಶವು ಹೋಗಿ ಸಾಕ್ಷಾತ್ ಭಗವಂತನೇ ಇರುವನೆಂದು ತಿಳಿದುಕೊಂಡು ಯುದ್ಧರಂಗವನ್ನು ಬಿಟ್ಟು ಓಡಿಹೋದರು. ಕೋಣವಾಯು ದೇವರೂ ಅಗ್ನಿದೇವರು ಯುದ್ಧರಂಗವನ್ನು ಬಿಟ್ಟು ಓಡಿಹೋದದ್ದನ್ನು ತನ್ನ ಮೈಯೆಲ್ಲಾ ಬಾಣಮಯವಾಗಿರುವುದನ್ನು ನೋಡಿ ಸಾಕ್ಷಾತ್ ಪರಮಾತ್ಮನೇ ಯುದ್ಧಕ್ಕೆ ಬಂದಿರುವನೆಂದು ತಿಳಿದು ಪ್ರಾಣವನ್ನು ಉಳಿಸಿಕೊಳ್ಳುವ ಆಸೆಯಿಂದ ಓಡಿ ಹೋದರು.

ಆಮೇಲೆ ಯಮದೇವರು ದಂಡವನ್ನು ಎತ್ತಿಕೊಂಡು ಕೋಪದಿಂದ ಕಣ್ಣುಕೆಂಪಗೆ ಮಾಡಿಕೊಂಡು ಯುದ್ಧಕ್ಕೆ ಬಂದರು. ಆಗ ಪರಮಾತ್ಮನು ತನ್ನ ಗದಾಯುಧದಿಂದ ಬಡಿದು ಯಮದೇವರ ಕೈಯಲ್ಲಿದ್ದ ದಂಡವು ಕೆಳಗೆ ಬೀಳುವಂತೆ ಮಾಡಿದನು. ಆಗ ಯಮದೇವರು ಭಯದಿಂದ ನಡುಗಿದ ಕೈಯುಳ್ಳವರಾಗಿ ಹಿಂದಿರುಗಿ ಓಡಿಹೋದರು. ಯಮದೇವರು ಓಡಿ ಹೋದದ್ದನ್ನು ನೋಡಿ

ಭಯವುಳ್ಳವರಾಗಿ ಭಗವಂತನ ಬಲವನ್ನು ತಿಳಿದು ಯುದ್ಧಕ್ಕೆ ಬರಲೇ ಇಲ್ಲ. ಆಮೇಲೆ ರುದ್ರದೇವರು ತ್ರಿಶೂಲವನ್ನು ಹಿಡಿದುಕೊಂಡು ಎತ್ತಿನ ಮೇಲೆ ಕೂತುಕೊಂಡು ಅನೇಕ ಭೂತಗಳಿಂದ ಕೂಡಿಕೊಂಡು ಶ್ರೀಪರಮಾತ್ಮನೊಡನೆ ಯುದ್ಧಕ್ಕೆ ಬಂದರು. ಭಯಂಕರವಾದ ಯುದ್ಧವು ನಡೆದು ಕೊನೆಗೆ ರುದ್ರದೇವರು ಭಗವಂತನ ಮೇಲೆ ಶೂಲವನ್ನು ಬಿಟ್ಟರು. ಆಗ ಭಗವಂತನು ತನ್ನ ಕೌಮೋದಕೀ ಎಂಬ ಗದೆಯನ್ನು ಬಿಟ್ಟರು. ಅವು ಎರಡೂ ಜಗಳಾಡಿಕೊಂಡವು. ಭಗವಂತನ ಗದೆಯು ಶೂಲವನ್ನು ಸಮುದ್ರದಲ್ಲಿ ಬೀಳಿಸಿ ದೇವರ ಕೈಗೇ ಬಂದುಸೇರಿತು. ಶೂಲವು ರುದ್ರದೇವರ ಕೈಗೆ ಸೇರಿತು. ತರುವಾಯ ರುದ್ರದೇವರು ಖಡ್ಗವನ್ನು ಹಿಡಿದುಕೊಂಡು ವೃಷಭವನ್ನು ಪ್ರೇರಿಸುತ್ತಾ ಯುದ್ಧಕ್ಕೆ ಭಗವಂತನ ಸಮೀಪಕ್ಕೆ ಬಂದರು. ಆಗ ಬೇಗನೇ ಗರುಡದೇವರು ಎರಡು ಕೈಗಳಿಂದ ವೃಷಭದ ಕೊಂಬುಗಳಲ್ಲಿ ಹಿಡಿದು ರುದ್ರದೇವರಿಂದ ಸಹಿತವಾಗಿ ವೃಷಭವನ್ನು ನೂರು ಮಾರು ದೂರಕ್ಕೆ ಬಿಸಾಡಿದರು. ತರುವಾಯ ರುದ್ರದೇವರೂ ಎತ್ತಿನ ಮೇಲೆ ಕೂತುಕೊಂಡು ಪ್ರಮಥಗಣಗಳಿಂದ ಕೂಡಿಕೊಂಡು ಬಂದಂತೆಯೇ ಹೊರಟು ಹೋದರು.

ತರುವಾಯ ಇಂದ್ರದೇವರೇ ಕಿರೀಟಧಾರಿಯಾಗಿ ಬಾಣದ ಚೀಲವನ್ನು ಕಟ್ಟಿಕೊಂಡು ಧನುಸ್ಸನ್ನು ಧರಿಸಿಕೊಂಡು ಎತ್ತರವಾದ ಆನೆಯ ಮೇಲೆ ಕೂತುಕೊಂಡು ಪಾರಿಜಾತದ ಮರಕ್ಕಾಗಿ ಶಚಿಯ ಮಾತನ್ನು ಸ್ಮರಿಸಿಕೊಂಡು ಕೃಷ್ಣಪರಮಾತ್ಮನೊಡನೆ ಯುದ್ಧಕ್ಕೆ ಹೋದರು. ಆಗ ಪರಮಾತ್ಮನು ಶಂಖವನ್ನು ಊದಿದನು. ತರುವಾಯ ಭಯಂಕರವಾದ ಯುದ್ಧವು ನಡೆಯಿತು. ಕೊನೆಗೆ ಇಂದ್ರದೇವರು ಕೋಪಿಸಿಕೊಂಡು ತನ್ನ ಐರಾವತವನ್ನು ಗರುಡದೇವರ ಹತ್ತಿರ ಯುದ್ಧಮಾಡಲಿಕ್ಕೆ ಪ್ರೇರಿಸಿದರು. ಆಗ ಐರಾವತವು ಹೋಗಿ ನಾಲ್ಕು ದಂತಗಳಿಂದ ಗರುಡದೇವರ ಎದೆಯನ್ನು ಕುಕ್ಕಿತು. ಗರುಡದೇವರು ರೆಕ್ಕೆಗಳಿಂದಲೂ ಉಗುರು ಗಳಿಂದಲೂ ಐರಾವತವನ್ನು ಪೀಡಿಸಿದರು. ತರುವಾಯ ಇಂದ್ರದೇವರು ಎಲ್ಲರೂ ನೋಡುವಂತೆ ದಾನವರಿಗೆ ಭಯಂಕರವಾದ ವಜ್ರಾಯುಧವನ್ನು ತೆಗೆದು ದೇವರ ಮೇಲೆ ಹಾಕಿದರು. ಆಗ ಭಗವಂತನು ಬರುತ್ತಿರುವ ಇಂದ್ರದೇವರ ವಜ್ರಾಯುಧ ವನ್ನು ಎಡಕೈಯಲ್ಲಿ ಹಿಡಿದು ನಗಾಡಿದರು. ಆಯುಧರಹಿತರಾದ ಇಂದ್ರದೇವರು ಗರುಡದೇವರು ತನ್ನ ವಾಹನವನ್ನು ಪೀಡಿಸುತ್ತಿರಲು ಲಜ್ಜೆಯಿಂದ ಮುಖವನ್ನು ತಗ್ಗಿಸಿಕೊಂಡು ಯುದ್ಧವನ್ನು ಬಿಟ್ಟು ಹೊರಟುಹೋದರು.

ಈರೀತಿಯಾಗಿ ಓಡಿಹೋಗುತ್ತಿರುವ ಇಂದ್ರದೇವರನ್ನು ನೋಡಿ ಸತ್ಯಭಾಮಾ

ದೇವಿಯರು 'ವಜ್ರಾಯುಧಧಾರಿಯಾದ ದೇವೇಂದ್ರನೇ! ಹಿಂದೆ ತಿರುಗಿ ಯುದ್ಧಕ್ಕೆ ಬಾ. ಶಚಿಯ ಗಂಡನಾದ ನೀನು ಓಡಿಹೋಗುವುದು ಸರಿಯಲ್ಲವಲ್ಲಾ! ಐಶ್ವರ್ಯದಿಂದ ಅಹಂಕಾರಪಡುತ್ತಿರುವ ಗಂಡನು, ಮಹಾಪರಾಕ್ರಮಶಾಲಿಯೆಂದು ಗರ್ವವುಳ್ಳವಳಾದ ನಿನ್ನ ಹೆಂಡತಿಯಾದ ಶಚಿಯು, ಯುದ್ಧದಲ್ಲಿ ಸೋತು ಹೋದ ನಿನ್ನನ್ನು ಈಗಲೇ ಅವಮಾನ ಮಾಡುವಳು' ಎಂದು ಹೇಳಿದರು.

ಈರೀತಿಯ ಸತ್ಯಭಾಮಾದೇವಿಯರು ನಿಂದಿಸಿ ಹೇಳಿರುವ ಮಾತನ್ನು ಕೇಳಿ ಇಂದ್ರದೇವರು ಹಿಂದೆ ತಿರುಗಿದವರಾಗಿ ಮಂದಹಾಸವನ್ನು ಮಾಡುತ್ತಿರುವ ಸತ್ಯಭಾಮಾದೇವಿಯರೊಡನೆ 'ದೇವಿ! ಯಾವಾತನು ದೇವತೆಗಳೂ ಅಸುರರೂ ಸರ್ಪಗಳೂ ಯಕ್ಷರೂ ರಾಕ್ಷಸರೂ ಸಿದ್ಧರೂ ಗಂಧರ್ವರೂ ಕಿನ್ನರರೂ, ಪಿಶಾಚಿಗಳೂ ಎಲ್ಲರನ್ನೂ ಸೃಷ್ಟಿಮಾಡಿರುವನೋ ಅಂತಹ ಮೂರುಲೋಕಗಳಿಗೂ ಗುರುವಾದ ಅವನೊಡನೆ ಯುದ್ಧರಂಗದಲ್ಲಿ ವಿರೋಧ ಮಾಡಿದವನು, ಯಾರು ಪರಾಜಯವನ್ನು ಹೊಂದಲಾರನು? ಯಜ್ಞದಲ್ಲಿ ಹವಿರ್ಭಾಗವನ್ನು ಸ್ವೀಕರಿಸುವ ಮಹಾದೇವಿಯೇ! ಅಲ್ಪಬಲವುಳ್ಳ ದನದ ಕರುವು ದನದ ಮೊಲೆಯನ್ನು ಕುಡಿಯುವ ಸಮಯದಲ್ಲಿ ತನ್ನ ತಲೆಯಿಂದ ತಾಯಿಗೆ ಹಾಯುತ್ತಾ ವಿರೋಧವನ್ನು ಮಾಡುವುದೋ ಅದೇ ರೀತಿಯಾಗಿ ನಾವು ಭಗವಂತನಲ್ಲಿ ಹುಡುಗಾಟಿಕೆಯನ್ನು ತೋರಿಸುವೆವು' ಎಂದು ಹೇಳಿ ಶ್ರೀಭಗವಂತನಿಗೆ ನಮಸ್ಕರಿಸಿ ಕೈಮುಗಿದುಕೊಂಡು 'ಜಗತ್ತಿಗೆ ಸ್ವಾಮಿಯಾದ ಭಗವಂತನೇ! ನನ್ನ ಸರ್ವ ಅಪರಾಧವನ್ನು ಕ್ಷಮಿಸು. ಶರಣಾಗತವತ್ಸಲನೇ! ನಿನ್ನನ್ನೇ ನಂಬಿರುವ ಬಹುಮೂರ್ಖನಾಗಿರುವ ಕ್ಷಮಾಗುಣರಹಿತನಾದ ನನ್ನನ್ನು ಕೈಬಿಡಬಾರದು. ಐರಾವತವೂ, ವಜ್ರಾಯುಧವೂ, ಪಾರಿಜಾತದ ಮರವೂ, ಈ ಅಮರಾವತಿಯೂ, ಎಲ್ಲವೂ ನಿನ್ನ ಅಧೀನ. ನಾನು ನಿನ್ನ ಅಪ್ಪಣೆಯಿಂದ ಇರುವ ಭೃತ್ಯನು. ಇವುಗಳಲ್ಲಿ ಯಾವುದನ್ನು ಬೇಕಾದರೂ ಇಚ್ಛಾನುಸಾರವಾಗಿ ತೆಗೆದುಕೊಂಡು ಹೋಗಬಹುದು. ಆದರೂ ನಾನು ನಿನ್ನೊಡನೆ ವಿರೋಧವನ್ನು ಮಾಡಿದ್ದಕ್ಕೆ ಕಾರಣವಿಷ್ಟೇ. ಭಗವಂತನೇ! ನೀನೀಗ ಮನುಷ್ಯಲೋಕದಲ್ಲಿ ವಿಹರಿಸುತ್ತಿರುವಿ. ನೀನು ಅಲ್ಲಿಗೆ ಪಾರಿಜಾತವೃಕ್ಷವನ್ನು ತೆಗೆದುಕೊಂಡು ಹೋದರೆ ಭೂಮಿಗೂ ಸ್ವರ್ಗಕ್ಕೂ ವಿಶೇಷವಿಲ್ಲವೆಂದಾಗುವುದು. ಆದುದರಿಂದ ನಾನು ನಿನ್ನೊಡನೆ ವಿರೋಧವನ್ನು ಮಾಡಿದೆನು. ಆದರೆ ನಿನಗೆ ತಿಳಿಯದ ವಿಷಯವೊಂದೂ ಇರುವುದಿಲ್ಲ. ನಾನು ಮಾಡಿದ್ದನ್ನು ಕ್ಷಮಿಸಬೇಕು' ಎಂದು ಹೇಳಿದರು. ಅದಕ್ಕೆ ಭಗವಂತನು 'ದೇವೇಂದ್ರ! ನಿನಗೆಲ್ಲಿ ಅಪರಾಧ

ಮಾಡಲಿಕ್ಕೆ ಶಕ್ತಿಯಿದೆ? ನಿನ್ನ ಅಂತರ್ಯಾಮಿಯಾಗಿದ್ದುಕೊಂಡು ನಾನೇ ನಿನ್ನಿಂದ ಅಪರಾಧವನ್ನು ಮಾಡಿಸಿದೆನು. ಆದುದರಿಂದ ನೀನು ಮಾಡಿದ ಒಳ್ಳೇದೋ ಕೆಟ್ಟದ್ದೋ ಅದಕ್ಕೆ ನೀನು ಸ್ವತಂತ್ರ ಕಾರಣವಲ್ಲ. ನಾನೇ ಸ್ವತಂತ್ರಕಾರಣನು. ಆದುದರಿಂದ ನಾನೇ ಮಾಡಿದ್ದಾಯಿತು. ನಾನು ಭೂಮಿಯಿಂದ ವೈಕುಂಠಲೋಕಕ್ಕೆ ಹೋದಮೇಲೆ ನನ್ನ ಆಜ್ಞೆಯಿಂದ ಪಾರಿಜಾತಮರವು ತಾನಾಗಿಯೇ ನಂದನವನಕ್ಕೆ ಬಂದು ಸೇರುವುದು' ಎಂದು ಹೇಳಿದನು.

ತರುವಾಯ ಇಂದ್ರದೇವರು ಕೃಷ್ಣಪರಮಾತ್ಮನನ್ನೂ, ಸತ್ಯಭಾಮದೇವಿಯ ರನ್ನೂ, ಗರುಡದೇವರನ್ನೂ ಸಂತೋಷಪಡಿಸಿ ಶ್ರೀಭಗವಂತನೊಡನೆ ನನ್ನ ಮಗನಾದ ನಿಮ್ಮ ಭಾವನಾದ ಅರ್ಜುನನನ್ನು ರಕ್ಷಿಸಬೇಕೆಂದೂ ಪುನಃ ಪುನಃ ಪ್ರಾರ್ಥಿಸಿ ಅನುಜ್ಞೆಯನ್ನು ಪಡೆದು ತನ್ನ ವಜ್ರವನ್ನುಪಡೆದು ದಿಕ್‌ಪಾಲಕರಿಂದ ಕೂಡಿಕೊಂಡು ಹೊರಟು ಹೋದರು. ಶ್ರೀಕೃಷ್ಣಪರಮಾತ್ಮನು ಇಂದ್ರದೇವರನ್ನು ಕಳುಹಿಸಿ ಗರುಡದೇವ ರೊಡನೆ ದ್ವಾರಕಾಪಟ್ಟಣಕ್ಕೆ ಹೋಗೋಣವೆಂದನು. ಗರುಡದೇವರು ಶ್ರೀಕೃಷ್ಣ ಪರಮಾತ್ಮನನ್ನೂ ಸತ್ಯಭಾಮಾದೇವಿಯರನ್ನೂ ಪಾರಿಜಾತದ ಮರವನ್ನು ಶ್ರಮವಿಲ್ಲದೆ ಹೊತ್ತುಕೊಂಡು ಹೋದರು. ಶ್ರೀಭಗವಂತನು ಅಲಂಕೃತವಾದ ದ್ವಾರಕಾಪಟ್ಟಣ ವನ್ನು ಪ್ರವೇಶಿಸಿದನು. ಭಗವಂತನು ಸುಧರ್ಮಾ ಎಂಬ ಸಭೆಗೆ ಪ್ರವೇಶಿಸಿ ದೊಡ್ಡವ ರಿಗೆಲ್ಲಾ ಲೋಕಶಿಕ್ಷೆಗಾಗಿ ನಮಸ್ಕರಿಸಿ ಬಂಗಾರದ ಆಸನದಲ್ಲಿ ಕೂತುಕೊಂಡು ಸ್ವರ್ಗದಲ್ಲಿ ಇಂದ್ರದೇವರಂತೆ ಶೋಭಿಸಿದನು. ಸತ್ಯಭಾಮಾದೇವಿಯರ ಮನೆಯ ಅಂಗಳದಲ್ಲಿ ಪಾರಿಜಾತವೃಕ್ಷವನ್ನಿಟ್ಟನು. ಎಲ್ಲಾ ಯಾದವಸ್ತ್ರೀಯರೂ ಅನೇಕ ಸ್ತ್ರೀಯರನ್ನು ಕರೆದು ಕೊಂಡು ಬಂದಿರುವ ಪರಮಾತ್ಮನನ್ನು ನೋಡಲು ಬಂದರು. ರುಕ್ಮಿಣೀದೇವಿಯರೇ ಮೊದಲಾದ ದೇವರ ಪತ್ನಿಯರೂ ಅಲಂಕಾರ ಮಾಡಿಕೊಂಡು ಬಂದರು. ಬಲರಾಮದೇವರ ಪತ್ನಿಯಾದ ರೇವತೀದೇವಿಯೂ, ದುರ್ಗಾದೇವಿಯೂ, ಸುಭದ್ರೆಯೂ, ಭಗವಂತನನ್ನು ಸತ್ಯಭಾಮಾದೇವಿಯರನ್ನು ಪಾರಿಜಾತ ಮರವನ್ನು ನೋಡಲು ಬಂದರು.



# ಹಂಸಡಿಭಿಕರ ಜನನ [1]

ಪೂರ್ವದಲ್ಲಿ ಸಾಲ್ವದೇಶದಲ್ಲಿ ಬ್ರಹ್ಮದತ್ತನೆಂಬ ರಾಜನಿದ್ದನು. ಅವನು ಸರ್ವಪ್ರಾಣಿಗಳಲ್ಲಿಯೂ ದಯೆಯುಳ್ಳವನಾಗಿದ್ದನು. ಪಂಚಯಜ್ಞಗಳನ್ನು ಮಾಡುತ್ತಿದ್ದನು. ವೇದಗಳನ್ನು ಅಧ್ಯಯನ ಮಾಡಿದ್ದನು. ಯಜ್ಞಮಾಡುವ ಸ್ವಭಾವವುಳ್ಳವನಾಗಿದ್ದನು. ಅವನಿಗೆ ರೂಪವತಿಯರಾದ ಗುಣವತಿಯರಾದ ಇಬ್ಬರು ಹೆಂಡತಿಯರಿದ್ದರು. ಆದರೆ ಅವರಲ್ಲಿ ಮಕ್ಕಳಾಗಲಿಲ್ಲ. ರಾಜನು ಇಬ್ಬರು ಪತ್ನಿಯರಿಂದ ಸಹಿತನಾಗಿ ಸಂತೋಷದಿಂದ ಇದ್ದನು. ಅವನಿಗೆ ಮಿತ್ರಸಹನೆಂದು ಹೆಸರುಳ್ಳ ಬ್ರಾಹ್ಮಣನೂ ಮಿತ್ರನಾಗಿದ್ದನು. ಆ ಬ್ರಾಹ್ಮಣನಿಗೂ ಮಕ್ಕಳಿರಲಿಲ್ಲ. ರಾಜನು ತನ್ನ ಇಬ್ಬರು ಹೆಂಡತಿಯರಿಂದ ಸಹಿತನಾಗಿ ಮಕ್ಕಳಾಗಬೇಕೆಂಬ ಆಸೆಯಿಂದ ಹತ್ತುವರ್ಷಕಾಲ ರುದ್ರದೇವರನ್ನು ಪೂಜಿಸಿದನು. ಆ ಮಿತ್ರ ಸಹನೆಂಬ ಬ್ರಾಹ್ಮಣನು ಮಗನು ಹುಟ್ಟುವುದಕ್ಕಾಗಿ ವಿಷ್ಣುವನ್ನು ಉದ್ದೇಶಿಸಿಕೊಂಡು ಸತ್ರಯಾಗವನ್ನು ಮಾಡಿದನು. ರಾಜನಿಂದ ಪೂಜಿತರಾದ ರುದ್ರದೇವರು ಸ್ವಪ್ನದಲ್ಲಿ ರಾಜನಿಗೆ ಕಾಣಿಸಿಕೊಂಡರು. 'ರಾಜನೇ! ನಾನು ಪ್ರೀತಿಯುಳ್ಳವನಾಗಿರುವೆನು. ಬೇಕಾದ ವರಗಳನ್ನು ಕೇಳು' ಎಂದು ಹೇಳಿದರು. ಆಗ ರಾಜನು ಮಂದಹಾಸವನ್ನು ಮಾಡುತ್ತಾ 'ನನಗಿಬ್ಬರು ಮಕ್ಕಳು ಹುಟ್ಟಬೇಕು' ಎಂದು ಕೇಳಿಕೊಂಡನು. ತರುವಾಯ ರುದ್ರದೇವರು ಮರೆಯಾದರು.

ರಾಜನಿಗೆ ಸ್ವಪ್ನದಿಂದ ಎಚ್ಚರಿಕೆಯಾಯಿತು. ಮಿತ್ರಸಹನೆಂಬ ಬ್ರಾಹ್ಮಣನು ಐದುವರ್ಷ ಪರಮಾತ್ಮನನ್ನು ಪೂಜಿಸಿದನು. ಅವನಿಂದ ಪೂಜಿಸಲ್ಪಟ್ಟ ಪರಮಾತ್ಮನು ತನ್ನಂತೆ ಇರುವ ಮಗನಾಗುವಂತೆ ಬ್ರಾಹ್ಮಣನಿಗೆ ವರವನ್ನು ಕೊಟ್ಟನು. ರುದ್ರದೇವರ ಅನುಗ್ರಹದಿಂದ ರಾಜಪತ್ನಿಯರು ಗರ್ಭಿಣಿಯಾದರು. ಬ್ರಾಹ್ಮಣನ ಪತ್ನಿಯು ಪರಮಾತ್ಮನ ಅನುಗ್ರಹದಿಂದ ಗರ್ಭಿಣಿಯಾದಳು. ತರುವಾಯ ರಾಜಪತ್ನಿಯೂ ಬ್ರಾಹ್ಮಣಪತ್ನಿಯೂ ಮಕ್ಕಳನ್ನು ಹಡೆದರು. ರಾಜನು ಮಕ್ಕಳಿಗೆ ಜಾತಕರ್ಮಾದಿಗಳನ್ನು ಮಾಡಿದನು. ಎಲ್ಲಾ ಬ್ರಾಹ್ಮಣರಿಗೂ ಬೇಕಾದಷ್ಟು ಹಣವನ್ನು ದಾನಮಾಡಿದನು. ಆ ಬ್ರಾಹ್ಮಣನು ಸಾಕ್ಷಾತ್ ಪರಮಾತ್ಮನಂತೆ ಇರುವ ಮಗನನ್ನು ಪಡೆದನು. ಮಗುವಿಗೆ ಜಾತಕರ್ಮಾದಿಗಳನ್ನು ಮಾಡಿದನು. ರಾಜಪುತ್ರರೂ ಬ್ರಾಹ್ಮಣಪುತ್ರರೂ ಸಮಾನ ವಯಸ್ಕರಾಗಿದ್ದರು. ವೇದಾಧ್ಯಯನ ಮಾಡಿದರು. ತರ್ಕಶಾಸ್ತ್ರವನ್ನು ಓದಿದರು.

1. ಹ.ವಂ.ಭ.ಪ. ಅ–103, 104

ಅವರಲ್ಲಿ ಜ್ಯೇಷ್ಠನಾದ ರಾಜಪುತ್ರನಿಗೆ ಹಂಸನೆಂಬ ಹೆಸರು. ಅವನ ತಮ್ಮನಿಗೆ ಡಿಭಿಕನೆಂದು ಹೆಸರು. ಆ ಬ್ರಾಹ್ಮಣಪುತ್ರನಿಗೆ ಜನಾರ್ದನ ಎಂದು ಹೆಸರು. ಅವರು ಮೂರು ಜನರೂ ಪರಸ್ಪರವಾಗಿ ಸ್ನೇಹಿತರಾಗಿದ್ದರು.



## ಹಂಸಾದಿಗಳ ತಪಸ್ಸು [1]

ಹಂಸಡಿಭಿಕರು ರುದ್ರದೇವರ ಅನುಗ್ರಹದಿಂದ ಹುಟ್ಟಿದವರು. ರುದ್ರದೇವರ ತಪಸ್ಸನ್ನು ಮಾಡಬೇಕೆಂದು ಬಯಸಿದರು. ಹಿಮವತ್ಪರ್ವತದ ಪಾರ್ಶ್ವಕ್ಕೆ ಹೋಗಿ ಚೆನ್ನಾಗಿ ತಪಸ್ಸನ್ನು ಮಾಡಿದರು. ತಮಗೆ ಪರಾಕ್ರಮವುಂಟಾಗಬೇಕು. ಅಸ್ತ್ರಜ್ಞಾನವು ಬರಬೇಕು ಎಂದು ಆಸೆಯುಳ್ಳವರಾಗಿ ಏಕಾಗ್ರ ಮನಸ್ಸುಳ್ಳವರಾಗಿ ಗಾಳಿ ನೀರು ಮಾತ್ರ ಆಹಾರವುಳ್ಳವರಾಗಿ ರುದ್ರದೇವರನ್ನು ಸ್ತೋತ್ರಮಾಡುತ್ತಾ ರುದ್ರದೇವರನ್ನು ಮನಸ್ಸಿನಲ್ಲಿ ಇಟ್ಟುಕೊಂಡು ತಪಸ್ಸು ಮಾಡಿದರು. ಅಹಂಕಾರ ಮಮಕಾರಗಳನ್ನು ಬಿಟ್ಟು ಮೌನವ್ರತವುಳ್ಳವರಾಗಿ ಐದುವರ್ಷಕಾಲ ತಪಸ್ಸು ಮಾಡಿದರು. ತರುವಾಯ ರುದ್ರದೇವರು ಅವರ ಮೇಲೆ ಪ್ರೀತಿಯುಳ್ಳವರಾಗಿ ಹುಲಿಯಚರ್ಮವನ್ನು ಧರಿಸಿದ ಮೂರು ಕಣ್ಣುಗಳುಳ್ಳ, ಶೂಲವನ್ನು ಹಿಡಿದಿರುವ, ಅರ್ಧಚಂದ್ರನನ್ನು ಶಿರಸ್ಸಿನಲ್ಲಿ ಧರಿಸಿದ ರೂಪದಿಂದ ಪ್ರತ್ಯಕ್ಷರಾದರು. ಹಂಸಡಿಭಕರಿಬ್ಬರೂ ರುದ್ರದೇವರನ್ನು ನೋಡಿ ಸಂತೋಷಯುಕ್ತವಾದ ಮನಸ್ಸುಳ್ಳವರಾಗಿ ನಮಸ್ಕಾರ ಮಾಡಿದರು. ರುದ್ರದೇವರು ಬೇಕಾದ ವರಗಳನ್ನು ಕೇಳಿಕೊಳ್ಳುವಂತೆ ಹೇಳಿದರು.

ಆಗ ಹಂಸಡಿಭಿಕರು 'ಪೂಜ್ಯರೇ! ತಾವು ಪ್ರೀತರಾಗುವಿರಾದರೆ ನಾವಿಬ್ಬರೂ ದೇವಾಸುರ ಯಕ್ಷಗಂಧರ್ವದಾನವರಿಂದ ಪರಾಜಯವುಳ್ಳವರಾಗಬಾರದು. ಇದು ನಮಗೆ ಬೇಕಾದ ಮೊದಲಿನ ವರವು. ಎರಡನೇ ವರದಿಂದ ನಮಗೆ ಮಾಹೇಶ್ವರ, ರೌದ್ರ, ಬ್ರಹ್ಮಾಸ್ತ್ರ ಮೊದಲಾದ ಅಸ್ತ್ರಗಳೂ, ಅಭೇದ್ಯವಾದ ದಿವ್ಯವಾದ ಕವಚವೂ ಧನುಸ್ಸೂ ಸಿಗಬೇಕು. ಮತ್ತು ಸರ್ವದಾ ನಮ್ಮನ್ನು ರಕ್ಷಣೆ ಮಾಡಲಿಕ್ಕೆ ಯುದ್ಧದಲ್ಲಿ ಸಹಾಯ ಮಾಡಲಿಕ್ಕೆ ಎರಡು ಭೂತಗಳನ್ನೂ ಕೊಡಬೇಕು' ಎಂದು ಕೇಳಿಕೊಂಡರು. ಆದಕ್ಕೆ ರುದ್ರದೇವರು ಹಾಗೆಯೇ ಆಗಲಿ ಎಂದು ಹೇಳಿ ಕುಂಡೋದರ, ವಿರೂಪಾಕ್ಷ ಎಂದು ಹೆಸರುಳ್ಳ ಎರಡು ಭೂತಗಳೊಡನೆ 'ನೀವು ಯುದ್ಧಕ್ಕೆ ಹೋಗುವ ಈ

1. ಹ.ವಂ.ಭವಿಷ್ಯಪರ್ವ ಅ–105

ಇಬ್ಬರು ಬಲಿಷ್ಠರಾದ ರಾಜಪುತ್ರರಿಗೆ ಸಹಾಯಮಾಡಿರಿ' ಎಂದು ಹೇಳಿ ಅಂತರ್ಧಾನವನ್ನು ಹೊಂದಿದರು.

ತರುವಾಯ ಪರಾಕ್ರಮಶಾಲಿಗಳಾದ ಹಂಸಡಿಭಿಕರು ಅಸ್ತ್ರಜ್ಞಾನಿಗಳಾಗಿ ಶಸ್ತ್ರಜ್ಞಾನಿಗಳಾಗಿ, ಕವಚಧಾರಿಗಳಾಗಿ, ದೇವದಾನವರಿಂದ ಪರಾಜಯ ಶೂನ್ಯರಾಗಿ, ರುದ್ರದೇವರಲ್ಲಿ ಅತ್ಯಂತ ಭಕ್ತಿಯುಳ್ಳವರಾಗಿ, ರುದ್ರದೇವರಿಗೆ ನಿತ್ಯವೂ ಉತ್ಸವವನ್ನು ಮಾಡುವವರಾಗಿ, ಮೈಯೆಲ್ಲಾ ಭಸ್ಮವನ್ನು ಹಚ್ಚಿಕೊಂಡವರಾಗಿ, ಮೂರು ಅಡ್ಡನಾಮಗಳನ್ನು ಹಚ್ಚಿಕೊಂಡವರಾಗಿ, ಜಟೆಯನ್ನು ಧರಿಸಿಕೊಂಡವರಾಗಿ ಸರ್ವಾಂಗಗಳಲ್ಲಿಯೂ ರುದ್ರಾಕ್ಷಿಯನ್ನು ಧರಿಸುವವರಾಗಿ ಹುಲಿಯ ಚರ್ಮವನ್ನು ಧರಿಸಿದವರಾಗಿ ರುದ್ರದೇವರನ್ನು ಸ್ತೋತ್ರಮಾಡುತ್ತಾ ರುದ್ರದೇವರಂತೆಯೇ ಕಾಣಿಸುತ್ತಾ ಮನೆಗೆ ಹೋಗಿ ತಂದೆಯ ತಾಯಿಯ, ತಂದೆಯಮಿತ್ರನಾದ ಮಿತ್ರಸಹನೆಂಬ ಬ್ರಾಹ್ಮಣನ ಪಾದಗಳಿಗೆ ನಮಸ್ಕರಿಸಿದರು. ಧರ್ಮದಲ್ಲಿಯೇ ಮನಸ್ಸುಳ್ಳ ಮಿತ್ರಸಹನ ಮಗನಾದ ಜನಾರ್ಧನನು ವಿದ್ಯೆಯಲ್ಲಿ ಪಾರಂಗತನಾದನು. ಯಾವಾಗಲೂ ಸರ್ವೇಂದ್ರಿಯ ಪ್ರೇರಕನಾದ ಶ್ರೀವಿಷ್ಣುವನ್ನು ಸರ್ವದಾ ಧ್ಯಾನಮಾಡುತ್ತಿದ್ದನು. ಆಮೇಲೆ ಹಂಸನೂ ಡಿಭಿಕನೂ ಮದುವೆಯಾದರು. ಜನಾರ್ದನನೂ ಮದುವೆ ಮಾಡಿಕೊಂಡನು. ಅವರು ಮೂರುಜನರೂ ಯಜ್ಞಗಳನ್ನು ಮಾಡುತ್ತಾ ಪಂಚಯಜ್ಞಗಳಲ್ಲಿ ಆಸಕ್ತರಾಗಿ ತಮ್ಮ ಪತ್ನಿಯರಲ್ಲಿ ಆಸಕ್ತರಾಗಿ ಗುರುಗಳ ಸೇವೆಯನ್ನು ಮಾಡುತ್ತಾ ಇದ್ದರು.



## ಹಂಸಡಿಭಿಕರು ಮೃಗಬೇಟೆಗೆ ಹೋದದ್ದು [1]

ಒಂದು ದಿವಸದಲ್ಲಿ ಹಂಸಡಿಭಿಕರು ಜನಾರ್ದನನಿಂದ ಕೂಡಿಕೊಂಡು ರಥಗಳಿಂದಲೂ ಆನೆಗಳಿಂದಲೂ ಕುದುರೆಗಳಿಂದಲೂ ಸಹಿತರಾಗಿ ಮೃಗಬೇಟೆಯಾಡಲಿಕ್ಕೆ ಕಾಡಿಗೆ ಹೋದರು. ತೀಕ್ಷ್ಣಬಾಣಗಳಿಂದ ಸಿಂಹಗಳನ್ನು ಹುಲಿಗಳನ್ನು ಕಾಡುಹಂದಿಗಳನ್ನು ಇನ್ನೂ ಅನೇಕ ದುಷ್ಟಮೃಗಗಳನ್ನು ಕೊಂದರು. ನಾನಾ ವಿಧವಾಗಿ ಕೂಗುತ್ತಾ ಬೇಡರಿಂದ ಕೂಡಿಕೊಂಡು ಮೃಗಬೇಟೆಯಾಡಿದರು. ಆಮೇಲೆ ಮಧ್ಯಾಹ್ನವಾಗಲು ಶ್ರಮವನ್ನು ಹೊಂದಿದರು. 'ನಮಗಿನ್ನು ಮೃಗಬೇಟೆಯು ಸಾಕು. ಶ್ರಮವಾಗಿದೆ' ಎಂದು ಹೇಳಿ ಪುಷ್ಕರ ಎಂದು ಹೆಸರುಳ್ಳ ಸರೋವರದ ಬಳಿಗೆ

1. ಹ.ವಂ.ಭ.ಪ. ಅ–106

ಹೋದರು. ಮುನಿಗಳಿಂದಲೂ, ಸಿದ್ಧರಿಂದಲೂ ಸೇವಿತರಾದ ಸರೋವರದ ಸಮೀಪಕ್ಕೆ ಹೋಗಿ ಒಳ್ಳೇ ಗಾಳಿಯು ಬರುವ ಆ ಸ್ಥಳದಲ್ಲಿ ಶ್ರಮಪರಿಹರಿಸಿಕೊಳ್ಳುತ್ತಾ ಕೂತುಕೊಂಡರು. ಆಮೇಲೆ ಎಲ್ಲಾ ಜನರೂ ಬಂದು ಸರೋವರದಲ್ಲಿ ಸ್ನಾನಮಾಡಿ ಶ್ರಮಪರಿಹರಿಸಿಕೊಂಡು ಸರೋವರದ ತೀರದಲ್ಲಿಯೇ ಇದ್ದರು. ಜನಾರ್ದನನಿಂದ ಸಹಿತರಾದ ಹಂಸಡಿಭಿಕರು ಸರೋವರದ ಒಂದು ಪಾರ್ಶ್ವದಲ್ಲಿ ಶ್ರಮಪರಿಹರಿಸಿ ಕೊಂಡು ಸುಖವಾಗಿ ಕೂತಿದ್ದವರು ಮುನಿಗಳು ಹೇಳುತ್ತಿರುವ ಸುಸ್ವರವಾದ ವೇದಮಂತ್ರವನ್ನು ಕೇಳಿದರು. ಮಾಧ್ಯಂದಿನ ಸವನವನ್ನು ಮಾಡುತ್ತಿರುವ ಮಂತ್ರವನ್ನು ಕೇಳಿದರು. ಆ ವೇದ ಧ್ವನಿಯನ್ನು ಕೇಳಿ ಸಂತೋಷಪಟ್ಟ ರಾಜಪುತ್ರರು ಮೃಗಗಳಿಂದ ಸಹಿತವಾದ ಮಹಾಸೈನ್ಯವನ್ನು ಅಲ್ಲಿಯೇ ಬಿಟ್ಟು ಮಹಾಧನುಸ್ಸುಗಳನ್ನು ಕೆಲವು ಬಾಣಗಳನ್ನೂ ಧರಿಸಿದರು. ಅವರೂ ಜನಾರ್ದನನೂ ಕಾಲುನಡೆಯಿಂದ ವೇದಧ್ವನಿಯು ಕೇಳಿಸುವಲ್ಲಿಗೆ ಹೋದರು.

ಅಲ್ಲಿ ಮಹರ್ಷಿಗಳಾದ ಕಾಶ್ಯಪರು ಜಪಹೋಮಗಳಲ್ಲಿ ಆಸಕ್ತರಾದ ಮುನಿಗಳಿಂದ ಕೂಡಿಕೊಂಡು ವೈಷ್ಣವಯಾಗವನ್ನು ಮಾಡುತ್ತಿದ್ದರು. ಜನಾರ್ದನನೂ ಹಂಸಡಿಭಿಕರೂ, ಯಜ್ಞಶಾಲೆಗೆ ಪ್ರವೇಶಿಸಿ ಅಲ್ಲಿ ಇದ್ದ ಮುನಿಗಳಿಗೆ ನಮಸ್ಕರಿಸಿದರು. ಶಿಷ್ಯರಿಂದ ಸಹಿತರಾದ ಅಲ್ಲಿ ಇದ್ದ ಮುನಿಗಳು ಬಂದಿರುವ ಆ ಮೂರೂ ಜನರಿಗೂ ಅರ್ಘ್ಯಪಾದ್ಯಾದಿಗಳಿಂದ ಪೂಜಿಸಿದರು. ಹಂಸಡಿಬಿಕರೂ ಜನಾರ್ದನನೂ ಅವರು ಮಾಡಿದ ಪೂಜೆಯನ್ನು ಸ್ವೀಕರಿಸಿ ಪ್ರೀತಿಯುಳ್ಳವನಾಗಿ ಸುಖವಾಗಿ ಕೂತುಕೊಂಡರು. ತರುವಾಯ ಹಂಸನು ಆ ಮುನಿಗಳೊಡನೆ 'ಮುನಿಶ್ರೇಷ್ಠರೇ! ನನ್ನ ತಂದೆಯು ರಾಜಸೂಯಯಾಗವನ್ನು ಮಾಡುವರು. ನೀವು ಈ ಯಾಗವು ಮುಗಿದ ಮೇಲೆ ಅಲ್ಲಿಗೆ ಬರಬೇಕು. ನಾವು ದಿಗ್ವಿಜಯವನ್ನು ಮಾಡಿ ತಂದೆಯಿಂದ ರಾಜಸೂಯಯಾಗವನ್ನು ಮಾಡಿಸುವೆವು. ಅಲ್ಲಿಗೆ ನೀವೆಲ್ಲರೂ ಸಪರಿವಾರರಾಗಿ ಬನ್ನಿರಿ. ನಾವೀಗಲೇ ದಿಕ್ಕುಗಳನ್ನು ಜಯಿಸುವೆವು. ನಾವಿಲ್ಲಿ ಇದ್ದುಕೊಂಡೇ ಸೈನಿಕರಿಂದಲೇ ದಿಗ್ವಿಜಯವನ್ನು ಮಾಡಿಸಲಿಕ್ಕೆ ಸಮರ್ಥರು. ನಮ್ಮ ಎದುರು ನಿಲ್ಲಲಿಕ್ಕೆ ದೇವತೆಗಳೂ ದಾನವರೂ ಸಮರ್ಥರಲ್ಲ. ಕೈಲಾಸವಾಸಿಯಾದ ರುದ್ರದೇವರಿಂದ ವರವನ್ನು ಪಡೆದಿರುವೆವು. ಶತ್ರುಗಳಿಂದ ಪರಾಜಯ ಶೂನ್ಯರಾಗಿರುವೆವು. ನಾನಾವಿಧ ಅಸ್ತ್ರಗಳನ್ನು ಪಡೆದಿರುವೆವು' ಎಂದು ಹೇಳಿ ಸುಮ್ಮನೆಯಾದನು. ಆಗ ಮುನಿಗಳು 'ರಾಜಶ್ರೇಷ್ಠನೇ! ಅಲ್ಲಿ ಯಾಗವು ನಡೆಯುವುದಾದರೆ ಅಲ್ಲಿಗೆ ಬರುವೆವು. ಇಲ್ಲದಿದ್ದರೆ ಇಲ್ಲಿಯೇ ಇರುವೆನು' ಎಂದರು.

# ಹಂಸಡಿಭಿಕರು ದುರ್ವಾಸರನ್ನು ಅವಮಾನಮಾಡಿದ್ದು [1]

ತರುವಾಯ ಹಂಸಡಿಭಿಕರು ಅಲ್ಲಿಂದ ತಮ್ಮ ದೇಶಕ್ಕೆ ಹೋಗಲು ಇಚ್ಛಿಸಿ ದುರ್ವಾಸರು ಇದ್ದ ಪುಷ್ಕರದ ಉತ್ತರದಿಕ್ಕಿಗೆ ಹೋದರು. ಅಲ್ಲಿ ದುರ್ವಾಸರು ಅನೇಕ ತನ್ನ ಶಿಷ್ಯರಿಂದ ಸಹಿತರಾಗಿ ಭಗವಂತನನ್ನು ಧ್ಯಾನಮಾಡುವವರಾಗಿದ್ದರು. ಎಲ್ಲರೂ ಕೌಪೀನ ಮಾತ್ರಧಾರಿಗಳಾದ ಸನ್ಯಾಸಿಗಳು. ದುರ್ವಾಸರು ಕೋಪಬಂದರೆ ಎಲ್ಲಾ ಜಗತ್ತನ್ನು ನಾಶಮಾಡಲಿಕ್ಕೆ ಸಮರ್ಥರಾದರು. ಧ್ಯಾನಮಾಡುತ್ತಾ ಕೂತಿದ್ದರು. ರುದ್ರದೇವರ ಅವತಾರಭೂತರು. ಪರಮಹಂಸಸನ್ಯಾಸಿಗಳು. ಕೆಂಪಾದ ಕೌಪೀನ ವನ್ನು ಧರಿಸಿಕೊಂಡು ಇರುತ್ತಿದ್ದರು. ಆ ದುರ್ವಾಸರನ್ನು ನೋಡಿ ಹಂಸಡಿಭಿಕರು 'ಇವನು ಯಾರು ದೊಡ್ಡ ಭೂತನು. ಕಾವಿಶಾಟಿಯನ್ನು ಧರಿಸಿದವನು. ವರ್ಣಬಾಹ್ಯನು. ಗೃಹಸ್ಥಾಶ್ರಮವನ್ನು ಬಿಟ್ಟು ಇದೇನು ಆಶ್ರಮ? ಗೃಹಸ್ಥಾಶ್ರಮವೇ ಶ್ರೇಷ್ಠವಾದ ಆಶ್ರಮವು. ಗೃಹಸ್ಥನೇ ಪ್ರಾಣಿಗಳಿಗೆ ತಂದೆ ತಾಯಿ. ಆ ಆಶ್ರಮವನ್ನು ಬಿಟ್ಟು ಇರುವವನೇ ಮೂರ್ಖನು. ಇವನು ಹುಚ್ಚನೇ1 ಅಥವಾ ಮೂರ್ಖನೇ! ಧ್ಯಾನ ಮಾಡುವವನಂತೆ ಕಣ್ಣುಮುಚ್ಚಿಕೊಂಡು ವಂಚನೆ ಮಾಡುತ್ತಿರುವನು. ಇವರೆಲ್ಲರೂ ಏನು ಧ್ಯಾನ ಮಾಡುವಂತೆ ಇರುವರು? ಮಂದಬುದ್ಧಿಗಳಾದ ಇವರೆಲ್ಲ ರನ್ನೂ ಗೃಹಸ್ಥಾಶ್ರಮಿಗಳನ್ನಾಗಿ ಮಾಡುವೆವು. ಇವರನ್ನು ಶಾಸನ ಮಾಡುವವರು ಯಾರೂ ಇಲ್ಲವೇ! ಇವರನ್ನು ಸರಿಯಾದ ಧರ್ಮದ ಮಾರ್ಗದಲ್ಲಿ ಸ್ಥಾಪಿಸಿ ಸುಖವನ್ನು ಹೊಂದುವ' ಎಂದು ಹೇಳಿ ದುರ್ವಾಸರ ಸಮೀಪಕ್ಕೆ ಹೋಗಿ ದುರ್ವಾಸರೊಡನೆ ಅವರ ಶಿಷ್ಯರಾದ ಯತಿಗಳೊಡನೆಯೂ ಕೋಪಿಸಿಕೊಂಡು 'ಜ್ಞಾನಲೇಶದಿಂದಲೂ ರಹಿತನಾದ ಬ್ರಾಹ್ಮಣ ಏನು ಮಾಡುತ್ತಿರುವೆ? ನೀನು ಅನುಸರಿಸುತ್ತಿರುವುದು ಇದೇನು ಆಶ್ರಮ? ಗೃಹಸ್ಥಾಶ್ರಮವನ್ನು ಪರಿತ್ಯಜಿಸಿ ನೀನು ಏನು ಮಾಡುತ್ತಿರುವಿ? ಇದು ಕೇವಲ ಡಂಭವಷ್ಟೆ! ಬೇರೊಂದೂ ಇಲ್ಲ. ಲೋಕಗಳನ್ನೆಲ್ಲಾ ನಾಶಮಾಡುವಿ. ಇವರನ್ನೆಲ್ಲಾ ನರಕಕ್ಕೆ ಹಾಕುವಿ. ಮೂರ್ಖ! ನೀನು ಹಾಳಾಗುವುದು ಮಾತ್ರವಲ್ಲದೆ ಜನರನ್ನೆಲ್ಲಾ ಹಾಳುಮಾಡುತ್ತಿರುವಿ. ಮಂದಬುದ್ಧಿ ಯುಳ್ಳ ನಿನ್ನನ್ನು ಕೇಳುವವರು ಇಲ್ಲದೆ ಹೋದರೆ? ಈ ಆಶ್ರಮವನ್ನು ಬಿಟ್ಟು ಗೃಹಸ್ಥನಾಗು. ಪಂಚಯಜ್ಞಗಳನ್ನು ಮಾಡು. ಅದರಿಂದ ಸತ್ತಮೇಲೆ ಸ್ವರ್ಗವನ್ನು ಹೊಂದುವಿ' ಈ ಪ್ರಕಾರವಾಗಿ ಹೇಳುತ್ತಿರಲು ಜನಾರ್ದನನು ದುರ್ವಾಸರನ್ನು

1. ಹ.ವಂ.ಭ.ಪ. ಅ–107, 108, 109

ನೋಡಿ ವಿನಯದಿಂದ ನಮಸ್ಕಾರವನ್ನು ಮಾಡಿ ಹಂಸಡಿಭಿಕರೊಡನೆ 'ಅಲ್ಪತೇಜಸ್ವಿಗಳಾದ ನೀವು ಇಂತಹ ಮಾತನ್ನು ಹೇಳಬೇಡಿ. ಇಂತಹ ಘೋರವಾದ ಮಾತನ್ನು ಹೇಳಬಾರದು. ನಿಮಗೆ ಆಯುಷ್ಯವು ಮುಗಿಯುತ್ತಾ ಬಂದಿತೆಂದು ತೋರುತ್ತದೆ. ಪೂರ್ವಋಷಿಗಳಿಂದ ನಾಲ್ಕು ಆಶ್ರಮಗಳು ವಿಹಿತವಾಗಿವೆ. ಅವುಗಳಲ್ಲಿ ಇದು ನಾಲ್ಕನೆಯದಾದ ಸನ್ಯಾಸಾಶ್ರಮವು. ಆ ಆಶ್ರಮದಲ್ಲಿ ಇರುವವರು ಅತ್ಯಂತ ಪುಣ್ಯವಂತರು. ನೀವು ದೊಡ್ಡವರನ್ನು ಸೇವಿಸಲಿಲ್ಲ, ನಿಮಗೆ ಜ್ಞಾನವಿಲ್ಲ. ಇಲ್ಲದಿದ್ದರೆ ಇಂತಹ ಮಾತನ್ನು ಯಾರು ಹೇಳುವನು? ನಾನು ಏನು ಮಾಡಲಿ? ನೀವು ನನ್ನ ಮಿತ್ರರಾಗಿರುವಿರಿ. ನಾನು ನಿಮ್ಮನ್ನು ಬಿಟ್ಟು ಹೋಗುವೆನು ಅಥವಾ ಕಲ್ಲಿನ ಮೇಲೆ ಬೀಳುವೆನು. ಅಥವಾ ವಿಷವನ್ನು ಕುಡಿಯುವೆನು. ಅಥವಾ ಸಮುದ್ರದಲ್ಲಿ ಹಾರುವೆನು. ನೀವು ನೋಡುತ್ತಿರುವಾಗಲೇ ದೇಹವನ್ನು ಪರಿತ್ಯಜಿಸುವೆನು. ಹೀಗೆಲ್ಲಾ ದೊಡ್ಡವರ ಹತ್ತಿರ ಹೇಳಬೇಡಿರಿ' ಎಂದು ಹೇಳುತ್ತಾ ವಿಲಾಪವನ್ನು ಮಾಡಿದನು.

ತರುವಾಯ ದುರ್ವಾಸರು ಕೋಪವುಳ್ಳವರಾಗಿ ಅವರನ್ನು ಸುಡುವಂತೆ ಒಂದು ಕಣ್ಣಿನಿಂದ ನೋಡಿದರು. ಮತ್ತೊಂದು ಕಣ್ಣಿನಿಂದ ಶಾಂತರಾಗಿ ಜನಾರ್ದನನ್ನು ನೋಡುವವರಾಗಿ ಹಂಸಡಿಭಿಕರನ್ನು 'ನೀವು ಇಲ್ಲಿಂದ ಬೇಗನೇ ಹೋಗಿರಿ, ಹೋಗಿರಿ' ಎಂದರು. 'ಇಲ್ಲಿಂದ ಹೊರಟು ಹೋಗಿರಿ. ಯಾಕೆ ಸಾವಕಾಶ ಮಾಡುವಿರಿ?' ಎಂದರು. 'ನಿಮ್ಮ ಮಾತಿನಿಂದ ಉಂಟಾದ ರೋಷವನ್ನು ಸಹಿಸಲಿಕ್ಕೆ ಅಶಕ್ತನಾಗಿರುವೆನು. ನಿಮ್ಮನ್ನೆಲ್ಲಾ ಸುಟ್ಟುಹಾಕಲಿಕ್ಕೆ ನಾನು ಸಮರ್ಥನಾಗಿರುವೆನು. ನನ್ನ ಮುಂಭಾಗದಲ್ಲಿ ಇಂತಹ ಮಾತನ್ನು ಆಡಲು ಯಾರು ಸಮರ್ಥನಾಗುವನು? ಲೋಕಪ್ರಸಿದ್ಧನಾದ ಶಂಖಚಕ್ರಗದಾಧಾರಿಯಾದ ಭಗವಂತನು ನಿಮ್ಮ ಅಹಂಕಾರವನ್ನು ಖಂಡಿಸುವನು' ಎಂದು ಹೇಳಿ ಎದ್ದು ಅಲ್ಲಿಂದ ಹೋಗಲಿಕ್ಕೆ ಆರಂಭಮಾಡಿದರು. ಆಗ ಹಂಸನು ಹೋಗಿ ಅವರ ಕೈಯನ್ನು ಹಿಡಿದುಕೊಂಡನು. ಅವರ ಕೌಪೀನವನ್ನು ಹರಿದುಹಾಕಿದನು. ದುರ್ವಾಸರ ಶಿಷ್ಯರಾದ ಇತರ ಯತಿಗಳೆಲ್ಲರೂ ಹತ್ತು ದಿಕ್ಕುಗಳಿಗೆ ಓಡಿಹೋದರು. ಜನಾರ್ದನನು 'ಹಾ! ಕಷ್ಟ!!' ಎನ್ನುತ್ತಾ ತನ್ನ ಶಕ್ತ್ಯಾನುಸಾರವಾಗಿ ಹಂಸಡಿಭಿಕರೊಡನೆ ಹಾಗೆ ಮಾಡಬಾರದೆಂದನು. ದುರ್ವಾಸರು ತಾನೇ ರುದ್ರರೂಪದಿಂದ ಅವರಿಗೆ ವರಕೊಟ್ಟ ಕಾರಣ ಶಾಪ ಕೊಡಲಿಕ್ಕೆ ಸಮರ್ಥರಾಗಲಿಲ್ಲ. ಅವರು ಮೆಲ್ಲಮೆಲ್ಲನೆ ಹಂಸಡಿಭಿಕರೊಡನೆ 'ನಾನು ಅಧಮರಾದ ನಿಮ್ಮನ್ನು ಶಾಪದಿಂದ ನಾಶಮಾಡಲು ಸಮರ್ಥನಾದರೂ ಶಾಪಕೊಟ್ಟು ತಪಸ್ಸನ್ನು ಹಾಳುಮಾಡಿಕೊಳ್ಳುವುದಿಲ್ಲ. ಶಂಖಚಕ್ರಗದಾಪಾಣಿಯಾದ ಪರಮಾತ್ಮನು

ನಿಮ್ಮ ಗರ್ವವನ್ನು ಪರಿಹರಿಸುವನು. ನೀವು ಮಾಡಿದ ಅನ್ಯಾಯವನ್ನು ಕೇಳಿ ನಿಮ್ಮ ಗುರುಜರಾಸಂಧನೂ ಸಹಿಸಲಾರನು! ನೀವು ಹೋಗಿರಿ' ಎಂದು ಹೇಳುತ್ತಾ ಜನಾರ್ದನನೊಡನೆ 'ಬ್ರಾಹ್ಮಣೋತ್ತಮ! ನಿನಗೆ ಭಗವಂತನಲ್ಲಿ ಭಕ್ತಿಯುಂಟಾಗಲಿ. ಭಗವಂತನ ದರ್ಶನವಾಗಲಿ. ನೀನು ಯಾವಾಗಲೂ ಸಜ್ಜನನೇ ಆಗಿರುವಿ' ಎಂದು ಹೇಳಿ 'ಈ ವಿಷಯವನ್ನೆಲ್ಲಾ ನಿನ್ನ ತಂದೆಯ ಹತ್ತಿರ ಹೇಳು' ಎಂದರು.

ತರುವಾಯ ಹಂಸಡಿಭಿಕರು ಕೋಪಿಸಿಕೊಂಡು ಅಲ್ಲಿ ಇದ್ದ ನೆಲವು ಕಮಂಡಲು ಸಾಲಿಗ್ರಾಮ ಸಂಪುಟ ಇತ್ಯಾದಿಗಳನ್ನೆಲ್ಲಾ ಪುಡಿಮಾಡಿದರು. ಆ ಸ್ಥಳದಲ್ಲಿ ಬೇಡರಿಂದ ಮಾಂಸವನ್ನು ಬೇಯಿಸಿದರು. ಅಲ್ಲಿಯೇ ಮಾಂಸವನ್ನು ಭಕ್ಷಣೆ ಮಾಡಿ ತಮ್ಮ ಊರಿಗೆ ಹೋದರು. ಜನಾರ್ದನನೂ ಇವರು ಸತ್ತರೆಂದೇ ನಿಶ್ಚಯಿಸಿಕೊಂಡೇ ಅವರ ಹಿಂದೆಯೇ ಹೋದನು.

ಎಲ್ಲರೂ ಹೊರಟುಹೋದ ಮೇಲೆ ದುರ್ವಾಸರು ಓಡಲಿಕ್ಕೆ ಉದ್ಯುಕ್ತ ರಾಗಿರುವ ಶಿಷ್ಯರಾದ ಯತಿಗಳನ್ನು ಕರೆದು 'ನಾವು ಪವಿತ್ರವಾದ ಈ ಪುಷ್ಕರದಿಂದ ಹೊರಟು ಅಲ್ಲಲ್ಲಿ ವಿಶ್ರಾಂತಿಯನ್ನು ಹೊಂದುತ್ತಾ ಮೆಲ್ಲನೆ ದ್ವಾರಕಾಪಟ್ಟಣಕ್ಕೆ ಹೋಗುವ ಶ್ರೀಭಗವಂತನನ್ನು ನೋಡಿ ಆ ಪ್ರಭುವಿಗೆ ಇದೆಲ್ಲವನ್ನೂ ತಿಳಿಸುವ ಆ ಭಗವಂತನು ಧರ್ಮಮಾರ್ಗದಲ್ಲಿ ಇದ್ದುಕೊಂಡು ಈ ಜಗತ್ತನ್ನು ರಕ್ಷಿಸುವವನು. ಶತ್ರುಗಳನ್ನು ಸಂಹರಿಸಿ ಭೂಮಿಯನ್ನು ಪರಿಪಾಲಿಸುವವನು. ಅವನು ನಮ್ಮನ್ನು ರಕ್ಷಿಸುವನು. ಈ ಅಯೋಗ್ಯರು ಮಾಡಿರುವ ಅನ್ಯಾಯವನ್ನೆಲ್ಲಾ ಅವನೊಡನೆ ತಿಳಿಸುವ' ಎಂದು ಹೇಳಿದರು. ಎಲ್ಲರೂ ಹಾಗೆಯೇ ಆಗಲಿ ಎಂದು ಹೇಳಿ ಹರಿದುಹೋದ ಕೌಪೀನ ಒಡೆದು ಹೋದ ಕಮಂಡಲು ಇತ್ಯಾದಿಗಳಿಂದ ಸಹಿತರಾಗಿ ಶ್ರೀಕೃಷ್ಣಪರಮಾತ್ಮನನ್ನು ನೋಡಲಿಕ್ಕೆ ಹೊರಟುಹೋದರು. ಐದು ಸಾವಿರ ಯತಿಗಳು ದುರ್ವಾಸರನ್ನು ಮುಂದೆ ಮಾಡಿಕೊಂಡು ರಾತ್ರಿಹಗಲೂ ನಡೆಯುತ್ತಾ ಕೃಷ್ಣಪರಮಾತ್ಮನಿಂದ ರಕ್ಷಿತವಾದ ದ್ವಾರಕಾಪಟ್ಟಣಕ್ಕೆ ಹೋಗಿ ಸೇರಿದರು.



# ಕೃಷ್ಣಪರಮಾತ್ಮನು ದುರ್ವಾಸರನ್ನು ಸಮಾಧಾನಪಡಿಸಿದನು[1]

ದ್ವಾರಕಾಪಟ್ಟಣದಲ್ಲಿ ಸರ್ವೇಶ್ವರನಾದ ಪೀತಾಂಬರಧಾರಿಯಾದ ಸರ್ವಾಭರಣ ಭೂಷಿತನಾದ ಶ್ರೀಕೃಷ್ಣಪರಮಾತ್ಮನು ಒಂದುದಿವಸದಲ್ಲಿ ಸಾತ್ಯಕಿಯೇ ಮೊದಲಾದ ಕುಮಾರರಿಂದ ಕೂಡಿಕೊಂಡು ಪಗಡೆ ಆಟವನ್ನು ಆಡುತ್ತಿದ್ದನು. ಶ್ರೀಭಗವಂತನು ಮಧ್ಯಾಹ್ನದವರೆಗೆ ಆಡಿ ಆಟವನ್ನು ಮುಗಿಸಿದನು. ಅಷ್ಟರವರೆಗೆ ದ್ವಾರಪಾಲಕನಿಂದ ತಡೆಯಲ್ಪಟ್ಟು ಬಾಗಿಲಲ್ಲೇ ನಿಂತಿದ್ದ ಯತಿಗಳು ಇದೇ ಸಮಯವೆಂದು ತಿಳಿದುಕೊಂಡು ದುರ್ವಾಸರನ್ನು ಮುಂದೆ ಮಾಡಿಕೊಂಡು ಬಂದು ಪಗಡೆ ಆಟದಲ್ಲಿ ಇದ್ದ ಕೃಷ್ಣಪರಮಾತ್ಮನನ್ನು ನೋಡಿದರು. ಯಾದವರೆಲ್ಲರೂ ಆ ಯತಿಗಳನ್ನು ನೋಡಿ ಆಶ್ಚರ್ಯವನ್ನು ಹೊಂದಿದರು. ಹಂಸನ ಮೇಲಿನ ಕೋಪದಿಂದ ಕಣ್ಣುಕೆಂಪಗೆ ಮಾಡಿಕೊಂಡಿರುವ ಅರ್ಧ ಹರಿದುಹೋದ ಕೌಪೀನವುಳ್ಳ ದುರ್ವಾಸರನ್ನೂ ನೋಡಿ ಯಾದವರೆಲ್ಲರೂ ಭಯವುಳ್ಳವರಾದರು. ಕೋಪಿಸಿಕೊಂಡಿರುವ ಇವರು ಏನು ಮಾಡುವರು? ಏನು ನಮ್ಮೊಡನೆ ಹೇಳುವರು ಎಂದು ಯೋಚಿಸುತ್ತಾ ಕೈಮುಗಿದುಕೊಂಡರು. ಇಲ್ಲಿ ಆಸನವಿದೆ ಎಂದು ಯಾದವರು ಹೇಳಿದರು.

ಕೃಷ್ಣನು ಬೇಗನೆ ಎದ್ದು ಅವರ ಮುಂದೆ ಹಾರಿ 'ಇದು ಆಸನ. ಇಲ್ಲಿ ಕೂತುಕೊಳ್ಳಬೇಕು. ತಮ್ಮ ಕಿಂಕರನು ನಾನು ಇದ್ದೇನೆ' ಎಂದು ಹೇಳಿದನು. ದುರ್ವಾಸರು ಆಸನದಲ್ಲಿ ಕೂತರು. ಎಲ್ಲಾ ಯತಿಗಳೂ ಆಸನಗಳಲ್ಲಿ ಕೂತು ಕೊಂಡರು. ಕೃಷ್ಣಪರಮಾತ್ಮನು ಅರ್ಘ್ಯಪಾದ್ಯಾದಿಗಳನ್ನು ಕೊಟ್ಟನು. ಆಮೇಲೆ ಪರಮಾತ್ಮನು ದುರ್ವಾಸರೊಡನೆ 'ತಾವು ಇಲ್ಲಿಗೆ ಬರಲು ಕಾರಣವೇನು? ನೀವೆಲ್ಲರೂ ಯತಿಗಳು. ದೋಷರಹಿತರು. ಯಾವುದರಲ್ಲಿಯೂ ಆಸೆಯಿಲ್ಲದವರು. ಆದುದರಿಂದ ನೀವು ಯಾವುದಾದರೂ ವಸ್ತುವನ್ನು ಅಪೇಕ್ಷಿಸಿಕೊಂಡು ಬಂದಿರುವಿರಿ ಎಂದು ಹೇಳುವಂತಿಲ್ಲ. ಲೋಕದಲ್ಲಿ ಇರುವ ಜನರು ಯಾವುದಾದರೂ ಒಂದು ವಸ್ತುವಿನಲ್ಲಿ ಆಸೆಯುಳ್ಳವರಾಗಿ ಕ್ಷತ್ರಿಯರಿದ್ದಲ್ಲಿಗೆ ಬರುವರು. ನೀವು ಬಂದಿರುವುದ ರಿಂದ ಏನೋ ಕಾರಣವಿದೆ ಯೆಂದು ಅನುಮಾನ ಮಾಡಬೇಕಾಗಿದೆ. ನೀವು ಯಾಕೆ ಬಂದಿರಿ ಎಂಬ ಕಾರಣವು ನನಗೆ ತಿಳಿಯಲಿಲ್ಲ. ಅದನ್ನು ತಾವು ಹೇಳಬೇಕು. ತಮ್ಮ ಮುಖದಿಂದ ನಾವು ಕೇಳಿ ತಿಳಿದುಕೊಳ್ಳುವೆವು' ಎಂದು ಹೇಳಿದನು.

ಕೃಷ್ಣಪರಮಾತ್ಮನ ಮಾತನ್ನು ಕೇಳಿ ದುರ್ವಾಸರಿಗೆ ಮತ್ತಷ್ಟು ಕೋಪವು

1. ಹ.ವಂ.ಭ.ಪ. ಅ–110,112

ಹೆಚ್ಚಾಯಿತು. ಕಣ್ಣುಕೆಂಪಗೆ ಮಾಡಿದರು. ಕೋಪದಿಂದ ಕೃಷ್ಣಪರಮಾತ್ಮನೊಡನೆ 'ಯಾದವೇಶ್ವರ! ನನಗೆ ತಿಳಿಯಲಿಲ್ಲವೆಂದು ಯಾಕೆ ಹೇಳುವಿ? ನೀನು ಸಾಕ್ಷಾತ್ ಪರಮಾತ್ಮನೆಂದು ನನಗೆ ತಿಳಿದಿರುವುದು. ನಮ್ಮನ್ನು ಮೋಸಮಾಡುವವನಂತೆ ಮಾತಾಡುವಿಯಲ್ಲಾ! ಮನುಷ್ಯರಂತೆ ರೂಪವುಳ್ಳವನಾಗಿ ನಿನ್ನ ರೂಪವನ್ನು ಮರೆಮಾಡಿಕೊಂಡಿರುವಿ. ಜಗತ್ತಿನ ಸೃಷ್ಟ್ಯಾದಿಗಳಿಗೆ ಕಾರಣನಾದವನು ಸರ್ವಜ್ಞನು ನೀನು ಎಂದು ನನಗೆ ತಿಳಿದಿರುವುದು. ನಾನು ನಿನ್ನನ್ನು ಯಾವ ಯಾವ ರೂಪವುಳ್ಳವನೆಂದು ಧ್ಯಾನ ಮಾಡುವೆನೋ ಆವಾವ ರೂಪದಿಂದ ದರ್ಶನವನ್ನು ಕೊಡುವಿ. ಆದುದರಿಂದ ಸರ್ವಜ್ಞನಾದ ನೀನು ''ನನಗೆ ತಿಳಿಯಲಿಲ್ಲ'' ಎಂದು ಹೇಗೆ ಹೇಳುವೆ? ಭಗವಂತನೇ! ನಮಗೆ ಬಂದ ಪೀಡೆಯನ್ನು ನೀನು ಚಿಂತಿಸುವುದಿಲ್ಲವೇ? ನಿನ್ನನ್ನು ನಂಬಿಕೊಂಡಿರುವ ನಾವು ಅತ್ಯಂತ ದುಃಖವನ್ನು ಹೊಂದಿರುವೆವು. ಇಂತಹ ನಮ್ಮ ಅವಸ್ಥೆಯನ್ನು ನೀನು ಸ್ಮರಿಸುವುದಿಲ್ಲ. ಇದು ನಮ್ಮ ದೌರ್ಭಾಗ್ಯವೆಂದು ಎಂದು ಯೋಚಿಸುತ್ತೇನೆ. ವಿಷ್ಣೋ! ನಾವು ಮಂದಭಾಗ್ಯರು. ಆದುದರಿಂದಲೇ ನೀನು ನಮ್ಮನ್ನು ಸ್ಮರಿಸುವುದಿಲ್ಲ. ಇಬ್ಬರು ಕ್ಷತ್ರಿಯಕುಮಾರರು ರುದ್ರದೇವರ ವರದಿಂದ ಗರ್ವವುಳ್ಳವರಾಗಿ ನಮ್ಮನ್ನು ಪೀಡಿಸಿರುವರು. ಅವರ ಹೆಸರು ಹಂಸಡಿಭಿಕರೆಂದು ಗೃಹಸ್ಥಾಶ್ರಮವೇ ಶ್ರೇಷ್ಠವೆಂದು ಹೇಳುತ್ತಾ ನಮಗೆ ಬಹಳ ಉಪದ್ರವ ಮಾಡಿದರು. ಬಹು ಕಠಿಣಮಾತುಗಳನ್ನು ಆಡಿದರು. ನಮ್ಮ ಕಮಂಡಲು ಮೊದಲಾದವನ್ನು ಒಡೆದು ಹಾಕಿರುವರು. ಇದೊಂದು ಮಹಾಸಾಹಸವನ್ನು ಮಾಡಿರುವರು. ನಮ್ಮ ಕೌಪೀನವನ್ನೆಲ್ಲಾ ಹರಿದುಹಾಕಿರುವರು. ಭಗವಂತನೇ! ನೀನು ಸರ್ವದಾ ರಕ್ಷಿಸುತ್ತಿರುವಿ. ಆದರೆ ನಮಗೆ ಇಂತಹ ಅವಸ್ಥೆಯು ಬಂದಿರುವುದು ಆಶ್ಚರ್ಯವು. ಮಂದಭಾಗ್ಯರಾದ ನಾವು ಏನು ಮಾಡಲಿ? (ಮಾಡೋಣ) ನಾವು ಯಾರನ್ನು ಮರೆಹೊಂದಲಿ? ಹೇಳು. ಆ ರಾಜಪುತ್ರರು ಇಬ್ಬರೂ ಬದುಕಿದ್ದರೆ ಲೋಕಗಳೆಲ್ಲವೂ ನಾಶವನ್ನು ಹೊಂದುವುವು. ಅವರು ಅತ್ಯಂತ ಬಲಿಷ್ಠರಾಗಿರುವರು. ಅವರ ಮುಂದೆ ಯುದ್ಧದಲ್ಲಿ ನಿಲ್ಲಲಿಕ್ಕೆ ಭೀಷ್ಮನೋ ಬಾಹ್ಲಿಕರಾಜನೋ ಇಂದ್ರಾದಿದೇವತೆಗಳೋ ಯಾರೊಬ್ಬರೂ ಸಮರ್ಥರಲ್ಲ. ಅವರು ರುದ್ರದೇವರ ವರದಿಂದ ಅಹಂಕಾರ ಪಡುತ್ತಿರುವರು. ಆದುದರಿಂದ ನೀನು ಅವರನ್ನು ಸಂಹರಿಸು. ಲೋಕಗಳನ್ನು ರಕ್ಷಿಸು. ಇಲ್ಲದಿದ್ದರೆ ನೀನು ರಕ್ಷಿಸುವಿ ಎಂಬ ಮಾತು ವ್ಯರ್ಥವಾಗುವುದು. ಹೆಚ್ಚಿಗೆ ಹೇಳಿ ಏನು ಪ್ರಯೋಜನವಿದೆ? ಮೂರುಲೋಕಗಳನ್ನು ರಕ್ಷಿಸು ರಕ್ಷಿಸು' ಎಂದು ಹೇಳಿ ಸುಮ್ಮನೆ ಆದರು.

ಆಗ ಶ್ರೀಭಗವಂತನು ದುರ್ವಾಸರನ್ನು ನೋಡಿ 'ಪೂಜ್ಯರು ಕ್ಷಮಿಸಬೇಕು. ನನ್ನದ್ದೇ ಅಪರಾಧವಾಯಿತು. ನನ್ನ ಮಾತನ್ನು ಕೇಳಿರಿ. ಶಾಂತರಾಗಿರಿ. ಯುದ್ಧದಲ್ಲಿ ಹಂಸಡಿಭಿಕರನ್ನು ಜಯಿಸುವೆನು. ಅವರಿಗೆ ರುದ್ರನೋ ಇಂದ್ರನೋ ಕುಬೇರನೋ ಯಮನೋ ವರುಣನೋ ಚತುರ್ಮುಖಬ್ರಹ್ಮನೋ ಯಾರು ಬೇಕಾದರೂ ವರವನ್ನು ಕೊಟ್ಟಿರಲಿ ನಾನು ಅವರಿಬ್ಬರನ್ನು ಕೊಂದು ನಿಮಗೆ ಸಂತೋಷವನ್ನು ಉಂಟುಮಾಡುವೆನು. ಸತ್ಯದ ಆಣೆಯಿಟ್ಟು ಹೇಳುವೆನು. ನೀವು ಕೋಪಿಸಿಕೊಳ್ಳ ಬಾರದು. ಆ ಅಧಮರನ್ನು ಸಂಹರಿಸಿ ನಿಮ್ಮ ರಕ್ಷಣೆಯನ್ನು ನಾನು ಮಾಡುವೆನು. ಅವರು ತುಂಬಾ ಕ್ರೂರರೆಂದು ಮೊದಲೇ ಕೇಳಿರುವೆನು. ಜರಾಸಂಧನು ಅವರಿಗೆ ತುಂಬಾ ಬೇಕಾದವನು. ಅವರಿಗಾಗಿ ಅವನು ಪ್ರಾಣಗಳನ್ನೊಡಲಿಕ್ಕೂ ಸಿದ್ಧನಾಗಿರು ವನು. ಅವನು ಅವರಿಬ್ಬರನ್ನು ಬಿಟ್ಟೇ ಇತರಲೆಲ್ಲರನ್ನೂ ಜಯಿಸಿರುವನು. ಅಂತಹ ಹಂಸಡಿಭಿಕರನ್ನು ಜಯಿಸಿದರೆ ಶ್ರೇಯಸ್ಸಾಗುವುದು. ಅವರು ಎಲ್ಲಿ ಎಲ್ಲಿ ಹೋಗಿ ಇರುವರು ಎಂದು ಕೇಳುವೆವೋ ಅಲ್ಲಿ ಅಲ್ಲಿಗೆ ಹೋಗಿ ಅವರನ್ನು ಸಂಹರಿಸುವೆನು. ಸಂಶಯಪಡುವುದು ಬೇಡ. ನೀವು ನಿಮ್ಮ ಕಾರ್ಯಕ್ಕೆ ಹೋಗಿರಿ. ನಾನು ಅವರನ್ನು ಜಯಿಸುವೆನು' ಎಂದು ಹೇಳಿದನು.

ಶ್ರೀಭಗವಂತನ ಮಾತನ್ನು ಕೇಳಿ ದುರ್ವಾಸರು ಸಂತುಷ್ಟರಾದರು. ಶ್ರೀಭಗವಂತನೊಡನೆ ಭಗವಂತನೇ! ಜಗತ್ತಿಗೆ ಮಂಗಳವನ್ನು ಉಂಟುಮಾಡುವ ನಿನಗೆ ಮಂಗಳವಾಗಲಿ. ಜಗನ್ನಾಥ! ನಿನಗೆ ಅಶಕ್ಯವಾದ ಕಾರ್ಯವು ಯಾವುದಿದೆ? ನೀನು ಸರ್ವಸಂಹಾರಕನು. ದೇವತೆಗಳಿಗೂ ಸ್ವಾಮಿಯು. ನಿನಗೆ ನಮಸ್ಕಾರವು. ತಿಳಿದೋ ತಿಳಿಯದೆಯೋ ನಾನು ಹೇಳಿದ ಮಾತುಗಳನ್ನು ಕ್ಷಮಿಸಬೇಕು' ಎಂದು ಹೇಳಿದರು. ಶ್ರೀಭಗವಂತನು 'ನಾವು ಯಾವಾಗಲೂ ಕ್ಷಮಿಸುವವರೇ. ನೀವೂ ಕೂಡ ಯತಿಗಳು ಕ್ಷಮಿಸಬೇಕು. ನೀವೆಲ್ಲರೂ ನನಗೆ ಪೂಜನೀಯರು. ನೀವೆಲ್ಲರೂ ನನ್ನ ಮನೆಯಲ್ಲಿ ಭೋಜನ ಮಾಡಬೇಕು' ಎಂದರು. ಎಲ್ಲರೂ ಅಂಗೀಕರಿಸಿದರು. ತರುವಾಯ ಪರಮಾತ್ಮನು ಮನೆಯ ಒಳಗೆ ಹೋಗಿ ಬೇಕಾದ ಅಡಿಗೆಯನ್ನು ಮಾಡಿಸಿ ಎಲ್ಲರಿಗೂ ಭೋಜನ ಮಾಡಿಸಿದನು. ತರುವಾಯ ಭಗವಂತನು ಮೃದುವಾದ ಪಟ್ಟೆವಸ್ತ್ರಗಳನ್ನು ಹರಿದು ಹರಿದು ಎಲ್ಲ ಯತಿಗಳಿಗೂ ಕೌಪೀನವನ್ನು ಕೊಟ್ಟನು. ಎಲ್ಲಾ ಯತಿಗಳೂ ಬಹು ಸಂತೋಷವುಳ್ಳವರಾಗಿ ಬಂದಂತೆಯೇ ಹೊರಟು ಹೋದರು. ದುರ್ವಾಸರು ಮಾತ್ರ ನಾರದರೊಡನೆ ಬ್ರಹ್ಮವಿಚಾರ ಮಾಡುತ್ತಾ ಸುಖವಾಗಿ ದ್ವಾರಕಾಪಟ್ಟಣದಲ್ಲಿಯೇ ಇದ್ದರು.

ಹೆಚ್ಚಾಯಿತು. ಕಣ್ಣುಕೆಂಪಗೆ ಮಾಡಿದರು. ಕೋಪದಿಂದ ಕೃಷ್ಣಪರಮಾತ್ಮನೊಡನೆ 'ಯಾದವೇಶ್ವರ! ನನಗೆ ತಿಳಿಯಲಿಲ್ಲವೆಂದು ಯಾಕೆ ಹೇಳುವಿ? ನೀನು ಸಾಕ್ಷಾತ್ ಪರಮಾತ್ಮನೆಂದು ನನಗೆ ತಿಳಿದಿರುವುದು. ನಮ್ಮನ್ನು ಮೋಸಮಾಡುವವನಂತೆ ಮಾತಾಡುವಿಯಲ್ಲಾ! ಮನುಷ್ಯರಂತೆ ರೂಪವುಳ್ಳವನಾಗಿ ನಿನ್ನ ರೂಪವನ್ನು ಮರೆಮಾಡಿಕೊಂಡಿರುವಿ. ಜಗತ್ತಿನ ಸೃಷ್ಟ್ಯಾದಿಗಳಿಗೆ ಕಾರಣನಾದವನು ಸರ್ವಜ್ಞನು ನೀನು ಎಂದು ನನಗೆ ತಿಳಿದಿರುವುದು. ನಾನು ನಿನ್ನನ್ನು ಯಾವ ಯಾವ ರೂಪವುಳ್ಳವನೆಂದು ಧ್ಯಾನ ಮಾಡುವೆನೋ ಆವಾವ ರೂಪದಿಂದ ದರ್ಶನವನ್ನು ಕೊಡುವಿ. ಆದುದರಿಂದ ಸರ್ವಜ್ಞನಾದ ನೀನು ''ನನಗೆ ತಿಳಿಯಲಿಲ್ಲ'' ಎಂದು ಹೇಗೆ ಹೇಳುವೆ? ಭಗವಂತನೇ! ನಮಗೆ ಬಂದ ಪೀಡೆಯನ್ನು ನೀನು ಚಿಂತಿಸುವುದಿಲ್ಲವೇ? ನಿನ್ನನ್ನು ನಂಬಿಕೊಂಡಿರುವ ನಾವು ಅತ್ಯಂತ ದುಃಖವನ್ನು ಹೊಂದಿರುವೆವು. ಇಂತಹ ನಮ್ಮ ಅವಸ್ಥೆಯನ್ನು ನೀನು ಸ್ಮರಿಸುವುದಿಲ್ಲ. ಇದು ನಮ್ಮ ದೌರ್ಭಾಗ್ಯವೆಂದು ಎಂದು ಯೋಚಿಸುತ್ತೇನೆ. ವಿಷ್ಣೋ! ನಾವು ಮಂದಭಾಗ್ಯರು. ಆದುದರಿಂದಲೇ ನೀನು ನಮ್ಮನ್ನು ಸ್ಮರಿಸುವುದಿಲ್ಲ. ಇಬ್ಬರು ಕ್ಷತ್ರಿಯಕುಮಾರರು ರುದ್ರದೇವರ ವರದಿಂದ ಗರ್ವವುಳ್ಳವರಾಗಿ ನಮ್ಮನ್ನು ಪೀಡಿಸಿರುವರು. ಅವರ ಹೆಸರು ಹಂಸಡಿಭಿಕರೆಂದು ಗೃಹಸ್ಥಾಶ್ರಮವೇ ಶ್ರೇಷ್ಠವೆಂದು ಹೇಳುತ್ತಾ ನಮಗೆ ಬಹಳ ಉಪದ್ರವ ಮಾಡಿದರು. ಬಹು ಕಠಿಣಮಾತುಗಳನ್ನು ಆಡಿದರು. ನಮ್ಮ ಕಮಂಡಲು ಮೊದಲಾದವನ್ನು ಒಡೆದು ಹಾಕಿರುವರು. ಇದೊಂದು ಮಹಾಸಾಹಸವನ್ನು ಮಾಡಿರುವರು. ನಮ್ಮ ಕೌಪೀನವನ್ನೆಲ್ಲಾ ಹರಿದುಹಾಕಿರುವರು. ಭಗವಂತನೇ! ನೀನು ಸರ್ವದಾ ರಕ್ಷಿಸುತ್ತಿರುವಿ. ಆದರೆ ನಮಗೆ ಇಂತಹ ಅವಸ್ಥೆಯು ಬಂದಿರುವುದು ಆಶ್ಚರ್ಯವು. ಮಂದಭಾಗ್ಯರಾದ ನಾವು ಏನು ಮಾಡಲಿ? (ಮಾಡೋಣ) ನಾವು ಯಾರನ್ನು ಮರೆಹೊಂದಲಿ? ಹೇಳು. ಆ ರಾಜಪುತ್ರರು ಇಬ್ಬರೂ ಬದುಕಿದ್ದರೆ ಲೋಕಗಳೆಲ್ಲವೂ ನಾಶವನ್ನು ಹೊಂದುವುವು. ಅವರು ಅತ್ಯಂತ ಬಲಿಷ್ಠರಾಗಿರುವರು. ಅವರ ಮುಂದೆ ಯುದ್ಧದಲ್ಲಿ ನಿಲ್ಲಲಿಕ್ಕೆ ಭೀಷ್ಮನೋ ಬಾಹ್ಲಿಕರಾಜನೋ ಇಂದ್ರಾದಿದೇವತೆಗಳೋ ಯಾರೊಬ್ಬರೂ ಸಮರ್ಥರಲ್ಲ. ಅವರು ರುದ್ರದೇವರ ವರದಿಂದ ಅಹಂಕಾರ ಪಡುತ್ತಿರುವರು. ಆದುದರಿಂದ ನೀನು ಅವರನ್ನು ಸಂಹರಿಸು. ಲೋಕಗಳನ್ನು ರಕ್ಷಿಸು. ಇಲ್ಲದಿದ್ದರೆ ನೀನು ರಕ್ಷಿಸುವಿ ಎಂಬ ಮಾತು ವ್ಯರ್ಥವಾಗುವುದು. ಹೆಚ್ಚಿಗೆ ಹೇಳಿ ಏನು ಪ್ರಯೋಜನವಿದೆ? ಮೂರುಲೋಕಗಳನ್ನು ರಕ್ಷಿಸು ರಕ್ಷಿಸು' ಎಂದು ಹೇಳಿ ಸುಮ್ಮನೆ ಆದರು.

ಆಗ ಶ್ರೀಭಗವಂತನು ದುರ್ವಾಸರನ್ನು ನೋಡಿ 'ಪೂಜ್ಯರು ಕ್ಷಮಿಸಬೇಕು. ನನ್ನದ್ದೇ ಅಪರಾಧವಾಯಿತು. ನನ್ನ ಮಾತನ್ನು ಕೇಳಿರಿ. ಶಾಂತರಾಗಿರಿ. ಯುದ್ಧದಲ್ಲಿ ಹಂಸಡಿಭಿಕರನ್ನು ಜಯಿಸುವೆನು. ಅವರಿಗೆ ರುದ್ರನೋ ಇಂದ್ರನೋ ಕುಬೇರನೋ ಯಮನೋ ವರುಣನೋ ಚತುರ್ಮುಖಬ್ರಹ್ಮನೋ ಯಾರು ಬೇಕಾದರೂ ವರವನ್ನು ಕೊಟ್ಟಿರಲಿ ನಾನು ಅವರಿಬ್ಬರನ್ನು ಕೊಂದು ನಿಮಗೆ ಸಂತೋಷವನ್ನು ಉಂಟುಮಾಡುವೆನು. ಸತ್ಯದ ಆಣೆಯಿಟ್ಟು ಹೇಳುವೆನು. ನೀವು ಕೋಪಿಸಿಕೊಳ್ಳ ಬಾರದು. ಆ ಅಧಮರನ್ನು ಸಂಹರಿಸಿ ನಿಮ್ಮ ರಕ್ಷಣೆಯನ್ನು ನಾನು ಮಾಡುವೆನು. ಅವರು ತುಂಬಾ ಕ್ರೂರರೆಂದು ಮೊದಲೇ ಕೇಳಿರುವೆನು. ಜರಾಸಂಧನು ಅವರಿಗೆ ತುಂಬಾ ಬೇಕಾದವನು. ಅವರಿಗಾಗಿ ಅವನು ಪ್ರಾಣಗಳನ್ನೊಡಲಿಕ್ಕೂ ಸಿದ್ಧನಾಗಿರು ವನು. ಅವನು ಅವರಿಬ್ಬರನ್ನು ಬಿಟ್ಟೇ ಇತರಲೆಲ್ಲರನ್ನೂ ಜಯಿಸಿರುವನು. ಅಂತಹ ಹಂಸಡಿಭಿಕರನ್ನು ಜಯಿಸಿದರೆ ಶ್ರೇಯಸ್ಸಾಗುವುದು. ಅವರು ಎಲ್ಲಿ ಎಲ್ಲಿ ಹೋಗಿ ಇರುವರು ಎಂದು ಕೇಳುವೆವೋ ಅಲ್ಲಿ ಅಲ್ಲಿಗೆ ಹೋಗಿ ಅವರನ್ನು ಸಂಹರಿಸುವೆನು. ಸಂಶಯಪಡುವುದು ಬೇಡ. ನೀವು ನಿಮ್ಮ ಕಾರ್ಯಕ್ಕೆ ಹೋಗಿರಿ. ನಾನು ಅವರನ್ನು ಜಯಿಸುವೆನು' ಎಂದು ಹೇಳಿದನು.

ಶ್ರೀಭಗವಂತನ ಮಾತನ್ನು ಕೇಳಿ ದುರ್ವಾಸರು ಸಂತುಷ್ಟರಾದರು. ಶ್ರೀಭಗವಂತನೊಡನೆ ಭಗವಂತನೇ! ಜಗತ್ತಿಗೆ ಮಂಗಳವನ್ನು ಉಂಟುಮಾಡುವ ನಿನಗೆ ಮಂಗಳವಾಗಲಿ. ಜಗನ್ನಾಥ! ನಿನಗೆ ಅಶಕ್ಯವಾದ ಕಾರ್ಯವು ಯಾವುದಿದೆ? ನೀನು ಸರ್ವಸಂಹಾರಕನು. ದೇವತೆಗಳಿಗೂ ಸ್ವಾಮಿಯು. ನಿನಗೆ ನಮಸ್ಕಾರವು. ತಿಳಿದೋ ತಿಳಿಯದೆಯೋ ನಾನು ಹೇಳಿದ ಮಾತುಗಳನ್ನು ಕ್ಷಮಿಸಬೇಕು' ಎಂದು ಹೇಳಿದರು. ಶ್ರೀಭಗವಂತನು 'ನಾವು ಯಾವಾಗಲೂ ಕ್ಷಮಿಸುವವರೇ. ನೀವೂ ಕೂಡ ಯತಿಗಳು ಕ್ಷಮಿಸಬೇಕು. ನೀವೆಲ್ಲರೂ ನನಗೆ ಪೂಜನೀಯರು. ನೀವೆಲ್ಲರೂ ನನ್ನ ಮನೆಯಲ್ಲಿ ಭೋಜನ ಮಾಡಬೇಕು' ಎಂದರು. ಎಲ್ಲರೂ ಅಂಗೀಕರಿಸಿದರು. ತರುವಾಯ ಪರಮಾತ್ಮನು ಮನೆಯ ಒಳಗೆ ಹೋಗಿ ಬೇಕಾದ ಅಡಿಗೆಯನ್ನು ಮಾಡಿಸಿ ಎಲ್ಲರಿಗೂ ಭೋಜನ ಮಾಡಿಸಿದನು. ತರುವಾಯ ಭಗವಂತನು ಮೃದುವಾದ ಪಟ್ಟೆವಸ್ತ್ರಗಳನ್ನು ಹರಿದು ಹರಿದು ಎಲ್ಲ ಯತಿಗಳಿಗೂ ಕೌಪೀನವನ್ನು ಕೊಟ್ಟನು. ಎಲ್ಲಾ ಯತಿಗಳೂ ಬಹು ಸಂತೋಷವುಳ್ಳವರಾಗಿ ಬಂದಂತೆಯೇ ಹೊರಟು ಹೋದರು. ದುರ್ವಾಸರು ಮಾತ್ರ ನಾರದರೊಡನೆ ಬ್ರಹ್ಮವಿಚಾರ ಮಾಡುತ್ತಾ ಸುಖವಾಗಿ ದ್ವಾರಕಾಪಟ್ಟಣದಲ್ಲಿಯೇ ಇದ್ದರು.

# ಹಂಸಡಿಭಿಕರು ಜನಾರ್ದನನನ್ನು ಕೃಷ್ಣನ ಬಳಿಗೆ ಕಪ್ಪಕೇಳಲಿಕ್ಕೆ ಕಳುಹಿಸಿದ್ದು [1]

ಆ ಸಮಯದಲ್ಲಿಯೇ ಹಂಸಡಿಭಿಕರು ತಂದೆಯಾದ ಬ್ರಹ್ಮದತ್ತನೊಡನೆ 'ನೀನು ರಾಜಸೂಯಯಾಗವನ್ನು ಮಾಡು. ಈ ಮಾಸದಲ್ಲಿಯೇ ನಾವು ಯಾಗಕ್ಕಾಗಿ ಪ್ರಯತ್ನ ಮಾಡುವೆವು. ನಾವೀಗಲೇ ಆನೆ ಕುದುರೆ ರಥಗಳಿಂದ ಸಹಿತರಾಗಿ ದಿಗ್ವಿಜಯ ಮಾಡಿಕೊಂಡು ಬರಲಿಕ್ಕೆ ಹೋಗುವೆವು. ಯಜ್ಞಕ್ಕೆ ಬೇಕಾದ ಸಾಮಗ್ರಿಗಳನ್ನು ಸಿದ್ಧಪಡಿಸು' ಎಂದು ಹೇಳಿದರು. ಬ್ರಹ್ಮದತ್ತನು ಹಾಗೆಯೇ ಆಗಲಿ ಎಂದನು.

ಜನಾರ್ದನ ಎಂಬ ಬ್ರಾಹ್ಮಣನು ಮಾತ್ರ ಅವರು ಸಾಹಸವನ್ನು ಮಾಡುವುದನ್ನು ನೋಡಿ ಇದು ಅಶಕ್ಯ ಎಂದು ತಿಳಿದುಕೊಂಡು ಮಿತ್ರನಾದ ಹಂಸನೊಡನೆ 'ಹಂಸ! ನಾನು ಹೇಳುವ ಮಾತನ್ನು ಕೇಳಿ ಸ್ವಲ್ಪ ವಿಚಾರಮಾಡಿ ನೋಡು. ನೀನು ಯೋಚನೆ ಮಾಡದೆ ಕಾರ್ಯವನ್ನು ಮಾಡಲಿಕ್ಕೆ ಉದ್ಯುಕ್ತನಾಗಿರುವಿ. ಭೀಷ್ಮ, ಜರಾಸಂಧ, ಬಾಹ್ಲೀಕರ ರಾಜ, ಯಾದವರು. ಇವರೆಲ್ಲರೂ ಇರುವಾಗ ರಾಜಸೂಯಯಾಗವನ್ನು ಮಾಡಲಿಕ್ಕೆ ಹೊರಟಿರುವಿಯಲ್ಲಾ, ಭೀಷ್ಮಾಚಾರ್ಯರು ಬಲಿಷ್ಠರು ವೃದ್ಧರು. ಇಪ್ಪತ್ತೊಂದು ಬಾರಿ ಕ್ಷತ್ರಿಯರನ್ನು ಸಂಹರಿಸಿದ ಪರಶುರಾಮದೇವರೂ ಅವರನ್ನು ಸಂಹರಿಸಲಿಲ್ಲ. ಜರಾಸಂಧನ ಪರಾಕ್ರಮವಂತೂ ತಿಳಿದೇ ಇದೆ. ಯಾದವರೆಲ್ಲರೂ ಮಹಾಪರಾಕ್ರಮಶಾಲಿಗಳು. ಅವರಲ್ಲಿಯೂ ಶ್ರೀಕೃಷ್ಣನು ಸರ್ವಸಮರ್ಥನು. ಅವನೆದುರಲ್ಲಿ ಯುದ್ಧದಲ್ಲಿ ನಿಲ್ಲುವವನೊಬ್ಬನೂ ಇಲ್ಲ. ಬಲರಾಮನು, ಕೋಪ ಬಂದರೆ ಈ ಲೋಕವನ್ನೆಲ್ಲಾ ಸಂಹರಿಸಲಿಕ್ಕೆ ಸಮರ್ಥನು. ಹಾಗೆಯೇ ಸಾತ್ಯಕಿಯು ಮಹಾಪರಾಕ್ರಮಶಾಲಿಯು. ಹಾಗೆಯೇ ಇತರ ಯಾದವರೂ ಕೃಷ್ಣಪರಮಾತ್ಮನನ್ನು ಆಶ್ರಯಿಸಿ ಮಹಾಬಲಿಷ್ಠರಾಗಿರುವರು. ನಾವು ಪೂರ್ವದಲ್ಲಿ ಯತಿಗಳಿಗೆ ಅಪರಾಧ ಮಾಡಿರುವೆವು. ಆ ಯತಿಗಳಿಂದ ಕೂಡಿಕೊಂಡು ದುರ್ವಾಸರು ಶ್ರೀಕೃಷ್ಣನನ್ನು ನೋಡಲಿಕ್ಕೆ ಹೋಗಿರುವರು ಎಂದು ಕೇಳಿದೆನು. ಆದುದರಿಂದ ರಾಜಸೂಯ ಯಾಗವನ್ನು ಮಾಡುವುದು ಸಾಧ್ಯವೋ ಎಂದು ಯೋಚಿಸಿ ಆಮೇಲೆ ನಿಶ್ಚಯ ಮಾಡುವ' ಎಂದು ಹೇಳಿದನು. ಆಗ ಹಂಸನು 'ಮಂದಬುದ್ಧಿಯುಳ್ಳ ಮುದುಕನಾದ ಹೀನಬಲನಾದ ಭೀಷ್ಮನೆಂಬುವನು ಯಾವಾತನೋ? ಆ ಮುದುಕನಿಗೆ ನಮ್ಮ ಮುಂದೆ ನಿಲ್ಲಲಿಕ್ಕೆ ಸಾಧ್ಯವಾಗಲಾರದು. ಯಾದವರೂ ಕೂಡ ನಮ್ಮ ಮುಂದೆ

1. ಹ.ವಂ.ಭ.ಪ. ಅ-113

ನಿಲ್ಲಲಿಕ್ಕೆ ಸಮರ್ಥರಲ್ಲ. ನಮ್ಮ ಮುಂದೆ ಯುದ್ಧಕ್ಕೆ ನಿಲ್ಲುವ ಕೃಷ್ಣನು ಯಾರು? ಬಲರಾಮನು ಯಾರು? ಸಾತ್ಯಕಿಯಾರು? ಯಾರೊಬ್ಬರೂ ನನ್ನ ಮುಂದೆ ಯುದ್ಧದಲ್ಲಿ ಸಮರ್ಥರಿರುವರೆಂದು ಯೋಚಿಸಬೇಡ. ಜರಾಸಂಧನು ನನ್ನ ಬಂಧುವು. ವಿರೋಧಮಾಡುವವನಲ್ಲ. ನೀನು ಬೇಗನೇ ಕೃಷ್ಣನಿದ್ದಲ್ಲಿಗೆ ಹೋಗು. ನನ್ನ ಮಾತಿನಿಂದ ಯಜ್ಞಕ್ಕಾಗಿ ಕಪ್ಪವನ್ನು ಕೊಡಲಿಕ್ಕೆ ಹೇಳು. ಉಪ್ಪುಗಳನ್ನು ರತ್ನಗಳನ್ನು ಹಿಡಿದುಕೊಂಡು ಬೇಗನೆ ಬಂದು ಸೇರುವಂತೆ ಹೇಳು. ಬೇಗನೇ ಹೋಗಿ ಕೃಷ್ಣನೊಡನೆ ತಿಳಿಸು. ಇದಕ್ಕೆ ನೀನು ಬದಲು ಹೇಳಬಾರದು. ಮಿತ್ರಭಾವದಿಂದ ನೀನು ಹೋಗಿ ಇದನ್ನು ಹೇಳಲೇಬೇಕು' ಎಂದು ಹೇಳಲು ಜನಾರ್ದನನು ಒಂದೂ ಉತ್ತರವನ್ನು ಹೇಳಲಿಲ್ಲ. ಅವನು ಮೊದಲೇ ಕೃಷ್ಣಪರಮಾತ್ಮನನ್ನು ನೋಡಬೇಕೆಂದು ಪ್ರಯತ್ನಮಾಡುತ್ತಿದ್ದನು. ಈಗ ಸಮಯವು ಬಂದಿತೆಂದು ಒಬ್ಬನೇ ಕುದುರೆಯ ಮೇಲೆ ಕೂತುಕೊಂಡು ಕೃಷ್ಣಪರಮಾತ್ಮನನ್ನು ಸ್ಮರಿಸುತ್ತಾ ಅವನನ್ನು ನೋಡುವುದ ಕ್ಕಾಗಿ ದ್ವಾರಕಾಪಟ್ಟಣಕ್ಕೆ ಹೋದನು.



## ಜನಾರ್ದನನಿಗೆ ಭಗವಂತನ ಸಂದರ್ಶನವು [1]

ಜನಾರ್ದನನೆಂಬ ಆ ಬ್ರಾಹ್ಮಣನು ದ್ವಾರಕಾಪಟ್ಟಣಕ್ಕೆ ಹೋಗುವಾಗ ದಾರಿಯಲ್ಲಿ ಭಗವಂತನನ್ನು ನಾನಾವಿಧವಾಗಿ ಸ್ತೋತ್ರ ಮಾಡುತ್ತಾ ಹೋದನು. ಆದರೆ ಇಂತಹ ಪರಮಾತ್ಮನೊಡನೆ ಕಪ್ಪವನ್ನು ಕೊಡು ಎಂದು ಹೇಳಬೇಕಲ್ಲಾ ಎಂದು ಸಂಕೋಚ ಪಟ್ಟನು. ಕೊನೆಗೆ ಸರ್ವಜ್ಞನಾದ ಭಗವಂತನಿಗೆ ತಿಳಿಯದೆ ಇರುವ ವಿಷಯವಿಲ್ಲ. ಆದುದರಿಂದ ಹಂಸಡಿಭಿಕರ ಮಾತನ್ನು ತಿಳಿಸಿ ಬಿಡುತ್ತೇನೆ ಎಂದಂದುಕೊಂಡನು. ಮತ್ತು ಭಗವಂತನನ್ನು ಸ್ತೋತ್ರಮಾಡುತ್ತಾ ಹೋದನು. ಹೀಗೆ ದ್ವಾರಕಾಪಟ್ಟಣಕ್ಕೆ ಹೋಗಿ ಸೇರಿದನು. ದ್ವಾರಪಾಲಕನೊಡನೆ ತಾನು ಬಂದ ವಿಷಯವನ್ನು ಪರಮಾತ್ಮ ನೊಡನೆ ತಿಳಿಸಲಿಕ್ಕೆ ಹೇಳಿದನು. ಹಾಗೆಯೇ ದ್ವಾರಪಾಲಕನು ಭಗವಂತನೊಡನೆ ತಿಳಿಸಿ ಅವನ ಆಜ್ಞೆಯಿಂದ ಒಳಗೆಬಿಟ್ಟನು. ಜನಾರ್ದನನು ಒಳಗೆ ಹೋಗಿ ಸುಧರ್ಮಾ ಎಂಬ ಸಭೆಯಲ್ಲಿ ಬಲರಾಮದೇವರಿಂದ ಸಹಿತನಾಗಿ ಕೂತಿದ್ದ ಶ್ರೀಕೃಷ್ಣಪರಮಾತ್ಮನನ್ನು ನೋಡಿದನು. ದೇವರ ಮುಂದೆ ಸಾತ್ಯಕಿಯೂ ಕೂತಿದ್ದನು.

1. ಹ.ವಂ.ಭ.ಪ. ಅ.114-116

ಪಾರ್ಶ್ವದಲ್ಲಿ ನಾರದರು ಕುಳಿತಿದ್ದರು. ನಾರದರು ದುರ್ವಾಸರೊಡನೆ ಮಾತಾಡುತ್ತಿದ್ದರು. ಅಲ್ಲಿಯೇ ಉಗ್ರಸೇನನು ಕೂತಿದ್ದನು. ಗಂಧರ್ವರು ಹಾಡು ಹೇಳುತ್ತಿದ್ದರು. ಅಪ್ಸರಸ್ತ್ರೀಯರು ನರ್ತನ ಮಾಡುತ್ತಿದ್ದರು. ಸೂತರೂ ಮಾಗಧರೂ ಬಂದಿಗಳೂ ಸೇವಿಸುತ್ತಿದ್ದರು. ಬ್ರಾಹ್ಮಣರು ಸಾಮಗಾಯನ ಮಾಡುತ್ತಿದ್ದರು. ಈ ಪ್ರಕಾರವಾದ ವೈಭವದಿಂದ ಕೂತಿದ್ದ ಶ್ರೀಕೃಷ್ಣ ಪರಮಾತ್ಮನನ್ನು ನೋಡಿ ನನ್ನ ಹೆಸರು ಜನಾರ್ದನನೆಂದು ಎಂದು ಹೇಳುತ್ತಾ ಕೃಷ್ಣಪರಮಾತ್ಮನಿಗೆ ನಮಸ್ಕರಿಸಿದನು. ಹಾಗೆಯೇ ಬಲರಾಮದೇವರಿಗೂ ನಮಸ್ಕರಿಸಿದನು. 'ದೇವದೇವೇಶ! ನಾನು ಹಂಸಡಿಭಿಕರ ದೂತನಾಗಿ ಬಂದಿದ್ದೇನೆ' ಎಂದು ಹೇಳುತ್ತಿದ್ದ ಜನಾರ್ದನನೊಡನೆ ಭಗವಂತನು 'ಮೊದಲು ಆಸನದಲ್ಲಿ ಕೂತುಕೊಳ್ಳಿರಿ. ಆಮೇಲೆ ನೀವು ಬಂದ ವಿಷಯವನ್ನು ತಿಳಿಸಿರಿ' ಎಂದು ಹೇಳಿದನು. ಹಾಗೆಯೇ ಆಗಲಿ ಎಂದು ಹೇಳಿ ಜನಾರ್ದನನು ಭಗವಂತನು ತೋರಿಸಿದ ಉತ್ತಮವಾದ ಆಸನದಲ್ಲಿ ಕೂತನು. ಭಗವಂತನು ಜನಾರ್ದನನನ್ನು ಬಾಯಿಯಿಂದ ಉಪಚರಿಸಿ 'ಬ್ರಹ್ಮದತ್ತರಾಜನೂ ಹಂಸಡಿಭಿಕರೂ ಕ್ಷೇಮದಿಂದ ಇರುವರೇ? ಅವರ ಪರಾಕ್ರಮವನ್ನು ನಾನು ಕೇಳಿರುವೆನು. ನಿಮ್ಮ ತಂದೆಗೆ ಕ್ಷೇಮವೋ?' ಎಂದು ಕೇಳಿದನು. ಜನಾರ್ದನನು 'ಭಗವಂತನೇ! ನನ್ನ ತಂದೆಗೂ ಬ್ರಹ್ಮದತ್ತನಿಗೂ ಕ್ಷೇಮವೇ. ಹಂಸಡಿಭಿಕರೂ ಕ್ಷೇಮದಿಂದಲೇ ಇದ್ದಾರೆ.

ಭಗವಂತನು 'ಹಂಸಡಿಭಿಕರು ಏನು ಹೇಳಿ ಕಳುಹಿಸಿರುವರು? ಅದೆಲ್ಲ ಹೇಳಿರಿ. ಅದು ಹೇಗಿದ್ದರೂ ಸರಿ. ಹೇಳಿರಿ. ಅದನ್ನು ಕೇಳಿ ಮಾಡಬೇಕಾದ್ದನ್ನು ಮಾಡುವೆನು. ನೀವು ದೂತರಾಗಿ ಬಂದ ಕಾರಣ ಯಾವ ಮಾತನ್ನೂ ಆಡಿದರೂ ನಿಮಗೆ ದೋಷವಿಲ್ಲ' ಎಂದನು. ಆಗ ಜರ್ನಾದನನು 'ಭಗವಂತನೇ! ಎಲ್ಲವನ್ನೂ ಪ್ರತ್ಯಕ್ಷನಾಗಿ ತಿಳಿಯುವ ತಿಳಿಯದವರಂತೆ ಏಕೆ ಮಾತಾಡುವಿ? ಜಗತ್ತಿನ ಯಾವ ವೃತ್ತಾಂತವು ನಿನಗೆ ತಿಳಿಯದೆ ಇದ್ದದ್ದು ಇಲ್ಲವೇ ಇಲ್ಲ. ಎಲ್ಲಾ ದೇವತೆಗಳಲ್ಲಿ ಆಯಾವ ಹೆಸರಿನಿಂದ ಇದ್ದುಕೊಂಡು ಆ ಆಕಾರ್ಯವನ್ನು ಮಾಡುವವನು ನೀನೇ. ನನ್ನ ಹತ್ತಿರ ಏಕೆ ಹೇಳಲಿಕ್ಕೆ ಹೇಳುವಿ. ಆದರೂ ನಿನ್ನಿಂದ ಪ್ರೇರಿತವಾಗಿ ಹೇಳುವೆನು. ಈಗ ಬ್ರಹ್ಮದತ್ತರಾಜನು ರಾಜಸೂಯಯಾಗವನ್ನು ಮಾಡುವವನಂತೆ. ಅದಕ್ಕಾಗಿ ನಿನ್ನನ್ನು ಕಪ್ಪ ಕೊಡಲಿಕ್ಕೆ ಹೇಳಬೇಕೆಂದು ಹಂಸಡಿಭಿಕರು ನನ್ನನ್ನು ಕಳುಹಿಸಿದರು. ಯಜ್ಞಕ್ಕಾಗಿ ಬಹಳ ಉಪ್ಪನ್ನು ತಂದು ಕೊಡಬೇಕೆಂತೆ' ಎಂದು ಹೇಳಲು ಕೃಷ್ಣಪರಮಾತ್ಮನು. ಬಹುಹೊತ್ತು ನಗುವವನಾಗಿ ಆಮೇಲೆ ನಾನು ಕಪ್ಪವನ್ನು ಕೊಡಬೇಕಂತೆ. ನಾನು

ಕಪ್ಪಕೊಡುವವನು. ಬ್ರಾಹ್ಮಣರೇ ಅವರಿಗೆ ನನ್ನೊಡನೆ ಕಪ್ಪಕೇಳಲು ಎಷ್ಟು ಧೈರ್ಯವು ಬೇಕು. ನನ್ನಿಂದ ಕಪ್ಪ ತೆಗೆದುಕೊಳ್ಳುವುದನ್ನು ಇಷ್ಟವರೆಗೆ ಯಾರೂ ಕೇಳಲಿಲ್ಲ. ಬ್ರಹ್ಮದತ್ತನು ಯಾಗವನ್ನು ಮಾಡುವವನು. ಹಂಸಡಿಭಿಕರು ಮಾಡಿಸುವವರು. ನಾನು ಅವರಿಗೆ ಕಪ್ಪವನ್ನು ಕೊಡುವವನೇ? ಇದು ತುಂಬಾ ಹಾಸ್ಯಕರವಾಗಿದೆ. ಈರೀತಿಯಾಗಿ ದೇವರು ಹೇಳಲು ಬಲರಾಮರೇ ಮೊದಲಾದ ಎಲ್ಲವರೂ ಯಾದವರೂ ನಗಲಿಕ್ಕೆ ಆರಂಭಿಸಿದರು. ಶ್ರೀಕೃಷ್ಣನು ಕಪ್ಪ ಕೊಡುವವನು ಎನ್ನುತ್ತಾ ಎಲ್ಲಾ ಯಾದವರೂ ನೆಗಾಡಿದರು. ಕೈಚಪ್ಪಾಳೆ ಬಡಿದರು. ಅವರು ನೆಗಾಡುವ ಶಬ್ದವು ಭೂಮಿಯಲ್ಲಿಯೂ ಆಕಾಶದಲ್ಲಿಯೂ ವ್ಯಾಪಿಸಿತು. ಜನಾರ್ದನನು ಆಜ್ಞೆ ಲಜ್ಜೆಯಿಂದ ಸುಮ್ಮನೆ ಇದ್ದನು.



## ಸಾತ್ಯಕಿಯು ಹಂಸಡಿಭಿಕರಿದ್ದಲ್ಲಿಗೆ ಹೋಗಿ ಬಂದದ್ದು [1]

ತರುವಾಯ ಕೃಷ್ಣಪರಮಾತ್ಮನು 'ಬ್ರಾಹ್ಮಣರೇ! ನೀವು ಹೋಗಿ ಹಂಸಡಿಭಿಕರೊಡನೆ 'ಶಾಂರ್ಙಧನುಸ್ಸಿನಿಂದ ಬಿಡಲ್ಪಟ್ಟ ತೀಕ್ಷ್ಣಬಾಣಗಳಿಂದ ಕಪ್ಪವನ್ನು ಕೊಡುವೆನು. ಅಥವಾ ಖಡ್ಗದಿಂದ ಕೊಡುವೆನು. ಅಥವಾ ನನ್ನ ಕೈಯಲ್ಲಿ ಇರುವ ಚಕ್ರವೇ ಇಬ್ಬರ ತಲೆಯನ್ನು ಕಡಿದುಹಾಕುವುದು. ನಿಮಗೆ ವರವನ್ನು ಕೊಟ್ಟ ರುದ್ರನೇ ಬರಲಿ. ಆದರೂ ನಿಮ್ಮನ್ನು ನಾನು ಕೊಂದುಹಾಕುವೆನು. ಯಾವ ದೇಶದಲ್ಲಿ ಯುದ್ಧವು ನಡೆಯಲಿ? ಅಲ್ಲಿಗೆ ನಾನು ಬರುವೆನು. ಸೈನ್ಯ ಸಹಿತವಾಗಿ ಬರುವೆನು. ನೀವು ಭಯರಹಿತರಾಗಿ ಸೈನ್ಯಸಹಿತರಾಗಿ ಬನ್ನಿರಿ. ಪುಷ್ಕರದಲ್ಲಿಯೋ ಪ್ರಯಾಗದಲ್ಲಿಯೋ ಮಧುರೆಯಲ್ಲಿಯೋ ಎಲ್ಲಿ ಬೇಕಾದರೂ ಆಗಲಿ. ಅಲ್ಲಿಗೆ ನಾನು ಸೈನ್ಯ ಸಹಿತನಾಗಿ ಬರುವೆನು' ಎಂದು ಹೇಳಿದೆನೆಂದು ತಿಳಿಸಿರಿ. ಅಥವಾ ಮಿತ್ರಭಾವದಿಂದ ನಿಮಗೆ ಈ ಮಾತನ್ನು ಹೇಳಲಾಗದ್ದಿದರೆ ನಿಮ್ಮೊಡನೆ ನಮ್ಮ ಸಾತ್ಯಕಿಯು ಬಂದು ಎಲ್ಲಾ ಮಾತುಗಳನ್ನು ಹೇಳುವನು. ನಿನಗೆ ನನ್ನಲ್ಲಿ ಇರುವ ಸ್ನೇಹವನ್ನು ತಿಳಿದಿರುವೆನು. ಇದರಿಂದ ನೀವು ದುಃಖಯುಕ್ತವಾದ ಈ ಸಂಸಾರದಲ್ಲಿ ಜಯಶೀಲರಾಗಿ ನನ್ನ ಕಥೆಯಲ್ಲಿಯೇ ಆಸಕ್ತರಾಗಿ ಇರುವವರಾಗಿರಿ''. ಈಪ್ರಕಾರವಾಗಿ ಹೇಳಿ ಸಾತ್ಯಕಿಯೊಡನೆ 'ಸಾತ್ಯಕಿ! ನೀನು ಹೋಗಿ ಆ ಹಂಸಡಿಭಿಕರೊಡನೆ ನಾನು ಹೇಳಿದ

1. ಹ.ವಂ.ಭ.ಪ. ಅ.117-119

ಮಾತುಗಳನ್ನೆಲ್ಲಾ ಹೇಳು. ನಮಗೆ ಯುದ್ಧವು ಉಂಟಾಗುವಂತೆ ಮಾಡು. ನೀನು ಕೈಯಲ್ಲಿ ಧನುಸ್ಸನ್ನು ಹಿಡಿದುಕೊಂಡೇ ಹೋಗು. ಒಂದು ಕುದುರೆಯ ಮೇಲೆ ಕೂತುಕೊಂಡು ಹೋಗು' ಎಂದು ಹೇಳಿದನು. ಸಾತ್ಯಕಿಯು ಹಾಗೆಯೇ ಆಗಲಿ ಎಂದು ಹೇಳಿ ಕುದುರೆಯ ಮೇಲೆ ಹತ್ತಿ ಒಬ್ಬನೇ ಹೋಗಲಿಕ್ಕೆ ಅಭಿಪ್ರಾಯಪಟ್ಟನು. ಶ್ರೀಭಗವಂತನು ಜನಾರ್ದನನನ್ನು ಕಳುಹಿಸಿ ಏನು ಧೈರ್ಯ. ಏನು ಧೈರ್ಯ ಎಂದುಕೊಂಡನು. ಜನಾರ್ದನನು ಭಗವಂತನಿಗೆ ನಮಸ್ಕರಿಸಿ ಸಾತ್ಯಕಿಯಿಂದ ಸಹಿತನಾಗಿ ಸಾಲ್ವನಗರಕ್ಕೆ ಹೋದನು. ಸಾತ್ಯಕಿಯನ್ನು ಕರೆದುಕೊಂಡು ಹೋಗಿ ಹಂಸಡಿಭಿಕರಿಗೆ ತೋರಿಸಿದನು. 'ಇವನು ಸಾತ್ಯಕಿಯು ಶ್ರೀಕೃಷ್ಣನ ಎಡಕೈಯಂತೆ ಇರುವವನು. ದೂತನಾಗಿ ಬಂದಿರುವನು' ಎಂದು ಹೇಳಿದನು. ಹಂಸನು 'ಮೊದಲು ಕೇಳಿದ್ದೆನು. ಈಗ ನೋಡಿದೆನು. ಇವನು ಧನುರ್ವೇದದಲ್ಲಿಯೂ ವೇದದಲ್ಲಿಯೂ ಎಲ್ಲಾ ಶಾಸ್ತ್ರಗಳಲ್ಲಿಯೂ ಪಂಡಿತನು. ಧೈರ್ಯಶಾಲಿಯು ಎಂದು ಕೇಳಿರುವೆವು. ಈಗ ನಮ್ಮ ಕಣ್ಣಿಗೆ ಬೀಳುವವನಾಗಿ ನಮಗೆ ತುಂಬಾ ಪ್ರೀತಿಯನ್ನು ಉಂಟುಮಾಡು ತ್ತಿರುವನು. ಕೃಷ್ಣಬಲರಾಮರು ಸುಖದಿಂದ ಇರುವರೇ? ಉಗ್ರಸೇನಾದಿ ಯಾದವರು ಕುಶಲಿಗಳೇ?' ಎಂದು ಕೇಳಲು ಸಾತ್ಯಕಿಯು ಮೆಲ್ಲನೆ ಹೌದು ಎಂದನು. ತರುವಾಯ ಹಂಸನು ಜನಾರ್ದನನೊಡನೆ 'ಕೃಷ್ಣನನ್ನು ನೋಡಿದಿಯಾ? ನಮ್ಮ ಕಾರ್ಯವು ಆಯಿತೋ? ಎಲ್ಲವನ್ನು ಬೇಗನೇ ಹೇಳು. ಸುಮ್ಮನೆ ಕಾಲವನ್ನು ಕಳೆಯಬೇಡ' ಎಂದು ಹೇಳಿದನು.

ಆಗ ಜನಾರ್ದನನು ಮಂದಹಾಸವನ್ನು ಮಾಡುತ್ತಾ ಭಗವಂತನನ್ನು ಸ್ತೋತ್ರ ಮಾಡಿ ನಾನಾವಿಧವಾಗಿ ವರ್ಣನೆ ಮಾಡುತ್ತಾ ನಾನು ನೋಡಿದೆನೆಂದನು. 'ದುರ್ವಾಸರೊಡನೆಯೂ ನಾರದರೊಡನೆಯೂ ಮಾತಾಡುತ್ತಿದ್ದ ಭಗವಂತನನ್ನು ನೋಡಿದೆನು. ಆ ಭಗವಂತನನ್ನು ನೋಡಿ ಹಂಸಡಿಭಿಕರು ಆರಂಭಿಸಿದ ಕಾರ್ಯವು ಅಶಕ್ಯವಾದದ್ದು. ಅದನ್ನು ಆರಂಭಿಸಬಾರದು ಎಂದು ತಿಳಿದುಕೊಂಡೆನು. ಕೃಷ್ಣಪರಮಾತ್ಮನೊಡನೆ ಕಪ್ಪಕೇಳುವ ಕಥೆಯು ಮುಗಿಯಿತು. ಎಲ್ಲಾ ವಿಷಯವನ್ನು ಸಾತ್ಯಕಿಯು ತಿಳಿಸುವನು' ಎಂದನು.

ಆ ಮಾತನ್ನು ಕೇಳಿ ಹಂಸನಿಗೆ ಬಹುಕೋಪವು ಬಂದಿತು. 'ಎಲಾ ಬ್ರಾಹ್ಮಣ ಹುಡುಗ' ಅವನ ಮಾಯೆಯನ್ನು ನಮ್ಮ ಮುಂಭಾಗದಲ್ಲಿ ಹೇಳುವಿಯಾ? ಅವನನ್ನು ನೋಡಿ ನಿನಗೆ ಭ್ರಮವುಂಟಾಗಿರುವುದು. ನಿನ್ನನ್ನು ಚೆನ್ನಾಗಿ ಮೋಸಗೊಳಿಸಿರುವನು. ಬ್ರಾಹ್ಮಣ! ನೀನು ಸಖಿಯಾದ ಕಾರಣ ನೀನು ಹೇಳಿದ ಮಾತನ್ನೆಲ್ಲಾ ಸಹಿಸಿರುವೆನು.

ಇಲ್ಲದಿದ್ದರೆ ಇಂತಹ ಮಾತನ್ನು ಯಾರು ಸರಿಸುವನು? ಮಂದಬುದ್ಧಿಯುಳ್ಳವನೇ ಇಲ್ಲಿಂದ ಹೊರಟುಹೋಗು. ಎಲ್ಲಿ ಬೇಕಾದರೂ ಹೋಗು. ನಾನು ಆ ಗೋಪಾಲ ಹುಡುಗನನ್ನು ಜಯಿಸಿ ಬಹುಯಾದವರನ್ನು ಸಂಹರಿಸುವೆನು. ಬ್ರಾಹ್ಮಣ ನೀನು ಹೋಗು ಹೋಗು. ಬ್ರಾಹ್ಮಣನನ್ನು ಕೊಲ್ಲಬಾರದು ಎಂದು ಬಿಟ್ಟಿದ್ದೇನೆ' ಎಂದು ಹೇಳಿ ಸಾತ್ಯಕಿಯೊಡನೆ 'ಎಲಾ ಯಾದವ ಹುಡುಗ! ನೀನು ಯಾಕೆ ಇಲ್ಲಿಗೆ ಬಂದಿರುವೆ? ಆ ನಂದಗೋಪನ ಮಗನು ಏನು ಹೇಳಿರುವನು? ನನಗೆ ಕಪ್ಪವನ್ನು ಕೊಟ್ಟಿರುವನೋ? ಎಂದು ಕೇಳಿದನು. ಅದಕ್ಕೆ ಸಾತ್ಯಕಿಯು ''ಇದು ಪರಮಾತ್ಮನು ಹೇಳಿ ಕಳುಹಿಸಿರುವ ಸತ್ಯವಾದ ವಚನವು. 'ಶಾಂರ್ಜಧನುಸ್ಸಿನಿಂದ ಬಿಡಲ್ಪಟ್ಟ ತೀಕ್ಷ್ಣಬಾಣಗಳಿಂದ ಎಲ್ಲಾ ಕಪ್ಪವನ್ನು ಕೊಡುತ್ತೇನೆ. ಕಪ್ಪವನ್ನು ಕೇಳುವ ನಿನ್ನ ತಲೆಯನ್ನು ಕತ್ತಿಯಿಂದ ಕಡಿದು ಹಾಕುವೆನು.' ನೃಪಾಧಮ! ನಿನ್ನ ಧೈರ್ಯವನ್ನು ಏನೆಂದು ಹೇಳಬೇಕು. ನಿನ್ನ ನಾಲಿಗೆಯನ್ನು ಕತ್ತರಿಸುವುದೇ ನಿನಗೆ ಕೊಡುವ ಕಪ್ಪವು. ಆ ಭಗವಂತನ ಶಂಖದ ಧ್ವನಿಯಲ್ಲಿ ಕೇಳಿ ಯಾರು ಬದುಕುವನು? ಈಗ ಇರು. ರುದ್ರದೇವರ ವರವಿದೆಯೆಂಬ ಅಹಂಕಾರದಿಂದ ಹೇಳುವೆಯಾ? ನಾವೆಲ್ಲರೂ ಬರುವೆವು. ಬಲರಾಮದೇವರು, ನಾನು, ಸಾತ್ಯಕಿ, ಕೃತವರ್ಮ, ನಿಶಠ, ಒಭ್ರು, ಉತ್ಕಲ, ತಾರಣ, ಸಾರಂಗ, ವಿಪೃಥು, ಉದ್ಧವ ಇವರೆಲ್ಲರೂ ಬರುವೆವು. ಭಗವಂತನು ಯುದ್ಧಕ್ಕೆ ಹೋಗುವಾಗ ನಾವು ರಾತ್ರಿಹಗಲು ಹೋಗುವೆವು. ಆ ಭಗವಂತನ ಅಶ್ವಿನೀದೇವತೆಗಳಂತೆ ಇರುವ ಇಬ್ಬರು ಮಕ್ಕಳೇ ನಿಮ್ಮನ್ನು ಸಂಹರಿಸಲಿಕ್ಕೆ ಸಮರ್ಥರು. ಮೂರುಲೋಕಗಳನ್ನು ರಕ್ಷಿಸುವ ಆ ಭಗವಂತನು ನಿಮ್ಮನ್ನು ಕೊಂದುಹಾಕುವನು. ನಮಗೆಲ್ಲಿ ಯುದ್ಧವು ನಡೆಯುವುದೆಂದು ಭಗವಂತನು ಕೇಳಿರುವನು? ಪುಷ್ಕರದಲ್ಲಿಯೋ? ಪ್ರಯಾಗದಲ್ಲಿಯೋ? ಅಥವಾ ಗೋವರ್ಧನ ಪರ್ವತದಲ್ಲಿಯೋ? ಅಥವಾ ಮಧುರಾಪಟ್ಟಣದಲ್ಲಿಯೋ ಎಂದು ಕೇಳಿರುವನು. ನೀನು ಹೊರತು ಯಾವಾತನು ರಾಜಸೂಯಯಾಗವನ್ನು ಮಾಡಲಿಕ್ಕೆ ಇಚ್ಛಿಸುವನು? ಮಾಡುತ್ತೇನೆ ಎಂದು ಬಾಯಿಯಲ್ಲಿ ಹೇಳಿದರೆ ಯಾರು ಕ್ಷೇಮವನ್ನು ಹೊಂದುವನು? ಮೂರ್ಖನೇ ನೀನು ಲೋಕದಲ್ಲಿ ಅಪಹಾಸಕ್ಕೆ ವಿಷಯನಾಗುವಿ' ಎಂದು ಹೇಳಿ ನೆಗುತ್ತಾ (ನಗುತ್ತಾ) ಇದ್ದನು.

ಆಗ ಹಂಸಡಿಭಿಕರು ಕೋಪಿಸಿಕೊಂಡು ಕಣ್ಣು ಕೆಂಪಗೆ ಮಾಡುತ್ತಾ ಸುತ್ತಲೂ ನೋಡಿ ಕೈಯನ್ನು ಕೈಯಿಂದ ತಿಕ್ಕಿಕೊಂಡು 'ನಂದಗೋಪನ ಮಗನು ಎಲ್ಲಿ? ಆ ಬಲರಾಮನು ಎಲ್ಲಿ?' ಎನ್ನುತ್ತಾ 'ಎಲಾ ಯಾದವ ಹುಡುಗ? ನಮ್ಮ ಮುಂದೆ

ಇದ್ದುಕೊಂಡು ಏನು ಹೇಳುವಿ? ಅಲ್ಪನೇ ಇಲ್ಲಿಂದ ಹೊರಟುಹೋಗು. ನೀನು ದೂತನಾಗಿ ಬಂದಿರುವಿ. ಇಲ್ಲದಿದ್ದರೆ ನಿನ್ನನ್ನು ಕೊಂದು ಹಾಕುತ್ತಿದ್ದೆನು. ನೀನು ಮಾನಗೆಟ್ಟವನು. ಆದುದರಿಂದ ಇಂತಹ ಮಾತನ್ನು ಆಡುವಿ. ನಾವು ಈ ಎಲ್ಲಾ ಜಗತ್ತನ್ನು ಶಾಸನ ಮಾಡಲಿಕ್ಕೆ ಹೊರಟಿರುವೆವು. ನಮಗೆ ಕಪ್ಪವನ್ನು ಕೊಟ್ಟವರು ಮಾತ್ರ ಲೋಕದಲ್ಲಿ ಬದುಕಬಹುದು. ಗೋಪಾಲರನ್ನೆಲ್ಲಾ ಕೊಂದುಹಾಕಿ ಯಾದವರನ್ನೆಲ್ಲಾ ಕಟ್ಟಿಹಾಕಿ ಕಪ್ಪವನ್ನು ಸ್ವೀಕರಿಸುವೆವು. ನರಾಧಮನೇ! ಹೊರಟು ಹೋಗು. ಬಹು ಅಬದ್ಧ ಮಾತುಗಳನ್ನು ಆಡುತ್ತಿರುವಿ. ದೂತನಾಗಿ ಬಂದಿರುವ ಕಾರಣ ಬದುಕಿದಿ. ನಮಗೆ ರುದ್ರದೇವರು ವರವನ್ನು ಕೊಟ್ಟಿರುವರು. ನಾವು ಯುದ್ಧಕ್ಕೆ ಹೋಗುವಾಗ ರುದ್ರದೇವರ ಎರಡು ಭೂತಗಳು ಸಹಾಯಕ್ಕೆ ಬರುವುವು. ನಾವು ಯುದ್ಧದಲ್ಲಿ ಗೋಪಾಲರನ್ನು ಕೊಂದು ತಂದೆಯಿಂದ ರಾಜಸೂಯ ಯಾಗವನ್ನು ಮಾಡಿಸುವೆವು. ಎಲ್ಲಾ ಸೈನಿಕರೂ ಬರಲಿ. ಕೊಂದು ಹಾಕುವೆವು. ನಾಳೆಯೋ ನಾಡದೋ ನಮಗೆ ಪುಷ್ಕರದಲ್ಲಿ ಯುದ್ಧವು ನಡೆಯಲಿ. ತರುವಾಯ ನಾನು ಕೃಷ್ಣನ ಬಲರಾಮನ ನೀನು ಹೇಳಿದ ಎಲ್ಲರ ಬಲವನ್ನು ತಿಳಿಯುವೆನು' ಎಂದು ಹೇಳಿದನು.

ಅದಕ್ಕೆ ಸಾತ್ಯಕಿಯು 'ಹಂಸ! ನಾಳೆಯೋ ನಾಡದೋ ನಿಮ್ಮಿಬ್ಬರನ್ನೂ ಕೊಲ್ಲಲಿಕ್ಕೆ ನಾನು ಬರುವೆನು. ನಾನು ದೂತನಾಗಿ ಬರದೆ ಇದ್ದರೆ ಈಗಲೇ ಸಂಹರಿಸುತ್ತಿದ್ದೆನು. ನಾಳೆಯೋ ನಾಡದೋ ಕ್ರೂರವಾಗಿ ಮಾತಾಡುವ ನಿಮ್ಮಿಬ್ಬರನ್ನು ಸಂಹರಿಸುವೆನು. ದೂತನಾಗಿ ಬಂದುದರಿಂದ ಬಹುಕಷ್ಟವಾಗಿದೆ. ದೂತನಾಗಿ ಬರದೆ ಇದ್ದಿದ್ದರೆ ಈಗಲೇ ನಿಮ್ಮನ್ನು ಕೊಂದು ಬಿಡುತ್ತಿದ್ದೆನು. ನನ್ನ ವೀರ್ಯವನ್ನು ಬಾಹುದರ್ಪವನ್ನು ತೋರಿಸುತ್ತಿದ್ದೆನು. ಜಗತ್ತನ್ನು ಸೃಷ್ಟಿಮಾಡಿದ ಸರ್ವಸ್ವಾಮಿಯಾದ ಆ ಶ್ರೀಕೃಷ್ಣ ಪರಮಾತ್ಮನು ಬಂದು ಯುದ್ಧದಲ್ಲಿ ತೀಕ್ಷ್ಣವಾದ ಬಾಣದಿಂದ ನಿಮ್ಮ ಅಹಂಕಾರವನ್ನು ಖಂಡಿಸುವನು' ಎಂದು ಹೇಳಿ ರಥವನ್ನು ಏರಿ ಹೊರಟುಹೋದನು.



# ಶ್ರೀಕೃಷ್ಣನು ಯುದ್ಧಕ್ಕೆ ಬಂದುದು [1]

ಸಾತ್ಯಕಿಯು ದ್ವಾರಕಾಪಟ್ಟಣಕ್ಕೆ ಹೋಗಿ ನಡೆದ ವಿಷಯವನ್ನೆಲ್ಲಾ ತಿಳಿಸಿದನು. ತರುವಾಯ ಮರುದಿವಸ ಬೆಳಿಗ್ಗೆ ಆಗಲು ಶ್ರೀಭಗವಂತನು ಸೇನಾಧಿಪತಿಗಳ ಹತ್ತಿರ ಸೈನ್ಯವೆಲ್ಲವೂ ಯುದ್ಧಕ್ಕೆ ಹೋಗಲಿಕ್ಕೆ ಸಿದ್ಧವಾಗಲಿ ಎಂದು ಹೇಳಿದನು. ಅವರು ಹಾಗೆಯೇ ಆಗಲಿ ಎಂದು ಹೇಳಿ ಸೈನ್ಯವನ್ನೆಲ್ಲಾ ಸಿದ್ಧಪಡಿಸಿದರು. ಸೇನಾನಾಯಕರು ದೃಢವಾದ ಧನುಸ್ಸನ್ನು ಹಿಡಿದುಕೊಂಡು ಕವಚವನ್ನು ಧರಿಸಿದವರಾಗಿ ರಥವನ್ನು ಏರಿದವರಾಗಿ ಸೈನ್ಯದ ಮುಂಭಾಗದಲ್ಲಿ ಹೋದರು. ಸಾತ್ಯಕಿಯೂ ಕ್ರೋಧವುಳ್ಳವನಾಗಿ ಧನುಸ್ಸನ್ನು ಹಿಡಿದುಕೊಂಡು ಮುಂಭಾಗದಲ್ಲಿ ಹೋದನು. ಇತರ ಶೂರರಾದ ಯಾದವರೂ ಮಹಾಯುಧಗಳನ್ನು ಹಿಡಿದುಕೊಂಡು ಸಿಂಹಗರ್ಜನೆಯನ್ನು ಮಾಡುತ್ತಾ ಹೋದರು. ಶ್ರೀಕೃಷ್ಣಪರಮಾತ್ಮನು ದಾರುಕನು ಓಡಿಸುವ ರಥದಲ್ಲಿ ಕೂತುಕೊಂಡು ಧನುರ್ಬಾಣಗಳನ್ನು ಧರಿಸಿಕೊಂಡು ಚಕ್ರ ಶಂಖ ಗದಾ ಖಡ್ಗ ಎಂಬ ಆಯುಧವುಳ್ಳವನಾಗಿ ಕವಚಧಾರಿಯಾಗಿ ಪೀತಾಂಬರಧಾರಿಯಾಗಿ ಪದ್ಮಗಳ ಮಾಲೆಯನ್ನು ಧರಿಸಿಕೊಂಡು ಬ್ರಾಹ್ಮಣರಿಂದ ಸ್ತೋತ್ರಮಾಡಲ್ಪಡುತ್ತಾ ಹೋದನು. ಸೂತರೂ ಮಾಗಧರೂ ಸ್ತೋತ್ರ ಮಾಡುತ್ತಿದ್ದರು. ಶ್ರೀಭಗವಂತನು ಎಲ್ಲಾ ಸೈನ್ಯಗಳಿಂದ ಸಹಿತನಾಗಿ ಉತ್ತರದಿಕ್ಕಿಗೆ ಹೋದನು. ಪಾಂಚಜನ್ಯ ಶಂಖವನ್ನು ಬಾಯಿಯಲ್ಲಿ ಇಟ್ಟುಕೊಂಡು ಗಟ್ಟಿಯಾಗಿ ಊದುವವನಾಗಿ ಶತ್ರುಗಳಿಗೆ ಭಯವನ್ನು ಉಂಟುಮಾಡಿದನು. ಆ ಶಂಖಶಬ್ದವು ಭೂಮಿಯಲ್ಲಿಯೂ ಆಕಾಶದಲ್ಲಿಯೂ ಸರ್ವಸ್ಥಳಗಳಲ್ಲಿ ತುಂಬಿಹೋಯಿತು. ದೇವರು ಈರೀತಿಯಾಗಿ ಶಂಖವನ್ನು ಊದಲು ಎಲ್ಲಾ ಜನರೂ ಸಾವಿರಾರು ಶಂಖಗಳನ್ನು ಊದಿದರು. ಭೇರಿ ಮೃದಂಗ ಇತ್ಯಾದಿ ವಾದ್ಯಗಳನ್ನು ಬಾರಿಸಿದರು. ಗಟ್ಟಿಯಾಗಿ ಗರ್ಜನೆ ಮಾಡಿದರು. ಆಮೇಲೆ ಪವಿತ್ರವಾದ ಪುಷ್ಕರಕ್ಕೆ ಬಂದರು. ಎಲ್ಲಾ ಯಾದವರೂ ಪುಷ್ಕರ ಸರೋವರದ ಬಳಿಯಲ್ಲಿಯೇ ಡೇರೆಗಳನ್ನು ಮಾಡಿಕೊಂಡರು. ಹಂಸಡಿಭಿಕರನ್ನು ಎದುರುನೋಡುತ್ತಾ ಇದ್ದರು. ಶ್ರೀಭಗವಂತನು ಪುಷ್ಕರ ಸರೋವರವನ್ನು ನೋಡಿ ಅದರ ನೀರಿನಿಂದ ಆಚಮನ ಮಾಡಿ ಯತಿಗಳಿಗೆ ನಮಸ್ಕರಿಸಿ ಪವಿತ್ರವಾದ ಬ್ರಾಹ್ಮಣರ ವೇದಧ್ವನಿಯನ್ನು ಕೇಳುತ್ತಾ ಸರೋವರದ ತೀರಲ್ಲಿ ಹಂಸಡಿಭಿಕರ ಆಗಮವನ್ನು ಎದುರುನೋಡುತ್ತಾ ಇದ್ದನು.



1. ಹ.ವಂ.ಭ.ಪ. ಅ–120

# ಹಂಸಡಿಭಿಕರು ಯುದ್ಧಕ್ಕೆ ಬಂದುದು[1]

ತರುವಾಯ ಹಂಸಡಿಭಿಕರು ಪುಷ್ಕರಕ್ಕೆ ಬಂದರು. ಅವರು ಧನುಸ್ಸನ್ನು ಹಿಡಿದಿದ್ದರು. ರಥದಲ್ಲಿ ಕೂತುಕೊಂಡು ಬಂದರು. ಅವರ ಮುಂದೆ ಎರಡು ಮಹಾಭೂತಗಳು ಬಂದವು. ಅವು ಜಗತ್ತನ್ನು ಸಂಹಾರಮಾಡುವಂತೆ ಇದ್ದವು. ಸಿಂಹದಂತೆ ಕೂಗುತ್ತಿದ್ದವು. ಮೈಯೆಲ್ಲಾ ಬೂದಿಯನ್ನು ಹಚ್ಚಿಕೊಂಡಿದ್ದವು. ಹಣೆಯಲ್ಲಿ ಮೂರು ಅಡ್ಡನಾಮಗಳನ್ನು ಧರಿಸಿದ್ದವು. ರುದ್ರಾಕ್ಷಿಗಳನ್ನು ಧರಿಸಿದ್ದವು. ಲೋಕಸಂಹಾರ ಮಾಡುವ ಬೇರೆ ಇಬ್ಬರು ರುದ್ರರಂದೆ ಕಾಣಿಸುತ್ತಿದ್ದವು. ಅವರ ಹಿಂದೆ ನೂರಾರು ಸೈನಿಕರು ಬಂದರು. ಹಂಸಡಿಭಿಕರ ಹತ್ತು ಅಕ್ಷೌಹಿಣೀ ಸೈನ್ಯಗಳು ಬಂದಿದ್ದವು.

ಬಲಿಷ್ಠರಾದ ಹಂಸಡಿಭಿಕರಿಗೆ ಪರ್ವತದಂತೆ ಆಕಾರವುಳ್ಳ ವಿಚಕ್ರ ಎಂಬ ರಾಕ್ಷಸರು ಪೂರ್ವದಲ್ಲಿ ಮಿತ್ರನಾಗಿದ್ದನು. ಅವನ ಮುಂದೆ ನಿಲ್ಲಲಿಕ್ಕೆ ಇಂದ್ರದೇವರೂ ಸಮರ್ಥರಾಗಿದ್ದಿಲ್ಲ. ಅವನು ದೇವಾಸುರ ಯುದ್ಧದಲ್ಲಿ ದೇವತೆಗಳನ್ನೆಲ್ಲಾ ಬಡಿದು ಇಂದ್ರದೇವರನ್ನು ಜಯಿಸಿದ್ದನು. ಅವನು ಪೂರ್ವದಲ್ಲಿ ಸಮರ್ಥನಾದ ವಿಷ್ಣುವಿ ನೊಡನೆ ಯುದ್ಧ ಮಾಡಿದ್ದನು. ದ್ವಾರಕಾಪಟ್ಟಣಕ್ಕೆ ಹೋಗಿ ಯಾದವರನ್ನು ಪೀಡಿಸು ತ್ತಿದ್ದನು. ಅವನಾದರೂ ಆಗ ಯುದ್ಧವು ಸಮೀಪಿಸುತ್ತಿದ್ದನ್ನು ತಿಳಿದು ಪರಿಘವೆಂಬ ಆಯುಧವುಳ್ಳ ಅನೇಕ ನೂರು ಸಾವಿರ ದಾನವರಿಂದ ಕೂಡಿಕೊಂಡು ಯಾದವರ ಮೇಲಿನ ದ್ವೇಷದಿಂದ ಹಂಸಡಿಭಿಕರಿಗೆ ಸಹಾಯವನ್ನು ಮಾಡಲಿಕ್ಕೆ ಬಂದನು.

ವಿಚಕ್ರ ಎಂಬ ಆ ದೈತ್ಯನಿಗೆ ಹಿಡಿಂಬನೆಂಬ ರಾಕ್ಷಸರಾಜನು ಅತ್ಯಂತ ಮಿತ್ರನಾಗಿದ್ದನು. ಅವನು ಅನೇಕ ರಾಕ್ಷಸರಿಂದ ಕೂಡಿಕೊಂಡು ಸಹಾಯಕ್ಕೆ ಬಂದನು. ಹಿಡಿಂಬನೊಡನೆ ಪರಿಘದಂತೆ ಬಾಹುಉಳ್ಳ ಎಂಭತ್ತೆಂಟು ಸಾವಿರ ರಾಕ್ಷಸರು ಬಂದರು. ಅವರು ಕೈಯಲ್ಲಿ ಕಲ್ಲುಗಳನ್ನು ಪರಿಘಗಳನ್ನು ಹಿಡಿದುಕೊಂಡು ಇದ್ದರು. ಈರೀತಿಯಾಗಿ ಹಂಸಡಿಭಿಕರ ಸೈನ್ಯವು ದೈತ್ಯರಿಂದಲೂ ರಾಕ್ಷಸರಿಂದಲೂ ಮಿಶ್ರಿತವಾಗಿ ಅತ್ಯದ್ಭುತಾಕಾರವುಳ್ಳದ್ದಾಗಿಯೂ ಮೂರು ಲೋಕಗಳಿಗೂ ಭಯವನ್ನು ಉಂಟು ಮಾಡುವುದಾಗಿಯೂ ಇದ್ದಿತು. ಹಂಸಡಿಭಿಕರು ಸೈನ್ಯಸಹಿತರಾಗಿ ಶ್ರೀಕೃಷ್ಣ ನನ್ನು ಸಂಹರಿಸಬೇಕೆಂದು ದುರ್ಬುದ್ಧಿಯುಳ್ಳವರಾಗಿ ಪುಷ್ಕರಕ್ಕೆ ಹೋದರು. ಜರಾಸಂಧನು ಹಂಸಡಿಭಿಕರು ದುರ್ವಾಸರಿಗೆ ಅವಮಾನವನ್ನು ಮಾಡಿದ್ದನ್ನು ಕೇಳಿ ದುರ್ವಾಸರು ರುದ್ರದೇವರ ಅವತಾರವೆಂದು ತಿಳಿದವನಾದ ಕಾರಣ ತಾನೀಗ

1. ಹ.ವಂ.ಭ.ಪ. ಅ. 121-122

ಹಂಸಡಿಭಿಕರಿಗೆ ಸಹಾಯಕ್ಕೆ ಬಂದರೆ ಪಾಪವು ಬರುವುದೆಂದು ತಿಳಿದುಕೊಂಡು ಸಹಾಯಕ್ಕೆ ಬರಲಿಲ್ಲ. ಹಂಸಡಿಭಿಕರ ಸೈನಿಕರು ಸಿಂಹಗರ್ಜನೆ ಮಾಡುತ್ತಾ ನಾನೇ ಮೊದಲು ಭಗವಂತನೊಡನೆ ಯುದ್ಧವನ್ನು ಮಾಡುವೆನು ಎಂದು ಹೇಳುತ್ತಾ ವೇಗದಿಂದ ಪುಷ್ಕರದ ಬಳಿಗೆ ಹೋದನು. ಅಲ್ಲಿ ಪ್ರವೇಶಿಸಿ ಯುದ್ಧಕ್ಕೆ ಬಂದಿದ್ದ ಶ್ರೀಕೃಷ್ಣಪರಮಾತ್ಮನನ್ನು ನೋಡಿದರು.



## ವಿಚಕ್ರನಿಗೂ ಭಗವಂತನಿಗೂ ಯುದ್ಧವು [1]

ತರುವಾಯ ಎರಡು ಪಕ್ಷದವರಿಗೂ ಭಯಂಕರವಾದ ಯುದ್ಧವು ನಡೆಯಿತು. ಅನೇಕರು ಸತ್ತರು. ಪಿಶಾಚಿಗಳೂ ರಾಕ್ಷಸರೂ ರಕ್ತಮಾಂಸಗಳಿಂದ ತೃಪ್ತರಾದರು. ಮಧ್ಯಾಹ್ನದವರೆಗೂ ಭಯಂಕರವಾದ ಯುದ್ಧವು ನಡೆಯಿತು. ಆಮೇಲೆ ದ್ವಂದ್ವಯುದ್ಧವು ನಡೆಯಿತು. ಶ್ರೀಭಗವಂತನು ವಿಚಕ್ರನೊಡನೆ ಯುದ್ಧಮಾಡಿದನು. ಬಲರಾಮದೇವರು ಹಂಸನೊಡನೆಯೂ, ಸಾತ್ಯಕಿಯು ಡಿಭಿಕನೊಡನೆಯೂ, ವಸುದೇವ ಉಗ್ರಸೇನರೊಡನೆ ಹಿಡಿಂಬಾಸುರನೂ, ಇನ್ನು ಉಳಿದವರು ಪರಸ್ಪರವೂ ಯುದ್ಧವನ್ನು ಮಾಡಿಕೊಂಡರು. ಪರಮಾತ್ಮನು ರಾಕ್ಷಸನ ಎದೆಗೆ ಎಪ್ಪತ್ತಮೂರು ಬಾಣಗಳನ್ನು ಬಿಟ್ಟನು. ರಾಕ್ಷಸನು ದೃಢವಾದ ತೀಕ್ಷ್ಣವಾದ ಒಂದು ಬಾಣವನ್ನು ಪರಮಾತ್ಮನ ಎದೆಗೆ ಬಿಟ್ಟನು. ಅದರಿಂದ ಶ್ರೀಭಗವಂತನು ದುಷ್ಟರನ್ನು ಮೋಹಗೊಳಿಸುತ್ತಾ ಕೋಪಿಸಿಕೊಂಡು ಬಾಣದಿಂದ ವಿಚಕ್ರನ ರಥದ ಧ್ವಜವನ್ನು ಮುರಿದು ನಾಲ್ಕು ಕುದುರೆಗಳನ್ನು ಸಂಹರಿಸಿ ಸಾರಥಿಯನ್ನು ಕೊಂದು ಶಂಖವನ್ನು ಊದಿದನು. ಆಗ ರಾಕ್ಷಸನು ಅತ್ಯಂತ ಕೋಪವುಳ್ಳವನಾಗಿ ರಥದಿಂದ ಕೆಳಗೆ ಹಾರಿ ಗದೆಯನ್ನು ತೆಗೆದು ಅದರಿಂದ ಭಗವಂತನ ಕಿರೀಟಕ್ಕೂ ಹಣೆಗೂ ಬಡಿದನು. ಸಿಂಹದಂತೆ ಗರ್ಜನೆ ಮಾಡಿದನು. ಆಮೇಲೆ ದೊಡ್ಡ ಕಲ್ಲನ್ನು ತೆಗೆದು ನೂರುಬಾರಿ ತಿರುಗಿಸಿ ದೇವರ ಎದೆಗೆ ಬಿಸಾಡಿದನು. ಶ್ರೀಭಗವಂತನು ಬರುತ್ತಿರುವ ಆ ಕಲ್ಲನ್ನು ನೋಡಿ ಕೈಯಿಂದ ಹಿಡಿದು ಅದರಿಂದಲೇ ರಾಕ್ಷಸನನ್ನು ಬಡೆದನು. ರಾಕ್ಷಸನು ಸುತ್ತುವನಂತೆ ಮೂರ್ಛಿತನಾಗಿ ಕೆಳಗೆ ಬಿದ್ದನು. ಆಮೇಲೆ ಮೂರ್ಛೆಯಿಂದ ತಿಳಿದು ಎದ್ದು ಎರಡು ಪಾಲುಕೋಪವುಳ್ಳವನಾಗಿ ಘೋರವಾದ ಪರಿಘವನ್ನು ಹಿಡಿದುಕೊಂಡು 'ಗೋವಿಂದ! ಇದರಿಂದ ನಿನ್ನ ಅಹಂಕಾರವನ್ನು ಪರಿಹರಿಸುವೆನು.

1. ಹ.ವಂ.ಭ.ಪ. ಅ–123

ದೇವಾಸುರ ಯುದ್ಧದಲ್ಲಿ ನನ್ನ ಸಾಮರ್ಥ್ಯವನ್ನು ತಿಳಿದವನಾಗಿರುವಿ. ಅದೇ ನನ್ನ ಕೈಗಳು. ಅದೇ ನಾನು. ನನ್ನ ಸಾಮರ್ಥ್ಯವನ್ನು ತಿಳಿದೂ ಯುದ್ಧ ಮಾಡುವಿಯಲ್ಲಾ ಈ ಪರಿಘವನ್ನು ತಡೆಯುವವನಾಗು' ಎಂದು ಹೇಳಿ ಎಲ್ಲಾ ಜನರೂ ನೋಡುವಂತೆ ಪರಮಾತ್ಮನ ಮೇಲೆ ಪರಿಘವನ್ನು ಬಿಸಾಡಿದನು.

ಭಗವಂತನು ಅದನ್ನು ಕೈಯಲ್ಲಿ ಹಿಡಿದುಕೊಂಡು ನೀನು ಸಾಯುವಿ ಎಂದು ಹೇಳುತ್ತಾ ಖಡ್ಗದಿಂದ ಚೂರುಚೂರು ಮಾಡಿದನು. ತರುವಾಯ ರಾಕ್ಷಸನು ದೊಡ್ಡ ಮರವನ್ನು ತೆಗೆದು ಅದರಿಂದ ಪರಮಾತ್ಮನಿಗೆ ಬಡಿದನು. ಭಗವಂತನು ಆ ಮರವನ್ನೂ ಖಡ್ಗದಿಂದ ಚೂರುಚೂರು ಮಾಡಿದನು. ಈರೀತಿಯಾಗಿ ಬಹುಹೊತ್ತು ಪರಮಾತ್ಮನು ಆ ರಾಕ್ಷಸನೊಡನೆ ಕ್ರೀಡಾಮಾಡಿ ತೀಕ್ಷ್ಣವಾದ ಬಾಣವನ್ನು ತೆಗೆದು ಆಗ್ನೇಯಾಸ್ತ್ರ ಮಂತ್ರವನ್ನು ಅಭಿಮಂತ್ರಿಸಿ ರಾಕ್ಷಸನನ್ನು ಬಡೆದನು. ಆ ಬಾಣವು ಎಲ್ಲರೂ ನೋಡುವಂತೆ ಆ ರಾಕ್ಷಸನನ್ನು ಸುಟ್ಟು ಕೃಷ್ಣಪರಮಾತ್ಮನ ಕೈಗೇ ಬಂದು ಸೇರಿತು. ಸತ್ತು ಉಳಿದ ದೈತ್ಯರೆಲ್ಲರೂ ಹತ್ತುದಿಕ್ಕುಗಳಿಗೆ ಓಡಿಹೋಗಿ ಸಮುದ್ರವನ್ನು ಪ್ರವೇಶಿಸಿ ಹಿಂದಿರುಗಿ ಬರಲೇ ಇಲ್ಲ.



## ಹಂಸಬಲರಾಮರ ಯುದ್ಧ[1]

ಬಲರಾಮದೇವರು ಹಂಸನನ್ನು ಹತ್ತುಬಾಣಗಳಿಂದ ಬಡಿದರು. ಹಂಸನು ಬಲರಾಮದೇವರನ್ನು ಐದು ಬಾಣಗಳಿಂದ ಬಡಿದನು. ಬಲರಾಮದೇವರು ಬೇಗನೇ ಬರುತ್ತಿದ್ದ ಆ ಬಾಣಗಳನ್ನು ಹತ್ತು ಬಾಣಗಳಿಂದ ಕತ್ತರಿಸಿ ಪುನಃ ಒಂದು ಬಾಣದಿಂದ ಹಂಸನ ಹಣೆಗೆ ಬಡಿದರು. ಅದರಿಂದ ಹಂಸನು ಮೂರ್ಛಿತನಾದನು. ಸ್ವಲ್ಪ ಹೊತ್ತಿನ ಮೇಲೆ ಎಚ್ಚರವನ್ನು ಹೊಂದಿದ ಹಂಸನು ಬಲರಾಮದೇವರನ್ನು ಬಡಿದು ದೇವತೆಗಳನ್ನು ಆಶ್ಚರ್ಯಪಡಿಸುತ್ತಾ ಗರ್ಜನೆ ಮಾಡಿದನು. ಬಲರಾಮದೇವರು ತುಂಬಾ ಕೋಪವುಳ್ಳವರಾದರು. ಆ ಬಾಣಪ್ರಹಾರದಿಂದ ಬಿಸಿಯಾದ ರಕ್ತವನ್ನು ಕಾರಿದರು. ದೀರ್ಘಶ್ವಾಸವನ್ನು ಬಿಟ್ಟರು. ಮೈಯೆಲ್ಲಾ ರಕ್ತವು ಸುರಿದು ಕುಂಕುಮವನ್ನು ಹಚ್ಚಿಕೊಂಡಂತೆ ಕಾಣಿಸಿತು. ಆಮೇಲೆ ಬಲರಾಮದೇವರು ಹಂಸನಿಗೆ ಸಾವಿರಬಾಣಗಳನ್ನು ಬಿಟ್ಟರು. ಆ ಬಾಣಗಳು ಹಂಸನ ರಥದಲ್ಲಿಯೂ,

---

1. ಹ.ವಂ.ಭ.ಪ. ಅ–124

ಧ್ವಜದಲ್ಲಿಯೂ, ಧನುಸ್ಸಿನಲ್ಲಿಯೂ, ಚಕ್ರದಲ್ಲಿಯೂ, ಬಾಣದ ಚೀಲಗಳಲ್ಲಿಯೂ, ಸರ್ವತ್ರ ಬಿದ್ದವು. ಹಂಸನಿಗೆ ಬಹುವೇದನೆಯನ್ನು ಉಂಟುಮಾಡಿದವು. ತರುವಾಯ ಹಂಸನು ಕೋಪಿಸಿಕೊಂಡು ಬಾಣದಿಂದ ಬಲರಾಮದೇವರನ್ನು ಒಡೆದು ಧ್ವಜವನ್ನು ಕತ್ತರಿಸಿದನು. ನಾಲ್ಕು ಬಾಣಗಳಿಂದ ಕುದುರೆಗಳನ್ನು ಸಾರಥಿಯನ್ನೂ ಸಂಹರಿಸಿದನು. ತರುವಾಯ ಬಲರಾಮದೇವರು ಕೋಪಿಸಿಕೊಂಡು ಗದೆಯನ್ನು ಹಿಡಿದುಕೊಂಡು ಹಂಸನ ಬಳಿಗೆ ಬಂದು ಹಂಸನ ರಥವನ್ನು ಧ್ವಜವನ್ನು ಕುದುರೆಗಳನ್ನು ಸಾರಥಿಯನ್ನು ಪುಡಿ ಪುಡಿ ಮಾಡಿ ಗರ್ಜನೆ ಮಾಡಿದರು. ಹಂಸನಿಗೂ ಬಡಿದರು. ಆಗ ಹಂಸನೂ ಗದೆಯನ್ನು ಹಿಡಿದುಕೊಂಡು ರಥದಿಂದ ಕೆಳಗೆ ಬಂದು ಯುದ್ಧ ಮಾಡಿದನು. ಮಹಾರಥಿಕರಾದ ಅವರಿಬ್ಬರೂ ಪೂರ್ವದಲ್ಲಿ ದೇವಾಸುರಯುದ್ಧದಲ್ಲಿ ಇಂದ್ರ ದೇವರೂ ವೃತ್ರಾಸುರನೂ ಯುದ್ಧಮಾಡಿಕೊಂಡಂತೆ ಯುದ್ಧ ಮಾಡಿಕೊಂಡರು.



## ಸಾತ್ಯಕಿ ಡಿಭಿಕರ ಯುದ್ಧ [1]

ತರುವಾಯ ಡಿಭಿಕನೂ ಸಾತ್ಯಕಿಯೂ ಭಯಂಕರವಾಗಿ ಯುದ್ಧವನ್ನು ಮಾಡಿಕೊಂಡರು. ಇಬ್ಬರೂ ಮಹಾಪರಾಕ್ರಮಶಾಲಿಗಳು. ಇಬ್ಬರೂ ಪ್ರಸಿದ್ಧರಾದವರು. ಪರಾಕ್ರಮಶಾಲಿಯಾದ ಸಾತ್ಯಕಿಯು ಹತ್ತುಬಾಣಗಳಿಂದ ಡಿಭಿಕನನ್ನು ಬಡೆದನು. ಯುದ್ಧದಲ್ಲಿ ಅಹಂಕಾರಿಯಾದ ಡಿಭಿಕನು ಐದು ಸಾವಿರ ಬಾಣಗಳಿಂದ ಸಾತ್ಯಕಿಯನ್ನು ಬಡೆದನು. ಸಾತ್ಯಕಿಯು ಅಷ್ಟು ಬಾಣಗಳನ್ನು ಮಧ್ಯದಲ್ಲಿಯೇ ಕತ್ತರಿಸಿ ಗರ್ಜನೆ ಮಾಡಿದನು. ಡಿಭಿಕನಿಗೆ ಏಳು ಬಾಣಗಳಿಂದ ಬಡೆದನು. ಡಿಭಿಕನು ನೂರು ಸಾವಿರ ಬಾಣಗಳಿಂದ ಸಾತ್ಯಕಿಯನ್ನು ಬಡೆದನು. ತರುವಾಯ ಸಾತ್ಯಕಿಯು ಅರ್ಧಚಂದ್ರ ಬಾಣದಿಂದ ಡಿಭಿಕನ ಧನುಸ್ಸನ್ನು ಕತ್ತರಿಸಿದನು. ವೀರನಾದ ಡಿಭಿಕನು ಮತ್ತೊಂದು ಧನುಸ್ಸನ್ನು ತೆಗೆದು ಕ್ರೂರವಾದ ಬಾಣದಿಂದ ಬಡೆದನು. ಆ ಬಾಣದಿಂದ ಬಡೆಯಲ್ಪಟ್ಟ ಸಾತ್ಯಕಿಯು ರಕ್ತವನ್ನು ಕಾರಿದನು. ಧನುಸ್ಸನ್ನು ಕತ್ತರಿಸಿದನು. ಡಿಭಿಕನು ಮತ್ತೊಂದು ಧನುಸ್ಸನ್ನು ತೆಗೆದು ಎಲ್ಲಾ ಕ್ಷತ್ರಿಯರೂ ನೋಡುವಂತೆ ತೀಕ್ಷ್ಣಗಳಾದ ಬಾಣಗಳಿಂದ ಬಡೆದನು. ಸಾತ್ಯಕಿಯು ಆ ಧನುಸ್ಸನ್ನು ಕತ್ತರಿಸಿದನು. ಹೀಗೆಯೇ ಸಾತ್ಯಕಿಯು ಅವನ ನೂರಹತ್ತು ಧನುಸ್ಸುಗಳನ್ನು ಕತ್ತರಿಸಿದನು. ತರುವಾಯ

1. ಹ.ವಂ.ಭ.ಪ. ಅ–125

ಅವರಿಬ್ಬರೂ ಧನುಸ್ಸನ್ನು ಬಿಟ್ಟು ಖಡ್ಗವನ್ನು ಹಿಡಿದುಕೊಂಡು ಯುದ್ಧ ಮಾಡಿಕೊಂಡರು. ಅವರಿಬ್ಬರೂ ಖಡ್ಗಯುದ್ಧದಲ್ಲಿ ಪ್ರಸಿದ್ಧರಾದವರು. ಲೋಕದಲ್ಲಿ ದುಃಶಾಸನನ ಮಗನೂ ಭೂರಿಶ್ರವನೂ ಅಭಿಮನ್ಯುವು ನಕುಲನೂ ಖಡ್ಗಯುದ್ಧದಲ್ಲಿ ಪ್ರಸಿದ್ಧರು. ಅವರಂತೆ ಇವರೂ ಪ್ರಸಿದ್ಧರು. ಮೂವತ್ತು ಪ್ರಕಾರವಾಗಿ ಖಡ್ಗಯುದ್ಧ ವನ್ನು ಮಾಡಿಕೊಂಡರು. ಮತ್ತು ಮತ್ತು ಬಡಕೊಂಡರೂ ಯುದ್ಧದಲ್ಲಿ ಶ್ರಮವನ್ನು ಹೊಂದಲಿಲ್ಲ. ತರುವಾಯ ದೇವತೆಗಳೂ ಗಂಧರ್ವರೂ ಸಿದ್ಧರೂ ಋಷಿಗಳೂ 'ಇವರಿಬ್ಬರ ವೀರ್ಯವೇನು? ಧೈರ್ಯವೇನು! ಇವರಿಬ್ಬರೇ ಯುದ್ಧದಲ್ಲಿ ಶಕ್ತರು. ಖಡ್ಗವಿದ್ಯೆಯಲ್ಲಿಯೂ ಧನುರ್ವಿದ್ಯೆಯಲ್ಲಿಯೂ ಪಾರಂಗತರು. ಒಬ್ಬನು ರುದ್ರ ದೇವರ ಶಿಷ್ಯನು ಮತ್ತೊಬ್ಬನು ದ್ರೋಣಾಚಾರ್ಯರ ಶಿಷ್ಯನು. ಅರ್ಜುನನೂ ಸಾತ್ಯಕಿಯೂ ಕೃಷ್ಣಪರಮಾತ್ಮನೂ ಈ ಮೂರು ಜನರೇ ಯುದ್ಧದಲ್ಲಿ ಪ್ರಸಿದ್ಧರಾದ ವರು. ಅದೇ ರೀತಿಯಾಗಿ ಡಿಭಿಕನೂ, ಸ್ಕಂದನೂ, ರುದ್ರದೇವರೂ ಈ ಮೂರು ಜನರೂ ಮಹಾರಥಿಕರು ಪ್ರಸಿದ್ಧರು' ಎಂದು ಸ್ತೋತ್ರಮಾಡಿದರು. ಯುದ್ಧವನ್ನು ನೋಡುತ್ತಾ ಇದ್ದರು.



## ವಸುದೇವ ಉಗ್ರಸೇನರಿಗೂ ಹಿಡಿಂಬನಿಗೂ ಯುದ್ಧವು [1]

ಮುದುಕರಾದ ತಲೆಬೆಳ್ಳಗಾಗಿರುವ ಯುದ್ಧದಲ್ಲಿ ಪಂಡಿತರಾದ ವಸುದೇವ ಉಗ್ರಸೇನರು ದುಷ್ಟನಾದ ಹಿಡಿಂಬನೊಡನೆ ಯುದ್ಧವನ್ನು ಮಾಡಿದರು. ಅನೇಕ ಸಾವಿರ ಬಾಣಗಳಿಂದ ಆ ಅಸುರನನ್ನು ಪೀಡಿಸಿದರು. ಅತಿದೊಡ್ಡ ಆಕಾರವುಳ್ಳ ದುಷ್ಟನಾದ ದೊಡ್ಡ ಹೊಟ್ಟೆಯುಳ್ಳ, ಕೆಂಪುಕಣ್ಣುಳ್ಳ, ಭಯಂಕರ ಕಣ್ಣುಗಳುಳ್ಳ, ಆನೆಯಂತೆ ಇರುವ ಆ ಹಿಡಿಂಬನು ಸರ್ವತ್ರ ಮನುಷ್ಯರನ್ನು ತಿನ್ನುತ್ತಾ ಬಂದನು. ಆನೆಗಳಿಂದ ಆನೆಗಳನ್ನು, ಕುದುರೆಗಳಿಂದ ಕುದುರೆಗಳನ್ನು, ರಥಗಳಿಂದ ರಥಗಳನ್ನು, ಕುದುರೆ ಸವಾರರಿಂದ ಕುದುರೆ ಸವಾರರನ್ನು ಬಡಿದು ನಾಶ ಮಾಡಿದನು. ತನ್ನ ಮುಂದೆ ಇರುವ ಮನುಷ್ಯರನ್ನು ನೋಡಿ ಬಲವಾಗಿ ಶ್ವಾಸಬಿಟ್ಟು ಶ್ವಾಸಗಾಳಿಯಿಂದಲೇ ಅವರನ್ನು ಸಂಹರಿಸಿದನು. ಅನೇಕ ಯಾದವಶ್ರೇಷ್ಠರನ್ನು ಹಿಡಿದು ನುಂಗಿದನು. ಯಾವ ಮನುಷ್ಯರನ್ನು ತನ್ನ ಮುಂದೆ ನೋಡುವನೋ

1. ಹ.ವಂ.ಭ.ಪ. ಅ.126

ಅವರನ್ನು ಕೊಲ್ಲುತ್ತಿದ್ದನು. ತಿನ್ನುತ್ತಿದ್ದನು. ಇನ್ನು ಕೆಲವರನ್ನು ಎತ್ತಿ ಮೇಲಕ್ಕೆ ಬಿಸಾಡುತ್ತಿದ್ದನು. ಪ್ರಲಯಕಾಲದಲ್ಲಿ ಕೋಪಿಸಿಕೊಂಡೇ ರುದ್ರದೇವರು ಪ್ರಾಣಿಗಳನ್ನು ಸಂಹರಿಸುವಂತೆ ಎಲ್ಲರನ್ನೂ ತಿನ್ನುತ್ತಾ ಬಂದನು. ಪರಾಕ್ರಮಶಾಲಿಗಳಾದ ಕೆಲವು ಯಾದವರು ಭಯದಿಂದ ದಿಕ್ಕುದಿಕ್ಕುಗಳಿಗೆ ಓಡಿದರು. ಕೆಲವರು ಅವನ ಹೊಟ್ಟೆಗೆ ಹೋಗಿ ಸೇರಿದರು. ಉಳಿದ ಸೈನ್ಯವೆಲ್ಲವೂ ಚಿತ್ರದಲ್ಲಿ ಬರೆದ ಬೊಂಬೆಯಂತೆ ಸುಮ್ಮನೆ ನಿಂತುಬಿಟ್ಟಿತು.

ಆಸಮಯದಲ್ಲಿ ಕೋಪವುಳ್ಳವರಾಗಿ ಮುದುಕರಾದ ವಸುದೇವ ಉಗ್ರಸೇನರು ಘೋರವಾದ ಧನುಸ್ಸುಗಳನ್ನು ಹಿಡಿದುಕೊಂಡು ರಾಕ್ಷಸನ ಮುಂದೆ ನಿಂತರು. ಅವರು ನಿಂತಿರುವುದು ಕೋಪಿಸಿಕೊಂಡು ಬರುತ್ತಿರುವ ಸಿಂಹದ ಮುಂದೆ ಎರಡು ಮುದಿಜಿಂಕೆಗಳು ನಿಂತಂತೆ ಕಾಣಿಸುತ್ತಿತ್ತು. ಹಿಡಿಂಬನು ಬಾಯಿಯನ್ನು ತೆರೆದುಕೊಂಡು ಆ ವೃದ್ಧರ ಬಳಿಗೆ ಓಡಿಬಂದನು. ಆಗ ವೀರರಾದ ವಸುದೇವ ಉಗ್ರಸೇನರು ಹಿಡಿಂಬನ ಬಾಯಿಗೆ ತುಂಬಾ ಬಾಣಗಳನ್ನು ಬಿಟ್ಟರು. ಆ ರಾಕ್ಷಸನು ಆ ಬಾಣಗಳನ್ನೆಲ್ಲಾ ತಡೆದನು. ಬಾಯಿ ತೆರೆದುಕೊಂಡು ಹತ್ತಿರವೇ ಬಂದುಬಿಟ್ಟನು. ಇಬ್ಬರ ಧನುಸ್ಸನ್ನು ಎಳೆದುಕೊಂಡು ಮುರಿದು ಹಾಕಿದನು. ಕೈಮುಂದೆ ಮಾಡಿ ವಸುದೇವನನ್ನು ಹಿಡಿಯಲಿಕ್ಕೆ ಹೋದನು. 'ಉಗ್ರಸೇನ! ವಸುದೇವನನ್ನು ನಿನ್ನನ್ನು ಇಬ್ಬರನ್ನೂ ನುಂಗಿಬಿಡುವೆನು. ಯಾಕೆ ಸುಮ್ಮನೆ ನನ್ನ ಮುಂಭಾಗದಲ್ಲಿ ನಿಂತಿರುವಿ? ಬಾ. ನನ್ನ ಬಾಯಿಯೊಳಗೆ ಪ್ರವೇಶಿಸು. ನೀವಿಬ್ಬರೂ ಈಗ ನನಗೆ ಆಹಾರವಾಗಿರುವಿರಿ. ನನಗೆ ತುಂಬಾ ಹಸಿವೆಯಾಗಿದೆ. ಯುದ್ಧಮಾಡಿ ತುಂಬಾ ಶ್ರಮವೂ ಆಗಿದೆ. ನೀವು ನನ್ನ ಬಾಯಿಯಿಂದ ತಪ್ಪಿಸಿಕೊಂಡು ಹೋಗಬೇಡಿರಿ. ನನ್ನ ಬಾಯಿಯೊಳಗೆ ಪ್ರವೇಶಿಸಿರಿ. ಬೇಗನೇ ಬನ್ನಿರಿ. ನಿಮ್ಮಿಬ್ಬರ ರಕ್ತವನ್ನು ಪಾನಮಾಡಿ ತೃಪ್ತಿಯನ್ನು ಹೊಂದುವೆನು. ಮುದುಕರಾದ ನಿಮ್ಮ ಮಾಂಸವನ್ನು ಸುಖವಾಗಿ ತಿನ್ನುವೆನು'. ಈ ಪ್ರಕಾರವಾಗಿ ಹೇಳುತ್ತಾ ಆ ರಾಕ್ಷಸನು ಬಾಯಿತೆರೆದುಕೊಂಡೇ ವಸುದೇವ ಉಗ್ರಸೇನರ ಸಮೀಪಕ್ಕೆ ಬರುತ್ತಲೇ ಇದ್ದನು. ವಸುದೇವ ಉಗ್ರಸೇನರಿಗೆ ಕೈಯಲ್ಲಿ ಒಂದೂ ಆಯುಧವಿಲ್ಲ. ರಾಕ್ಷಸನನ್ನು ನೋಡಿ ಭಯಪಟ್ಟರು. ಸುತ್ತಲೂ ನೋಡಿದರು. ಭಯದಿಂದ ಕಾಂತಿಹೀನರಾದರು.

ಈ ಸಮಯದಲ್ಲಿ ಬಲರಾಮದೇವರು ಈ ಅವಸ್ಥೆಯನ್ನು ಹೊಂದಿರುವ ವಸುದೇವ ಉಗ್ರಸೇನರನ್ನು ನೋಡಿ ಯುದ್ಧ ಮಾಡುತ್ತಿದ್ದ ಹಂಸನೊಡನೆ ಯುದ್ಧಮಾಡಲಿಕ್ಕೆ ಕೃಷ್ಣಪರಮಾತ್ಮನ ಹತ್ತಿರ ಹೇಳಿ ಹಿಡಿಂಬನ ಬಳಿಗೆ ಬರುವವರಾಗಿ

'ರಾಕ್ಷಸನೇ! ಸಾಹಸವನ್ನು ಮಾಡಬೇಡ. ಅವರನ್ನು ಬಿಟ್ಟುಬಿಡು. ನಾನು ಬಂದಿದ್ದೇನೆ. ಶತ್ರುಸಂಹಾರಕನಾದ ನನ್ನೊಡನೆ ಯುದ್ಧ ಮಾಡು. ನಾನೇ ನಿನ್ನನ್ನು ಕೊಂದುಬಿಡುತ್ತೇನೆ. ಇದೇನು ನೀನು ಭಯಪಡಿಸುವುದು?' ಎಂದು ಹೇಳಿದರು. ಆಗ ಹಿಡಿಂಬನು ಅವರಿಬ್ಬರನ್ನೂ ಬಿಟ್ಟು 'ಇವನು ಮಹಾದುಷ್ಟನಾಗಿರುವನು. ಇವನನ್ನು ಮೊದಲು ನುಂಗಿಬಿಡುವೆನು' ಎಂದು ಹೇಳುತ್ತಾ ಪೂರ್ವದಂತೆಯೇ ಬಾಯಿ ತೆರೆದುಕೊಂಡು ಬಲರಾಮದೇವರಿದ್ದಲ್ಲಿಗೆ ಓಡಿಬಂದನು.

ಬಲರಾಮ ದೇವರು ಧನುರ್ಬಾಣಗಳನ್ನು ಬಿಟ್ಟು ಮುಷ್ಟಿಯನ್ನು ಹಿಡಿದು ರಾಕ್ಷಸನ ಎದುರಲ್ಲಿ ನಿಂತರು. ತನ್ನ ಬಾಹುವನ್ನು ಬಡಿದುಕೊಂಡರು. ದುಷ್ಟನಾದ ಹಿಡಿಂಬನು ಭಯಂಕರ ವಾದ ಮುಷ್ಟಿಯನ್ನು ಹಿಡಿದು ಬಾಯಿತೆರೆದುಕೊಂಡು ಬಂದ ಯಮದೇವರಂತೆ ಬಂದು ಬಲರಾಮದೇವರ ಎದೆಗೆ ಗುದ್ದಿದನು. ಬಲರಾಮದೇವರು ಕೋಪಿಸಿ ಕೊಂಡು ಅವನನ್ನು ಮುಷ್ಟಿಯಿಂದ ಗುದ್ದಿದರು. ಇಬ್ಬರಿಗೂ ಮುಷ್ಟಿಯುದ್ಧವು ನಡೆಯಿತು. ಅವರು ಯುದ್ಧ ಮಾಡಿಕೊಳ್ಳುವಾಗ ಚಟ ಚಟ ಎಂಬ ಶಬ್ದವಾಗುತ್ತಿತ್ತು. ತರುವಾಯ ರಾಕ್ಷಸನು ಬಂದು ಬಲರಾಮದೇವರ ಎದೆಗೆ ಗುದ್ದಿದನು. ಬಲರಾಮದೇವರು ಅವನ ಎದೆಗೆ ಮುಷ್ಟಿಯಿಂದ ಗುದ್ದಿ ಎರಡು ಕೈಗಳಿಂದ ಅವನ ಮುಖಕ್ಕೆ ಬಡಿದನು. ಆ ಪೆಟ್ಟಿನಿಂದ ರಾಕ್ಷಸನು ಮೂರ್ಛಾಬಂದು ಮೊಳಕಾಲು ಊರಿ ಬಿದ್ದನು. ತರುವಾಯ ಬಲರಾಮದೇವರು ಅವನ ಕಾಲನ್ನು ಹಿಡಿದು ಬಹುಹೊತ್ತು ತಿರುಗಿಸಿ ತನ್ನ ಬಾಹುಬಲವನ್ನು ತೋರಿಸುತ್ತಾ ಎಲ್ಲರೂ ನೋಡುವಂತೆ ಅವನನ್ನು ಬಹುದೂರ ಬಿಸಾಡಿದರು ಬಲರಾದೇವರು ಅವನನ್ನು ನಾಲ್ಕು ಮೈಲುದೂರಕ್ಕೆ ಬಿಸಾಡಿದರು. ರಾಕ್ಷಸನು ಮೂರ್ಛೆಯಿಂದ ಎದ್ದಮೇಲೆ ಅಲ್ಲಿಂದಲೇ ಹೊರಟು ಹೋದನು. ಯುದ್ಧರಂಗಕ್ಕೆ ಬರಲೇ ಇಲ್ಲ. ಸತ್ತು ಉಳಿದ ಅವನ ರಾಕ್ಷಸರೂ ಬಲರಾಮದೇವರಿಂದ ಭಯವುಳ್ಳವರಾಗಿ ದಿಕ್ಕುದಿಕ್ಕುಗಳಿಗೆ ಓಡಿಹೋದರು. ತರುವಾಯ ಸೂರ್ಯನು ಮುಳುಗಿದನು. ಕತ್ತಲೆಯಾಯಿತು. 'ನಾಳೆ ಬೆಳಗಾದ ಮೇಲೆ ಗೋವರ್ಧನ ಪರ್ವತದಲ್ಲಿ ಯುದ್ಧವು ನಡೆಯಲಿ' ಎಂದು ಹೇಳುತ್ತಾ ರಾಜರು ಯುದ್ಧವನ್ನು ಬಿಟ್ಟು ಗೋವರ್ಧನ ಪರ್ವತಕ್ಕೆ ಓಡಿಹೋದರು.



# ಹಂಸಡಿಬಿಕರ ಮರಣವು [1]

ಹಂಸಡಿಭಿಕರು ಇಬ್ಬರೂ ರಾತ್ರಿಯಲ್ಲಿಯೇ ಗೋವರ್ಧನ ಪರ್ವತಕ್ಕೆ ಓಡಿಹೋದರು. ಮರುದಿನ ಸೂರ್ಯೋದಯವಾಗುವ ಸಮಯದಲ್ಲಿ ಭಗವಂತನೂ ಬೇಗನೇ ಅಲ್ಲಿಗೆ ಹೋಗಿ ಸೇರಿದನು. ಹಾಗೆಯೇ ಸಾತ್ಯಕಿಯೂ ಬಲರಾಮದೇವರೂ ಸಾರಣ ಇತ್ಯಾದಿ ಯಾದವರೂ ಗಂಧರ್ವ ಅಪ್ಸರಸ್ತ್ರೀಯರಿಂದ ಅನೇಕ ವಿಧವಾಗಿ ಶಬ್ದಮಾಡುತ್ತಿರುವ ಆ ಗೋವರ್ಧನ ಪರ್ವತಕ್ಕೆ ಬಂದು ಸೇರಿದರು– ಅಲ್ಲಿ ಗೋವುಗಳ ಶಬ್ದ ಸೈನ್ಯದ ಶಬ್ದ ಹೀಗೆ ಅನೇಕ ಶಬ್ದವಾಗುತ್ತಿತ್ತು. ಯಾದವರು ಗೋವರ್ಧನ ಪರ್ವತದ ಉತ್ತರಪಾರ್ಶ್ವಕ್ಕೆ ಹೋದರು. ಯಮುನಾತೀರದಲ್ಲಿ ಯುದ್ಧವು ನಡೆಯಿತು. ಹಂಸಡಿಭಿಕರನ್ನು ವಸುದೇವನು ಏಳು ಬಾಣಗಳಿಂದ ಬಡೆದನು. ಸಾರಣನು ಇಪ್ಪತ್ತೈದು ಬಾಣಗಳಿಂದಲೂ, ಕಂಕನು ಹತ್ತು ಬಾಣಗಳಿಂದಲೂ, ಉಗ್ರಸೇನನು ಎಪ್ಪತ್ತಮೂರುಬಾಣಗಳಿಂದಲೂ, ವಿರಾಟ ರಾಜನು ಮೂವತ್ತು ಬಾಣಗಳಿಂದಲೂ, ಸಾತ್ಯಕಿಯು ಏಳು ಬಾಣಗಳಿಂದಲೂ, ಪ್ರದ್ಯುಮ್ನನು ಮೂವತ್ತು ಬಾಣಗಳಿಂದಲೂ, ಸಾಂಬನು ಏಳು ಬಾಣಗಳಿಂದಲೂ, ಅನಾಧೃಷ್ಟಿಯು ಅರುವತ್ತೊಂದು ಬಾಣಗಳಿಂದಲೂ, ಭಯಂಕರವಾದ ಯುದ್ಧ ಮಾಡಿದರು. ಯಾದವರೆಲ್ಲರೂ ಕೃಷ್ಣಪರಮಾತ್ಮನು ನೋಡುವಂತೆ ಮಹಾ ಭಯಂಕರವಾದ ಯುದ್ಧವನ್ನು ಮಾಡಿದರು. ಹಂಸಡಿಭಿಕರು ಅವರೆಲ್ಲರಿಗೂ ಒಬ್ಬೊಬ್ಬರಿಗೆ ಹತ್ತು ಹತ್ತು ಬಾಣಗಳಂತೆ ಬಿಟ್ಟರು. ಯಾದವಶ್ರೇಷ್ಠರಿಗೆ ವಿಶೇಷವಾಗಿ ಬಡಿದರು. ಎಲ್ಲರೂ ರಕ್ತವನ್ನು ಕಾರುತ್ತಾ ತುಂಬಾ ಶ್ರಮವನ್ನು ಹೊಂದಿದರು. ಯಾದವರೆಲ್ಲರೂ ಭಯವುಳ್ಳವರಾಗಿ ಓಡಲಿಕ್ಕೆ ಆರಂಭಿಸಿದರು. ತರುವಾಯ ಕೃಷ್ಣಪರಮಾತ್ಮನೂ ಬಲರಾಮದೇವರೂ ಅಸದೃಶವಾದ ಯುದ್ಧವನ್ನು ಮಾಡಿದರು. ದೇವಾಸುರರ ಯುದ್ಧದಂತೆ ಮಹರ್ಷಿಗಳೂ ವಿಮಾನದಲ್ಲಿ ಕೂತುಕೊಂಡು ಬಂದು ಆಕಾಶಮಾರ್ಗದಲ್ಲಿ ಇದ್ದುಕೊಂಡು ನೋಡುತ್ತಿದ್ದರು.

ತರುವಾಯ ಯುದ್ಧದಲ್ಲಿ ಹಂಸಡಿಭಿಕರನ್ನು ರಕ್ಷಿಸಲಿಕ್ಕೆ ರುದ್ರದೇವರು ಕಳುಹಿಸಿದ ಎರಡು ಭೂತಗಳು ಕಾಣಿಸಿಕೊಂಡವು. ಹಂಸನೂ ಕೃಷ್ಣಪರಮಾತ್ಮನೂ ಯುದ್ಧಮಾಡಿಕೊಂಡರು. ಡಿಭಿಕನೂ ಬಲರಾಮದೇವರೂ ಯುದ್ಧಮಾಡಿ ಕೊಂಡರು. ಎಲ್ಲರೂ ತಮ್ಮ ತಮ್ಮ ರಥದಲ್ಲಿ ಇದ್ದುಕೊಂಡು ಶಂಖವನ್ನು ಊದಿದರು.

---

1. ಹ.ವಂ.ಭ.ಪ. ಅ.127-128

ಶ್ರೀಭಗವಂತನು ಎಲ್ಲರನ್ನೂ ಆಶ್ಚರ್ಯಪಡಿಸುವಂತೆ ತನ್ನ ಪಾಂಚಜನ್ಯಶಂಖವನ್ನು ಊದಿದನು. ತರುವಾಯ ಭಯಂಕರಗಳಾದ ಜೋಲುವ ಹೊಟ್ಟೆಯುಳ್ಳ ಆ ಎರಡೂ ಭೂತಗಳೂ ಶೂಲವನ್ನು ಹಿಡಿದುಕೊಂಡು ಕೃಷ್ಣಪರಮಾತ್ಮನ ಬಳಿಗೆ ಓಡಿಬಂದವು. ಶೂಲದಿಂದ ಪರಮಾತ್ಮನನ್ನು ಬಡೆದವು. ದೇವಗಂಧರ್ವರು ನೋಡುವಂತೆ ಆ ಎರಡು ಭೂತಗಳಿಂದ ಬಡೆಯಲ್ಪಟ್ಟ ಆ ಪರಮಾತ್ಮನು ಮಂದಹಾಸವನ್ನು ಮಾಡುವವನಾಗಿ ಕೂಡಲೇ ರಥದಿಂದ ಕೆಳಗೆ ಇಳಿದು ಎರಡು ಭೂತಗಳನ್ನು ಕೈಯಲ್ಲಿ ಹಿಡಿದುಕೊಂಡು ಬೆಂಕಿಕೊಳ್ಳಿಯನ್ನು ತಿರುಗಿಸುವಂತೆ ನೂರು ಸುತ್ತು ತಿರುಗಿಸಿ ಕೈಲಾಸಕ್ಕೆ ಹೋಗಿ ಬೀಳುವಂತೆ ಬಿಸಾಡಿದನು. ಆ ಭೂತಗಳು ಕೈಲಾಸಪರ್ವತದ ಶಿಖರಕ್ಕೆ ಹೋಗಿ ಬಿದ್ದು ಭಗವಂತನು ಮಾಡಿದ ಕರ್ಮವನ್ನು ನೋಡಿ ಬಹು ಆಶ್ಚರ್ಯಪಟ್ಟವು.

ಹಂಸನು ಅದನ್ನು ನೋಡಿ ಕೋಪದಿಂದ ಕೆಂಪಾದ ಕಣ್ಣುಳ್ಳವನಾಗಿ ಎಲ್ಲಾ ದೇವತೆಗಳೂ ಕೇಳುವಂತೆ ಕೃಷ್ಣಪರಮಾತ್ಮನೊಡನೆ 'ಕೇಶವ! ರಾಜಸೂಯಯಾಗಕ್ಕೆ ಯಾಕೆ ವಿಘ್ನವನ್ನು ಮಾಡುವಿ? ಬ್ರಹ್ಮದತ್ತ ಮಹಾರಾಜನು ಆ ಮಹಾಯಾಗವನ್ನು ಮಾಡುವನು. ನಿನಗೆ ಪ್ರಾಣಗಳನ್ನು ಉಳಿಸಿಕೊಂಡಿರಬೇಕೆಂದು ಆಸೆಯಿರುವುದಾದರೆ ಅದಕ್ಕೆ ಕಪ್ಪವನ್ನು ಕೊಡು. ಅಥವಾ ಒಂದು ಕ್ಷಣವಿರು. ನನ್ನ ಬಲವನ್ನು ನೋಡಿ ಆಮೇಲೆ ಕಪ್ಪವನ್ನು ಕೊಡುವಿ. ಆಮೇಲೆ ನನ್ನ ತಂದೆಯು ರಾಜಸೂಯ ಯಾಗವನ್ನು ಮಾಡುವನು. ದೇವತೆಗಳಿಗೆಲ್ಲಾ ರುದ್ರದೇವರಂತೆ ರಾಜರಿಗೆಲ್ಲಾ ನಾನು ಪ್ರಭುವು. ಈ ನಾನು ಯುದ್ಧದಲ್ಲಿ ನಿನ್ನ ಅಸದೃಶವಾದ ವೀರ್ಯವನ್ನು ನಾಶ ಮಾಡುವೆನು ಈರೀತಿಯಾಗಿ ಹೇಳುತ್ತಾ ಧನುಸ್ಸನ್ನು ಸೆಳೆದು ಭಗವಂತನ ಹಣೆಗೇ ಒಂದು ಬಾಣವನ್ನು ಬಿಟ್ಟನು. ಅದು ದೇವರ ಹಣೆಯಲ್ಲಿ ತಿಲಕದಂತೆ ಆಯಿತು. ಪರಮಾತ್ಮನು ಸಾತ್ಯಕಿಯೊಡನೆ 'ಸಾತ್ಯಕಿ! ದಾರುಕನನ್ನು ಹಿಂದೆ ಮಾಡಿ ನೀನೇ ಮುಂದೆ ಕೂತುಕೊಂಡು ಸಾರಥ್ಯವನ್ನು ಮಾಡು' ಎಂದು ಹೇಳಿದನು. ದೇವರಿಂದ ಆಜ್ಞಪ್ತನಾದ ಸಾತ್ಯಕಿಯು ಕುದುರೆಗಳನ್ನು ನಡೆಯಿಸುತ್ತಾ ನಾನಾವಿಧವಾಗಿ ರಥವನ್ನು ತಿರುಗಿಸಿದನು. ತರುವಾಯ ಬಲವಾಗಿ ಹಂಸನಿಂದ ಬಡೆಯಲ್ಪಟ್ಟ ಪರಮಾತ್ಮನು ಒಂದು ಬಾಣದಲ್ಲಿ ಆಗ್ನೇಯಾಸ್ತ್ರವನ್ನು ಜೋಡಿಸಿ ಹಂಸನೊಡನೆ 'ದುಷ್ಟನೇ! ಈ ಅಸ್ತ್ರದಿಂದ ನಿನ್ನನ್ನು ಸುಟ್ಟುಹಾಕುವೆನು. ಶಕ್ತಿಯಿದ್ದರೆ ತಡೆಯುವವನಾಗು. ನಿನ್ನ ಬಹು ಅಬದ್ಧ ಮಾತನ್ನು ನಿಲ್ಲಿಸು. ನನ್ನಿಂದ ಕಪ್ಪವನ್ನು ಅಪೇಕ್ಷಿಸುವಿಯಾದರೆ ಈಗ ನಿನ್ನ ಪರಾಕ್ರಮವನ್ನು ತೋರಿಸು. ಜಗತ್ಸ್ವಾಮಿಯಾದ ನಾನು ಇರುವಾಗ ಬ್ರಾಹ್ಮಣರನ್ನು

ಶಿಕ್ಷಿಸುವಿಯಾ? ನಿನ್ನಂತಹ ದುಷ್ಟಕ್ಷತ್ರಿಯರನ್ನು ಕೊಂದುಹಾಕಿ ಬ್ರಾಹ್ಮಣ ದ್ವೇಷಿಗಳಾದ ದುಷ್ಟರನ್ನೆಲ್ಲಾ ಶಿಕ್ಷಿಸುವೆನು. ಪುಷ್ಕರದಲ್ಲಿ ಇದ್ದ ಯತಿಗಳನ್ನೆಲ್ಲಾ ಪೀಡಿಸಿದೆಯಾ? ರಾಜಾಧಮ! ಆ ಯತಿಗಳ ಶಾಪದಿಂದ ನೀನು ಮೊದಲೇ ಸತ್ತಿರುವಿ. ಈಗ ನಿನ್ನನ್ನು ನಾನು ಯಮನಿಗೆ ಒಪ್ಪಿಸಿ ಬ್ರಾಹ್ಮಣರನ್ನು ರಕ್ಷಿಸುವೆನು' ಎಂದು ಹೇಳುತ್ತಾ ಆ ಅಸ್ತ್ರವನ್ನು ಬಿಟ್ಟನು. ಹಂಸನು ಆ ಅಸ್ತ್ರವನ್ನು ವಾರುಣಾಸ್ತ್ರದಿಂದ ತಡೆದನು. ಪರಮಾತ್ಮನು ವಾಯವ್ಯಾಸ್ತ್ರವನ್ನು ಬಿಟ್ಟನು. ಹಂಸನು ಮಾಹೇಂದ್ರಾಸ್ತ್ರದಿಂದ ತಡೆದನು. ಭಗವಂತನು ಮಾಹೇಶ್ವರಾಸ್ತ್ರವನ್ನು ಬಿಟ್ಟನು. ಹಂಸನು ರೌದ್ರಾಸ್ತ್ರದಿಂದ ತಡೆದನು. ಭಗವಂತನು ಗಾಂಧರ್ವ ರಾಕ್ಷಸ ಪೈಶಾಚ ಎಂಬ ಅಸ್ತ್ರಗಳನ್ನು ಬಿಟ್ಟನು. ಹಂಸನು ಅವುಗಳನ್ನು ತಡೆಯುವುದಕ್ಕಾಗಿ ಬ್ರಹ್ಮಾಸ್ತ್ರ ಕೌಬೇರಾಸ್ತ್ರ ಅಸುರಾಸ್ತ್ರ ಯಾಮ್ಯಾಸ್ತ್ರಗಳನ್ನು ಬಿಟ್ಟನು. ಪರಮಾತ್ಮನು ಬ್ರಹ್ಮಶಿರ ಎಂಬ ಅಸ್ತ್ರವನ್ನು ಬಿಟ್ಟನು. ಹಂಸನು ಅದೇ ಅಸ್ತ್ರವನ್ನು ಬಿಟ್ಟು ಅದನ್ನು ತಡೆದನು. ತರುವಾಯ ಭಗವಂತನು ಒಂದು ಬಾಣವನ್ನು ತೆಗೆದು ಯಮುನಾಜಲದಲ್ಲಿ ಆಚಮನಮಾಡಿ ಯಾವ ಅಸ್ತ್ರದ ಬಲದಿಂದ ಪೂರ್ವದಲ್ಲಿ ದೇವತೆಗಳು ಅಸುರರನ್ನು ಸಂಹರಿಸಿ ರಾಜ್ಯವನ್ನು ಹೊಂದಿದರೋ ಅಂತಹ ವೈಷ್ಣವಾಸ್ತ್ರವನ್ನು ಜೋಡಿಸಿದನು.

ಆ ಭಯಂಕರವಾದ ಅಸ್ತ್ರವನ್ನು ನೋಡಿ ಹಂಸನಿಗೆ ಬಹುಭಯವಾಯಿತು. ಅವನಿಗೆ ಏನು ಮಾಡಬೇಕೆಂದೂ ತೋರಲಿಲ್ಲ. ಕೂಡಲೇ ರಥದಿಂದ ಕೆಳಗೆ ಹಾರಿ ಯಮುನೆಗೆ ಓಡಿದನು. ಯಾವ ಸ್ಥಳದಲ್ಲಿ ಕೃಷ್ಣಪರಮಾತ್ಮನು ಕಾಲಿಯ ಸರ್ಪವನ್ನು ಮರ್ದನ ಮಾಡಿದ್ದನೋ ಆ ಪಾತಾಳದವರೆಗೆ ಇರುವ ಆಳವಾದ ಯಮುನೆಯ ಭಯಂಕರವಾದ ಮಡುವಿನಲ್ಲಿ ಹೋಗಿ ಹಾರಿದನು. ಹಂಸನು ಆ ಮಡುವಿನಲ್ಲಿ ಬೀಳಲು ಸಮುದ್ರದಲ್ಲಿ ಇಂದ್ರದೇವರು ಪರ್ವತವನ್ನು ಹಾಕಿದರೆ ಎಷ್ಟು ಶಬ್ದವಾಗುವುದೋ ಅಷ್ಟು ಶಬ್ದವಾಯಿತು. ಆಗ ಭಗವಂತನೂ ರಥದಿಂದ ಕೆಳಗೆ ಹಾರಿ ಅಲ್ಲಿಗೆ ಹೋಗಿ ಅವನ ಮೇಲೆ ಹಾರಿ ಪಾದಗಳಿಂದ ಒದೆದನು. ಇದರಿಂದ ಹಂಸನು ಮೂರ್ಛಿತನಾಗಿ ಆ ಮಡುವಿನಲ್ಲಿ ಇದ್ದ ಧೃತರಾಷ್ಟ್ರ ಎಂಬ ದೊಡ್ಡ ಸರ್ಪದ ಬಾಯಿಯಲ್ಲಿ ಹೋಗಿಬಿದ್ದನು. ಆ ಸರ್ಪವು ಅವನನ್ನು ನುಂಗಿಬಿಟ್ಟಿತು. ಅವನು ಸಾಯದೇ ಅದರ ಹೊಟ್ಟೆಯಲ್ಲಿಯೇ ಅಂಧಂತಮಸ್ಸಿಗಿಂತಲೂ ಹೆಚ್ಚಾದ ದುಃಖವನ್ನು ಅನುಭವಿಸುತ್ತಾ ಈಗಲೂ ಇರುವನು. ಈ ಮನ್ವಂತರವಾದ ಮೇಲೆ ಸಾಯುವನು. ಆಮೇಲೆ ಪರಮಾತ್ಮನು ಪೂರ್ವದಂತೆಯೇ ತನ್ನ ರಥಕ್ಕೆ ಬಂದನು. ಒಂದೇ ಕ್ಷಣದಲ್ಲಿ ಲೋಕನಾಥನಾದ ಶ್ರೀಕೃಷ್ಣಪರಮಾತ್ಮನಿಂದ ಹಂಸನು ಯಮುನೆಯಲ್ಲಿ ಮೃತನಾದನು

ಎಂಬ ವರ್ತಮಾನವು ವ್ಯಾಪಿಸಿ ಹೋಯಿತು.

ಆ ವರ್ತಮಾನವನ್ನು ಕೇಳಿ ಬಲರಾಮರೊಡನೆ ಯುದ್ಧಮಾಡುತ್ತಿದ್ದ ಡಿಭಿಕನು ಅವರನ್ನು ಬಿಟ್ಟು ಯಮುನೆಗೆ ಓಡಿದನು. ಅವನ ಹಿಂದೆ ಬಲರಾಮದೇವರೂ ಓಡಿದರು. ಯಾವ ಸ್ಥಳದಲ್ಲಿ ಹಂಸನು ಬಿದ್ದಿದ್ದನೋ ಅಲ್ಲಿಯೇ ಡಿಭಿಕನೂ ಬಿದ್ದನು. ನೀರಿನಲ್ಲಿ ಎಲ್ಲಾ ಹುಡುಕಿದನು. ಕೋಪದಿಂದ ನೀರನ್ನೆಲ್ಲಾ ಕಲಕಿಸಿ ಮೇಲೆ ಬಂದು ಪುನಃ ಮುಳುಗಿ ಪುನಃ ಪುನಃ ಹೀಗೆಯೇ ಮಾಡಿ ಅಣ್ಣನನ್ನು ನೋಡಲಿಲ್ಲ. ಆಮೇಲೆ ಡಿಭಿಕನು ಮೇಲೆ ಬಂದು ಭಗವಂತನನ್ನು ನೋಡಿ 'ಎಲಾ ಗೋಪಾಲ ಹುಡುಗ! ಹಂಸನೆಲ್ಲಿ' ಎಂದು ಕೇಳಿದನು. ಅದಕ್ಕೆ ಕೃಷ್ಣಪರಮಾತ್ಮನು 'ರಾಜಾಧಮನೇ! ಯಮುನೆಯ ಹತ್ತಿರ ಕೇಳು' ಎಂದನು. ಅದನ್ನು ಕೇಳಿ ಮತ್ತು ಡಿಭಿಕನು ಯಮುನೆಯಲ್ಲಿ ಮುಳುಗಿ ಬಹುಪ್ರಕಾರವಾಗಿ ಹುಡುಕುವವನಾಗಿ ಕಾಣದೆ 'ರಾಜೇಂದ್ರ! ಬಂಧುಹೀನನಾದ ನನ್ನನ್ನು ಬಿಟ್ಟು ಎಲ್ಲಿಗೆ ಹೋಗುವಿ? ಅಣ್ಣಾ! ನನ್ನನ್ನು ಬಿಟ್ಟು ಎಲ್ಲಿಗೆ ಹೋಗುವಿ?' ಎಂದು ವಿಲಾಪವನ್ನು ಮಾಡಿದನು. ಆಮೇಲೆ ಅಣ್ಣನ ಮೇಲೆ ಸ್ನೇಹವುಳ್ಳ ಆ ಡಿಭಿಕನು ತಾನು ಸಾಯುವೆನೆಂದು ನಿಶ್ಚಯ ಮಾಡಿಕೊಂಡು ಯಮುನೆಯಲ್ಲಿ ಪುನಃ ಪುನಃ ಮುಳುಗುತ್ತಾ ಮೇಲೆ ಬರುತ್ತಾ ಕೊನೆಗೆ ತನ್ನ ನಾಲಿಗೆಯನ್ನು ಸೆಳೆದುಕೊಂಡು ಸಾಯುವವನಾಗಿ ಅಂಧತಮಸ್ಸಿಗೆ ಹೋಗುವವನಾಗಿ ಅಲ್ಲಿ ಅಣ್ಣನನ್ನು ಎದುರುನೋಡುತ್ತಾ ಇದ್ದನು. ಪೂರ್ವದಲ್ಲಿಯೇ ಯುದ್ಧದಲ್ಲಿ ಹಂಸಡಿಭಿಕರ ತಂದೆಯಾದ ಬ್ರಹ್ಮದತ್ತನೂ ಸಾತ್ಯಕಿಯಿಂದ ಮೃತನಾಗಿದ್ದನು.

ಈರೀತಿಯಾಗಿ ಎಲ್ಲರೂ ಸಾಯಲು ಪ್ರತಾಪಶಾಲಿಯಾದ ಭಗವಂತನು ಬಲರಾಮದೇವರಿಂದ ಕೂಡಿಕೊಂಡು ತಾನು ಮೊದಲು ಅನುಭವಿಸಿದ ಸ್ಥಳವಾದ ಗೋವರ್ಧನ ಪರ್ವತದಲ್ಲಿ ಸ್ವಲ್ಪ ಸಮಯ ವಾಸಮಾಡಿದನು.



# ಶ್ರೀನಿವಾಸಕಲ್ಯಾಣ [1]

## ಉಪೋದ್ಘಾತ

ಪೂರ್ವದಲ್ಲಿ ವಿದೇಹನಗರದಲ್ಲಿ ಜನಕರಾಜನೆಂಬ ರಾಜನಿದ್ದನು. ಅವನು ಅತ್ಯಂತ ಧರ್ಮಿಷ್ಠನಾಗಿದ್ದನು. ಅವನಿಗೆ ರಾಜ್ಯದಲ್ಲಿ ತನ್ನದು ಎಂಬ ಆಸೆಯೇ ಇರಲಿಲ್ಲ. ಮಹಾಜ್ಞಾನಿಯಾಗಿದ್ದನು. ಒಂದು ದಿವಸದಲ್ಲಿ ಅವನು ವೇದವ್ಯಾಸದೇವರ ಬಳಿಯಲ್ಲಿ ಪುರಾಣಕಥೆಯನ್ನು ಕೇಳುತ್ತಿದ್ದನು. ಅವನೊಡನೆ ಅನೇಕ ಋಷಿಗಳು ವೇದವ್ಯಾಸರಲ್ಲಿ ಭಗವಂತನ ಕಥೆಯನ್ನು ಕೇಳುತ್ತಿದ್ದರು. ಆಗ ವೇದವ್ಯಾಸದೇವರು ಜನಕರಾಜನ ಮುಖವನ್ನು ನೋಡಿ ಪುರಾಣವನ್ನು ಹೇಳುತ್ತಿದ್ದರು. ಆಗ ಋಷಿಗಳು ತಮ್ಮೊಳಗೆ ಮೆಲ್ಲನೆ 'ಎಂತಹ ವೈರಾಗ್ಯವುಳ್ಳವರಾದರೂ ಹಣವಂತರ ದಾಸರಾಗಿರುವರು. ಹಾಗೆಯೇ ವೇದವ್ಯಾಸದೇವರು ಹಣದ ಆಸೆಯಿಂದ ಜನಕರಾಜನ ಮುಖವನ್ನು ನೋಡಿ ಪುರಾಣಹೇಳುತ್ತಿರುವರು. ಬಡವರಾದ ನಮ್ಮನ್ನು ಯಾರು ಕೇಳುವರು? ಎಂದು ಹೇಳಿಕೊಂಡರು.

ಇದನ್ನು ತಿಳಿದ ವೇದವ್ಯಾಸದೇವರು ತನ್ನ ಸಾಮರ್ಥ್ಯದಿಂದ ಬೆಂಕಿಯನ್ನು ಸೃಷ್ಟಿಮಾಡಿದರು. ರಾಜ್ಯಕ್ಕೆ ಬೆಂಕಿ ಹಿಡಿಯಿತು. ಆನೆಯನ್ನು ಕಟ್ಟುವ ಸ್ಥಳಕ್ಕೆ, ಕುದುರೆ ಕಟ್ಟುವ ಸ್ಥಳಕ್ಕೆ, ಹಣವಿರುವ ಸ್ಥಳಕ್ಕೆ, ಎಲ್ಲಾ ಬೆಂಕಿ ಹಿಡಿಯಿತು. ರಾಜ್ಯವೇ ಉರಿಯಲಿಕ್ಕೆ ಆರಂಭವಾಯಿತು. ಜನರೆಲ್ಲರೂ ಓಡಿಬಂದು ರಾಜನ ಬಳಿಯಲ್ಲಿ ಈ ವರ್ತಮಾನವನ್ನು ತಿಳಿಸಿದರು. ರಾಜನು ಅದನ್ನು ಕಿವಿಗೆ ಹಾಕಿಕೊಳ್ಳಲೇ ಇಲ್ಲ, ಪುರಾಣವನ್ನು ಕೇಳುತ್ತಲೇ ಇದ್ದನು. ಋಷಿಗಳೆಲ್ಲರೂ ಓಡಿದರು. ಅವರ ಆಶ್ರಮಕ್ಕೆ ಬೆಂಕಿ ಹಿಡಿದು ಕಮಂಡಲು ವಸ್ತ್ರ ಇತ್ಯಾದಿಗಳಿಗೆ ಬೆಂಕಿ ಹಿಡಿದಿತ್ತು. ದುಃಖದಿಂದ ಓಡಿಬಂದರು. ರಾಜನೊಡನೆ 'ಪುರಾಣಕ್ಕೇನು ಅವಸರ? ನಾಳೆಯೂ ಕೇಳಬಹುದು. ನಮ್ಮ ಕಮಂಡಲು ವಸ್ತುಗಳು ಸುಟ್ಟು ಹೋದದ್ದಕ್ಕೇ ಮನಸ್ಸಿನಲ್ಲಿ ತುಂಬಾ ವ್ಯಸನವಾಗುವುದು. ರಾಜ್ಯವೆಲ್ಲಾ ಉರಿಯುತ್ತಿದೆ. ಆದರೂ ಸುಮ್ಮನೆ ಕೂಡಿರುವೆಯಲ್ಲಾ! ಬೆಂಕಿಯನ್ನು ಆರಿಸಲಿಕ್ಕೆ ಪ್ರಯತ್ನಮಾಡು. ನಮ್ಮ ಮಠಗಳು ಸ್ವಲ್ಪವಾದರೂ ಉಳಿಯಬಹುದು' ಎಂದು ಹೇಳಿದರು. ಆದರೆ ರಾಜನು ಮಾತ್ರ ಏಳಲೇ ಇಲ್ಲ. ಅವನು 'ವಿದೇಹನಗರವೆಲ್ಲರೂ ಸುಟ್ಟುಹೋದರೂ ನನ್ನದೇನೂ

---

1. ಭವಿಷ್ಯೋತ್ತರ ಪುರಾಣ. ಅ–1

ಸುಟ್ಟುಹೋಗಿಲ್ಲ. ದೇವರು ಕೊಟ್ಟ ರಾಜ್ಯವಿದು. ನನ್ನದಲ್ಲ. ದೇವರು ಇಚ್ಛೆಯಿದ್ದಂತೆ ಆಗಲಿ. ಈ ದೇವರ ಕಥೆಯನ್ನು ಕೇಳುವುದು ನನಗೆ ದೊಡ್ಡಲಾಭ. ಆದುದರಿಂದ ಇದನ್ನು ಮಾತ್ರ ನಾನು ಬಿಡಲಾರೆನು' ಎಂದು ಹೇಳಿದನು.

ತರುವಾಯ ವೇದವ್ಯಾಸದೇವರು ಬೆಂಕಿಯನ್ನು ಮರೆಮಾಡಿದರು. ಆಮೇಲೆ ನೋಡುವಾಗ ಎಲ್ಲಿಯೂ ಬೆಂಕಿಯೇ ಇರಲಿಲ್ಲ. ಎಲ್ಲವೂ ಪೂರ್ವದಂತೆಯೇ ಇದ್ದಿತು. ಎಲ್ಲರೂ ಆಶ್ಚರ್ಯಪಟ್ಟು ರಾಜನೊಡನೆ ತಿಳಿಸಿದರು. ರಾಜನು ಅದನ್ನು ಕೇಳಿ ಸಂತೋಷಪಡಲೂ ಇಲ್ಲ. ಋಷಿಗಳೆಲ್ಲರೂ ಸಂತೋಷದಿಂದ ಆಶ್ಚರ್ಯಪಡುತ್ತಾ ಕೂತುಕೊಂಡರು. ಆಗ ವೇದವ್ಯಾಸದೇವರು ಋಷಿಗಳೊಡನೆ ಯಾರ ಮುಖವನ್ನು ನೋಡಿ ಪುರಾಣವನ್ನು ಹೇಳಬೇಕು ಎಂದು ಕೇಳಿದರು. ಅದಕ್ಕೆ ಅವರು ಜನಕರಾಜನೇ ಸರಿಯಾಗಿ ಪುರಾಣವನ್ನು ಕೇಳುವವನು. ಅವನ ಮುಖವನ್ನೇ ನೋಡಿ ಹೇಳಬೇಕು' ಎಂದರು. ಈರೀತಿಯಾಗಿ ಜನಕರಾಜನು ಅಭಿಮಾನ ಬಿಟ್ಟವನಾಗಿದ್ದನು. ದೇವರ ಅನುಗ್ರಹಕ್ಕೆ ಪಾತ್ರನಾಗಿದ್ದನು. ಅವನಿಗೆ ಕುಶಕೇತು ವೆಂಬ ತಮ್ಮನಿದ್ದನು. ಕುಶಕೇತುವಿಗೆ ಪರಮಸುಂದರರಾದ ಮೂರು ಗಂಡು ಮಕ್ಕಳೂ ಮೂರು ಹೆಣ್ಣುಮಕ್ಕಳೂ ಇದ್ದರು. ಜನಕರಾಜನಿಗೆ ಸೀತಾದೇವಿಯರು ಮಗಳು ಇದ್ದರು. ಜನಕರಾಜನು ತಮ್ಮನಿಂದ ರಾಜ್ಯಭಾರ ಮಾಡಿಸುತ್ತಿದ್ದನು. ಕುಶಕೇತುವು ಅಣ್ಣನ ಆಜ್ಞೆಯಿಂದ ರಾಜ್ಯಭಾರ ಮಾಡುತ್ತಿದ್ದನು.

ಇಂತಹ ಜ್ಞಾನಿಯಾದ ಜನಕರಾಜನು ಒಂದು ದಿವಸದಲ್ಲಿ ನಾನು ಯಾವಾಗಲೂ ಸುಖದಿಂದಲೇ ಇರಬೇಕು. ದುಃಖವನ್ನು ನೋಡಲೇಬಾರದು ಎಂದು ಹೇಳಿಕೊಂಡನು. ಇದು ಸಜ್ಜನರಿಗೆ ಸಮ್ಮತವಾದ ಮಾತಲ್ಲ. ದೇವರು ನಮ್ಮ ಪೂರ್ವಕರ್ಮವನ್ನು ಅನುಸರಿಸಿ ಸುಖವನ್ನೋ ದುಃಖವನ್ನೋ ಯಾವುದನ್ನು ಕೊಡುತ್ತಾನೋ ಅದನ್ನು ಅನುಭವಿಸುವೆನು ಎಂಬ ಅಭಿಪ್ರಾಯವು ಸಜ್ಜನರಿಗೆ ಇರಬೇಕು. ಜನಕರಾಜನು ಈ ಅಭಿಪ್ರಾಯವನ್ನು ಬಿಟ್ಟು ತನಗೆ ಸುಖವೇ ಆಗಬೇಕೆಂದು ಬಯಸಲು ಭಗವಂತನು ಅವನಿಗೆ ದುಃಖವನ್ನು ಉಂಟು ಮಾಡಿದನು. ಅಂದರೆ ಒಂದು ದಿನದಲ್ಲಿ ತಮ್ಮನಾದ ಕುಶಕೇತುವು ಮರಣವನ್ನು ಹೊಂದಿದನು. ಅವನ ಹೆಂಡತಿಯೂ ತನ್ನ ಮಕ್ಕಳನ್ನೆಲ್ಲಾ ಜನಕರಾಜನಿಗೆ ಒಪ್ಪಿಸಿ ಸಹಗಮನ ಮಾಡಿದಳು. ಈ ರೀತಿಯಾಗಿ ಇಬ್ಬರೂ ಮೃತರಾದದ್ದನ್ನು ನೋಡಿ ಜನಕರಾಜನು ಬಹಳವಾಗಿ ಮರುಗಿದನು. ಅವರಿಗೆ ಉತ್ತರಕ್ರಿಯೆಯನ್ನು ಮಾಡಿ ದನು. ತಾಯಿಯಿಲ್ಲದ ಚಿಕ್ಕಮಕ್ಕಳನ್ನು ನೋಡುತ್ತಾ ಬಹಳ ದುಃಖವನ್ನು ಹೊಂದಿ

ದನು. ನಿದ್ರಾಹಾರವನ್ನು ಬಿಟ್ಟು ತುಂಬಾ ಕೃಶನಾದನು. ಅವನ ದುಃಖಪರಿಹಾರಕ್ಕಾಗಿ ಪುರೋಹಿತರಾದ ಶತಾನಂದರು ಬಂದರು.

(ವಾಲ್ಮೀಕಿ ರಾಮಾಯಣದಲ್ಲಿ ಸೀತಾದೇವಿಯರ ಮದುವೆಯ ಕಾಲದಲ್ಲಿ ಜನಕರಾಜನ ತಮ್ಮನಾದ ಕುಶಕೇತುವು ಬದುಕಿದ್ದಂತೆ ಹೇಳಿರುವರು. ಅದು ಕಲ್ಪಾಂತರದ ಕಥೆಯೆಂದು ತಿಳಿಯಬೇಕು)



## ನಿಮಿರಾಜನ ಕಥೆ

ಜನಕರಾಜನು ನಿಮಿರಾಜನ ವಂಶದಲ್ಲಿ ಹುಟ್ಟಿದವನು. ನಿಮಿರಾಜನು ವೈವಸ್ವತ ಮನುವಿನ ಮಗನು. ಅವನಿಗೆ ವಸಿಷ್ಠರು ಪುರೋಹಿತರಾಗಿದ್ದರು. ಒಂದು ಸಮಯದಲ್ಲಿ ನಿಮಿಯನ್ನು ವಸಿಷ್ಠರನ್ನು ಇಟ್ಟುಕೊಂಡು ಒಂದು ಯಾಗವನ್ನು ಮಾಡಿದನು. ವಸಿಷ್ಠರು ಅರ್ಧಯಾಗವನ್ನು ಮಾಡಿ ರಾಜನೊಡನೆ 'ರಾಜ! ಇಂದ್ರದೇವರು ನನ್ನನ್ನು ಮೊದಲೇ ಕರೆದಿರುವರು. ಅವರಿಗೊಂದು ಯಾಗವನ್ನು ಮಾಡಿಸಬೇಕಾಗಿದೆ. ಈ ಯಾಗವು ಅರ್ಧದಲ್ಲಿ ಹೀಗೇ ಇರಲಿ. ನಾನು ಬೇಗನೇ ಹೋಗಿ ಅವರ ಯಾಗವನ್ನು ಮುಗಿಸಿ ಬೇಗನೇ ಇಲ್ಲಿಗೆ ಬಂದು ಸೇರುವೆನು. ನಾನೇ ಬಂದು ನಿನ್ನ ಯಾಗವನ್ನು ಪೂರಯಿಸುವೆನು' ಎಂದು ಹೇಳಿ ಹೊರಟುಹೋದರು. ನಿಮಿರಾಜನಿಗೆ ವಸಿಷ್ಠರು ಹೇಳಿದ ಮಾತು ಸರಿಬೀಳಲಿಲ್ಲ. ಅವನು ಒಂದು ಮಾತನ್ನೂ ಆಡಲಿಲ್ಲ. ವಸಿಷ್ಠರು ಹೊರಟುಹೋದಮೇಲೆ ನಿಮಿರಾಜನು ಗೌತಮರನ್ನು ಕರೆದು ಆ ಯಾಗವನ್ನು ಮುಗಿಸಿಬಿಟ್ಟನು. ವಸಿಷ್ಠರು ಇಂದ್ರದೇವರ ಯಾಗವನ್ನು ಮಾಡಿಸಿ ಬೇಗನೆ ಬಂದು ನೋಡುವಾಗ ಇಲ್ಲಿ ಗೌತಮರಿಂದ ಯಾಗವು ಮುಗಿದಿತ್ತು. ವಸಿಷ್ಠರಿಗೆ ತುಂಬಾ ಕೋಪವು ಬಂದಿತು. ನಿಮಿರಾಜನಿಗೆ ನೀನು ನನ್ನನ್ನು ಬಿಟ್ಟು ಯಾಗವನ್ನು ಮಾಡಿದೆಯಾದ ಕಾರಣ ನಿನ್ನ ದೇಹವು ಬಿದ್ದು ಹೋಗಲಿ ಎಂದು ಶಾಪವನ್ನು ಕೊಟ್ಟರು. ಆಗ ರಾಜನು ನೀವೂ ಹಣದ ಲೋಭದಿಂದ ಅರ್ಧಯಾಗವನ್ನು ಮಾಡಿಸಿ ಹೋದಿರಾದ ಕಾರಣ ನಿಮ್ಮ ದೇಹವೂ ಬಿದ್ದುಹೋಗಲಿ ಎಂದು ಶಾಪವನ್ನು ಕೊಟ್ಟನು. ಈರೀತಿಯಾಗಿ ಇಬ್ಬರೂ ಪರಸ್ಪರ ಶಾಪದಿಂದ ದೇಹವನ್ನು ಬಿಟ್ಟರು. ತರುವಾಯ ವಸಿಷ್ಠರು ಮಿತ್ರಾ ವರುಣರಿಂದ ದೇಹವನ್ನು ಹೊಂದಿದರು. ನಿಮಿಯ ಯಾಗಕ್ಕೆ ಹವಿರ್ಭಾಗ ಸ್ವೀಕರಿಸಲು ಬಂದು ದೇವತೆಗಳೊಡನೆ ರಾಜನಿಗೆ ದೇಹವು ಬರುವಂತೆ ಮಾಡಬೇಕು. ಋತ್ವಿಕ್‌ಗಳು

ಕೇಳಿಕೊಂಡರು. ಅದಕ್ಕೆ ನಿಮಿರಾಜನು ನನಗೆ ದೇಹವು ಬಂಧನವು ಬೇಡವೆಂದನು. ದೇವತೆಗಳು ಅವನನ್ನು ಕಣ್ಣಿನ ರೆಪ್ಪೆಯಲ್ಲಿ ವಾಸಿಸುವಂತೆ ಹೇಳಿದರು. ಅವನು ಹಾಗೆಯೇ ಭಗವಂತನನ್ನು ಸ್ಮರಿಸುತ್ತಾ ಕಣ್ಣಿನ ರೆಪ್ಪೆಯಲ್ಲಿ ಇದ್ದನು. ತರುವಾಯ ಅವನ ದೇಹವನ್ನು ಮಥನ ಮಾಡಿದರು. ಆಗ ಅವನ ದೇಹದಿಂದ ಒಬ್ಬ ಮಗನು ಹುಟ್ಟಿದನು. ಆಗ ಹುಟ್ಟಿದ ಕಾರಣ ಆ ಮಗನಿಗೆ ಜನಕ ಎಂದು ಹೆಸರಾಯಿತು. ಮಥನ ಮಾಡಿದ್ದರಿಂದ ಮಿಥಿಲ ಎಂದು ಹೆಸರಾಯಿತು. ರಾಜನು ದೇಹವನ್ನು ಬಿಟ್ಟಮೇಲೆ ಆ ದೇಹದಿಂದ ಹುಟ್ಟಿದ ಕಾರಣ ವಿದೇಹ ಎಂದು ಹೆಸರು. ಆಮೇಲೆ ಆ ವಂಶದಲ್ಲಿ ಬಂದ ರಾಜರಿಗೆಲ್ಲಾ ಜನಕ ಎಂದು ಹೆಸರು. ಅದೇ ರೀತಿಯಾಗಿ ಸೀತಾದೇವಿಯ ತಂದೆಗೂ ಜನಕ ಎಂದು ಹೆಸರು. ಸೀರಧ್ವಜ ಎಂದು ಬೇರೆ ಹೆಸರು ಇರುತ್ತದೆ. ಈರೀತಿಯಾಗಿ ವಿವಾದವಾದ ಮೇಲೆ ಆ ವಂಶದಲ್ಲಿ ಗೌತಮರು ಪುರೋಹಿತರಾಗಿ ಆಮೇಲೆ ಅವರ ಮಗನಾದ ಶತಾನಂದರು ಪುರೋಹಿತರಾದರು. ಆ ಶತಾನಂದರು ದುಃಖಪಡುತ್ತಿದ್ದ ಸೀರಧ್ವಜನೆಂಬ ಜನಕರಾಜನನ್ನು ನೋಡಿ ಅವನಿಗೆ ಸಮಾಧಾನಪಡಿಸಲಿಕ್ಕೆ ಬಂದರು.



## ವೃಷಭಾಚಲದ ಇತರ ನಾಮಗಳು [1]

ಜನಕರಾಜನು ಶತಾನಂದರೊಡನೆ 'ಪೂಜ್ಯರೇ! ನನಗೆ ಮುಂದೇನು ಗತಿ? ನನಗೋ ವಯಸ್ಸಾಯಿತು. ಮಕ್ಕಳು ಚಿಕ್ಕವರಾಗಿರುವರು. ಹೆಣ್ಣು ಮಕ್ಕಳು ಬೇರೆ ಇರುವರು. ತಮ್ಮನು ಮೃತನಾದನು. ರಾವಣಾದಿ ಬಹುಶತ್ರುಗಳಿರುವರು. ನನಗೊಬ್ಬರೂ ಸಹಾಯ ಮಾಡುವವರಿಲ್ಲ. ಶತ್ರುಗಳೊಡನೆ ನಾನು ಹೇಗೆ ಯುದ್ಧವನ್ನು ಮಾಡಲಿ? ರಾವಣನು ರಾತ್ರಿ ಹಗಲು ಬರುತ್ತಿದ್ದಾನೆ. ಏಕೆಂದು ತಿಳಿಯಲಿಲ್ಲ. ಇನ್ನು ಸೀತೆಗೆ ಸರಿಯಾದ ವರನು ಹೇಗೆ ಸಿಗುವನು? ಇನ್ನು ಗಂಡುಮಕ್ಕಳೆಲ್ಲರೂ ದೀರ್ಘಾಯುಷ್ಯವುಳ್ಳವರಾಗಿರಬೇಕೆಂಬ ಆಸೆಯಿದೆ. ಹೆಣ್ಣು ಮಕ್ಕಳೆಲ್ಲರೂ ಒಂದೇ ದೇಶದ ರಾಜನಿಗೆ ಸೊಸೆಯರಾಗಬೇಕು. ಅಂದರೆ ಒಬ್ಬ ರಾಜನ ಮಕ್ಕಳೇ ನನಗೆ ಅಳಿಯಂದಿರಾಗಬೇಕೆಂಬ ಆಸೆಯಿದೆ. ಇದೆಲ್ಲಾ ಯಾವ ಉಪಾಯದಿಂದ ನೆರವೇರುವುದೆಂದು ತಿಳಿಸಬೇಕು' ಎಂದು ಕೇಳಿಕೊಂಡನು.

ಆಗ ಶತಾನಂದರು 'ರಾಜನೇ! ಭವಿಷ್ಯೋತ್ತರ ಪುರಾಣದಲ್ಲಿ ಹೇಳಿದ ವೈಕುಂಠಗಿರಿಯ ಮಹಿಮೆಯನ್ನು ಕೇಳಿದರೆ ಸರ್ವ ಆಪತ್ತೂ ಪರಿಹೃತವಾಗುವುದು.

ಸರ್ವ ಅಭೀಷ್ಟವೂ ಸಿದ್ಧವಾಗುವುದು. ಕಲಿಯುಗದಲ್ಲಿ ಅದರ ಮಹಿಮೆಯನ್ನು ಹೇಳಿದರೆ ಎಲ್ಲಾ ದುಃಖವೂ ಪರಿಹಾರವಾಗುವುದು. ಅದನ್ನು ಕೇಳಿದವನಿಗೋ ಹೇಳಿದವನಿಗೋ ಹಣಬೇಕೆಂಬ ಆಸೆಯಿದ್ದರೆ ಹಣವು ಸಿಗುವುದು. ಮಕ್ಕಳಾಗ ಬೇಕೆಂಬ ಆಸೆಯಿದ್ದರೆ ಮಕ್ಕಳಾಗುವುವು. ರೋಗಿಗಳಿಗೆ ರೋಗಪರಿಹಾರ ವಾಗುವುದು. ಜ್ಞಾನಿಗಳಿಗೆ ಜ್ಞಾನವು ಹೆಚ್ಚುವುದು. ಇದರ ಮಹಿಮೆಯನ್ನು ಬ್ರಹ್ಮದೇವರು ಕೇಳಿರುವರು. ರುದ್ರದೇವರು ಕೇಳಿರುವರು. ಇಂದ್ರದೇವರು ಕೇಳಿರುವರು. ಎಲ್ಲಾ ದೇವತೆಗಳೂ ಕೇಳಿರುವರು. ಎಲ್ಲರೂ ತಮ್ಮ ಅಭೀಷ್ಟವನ್ನು ಹೊಂದಿರುವರು. ವೈಕುಂಠಗಿರಿಯ ಮಹಿಮೆಯು ಬಹುಫಲಕ್ಕೆ ಕಾರಣವಾಗಿರು ವುದು (ವೈಕುಂಠಗಿರಿಯು ಭಕ್ತರು ಚಿಂತಿಸಿದ್ದನ್ನು ಅಂದರೆ ಆಸೆಪಟ್ಟದ್ದನ್ನು ಕೊಡುವುದು. ಆದುದರಿಂದ ಅದಕ್ಕೆ ಚಿಂತಾಮಣಿ ಪರ್ವತವೆಂದು ಹೆಸರಿದೆ. ಜ್ಞಾನವನ್ನು ಕೊಡುವ ಕಾರಣ ಜ್ಞಾನಾದ್ರಿ ಎಂದೂ ಹೇಳುವರು. ಸರ್ವತೀರ್ಥಗಳೂ ಇರುವುದರಿಂದ ತೀರ್ಥಾದ್ರಿ ಎಂದು ಹೇಳುವರು. ಈ ಬೆಟ್ಟದಲ್ಲಿ ಸರೋವರಗಳಲ್ಲಿ ಕಮಲಪುಷ್ಪಗಳು ಅನೇಕವಿರುವುದರಿಂದ ಪುಷ್ಕರಾದ್ರಿ ಎಂದೂ ಹೇಳುವರು. ಯಮದೇವರು ಈ ಪರ್ವತದಲ್ಲಿ ತಪಸ್ಸು ಮಾಡಿದ್ದರು. ಆದುದರಿಂದ ಇದಕ್ಕೆ ವೃಷಾದ್ರಿ ಎಂದೂ ಹೆಸರು. ಇದು ಬಂಗಾರಮಯವಾದ ಕಾರಣ ಕನಕಾದ್ರಿ ಎಂದು ಹೇಳುವರು. ಇಲ್ಲಿ ಪೂರ್ವದಲ್ಲಿ ನಾರಾಯಣ ಎಂಬ ಬ್ರಾಹ್ಮಣನು ತಪಸ್ಸು ಮಾಡಿದ್ದರಿಂದ ನಾರಾಯಣಾದ್ರಿ ಎಂಬ ಹೆಸರಿರುವುದು. ವೈಕುಂಠದಿಂದ ಬಂದಿರುವ ಕಾರಣ ವೈಕುಂಠಾದ್ರಿ ಎಂದು ಹೆಸರಿರುವುದು. ಹಿರಣ್ಯಕಶಿಪುವಿನ ಸಂಹಾರ ಕ್ಕಾಗಿಯೂ ಪ್ರಹ್ಲಾದನ ಅನುಗ್ರಹಕ್ಕಾಗಿಯೂ ಇಲ್ಲಿ ನೃಸಿಂಹದೇವರು ಅವತರಿಸಿದ್ದ ಕಾರಣ ಸಿಂಹಾಚಲವೆಂದೂ ಹೆಸರಿದೆ. ನೀಲ ಎಂಬ ಕಪಿಶ್ರೇಷ್ಠನು ಇಲ್ಲಿ ವಾಸಮಾಡಿದ್ದ ಕಾರಣ ಇದಕ್ಕೆ ನೀಲಪರ್ವತವೆಂದೂ ಹೆಸರಿದೆ. ಇಲ್ಲಿ ದೇವತೆಗಳಿಗೆ ಶ್ರೀನಿವಾಸನು ಪ್ರಕಾಶಿಸಿದ ಕಾರಣ ಇದಕ್ಕೆ ಶ್ರೀನಿವಾಸಾದ್ರಿ ಎಂದೂ ಹೆಸರಿದೆ. ದೇವರು ಇದರಲ್ಲಿ ಅಧಿಕವಾಗಿ ಕ್ರೀಡಾಮಾಡಿಕೊಂಡು ಇರುವ ಕಾರಣ ಇದಕ್ಕೆ ಆನಂದಾದ್ರಿ ಎಂದೂ ಹೇಳುವರು. ಸಂಪತ್ತನ್ನು ಕೊಡುವ ಕಾರಣವೂ ಶ್ರೀದೇವಿಯರ ವಾಸಸ್ಥಾನವಾದ ಕಾರಣವೂ ಶ್ರೀಶೈಲವೆಂದೂ ಹೆಸರು ಇದೆ. ಈ ಪರ್ವತಕ್ಕೆ ಬಹು ಹೆಸರುಗಳು ಇರುವುವು)



# ನಾರಾಯಣಾದ್ರಿ [1]

ನಾರಾಯಣ ಎಂಬ ಬ್ರಾಹ್ಮಣನು ವೈಕುಂಠಾದ್ರಿಯಲ್ಲಿ ಸ್ವಾಮಿ ಪುಷ್ಕರಿಣಿಯ ತೀರದಲ್ಲಿ ಭಗವಂತನ ತಪಸ್ಸು ಮಾಡಿದನು. ಆಗ ಪರಮಾತ್ಮನು ಸಂತುಷ್ಟನಾಗಿ ರಮಾದೇವಿಯರಿಂದ ಸಹಿತನಾಗಿ ಗರುಡಾರೂಢನಾಗಿ ಅಲ್ಲಿಗೆ ಬಂದನು. ನಾರಾಯಣ ಎಂಬ ಆ ಬ್ರಾಹ್ಮಣನು ಭಗವಂತನನ್ನು ನೋಡಿ ಸಂತೋಷಸಮುದ್ರ ದಲ್ಲಿ ಮುಳುಗಿದನು. ದೇವರಿಗೆ ಪ್ರದಕ್ಷಿಣೆ ಬಂದು ಮುಂದೆ ಏನು ಮಾಡಬೇಕೆಂದೂ ತಿಳಿಯದೆ ಹೋದನು. ಸ್ವಲ್ಪಹೊತ್ತು ಸುಮ್ಮನಿದ್ದನು. ಆಮೇಲೆ ಭಗವಂತನನ್ನು ಸ್ತುತಿಸಿದನು. ಭಗವಂತನು ಸಂತುಷ್ಟನಾಗಿ ಯಾವುದಕ್ಕಾಗಿ ತಪಸ್ಸು ಮಾಡುತ್ತಿರುವೆ? ನಿನ್ನ ಅಭೀಷ್ಟವನ್ನು ಕೊಡುವೆನು ಎಂದನು. ಆಗ ನಾರಾಯಣನೆಂಬ ಬ್ರಾಹ್ಮಣನು ಭಗವಂತನೇ! ನೀನು ನನಗೆ ವರವನ್ನು ಕೊಡುವಿಯಾದರೆ ನನಗೆ ಬೇಕಾದ ವರವನ್ನು ಕೇಳುವೆನು. ನಾನು ನಿನ್ನನ್ನು ನೋಡಬೇಕೆಂಬ ಆಸೆಯಿಂದ ಭೂಮಿ ಯಲ್ಲೆಲ್ಲಾ ಸುತ್ತಿದೆನು. ನಿನ್ನನ್ನು ನೋಡಲಾಗಲಿಲ್ಲ. ಆಮೇಲೆ ಬ್ರಹ್ಮದೇವರ ತಪಸ್ಸನ್ನು ಮಾಡಿ ಅವರಿಂದ ಆಜ್ಞಪ್ತನಾಗಿ ಇಲ್ಲಿಗೆ ಬಂದು ಸ್ವಾಮೀಪುಷ್ಕರಿಣೀತೀರದಲ್ಲಿ ಬಹುಸಮಯ ತಪಸ್ಸನ್ನು ಮಾಡುತ್ತಿರುವೆನು. ಈರೀತಿಯಾಗಿ ಭೂಮಿಯಲ್ಲಿ ಮನುಷ್ಯರಿಂದ ತಪಸ್ಸನ್ನು ಮಾಡಲಿಕ್ಕೆ ಆಗಲಾರದು. ಆದುದರಿಂದ ನೀನು ಜನರ ಅನುಗ್ರಹಕ್ಕಾಗಿ ಎಲ್ಲರಿಗೂ ಪ್ರತ್ಯಕ್ಷನಾಗಿ ಅಭೀಷ್ಟವನ್ನು ಕೊಡುತ್ತಾ ಗರುಡರುದ್ರಾದಿ ಗಳಿಂದ ಸೇವಿತನಾಗಿ ಶ್ರೀದೇವಿಯರಿಂದ ಸಹಿತನಾಗಿ ಸ್ವಾಮಿ ಪುಷ್ಕರಿಣಿಯ ತೀರದಲ್ಲಿ ವಿಹರಿಸುತ್ತಿರಬೇಕು. ಈ ಪರ್ವತವೂ ನನ್ನ ಹೆಸರಿನಿಂದ ಪ್ರಸಿದ್ಧಿಯನ್ನು ಹೊಂದ ಬೇಕು' ಎಂದು ಕೇಳಿಕೊಂಡನು.

ಅದಕ್ಕೆ ಭಗವಂತನು 'ಬ್ರಾಹ್ಮಣೋತ್ತಮ! ಹಾಗೆಯೇ ಆಗಲಿ. ಬ್ರಾಹ್ಮಣನೋ, ಕ್ಷತ್ರಿಯನೋ, ವೈಶ್ಯನೋ, ಶೂದ್ರನೋ, ಯಾರೇ ಆಗಲಿ ಯಾವ ಪಾಪವನ್ನು ಮಾಡಿದವನೇ ಆಗಿರಲಿ ಸ್ವಾಮೀ ಪುಷ್ಕರಿಣಿಯಲ್ಲಿ ಸ್ನಾನಮಾಡಿ ಅದರ ತೀರದಲ್ಲಿ ಇರುವ ನನ್ನನ್ನು ನಮಸ್ಕರಿಸಿದರೆ ಅವರು ಒಂದು ಕಲ್ಪದವರೆಗೆ ಸ್ವರ್ಗದಲ್ಲಿ ವಾಸಮಾಡುವನು. ಈ ಸ್ಥಾನವೂ ಈ ಸರೋವರವೂ ಸರ್ವರಿಗೆ ಸಿದ್ಧಿಯನ್ನು ಉಂಟುಮಾಡುವುದು. ಇನ್ನು ಮುಂದೆ ಈ ಪರ್ವತವು ನಿನ್ನ ಹೆಸರಿನಿಂದ **ನಾರಾಯಣಾಚಲ** ಎಂಬ ಪ್ರಸಿದ್ಧಿಯನ್ನು ಹೊಂದಲಿ' ಎಂದು ಹೇಳಿ ಅವನಿಗೆ ತನ್ನ ಸಾಯುಜ್ಯವನ್ನು ಕೊಟ್ಟನು.

---

1. ಬ್ರಹ್ಮಾಂಡ ಪುರಾಣ

# ವೃಷಭಾಚಲ [1]

ಶತಾನಂದರು ಜನಕರಾಜನೊಡನೆ 'ರಾಜನೇ! ವೈಕುಂಠಗಿರಿಗೆ ಕೃತಯುಗದಲ್ಲಿ ವೃಷಭಾಚಲವೆಂದು ಹೇಳುವರು. ತ್ರೇತಾಯುಗದಲ್ಲಿ ಅಂಜನಾಚಲವೆಂದೂ ದ್ವಾಪರಯುಗದಲ್ಲಿ ಶೇಷಾಚಲವೆಂದೂ ಕಲಿಯುಗದಲ್ಲಿ ವೇಂಕಟಾಚಲವೆಂದೂ ಹೆಸರು ಇರುವುದು' ಎಂದರು. ಜನಕರಾಜನು 'ಕೃತಯುಗದಲ್ಲಿ ವಷಭಾಚಲ ಎಂದು ಹೆಸರು ಬರಲು ಕಾರಣವೇನು' ಎಂದು ಕೇಳಿದನು.

ಅದಕ್ಕೆ ಶತಾನಂದರು 'ಪೂರ್ವದಲ್ಲಿ ವೃಷಭಾಸುರನೆಂಬ ರಾಕ್ಷಸನಿದ್ದನು. ಅವನು ವೈಕುಂಠಗಿರಿಯನ್ನು ಆಕ್ರಮಿಸಿ ಋಷಿಗಳನ್ನು ಪೀಡಿಸುತ್ತಿದ್ದನು. ಅದರಿಂದ ದುಃಖಿತರಾಗಿ ಋಷಿಗಳು ಭಕ್ತರಿಗೆ ಅಭಯಪ್ರದನಾದ ಭಗವಂತನನ್ನು ಮರೆ ಹೊಂದಿದವರಾಗಿ ಸ್ತೋತ್ರಮಾಡಿದರು. ಆಗ ಭಗವಂತನು ಪ್ರತ್ಯಕ್ಷನಾದನು. ಮುನಿಗಳು 'ಭಗವಂತನೇ! ವೃಷಭ ಎಂಬ ರಾಕ್ಷಸನು ನಮ್ಮನ್ನೆಲ್ಲಾ ಪೀಡಿಸುತ್ತಿರುವನು. ಆ ರಾಕ್ಷಸನಿಂದ ನಮ್ಮನ್ನು ರಕ್ಷಿಸಬೇಕು' ಎಂದು ಪ್ರಾರ್ಥಿಸಿದರು. ಭಗವಂತನು ಅವರಿಗೆ ಅಭಯಪ್ರದಾನ ಮಾಡಿದನು.

ಮಹಾಪರಾಕ್ರಮಶಾಲಿಯಾದ ವೃಷಭಾಸುರನು ನಿತ್ಯವೂ ಮೂರು ಹೊತ್ತು ಸ್ನಾನಮಾಡಿ ನೃಸಿಂಹಮೂರ್ತಿ ಸಾಲಿಗ್ರಾಮಕ್ಕೆ ಪೂಜಿಸುತ್ತಿದ್ದನು. ಪೂಜೆಯ ಕೊನೆಗೆ ತನ್ನ ತಲೆಯನ್ನೇ ಕಡಿದು ಸಮರ್ಪಿಸುತ್ತಿದ್ದನು. ಪುನಃ ತಲೆಯು ಬರುತ್ತಿತ್ತು. ಹೀಗೆ ಐದು ಸಾವಿರ ವರ್ಷ ಮಾಡುತ್ತಿದ್ದನು. ತರುವಾಯ ಆ ಸಾಲಿಗ್ರಾಮದಲ್ಲಿ ಅಂತರ್ಯಾಮಿಯಾದ ಭಗವಂತನು ಪ್ರತ್ಯಕ್ಷನಾದನು. ಭಗವಂತನನ್ನು ನೋಡಿ ವೃಷಭಾಸುರನು ಉದ್ದಕ್ಕೆ ನಮಸ್ಕಾರ ಮಾಡಿದನು. ಹಾಗೆಯೇ ಮೂರ್ಛೆಯಿಂದ ಬಿದ್ದನು. ಒಂದು ಮುಹೂರ್ತವಾದ ಮೇಲೆ ಜ್ಞಾನವುಳ್ಳವನಾಗಿ ಎದ್ದು ಭಗವಂತನೊಡನೆ 'ಭಗವಂತನೇ! ನಾನು ಮೋಕ್ಷವನ್ನಾಗಲೀ ಸ್ವರ್ಗವನ್ನಾಗಲೀ ಬ್ರಹ್ಮಪದವಿಯನ್ನಾಗಲೀ ನಾನು ಅಪೇಕ್ಷಿಸುವುದಿಲ್ಲ. ಜಗನ್ನಾಥನೇ! ನನಗೆ ಯುದ್ಧ ಭಿಕ್ಷೆಯನ್ನು ಕೊಡು. ಹತ್ತು ಅವತಾರಗಳಲ್ಲಿ ನಿನ್ನ ಪರಾಕ್ರಮಗಳನ್ನು ಕೇಳಿರುವೆನು. ಅದನ್ನೆಲ್ಲಾ ಸತ್ಯವನ್ನಾಗಿ ಮಾಡು' ಎಂದು ಕೇಳಿಕೊಂಡನು.

ಅದಕ್ಕೆ ಪರಮಾತ್ಮನು ಮುಗುಳುನಗೆಯುಳ್ಳವನಾಗಿ ರಾಕ್ಷಸನೊಡನೆ ಹಾಗೇ ಆಗಲಿ ಎಂದನು. ತರುವಾಯ ಶ್ರೀಪರಮಾತ್ಮನಿಗೂ ವೃಷಭಾಸುರನಿಗೂ ಭಯಂಕರ

1. ಭವಿಷ್ಯೋತ್ತರ ಪುರಾಣ. ಅ–1

# ನಾರಾಯಣಾದ್ರಿ [1]

ನಾರಾಯಣ ಎಂಬ ಬ್ರಾಹ್ಮಣನು ವೈಕುಂಠಾದ್ರಿಯಲ್ಲಿ ಸ್ವಾಮಿ ಪುಷ್ಕರಿಣಿಯ ತೀರದಲ್ಲಿ ಭಗವಂತನ ತಪಸ್ಸು ಮಾಡಿದನು. ಆಗ ಪರಮಾತ್ಮನು ಸಂತುಷ್ಟನಾಗಿ ರಮಾದೇವಿಯರಿಂದ ಸಹಿತನಾಗಿ ಗರುಡಾರೂಢನಾಗಿ ಅಲ್ಲಿಗೆ ಬಂದನು. ನಾರಾಯಣ ಎಂಬ ಆ ಬ್ರಾಹ್ಮಣನು ಭಗವಂತನನ್ನು ನೋಡಿ ಸಂತೋಷಸಮುದ್ರ ದಲ್ಲಿ ಮುಳುಗಿದನು. ದೇವರಿಗೆ ಪ್ರದಕ್ಷಿಣೆ ಬಂದು ಮುಂದೆ ಏನು ಮಾಡಬೇಕೆಂದೂ ತಿಳಿಯದೆ ಹೋದನು. ಸ್ವಲ್ಪಹೊತ್ತು ಸುಮ್ಮನಿದ್ದನು. ಆಮೇಲೆ ಭಗವಂತನನ್ನು ಸ್ತುತಿಸಿದನು. ಭಗವಂತನು ಸಂತುಷ್ಟನಾಗಿ ಯಾವುದಕ್ಕಾಗಿ ತಪಸ್ಸು ಮಾಡುತ್ತಿರುವೆ? ನಿನ್ನ ಅಭೀಷ್ಟವನ್ನು ಕೊಡುವೆನು ಎಂದನು. ಆಗ ನಾರಾಯಣನೆಂಬ ಬ್ರಾಹ್ಮಣನು ಭಗವಂತನೇ! ನೀನು ನನಗೆ ವರವನ್ನು ಕೊಡುವಿಯಾದರೆ ನನಗೆ ಬೇಕಾದ ವರವನ್ನು ಕೇಳುವೆನು. ನಾನು ನಿನ್ನನ್ನು ನೋಡಬೇಕೆಂಬ ಆಸೆಯಿಂದ ಭೂಮಿ ಯಲ್ಲೆಲ್ಲಾ ಸುತ್ತಿದೆನು. ನಿನ್ನನ್ನು ನೋಡಲಾಗಲಿಲ್ಲ. ಆಮೇಲೆ ಬ್ರಹ್ಮದೇವರ ತಪಸ್ಸನ್ನು ಮಾಡಿ ಅವರಿಂದ ಆಜ್ಞಪ್ತನಾಗಿ ಇಲ್ಲಿಗೆ ಬಂದು ಸ್ವಾಮೀಪುಷ್ಕರಿಣೀತೀರದಲ್ಲಿ ಬಹುಸಮಯ ತಪಸ್ಸನ್ನು ಮಾಡುತ್ತಿರುವೆನು. ಈರೀತಿಯಾಗಿ ಭೂಮಿಯಲ್ಲಿ ಮನುಷ್ಯರಿಂದ ತಪಸ್ಸನ್ನು ಮಾಡಲಿಕ್ಕೆ ಆಗಲಾರದು. ಆದುದರಿಂದ ನೀನು ಜನರ ಅನುಗ್ರಹಕ್ಕಾಗಿ ಎಲ್ಲರಿಗೂ ಪ್ರತ್ಯಕ್ಷನಾಗಿ ಅಭೀಷ್ಟವನ್ನು ಕೊಡುತ್ತಾ ಗರುಡರುದ್ರಾದಿ ಗಳಿಂದ ಸೇವಿತನಾಗಿ ಶ್ರೀದೇವಿಯರಿಂದ ಸಹಿತನಾಗಿ ಸ್ವಾಮಿ ಪುಷ್ಕರಿಣಿಯ ತೀರದಲ್ಲಿ ವಿಹರಿಸುತ್ತಿರಬೇಕು. ಈ ಪರ್ವತವೂ ನನ್ನ ಹೆಸರಿನಿಂದ ಪ್ರಸಿದ್ಧಿಯನ್ನು ಹೊಂದ ಬೇಕು' ಎಂದು ಕೇಳಿಕೊಂಡನು.

ಅದಕ್ಕೆ ಭಗವಂತನು 'ಬ್ರಾಹ್ಮಣೋತ್ತಮ! ಹಾಗೆಯೇ ಆಗಲಿ. ಬ್ರಾಹ್ಮಣನೋ, ಕ್ಷತ್ರಿಯನೋ, ವೈಶ್ಯನೋ, ಶೂದ್ರನೋ, ಯಾರೇ ಆಗಲಿ ಯಾವ ಪಾಪವನ್ನು ಮಾಡಿದವನೇ ಆಗಿರಲಿ ಸ್ವಾಮೀ ಪುಷ್ಕರಿಣೆಯಲ್ಲಿ ಸ್ನಾನಮಾಡಿ ಅದರ ತೀರದಲ್ಲಿ ಇರುವ ನನ್ನನ್ನು ನಮಸ್ಕರಿಸಿದರೆ ಅವರು ಒಂದು ಕಲ್ಪದವರೆಗೆ ಸ್ವರ್ಗದಲ್ಲಿ ವಾಸಮಾಡುವನು. ಈ ಸ್ಥಾನವೂ ಈ ಸರೋವರವೂ ಸರ್ವರಿಗೆ ಸಿದ್ಧಿಯನ್ನು ಉಂಟುಮಾಡುವುದು. ಇನ್ನು ಮುಂದೆ ಈ ಪರ್ವತವು ನಿನ್ನ ಹೆಸರಿನಿಂದ **ನಾರಾಯಣಾಚಲ** ಎಂಬ ಪ್ರಸಿದ್ಧಿಯನ್ನು ಹೊಂದಲಿ' ಎಂದು ಹೇಳಿ ಅವನಿಗೆ ತನ್ನ ಸಾಯುಜ್ಯವನ್ನು ಕೊಟ್ಟನು.

---

1. **ಬ್ರಹ್ಮಾಂಡ ಪುರಾಣ**

# ವೃಷಭಾಚಲ [1]

ಶತಾನಂದರು ಜನಕರಾಜನೊಡನೆ 'ರಾಜನೇ! ವೈಕುಂಠಗಿರಿಗೆ ಕೃತಯುಗದಲ್ಲಿ ವೃಷಭಾಚಲವೆಂದು ಹೇಳುವರು. ತ್ರೇತಾಯುಗದಲ್ಲಿ ಅಂಜನಾಚಲವೆಂದೂ ದ್ವಾಪರಯುಗದಲ್ಲಿ ಶೇಷಾಚಲವೆಂದೂ ಕಲಿಯುಗದಲ್ಲಿ ವೇಂಕಟಾಚಲವೆಂದೂ ಹೆಸರು ಇರುವುದು' ಎಂದರು. ಜನಕರಾಜನು 'ಕೃತಯುಗದಲ್ಲಿ ವಷಭಾಚಲ ಎಂದು ಹೆಸರು ಬರಲು ಕಾರಣವೇನು' ಎಂದು ಕೇಳಿದನು.

ಅದಕ್ಕೆ ಶತಾನಂದರು 'ಪೂರ್ವದಲ್ಲಿ ವೃಷಭಾಸುರನೆಂಬ ರಾಕ್ಷಸನಿದ್ದನು. ಅವನು ವೈಕುಂಠಗಿರಿಯನ್ನು ಆಕ್ರಮಿಸಿ ಋಷಿಗಳನ್ನು ಪೀಡಿಸುತ್ತಿದ್ದನು. ಆದರಿಂದ ದುಃಖಿತರಾಗಿ ಋಷಿಗಳು ಭಕ್ತರಿಗೆ ಅಭಯಪ್ರದನಾದ ಭಗವಂತನನ್ನು ಮರೆ ಹೊಂದಿದವರಾಗಿ ಸ್ತೋತ್ರಮಾಡಿದರು. ಆಗ ಭಗವಂತನು ಪ್ರತ್ಯಕ್ಷನಾದನು. ಮುನಿಗಳು 'ಭಗವಂತನೇ! ವೃಷಭ ಎಂಬ ರಾಕ್ಷಸನು ನಮ್ಮನ್ನೆಲ್ಲಾ ಪೀಡಿಸುತ್ತಿರುವನು. ಆ ರಾಕ್ಷಸನಿಂದ ನಮ್ಮನ್ನು ರಕ್ಷಿಸಬೇಕು' ಎಂದು ಪ್ರಾರ್ಥಿಸಿದರು. ಭಗವಂತನು ಅವರಿಗೆ ಅಭಯಪ್ರದಾನ ಮಾಡಿದನು.

ಮಹಾಪರಾಕ್ರಮಶಾಲಿಯಾದ ವೃಷಭಾಸುರನು ನಿತ್ಯವೂ ಮೂರು ಹೊತ್ತು ಸ್ನಾನಮಾಡಿ ನೃಸಿಂಹಮೂರ್ತಿ ಸಾಲಿಗ್ರಾಮಕ್ಕೆ ಪೂಜಿಸುತ್ತಿದ್ದನು. ಪೂಜೆಯ ಕೊನೆಗೆ ತನ್ನ ತಲೆಯನ್ನೇ ಕಡಿದು ಸಮರ್ಪಿಸುತ್ತಿದ್ದನು. ಪುನಃ ತಲೆಯು ಬರುತ್ತಿತ್ತು. ಹೀಗೆ ಐದು ಸಾವಿರ ವರ್ಷ ಮಾಡುತ್ತಿದ್ದನು. ತರುವಾಯ ಆ ಸಾಲಿಗ್ರಾಮದಲ್ಲಿ ಅಂತರ್ಯಾಮಿಯಾದ ಭಗವಂತನು ಪ್ರತ್ಯಕ್ಷನಾದನು. ಭಗವಂತನನ್ನು ನೋಡಿ ವೃಷಭಾಸುರನು ಉದ್ದಕ್ಕೆ ನಮಸ್ಕಾರ ಮಾಡಿದನು. ಹಾಗೆಯೇ ಮೂರ್ಛೆಯಿಂದ ಬಿದ್ದನು. ಒಂದು ಮುಹೂರ್ತವಾದ ಮೇಲೆ ಜ್ಞಾನವುಳ್ಳವನಾಗಿ ಎದ್ದು ಭಗವಂತನೊಡನೆ 'ಭಗವಂತನೇ! ನಾನು ಮೋಕ್ಷವನ್ನಾಗಲೀ ಸ್ವರ್ಗವನ್ನಾಗಲೀ ಬ್ರಹ್ಮಪದವಿಯನ್ನಾಗಲೀ ನಾನು ಅಪೇಕ್ಷಿಸುವುದಿಲ್ಲ. ಜಗನ್ನಾಥನೇ! ನನಗೆ ಯುದ್ಧ ಭಿಕ್ಷೆಯನ್ನು ಕೊಡು. ಹತ್ತು ಅವತಾರಗಳಲ್ಲಿ ನಿನ್ನ ಪರಾಕ್ರಮಗಳನ್ನು ಕೇಳಿರುವೆನು. ಅದನ್ನೆಲ್ಲಾ ಸತ್ಯವನ್ನಾಗಿ ಮಾಡು' ಎಂದು ಕೇಳಿಕೊಂಡನು.

ಅದಕ್ಕೆ ಪರಮಾತ್ಮನು ಮುಗುಳುನಗೆಯುಳ್ಳವನಾಗಿ ರಾಕ್ಷಸನೊಡನೆ ಹಾಗೇ ಆಗಲಿ ಎಂದನು. ತರುವಾಯ ಶ್ರೀಪರಮಾತ್ಮನಿಗೂ ವೃಷಭಾಸುರನಿಗೂ ಭಯಂಕರ

1. ಭವಿಷ್ಯೋತ್ತರ ಪುರಾಣ. ಅ–1

ವಾದ ಯುದ್ಧವು ನಡೆಯಿತು. ದೇವತೆಗಳೆಲ್ಲರೂ ನೋಡುತ್ತಿದ್ದರು. ಆ ಯುದ್ಧವು ಅತ್ಯಂತ ಆಶ್ಚರ್ಯಕರವಾಗಿದ್ದಿತು. ಭಗವಂತನು 'ರಾಕ್ಷಸನೇ! ನನ್ನ ಸಾಮರ್ಥ್ಯವನ್ನು ನೋಡು' ಎಂದು ಹೇಳಿ ಭಯಂಕರವಾದ ರೂಪವುಳ್ಳ ಗರುಡದೇವರನ್ನೂ ಅವರ ಮೇಲೆ ಕೂತಿರುವ ಅನಂತ ಶಿರಸ್ಸು ಪಾದ ಇತ್ಯಾದಿ ಅವಯವಗಳುಳ್ಳ ತನ್ನ ರೂಪವನ್ನು ತೋರಿಸಿದನು. ಭಗವಂತನ ಮಹಿಮೆಯನ್ನು ನೋಡಿ ರಾಕ್ಷಸನು ತನ್ನ ಮಾಯಾಸಾಮರ್ಥ್ಯದಿಂದ ಗರುಡಾಕಾರವನ್ನು ಅದರ ಕೂತಿರುವ ಭಗವಂತನಂತೆ ಇರುವ ಆಕಾರವನ್ನು ತೋರಿಸಿದನು. ತರುವಾಯ ಭಗವಂತನು ಅವನ ಶಕ್ತಿಯನ್ನು ಮೀರುವ ಸಾಮರ್ಥ್ಯವುಳ್ಳವನಾಗಿದ್ದರೂ ಅವನನ್ನು ಪ್ರಶಂಸಿಸಿ ಅಸುರನೇ! ಈಗಲೇ ಚಕ್ರಾಯುಧದಿಂದ ನಿನ್ನ ಶಿರಸ್ಸನ್ನು ಕತ್ತರಿಸಿ ಉರುಳಿಸುವೆನು ಎಂದನು. ಆಗ ಅವನು ಭಗವಂತನಿಗೆ ಉದ್ದಕ್ಕೆ ನಮಸ್ಕರಿಸಿ 'ಭಗವಂತನೇ! ನಿನಗೆ ನಮಸ್ಕಾರವು. ನಿನ್ನ ಚಕ್ರದ ಮಹಿಮೆಯನ್ನು ಕೇಳಿರುವೆನು. ನಿನ್ನ ಚಕ್ರದಿಂದ ಕೀರ್ತಿಮಾನ್ ಎಂಬ ರಾಜನು ಕೀರ್ತಿಯನ್ನು ಪಡೆದನು. ನಿನ್ನ ಚಕ್ರದಿಂದ ಮೃತನಾಗಿ ನಿನ್ನ ಲೋಕವನ್ನು ಹೊಂದುವೆನು' ಎಂದು ಹೇಳಿ ಭಗವಂತನ ಪಾದವನ್ನು ಮುಟ್ಟಿ ನಮಸ್ಕರಿಸಿದನು. ಈ ಪರ್ವತಕ್ಕೆ ನನ್ನ ಹೆಸರು ಬರಬೇಕೆಂದು ಪ್ರಾರ್ಥಿಸಿದನು. ಶ್ರೀಭಗವಂತನು ಅವನನ್ನು ಆಲಂಗಿಸಿ ಹಾಗೆಯೇ ಎಂದು ಹೇಳಿ ತನ್ನ ಚಕ್ರವನ್ನು ಬಿಟ್ಟನು. ಚಕ್ರವು ಅವನ ತಲೆಯನ್ನು ಕತ್ತರಿಸಿತು. ರಾಕ್ಷಸನು ಮೃತನಾದನು. ಈರೀತಿಯಾಗಿ ಭಗವಂತನು ವರವನ್ನು ಕೊಟ್ಟ ಪ್ರಯುಕ್ತ ಆ ಪರ್ವತಕ್ಕೆ **ವೃಷಭಾಚಲವೆಂದು** ಹೆಸರಾಯಿತು.



## ಅಂಜನಾಚಲ [1]

ಜನಕರಾಜನು ಶತಾನಂದರೊಡನೆ ತ್ರೇತಾಯುಗದಲ್ಲಿ ಅಂಜನಾಚಲವೆಂದೂ ಹೆಸರು ಬರಲು ಕಾರಣವೇನೆನ್ನಲು ಶತಾನಂದರು ಹೇಳಿದರು—

'ಪೂರ್ವದಲ್ಲಿ ತ್ರೇತಾಯುಗದಲ್ಲಿ ಕೇಸರಿ ಎಂಬ ಅಸುರನಿದ್ದನು. ಅವನು ಮಗನನ್ನು ಹೊಂದ ಬೇಕೆಂದು ರುದ್ರದೇವರನ್ನು ತಪಸ್ಸು ಮಾಡಿದರು. ರುದ್ರದೇವರು ಪ್ರತ್ಯಕ್ಷರಾಗಿ ಬೇಕಾದ ವರವನ್ನು ಕೇಳಿಕೊಳ್ಳುವಂತೆ ಹೇಳಿದರು. ಅದಕ್ಕೆ ಅಸುರನು ಯುದ್ಧದಲ್ಲಿ ಹಿಂದಿರುಗಿ ಓಡಿಬರದೆ ಇರುವ ಬಲಿಷ್ಠನಾದ

1. ಭವಿಷ್ಯೋತ್ತರ ಪುರಾಣ. ಅ–1

ಮಗನನ್ನು ಅಪೇಕ್ಷಿಸುವೆನು ಎಂದನು. ರುದ್ರದೇವರು ನಾನು ನಿನ್ನ ಮೇಲೆ ಸಂತೋಷಪಟ್ಟರೂ ನಿನಗೆ ಮಗನನ್ನು ಕೊಡಲಾರೆನು. ಏಕೆಂದರೆ ನಿನಗೆ ಮಗನಿಲ್ಲವೆಂದು ಬ್ರಹ್ಮದೇವರು ಬರೆದಿರುವರು. ಆದರೂ ನಿನಗೆ ಸುಂದರಿಯಾದ ಮಗಳನ್ನು ಕೊಡುವೆನು. ಅವಳಲ್ಲಿ ನಿನಗೆ ಬೇಕಾದ ಬಲಿಷ್ಠನಾದ ಮಗನು ಹುಟ್ಟುವನು' ಎಂದು ಹೇಳಿದರು. ಅಲ್ಲಿಯೇ ಮರೆಯಾದರು ಆ ಅಸುರನು ವರವನ್ನು ಪಡೆದು ಸಂತೋಷವನ್ನು ಹೊಂದಿದನು. ತರುವಾಯ ಅವನಿಗೆ ಪರಮಸುಂದರಿಯಾದ ಮಗಳು ಹುಟ್ಟಿದಳು. ಅವಳಿಗೆ ಅಂಜನಾ ಎಂದು ಹೆಸರಿಟ್ಟನು. ಪುಂಜಕಸ್ಥಳ ಎಂಬ ಅಪ್ಸರಸ್ತ್ರೀಯು ಅಂಜನಾದೇವಿಯಾಗಿ ಹುಟ್ಟಿದಳು. ಆ ಅಂಜನಾದೇವಿಯನ್ನು ಕೇಸರಿ ಎಂದು ಹೆಸರುಳ್ಳ ಕಪಿಯು ಮದುವೆಯಾಗಿ ಸಂತೋಷದಿಂದ ಇದ್ದನು. ಆದರೆ ಬಹುಸಮಯ ಅಂಜನೆಗೆ ಮಕ್ಕಳಾಗಲಿಲ್ಲ. ಇದರಿಂದ ಅವಳು ದುಃಖವುಳ್ಳವನಾಗಿ ಮತಂಗರೆಂಬ ಮುನಿಗಳ ಬಳಿಗೆ ಬಂದು ಕಣ್ಣೀರುಸುರಿಸುತ್ತಾ ನಮಸ್ಕರಿಸಿ ತಪಸ್ವಿಶ್ರೇಷ್ಠರೇ! ನನಗೆ ಮಕ್ಕಳಿಲ್ಲ. ಮುಂದೇನು ಗತಿ? ಎಂದು ಕೇಳಿದಳು. ಆದಕ್ಕೆ ಮತಂಗ ಋಷಿಗಳು ಪಂಪಾಕ್ಷೇತ್ರದ ಪೂರ್ವಭಾಗದಲ್ಲಿ ನಾರಾಯಣಗಿರಿಯಲ್ಲಿ ಸ್ವಾಮೀಪುಷ್ಕರಿಣೀಯ ಉತ್ತರದಿಕ್ಕಿನಲ್ಲಿ ಆಕಾಶಗಂಗಾ ಎಂಬ ತೀರ್ಥವಿದೆ. ನೀನು ಅಲ್ಲಿಗೆ ಹೋಗುವವಳಾಗಿ ಆ ಆಕಾಶಗಂಗೆಯಲ್ಲಿ ನಿತ್ಯವೂ ಸ್ನಾನಮಾಡುವವಳಾಗಿ ಹದಿನೆರಡು ವರ್ಷ ತಪಸ್ಸು ಮಾಡುವವಳಾಗು. ಆ ಪುಣ್ಯದಿಂದ ನಿನಗೆ ಒಳ್ಳೇ ಗುಣವಂತನಾದ ಮಗನು ಹುಟ್ಟುವನು' ಎಂದರು.

ಈರೀತಿಯಾಗಿ ಮತಂಗರ ಮಾತನ್ನು ಕೇಳಿ ಅಂಜನೆಯು ನಾರಾಯಣಗಿರಿಗೆ ಹೋದಳು. ಸ್ವಾಮಿ ಪುಷ್ಕರಿಣಿಯಲ್ಲಿ ಸ್ನಾನ ಮಾಡಿದಳು. ಅಶ್ವತ್ಥಮರಕ್ಕೆ ಪ್ರದಕ್ಷಿಣೆ ಬಂದಳು. ವರಾಹದೇವರಿಗೆ ನಮಸ್ಕರಿಸಿದಳು. ಸ್ವಾಮಿಪುಷ್ಕರಿಣಿಯ ಪವಿತ್ರವಾದ ನೀರನ್ನು ಕುಡಿದಳು. ಆಮೇಲೆ ಆಕಾಶಗಂಗೆಗೆ ಹೋಗಿ ಗಂಡನ ಮತ್ತು ಎಲ್ಲಾ ಋಷಿಗಳ ಆಜ್ಞೆಯನ್ನು ಪಡೆದು ತಪಸ್ಸು ಮಾಡಿದಳು. ಉಪವಾಸದಿಂದ ತಪಸ್ಸು ಮಾಡಿದಳು. ಒಂದು ವರ್ಷಕಾಲ ಹೀಗೆಯೇ ಕಠಿಣವಾದ ತಪಸ್ಸು ಮಾಡಿದಳು. ಅತ್ಯಂತ ಕೃಶಳಾಗಿ ಹೋದಳು. ಒಂದು ವರ್ಷ ಸಂಪೂರ್ಣವಾಗಲು ಮಹಾಬಲಿಷ್ಠರಾದ ವಾಯುದೇವರು ಪ್ರತಿನಿತ್ಯವೂ ಅವಳ ಕೈಯಲ್ಲಿ ಒಂದು ಹಣ್ಣನ್ನು ತಂದು ಹಾಕುತ್ತಿದ್ದರು. ಅಂಜನೆಯು ದೇವತಾಪ್ರಸಾದವೆಂದು ಅದನ್ನು ತಿಳಿದು ತಿನ್ನುತ್ತಿದ್ದಳು. ಒಂದು ದಿವಸದಲ್ಲಿ ವಾಯುದೇವರು ವೀರ್ಯದಿಂದ ಕೂಡಿದ

ಹಣ್ಣನ್ನು ಅವಳ ಕೈಯಲ್ಲಿ ಹಾಕಿದರು. ಅಂಜನಾದೇವಿಯು ನಿತ್ಯದಂತೆ ಅದು ಸಾಮಾನ್ಯ ಹಣ್ಣು ಎಂದು ತಿಳಿದುಕೊಂಡು ತಿಂದಳು. ತರುವಾಯ ಅವಳಿಗೆ ಗರ್ಭವುಂಟಾಯಿತು. ಅವಳು ಗರ್ಭಿಣಿಯಾದ ಕಾರಣ ಮುನಿಗಳಿಗೆಲ್ಲಾ ಸಂತೋಷವುಂಟಾಯಿತು. ಹತ್ತು ತಿಂಗಳಾದ ಮೇಲೆ ಗಂಡುಕೂಸನ್ನು ಹಡೆದಳು. ಆ ಗಂಡುಕೂಸೇ ಹನುಮಂತ ದೇವರು. ಈರೀತಿಯಾಗಿ ಅಂಜನೆಯು ವ್ರತಗಳನ್ನು ಮಾಡಿ ಆ ಪರ್ವತದಲ್ಲಿ ಮಗನನ್ನು ಪಡೆದ ಕಾರಣ ತ್ರೇತಾಯುಗದಲ್ಲಿ **ಅಂಜನಾಚಲ** ಎಂದು ಹೆಸರಾಯಿತು.



## ಶೇಷಾಚಲವು [1]

**ಪೂ**ರ್ವದಲ್ಲಿ ಒಂದು ಸಮಯದಲ್ಲಿ ಶ್ರೀಭಗವಂತನು ವೈಕುಂಠದಲ್ಲಿ ಅಮುಕ್ತಸ್ಥಾನದಲ್ಲಿ ಬಾಗಿಲಲ್ಲಿ ಶೇಷದೇವರನ್ನು ಕಾಯಲಿಕ್ಕೆ ನಿಲ್ಲಿಸಿ ತಾನು ಒಳಗೆ ಲಕ್ಷ್ಮೀದೇವಿಯರೊಡನೆ ಮಲಗಿದ್ದನು. ಆ ಸಮಯದಲ್ಲಿ ದೇವರ ದರ್ಶನಮಾಡ ಬೇಕೆಂದು ವಾಯುದೇವರು ಅಲ್ಲಿಗೆ ಬಂದರು. ಆಗ ಶೇಷದೇವರು ತನ್ನ ಕೈಯಲ್ಲಿದ್ದ ಬಂಗಾರದ ಕೋಲನ್ನು ಅಡ್ಡಹಿಡಿದು ಒಳಗೆ ಹೋಗಬಾರದು ಎಂದರು. ವಾಯು ದೇವರು 'ಮೂರ್ಖನೇ! ನಾನು ದೇವರನ್ನು ನೋಡಬೇಕೆಂದು ಬಂದಿರುವೆನು. ನನಗೆ ಅವಸರದ ಕೆಲಸವಿದೆ. ನನ್ನನ್ನು ಯಾಕೆ ತಡೆಯುವಿ? ಎಂದು ಕೇಳಿದರು.

ಆಗ ಶೇಷದೇವರು ನಾನು ದೇವರ ಆಜ್ಞೆಯಂತೆ ಬಾಗಿಲನ್ನು ಕಾಯುತ್ತಾ ಇರುವೆನು. ನೀನು ಒಳಗೆ ಹೋಗಕೂಡದು ಎಂದು ಹೇಳಿದರು. ಅದಕ್ಕೆ ವಾಯುದೇವರು 'ಪೂರ್ವದಲ್ಲಿ ಜಯ ವಿಜಯ ಎಂಬ ಇಬ್ಬರು ದ್ವಾರಪಾಲಕರು ನಿನ್ನಂತೆ ಸನಕಾದಿಗಳನ್ನು ತಡೆಯಲಿಕ್ಕೆ ಹೋಗಿ ಅವರ ಶಾಪದಿಂದ ರಾವಣ ಕುಂಭಕರ್ಣರಾಗಿ ಹುಟ್ಟಿರುವುದು ನಿನಗೆ ತಿಳಿಯದೆ?'. ಎಂದು ಕೇಳಿದರು. ಆ ಮಾತನ್ನು ಕೇಳಿ ಶೇಷದೇವರಿಗೆ ಅಸುರಾವೇಶದಿಂದ ಬಹಳ ಕೋಪವು ಬಂದಿತು. ಕೋಪದಿಂದ ಜ್ವಲಿಸಿದರು. ವಾಯುದೇವರನ್ನು ನಿಂದಿಸುತ್ತಾ ಹೇಳಿದರು. 'ಏನು ಬಹುದೊಡ್ಡ ಮಾತನ್ನು ಆಡುತ್ತಿರುವೆ? ನಿನಗೆ ಬದುಕುವ ಆಸೆಯಿಲ್ಲವೇ? ನಿನ್ನನ್ನು ಶಿಕ್ಷಿಸಬೇಕು. ಬಲಜ್ಞಾನ ವೈರಾಗ್ಯ ವಿಷ್ಣುಭಕ್ತಿ ಇತ್ಯಾದಿ ಗುಣಗಳಲ್ಲಿ ನನಗೆ ಸಮಾನರು ಯಾರೂ ಇಲ್ಲ. ನಾನು ಯಾವಾಗಲೂ ಅಂತಃಪುರದಲ್ಲಿ ವಾಸಮಾಡುವೆನು. ನಾನು

1. ಭ.ಪು.ಅ.1

ಭಗವಂತನಿಗೆ ಮಗನಿಗಿಂತಲೂ ಹೆಚ್ಚು ಪ್ರಿಯನಾದವನು. ಲೋಕಹಿತಕ್ಕಾಗಿ ನನ್ನನ್ನು ಭಗವಂತನು ದ್ವಾರಪಾಲಕನನ್ನಾಗಿ ಮಾಡಿರುವನು' ಎಂದು ಹೇಳಿದರು.

ಅದಕ್ಕೆ ವಾಯುದೇವರು 'ಶೇಷ! ಯಾವಾಗಲೂ ಮನೆಯೊಳಗೇ ಇರುವ ಬೆಕ್ಕು ಹೊರಗೆ ಇರುವ ಆನೆಗೆ ಸಮಾನವಾಗುವುದೇ? ರಾಜನ ಆಜ್ಞೆಯಿಂದ ರಾಜನು ಮಲಗಿರುವ ಹಾಸಿಗೆಯಲ್ಲಿ ಕೂತುಕೊಂಡು ಅವನ ಕಾಲನ್ನು ಒತ್ತೊತ್ತಿರುವ ಸೇವಕನು ಕೆಳಗೆ ಕೂತಿರುವ ರಾಜನ ಮಗನಿಗೆ ಸಮಾನನಾಗುವನೇ?' ಎಂದರು. ಹೀಗೆ ಅವರಿಬ್ಬರಿಗೆ ತುಂಬಾ ಜಗಳವಾಯಿತು. ಭಗವಂತನು ನಿದ್ದೆ ಬಂದವನಂತೆ ನಟಿಸುತ್ತಾ ಮಲಗಿದ್ದನು. ಲಕ್ಷ್ಮೀದೇವಿಯರು ಎಬ್ಬಿಸಿದರು. ಭಗವಂತನು ಎದ್ದವನಾಗಿ 'ಶೇಷ! ಯಾಕೆ ಕೂಗುವಿ? ಯಾರು ಹೊಸತಾಗಿ ಬಂದಿರುವರು? ಎಂದು ಕೇಳಿದನು. ಅದಕ್ಕೆ ಶೇಷದೇವರು ಮಲಯಪರ್ವತದಲ್ಲಿ ವಾಸಿಸುವ ಅತಿ ಅಹಂಕಾರಪಡುವ ವಾಯುವು ಅಕಾಲದಲ್ಲಿ ಒಳಗೆ ಬರಲು ಬಂದಿರುವನು. ಅವನು ಕೆಟ್ಟ ಮಾತುಗಳನ್ನೆಲ್ಲಾ ಆಡುತ್ತಿರುವನು ಎಂದು ಹೇಳಿದರು.

ತರುವಾಯ ಭಗವಂತನು ಹೊರಗೆ ಬಂದನು. ವಾಯುದೇವರು ಭಗವಂತನನ್ನು ನೋಡಿ ಉದ್ದಕ್ಕೆ ನಮಸ್ಕರಿಸಿ ಸ್ತೋತ್ರಮಾಡಿದರು. ಪರಮಾತ್ಮನು ವಾಯುದೇವರೊಡನೆ 'ಮಗನೇ! ಅತ್ಯಂತ ಅಭಿಮಾನಿಯಾದ ಶೇಷನೊಡನೆ ಏಕೆ ಕಲಹ'? ಎಂದು ಕೇಳಿದರು. ದೇವರ ಮಾತನ್ನು ಕೇಳಿ ವಾಯುದೇವರು ಅತ್ಯಂತ ತೃಪ್ತರಾದರು. ಶೇಷದೇವರು 'ನಾನು ಸಮರ್ಥನು ಬಲ ಜ್ಞಾನ ನಿಮ್ಮ ಅನುಗ್ರಹ ಇತ್ಯಾದಿಗಳಲ್ಲಿ ನನಗೆ ಸಮಾನರು ಒಬ್ಬರೂ ಇಲ್ಲ, ಎಲ್ಲಿಯೂ ನನಗೆ ಸಮಾನರಿಲ್ಲ' ಎಂದು ಹೇಳಿದರು.

ಶೇಷದೇವರ ಮಾತನ್ನು ಕೇಳಿ ದೇವರು ನಗುತ್ತಾ ಸರಿಸರಿ ಎಂದು ಹೇಳುವವ ರಾಗಿ 'ಶೇಷ! ಬರೇ ಬಾಯಿಯಲ್ಲಿ ಹೇಳಿ ಪ್ರಯೋಜನವಿಲ್ಲ, ಕಾರ್ಯದಿಂದ ಮಾಡಿ ತೋರಿಸಬೇಕು. ಇಂದ್ರಾದಿ ದೇವತೆಗಳು ನಿಮ್ಮಿಬ್ಬರ ಬಲವನ್ನು ಪರೀಕ್ಷಿಸಲಿ. ಇಲ್ಲಿಯೇ ಉತ್ತರಭಾಗದಲ್ಲಿ ಮೇರುಪರ್ವತದ ಮಗನಾದ ಪರ್ವತವಿದೆ. ಅದನ್ನು ನೀನು ನಿನ್ನ ದೇಹದಿಂದ ಸುತ್ತು ಹಾಕಿ ನಿನ್ನ ಬಲವಿದ್ದಷ್ಟು ಗಟ್ಟಿಯಾಗಿ ಅದನ್ನು ಹಿಡಿದುಕೊಂಡು ಇರು' ಎಂದು ಹೇಳಿದರು. ಭಗವಂತನ ಮಾತನ್ನು ಕೇಳಿ ಆನಂದಾದ್ರಿ, ಎಂದು ಹೆಸರುಳ್ಳ ಆ ಪರ್ವತವನ್ನು ಸುತ್ತುಹಾಕಿ ಗಟ್ಟಿಯಾಗಿ ಹಿಡಿದುಕೊಂಡು ವಾಯುದೇವರನ್ನು ಕರೆದರು (ಕೂಗಿದರು). ಶೇಷದೇವರನ್ನು ನೋಡಿ ವಾಯುದೇವರು ಭಗವಂತನ ಆಜ್ಞೆಯಿಂದ ಎಲ್ಲ ದೇವತೆಗಳು

ನೋಡುತ್ತಿರುವಂತೆ ಪರ್ವತದ ಹತ್ತಿರ ಬಂದರು. ತನ್ನ ಕಿರುಬೆರಳಿನಿಂದ ಎತ್ತಿಬಿಟ್ಟರು. ಅಷ್ಟರಿಂದಲೇ ವಾಯುದೇವರ ಬಲದಿಂದ ಆ ಪರ್ವತವು ಶೇಷದೇವರಿಂದ ಸಹಿತವಾಗಿ ಬಹುವೇಗದಿಂದ ಆಕಾಶದಲ್ಲಿ ಅನೇಕಲಕ್ಷ ಯೋಜನ ದಕ್ಷಿಣದಿಕ್ಕಿಗೆ ಹೋಗುತ್ತಿತ್ತು. ಆಗ ಮೇರುಪರ್ವತವು ತನ್ನ ಮಗನನ್ನು ರಕ್ಷಿಸಬೇಕೆಂದು ಪ್ರಾರ್ಥಿಸಿ ಕೊಂಡನು. ವಾಯುದೇವರು ಹಾಗೆಯೇ ರಕ್ಷಣೆ ಮಾಡಿದರು. ವಾಯುದೇವರು ಶೇಷದೇವರಿಂದ ಸಹಿತವಾದ ಆ ಪರ್ವತವನ್ನು ಸುವರ್ಣಮುಖರೀ ನದಿಯ ಉತ್ತರತೀರದಲ್ಲಿ ಮೆಲ್ಲನೆ ಇಟ್ಟರು. ತರುವಾಯ ಶೇಷದೇವರು ಅಹಂಕಾರ ರಹಿತ ರಾಗಿ ವಾಯುದೇವರನ್ನು ಸ್ತೋತ್ರ ಮಾಡಿದರು. ವಾಯುದೇವರು ಸಂತುಷ್ಟರಾಗಿ ನಿನ್ನ ಸನ್ನಿಧಾನವುಳ್ಳ ಈ ಪರ್ವತದಲ್ಲಿ ಭಗವಂತನು ಬಂದು ವಾಸಮಾಡುವನು ಎಂದು ಅನುಗ್ರಹಮಾಡಿದನು. ಈರೀತಿಯಾಗಿ ಶೇಷದೇವರ ನಿಮಿತ್ತವಾಗಿ ದ್ವಾಪರಯುಗ ದಲ್ಲಿ ಆ ಪರ್ವತಕ್ಕೆ **ಶೇಷಾಚಲ**ವೆಂದು ಹೆಸರು ಉಂಟಾಯಿತು.



## ವೇಂಕಟಾಚಲ [1]

ಕಲಿಯುಗದಲ್ಲಿ ಅದೇ ಪರ್ವತಕ್ಕೆ ವೇಂಕಟಾಚಲವೆಂಬ ಹೆಸರು ಬಂದಿರುವುದು. 'ವೇಂ' ಎಂದರೆ ಪಾಪವೆಂದರ್ಥ. 'ಕಟತೇ' ನಾಶ ಮಾಡುತ್ತದೆ. ಪಾಪವನ್ನು ನಾಶಮಾಡುವ ಶಕ್ತಿಯಿರುವ ಕಾರಣ 'ವೇಂಕಟಾಚಲ' ಎಂಬ ಹೆಸರು. ಮಾಧವನೆಂಬ ಬ್ರಾಹ್ಮಣನ ಪಾಪವು ಈ ಪರ್ವತದ ಸ್ಪರ್ಶದಿಂದ ಪರಿಹೃತವಾಯಿತು. ಆದುದರಿಂದ ಕಲಿಯುಗದಲ್ಲಿ 'ವೇಂಕಟಾಚಲ'ವೆಂಬ ಹೆಸರು. ಮಾಧವ ಬ್ರಾಹ್ಮಣನ ಕಥೆಯು ಹೀಗಿರುವುದು—

ಪೂರ್ವದಲ್ಲಿ ಕಾಳಹಸ್ತಿ ಎಂಬ ನಗರದಲ್ಲಿ ಪುರಂದರ ಎಂಬ ಬ್ರಾಹ್ಮಣನಿದ್ದನು. ಅವನು ಸೋಮಯಾಗವನ್ನು ಮಾಡಿದ್ದನು. ಅನೇಕ ವ್ರತಗಳನ್ನು ಮಾಡಿದ್ದನು. ಸತ್ಯವಾದ ಮಾತನ್ನೇ ಆಡುತ್ತಿದ್ದನು. ಅವನಿಗೆ ಬಹುಕಾಲದವರೆಗೆ ಮಕ್ಕಳಾಗಲಿಲ್ಲ. ಆದರೂ ಬ್ರಾಹ್ಮಣನು ಭಗವದಿಚ್ಛೆಯಿದ್ದಂತೆ ಆಗಲಿ ಎಂದುಕೊಂಡು ದುಃಖಪಡ ಲಿಲ್ಲ. ಆಮೇಲೆ ವಯಸ್ಸಾದ ಮೇಲೆ ಪೂರ್ವಪುಣ್ಯದಿಂದ ಒಬ್ಬ ಮಗನು ಹುಟ್ಟಿದನು. ಅವನಿಗೆ ಮಾಧವ ಎಂದು ನಾಮಕರಣ ಮಾಡಿದನು. ಆಮೇಲೆ ಸರಿಯಾದ

1. ಭ.ಪು.ಅ.1

ವಯಸ್ಸಿನಲ್ಲಿ ಉಪನಯನವನ್ನು ಮಾಡಿದನು. ತರುವಾಯ ಚಂದ್ರಲೇಖಾ ಎಂದು ಹೆಸರುಳ್ಳ ರಾಜಪುತ್ರಿಯನ್ನು ಮದುವೆ ಮಾಡಿದನು. ಚಂದ್ರಲೇಖೆಯು ಪಾಂಡ್ಯದೇಶದವಳು. ಅತ್ಯಂತ ಪ್ರತಿವ್ರತೆಯಾಗಿದ್ದಳು. ಗಂಡನು ಮಲಗಿದ ಮೇಲೆ ಮಲಗುತ್ತಿದ್ದಳು. ಗಂಡನ ಊಟವಾದ ಮೇಲೆ ಊಟಮಾಡುತ್ತಿದ್ದಳು. ಒಂದು ದಿವಸದಲ್ಲಿ ಮಾಧವನಿಗೆ ಹಗಲಲ್ಲಿ ಪತ್ನಿಯು ಸಂಸರ್ಗವನ್ನು ಮಾಡಬೇಕೆಂದು ಆಸೆಯಾಯಿತು. ಹೆಂಡತಿಯೊಡನೆ ತಿಳಿಸಿದನು. ಅದಕ್ಕೆ ಅವಳು ಇದು ಕೇವಲ ಅಯುಕ್ತವೆಂದಳು. ಮಾಧವನು ತುಂಬಾ ಒತ್ತಾಯ ಮಾಡಲು ಅವಳು 'ದೊಡ್ಡವರು ಸಂಚರಿಸುತ್ತಿರುವ ಈ ಮನೆಯಲ್ಲಿ ಬೇಡ. ನಾನು ನೀರನ್ನು ತರುವ ನೆಪದಿಂದ ಕೊಡವನ್ನು ಹಿಡಿದುಕೊಂಡು ಹೋಗಿ ವನಕ್ಕೆ ಹೋಗುವೆನು' ಎಂದು ಹೇಳಿ ಹಾಗೆಯೇ ಹೊರಟುಹೋದಳು. ಅವಳು ಹೋಗಿ ಸ್ವಲ್ಪ ಹೊತ್ತಿನ ಮೇಲೆ ಮಾಧವನು ದರ್ಭೆಯನ್ನು ತರುತ್ತೇನೆ ಎಂದು ಹೇಳಿ ಅವಳ ಹಿಂದೆಯೇ ವನಕ್ಕೆ ಹೋದನು. ವನಕ್ಕೆ ಹೋಗಿರುವಾಗ ವನದಲ್ಲಿ ಒಂದು ಮರದ ಬುಡದಲ್ಲಿದ್ದ ಬಿಳಿಯಾದ ಸೀರೆಯನ್ನು ಉಟ್ಟುಕೊಂಡಿದ್ದ, ಕಪ್ಪಾದ ಮೊಣಕಾಲಿನವರೆಗೆ ಬರುವ ಉದ್ದ ಕೂದಲುಗಳಿದ್ದ ಸುಂದರಿಯಾದ ಕುಂತಲಾ ಎಂದು ಹೆಸರುಳ್ಳ ಚಂಡಾಲ ಸ್ತ್ರೀಯನ್ನು ನೋಡಿ ಅವಳಲ್ಲಿ ಮೋಹಿತನಾದನು. ತರುವಾಯ ಹೆಂಡತಿಯೊಡನೆ 'ನಿನ್ನ ಭಕ್ತಿಯನ್ನು ಪರೀಕ್ಷಿಸಲು ನಾನು ಹೇಳಿದ್ದಲ್ಲದೆ ನಿಜವಾಗಿಯೂ ನನಗೆ ಮನಸ್ಸಿಗೆ ಆ ಅಭಿಪ್ರಾಯವಾಯಿತು. ನಿನ್ನ ಭಕ್ತಿಯಿಂದ ಮೆಚ್ಚಿದೆನು. ನೀನಿನ್ನು ಮನೆಗೆ ಹೋಗಬಹುದು' ಎಂದು ಹೇಳಿದನು. ಚಂದ್ರಲೇಖೆಯು ಆ ಮಾತನ್ನು ಸತ್ಯವೆಂದೇ ನಂಬಿ ಸಂತೋಷದಿಂದ ಹಿಂದೆ ಹೊರಟುಹೋದಳು.

ಅವಳು ಮನೆಗೆ ಹೋಗುವವರೆಗೆ ಹಾಗೆಯೇ ನಿಂತಿದ್ದು ಆಮೇಲೆ ಆ ಚಂಡಾಲಸ್ತ್ರೀಯ ಬಳಿಗೆ ಹೋದನು. ಅವಳು ಇವನ ಅಭಿಪ್ರಾಯವನ್ನು ತಿಳಿದು ಅನೇಕ ವಿಧವಾಗಿ ಬೇಡವೆಂದು ಹೇಳಿದಳು. ಕೊನೆಗೆ ತಾನೇ ಅಲ್ಲಿಂದ ಎದ್ದು ಓಡಿಹೋಗಲಿಕ್ಕೆ ಪ್ರಯತ್ನಿಸಿದಳು. ಮಾಧವ ಬ್ರಾಹ್ಮಣನು ಅವಳ ಹಿಂದೆಯೇ ಓಡಿ ಹೋಗಿ ಹಿಡಿದು ಬಲಾತ್ಕಾರದಿಂದ ಭೋಗಿಸಿದನು. ತರುವಾಯ ಅವಳು ಮಾಧವನೊಡನೆ 'ನೀವಿನ್ನು ನನ್ನ ಗಂಡನಾದಿರಿ. ನಿಮಗೆ ಚಂಡಾಲತ್ವವು ಬಂದಿತು. ಯಜ್ಞೋಪವೀತವನ್ನು ತೆಗೆದು ಹಾಕಿರಿ. ಗೋಮಾಂಸವನ್ನು ತಿನ್ನಿರಿ. ಮದ್ಯವನ್ನು ಕುಡಿಯಿರಿ' ಎಂದು ಹೇಳಿದರು. ಮಾಧವನು ಹಾಗೆಯೇ ಮಾಡಿದನು. ಮಾಧವನು ಕೃಷ್ಣವೇಣೀನದಿಯ ತೀರದಲ್ಲಿ ಅವಳೊಡನೆ ಸಂಸಾರ ಮಾಡುತ್ತಾ ಹನ್ನೆರಡು ವರ್ಷಕಾಲವಿದ್ದನು. ತರುವಾಯ ದೈವೇಚ್ಛೆಯಿಂದ ಕುಂತಲೆಯು ಮರಣವನ್ನು

ಹೊಂದಿದಳು. ಅವಳ ವಿಯೋಗದಿಂದ ಮಾಧವನಿಗೆ ಹುಚ್ಚುಹಿಡಿದಂತೆ ಆಯಿತು. ಭೂಮಿಯಲ್ಲೆಲ್ಲಾ ಸಂಚರಿಸುತ್ತಾ ಹೋದನು. ದೈವೇಚ್ಛೆಯಿಂದ ಕೆಲವು ಉತ್ತರದೇಶದ ರಾಜರು ಶೇಷಾಚಲಕ್ಕೆ ಹೋಗುತ್ತಿದ್ದರು. ಅವರೊಡನೆ ಮಾಧವನೂ ಅವರ ಎಂಜಲನ್ನು ತಿನ್ನುತ್ತಾ ಹೋದನು. ಅವರು ಕಪಿಲತೀರ್ಥಕ್ಕೆ ಹೋಗಿ ಕ್ಷೌರ ಮಾಡಿಕೊಂಡು ಕಪಿಲತೀರ್ಥದಲ್ಲಿ ಸ್ನಾನಮಾಡಿ ಪಿತೃಗಳಿಗೆ ಪಿಂಡಪ್ರದಾನ ಮಾಡಿದರು. ಮಾಧವನೂ ಹಾಗೆಯೇ ಕೌರಮಾಡಿಕೊಂಡು ಮಣ್ಣಿನಿಂದ ಪಿಂಡಪ್ರದಾನವನ್ನು ಮಾಡಿದನು. ಕ್ಷೇತ್ರದ ಮಹಿಮೆಯಿಂದ ಪಿತೃಗಳು ತೃಪ್ತರಾದರು. ತರುವಾಯ ಆ ರಾಜರೆಲ್ಲರೂ ಪರ್ವತಕ್ಕೆ ಹತ್ತಿಹೋದರು. ಮಾಧವನೂ ಪರ್ವತವನ್ನು ಹತ್ತಿದನು. ಪರ್ವತದ ಸ್ಪರ್ಶಮಾಡುವ ಮಾತ್ರವೇ ಮಾಧವನ ಪಾಪಗಳೆಲ್ಲ ನಡುಗಿದವು. ಮಾಧವನಿಗೆ ಹೊಟ್ಟೆಯೊಳಗೆ ಸೊಳ್ಳೆಯು ಹೋಗಿ ಸೇರಿದರೆ ಹೇಗೆ ಕಷ್ಟವಾಗುವುದೋ ಹಾಗೆಯೇ ಕಷ್ಟವಾಯಿತು. ಪರ್ವತ ಮಹಿಮೆಯಿಂದ ಮಾಧವನ ದೇಹದಲ್ಲಿ ಒಂದು ಅಗ್ನಿಯು ಉಂಟಾಗಿ ಮದ್ಯಮಾಂಸಾದಿಗಳ ಸೇವನೆಯಿಂದ ಉಂಟಾದ ಪಾಪವನ್ನು ಸುಟ್ಟುಹಾಕಿತು. ಅವನು ವಾಂತಿಮಾಡಿದನು. ಅದರ ದುರ್ವಾಸನೆಯು ಎಲ್ಲಾ ಸ್ಥಳದಲ್ಲಿಯೂ ವ್ಯಾಪಿಸಿತು. ಮಾಧವ ಬ್ರಾಹ್ಮಣನು ಪೂರ್ವಜನ್ಮಗಳಲ್ಲಿ ತನ್ನ ಯೋಗ್ಯತೆಯನ್ನು ಮೀರಿ ಪುಣ್ಯವನ್ನು ಮಾಡಿರುವ ಕಾರಣ ದೇವರು ಹೆಚ್ಚಿನ ಪುಣ್ಯವನ್ನು ಕಳೆಯಲು ಚಂಡಾಲ ಸ್ತ್ರೀಸಂಸರ್ಗವನ್ನು ಮಾಡಿಸಿದನು. ಆ ಪುಣ್ಯವು ಸರಿಯಾದ ಮೇಲೆ ಈ ಪರ್ವತದ ಮಹಿಮೆಯಿಂದ ಅವನು ಪವಿತ್ರನಾದನು.

ಆ ಸಮಯದಲ್ಲಿ ವಿಚಿತ್ರವಿಮಾನಗಳಲ್ಲಿ ಕೂತುಕೊಂಡು ಬ್ರಹ್ಮರುದ್ರಾದಿ ದೇವತೆಗಳು ಅಲ್ಲಿಗೆ ಬಂದರು. ಮಾಧವನ ತಲೆಯ ಮೇಲೆ ಹೂವಿನ ಮಳೆಯನ್ನು ಸುರಿಸಿದರು. ಬ್ರಹ್ಮದೇವರು ವಿಮಾನದಿಂದ ಕೆಳಗೆ ಇಳಿದು ಬಂದು ಕೃಪೆಯಿಂದ ಮಾಧವನನ್ನು ಎತ್ತಿ 'ಮಾಧವ! ನಿನ್ನ ಪಾಪವೆಲ್ಲವೂ ಪರಿಹೃತವಾಯಿತು. ನೀನು ಸ್ವಾಮಿ ಪುಷ್ಕರಣಿಗೆ ಹೋಗಿ ಸ್ನಾನ ಮಾಡಿ ವರಾಹದೇವರನ್ನು ನೋಡಿ ದೇಹಪರಿತ್ಯಾಗ ಮಾಡು. ಇನ್ನು ಮುಂದೆ ನೀನು ಪಾಂಡವರ ದೌಹಿತ್ರವಂಶದಲ್ಲಿ ಸುಧರ್ಮರಾಜನಿಗೆ ಆಕಾಶರಾಜ ಎಂಬ ಹೆಸರಿನಿಂದ ಮಗನಾಗಿ ಹುಟ್ಟುವಿ. ನಾರಾಯಣಪುರದಲ್ಲಿ ಇದ್ದುಕೊಂಡು ತೋಂಡದೇಶಕ್ಕೆ ಅಧಿಪತಿಯಾಗುವಿ. ಜಗನ್ಮಾತೆಯಾದ ರಮಾದೇವಿಯರು ನಿನಗೆ ಮಗಳಾಗಿ ಅವತರಿಸುವರು. ಜಗಜ್ಜನಕನಾದ ಭಗವಂತನೇ ನಿನಗೆ ಅಳಿಯನಾಗುವನು. ಆಮೇಲೆ ವೈಕುಂಠ ಲೋಕಕ್ಕೆ ಹೋಗುವಿ' ಎಂದು ಹೇಳಿ ಶೇಷಾಚಲಕ್ಕೆ **'ವೇಂಕಟಾಚಲ'** ಎಂದು

ನಾಮಕರಣವನ್ನು ಮಾಡಿದರು. ಬೆಳಿಗ್ಗೆ ಎದ್ದು ಈ ಪರ್ವತದ ಹೆಸರನ್ನು ಹೇಳಿದರೆ ಸಾವಿರ ಬಾರಿ ಗಂಗಾಯಾತ್ರೆಯನ್ನು ಮಾಡಿದ ಫಲವೂ ಸಾವಿರ ಬಾರಿ ರಾಮೇಶ್ವರಕ್ಕೆ ಹೋದ ಫಲವೂ ಬರುವುದು.



# ಭಗವಂತನ ಸರ್ವೋತ್ತಮತ್ವವು [1]

ಪೂರ್ವದಲ್ಲಿ ಗಂಗಾತೀರದಲ್ಲಿ ಕಶ್ಯಪಾದಿಮುನೀಶ್ವರರು ಸೇರಿ ಒಂದು ಯಾಗವನ್ನು ಮಾಡುತ್ತಿದ್ದರು. ಆ ಸಮಯದಲ್ಲಿ ನಾರದರು ಅಲ್ಲಿಗೆ ಬಂದು ಸೇರಿದರು. ನಾರದರು ಅವರೊಡನೆ ನೀವು ಯಾರನ್ನು ಉದ್ದೇಶಿಸಿ ಈ ಯಾಗವನ್ನು ಮಾಡುತ್ತಿರುವಿರಿ? ಯಾರು ಈ ಯಾಗದ ಫಲವನ್ನು ಅನುಭವಿಸುವರು. ಯಾವ ಉತ್ತಮದೇವತೆಯನ್ನು ಧ್ಯಾನಮಾಡುವಿರಿ? ಎಂದು ಕೇಳಿದರು. ಆಗ ಆ ಋಷಿಗಳು ತಾವು ತಿಳಿದವರಾದರೂ ಇತರ ಜನರಿಗೆ ತಿಳಿಸುವುದಕ್ಕಾಗಿ ತಾವು ಸಂಶಯವನ್ನು ಹೊಂದಿರುವಂತೆ ತೋರಿಸಿದರು. ಭೃಗು ಋಷಿಗಳಿಗೆ ಕೈಮುಗಿದು ಇದನ್ನು ಅಂದರೆ ಸರ್ವೋತ್ತಮ ದೇವತೆ ಯಾರೆಂಬುದನ್ನು ನಿರ್ಣಯ ಮಾಡಿಕೊಂಡು ಬರಬೇಕೆಂದು ಕೇಳಿಕೊಂಡರು. ಭೃಗು ಋಷಿಗಳು ಲೋಕಪ್ರಸಿದ್ಧರಾದ ತ್ರಿಮೂರ್ತಿಗಳಲ್ಲಿ ಯಾರು ಶ್ರೇಷ್ಠರೆಂದು ನಿರ್ಣಯಿಸುವ ಎಂದು ಮೊದಲು ಸತ್ಯಲೋಕಕ್ಕೆ ಹೋಗಿ ಭಕ್ತಿಯಿಂದ ಬ್ರಹ್ಮದೇವರಿಗೆ ನಮಸ್ಕರಿಸಿದರು. ಬ್ರಹ್ಮದೇವರು ನಮಸ್ಕರಿಸಿರುವ ಭೃಗುಋಷಿಗಳನ್ನು ನೋಡಿ ಒಂದೂ ಮಾತಾಡಲೇ ಇಲ್ಲ. ಇದರಿಂದ ಭೃಗುಋಷಿಗಳು ಬ್ರಹ್ಮದೇವರಿಗೆ (ಅವರಿಗೆ) ಸ್ವಲ್ಪ ಅಜ್ಞಾನವಿರುವುದು. ಆದುದರಿಂದ ಸರ್ವೋತ್ತಮರಲ್ಲ ಎಂದು ಅಂದುಕೊಂಡು ಕೈಲಾಸಕ್ಕೆ ಹೋದರು. ಅಲ್ಲಿ ರುದ್ರದೇವರು ಪಾರ್ವತೀದೇವಿಯರೊಡನೆ ವಿಹರಿಸುತ್ತಿದ್ದರು. ಆ ಸಮಯದಲ್ಲಿ ರುದ್ರದೇವರಿಗೆ ಕಾಮಪರವಶತೆಯಿಂದ ಭೃಗುಋಷಿಗಳು ಬಂದದ್ದೂ ತಿಳಿಯಲಿಲ್ಲ. ಪಾರ್ವತೀದೇವಿಯೇ 'ಋಷಿಗಳು ಬಂದಿರುವರು, ನನ್ನನ್ನು ಬಿಟ್ಟುಬಿಡಿರಿ' ಎಂದು ಹೇಳಿದರು. ಇದರಿಂದ ರುದ್ರದೇವರಿಗೆ ಕೋಪವು ಬಂದಿತು. ಕಣ್ಣು ಕೆಂಪಗೆ ಆಯಿತು. ಋಷಿಗಳನ್ನು ಕೊಂದು ಹಾಕುವೆನು ಎಂದು ಹೇಳಿಹೋದರು. ಆಗ ಭೃಗುಋಷಿಗಳು ಶಾಪ ಕೊಟ್ಟರು 'ನಿಮ್ಮ ಈ ರೂಪಕ್ಕೆ ಒಬ್ಬರೂ ಪೂಜೆಯನ್ನು ಮಾಡದೆ ಇರಲಿ. ನಿಮ್ಮ ಲಿಂಗಕ್ಕೆ ಪೂಜಿಸಲಿ' ಎಂದು ಹೇಳಿ ಭೃಗುಋಷಿಗಳು ವೈಕುಂಠದಲ್ಲಿ ಅಮುಕ್ತಸ್ಥಾನಕ್ಕೆ ಹೋದರು.

1. ಭ.ಪು.ಅ.2

ಅಲ್ಲಿ ಶ್ಯಯಾಗ್ಯಹದಲ್ಲಿ ಶೇಷದೇವರೆಂಬ ಮಂಚದಲ್ಲಿ ಲಕ್ಷ್ಮೀದೇವಿಯಿಂದ ಸಹಿತನಾಗಿ ಶ್ರೀಭಗವಂತನು ಮಲಗಿರುವುದನ್ನು ನೋಡಿದರು. ಕೂಡಲೇ ಭೃಗುಋಷಿಗಳು ಹೋಗಿ ಭಗವಂತನ ಎದೆಗೆ ಒದೆದರು. ಕೂಡಲೇ ಪರಮಾತ್ಮನು ಎದ್ದು ವಿನಯದಿಂದ ಭೃಗುಋಷಿಗಳ ಕಾಲಿಗೆ ಬಿದ್ದನು. ಅವರನ್ನು ಆಲಿಂಗಿಸಿದನು. ಮುನಿಶ್ರೇಷ್ಠರೇ! ವಜ್ರಕ್ಕಿಂತಲೂ ಗಟ್ಟಿಯಾದ ನನ್ನ ಎದೆಗೆ ಮೃದುವಾದ ನಿಮ್ಮ ಪಾದದಿಂದ ಏಕೆ ಒದೆಯಬೇಕು? ನಿಮ್ಮ ಮೃದುವಾದ ಪಾದಕ್ಕೆ ಎಷ್ಟು ನೋವಾಯಿತೋ ಏನೋ ಎಂದು ಹೇಳಿ ಬಿಸಿನೀರಿನಿಂದ ಕಾಲುಗಳನ್ನು ತೊಳೆದು ಆ ನೀರನ್ನು ತಲೆಯ ಮೇಲೆ ಹಾಕಿಕೊಂಡನು. ನಿಮ್ಮಂತಹ ಜ್ಞಾನಿಗಳು ದರ್ಶನ ಮಾತ್ರದಿಂದಲೇ ಪ್ರವಿತ್ರರನ್ನಾಗಿ ಮಾಡುವಿರಿ ಎಂದು ಹೇಳಿದನು. (ಇದರಿಂದ ಭೃಗುಋಷಿಗಳು ಪರಮಾತ್ಮನಿಂದಲೂ ಪೂಜ್ಯರೆಂದಾಗಲೀ ರುದ್ರದೇವರಿಂದಲೂ ಶ್ರೇಷ್ಠರೆಂದಾಗಲೀ ತಿಳಿಯಬಾರದು. ಭಗವಂತನು ಲೋಕದಲ್ಲಿ ತನ್ನ ಭಕ್ತರು ಬ್ರಾಹ್ಮಣರು(ಬ್ರಾಹ್ಮಣರನ್ನು) ಪೂಜಿಸಬೇಕು ಎಂಬುದನ್ನು ತಿಳಿಸುವುದಕ್ಕಾಗಿಯೂ ಬ್ರಾಹ್ಮಣರು ಕೋಪಿಸಿಕೊಂಡರೂ ಅವರಿಗೆ ಪ್ರತಿಯಾಗಿ ಕೋಪಿಸಿಕೊಳ್ಳಬಾರದು ಎಂದು ತಿಳಿಸುವುದಕ್ಕಾಗಿಯೂ ತಾನೇ ಹಾಗೆ ಮಾಡಿತೋರಿಸಿದನು. ಹಾಗೆಯೇ ರುದ್ರ ದೇವರೂ ಭೃಗುಋಷಿಗಳಿಗಿಂತ ದೊಡ್ಡವರಾಗಿದ್ದರೂ ಬ್ರಾಹ್ಮಣರ ಶಾಪವನ್ನು ಎಲ್ಲರೂ ಅಂಗೀಕರಿಸಬೇಕೆಂಬ ಭಗವಂತನ ಆಜ್ಞೆಯಿರುವ ಪ್ರಯುಕ್ತ ಅಂಗೀಕರಿಸಿ ದರು ಎಂದು ತಿಳಿಯಬೇಕು.)

ತರುವಾಯ ಭೃಗುಋಷಿಗಳು ಭೂಮಿಗೆ ಬಂದು ಹರಿಯೇ ಸರ್ವೋತ್ತಮ ನೆಂದು ತಾನು ನಿರ್ಣಯಮಾಡಿರುವುದನ್ನು ಹೇಳಿದರು. ಅದನ್ನು ಕೇಳಿ ಎಲ್ಲರೂ ಭಗವಂತನಿಗೇ ಆ ಯಾಗವನ್ನು ಸಮರ್ಪಿಸಿದರು. ಭೃಗುಋಷಿಗಳಿಗೆ ಭಗವಂತನು ಈರೀತಿಯಾಗಿ ಉಪಚರಿಸಿ ಕಳುಹಿಸಿದರೂ ದೇವರನ್ನು ಕಾಲಿನಿಂದ ಒದೆದ ಕಾರಣ ಮಹಾಪಾಪವೇ ಏರ್ಪಟ್ಟಿತು. ಅದರಿಂದ ಅವರಿಗೆ ಜರಾವ್ಯಾಧ ಎಂಬ ಬೇಡನ ಜನ್ಮವು ಬಂದಿತು. ಅವನೇ ಕೃಷ್ಣಪರಮಾತ್ಮನ ಪಾದಕ್ಕೆ ಕೊನೆಯ ಸಮಯದಲ್ಲಿ ಬಾಣವನ್ನು ಬಿಟ್ಟನು. ಆದರೂ ಸ್ವರೂಪತಃ ಉತ್ತಮರಾದ ಕಾರಣ ಭೃಗು ಋಷಿಗಳು ಆಮೇಲೆ ಕೃಷ್ಣಪರಮಾತ್ಮನ ಅನುಗ್ರಹದಿಂದ ಉತ್ತಮಗತಿಯನ್ನೇ ಹೊಂದಿದರು.

(ಇದೇ ರೀತಿಯ ಕಥೆಯು ಭಾಗವತ ದಶಮಸ್ಕಂಧದಲ್ಲಿಯೂ ಬಂದಿರುತ್ತದೆ. ಆದರೆ ಅದರಲ್ಲಿ ಸ್ವಲ್ಪ ವ್ಯತ್ಯಾಸವಿರುವುದು. ಅದು ಕಲ್ಪಾಂತರ ಕಥೆಯೆಂದು ತಿಳಿಯಬೇಕು. ಅದರಲ್ಲಿ ಹೀಗಿರುವುದು. ಸರಸ್ವತೀ ನದಿಯ ತೀರದಲ್ಲಿ ಋಷಿಗಳು

ಸತ್ರಯಾಗ ಮಾಡುತ್ತಿದ್ದರು. ಅವರಿಗೇ ತ್ರಿಮೂರ್ತಿಗಳಲ್ಲಿ ಯಾರು ಶ್ರೇಷ್ಠರು ಎಂಬ ವಿಚಾರವುಂಟಾಯಿತು. ಕೊನೆಗೆ ನಿರ್ಣಯಮಾಡಲು ಭೃಗು ಋಷಿಗಳನ್ನು ಕಳುಹಿಸಿದರು. ಭೃಗುಋಷಿಗಳು ಬ್ರಹ್ಮದೇವರ ಸಭೆಗೆ ಹೋಗಿ ಅವರ ಸಾಮರ್ಥ್ಯ ವನ್ನು ಪರೀಕ್ಷಿಸುವುದಕ್ಕಾಗಿ ಅವರನ್ನು ಸ್ತೋತ್ರಮಾಡದೆ ಸುಮ್ಮನೆ ಇದ್ದರು. ಇದರಿಂದ ಬ್ರಹ್ಮದೇವರು ಕೋಪಿಸಿದರು (ಬ್ರಹ್ಮದೇವರು ಭಗವಂತನ ಅನುಗ್ರಹದಿಂದ ಎಲ್ಲವನ್ನು ತಿಳಿದವರಾದ ಪ್ರಯುಕ್ತ ಭಗವಂತನು ತನಗಿಂತ ಉತ್ತಮರೆಂದು ತಿಳಿಸುವುದಕ್ಕಾಗಿ ಹಾಗೆ ಕೋಪವನ್ನು ತೋರಿಸಿದರು.) ಆದರೂ ತಾನೇ ಆ ಕೋಪವನ್ನು ಶಾಂತಮಾಡಿಕೊಂಡರು. ಇದರಿಂದ ಭೃಗುಋಷಿಗಳು ಇವರಿಗೆ ಕೋಪವು ಬಂದಿದೆ. ಆದುದರಿಂದ ಸರ್ವೋತ್ತಮರಲ್ಲ ಎಂದು ಭಾವನಾ ಮಾಡಕೊಂಡು ಕೈಲಾಸಕ್ಕೆ ಹೋದರು. ಕೈಲಾಸದಲ್ಲಿ ರುದ್ರದೇವರು ನೋಡಿ ಸಂತೋಷದಿಂದ ತನ್ನ ಸಹೋದರನೆಂದು ಆಲಿಂಗಿಸಲಿಕ್ಕೆ ಬಂದರು. ಭೃಗುಋಷಿ ಗಳು 'ನೀನು ಅನಾಚಾರವುಳ್ಳವನು ಮುಟ್ಟಬೇಡ' ಎಂದರು. ರುದ್ರದೇವರು ಕೋಪಿಸಿಕೊಂಡು ಶೂಲವನ್ನು ಎತ್ತಿಕೊಂಡು ಕೊಂದು ಹಾಕುವೆನೆಂದು ಹೋದರು. ಆಗ ಪಾರ್ವತೀದೇವಿಯರು ಓಡಿಬಂದು ರುದ್ರದೇವರ ಕಾಲಿಗೆ ಬಿದ್ದು ಭೃಗುಋಷಿ ಗಳನ್ನು ಕೊಲ್ಲಬಾರದೆಂದು ಪ್ರಾರ್ಥಿಸಿಕೊಂಡರು.

ತರುವಾಯ ಭೃಗುಋಷಿಗಳು ಆ ಆಪತ್ತಿನಿಂದ ತಪ್ಪಿಸಿಕೊಂಡು ವೈಕುಂಠಕ್ಕೆ ಹೋದರು. ವೈಕುಂಠದಲ್ಲಿ ಅಮುಕ್ತಸ್ಥಾನದಲ್ಲಿ ಮಲಗಿದ್ದ ಪರಮಾತ್ಮನನ್ನು ನೋಡಿ ಎದೆಗೆ ಒದೆದರು. ಆಗ ಲಕ್ಷ್ಮೀದೇವಿಯರ ತೊಡೆಯ ಮೇಲೆ ಮಲಗಿದ್ದ ಪರಮಾತ್ಮನು ಕೂಡಲೇ ಲಕ್ಷ್ಮಿಯಿಂದ ಸಹ ಹಾಸಿಗೆಯಿಂದ ಕೆಳಗೆ ಇಳಿದು ಭಗವಂತನಿಗೆ ನಮಸ್ಕರಿಸಿದನು. ಕ್ಷಮಿಸಬೇಕೆಂದನು. ನೀವು ಮೆಟ್ಟಿದ ಸ್ಥಳದಲ್ಲಿ ಶ್ರೀವತ್ಸನೆಂಬ ಚಿಹ್ನೆಯಾಗುವುದೆಂದೂ ಅಲ್ಲಿ ಯಾವಾಗಲೂ ಲಕ್ಷ್ಮಿಯು ವಾಸಿಸುವ ಳೆಂದೂ ಹೇಳಿದರು. ಭೃಗುಋಷಿಗಳು ಅತಿಸಂತೋಷವುಳ್ಳವರಾಗಿ ಅಲ್ಲಿಂದ ಹೋದರು. ರುದ್ರದೇವರು ತಾನು ಆಲಿಂಗಮಾಡುವುದು ಬೇಡವೆಂದ ಮಾತ್ರ ದಿಂದಲೇ ಕೋಪಿಸಿಕೊಂಡರು. ಆ ಕೋಪವನ್ನು ತಾನೇ ಶಾಂತಿ ಮಾಡಿಕೊಳ್ಳ ಲಾಗಲಿಲ್ಲ. ಪಾರ್ವತೀದೇವಿಯು ಕಾಲಿಗೆ ಬಿದ್ದು ಶಾಂತಮಾಡ ಬೇಕಾಯಿತು. ಬ್ರಹ್ಮದೇವರಿಗೂ ತಾನು ಸ್ತೋತ್ರಮಾಡದೆ ಇದ್ದ ಕಾರಣವೇ ಕೋಪವುಂಟಾಯಿತು. ಆದರೆ ಆಕೋಪವನ್ನು ತಾನೇ ಪರಿಹಾರ ಮಾಡಿಕೊಂಡರು. ಭಗವಂತನಿಗೆ ಎದೆಗೆ ಒದೆದರೂ ಕೋಪವೇ ಬರಲಿಲ್ಲ. ಆದುದರಿಂದ ಕೋಪ ಮೊದಲಾದ

ಸರ್ವದೋಷಗಳಿಂದ ದೂರನಾದವನು ಭಗವಂತನೊಬ್ಬನೇ. ಅವನೇ ಸರ್ವೋತ್ತಮನು ಎಂದು ನಿರ್ಣಯಿಸಿ ಋಷಿಗಳ ಬಳಿಯಲ್ಲಿ ತಿಳಿಸಿದರು.)



# ಭಗವಂತನ ವೆಂಕಟಾಚಲಕ್ಕೆ ಆಗಮನ [1]

ಭೃಗುಋಷಿಗಳು ಹೊರಟುಹೋದ ಮೇಲೆ ಏಕಾಂತದಲ್ಲಿ ಭಗವಂತನು ರಮಾದೇವಿಯರೊಡನೆ ಕೂತಿದ್ದನು. ಆಗ ರಮಾದೇವಿಯರು ಸರ್ವಥಾ ದೇವ ರೊಡನೆ ವಿರೋಧಮಾಡದೆ ಇದ್ದವರು. ಭಗವಂತನ ಸಂಕಲ್ಪವನ್ನು ತಿಳಿದವರಾದ ಕಾರಣ ಮುಂದಿನ ನಡೆಯುವ ಕಾರ್ಯವು ನೆರವೇರುವುದಕ್ಕಾಗಿ ಭಗವಂತನ ಸಂಕಲ್ಪದಂತೆ 'ಪ್ರಭೋ! ನಾನು ಆಲಿಂಗಿಸುವ ಸ್ಥಳದಲ್ಲಿ ಮುನಿಗಳು ಒದೆದ ಕಾರಣ ನಾನಿಲ್ಲಿರಲಾರೆನು. ಕೊಲ್ಲಾಪುರಕ್ಕೆ ಹೊರಟುಹೋಗುವೆನು' ಎಂದು ಹೇಳಿ ಪ್ರೇಮಕಲಹವನ್ನು ಮಾಡಿದಂತೆ ತೋರಿಸಿ ಆ ರೂಪದಿಂದ ಅಲ್ಲಿಂದ ಕೊಲ್ಲಾಪುರಕ್ಕೆ ಹೊರಟುಹೋದರು.

ತರುವಾಯ ಭಗವಂತನು ಒಂದು ರೂಪದಿಂದ ವೈಕುಂಠವನ್ನು ಬಿಟ್ಟು ಗಂಗೆಯ ದಕ್ಷಿಣದಿಕ್ಕಿನಲ್ಲಿರುವ ಸುವರ್ಣಮುಖರೀ ನದಿಯ ತೀರದಲ್ಲಿ ಇರುವ ವೆಂಕಟಾಚಲಕ್ಕೆ ಹೋದನು. ವೆಂಕಟಾಚಲವು ಮೇರುಪರ್ವತದ ಮಗನು. ಮುಖವು ವೆಂಕಟಗಿರಿಯು. ಅದರ ಮಧ್ಯಮವು ನೃಸಿಂಹಾದ್ರಿಯು. ಶ್ರೀಶೈಲವು ಹಿಂದಿನ ಪಾರ್ಶ್ವವು. ಆ ಪರ್ವತವು ಸರ್ವಕ್ಷೇತ್ರಮಯವಾದದ್ದು. ನಾನಾ ಮರಗಳಿಂದ ಯುಕ್ತವಾಗಿರುವುದು. ನಾನಾ ಮೃಗಪಕ್ಷಿಗಳು ವಾಸಮಾಡುವ ಸ್ಥಳವಾಗಿರುವುದು. ಮರಗಳಲ್ಲಿ ದೇವತೆಗಳ ಸನ್ನಿಧಾನವು. ಮೃಗಗಳಲ್ಲಿ ಋಷಿಗಳ ಸನ್ನಿಧಾನವು. ಪಕ್ಷಿಗಳಲ್ಲಿ ಪಿತೃಗಳ ಸನ್ನಿಧಾನ. ಕಲ್ಲುಗಳಲ್ಲಿ ಯಕ್ಷಕಿನ್ನರರ ಸನ್ನಿಧಾನವು. ಈ ಪ್ರಕಾರವಾದ ವೆಂಕಟಾಚಲಕ್ಕೆ ಶ್ರೀಭಗವಂತನು ಬಂದು ಸೇರಿದನು.



---

1. ಭ.ಪು.ಅ.2

# ಸ್ವಾಮಿಪುಷ್ಕರಿಣಿಯ ಮಹಿಮೆ [1]

ಆ ವೆಂಕಟಾಚಲದ ಮೇಲೆ ಸ್ವಾಮಿಪುಷ್ಕರಣಿಯೆಂಬ ಸರೋವರವಿದೆ. ಆ ಸರೋವರವು ಪರಮಪವಿತ್ರವಾದದ್ದು. ಗಂಗಾದಿ ಸಮಸ್ತತೀರ್ಥಾಭಿಮಾನಿಗಳ ಸನ್ನಿಧಾನವುಳ್ಳದ್ದು. ಸ್ವಾಮಿ ಪುಷ್ಕರಣಿಯಲ್ಲಿ ಉತ್ತರದಲ್ಲಿ ಧನದ ತೀರ್ಥವಿದೆ. ಅದು ಕುಬೇರನಿಂದ ರಚಿತವಾದದ್ದು. ಅಲ್ಲಿ ಸ್ನಾನ ಮಾಡಿದರೆ ಧನವು ಲಭಿಸುವುದು. ಈಶಾನ್ಯದಿಕ್ಕಿನಲ್ಲಿ ಸ್ವಾಮಿ ಪುಷ್ಕರಣಿಯಲ್ಲಿ ಗಾಲವಮುನಿಗಳಿಂದ ರಚಿತವಾದ ಗಾಲವತೀರ್ಥವಿದೆ. ಅಲ್ಲಿ ಸ್ನಾನಮಾಡಿದರೆ ಭುಕ್ತಿಮುಕ್ತಿಗಳು ಲಭಿಸುವುವು. ಪೂರ್ವದಲ್ಲಿ ಮಾರ್ಕಂಡೇಯರಿಂದ ರಚಿತವಾದ ಮಾರ್ಕಂಡೇಯತೀರ್ಥವಿದೆ. ಅಲ್ಲಿ ಸ್ನಾನಮಾಡಿದವರ ಆಯುಷ್ಯವು ಹೆಚ್ಚುವುದು. ಆಗ್ನೇಯ ದಿಕ್ಕಿನಲ್ಲಿ ಪಾಪಪರಿಹಾರಕವಾದ ಪಾಪಮೋಚನ ಅಗ್ನಿತೀರ್ಥವಿದೆ. ದಕ್ಷಿಣದಲ್ಲಿ ನರಕದಿಂದ ಬಿಡುಗಡೆಗೆ ಕಾರಣವಾದ ಯಮತೀರ್ಥವಿದೆ. ಹಾಗೆಯೇ ವಸಿಷ್ಠರಿಂದ ನಿರ್ಮಿತ ವಾದ ಋಣಮೋಚಕವಾದ ರಾಕ್ಷಸತೀರ್ಥವಿದೆ. ಹಾಗೇ ಋಣಮೋಚನ ತೀರ್ಥವಿದೆ. ಪಶ್ಚಿಮದಲ್ಲಿ ಮೋಕ್ಷಕ್ಕೆ ಕಾರಣವಾದ ವಾಯುತೀರ್ಥವಿದೆ. ಮಧ್ಯದಲ್ಲಿ ಮಹಾಪಾಪವನ್ನು ಪರಿಹರಿಸುವ ಸರಸ್ವತೀತೀರ್ಥವಿದೆ. ಈ ಒಂಭತ್ತು ತೀರ್ಥಗಳಲ್ಲಿಯೂ ಒಂದೇ ದಿನದಲ್ಲಿ ಸ್ನಾನಮಾಡಿ ಶ್ರೀನಿವಾಸದೇವರ ದರ್ಶನ ಮಾಡಿದರೆ ಅವನು ಪುನಃ ಜನ್ಮವನ್ನು ಹೊಂದಲಾರನು. ಧನುರ್ಮಾಸದ ಶುಕ್ಲಪಕ್ಷದ ದ್ವಾದಶೀದಿನದಲ್ಲಿ ಅರುಣೋದಯಕಾಲದಲ್ಲಿ ದೇವತೆಗಳೂ ಕೂಡ ಸ್ವಾಮಿ ಪುಷ್ಕರಣಿಯಲ್ಲಿ ಸ್ನಾನಮಾಡಲು ಬಯುಸುವರು. ಪುಷ್ಕರಿಣಿಯ ತೀರದಲ್ಲಿ ಶ್ರಾದ್ಧ ಮಾಡಿದರೆ ಪಿತೃಗಳು ತೃಪ್ತಿಯನ್ನು ಹೊಂದುವರು. ಶಂಖ ಎಂಬ ರಾಜನು ಈ ಸ್ವಾಮಿಪುಷ್ಕರಿಣಿಯಲ್ಲಿ ಸ್ನಾನಮಾಡುವ ಮಾತ್ರದಿಂದ ರಾಜ್ಯವನ್ನು ಹೊಂದಿದನು. ಪೂರ್ವದಲ್ಲಿ ಆಂಗಿರ ಎಂಬ ಬ್ರಾಹ್ಮಣನ ಮಗನಾದ ನಾರಾಯಣ ಎಂಬ ಬ್ರಾಹ್ಮಣನು ಸ್ವಾಮೀಪುಷ್ಕರಿಣಿಯಲ್ಲಿ ಸ್ನಾನಮಾಡಿ ಅದರ ಮಹಿಮೆಯಿಂದ ದೇವರನ್ನು ನೋಡಿ ವರವನ್ನು ಪಡೆದು ಭಗವಂತನ ಲೋಕವನ್ನು ಹೊಂದಿದನು. ರಾಮದೇವರೂ ಕೂಡ ಈ ಸ್ವಾಮೀಪುಷ್ಕರಿಣಿಗೆ ಮಹತ್ತ್ವವನ್ನು ಕೊಡುವುದಕ್ಕಾಗಿ ಇಲ್ಲಿ ಸ್ನಾನಮಾಡಿ ರಾವಣನಿಂದ ಅಪಹೃತರಾದ ಸೀತಾದೇವಿಯನ್ನು ಹೊಂದಿದೆನೆಂದು ತೋರಿಸಿ ಕೊಂಡರು. ಈಪ್ರಕಾರವಾದ ಸ್ವಾಮಿ ಪುಷ್ಕರಿಣಿಯ ಪಶ್ಚಿಮದಿಕ್ಕಿನಲ್ಲಿ ವರಾಹದೇವರು

---

1. ಭ.ಪು.ಅ.3

ಭೂಮಿದೇವಿಯರನ್ನು ಆಲಂಗಿಸಿಕೊಂಡು ಅಶ್ವತ್ಥವೃಕ್ಷದಿಂದ ಅಲಂಕೃತವಾದ ಹುತ್ತದಲ್ಲಿ ಇರುವರು. ಆ ಪರ್ವತದಲ್ಲಿ ಮೂರುಕೋಟಿ ತೀರ್ಥಗಳು ಇರುವುವು.

ಈಪ್ರಕಾರವಾದ ವೇಂಕಟಪರ್ವತಕ್ಕೆ ಬಂದು ಪರಮಾತ್ಮನು ಅಲ್ಲಿ ಸಂಚರಿಸುತ್ತಾ ವಾಸಮಾಡಲಿಕ್ಕೆ ಸರಿಯಾದ ಸ್ಥಳವನ್ನು ಕಾಣದೆ ಕೊನೆಗೆ ಪುಷ್ಕರಿಣಿಯ ತೀರದಲ್ಲಿ ಇದ್ದ ಹುಣಿಸೆಮರದಲ್ಲಿ ಬುಡದಲ್ಲಿ ಒಂದು ಹುತ್ತವನ್ನು ನೋಡಿದನು. ಇದೇ ಯೋಗ್ಯವಾದ ಸ್ಥಳವೆಂದು ತಿಳಿದುಕೊಂಡು ಭಗವಂತನು ಅಲ್ಲಿಯೇ ಮರೆಯಾಗಿ ವಾಸಿಸುತ್ತಿದ್ದನು.



## ಚೋಲರಾಜನಿಗೆ ಶಾಪ [1]

ಭಗವಂತನು ಆ ಹುತ್ತದಲ್ಲಿಯೇ ವಾಸಮಾಡುತ್ತಾ ಬಹುಸಮಯವು ಕಳೆಯಿತು. ದ್ವಾಪರಯುಗವು ಮುಗಿದು ಇಪ್ಪತ್ತೆಂಟನೇ ಕಲಿಯುಗದಲ್ಲಿ ಬಹುವರ್ಷಗಳು ಕಳೆಯಲು ನಾಗಕನ್ಯೆಯ ಉದರದಲ್ಲಿ ಒಬ್ಬ ಚೋಲರಾಜನು ಹುಟ್ಟಿದನು. ಅವನು ರಾಜ್ಯಭಾರವನ್ನು ಮಾಡುತ್ತಿರಲು ಭೂಮಿಯಲ್ಲಿ ಸುಭಿಕ್ಷೆಯಿತ್ತು. ಜನರೆಲ್ಲರೂ ಧರ್ಮದಿಂದ ಇದ್ದರು. ಹೆಂಗಸರೆಲ್ಲರೂ ಪತಿವ್ರತೆಯಾಗಿದ್ದರು. ಜನರೆಲ್ಲರೂ ಸಂತೋಷದಿಂದ ಇದ್ದರು.

ಆ ಸಮಯದಲ್ಲಿ ಬ್ರಹ್ಮದೇವರು ದನದ ರೂಪವನ್ನು ಧರಿಸಿದರು. ರುದ್ರದೇವರು ಕರುವಾದರು ರಮಾದೇವಿಯರು ಗೋಪಾಲಸ್ತ್ರೀಯ ರೂಪವನ್ನು ಧರಿಸಿದರು. ರಮಾದೇವಿಯರು ಭಗವಂತನ ಮಾರ್ಗವನ್ನು ನೋಡುತ್ತಾ ಆ ಗೋವನ್ನು ಕರುವನ್ನು ಕರೆದುಕೊಂಡು ಚೋಲರಾಜನ ಬಳಿಗೆ ಬಂದು ಆ ದನವನ್ನೂ ಕರುವನ್ನೂ ಕ್ರಯಕ್ಕೆ ಆ ರಾಜನಿಗೆ ಮಾರಿ ಹೊರಟುಹೋದರು.

ಪತ್ನೀಸಹಿತನಾದ ಆ ರಾಜನು ಆ ದನವನ್ನು ಪಡೆದು ಸಂತೋಷಹೊಂದಿದನು. ಬಹುಹಾಲು ಕೊಡುವ ಆ ದನವನ್ನು ಮಗನಿಗಾಗಿ ಇಟ್ಟುಕೊಂಡನು. ಆ ದನವು ನಿತ್ಯವೂ ಇತರ ಸಾವಿರಾರು ದನಗಳೊಡನೆ ವೆಂಕಟಪರ್ವತದಲ್ಲಿ ಪರಮಾತ್ಮನನ್ನು ಹುಡುಕುತ್ತಾ ಅಲ್ಲಲ್ಲಿ ಮೂಸುತ್ತಾ ಸಂಚರಿಸುತ್ತಿತ್ತು. ಹೀಗೆಯೇ ಬಹುಸಮಯವು ಹೋದಮೇಲೆ ಆ ದನದ ರೂಪದಿಂದ ಇದ್ದ ಬ್ರಹ್ಮದೇವರು ಸ್ವಾಮಿ ಪುಷ್ಕರಿಣಿಯ

1. ಭ.ಪು.ಅ.3-4

ತೀರದಲ್ಲಿ ಹುತ್ತದಲ್ಲಿದ್ದ ಪರಮಾತ್ಮನನ್ನು ಹೊಂದಿ ಸಂತೋಷಪಟ್ಟರು. ಆ ಹುತ್ತದ ಮೇಲೆ ಹಾಲಿನ ಧಾರೆಯನ್ನು ಸುರಿಸಿದರು. ಆಮೇಲೆ ಪ್ರತಿನಿತ್ಯವೂ ವೇಂಕಟಾಚಲಕ್ಕೆ ಬಂದು ಪರಮಾತ್ಮನ ಮೇಲೆ ಹಾಲನ್ನು ಸುರಿಸುತ್ತಾ ಇದ್ದರು. ಮನೆಯಲ್ಲಿ ಹಾಲನ್ನು ಕೊಡುತ್ತಾ ಇದ್ದಿಲ್ಲ. ಹೀಗೇ ಬಹುದಿವಸ ಕಳೆಯಲು ಒಂದು ದಿನದಲ್ಲಿ ರಾಣಿಯು ದನಗಳನ್ನು ಮೇಯಿಸುವ ಗೋಪಾಲನನ್ನು ಕರೆದು 'ಎಲೋ ದುರ್ಬುದ್ಧಿಯುಳ್ಳ ಗೋಪಾಲನೇ! ಈ ದನದ ಹಾಲನ್ನು ಏನು ಮಾಡುತ್ತಿರುವಿಯೋ? ನೀನೇ ಕುಡಿಯುವಿಯೋ? ಅಥವಾ ಕರುವು ಕುಡಿಯುವುದೋ? ಬೇಗನೇ ಹೇಳು' ಎಂದು ಬೆದರಿಸಿದಳು. ಆ ಮಾತನ್ನು ಕೇಳಿ ಗೋಪಾಲನು ಭಯದಿಂದ ನಡುಗಿ ಹೋದವನಾಗಿ 'ಅಮ್ಮ! ನನಗೆ ಒಂದೂ ತಿಳಿಯದು. ದನವೇ ಹಾಲನ್ನು ಕುಡಿಯು ವುದೋ ಅಥವಾ ಕರುವು ಕುಡಿಯುವುದೋ. ನನಗೆ ಗೊತ್ತಿಲ್ಲ. ನಾನು ಕುಡಿಯುವುದಿಲ್ಲ. ನೀವು ವಿಚಾರಿಸಬೇಕು' ಎಂದು ಹೇಳಿದನು. ಈ ರೀತಿಯಾಗಿ ಗೋಪಾಲನ ಮಾತನ್ನು ಕೇಳಿ ರಾಣಿಯು ಬಹುಕೋಪವುಳ್ಳವಳಾಗಿ ಚರ್ಮದ ಹಗ್ಗದಿಂದ ಅವನಿಗೆ ಚೆನ್ನಾಗಿ ಬಡೆದಳು.

ಇದರಿಂದ ಗೋಪಾಲನು ಕೋಪವುಳ್ಳವನಾಗಿ ಮರುದಿನ ಆ ದನದ ರೂಪವುಳ್ಳ ಬ್ರಹ್ಮದೇವರ ಹಿಂದೆಯೇ ಹೋದನು. ಬ್ರಹ್ಮದೇವರು ಎಂದಿನಂತೆ ಆ ದಿನವೂ ಹುತ್ತದ ಮೇಲೆ ಹಾಲನ್ನು ಸುರಿಸಿದರು. ಇದರಿಂದ ಗೋಪಾಲನು ಕೋಪಿಸಿಕೊಂಡು ಕೊಡಲಿಯಿಂದ ಕೊಂದು ಹೋಗುವೆನೆಂದು ಬಡಿದನು. ಆಗ ಪರಮಾತ್ಮನು ಭಕ್ತವಾತ್ಸಲ್ಯವನ್ನು ತೋರಿಸುತ್ತಾ ಆ ಕೊಡಲಿಯ ಪೆಟ್ಟಿಗೆ ತನ್ನ ತಲೆಯನ್ನು ಕೊಟ್ಟನು. ಇದರಿಂದ ಪರಮಾತ್ಮನ ತಲೆಯಿಂದ ಏಳು ತಾಳೇವೃಕ್ಷದಷ್ಟು ಎತ್ತರಕ್ಕೆ ರಕ್ತವು ಹಾರಿತು. (ನಮ್ಮ ದೇಹದಂತೆ ದೇವರ ದೇಹವೆಂದು ತಿಳಿಯಬಾರದು. ದೇವರ ದೇಹದಲ್ಲಿ ಯಾವಾಗಲೂ ಗಾಯವಾಗಲಾರದು. ರಕ್ತವು ಬರಲಾರದು. ಆದರೂ ಭಗವಂತನು ರಕ್ತವನ್ನು ಸೃಷ್ಟಿಮಾಡಿ ತೋರಿಸಿದನು ಎಂದು ತಿಳಿಯಬೇಕು) ಇದನ್ನು ನೋಡಿ ಗೋಪಾಲನು ಅಲ್ಲಿಯೇ ಬಿದ್ದು ಪ್ರಾಣಬಿಟ್ಟನು. ಆ ಗೋಪಾಲನು ಮರಣವನ್ನು ಹೊಂದಿದಮೇಲೆ ಗೋರೂಪದ ಬ್ರಹ್ಮದೇವರು ಬೆಟ್ಟದಿಂದ ಕೆಳಗೆ ಇಳಿದು ಬಂದು ಚೋಲರಾಜನ ಮುಂಭಾಗದಲ್ಲಿ ಕರುವು ಮೃತವಾದರೆ ದನಗಳು ದುಃಖಪಡುವಂತೆ ಹೊರಳಾಡುತ್ತಾ ದುಃಖವನ್ನು ಪ್ರದರ್ಶನ ಮಾಡಿದರು. ಆಗ ರಾಜನು ಭೃತ್ಯನೊಡನೆ 'ಈ ದನವು ಏಕೆ ಹೊರಳಾಡುತ್ತಿರುವುದು. ಇತರ ದನಗಳನ್ನು ಬಿಟ್ಟು ಏಕೆ ಬಂದಿರುವುದು? ಈ ದನದ ಹಿಂದೆಯೇ ಹೋಗಿ ಇತರ ದನಗಳೊಡನೆ ಇದನ್ನು ಸೇರಿಸು' ಎಂದು ಹೇಳಿದನು.

ರಾಜನ ಆಜ್ಞೆಯಂತೆ ಆ ಭೃತ್ಯನು ಆ ದನದ ಹಿಂದೆಯೇ ವೇಂಕಟಾಚಲಕ್ಕೆ ಹೋಗಿ ಅಲ್ಲಿ ಹುತ್ತದಿಂದ ರಕ್ತವು ಹಾರುತ್ತಿರುವುದನ್ನೂ, ಗೋಪಾಲನು ಸತ್ತು ಬಿದ್ದಿರುವುದನ್ನೂ ನೋಡಿ ರಾಜನಿದ್ದಲ್ಲಿಗೆ ಬಂದು ಅದೆಲ್ಲವನ್ನು ತಿಳಿಸಿದನು. ರಾಜನು ಅದನ್ನು ಕೇಳಿ ಆಶ್ಚರ್ಯವುಳ್ಳವನಾಗಿ ಮೇನೆಯಲ್ಲಿ ಕೂತುಕೊಂಡು ಅಲ್ಲಿಗೆ ಹೋಗಿ ಹುತ್ತದ ಬಳಿಯಲ್ಲಿ ನಿಂತುಕೊಂಡು 'ಇದೇನು ಕಷ್ಟ? ಗೋಪಾಲನನ್ನು ಯಾರು ಕೊಂದರು? ಹುತ್ತದಲ್ಲಿ ಏಕೆ ಹೀಗೆ ರಕ್ತವು ಹಾರುತ್ತಿದೆ? ಈ ವಿಷಯವನ್ನು ಗೋವು ತಿಳಿಸುವುದೆಂದರೇನು?' ಎಂದು ಗಟ್ಟಿಯಾಗಿ ಹೇಳಿದನು. ಆಗ ಪರಮಾತ್ಮನು ಹುತ್ತವನ್ನು ಭೇದಿಸಿಕೊಂಡು ಮೇಲೆ ಬಂದು 'ಎಲಾ ದುರಾಚಾರಿಯೇ! ಪಾಪಿಷ್ಠನಾಗಿರುವಿ. ರಾಜ್ಯದಿಂದ ಅಹಂಕಾರಪಡುತ್ತಿರುವಿ. ಅನಾಥನಾದ ಬಂಧು ಗಳಿಂದ ಹೀನನಾದ ನನ್ನನ್ನು ಗೋಪಾಲನು ದಯಾಹೀನನಾಗಿ ಕೊಡಲಿಯಿಂದ ಬಡೆದನು. ಆ ಗಾಯವು ನನ್ನನ್ನು ಪೀಡಿಸುತ್ತಾ ಇದೆ. ಯಜಮಾನನು ಮನೆಯಲ್ಲಿ ನಡೆಯುವ ವಿಷಯವನ್ನೆಲ್ಲಾ ವಿಚಾರಿಸುತ್ತಿರಬೇಕು. ಇಲ್ಲದಿದ್ದರೆ ಅವನಿಗೇ ಅನಿಷ್ಟಕರ ವಾಗುವುದು. ಆದುದರಿಂದ ನೀನು ನನಗೆ ದುಃಖವನ್ನು ಉಂಟುಮಾಡಲಿಕ್ಕೆ ಕಾರಣನಾಗಿರುವಿ. ನೀನು ಪಿಶಾಚನಾಗು' ಎಂದು ಶಾಪವನ್ನು ಕೊಟ್ಟನು.

ಈರೀತಿಯಾಗಿ ಶಾಪವನ್ನು ಕೇಳಿ ರಾಜನು ಮೂರ್ಛಿತನಾದನು. ಸ್ವಲ್ಪ ಹೊತ್ತಿನ ಮೇಲೆ ಎದ್ದು 'ಭಗವಂತನೇ! ಅಪರಾಧರಹಿತನಾದ ನನಗೆ ಏಕೆ ಶಾಪಕೊಟ್ಟಿರುವಿ? ನಾನೇನು ಮಾಡಿದೆನು? ನನಗೊಂದೂ ತಿಳಿಯದಲ್ಲಾ? ಹಾ! ನನಗೆ ಇಂತಹ ಕಷ್ಟವು ಬಂದಿತಲ್ಲಾ' ಎಂದು ಹೇಳಿದನು. ಆಗ ಭಗವಂತನು 'ರಾಜನೇ! ನಾನೇ ಪಾಪಿಯು. ನಾನು ವಿಚಾರಿಸದೆ ಶಾಪವನ್ನು ಕೊಟ್ಟೆನು. ಆದರೂ ನನ್ನ ಮಾತು ಸುಳ್ಳಾಗಲಾರದು. ಭಕ್ತವಾತ್ಸಲ್ಯದಿಂದ ನಾನು ದುಃಖವುಳ್ಳವನಾಗಿರುವೆನು. ಕಲಿಯುಗವು ಮುಗಿಯುವ ವರೆಗೆ ನೀನೂ ದುಃಖವುಳ್ಳವನಾಗಿರು. ಕಲಿಯುಗದಲ್ಲಿ ಆಕಾಶ ರಾಜನೆಂಬ ರಾಜನು ಬರುವನು. ಅವನು ಪದ್ಮಾವತಿಯೆಂದು ಹೆಸರುಳ್ಳ ತನ್ನ ಮಗಳನ್ನು ನನಗೆ ಮದುವೆಮಾಡಿಕೊಡುವನು. ಕನ್ಯಾದಾನ ಮಾಡುವ ದಿನ ನೂರುಭಾರ (ಒಂದು ಭಾರಕ್ಕೆ ಇಪ್ಪತ್ತೈದು ತೊಲೆ) ತೂಕವುಳ್ಳ ರತ್ನ ವಜ್ರಖಚಿತವಾದ ಕಿರೀಟವನ್ನು ಧರಿಸುವೆನು. ಆಗ ಆರು ಘಳಿಗೆ ನನ್ನ ಕಣ್ಣಿನಲ್ಲಿ ನೀರು ಬರುವುದು. ಅಷ್ಟುಹೊತ್ತು ನಿನಗೆ ಸುಖವುಂಟಾಗುವುದು' ಎಂದು ಹೇಳಿ ಆ ರಾಜನನ್ನು ಕಳುಹಿಸಿದನು.



# ಶ್ರೀನಿವಾಸದೇವರಿಗೆ ವರಾಹದೇವರ ದರ್ಶನ [1]

ಆಮೇಲೆ ಶ್ರೀಭಗವಂತನು ಅಲ್ಲೇ ಇದ್ದನು. ಲೋಕದ ಜನರಂತೆ ನಟಿಸುತ್ತಾ ತಲೆಯ ಗಾಯವು ಪರಿಹಾರವಾಗಬೇಕೆಂದು ಔಷಧವು ಬೇಕೆಂದು ವೈದ್ಯಶಾಸ್ತ್ರಪಂಡಿತರಾದ ಬೃಹಸ್ಪತ್ಯಾಚಾರ್ಯರನ್ನು ಸ್ಮರಿಸಿದನು. ಆಗಲೇ ಬಂದು ಸೇರಿದ ಗುರುಗಳೊಡನೆ ನನ್ನಗಾಯಕ್ಕೆ ಔಷಧವನ್ನು ಹೇಳಬೇಕೆಂದರು. ಅವರು ಎಕ್ಕೆಯ ಹತ್ತಿಯನ್ನು ಅತ್ತಿಯ ಹಾಲಿನಲ್ಲಿ ಅದ್ದಿ ಗಾಯದ ಮೇಲೆ ಇಡಬೇಕೆಂದು ಹೇಳಿ ಹೊರಟುಹೋದರು. ಭಗವಂತನು ಹಾಗೆಯೇ ಮಾಡಿದನು. ಹುತ್ತದಲ್ಲಿಯೇ ವಾಸಮಾಡಿಕೊಂಡಿದ್ದನು. ಒಂದು ದಿವಸದಲ್ಲಿ ಶ್ರೀನಿವಾಸನು ಔಷಧಕ್ಕಾಗಿ ಅರುಣೋದಯಕಾಲದಲ್ಲಿ ಹೊರಟುಹೋದನು. ಆ ಸಮಯದಲ್ಲಿ ವರಾಹದೇವರು ಮೃಗಬೇಟೆಯನ್ನು ಆಡಿ ಶ್ಯಾಮೆ ಅಕ್ಕಿಯನ್ನು ಅಪಹರಿಸುತ್ತಿದ್ದ ವೃಷಭ ಎಂಬ ದೈತ್ಯನನ್ನು ಜಯಿಸಿ ಪರಿವಾರ ಸಹಿತರಾಗಿ ಬರುತ್ತಿದ್ದರು. ಶ್ರೀನಿವಾಸದೇವರನ್ನು ನೋಡಿದರು. ಆಗ ವರಾಹದೇವರ ಪರಿವಾರಗಳಾದ ಕಾಡುಹಂದಿಗಳು ನೀನು ಯಾರು? ಯಾರು' ಎಂದು ಗರ್ಜಿಸುತ್ತಾ ಬಂದವು. ಅವುಗಳನ್ನು ನೋಡಿ ಶ್ರೀನಿವಾಸದೇವರು ಅಲ್ಲಿಯೇ ಮರೆಯಾಗಿ ಕೂತರು. ತರುವಾಯ ವರಾಹದೇವರು ಅಡಗಿ ಕೂತಿರುವ ಶ್ರೀನಿವಾಸದೇವರನ್ನು ನೋಡಿದನು. ಅವರೊಡನೆ ಮಾತಾಡಿದರು. ಶ್ರೀನಿವಾಸದೇವರೂ ಹೊರಗೆ ಬಂದು ಪ್ರತ್ಯುತ್ತರವನ್ನು ಕೊಟ್ಟರು. ಪರಮಾತ್ಮನು ಒಬ್ಬನೇ ಈ ರೀತಿಯಾಗಿ ಶ್ರೀನಿವಾಸ ವರಾಹ ಎಂಬ ಎರಡು ರೂಪಗಳಿಂದ ಪ್ರಕಾಶಿಸುತ್ತಿರುವುದನ್ನು ನೋಡಿ ಅವರ ಮೇಲೆ ಪುಷ್ಪದ ಮಳೆಯನ್ನು ಸುರಿಸಿದರು. ಭಗವಂತನನ್ನು ಸ್ತುತಿಸಿ ಹೊರಟುಹೋದರು.

ತರುವಾಯ ವರಾಹದೇವರು ಶ್ರೀನಿವಾಸದೇವರೊಡನೆ 'ಭಗವಂತನೇ! ವೈಕುಂಠಲೋಕವನ್ನು ಬಿಟ್ಟು ಇಲ್ಲಿಗೇಕೆ ಬಂದಿರುವೆ?' ಎಂದು ಕೇಳಿದರು.

ಶ್ರೀನಿವಾಸದೇವರು 'ಭೃಗುಋಷಿಗಳು ಬಂದು ನನ್ನ ಎದೆಯನ್ನು ಒದ್ದರೆಂದು ಲಕ್ಷ್ಮಿಯು ಕೋಪಿಸಿಕೊಂಡು ಕೊಲ್ಲಾಪುರಕ್ಕೆ ಹೊರಟುಹೋದಳು. ಆ ದುಃಖದಿಂದ ನಾನು ಇಲ್ಲಿಗೆ ಬಂದಿರುವೆನು. ಇಲ್ಲಿಯೇ ತಮ್ಮ ದಕ್ಷಿಣದಿಕ್ಕಿನಲ್ಲಿರುವ ಹುತ್ತದಲ್ಲಿ ನಾನು ವಾಸಮಾಡುತ್ತಿರುವಾಗ ಗೋಪಾಲನೊಬ್ಬನು ನನ್ನ ತಲೆಗೆ ಕೊಡಲಿಯಿಂದ ಬಡಿದು ಗಾಯಮಾಡಿದನು. ಆ ಗಾಯವು ನನ್ನನ್ನು ತುಂಬಾ ಪೀಡಿಸುತ್ತಿದೆ. ಅದಕ್ಕೆ

1. ಭ.ಪು.ಅ.4-5

ಔಷಧಕ್ಕಾಗಿ ನಾನು ನಿತ್ಯವೂ ತಿರುಗುತ್ತಿರುವೆನು. ದೈವೇಚ್ಛೆಯಿಂದ ಈದಿನ ನಿಮ್ಮ ದರ್ಶನವಾಯಿತು. ಇಲ್ಲಿಯೇ ವಾಸಮಾಡಬೇಕೆಂದು ನನ್ನ ಸಂಕಲ್ಪವಿದೆ. ಈ ಕಲಿಯುಗವು ಮುಗಿಯುವವರೆಗೆ ತಾವು ನನಗೆ ಸ್ಥಳವನ್ನು ಕೊಡಬೇಕು' ಎಂದರು.

ವರಾಹದೇವರು ಸ್ಥಳಕ್ಕೆ ಸರಿಯಾದ ಕ್ರಯವನ್ನು ಕೊಟ್ಟು ಪಡೆಯಬೇಕು ಎಂದರು.

ಶ್ರೀನಿವಾಸದೇವರು 'ಇಲ್ಲಿಗೆ ಬಂದ ಭಕ್ತರು ಮೊದಲು ನಿಮ್ಮನ್ನು ನೋಡಬೇಕು. ನೈವೇದ್ಯ ಕ್ಷೀರಾಭಿಷೇಕ ಇತ್ಯಾದಿಗಳನ್ನು ಮೊದಲು ನಿಮಗೆ ಮಾಡಿಸಲಿ ಇದೇ ನಾನು ನಿಮಗೆ ಕೊಡುವ ಕ್ರಯವು. ಇದನ್ನು ಸ್ವೀಕರಿಸಿ ನನಗೆ ನೀವು ಸ್ಥಳವನ್ನು ಕೊಡಿರಿ' ಎಂದು ಹೇಳಿದರು. ವರಾಹದೇವರು ಹಾಗೆಯೇ ಆಗಲಿ ಎಂದು ಹೇಳಿ ನೂರು ಹೆಜ್ಜೆ ಭೂಮಿಯನ್ನು ಕೊಟ್ಟರು. ಈರೀತಿಯಾಗಿ ಶ್ರೀನಿವಾಸದೇವರೂ ವರಾಹದೇವರೂ ಒಬ್ಬರೇ ಆದರೂ ಭಕ್ತರಿಗೆ ಭಕ್ತಿಯು ಹೆಚ್ಚಾಗುವುದಕ್ಕೂ, ಅಭಕ್ತರು ಮೋಸಹೋಗುವುದಕ್ಕೂ ಬೇರೆ ಬೇರೆ ಜನರು ಮಾಡುವಂತೆ ಮಾಡಿತೋರಿಸಿದರು. ಆಗ ಆರಂಭಿಸಿ ಅಡಿಗೆಮಾಡುವ ಬಕುಳೆಯೆಂಬ ಹೆಂಗಸನ್ನು ಶ್ರೀನಿವಾಸದೇವರ ಸೇವೆಗಾಗಿ ಕಳುಹಿಸಿದರು. ನಿತ್ಯವೂ ವರಾಹದೇವರು ಶ್ರೀನಿವಾಸದೇವರಿಗೆ ಜೇನುತುಪ್ಪವನ್ನು ಶ್ಯಾಮೆ ಅಕ್ಕಿಯ ಅನ್ನವನ್ನು ಕಳುಹಿಸುತ್ತಿದ್ದರು.

ಆ ಬಕುಳೆಯು ಪೂರ್ವದಲ್ಲಿ ಯಶೋದೆಯು. ಕೃಷ್ಣಪರಮಾತ್ಮನ ವಿವಾಹವನ್ನು ನೋಡದೆ ಇದ್ದ ಪ್ರಯುಕ್ತ ಭಗವಂತನೊಡನೆ ನಿನ್ನ ವಿವಾಹವನ್ನು ನೋಡಬೇಕೆಂದು ನನ್ನ ಮನಸ್ಸು ಆತುರಪಡುವುದೆಂದು ತಿಳಿಸಿದಳು. ಅದಕ್ಕೆ ಪರಮಾತ್ಮನು ನಿನ್ನ ಇನ್ನೊಂದು ಜನ್ಮದಲ್ಲಿ ಶ್ರೀಶೈಲದಲ್ಲಿ ನಿನ್ನ ಬಯಕೆಯನ್ನು ತೀರಿಸುವೆನು ಎಂದು ಹೇಳಿದ್ದನು. ಆರೀತಿಯಾಗಿ ಯಶೋದೆಯೇ ಬಕುಳೆಯಾಗಿ ಜನಿಸಿದಳು. ಅವಳೇ ಮುಂದೆ ಭಗವದನುಗ್ರಹದಿಂದ ಭಗವಂತನಿಗೆ ಮದುವೆ ಮಾಡಿಸುವಳು.



# ಶ್ರೀನಿವಾಸದೇವರ ಮೃಗಬೇಟೆ [1]

ಒಂದು ದಿನದಲ್ಲಿ ಶ್ರೀನಿವಾಸದೇವರು ಮೃಗಬೇಟೆಗೆ ಹೋಗಬೇಕೆಂದು ಯೋಚಿಸಿ ಒಂದು ಕುದುರೆಯು ಬರಲಿ ಎಂದು ಇಚ್ಛಿಸಿದರು. ಆಗಲೇ ಒಂದು ಕುದುರೆಯು ಬಂದಿತು. ವಾಯುದೇವರೇ ಕುದುರೆಯ ರೂಪದಿಂದ ಬಂದರು. ಶ್ರೀಭಗವಂತನು ಬೆಳ್ಳಗಿನ ವಸ್ತ್ರವನ್ನು ಉಟ್ಟುಕೊಂಡು ಮತ್ತೊಂದು ವಸ್ತ್ರವನ್ನು ಹೊದ್ದುಕೊಂಡು ಅಡಿಕೆ, ಸುಣ್ಣದ ಪಾತ್ರ, ವೀಳ್ಯದ ಎಲೆ, ಲವಂಚ, ಲವಂಗ ,ಇತ್ಯಾದಿಗಳಿಂದ ಕೂಡಿದ ರತ್ನದ ಕರಡಿಗೆಯನ್ನೂ, ಕನ್ನಡಿ, ಕುಂಕುಮದ ಕರಡಿಗೆ, ಶುಭ್ರವಾದ ಮೃತ್ತಿಗೆ ಇವುಗಳನ್ನೆಲ್ಲಾ ಒಂದು ಬಂಗಾರದ ವಸ್ತ್ರದಲ್ಲಿ ಕಟ್ಟಿ ಅದನ್ನು ತನ್ನ ಸೊಂಟಕ್ಕೆ ಸುತ್ತಿಕೊಂಡನು. ಅಯ್ಯಂಗಾರರಂತೆ ಬಿಳಿ ಕೆಂಪು ಮೂರು ನಾಮಗಳನ್ನು ಹಾಕಿಕೊಂಡನು. ನಾನಾ ಆಭರಣಗಳನ್ನು ಧರಿಸಿದವನಾದನು. ಕುಂಕುಮಕೇಸರಿಹಾರಿದ ಗಂಧವನ್ನು ಹಚ್ಚಿಕೊಂಡನು. ತಲೆಗೆ ಹೂವನ್ನು ಮುಡಿದುಕೊಂಡನು. ಬಂಗಾರದ ಹಾವಿಗೆಗಳನ್ನು ಹಾಕಿಕೊಂಡು, ಧನುಸ್ಸನ್ನೂ ಬಾಣವನ್ನೂ ಹಿಡಿದುಕೊಂಡು, ಕುದುರೆಯ ಮೇಲೆ ಕೂತುಕೊಂಡು, ಬೆಟ್ಟದಿಂದ ಕೆಳಗೆ ಇಳಿದು ಮೃಗಬೇಟೆಗಾಗಿ ಹೋದನು. ಅಲ್ಲಿ ಅನೇಕ ಮೃಗಗಳನ್ನು ಸಂಹರಿಸಿದನು. ಅಲ್ಲಿ ಒಂದು ಆನೆಯನ್ನು ನೋಡಿ ಅದನ್ನು ಅಟ್ಟಿಸಿಕೊಂಡು ಹೋದನು. ಆನೆಯು ಬಹುದೂರ ಓಡಿತು. ಮಲಗಿ ಸೊಂಡಿಲನ್ನು ಎತ್ತಿ ಗರ್ಜಿಸಿ ಹೊರಟುಹೋಯಿತು.

ಆ ಸಮಯದಲ್ಲಿ ಒಬ್ಬ ಕನ್ಯೆಯು ಕಣ್ಣಿಗೆ ಬಿದ್ದಳು. ಆ ಕನ್ಯೆಯೇ ಆಕಾಶರಾಜನ ಮಗಳು. ಅವಳ ಹೆಸರು ಪದ್ಮಾವತಿಯು. ಪದ್ಮಾವತಿದೇವಿಯು ಸಖಿಯರಿಂದ ಕೂಡಿಕೊಂಡು ಪುಷ್ಪವನ್ನು ಕೊಯ್ಯಲಿಕ್ಕೆ ಬಂದಿದ್ದರು. ಕೂಗುತ್ತಾ ಬರುತ್ತಿರುವ ಆನೆಯನ್ನು ನೋಡಿ ಪದ್ಮಾವತಿದೇವಿಯರು ಸಖಿಯರೊಡನೆ ಕಣ್ಣುಮುಚ್ಚಿಕೊಂಡು ಮರದ ಮರೆಯಲ್ಲಿ ನಿಂತರು. ಸ್ವಲ್ಪ ಹೊತ್ತಿನಲ್ಲಿಯೇ ಕುದುರೆಯ ಮೇಲೆ ಕೂತುಕೊಂಡು ಬರುತ್ತಿರುವ ಶ್ರೀನಿವಾಸದೇವರನ್ನು ನೋಡಿದರು. ಸಖಿಯರು ಪರಸ್ಪರವಾಗಿ ಈ ಕುದುರೆಯ ಮೇಲೆ ಕೂತುಕೊಂಡು ಬರುತ್ತಿರುವ ಈ ಕಿರಾತನು ಯಾರಿರಬಹುದು ಎಂದು ಮಾತಾಡಿಕೊಂಡರು. ಪದ್ಮಾವತೀ ದೇವಿಯರು ಸಖಿಯರೊಡನೆ ಅವನ ತಂದೆತಾಯಿ ಬಂಧುಗಳನ್ನು ವಿಚಾರಿಸಿರಿ ಎಂದು ಹೇಳಿದರು. ಆಗ ಸಖಿಯರು ಬಂದು 'ನೀನು ಯಾರು? ಯಾವುದಕ್ಕೆ ಬಂದಿರುವಿ?

1. ಭ.ಪು.ಅ.7

ಇಲ್ಲಿ ಗಂಡಸರು ಒಬ್ಬರೂ ಇಲ್ಲ. ಇಲ್ಲಿಂದ ಬೇಗನೇ ಹೊರಟು ಹೋಗು' ಎಂದು ಹೇಳಿದರು. ಅವರ ಮಾತನ್ನು ಕೇಳಿ ಕುದುರೆಯ ಮೇಲೆ ಕೂತಿರುವ ಶ್ರೀನಿವಾಸದೇವರು 'ಸುಂದರಿಯರಿರಾ! ನನಗೆ ರಾಜಪುತ್ರಿಯ ಸಮೀಪದಲ್ಲಿ ಕಾರ್ಯವಿದೆ' ಎಂದು ಹೇಳಿದರು. ಸಖಿಯರು 'ಏನು ಕಾರ್ಯವಿದೆ? ಬೇಗನೇ ಹೇಳು. ನಿನ್ನ ಮನಸ್ಸಿನಲ್ಲಿ ಏನಿದೆ? ನಿನ್ನ ವಾಸಸ್ಥಳವು ಯಾವುದು? ನಿನ್ನ ಹೆಸರು ಏನು? ತಾಯಿಯು ಯಾರು? ತಂದೆಯು ಯಾರು? ಅಣ್ಣತಮ್ಮಂದಿರು ಯಾರು? ಅಕ್ಕತಂಗಿಯರು ಯಾರು?' ಎಂದು ಕೇಳಿದರು. ಈ ರೀತಿಯಾಗಿ ಇವರ ಮಾತನ್ನು ಕೇಳಿ ಶ್ರೀನಿವಾಸದೇವರು 'ಕನ್ಯಾಪೇಕ್ಷೆಯೇ ಮುಖ್ಯವಾದ ಕಾರ್ಯವು' ಎಂದು ಹೇಳಿ ಪದ್ಮಾವತೀದೇವಿಯರೊಡನೆ 'ನಮ್ಮ ವಂಶವು ಚಂದ್ರವಂಶವೆಂದು ದೊಡ್ಡವರು ಹೇಳುತ್ತಿರುವರು. ತಂದೆಯು ವಸುದೇವನು. ತಾಯಿಯು ದೇವತೆಯು. ಬಲರಾಮದೇವರು ಅಣ್ಣನು. ಸುಭದ್ರೆಯು ನನ್ನ ತಂಗಿಯು. ಅರ್ಜುನನು ನನ್ನ ಮಿತ್ರನು. ಪಾಂಡವರು ನನ್ನ ಬಂಧುಗಳು. ನನ್ನ ಮೊದಲು ಆರು ಮಕ್ಕಳು ಮೃತರಾದರು. ಏಳನೆಯವರು ಬಲರಾಮದೇವರು. ಎಂಟನೆಯವನು ನಾನು. ಅಷ್ಟಮೀದಿನದಲ್ಲಿ ಹುಟ್ಟಿದೆನು. ನನ್ನ ಆಮೇಲೆ ಸುಭದ್ರೆಯು ಹುಟ್ಟಿದಳು. ನನಗೆ ತಾಯಿಯ ಬಣ್ಣವೇ ಕೃಷ್ಣಪಕ್ಷದಲ್ಲಿ ನಾನು ಹುಟ್ಟಿದ್ದು. ಆದುದರಿಂದ ನನಗೆ ಕೃಷ್ಣ ಎಂಬ ಹೆಸರು. ನನ್ನ ಬಣ್ಣವೂ ಕಪ್ಪು ಹೆಸರೂ ಕೃಷ್ಣ ಎಂದು. ಈರೀತಿಯಾಗಿ ನನ್ನ ವೃತ್ತಾಂತವನ್ನೆಲ್ಲಾ ತಿಳಿಸಿಯಾಯಿತು. ಇನ್ನು ನಿಮ್ಮ ವೃತ್ತಾಂತವನ್ನು ತಿಳಿಸಿರಿ ಎಂದು ಹೇಳಿದರು.

ಅದಕ್ಕೆ ಪದ್ಮಾವತೀದೇವಿಯರು 'ಕಿರಾತಶ್ರೇಷ್ಠನೇ! ನನ್ನ ಹೆಸರು ಪದ್ಮಾವತಿ ಯೆಂದು. ನಮ್ಮದು ಚಂದ್ರವಂಶ. ಅತ್ರಿಗೋತ್ರವು ಬೇಗನೇ ಹೊರಟುಹೋಗು' ಎಂದರು.

ಶ್ರೀನಿವಾಸದೇವರು 'ಅದೇಕಮ್ಮ, ಅಷ್ಟು ಕಠಿಣವಾಗಿ ಮಾತಾಡುತ್ತಿರುವೆ? ಸ್ವಲ್ಪ ಮೆಲ್ಲನೆ ಮಾತಾಡಬಾರದೆ? ಲೋಕದಲ್ಲಿ ಅನ್ನವನ್ನು ಬಯಸುವವರಿಗೆ ಅನ್ನದಾನ ಮಾಡುವರು. ನೀರನ್ನು ಅಪೇಕ್ಷಿಸುವವರಿಗೆ ಜಲದಾನವನ್ನು ಮಾಡುವರು. ದಾನ ಮಾಡದೆ ಇದ್ದರೂ ಮೃದುವಾಗಿ ಮಾತಾಡುವರು. ಕಠಿಣವಾಗಿ ಮಾತಾಡಬಾರದು. ಪ್ರಕೃತ ನಾನೋ ಕಾಮವನ್ನು ಅಪೇಕ್ಷಿಸುವೆನು. ನಾನು ಒಳ್ಳೇ ಪಾತ್ರನಾಗಿದ್ದೇನೆ. ನನಗೆ ನಿನ್ನನ್ನೇ ನೀನು ದಾನ ಮಾಡಿಕೊ. ಇದರಿಂದ ಸ್ವರ್ಗವನ್ನು ಹೊಂದುವಿ. ಸುಮ್ಮನೆ ಕಠಿಣವಾದ ಮಾತನ್ನು ಆಡಬೇಡ' ಎಂದು ಹೇಳಿದರು.

ಪದ್ಮಾವತೀದೇವಿಯರು ಕೋಪದಿಂದ ಕಣ್ಣು ಕೆಂಪಗೆ ಮಾಡಿಕೊಂಡು 'ಮೂರ್ಖನೆ! ನಿನಗೆ ಬದುಕುವ ಆಸೆಯಿಲ್ಲವೆಂದು ಕಾಣುತ್ತದೆ. ಆಕಾಶ ರಾಜರು ನಿನ್ನನ್ನು ಕೊಂದುಹಾಕುವರು. ಅವರು ಬರುವ ಮೊದಲೇ ನಿನ್ನ ಮನೆಗೆ ಹೋಗಿ ಸೇರು' ಎಂದರು.

ಶ್ರೀನಿವಾಸದೇವರು 'ನಮ್ಮ ಕಾರ್ಯವಾದ ಮೇಲೆ ಸತ್ತರೂ ಸುಖವೇ. ಕಾರ್ಯವಾಗದೆ ಸತ್ತರೆ ಕಷ್ಟ. ಧರ್ಮಿಷ್ಠರಾದ ಆಕಾಶರಾಜರು ನನ್ನನ್ನು ಯಾಕೆ ಕೊಲ್ಲಬೇಕು? ಇದರಲ್ಲಿ ಏನು ಅನ್ಯಾಯವಿದೆ? ನೀನು ಕನ್ಯಾ ನಾನು ವರನು' ಎಂದರು.

ಪದ್ಮಾವತೀದೇವಿಯರು 'ಮೂರ್ಖನೆ ಕೇಳು. ಹುಡುಗಾಟಿಕೆಯಿಂದ ನಿನಗೊಂದೂ ತಿಳಿಯಲಾರದು. ಆಕಾಶರಾಜರು ನಿನ್ನನ್ನು ಬಂಧನದಲ್ಲಿ ಇಡುವರು. ಭವಿಷ್ಯವನ್ನು ನಾನು ಹೇಳುವೆನು' ಎಂದರು.

ಶ್ರೀನಿವಾಸದೇವರು 'ನಾನು ಸಾಯುವುದನ್ನು ನಿಶ್ಚಯಿಸಿಕೊಂಡೇ ನಿನ್ನೊಡನೆ ವಿಹರಿಸಬೇಕೆಂದು ಬಂದಿರುವೆನು. ಹುಟ್ಟಿದವನು. ಯಾವಾಗಲಾದರೂ ಒಂದುದಿನ ಸಾಯಲೇಬೇಕು. ಮಾತ್ರವಲ್ಲದೆ ಧರ್ಮಿಷ್ಠನಾದ ಆಕಾಶರಾಜನು ನನ್ನನ್ನೇಕೆ ಕೊಲ್ಲಿಸುವನು?' ಎಂದರು.

ಪದ್ಮಾವತೀದೇವಿಯರು 'ಎಲ್ಲಾ ಕಿರಾತನೇ! ನಿನಗೆ ಎಲ್ಲರ ಆಣೆಯಿದೆ. ಸುಖವಾಗಿ ಮನೆಗೆ ಹೋಗಿ ಸೇರು' ಎಂದರು.

ಆಗ ಭಗವಂತನು ಅವರ ಮಾತನ್ನು ಕೇಳದೆ ಕುದುರೆಯನ್ನು ಮುಂದೆ ಮಾಡಿದನು. ಅದನ್ನು ನೋಡಿ ಪದ್ಮಾವತೀದೇವಿಯರು 'ತಂದೆತಾಯಿಗಳನ್ನು ಅಣ್ಣತಮ್ಮಂದಿರನ್ನೂ ಎಲ್ಲಾ ಬಂಧುಗಳನ್ನೂ ಬಿಟ್ಟು ಕಾಡಿಗೆ ಬಂದು ಅನಾಥವಾಗಿ ವ್ಯರ್ಥವಾಗಿ ಸಾಯುವೆ. ಕಾಗೆಯ ಆಹಾರವಾಗುವೆ' ಎಂದರು.

ಶ್ರೀನಿವಾಸದೇವರು 'ಬ್ರಹ್ಮದೇವರು ಹಣೆಯಲ್ಲಿ ಬರೆದದ್ದು ಯಾವಾಗಲೂ ವ್ಯರ್ಥವಾಗಲಾರದು. ಜಯವೋ ಅಪಜಯವೋ! ನಾನು ನಿನ್ನನ್ನು ಬಿಡಲಾರೆನು' ಎಂದು ಹೇಳಿದರು.

ಆ ಮಾತನ್ನು ಕೇಳಿ ಪದ್ಮಾವತೀದೇವಿಯರು ಸಖಿಯರಿಂದ ಕೂಡಿಕೊಂಡು ಭಗವಂತನನ್ನು ಬೆದರಿಸುತ್ತಾ ಕಲ್ಲುಗಳನ್ನು ಬಿಸಾಡಲಿಕ್ಕೆ ಆರಂಭಿಸಿದರು. ಕಲ್ಲಿನ ಪೆಟ್ಟು ತಾಗಿ ಕುದುರೆಯು ಪ್ರಾಣವನ್ನು ಬಿಟ್ಟಿತು. ಶ್ರೀನಿವಾಸದೇವರ ತಲೆಯು ಬಿಚ್ಚಿ

ಹೋಯಿತು. ಶ್ರೀನಿವಾಸದೇವರು ಸತ್ತುಬಿದ್ದ ಕುದುರೆಯನ್ನು ನೋಡಿ ಎಲ್ಲಾ ದಿಕ್ಕುಗಳನ್ನು ನೋಡುತ್ತಾ ಹುಚ್ಚುಹಿಡಿದವರಂತೆ ಆಗಿ 'ನಾನು ಈದಿನ ಬರುವಾಗ ತಾಯಿಗೆ ನಮಸ್ಕರಿಸಿ ಬರಲಿಲ್ಲ. ಆದರಿಂದ ನನಗೆ ಈ ವಿಧವಾದ ಅನರ್ಥವುಂಟಾಯಿತು' ಎಂದು ಹೇಳುತ್ತಾ ಉತ್ತರದಿಕ್ಕಿಗೆ ಹೊರಟುಹೋದರು. ಬೆಟ್ಟವನ್ನು ಹತ್ತಿಹೋಗಿ ಜನರಂತೆ ತೋರಿಸುತ್ತಾ ದುಃಖವುಳ್ಳವನಂತೆ ತೋರಿಸುತ್ತಾ ಮುಖಕ್ಕೆ ವಸ್ತ್ರವನ್ನು ಹಾಕಿ ಮಲಗಿಕೊಂಡರು.

(ಪದ್ಮಾವತೀದೇವಿಯರು ಲಕ್ಷ್ಮೀದೇವಿಯರ ಅವತಾರವಾದ ಪ್ರಯುಕ್ತ ದೇವರ ಹತ್ತಿರ ಜಗಳಾಡುವವರಲ್ಲ. ಆದರೂ ದೇವರ ಸಂಕಲ್ಪವನ್ನು ತಿಳಿದುಕೊಂಡು ಲೋಕದ ಜನರಂತೆ ಆಡಿತೋರಿಸಿದರು ಎಂದು ತಿಳಿಯಬೇಕು)



## ಪದ್ಮಾವತೀದೇವಿಯರ ಚರಿತ್ರೆ [1]

ಪೂರ್ವದಲ್ಲಿ ದ್ವಾಪರಯುಗದ ಅಂತ್ಯದಲ್ಲಿ ಪಾಂಡವರ ಯುದ್ಧವು ಮುಗಿದಮೇಲೆ ಕಲಿಯುಗದಲ್ಲಿ ವಿಕ್ರಮಾದಿತ್ಯರಾಯನೇ ಮೊದಲಾದವರು ಸ್ವರ್ಗಸ್ಥರಾದಮೇಲೆ ಚಂದ್ರವಂಶದಲ್ಲಿ ಸುವೀರ ಎಂಬ ರಾಜನು ಬಂದನು. ಸುವೀರನಿಗೆ ಸುಧರ್ಮ ಎಂಬ ಮಗನು ಹುಟ್ಟಿದನು. ಆ ಸುಧರ್ಮ ಎಂಬ ರಾಜನಿಗೆ ಆಕಾಶ ತೋಂಡಮಾನ ಎಂದು ಹೆಸರುಳ್ಳ ಇಬ್ಬರು ಮಕ್ಕಳು ಆದರು. ದೊಡ್ಡವನು ಆಕಾಶರಾಜನು. ಚಿಕ್ಕವನು ತೋಂಡಮಾನರಾಜನು. ಆಕಾಶರಾಜನು ತೋಂಡದೇಶಕ್ಕೆ ಅಧಿಪತಿಯಾಗಿ ಭೂಮಿಯನ್ನು ಆಳುತ್ತಿದ್ದನು. ಆ ರಾಜನು ಆಳುತ್ತಿರುವಾಗ ಭೂಮಿಯು ಸ್ವರ್ಗದಂತೆ ಇರುತ್ತಿತ್ತು. ಜನರೆಲ್ಲರೂ ಸುಖದಿಂದ ಇದ್ದರು.

ಒಂದು ದಿನದಲ್ಲಿ ಆಕಾಶರಾಜನು ಮಕ್ಕಳಿಲ್ಲವೆಂದು ಗುರುಗಳೊಡನೆ ದುಃಖದಿಂದ ಹೇಳಿಕೊಂಡನು. 'ಗುರುಗಳೇ! ಆನೆ ಕುದುರೆ ರಥಗಳಿಂದ ಕೂಡಿದ ರಾಜ್ಯವನ್ನು ಅನುಭವಿಸಿದೆನು. ನಾನಾ ದಾನಗಳನ್ನು ಮಾಡಿದೆನು. ತೀರ್ಥಯಾತ್ರೆಯನ್ನು ಮಾಡಿದೆನು. ಆದರೂ ಪುತ್ರಸುಖವನ್ನು ಅನುಭವಿಸಲಿಲ್ಲ. ನಾನು ಏನು ಪಾಪವನ್ನು ಮಾಡಿದೆನೋ? ಯಾರ ಮಕ್ಕಳನ್ನು ಕೊಂದಿರುವೆನೋ? ಯಾವ ಪಾಪದಿಂದ ನನಗೆ ಮಕ್ಕಳಿಲ್ಲವೆಂದಾಯಿತೋ? ನಾನು ಕಣ್ಣುಗಳಿಂದ ಮಗುವಿನ

1. ಭ.ಪು.ಅ.6

ಮುಖವನ್ನು ನೋಡಿಲ್ಲ. ಕಿವಿಗಳಿಂದ ಮಗನು ಅಳುವ ಶಬ್ದವನ್ನು ಕೇಳಿಲ್ಲವಲ್ಲಾ' ನನ್ನ ಪಿತೃಗಳಿಗೆಲ್ಲಾ ದುರ್ಗತಿಯಾಗುವುದಲ್ಲಾ! ಮಕ್ಕಳಿಲ್ಲದವರಿಗೆ ಗತಿಯಿಲ್ಲವೆಂದು ದೊಡ್ಡವರು ಹೇಳುವರು. ಮಗುವು ನನ್ನೊಡನೆ ಬಂಗಾರದ ತಟ್ಟೆಯಲ್ಲಿ ಭೋಜನ ವನ್ನು ಮಾಡಿಲ್ಲವಲ್ಲಾ? ಒಂದು ದಿನವೂ ನಾನು ಮಗುವನ್ನು ಆಡಿಸಿಲ್ಲವಲ್ಲಾ! ಆಭರಣಗಳನ್ನು ಮಾಡಿಸಿ ತಂದು ಮಗುವನ್ನು ಅಲಂಕರಿಸಿಲ್ಲವಲ್ಲಾ! ಮಗುವಿಗೆ ಅಂಗಿಹೊಲಿಸಿಕೊಂಡು ಬಂದು ಬಾ ಎಂದು ಕರಿಯಲಿಲ್ಲವಲ್ಲಾ! ಮಕ್ಕಳಿಲ್ಲದ ನನ್ನನ್ನು ಯಮದೂತನು ರಾಜನೇ! ಬೇಗನೇ ಯಮಲೋಕಕ್ಕೆ ಹೋಗು ಎಂದು ಹೇಳಿ ಎಳೆದುಕೊಂಡು ಹೋಗುವರು. ನಾನು ಆಗ ಏನು ಹೇಳಲಿ? ಚಿತ್ರಗುಪ್ತನು ನನಗೆ ಮಕ್ಕಳಿಲ್ಲವೆಂದು ಬರೆದದ್ದನ್ನು ನನ್ನ ಮಗನು ಹೇಗೆ ಅಳಿಸುವನು? ದುರಾಚಾರನೇ! ದುರ್ಬುದ್ಧಿಯುಳ್ಳವನೇ! ಮಕ್ಕಳಿಲ್ಲದವನೇ! ಎಂದು ಯಮದೇವರು ಹೇಳುವ ಮಾತನ್ನು ಕೇಳಿ ಯಾರುಸುಖವನ್ನು ಹೊಂದುವನು? ನಮ್ಮ ವಂಶದಲ್ಲಿ ದೀಪವಿಲ್ಲದಂತಾಯಿತು. ಕಷ್ಟವನ್ನು ಹೊಂದಲಿಕ್ಕೇನೇ ಹುಟ್ಟಿದಂತಾಯಿತು. ಪಾಪಿಯಾದ ನಾನು ವ್ಯರ್ಥವಾಗಿ ಹುಟ್ಟಿದೆನು. ನರಕಕ್ಕೆ ಹೋಗುವೆನು. ಮಕ್ಕಳಿಲ್ಲದ ವಂಶವನ್ನೂ ನೀರಿಲ್ಲದ ಭಾವಿಯನ್ನೂ ಗಂಡನಿಲ್ಲದ ಹೆಂಗಸನ್ನೂ ಸಜ್ಜನರು ನಿಂದಿಸುವರು. ನಾನು ಏನು ಮಾಡಲಿ? ಎಲ್ಲಿಗೆ ಹೋಗಲಿ? ಯಾವ ದೇವರನ್ನು ಮರೆಹೊಂದಿ ಸಂಸಾರ ಸಮುದ್ರವನ್ನು ದಾಟಲಿ? ಅಳುವ ಮಗುವನ್ನು ಯಾವಾಗ ಪ್ರೇಮದಿಂದ ಕರೆಯಲಿ? ಇತ್ಯಾದಿ ರೀತಿಯಿಂದ ಬಹಳವಾಗಿ ದುಃಖಿಸಿದನು.

ಆಗ ಬೃಹಸ್ಪತ್ಯಾಚಾರ್ಯರು 'ರಾಜಶ್ರೇಷ್ಠನೇ! ಯಾಗವನ್ನು ಮಾಡು' ಎಂದು ಹೇಳಿದರು. ರಾಜನು ಬ್ರಾಹ್ಮಣರ ಮಂತ್ರಪೂರ್ವಕವಾಗಿ ಬಂಗಾರದ ನೇಗಿಲಿನಿಂದ ಯಾಗಕ್ಕಾಗಿ ಭೂಮಿಯ ಶೋಧನೆಯನ್ನು ಮಾಡಿದನು. ಭೂಮಿಯನ್ನು ಶೋಧಿ ಸುವ ಸಮಯದಲ್ಲಿ ಸಾವಿರದಳಗಳಿಂದ ಕೂಡಿರುವ ಕಮಲಪುಷ್ಪವೊಂದನ್ನು ಕಂಡನು. ಅದರ ಮಧ್ಯದಲ್ಲಿ ಒಂದು ಸುಂದರವಾದ ಹೆಣ್ಣುಕೂಸನ್ನು ನೋಡಿದನು. ಅಷ್ಟರಲ್ಲಿ 'ಈ ಮಗುವನ್ನು ನೀನು ರಕ್ಷಿಸು. ನಿನಗೆ ಕೀರ್ತಿಯುಂಟಾಗುವುದು' ಎಂದು ಅಶರೀರವಾಣಿಯೂ ಕೇಳಿಸಿತು. ರಾಜನು ಅದನ್ನು ಕೇಳಿ ಸಂತೋಷದಿಂದ ಆ ಕನ್ಯೆಯನ್ನು ಎತ್ತಿ ಪತ್ನಿಯೊಡನೆ 'ಈ ಮಗುವನ್ನು ಹೊಟ್ಟೆಯಲ್ಲಿ ಹುಟ್ಟಿದ ಮಗುವನ್ನು ರಕ್ಷಿಸುವಂತೆ ರಕ್ಷಿಸು' ಎಂದು ಹೇಳಿ ಕೊಟ್ಟನು. ಆಮೇಲೆ ಬಹುದಾನವನ್ನು ಮಾಡಿದನು.

ಆ ಹೆಣ್ಣುಕೂಸು ಮನೆಗೆ ಬಂದ ಪುಣ್ಯದಿಂದ ರಾಜನ ಪತ್ನಿಯು

ಗರ್ಭಿಣಿಯಾದಳು. ರಾಜನು ಬಹು ಸಂತೋಷವನ್ನು ಹೊಂದಿ ಸೀಮಂತವನ್ನು ಮಾಡಿದನು. ಸರಿಯಾದ ಕಾಲದಲ್ಲಿ ರಾಜಪತ್ನಿಯು ಗಂಡುಕೂಸನ್ನು ಹಡೆದಳು. ಶುಕ್ಲಪಕ್ಷದ ದಶಮೀ ಕನ್ಯಾಮಾಸದಲ್ಲಿ ರೋಹಿಣೀ ನಕ್ಷತ್ರದಲ್ಲಿ ಗುರುವಾರ ಸಾಯಂಕಾಲದಲ್ಲಿ ಮಗು ಜನಿಸಿತು. ರಾಜನು ಕೂಸು ಹುಟ್ಟಿದ ವಿಷಯವನ್ನು ಹೇಳಿದವರಿಗೆ ಬೇಕಾದ ದಾನವನ್ನು ಮಾಡಿದನು. ಮತ್ತೂ ಬ್ರಾಹ್ಮಣರಿಗೆ ಬೇಕಾದ ದಾನಗಳನ್ನು ಮಾಡಿದನು. ಹನ್ನೆರಡನೇ ದಿನ ವಸುದಾನ ಎಂದು ಹೆಸರಿಟ್ಟನು. ಆ ಹೆಣ್ಣುಮಗಳಿಗೆ ಪದ್ಮಾವತೀ ಎಂದು ನಾಮಕರಣ ಮಾಡಿದ್ದನು. ಇಬ್ಬರೂ ಮಕ್ಕಳೂ ಬೆಳೆಯುತ್ತಿರುವುದನ್ನು ನೋಡಿ ಸಂತೋಷವನ್ನು ಹೊಂದಿದನು. ಹೀಗೆ ಕಾಲವು ಹೋಗಲು ಪದ್ಮಾವತೀದೇವಿಯು ಯೌವನವನ್ನು ಹೊಂದಿದಳು. ಅವಳನ್ನು ನೋಡಿ ರಾಜನು ಯಾವ ಯೋಗ್ಯವರನಿಗೆ ಮಗಳನ್ನು ಮದುವೆ ಮಾಡಲಿ ಎಂದು ಯೋಚಿಸತೊಡಗಿದನು. ಮಗನಿಗೆ ಮುಂಜಿಯನ್ನು ಮಾಡಿದನು.

ಒಂದು ದಿವಸದಲ್ಲಿ ವಸಂತಋತುವಿನಲ್ಲಿ ಪದ್ಮಾವತೀದೇವಿಯು ಸಖಿಯರಿಂದ ಕೂಡಿಕೊಂಡು ಪುಷ್ಪಗಳನ್ನು ಕೊಯ್ಯಲಿಕ್ಕಾಗಿ ವನಕ್ಕೆ ಹೋದರು. ಅಲ್ಲಿಗೆ ನಾರದರು ವೃದ್ಧಬ್ರಾಹ್ಮಣರೂಪದಿಂದ ಬಂದು ಸೇರಿದರು. ಅವರನ್ನು ನೋಡಿ ಪದ್ಮಾವತೀದೇವಿಯು ಸಖಿಯರೊಡನೆ ಅದು ಯಾರೆಂದು ವಿಚಾರಿಸಿರಿ ಎಂದರು. ಆಗ ಅವರು ಆ ಮುದುಕನ ಬಳಿಗೆ ಬಂದು ನೀವು ಯಾರು? ಯಾಕೆ ಇಲ್ಲಿಗೆ ಬಂದಿರಿ? ಎಂದು ಕೇಳಿದರು. ಅದಕ್ಕೆ ನಾರದರು ನಾನು ನಿಮಗೆ ಕುಲಗುರುವು. ಅಮ್ಮ! ನಿನ್ನ ಕೈತೋರಿಸು. ಲಕ್ಷಣಗಳನ್ನು ಹೇಳುವೆನು' ಎಂದು ಪದ್ಮಾವತೀ ದೇವಿಯೊಡನೆ ಹೇಳಿದರು. ಆಗ ಪದ್ಮಾವತಿಯು ನಾಚುತ್ತಾ ಏನು ನೀವು ಹೇಳುವಿರಿ ಎಂದರು. ನಾರದರು ಅಮ್ಮ! ನಾನು ತಂದೆಗೆ ಸಮಾನನೆಂದು ತಿಳಿಯು. ನಾಚಬೇಡ ಎಂದು ಪದ್ಮಾವತಿಯ ಹಸ್ತವನ್ನು ನೋಡಿ ಲಕ್ಷಣಗಳನ್ನೆಲ್ಲಾ ನೋಡಿ ಸರ್ವ ಅಂಗಗಳನ್ನು ವರ್ಣಿಸಿ ನಿನಗೆ ಶ್ರೀಭಗವಂತನೇ ಗಂಡನಾಗುವನು ಎಂದು ಹೇಳಿ ಹೊರಟುಹೋದರು. ಹೋಗುವಾಗ ಮನಸ್ಸಿನಿಂದಲೇ ಪದ್ಮಾವತೀದೇವಿಯರಿಗೆ ನಮಸ್ಕರಿಸಿ ಹೋದರು. ಆಮೇಲೆ ಪೂರ್ವದಲ್ಲಿ ತಿಳಿಸಿದಂತೆ ಶ್ರೀನಿವಾಸದೇವರ ದರ್ಶನವೂ ವಿವಾದವೂ ಪದ್ಮಾವತೀದೇವಿಯರಿಗೆ ನಡೆಯಿತು.



## ಶ್ರೀನಿವಾಸದೇವರು ಬಕುಳೆಯನ್ನು ಕಳುಹಿಸಿದ್ದು [1]

ಶ್ರೀನಿವಾಸದೇವರು ಹೋಗಿ ಮಂಚದಲ್ಲಿ ಮಲಗಿಕೊಂಡರು. ಬಕುಳೆಯು ತೊವ್ವೆ ಪಾಯಸ ಅನ್ನ ಮೊದಲಾದವನ್ನು ಹಿಡಿದುಕೊಂಡು ಭಗವಂತನ ಬಳಿಗೆ ಬಂದಳು. ಶ್ರೀನಿವಾಸನು ಮಾತಾಡದೆ ದೀರ್ಘಶ್ವಾಸವನ್ನು ಬಿಡುತ್ತಾ ಕಣ್ಣೀರು ಸುರಿಸುತ್ತಾ ಮಲಗಿರುವ ಭಗವಂತನನ್ನು ನೋಡಿದಳು. ಆಗ ಬಕುಳೆಯು 'ಗೋವಿಂದ! ಏಳು ಯಾಕೆ ಮಲಗಿರುವಿ? ಏಳು. ಯಾವಾಗಲೂ ನೀನು ಹಗಲಲ್ಲಿ ಮಲಗಿದ್ದಿಲ್ಲವಲ್ಲಾ! ದುಃಖರಹಿತನಾದ ನೀನು ದುಃಖವುಳ್ಳವನಂತೆ ಯಾಕೆ ತೋರಿಸುವಿ? ನಿನ್ನ ಮನಸ್ಸಿನಲ್ಲಿ ಏನಿರುವುದು ಹೇಳು. ಪರಮಾನ್ನವನ್ನು ಮಾಡಿ ತಂದಿರುವೆನು. ಊಟಕ್ಕೆ ಏಳು' ಎಂದು ಹೇಳಿದಳು. ಆದರೂ ಭಗವಂತನು ಮಾತಾಡಲೇ ಇಲ್ಲ.

ಮತ್ತೂ ಬಕುಳೆಯು 'ಕೃಷ್ಣ! ಕಾಡಿನಲ್ಲಿ ಏನು ನೋಡಿದಿ? ಯಾಕೆ ದುಃಖವನ್ನು ತೋರಿಸುವಿ? ಮನಸ್ಸಿನಲ್ಲಿ ಇರುವುದನ್ನು ಹೇಳು. ನನ್ನಲ್ಲಿ ಗೌರವವನ್ನು ತೋರಿಸುವುದು ಬೇಡ. ಬಲರಾಮದೇವರಲ್ಲಿ ವಸುದೇವ ದೇವಕಿಯರಲ್ಲಿ ನಿನ್ನ ಗೌರವವಿರಲಿ ಊಟ ಮಾಡದೆ ಇರುವ ನಿನ್ನನ್ನು ನೋಡಿದರೆ ನನಗೆ ದುಃಖ ವಾಗುತ್ತದೆ. ಸರ್ವಲೋಕದ ದುಃಖವನ್ನು ಸಂಹರಿಸಿರುವ ಪುಣ್ಯಮೂರ್ತಿಯೇ! ನಿನಗೆ ನಮಸ್ಕಾರವು ಕಾಡಿನಲ್ಲಿ ಯಾವ ಹೆಣ್ಣನ್ನು ನೋಡಿದಿ? ಗಂಧರ್ವಸ್ತ್ರೀಯನ್ನು ನೋಡಿದಿಯಾ? ಯಾವ ಹೆಣ್ಣನ್ನು ನೋಡಿ ನಿನ್ನ ಮನಸ್ಸು ಮೋಹವನ್ನು ಹೊಂದಿರುವುದು? ಯಾವ ಪುಣ್ಯವತಿಯು ಭಕ್ತವಶನಾದ ನಿನ್ನನ್ನು ವಶಮಾಡಿ ಕೊಂಡಳು? ಕೃಷ್ಣ! ನಿನ್ನ ಕಾರ್ಯವನ್ನು ಹೇಳು. ಕ್ಷಣಮಾತ್ರದಲ್ಲಿಯೇ ಮಾಡುವೆನು. ಕ್ರೂರವಾದ ಮೃಗವನ್ನು ನೋಡಿ ಭಯವನ್ನು ಹೊಂದಿರುವೆಯಾ? ಅಥವಾ ಭೂತಪ್ರೇತಪಿಶಾಚಿಗಳನ್ನು ನೋಡಿ ಅಂಜಿಕೊಂಡೆಯಾ? ಮಂತ್ರಔಷಧಿಗಳಿಂದ ನಿನ್ನ ಭಯವನ್ನು ಪರಿಹರಿಸುವೆನು?

ಈರೀತಿಯಾಗಿ ಬಕುಳೆಯು ಜ್ಞಾನ, ಅಜ್ಞಾನಗಳಿಂದ ಯುಕ್ತಳಾಗಿ ನಾನಾವಿಧಗಳಾದ ಮಾತುಗಳನ್ನು ಆಡುತ್ತಿರಲು ಭಗವಂತನು ಮಾತಾಡಲೇ ಇಲ್ಲ. ತರುವಾಯ ಬಕುಳೆಯು ತಾನು ತಂದಿರುವ ಅನ್ನ ಇತ್ಯಾದಿಗಳನ್ನು ಕೆಳಗೆ ಇಟ್ಟು ಸಮೀಪಕ್ಕೆ ಹೋದವಳಾಗಿ ಕಾಲನ್ನು ಒತ್ತಿದಳು. ಕಾಲಿನಿಂದ ತಲೆಯವರೆಗೆ ಕೈಯಿಂದ ಒತ್ತಿದವಳಾಗಿ ಮೈಯಬೆವರನ್ನೆಲ್ಲಾ ವರಸಿದಳು. ಏನು ಮಾಡಿದರೂ ಭಗವಂತನು

1. ಭ.ಪು.ಅ.8

ಮಾತಾಡಲೇ ಇಲ್ಲ. ಆಗ ಬಕುಳೆಯು ತುಂಬಾ ಅಸಮಾಧಾನವುಳ್ಳವಳಾಗಿ ಭಗವಂತನು ಮುಖದ ಮೇಲೆ ಹಾಕಿಕೊಂಡಿದ್ದ ವಸ್ತ್ರವನ್ನು ತೆಗೆದು 'ಭಗವಂತನೇ! ನಿನ್ನ ಮನಸ್ಸಿನಲ್ಲಿರುವಂತೆ ನಾನು ಮಾಡುವೆನು. ಸತ್ಯವನ್ನು ಹೇಳು. ನಾಚಿಕೆ ಪಡಬೇಡ. ಭಯಪಡಬೇಡ. ನನ್ನ ಶಕ್ತಿಯಿದ್ದಷ್ಟು ಬೇಗನೆ ನಿನ್ನ ಕಾರ್ಯವನ್ನು ಮಾಡುವೆನು' ಎಂದು ಹೇಳಿದಳು.

ಆಗ ಭಗವಂತನು ತುಂಬಾ ದುಃಖವುಳ್ಳವನಂತೆ ತೋರಿಸುತ್ತಾ ಮೆಲ್ಲಮೆಲ್ಲನೆ ದೀರ್ಘಶ್ವಾಸವನ್ನು ಬಿಡುತ್ತಾ 'ಅಮ್ಮ ಬಕುಳೆ! ನನ್ನನ್ನು ಗಂಧರ್ವಸ್ತ್ರೀಯಾಗಲೀ ಋಷಿಪುತ್ರಿಯಾಗಲೀ, ರಾಕ್ಷಸಿಯಾಗಲೀ, ಪಿಶಾಚಿಗಳಾಗಲೀ, ಭೂತಗಳಾಗಲೀ, ಪ್ರೇತಗಳಾಗಲೀ, ನನ್ನನ್ನು ಮೋಹಗೊಳಿಸಲೂ ಇಲ್ಲ, ಭಯಪಡಿಸಲೂ ಇಲ್ಲ. ಅರಣ್ಯದಲ್ಲಿರುವ ಮೃಗಗಳಾಗಲೀ, ಕಳ್ಳರಾಗಲೀ, ನನಗೆ ಭಯಪಡಿಸಲಾರರು. ನನ್ನ ಹೆಸರನ್ನು ಸ್ಮರಿಸುವುದರಿಂದಲೇ ಅವರೆಲ್ಲರೂ ಹತ್ತು ದಿಕ್ಕುಗಳಿಗೆ ಓಡುವರು. ಆದುದರಿಂದ ಮೃತ್ಯುವಿಗೆ ಮೃತ್ಯುವಾದ ನನಗೆ ಅವರಿಂದೆಲ್ಲಾ ಭಯವಿರುವುದಿಲ್ಲ. ನಾನು ಪದ್ಮಾವತಿಯೆಂಬ ಕನ್ಯೆಯನ್ನು ನೋಡಿದೆನು. ಅವಳನ್ನು ನೋಡಿ ನನ್ನ ಮನಸ್ಸು ಕಾಮಪರವಶವಾಗಿದೆ. ಅವಳು ಪರಮಸುಂದರಿಯು. ಬಹು ಜನ್ಮಗಳಲ್ಲಿ ಪುಣ್ಯ ಮಾಡಿದ್ದರೆ ಮಾತ್ರ ಲಭಿಸುವಳು. ಅವಳಿಲ್ಲದೆ ನಾನು ಜೀವಿಸಲಾರೆನು. ಇದು ಸತ್ಯವಾದ ಮಾತು. ಅವಳಿಗೋಸ್ಕರವೇ ಈ ನನ್ನ ಅವತಾರವು. ನೀನು ನನ್ನ ಪಾಲಿಗೆ ಬ್ರಹ್ಮದೇವರಂತೆ ಇರುವವಳು. ನೀನೇ ನನಗೆ ಸಹಾಯ ಮಾಡಬೇಕು. ಆ ಕನ್ಯೆಯು ನನಗೆ ದೊರೆಯುವಂತೆ ಮಾಡಬೇಕು. ಒಂದು ಮದುವೆ ಮಾಡಿಸಿದರೆ ಬಹು ಪುಣ್ಯವು ಬರುವುದು! ಇತ್ಯಾದಿ ರೀತಿಯಾಗಿ ಹೇಳಿದನು.

ಆಗ ಬಕುಳೆಯು 'ಭಗವಂತನೇ! ಎಲ್ಲಿ ಅವಳನ್ನು ನೋಡಿರುವೆ? ಅಲ್ಲಿಯ ದಾರಿಯನ್ನು ಹೇಳು. ನಾನು ಹೋಗುವೆನು. ಅವಳು ಪೂರ್ವಜನ್ಮದಲ್ಲಿ ಯಾರಾಗಿದ್ದಳು? ಅವಳ ವೃತ್ತಾಂತವನ್ನೆಲ್ಲಾ ಹೇಳಬೇಕು' ಎಂದು ಹೇಳಿದಳು.

ಆಗ ಭಗವಂತನು 'ಪದ್ಮಾವತಿಯ ಪೂರ್ವಜನ್ಮ ಚರಿತ್ರೆಯನ್ನು ಕೇಳು. ಪೂರ್ವದಲ್ಲಿ ತ್ರೇತಾಯುಗದಲ್ಲಿ ರಾಮದೇವರು ತಂದೆಯ ಮಾತಿನಿಂದ ತನ್ನ ಪತ್ನಿಯಾದ ಸೀತಾದೇವಿಯಿಂದಲೂ, ತಮ್ಮನಾದ ಲಕ್ಷ್ಮಣನಿಂದಲೂ ಸಹಿತನಾಗಿ ದಂಡಕಾರಣ್ಯಕ್ಕೆ ಹೋಗಿರಲು, ಮೃಗರೂಪದಿಂದ ಬಂದಿರುವ ಮಾರೀಚನನ್ನು ಕೊಲ್ಲಲು ರಾಮದೇವರು ಹೋಗಲು, ಮಾರೀಚನ ಆರ್ತಧ್ವನಿಯನ್ನು ಕೇಳಿ ಸೀತಾದೇವಿಯು ಲಕ್ಷ್ಮಣನನ್ನು ಬೈದು ಕಳುಹಿಸಲು ರಾವಣನೆಂಬ ಅಸುರನು

ಸೀತೆಯನ್ನು ಅಪಹರಿಸಲು ಬಂದನು. ಆಗ ಅಗ್ನಿದೇವರು ಬಂದು ರಾವಣನೊಡನೆ 'ಇವಳು ರಾಮನ ಪತ್ನಿಯಲ್ಲ. ಯಾರೋ ಒಬ್ಬ ಋಷಿಯ ಪತ್ನಿಯು. ನಿನ್ನ ಭಯದಿಂದ ರಾಮನು ತನ್ನ ಪತ್ನಿಯನ್ನು ನನ್ನ ಬಳಿಯಲ್ಲಿ ಇಟ್ಟಿರುವನು. ನಿನಗಾಗಿ ಅವಳನ್ನು ಕೊಡುವೆನು' ಎಂದು ಸೀತಾದೇವಿಯ ಒಂದು ಬೊಂಬೆಯನ್ನು ಮಾಡಿಕೊಟ್ಟರು. ಅದರಲ್ಲಿ ಮಾತಾಡುವುದು ಇತ್ಯಾದಿ ಕಾರ್ಯವನ್ನು ಮಾಡಲಿಕ್ಕಾಗಿ ಇಂದ್ರದೇವರು ಪ್ರವೇಶಿಸಿದರು. ಸೀತಾದೇವಿಯೂ ಒಂದು ರೂಪದಿಂದ ಸನ್ನಿಹಿತಳಾಗಿದ್ದಳು. ಆ ರೂಪಕ್ಕೆ ವೇದವತಿಯೆಂಬ ಹೆಸರು. ಮುಂದೆ ರಾವಣನ ಸಂಹಾರವಾದ ಮೇಲೆ ರಾಮದೇವರು ಸೀತಾಕೃತಿಯನ್ನು ಅಗ್ನಿಪ್ರವೇಶ ಮಾಡುವಂತೆ ಹೇಳಿದರು. ತರುವಾಯ ಆ ಅಗ್ನಿಯಿಂದ ಕೈಲಾಸಕ್ಕೆ ಹೋಗಿರುವ ಸೀತಾದೇವಿಯೂ ಬಂದಳು. ಆಕೃತಿಯಲ್ಲಿ ಸನ್ನಿಹಿತವಾಗಿದ್ದ ವೇದವತಿಯೆಂಬ ರೂಪದಿಂದಲೂ ಬಂದಳು. ಆಗ ರಾಮದೇವಿಯರು ಸೀತಾದೇವಿಯೊಡನೆ ನಿನ್ನಂತೆ ಇರುವ ಇವಳು ಯಾರು ಎಂದು ಕೇಳಿದರು. ಆಗ ಸೀತಾದೇವಿಯು ಇವಳೇ ವೇದವತಿಯು. ನನಗಾಗಿ ರಾವಣನ ಮನೆಯಲ್ಲಿ ದುಃಖವನ್ನು ಅನುಭವಿಸಿದಳು. ಇವಳನ್ನು ನೀವು ಮದುವೆಯಾಗಬೇಕು' ಎಂದಳು. ಅದಕ್ಕೆ ರಾಮದೇವರು 'ನಾನೀಗ ಏಕಪತ್ನೀವ್ರತ ವುಳ್ಳವನಾಗಿರುವೆನು. ಇನ್ನೊಂದು ಅವತಾರದಲ್ಲಿ ಇಪ್ಪತ್ತೆಂಟನೇ ಕಲಿಯುಗದಲ್ಲಿ ನಾನು ನಿನ್ನ ಮಾತಿನಂತೆ ಇವಳನ್ನು ಅಂಗೀಕರಿಸುವೆನು. ಅಷ್ಟರವರೆಗೆ ಈ ವೇದವತಿಯು ಬ್ರಹ್ಮದೇವರಿಂದ ಪೂಜಿತಳಾಗಿ ಬ್ರಹ್ಮಲೋಕದಲ್ಲಿ ಇರಲಿ ಎಂದರು. ರಾಮದೇವರ ಮಾತನ್ನು ಕೇಳಿ ವೇದವತಿಯು ಬ್ರಹ್ಮಲೋಕಕ್ಕೆ ಹೋದಳು. ಅವಳೇ ಈಗ ಪದ್ಮಾವತಿಯಾಗಿ ಅವತರಿಸಿರುವಳು'' ಎಂದು ಹೇಳಿದನು.

ಭಗವಂತನ ಮಾತನ್ನು ಕೇಳಿ ಬಕುಳೆಯು 'ನಾನು ಆಕಾಶರಾಜನ ಮನೆಗೆ ಹೋಗುವೆನೆಂದಳು. ತರುವಾಯ ಭಗವಂತನು ಹಾಸಿಗೆಯಿಂದ ಎದ್ದು ಆನಂದ ದಿಂದ ಬಕುಳೆಯು ತಂದಿರುವ ಅನ್ನವನ್ನು ಭೋಜನ ಮಾಡಿದನು. ಪುಷ್ಪಾದಿಗಳಿಂದ ಅಲಂಕರಿಸಿಕೊಂಡನು. ತರುವಾಯ ಭಗವಂತನ ಇಚ್ಛಾಮಾತ್ರದಿಂದ ಉಂಟಾ ಗಿರುವ ಕುದುರೆಯ ಮೇಲೆ ಕೂತುಕೊಂಡು ದಾರಿಯನ್ನು ಕೇಳಿದಳು. ಭಗವಂತನು 'ಇದೇ ದಾರಿಯಿಂದ ಬೆಟ್ಟದಿಂದ ಕೆಳಗೆ ಇಳಿದು ಹೋಗು. ಕಪಿಲತೀರ್ಥದಲ್ಲಿ ಸ್ನಾನಮಾಡಿದವಳಾಗಿ ಕಪಿಲೇಶ್ವರನಿಗೆ ನಮಸ್ಕರಿಸಿ ಬಾಲಕನಾದ ಕಲ್ಯಾಣವನ್ನು ಅಪೇಕ್ಷಿಸುವ ಶ್ರೀನಿವಾಸನು ನನ್ನನ್ನು ಕಳುಹಿಸಿರುವನು. ಅವನ ಅಭೀಷ್ಟವನ್ನು ಸಲ್ಲಿಸಬೇಕು ಎಂದು ಪ್ರಾರ್ಥಿಸುವವಳಾಗು. ಅಲ್ಲಿಂದ ಪದ್ಮಸರೋವರದ ತೀರಕ್ಕೆ

ಹೋಗು. ಅಲ್ಲಿ ರಾಮಕೃಷ್ಣರು ಇರುವರು. ಅವರಿಗೂ ಪದ್ಮಸರೋವರದಲ್ಲಿ ಬೆಳೆದಿರುವ ಕಮಲಪುಷ್ಪಗಳಿಂದ ಪೂಜಿಸು. ಅವರು ನನ್ನ ಸಹೋದರರು. ಆಮೇಲೆ ಸುವರ್ಣಮುಖರೀ ನದಿಯನ್ನು ದಾಟಿ ಸುಖವಾಗಿ ಹೋಗು. ಸಮಯೋಚಿತವಾಗಿ ಮಾಡಬೇಕಾದ್ದನ್ನೆಲ್ಲಾ ಮಾಡು' ಎಂದು ಹೇಳಿದನು.

ಈರೀತಿಯಾಗಿ ಭಗವಂತನಿಂದ ಆಜ್ಞಪ್ತಳಾದ ಬಕುಳಾದೇವಿಯು ಭಗವಂತನು ಹೇಳಿದಂತೆಯೇ ಹೊರಟುಹೋದಳು. ಸುವರ್ಣಮುಖರೀನದಿಯನ್ನು ದಾಟಿ ಅಗಸ್ತ್ಯಾಶ್ರಮಕ್ಕೆ ಹೋಗಿ ಅಲ್ಲಿ ಪದ್ಮಾವತೀದೇವಿಯರ ಸಖಿಯರನ್ನು ನೋಡಿದಳು. ಶಿವಾಲಯದಲ್ಲಿ ಶಿವನನ್ನು ನೋಡಲಿಕ್ಕೆ ಬಂದಿರುವ ಆ ಕನ್ಯೆಯರನ್ನು ನೋಡಿ ಬಕುಳೆಯು ನೀವು ಯಾರು ಎಂದು ಕೇಳಿದಳು.

ಅದಕ್ಕೆ ಅವರು 'ನಾವು ಯಾವಾಗಲೂ ಆಕಾಶರಾಜನ ಬಳಿಯಲ್ಲಿ ಇರುವವರು. ನಿನ್ನೆ ದಿವಸದಲ್ಲಿ ರಾಜಪುತ್ರಿಯಾದ ಪದ್ಮಾವತಿಯ ಬಳಿಗೆ ಮನ್ಮಥನಂತೆ ಇದ್ದ ಕಿರಾತರ ವೇಷವುಳ್ಳ ಒಬ್ಬ ಪುರುಷನು ಕುದುರೆಯ ಮೇಲೆ ಕೂತುಕೊಂಡು ಬಂದದ್ದನ್ನು ನಾವು ನೋಡಿದೆವು. ಅವನನ್ನು ನೋಡಿ ಪದ್ಮಾವತಿಯು ಅಂಜಿಹೋದಳು. ಜ್ವರದಿಂದ ಪೀಡಿತಳಾದಳು. ಅವಳ ತಾಪದ ಪರಿಹಾರಕ್ಕಾಗಿ ರಾಜರ ಅಪ್ಪಣೆಯಿಂದ ನಾವು ಅಗಸ್ತ್ಯೇಶ್ವರನಿಗೆ ಅಭಿಷೇಕ ಮಾಡಿಸುವುದಕ್ಕಾಗಿ ನಾವು ಇಲ್ಲಿಗೆ ಬಂದಿರುವೆವು. ಈಗ ನಿನ್ನನ್ನು ನೋಡುತ್ತಿರುವೆವು' ಎಂದರು.

ಬಕುಳೆಯು 'ಆ ಕಿರಾತನು ಯಾರು? ನಿಮಗೆ ಹೇಗೆ ನೋಡಲಿಕ್ಕೆ ಸಿಕ್ಕಿದನು? ಅವನ ವೃತ್ತಾಂತವನ್ನು ಹೇಳಿರಿ' ಎಂದು ಕೇಳಿದಳು.

ಅದಕ್ಕೆ ಕನ್ಯೆಯರು 'ನಾವು ಪದ್ಮಾವತಿಯಿಂದ ಸಹಿತರಾಗಿ ಹೂವನ್ನು ಕೊಯ್ಯಲಿಕ್ಕೆ ಹೋದೆವು. ಆಗ ಅಲ್ಲಿಗೆ ವಿಚಿತ್ರವಾದ ಕುದುರೆಯ ಮೇಲೆ ಕೂತುಕೊಂಡು ಆ ಕಿರಾತನು ಬಂದನು. ಅವನು ನಮ್ಮೊಡನೆ ಕೆಟ್ಟಮಾತುಗಳನ್ನು ಆಡಿದನು. ಅದನ್ನು ಕೇಳಿ ರಾಜಪುತ್ರಿಯೂ ಪ್ರತಿ ಮಾತಾಡಿದಳು. ಇಬ್ಬರಿಗೂ ಜಗಳವಾಯಿತು. ಜಗಳದಲ್ಲಿ ಕುದುರೆಯು ಕಲ್ಲುಪೆಟ್ಟಿನಿಂದ ಸತ್ತುಬಿದ್ದಿತು. ಆ ಕಿರಾತನು ಕುದುರೆಯನ್ನು ಬಿಟ್ಟು ಉತ್ತರದಿಕ್ಕಿಗೆ ಹೋದನು. ಕಿರಾತನು ಹೊರಟುಹೋದಮೇಲೆ ಪದ್ಮಾವತಿಯು ಮೂರ್ಛಿತಳಾಗಿ ಬಿದ್ದಳು. ತರುವಾಯ ನಾವು ಅವಳನ್ನು ಮೇನೆಯಲ್ಲಿ ಮಲಗಿಸಿ ಮನೆಗೆ ಕರೆದುಕೊಂಡು ಹೋದೆವು. ಆಕಾಶರಾಜನು ಮಗಳನ್ನು ನೋಡಿ ಅಳುವವನಾದನು. ಮಗನನ್ನು ಕಳುಹಿಸಿ

ಬೃಹಸ್ಪತ್ಯಾಚಾರ್ಯರನ್ನು ತರಿಸಿದನು. ಬಂದ ಆಚಾರ್ಯರಿಗೆ ಸತ್ಕರಿಸಿ ಮಗಳ ವಿಷಯವನ್ನು ಕೇಳಿದನು. ಆಗ ಬೃಹಸ್ಪತ್ಯಾಚಾರ್ಯರು 'ರಾಜನೇ! ನಿನ್ನ ಮಗಳ ವಿಷಯವನ್ನು ಹೇಳುವೆನು. ನಿನ್ನ ಮಗಳು ಹೂವನ್ನು ಕೊಯ್ಯಲಿಕ್ಕೆ ಹೋಗಿದ್ದಳು. ಅಲ್ಲಿ ಒಬ್ಬ ಪುರುಷನನ್ನು ನೋಡಿ ಭಯಪಟ್ಟಿರುವಳು. ಅದಕ್ಕೆ ಶಾಂತಿಯನ್ನು ನಿನಗೆ ಹೇಳುವೆನು. ಅಗಸ್ತ್ಯೇಶರನಿಗೆ ಏಕಾದಶರುದ್ರಗಳಿಂದ ಅಭಿಷೇಕ ಮಾಡಿಸು! ಎಂದು ಹೇಳಿಹೋದರು. ತರುವಾಯ ಆಕಾಶರಾಜನು ಅಭಿಷೇಕ ಮಾಡಿಕೊಂಡು ಬರಲಿಕ್ಕೆ ಬ್ರಾಹ್ಮಣರಿಗೆ ಆಜ್ಞಾಪಿಸಿದನು. ನಾವು ಅಭಿಷೇಕಕ್ಕೆ ಬೇಕಾದ ಸಾಮಗ್ರಿಗಳನ್ನು ಹಿಡಿದುಕೊಂಡು ಬ್ರಾಹ್ಮಣರಿಂದ ಸಹಿತರಾಗಿ ಇಲ್ಲಿಗೆ ಬಂದಿರುವೆವು. ರಾಜಪುತ್ರಿಯು ಜ್ವರತಾಪದಿಂದ ಮನೆಯಲ್ಲಿ ಮಲಗಿರುವಳು. ಬೃಹಸ್ಪತ್ಯಾಚಾರ್ಯರಿಂದ ಆಜ್ಞಪ್ತರಾಗಿ ಬ್ರಾಹ್ಮಣರೂ ಬಂದಿರುವರು. ನಾವೂ ಅಲ್ಲಿಂದಲೇ ಬಂದಿರುವೆವು. ನೀನು ಎಲ್ಲಿಗೆ ಹೋಗುವೆ? ಇಲ್ಲಿಗೆ ಯಾಕೆ ಬಂದಿರುವೆ?' ಎಂದು ಕೇಳಿದರು.

ಅದಕ್ಕೆ ಬಕುಳೆಯು 'ನಿಮಗೆ ಭಗವಂತನ ಮಹಿಮೆಯು ತಿಳಿಯದು. ಭಗವಂತನನ್ನು ಮಗನೆಂದು ತಿಳಿದುಕೊಂಡು ವ್ಯರ್ಥವಾಗಿ ದೇಹವನ್ನು ಧರಿಸಿದೆನು. ನಾನು ಶ್ರೀನಿವಾಸದೇವರ ದಾಸಿಯು. ರಾಜಪತ್ನಿಯಾದ ಧರಣೀದೇವಿಯ ಬಳಿಯಲ್ಲಿ ಸ್ವಲ್ಪ ಅಗತ್ಯಕಾರ್ಯವಿದೆ. ಆದರೆ ಪರಸ್ಥಳದವರು ನಾರಾಯಣಪುರಕ್ಕೆ ಪ್ರವೇಶಿಸುವುದು ಶ್ರಮಸಾಧ್ಯವು. ಆದರೆ ನಿಮ್ಮ ಸಹಾಯದಿಂದ ಪ್ರವೇಶಿಸುವೆನು' ಎಂದು ಹೇಳಿದಳು.



# ಭಗವಂತನ ಕೊರವಂಜಿರೂಪಧಾರಣೆ [1]

ಈ ಪ್ರಕಾರವಾಗಿ ಶ್ರೀಭಗವಂತನು ಬಕುಳೆಯನ್ನು ಕಳುಹಿಸಿದಮೇಲೆ ಅವಳಲ್ಲಿ ವಿಶ್ವಾಸವನ್ನು ಹೊಂದಲಿಲ್ಲ. ಹೇಗೆ ಒಬ್ಬ ಮಗನಿದ್ದರೆ ಮಗನೇ ಇಲ್ಲದ ಪ್ರಾಯವೋ, ಒಂದು ಕಣ್ಣು ಇದ್ದರೆ ಕಣ್ಣೇ ಇಲ್ಲದ ಪ್ರಾಯವೋ ಹಾಗೆಯೇ ಸ್ತ್ರೀಯರು ಮಾಡಿದ ಕಾರ್ಯವೂ ಮಾಡದೆ ಇರುವ ಪ್ರಾಯವೇ? ಆದುದರಿಂದ ನಾನೇ ಕಾರ್ಯವನ್ನು ಮಾಡಲಿಕ್ಕೆ ಹೋಗುವೆನು ಎಂದು ಯೋಚಿಸಿ ಭಗವಂತನು ತಾನು ಸ್ತ್ರೀರೂಪವನ್ನು ಧರಿಸಿದನು. ಹರಕುಸೀರೆಯನ್ನು ಉಟ್ಟುಕೊಂಡು ಹರಕು ಕುಪ್ಪಸವನ್ನು ತೊಟ್ಟು

1. ಭ.ಪು.ಅ.8-9

ಕೊಂಡನು. ಬ್ರಹ್ಮದೇವರನ್ನು ಚಿಕ್ಕಮಗುವನ್ನಾಗಿ ಮಾಡಿಕೊಂಡನು. ರುದ್ರದೇವರನ್ನು ಊರುಗೋಲನ್ನಾಗಿ ಮಾಡಿಕೊಂಡನು. ಬ್ರಹ್ಮಾಂಡವನ್ನು ಬುಟ್ಟಿಯನ್ನಾಗಿ ಮಾಡಿಕೊಂಡನು. ಕೂದಲನ್ನು ಬಿಚ್ಚಿಕೊಂಡು ಐವತ್ತು ವರ್ಷದ ಮುದುಕಿಯ ರೂಪವನ್ನು ಧರಿಸಿದನು. ಗುರುಗುಂಜಿಯಿಂದಲೂ ಶಂಖಗಳಿಂದಲೂ ಮಾಡಿದ ಸರಗಳನ್ನು ಹಾಕಿಕೊಂಡು ಬುಟ್ಟಿಯನ್ನು ತಲೆಯಮೇಲೆ ಇಟ್ಟುಕೊಂಡು ಜೋಲುವ ಹೊಟ್ಟೆಯುಳ್ಳವನಾಗಿ ಜೋಲುವ ಕಿವಿ ಸ್ತನಗಳುಳ್ಳವನಾಗಿ ಬಂದನು. ಬಾಯಿಯಲ್ಲಿ ಹಲ್ಲುಗಳೇ ಇರಲಿಲ್ಲ. ಬ್ರಹ್ಮದೇವರನ್ನು ಏಳು ತಿಂಗಳ ಮಗುವನ್ನಾಗಿ ಮಾಡಿಕೊಂಡನು. ಆ ಮಗುವು ಅಳುತ್ತಾ ಇತ್ತು. ತುಂಬಾ ಕೃಶವಾಗಿತ್ತು. ಉದ್ದವಾದ ಕೈಕಾಲುಗಳು ಇದ್ದವು. ಮಗುವನ್ನು ವಸ್ತ್ರದಲ್ಲಿ ಕಟ್ಟಿಕೊಂಡು ಕೈಯಲ್ಲಿ ಕೋಲನ್ನು ಹಿಡಿದುಕೊಂಡು ಕುಣಿಯುತ್ತಾ ನಾರಾಯಣಪುರಕ್ಕೆ ಬಂದನು. ನಾನು ಮಕ್ಕಳನ್ನು ಕೊಡುವೆನು, ಬಂಧುಗಳನ್ನು ಕೊಡುವೆನು, ಪತಿಗಳನ್ನು ಕೊಡುವೆನು ಎಂದು ಗರ್ಜನ ಮಾಡುತ್ತಾ ಬಂದನು.

ಈರೀತಿಯಾಗಿ ಕೊರವಂಜಿ ರೂಪದಿಂದ ಬಂದಿರುವ ಭಗವಂತನನ್ನು ನೋಡಿ ಒಬ್ಬಳು ಹೆಂಗಸು ರಾಣಿಯೊಡನೆ 'ನರನಾರಾಯಣಾಶ್ರಮದಿಂದ ಧರ್ಮ ದೇವತೆಯು ಬಂದಿರುವಳು. ವಯಸ್ಸಾದವಳು. ಮಿತವಾಗಿ ಮಾತಾಡುವವಳಂತೆ ಕಾಣಸುತ್ತಾಳೆ. ಎಲ್ಲರ ಮನಸ್ಸಿನಲ್ಲೂ ಇರುವುದನ್ನು ಹೇಳುತ್ತೇನೆ ಎನ್ನುತ್ತಿದ್ದಾಳೆ. ಆದುದರಿಂದ ಅವಳನ್ನು ಕರೆಯುವವಳಾಗು' ಎಂದು ಹೇಳಿದಳು. ಅದನ್ನು ಕೇಳಿ ರಾಜಪತ್ನಿಯಾದ ಧರಣೀದೇವಿಯು ನಾನು ಭಾಗ್ಯವತಿಯಾದೆನು ಎಂದು ಹೇಳುತ್ತಾ ಧರ್ಮದೇವತೆಯನ್ನು ಕರೆದುಕೊಂಡು ಬರುವಂತೆ ಸಖಿಯನ್ನು ಕಳುಹಿಸಿದಳು–

ಸಖಿಯು ಬಂದು ಧರ್ಮದೇವತೆಯೊಡನೆ (ಕೊರವಂಜಿ ರೂಪವುಳ್ಳ ಪರಮಾತ್ಮನೊಡನೆ) ರಾಜಪತ್ನಿಯ ಬಳಿಗೆ ಬರಬೇಕೆಂದು ಹೇಳಲು ಆಗ ಧರ್ಮದೇವತೆಯು 'ನಾನು ದರಿದ್ರಳು. ರಾಜಪತ್ನಿಯು ಹಣವಂತಳು. ವಿನೋದವನ್ನು ಮಾಡಲಿಕ್ಕೆ ನನ್ನನ್ನು ಕರೆಯುವಳು. ನನ್ನನ್ನು ಅಪಹಾಸ ಮಾಡಬೇಕೆಂದು ಕರೆಯುವಳು. ಬೇರೇನು ಕಾರ್ಯವಿದೆ? ನನ್ನ ಹರಕು ವಸ್ತ್ರವನ್ನು ನೋಡಿ ನನ್ನ ಆಭರಣಗಳನ್ನೂ ಬುಟ್ಟಿಯನ್ನೂ ಅನ್ನವಿಲ್ಲದೆ ಇರುವ ಮಗುವನ್ನು ನೋಡಿ ನಗಬೇಕೆಂದು ನನ್ನನ್ನು ಕರೆಯುವಳು. ನಾನು ಬರಲಾರೆನು. ನನಗೆ ರಾಜಮಂದಿರದಲ್ಲಿ ಏನು ಕಾರ್ಯವಿದೆ?' ಎಂದು ಹೇಳಿದಳು.

ಆ ಮಾತನ್ನು ಕೇಳಿ ಸಖಿಯು ಧರ್ಮದೇವತೆಯ ಮಾತನ್ನು ಹೋಗಿ

ಧರಣೀದೇವಿಯ ಬಳಿಯಲ್ಲಿ ಹೇಳಿದಳು. ಆಗ ಧರಣೀದೇವಿಯೇ ಧರ್ಮ ದೇವತೆಯ ಬಳಿಗೆ ಬಂದಳು. 'ಅಮ್ಮ! ಮಹಾನುಭಾವಳೇ! ನೀನು ಸಾಕ್ಷಾತ್ ಧರ್ಮದೇವತೆಯಾಗಿರುವಿ. ದೈವೇಚ್ಛೆಯಿಂದ ಇಲ್ಲಿಗೆ ಬಂದಿರುವಿ. ನನಗೆ ಮಂಗಳವನ್ನು ಉಂಟುಮಾಡುವವಳು. ನನ್ನ ಮನಸ್ಸಿನ ಅಭೀಷ್ಟವನ್ನು ಹೇಳಬೇಕು' ಎಂದು ಹೇಳಿದಳು.

ಧರ್ಮದೇವತೆಯು 'ಅಮ್ಮ ರಾಜಪತ್ನಿ! ನನ್ನ ಮಾತು ತುಂಬಾ ಕಠಿಣವಾದದ್ದು. ನಾನು ಹೇಳಿದ ಮಾತು ಸುಳ್ಳಾದರೆ ನನ್ನನ್ನು ಊರ ಹೊರಗೆ ಮಾಡಿ ನನ್ನ ನಾಲಿಗೆಯನ್ನು ಕತ್ತರಿಸಬೇಕು. ನನ್ನ ಸ್ವಾಮಿಯು ನರನಾರಾಯಣನು. ಅವನ ವೀರ್ಯದಿಂದ ಹುಟ್ಟಿದವನು. ಈ ಮಗನು ಇವನ ಹೆಸರು ಪ್ರಜಾಪತಿಯೆಂದು ನನ್ನ ಯಜಮಾನರಿಂದ ಆಜ್ಞಪ್ತಳಾಗಿ ನಿನಗೋಸ್ಕರ ಬಂದಿರುವೆನು. ನಾನು ಕಳೆದು ಹೋದದ್ದನ್ನು ಈಗ ಇರುವುದನ್ನೂ ಇನ್ನು ಮುಂದೆ ನಡೆಯುವುದನ್ನೂ ಎಲ್ಲವನ್ನೂ ಹೇಳುವೆನು' ಎಂದು ಹೇಳಿದಳು.

ರಾಜಪತ್ನಿಯು ಒಳ್ಳೇ ಮಾತುಗಳಿಂದ ಸಮಾಧಾನಪಡಿಸಿ ಧರ್ಮದೇವತೆ ಯನ್ನು ಮನೆಗೆ ಕರೆದುಕೊಂಡು ಹೋದಳು. ಸಿಂಹಾಸನದಲ್ಲಿ ಕೂತುಕೊಳ್ಳಿಸಿದಳು. ಧರಣೀದೇವಿಯೊಡನೆ 'ಅಮ್ಮ! ನೀನು ಮಂಗಳಸ್ನಾನವನ್ನು ಮಾಡು. ಅಲಂಕಾರ ಮಾಡಿಕೊ. ಗುರುಗಳಿಗೂ ದೇವರಿಗೂ ನಮಸ್ಕಾರ ಮಾಡು ಎಂದು ಹೇಳಿದಳು. ಧರಣೀದೇವಿಯು ಹಾಗೆಯೇ ಮಾಡಿದಳು.

ಆಮೇಲೆ ಧರಣೀದೇವಿಯು 'ಅಮ್ಮಾ! ಇನ್ನು ನಾನೇನು ಮಾಡಬೇಕು' ಎಂದು ಕೇಳಿದಳು. ಧರ್ಮದೇವತೆಯು 'ದೇವತೆಗಳಿಗೆ ಪ್ರೀತಿಗೆ ಕಾರಣವಾದ ವಾಯನದಾನವನ್ನು ಕೊಡು' ಎಂದಳು. ರಾಣಿಯು ಬಂಗಾರದ ಮೊರದಲ್ಲಿ ಮುತ್ತುಗಳನ್ನು ತುಂಬಿಸಿಕೊಂಡು ಬಂದು ಮುಂದೆ ಇಟ್ಟು 'ಅಮ್ಮ! ಸತ್ಯವನ್ನು ಹೇಳು. ನನ್ನ ದುಃಖವನ್ನು ಪರಿಹರಿಸು' ಎಂದು ಹೇಳಿದಳು.

ಆಗ ಧರ್ಮದೇವತೆಯು 'ಅಮ್ಮ! ಸತ್ಯವನ್ನು ಹೇಳುತ್ತೇನೆ. ನನ್ನ ಮಗುವಿಗೆ ಒಂದಿಷ್ಟು ಅನ್ನವನ್ನು ಕೊಡು. ಹಗಲು ಮಾಡಿದ್ದೋ ರಾತ್ರಿ ಮಾಡಿದ್ದೋ ಯಾವುದೂ ಆಗಬಹುದು. ಚೆಂದಾಗಿ ಬೆಂದಿರಲಿ' ಎಂದಳು. ಅದನ್ನು ಕೇಳಿ ಕೂಡಲೇ ರಾಣಿಯು ಬಂಗಾರದ ತಟ್ಟೆಯಲ್ಲಿ ಹಾಲನ್ನವನ್ನು ತಂದುಕೊಟ್ಟಳು. ಮಗುವು (ಬ್ರಹ್ಮದೇವರು) ಬಂಗಾರದ ತಟ್ಟೆಯಲ್ಲಿದ್ದ ಆ ಮಾನುಷಾನ್ನವನ್ನು ನೋಡಿ ತಿನ್ನಲೇ ಇಲ್ಲ. ಅಳಲಿಕ್ಕೆ ಆರಂಭಿಸಿತು. ಧರ್ಮದೇವತೆಯು ಅಳುತ್ತಿರುವ ಕೂಸನ್ನು ನೋಡಿ ಬೈದು

ಬಡೆದಳು. 'ಬಡವ! ದುರಾಚಾರಿ! ಗೆಡ್ಡೆ ಹಣ್ಣು ತಿನ್ನುವವನು. ರಾಜರಿಗಾಗಿ ನಿರ್ಮಿತವಾದ ಈ ಅನ್ನವನ್ನು ಯಾಕೆ ತಿನ್ನಲಾರೆ' ಎಂದು ಹೇಳಿ ರಾಣಿಯೊಡನೆ 'ಅಮ್ಮ! ಯಾವಾಗಲೂ ಹೀಗೆಯೇ ಅಳುತ್ತಿರುವುದು. ನಾನು ಏನು ಮಾಡಲಿ ಹೇಳು' ಎಂದು ಹೇಳಿ ಆ ಹಾಲನ್ನು ತಾನೇ ಭೋಜನಮಾಡಿದಳು. 'ನನ್ನ ಹೊಟ್ಟೆಗೆ ಹೋದ ಅನ್ನವೂ ಮಗುವು ಹಾಲು ಕುಡಿಯುವ ಪ್ರಯುಕ್ತ ಅದಕ್ಕೇನೇ ಹಿತಕ್ಕಾಗುವುದು' ಎನ್ನುತ್ತಾ ಬಂಗಾರದ ತಟ್ಟೆಯಲ್ಲಿ ಇದ್ದ ಅನ್ನವನ್ನೆಲ್ಲಾ ಊಟಮಾಡಿದಳು. ಆಮೇಲೆ ರಾಣಿಯೊಡನೆ 'ಸತ್ಯವನ್ನು ಹೇಳುವೆನು. ಒಂದಿಷ್ಟು ತಾಂಬೂಲವನ್ನು ಕೊಟ್ಟುಬಿಡು' ಎಂದಳು. ಧರಣಿದೇವಿಯು ಯಾಲಕ್ಕಿ, ಪಚ್ಚಕರ್ಪೂರ, ಅಡಿಕೆ, ಒಳ್ಳೇ ವೀಳ್ಯದೆಲೆ ಇವುಗಳನ್ನೆಲ್ಲಾ ಕೊಟ್ಟಳು. ಧರ್ಮದೇವತೆಯು ತಾಂಬೂಲವನ್ನು ಭಕ್ಷಿಸಿ ಮಗುವನ್ನು ತೊಡೆಯ ಮೇಲೆ ಕೂತುಕೊಳ್ಳಿಸಿಕೊಂಡು ಮುಂದೆ ಬುಟ್ಟಿಯನ್ನು ಇಟ್ಟುಕೊಂಡು ಕಾಲುಗಳನ್ನು ನೀಡಿ ಕೂತಿದ್ದಳು.

ಈರೀತಿ ಕೊರವಂಜಿ ರೂಪದಿಂದ ಇದ್ದ ಶ್ರೀಭಗವಂತನನ್ನು ನೋಡಲಿಕ್ಕೆ ಆಕಾಶಮಾರ್ಗದಲ್ಲಿ ವಿಮಾನಗಳಲ್ಲಿ ಕೂತುಕೊಂಡು ದೇವತೆಗಳು ಬಂದರು. ದೇವತೆಗಳೆಲ್ಲರೂ ಪರಸ್ಪರವಾಗಿ 'ಈ ರಾಜಪತ್ನಿಯು ಏನು ಪುಣ್ಯ ಮಾಡಿರುವಳು? ಲಕ್ಷ್ಮೀಪತಿಯಾದ ಭಗವಂತನು ಇವಳೊಡನೆ ಪ್ರಾಕೃತಪುರುಷನಂತೆ ಕ್ರೀಡಿಸುತ್ತಿರುವನಲ್ಲಾ' ಎಂದು ಪ್ರಶಂಸಿಸುತ್ತಿದ್ದರು.

ಧರ್ಮದೇವತೆಯು ಭೋಜನವಾದ ಮೇಲೆ ಲೋಕದ ಕೊರವಂಜಿಗಳಂತೆ ಶ್ರೀಭಗವಂತನನ್ನು ಆರಂಭಿಸಿ ಎಲ್ಲಾ ದೇವತೆಗಳ ಹೆಸರನ್ನು ಹೇಳಿದಳು. ಕೊನೆ ಕೊಲ್ಲಾಪುರವಾಸಿಯಾದ ಮಹಾಲಕ್ಷ್ಮೀ! ಪರದೇಶಿಯಾದ ನನ್ನನ್ನು ರಕ್ಷಿಸು ಎಂದಳು. ಅನಂತರದಲ್ಲಿ ಮುತ್ತಿನ ಮೂರು ರಾಶಿಗಳನ್ನು ಮಾಡಿಟ್ಟು ಇವುಗಳಲ್ಲಿ ಯಾವುದಾದರೊಂದು ರಾಶಿಯನ್ನು ಮುಟ್ಟು ಎಂದು ರಾಣಿಯೊಡನೆ ಹೇಳಿದಳು. ರಾಣಿಯು ಹಾಗೆ ಒಂದು ರಾಶಿಯನ್ನು ಮುಟ್ಟಲು ಧರ್ಮದೇವತೆಯು ಹೇಳಲಾರಂಭಿಸಿದಳು.

'ದೇವಿ! ನಿನ್ನ ಮಗಳ ದೇಹವು ಕೃಶವಾಗಲಿಕ್ಕೆ ಕಾರಣವನ್ನು ಹೇಳುವೆನು. ಒಬ್ಬ ಪುರುಷನಿಂದ ಅವಳಿಗೆ ಉಪದ್ರವವು ಬಂದಿರುವುದು. ನಿನ್ನೆ ದಿವಸದಲ್ಲಿ ನಿನ್ನ ಮಗಳು ಕುದುರೆಯ ಮೇಲೆ ಕೂತುಕೊಂಡು ಬಂದ ಒಬ್ಬ ಪುರುಷನನ್ನು ನೋಡಿ ಮೋಹಿತಳಾಗಿ ಕಾಮಜ್ವರದಿಂದ ಪೀಡಿತಳಾಗಿದ್ದಾಳೆ. ಅಮ್ಮ ಕೇಳು. ವಿಸ್ತಾರವಾಗಿ ಹೇಳುತ್ತೇನೆ. ನನ್ನ ಬುಟ್ಟಿಯನ್ನು ಕೂಸನ್ನೂ ನನ್ನ ಯಜಮಾನರಾದ

ಬದರೀನಾರಾಯಣನನ್ನು ಆಣೆ ಇಟ್ಟು ಹೇಳುತ್ತೇನೆ. ನಿನ್ನ ಮಗಳು ವೇಂಕಟಾಧಿ ೕಶನಾದ ಆ ಪುರುಷನನ್ನು ಅಪೇಕ್ಷಿಸುವಳು. ಅವನಿಗೆ ಕೊಟ್ಟೇ ನಿನ್ನ ಮಗಳ ಮದುವೆಯು ಏರ್ಪಡುತ್ತದೆ. ನನ್ನ ಆಣೆಯಿಟ್ಟು ಹೇಳುತ್ತೇನೆ. ನನ್ನ ಮಾತು ಸತ್ಯವಾದದ್ದು. ಅಮ್ಮ! ಸತ್ಯ ಹೇಳುತ್ತೇನೆ. ಒಂದಿಷ್ಟು ತಾಂಬೂಲವನ್ನು ಕೊಡು''.

ಧರಣೀದೇವಿಯು ಪುನಃ ತಾಂಬೂಲವನ್ನು ಕೊಟ್ಟಳು. ಧರ್ಮದೇವತೆಯು ಅದನ್ನು ತಿಂದು ಪುನಃ ಯೋಚನೆ ಮಾಡುವಂತೆ ನಟಿಸುತ್ತಾ ''ಕುದುರೆಯ ಮೇಲೆ ಕೂತುಕೊಂಡು ಬಂದ ಪುರುಷನು ಕಿರಾತರೂಪಧಾರಿಯಾದವನು. ಮನ್ಮಥನ ಮನಸ್ಸನ್ನೇ ಅಪಹರಿಸುವವನು. ಅವನನ್ನು ನೋಡಿ ನಿನ್ನ ಮಗಳು ಕಾಮಜ್ವರದಿಂದ ಪೀಡಿತಳಾಗಿರುವಳು. ಆದರಿಂದಲೇ ಅವಳು ಕೃಶಳಾಗಿರುವಳು. ಆ ಕಾಮಜ್ವರದ ಶಾಂತಿಗೋಸ್ಕರ ಅವನಿಗೇನೇ ನಿನ್ನ ಮಗಳನ್ನು ಕೊಟ್ಟು ಮದುವೆಮಾಡು.'' ಎಂದು ಹೇಳಿದಳು. ಧರಣೀದೇವಿಯು 'ನನ್ನ ಮಗಳ ಮನಸ್ಸನ್ನು ಅಪಹರಿಸಿದ ಆ ಕಿರಾತರೂಪಿಯು ಎಲ್ಲಿ ಇದ್ದಾನೆ? ಅವನ ಹೆಸರೇನು? ಎಲ್ಲವನ್ನೂ ಹೇಳು. ನಿನಗೆ ಬೇಕಾದದ್ದನ್ನು ಕೊಡುತ್ತೇನೆ' ಎಂದಳು.

ಧರ್ಮದೇವತೆಯು ವೈಕುಂಠದಲ್ಲಿರುವ ಶ್ರೀಹರಿಯೇ ವೇಂಕಟಾಚಲದಿಂದ ಶ್ರೀನಿವಾಸನೆಂಬ ಹೆಸರಿನಿಂದ ಇದ್ದಾನೆ. ಅವನು ವಿದ್ಯಾವಂತನು. ಹಣವಂತನು. ಬಲಿಷ್ಠನು. ಅವನ ಕುದುರೆಗೆ ನಿನ್ನ ಮಗಳು ಕಲ್ಲಿನಿಂದ ಬಡಿದಳು. ಇದರಿಂದ ಅದು ಸತ್ತು ತೋಟದ ದ್ವಾರದಲ್ಲಿ ಬಿದ್ದಿದೆ. ನಿನ್ನ ಮಗಳು ಸಖಿಯರ ಹತ್ತಿರ ಈ ವಿಷಯವನ್ನು ಕೇಳು- ರಾಜಪುತ್ರಿಯೆಂಬ ಗೌರವದಿಂದ ಆ ಶ್ರೀನಿವಾಸನು ಈ ಕಾರ್ಯವನ್ನು ಕ್ಷಮಿಸಿದನು. ನನ್ನ ಮಾತು ಸತ್ಯವಾದದ್ದು. ಆ ಶ್ರೀನಿವಾಸನಿಗೇ ನಿನ್ನ ಮಗಳನ್ನು ಕೊಟ್ಟು ಮದುವೆ ಮಾಡಿದರೆ ಸುಖವನ್ನು ಹೊಂದುವಿ. ಇಲ್ಲದಿದ್ದರೆ ದುಃಖವನ್ನು ಹೊಂದುವಿ. ನನ್ನ ಮಾತು ಸುಳ್ಳಾಗುವುದಿಲ್ಲ. ನೀನು ಅವನಿಗೆ ಮದುವೆ ಮಾಡಿಕೊಡದೆ ಇದ್ದರೆ ನಿನ್ನ ಮಗಳು ಈ ದಿನವೇ ಸತ್ತೇ ಹೋಗುವಳು. ಸಂಶಯವೇ ಇಲ್ಲ' ಎಂದಳು.

ಅದನ್ನು ಕೇಳಿ ಧರಣೀದೇವಿಯು 'ಯಾಕಮ್ಮಾ ಹೀಗೆ ಕೆಟ್ಟಮಾತನ್ನು ಆಡುವಿ ಎಂದಳು. ಧರ್ಮದೇವತೆಯು 'ಅಮ್ಮ! ನಾನು ಮೊದಲೇ ಹೇಳಲಿಲ್ಲವೇ? ನನ್ನ ಮಾತು ಯಾವಾಗಲೂ ಕಠಿಣ. ಸುಳ್ಳಾಗಲಾರದು' ಎಂದಳು. ಅದನ್ನು ಕೇಳಿ ಅಂಜಿಕೊಂಡು ಧರಣೀದೇವಿಯು 'ವರನ ಕಡೆಯವರು ಒಬ್ಬರೂ ಬರದೆ ಮಗಳನ್ನು ನಾವಾಗಿ ಹೇಗೆ ಕೊಡಲಿಕ್ಕೆ ಆಗುತ್ತದೆ' ಎಂದು ಹೇಳಿದಳು. ಅದಕ್ಕೆ

ಧರ್ಮದೇವತೆಯು 'ಆ ಯೋಚನೆಯು ನಿನಗೆ ಬೇಡ. ಇನ್ನು ಒಂದು ಗಳಿಗೆಯಾದ ಮೇಲೆ ಒಬ್ಬ ಮುದುಕಿಯು ಬರುತ್ತಾಳೆ. ನನ್ನ ಮಾತಿನ ಮೇಲೆ ವಿಶ್ವಾಸವಿಟ್ಟು ನಿನ್ನ ಗಂಡನಾದ ರಾಜನಿಗೂ ಅವನ ತಮ್ಮನಿಗೂ ಇತರ ಬಂಧುಗಳಿಗೂ ತಿಳಿಸು. ಒಳ್ಳೇ ಮಾರ್ಗವನ್ನು ಹೇಳು. ನನ್ನ ಎದುರಲ್ಲೇ ಶ್ರೀನಿವಾಸನಿಗೆ ಕನ್ಯೆಯನ್ನು ಕೊಡುತ್ತೇನೆಂದು ಸಂಕಲ್ಪವನ್ನು ಮಾಡು' ಎಂದಳು.

ಧರಣೀದೇವಿಯು 'ಏನು ಮಾಡಿಯಾದರೂ ನನ್ನ ಮಗಳು ಬದುಕಿದ್ದರೆ ಸಾಕು. ವೇಂಕಟಗಿರಿಯಲ್ಲಿ ವಾಸಿಸುವ ಆ ಶ್ರೀನಿವಾಸನಿಗೇ ನನ್ನ ಮಗಳನ್ನು ಕೊಡುತ್ತೇನೆ' ಎಂದಳು.

ಧರ್ಮದೇವತೆಯು 'ಹಾಗಾದರೆ ನಿನ್ನ ಮಗಳು ಬದುಕುತ್ತಾಳೆ. ಈ ವಿಷಯದಲ್ಲಿ ಸಂದೇಹವೇ ಇಲ್ಲ. ಇನ್ನೂ ನಾನು ನನ್ನ ಗಂಡನಿರುವಲ್ಲಿಗೆ ಹೋಗುವೆನು' ಎಂದು ಮಗುವನ್ನು ಎತ್ತಿಕೊಂಡು ಬಂಗಾರದ ಮೊರವನ್ನು ಬುಟ್ಟಿಯನ್ನೂ ತಲೆಯಲ್ಲಿ ಇಟ್ಟುಕೊಂಡು ಉತ್ತರದಿಕ್ಕಿಗೆ ಹೊರಟುಹೋದಳು.



# ಶ್ರೀನಿವಾಸದೇವರ ವಿವಾಹ ನಿರ್ಣಯ [1]

**ಕೊ**ರವಂಜೀ ರೂಪವುಳ್ಳ ಭಗವಂತನು ಹೊರಟುಹೋದಮೇಲೆ ಧರಣೀ ದೇವಿಯು ಅಳುತ್ತಾ ಮಗಳು ಮಲಗಿದ ಮನೆಗೆ ಹೋಗಿ 'ಮಗಳೇ! ನಿನ್ನ ಮನಸ್ಸಿನಲ್ಲಿ ಏನಿದೆಯೆಂಬುದನ್ನು ತಿಳಿಸು. ನಿನ್ನ ಮನಸ್ಸಿನ ಅಭೀಷ್ಟವನ್ನು ಪೂರಯಿಸುತ್ತೇನೆ. ಒಳ್ಳೇದೋ ಕೆಟ್ಟದೋ ಹೇಳಿ ಬಿಡು. ಯಾಕೆ ಹೀಗೆ ಕೃಶಳಾಗುತ್ತಾ ಬರುತ್ತಿ? ನಾನು ಮಹಾಪಾಪ ಮಾಡಿರುವೆನು. ವಿಷವನ್ನಾದರೂ ಪಾನಮಾಡುವೆನು. ಈ ಕಷ್ಟವನ್ನು ನೋಡಲಾರೆನು' ಎಂದು ಕಣ್ಣೀರನ್ನು ಸುರಿಸಿದಳು.

ಕಣ್ಣೀರು ಸುರಿಸುವ ತಾಯಿಯನ್ನು ನೋಡಿ ಪದ್ಮಾವತೀದೇವಿಯು ಮೆಲ್ಲನೆ 'ನಾನು ನಿನ್ನೊಡನೆ ಏನೆಂದು ಹೇಳಿಕೊಳ್ಳಲಿ? ಹಡೆಯುವ ವೇದನೆಯೆಂದು ಹೇಳಿಕೊಳ್ಳಲೇ? ಮರೆಯಾಗಿ ಮಗುವು ಹುಟ್ಟಿತು ಎನ್ನಲೇ! ಅಂತಹ ಅಯೋಗ್ಯ ಕಾರ್ಯವೊಂದೂ ನಡೆಯಲಿಲ್ಲ. ನನ್ನ ಮನಸ್ಸಿನಲ್ಲಿ ಒಂದು ಆಸೆಯಿದೆ. ಅದನ್ನು ನಾನಾಗಿ ತಿಳಿಸಲಿಕ್ಕೆ ಅಶಕ್ತಳಾಗಿದ್ದೇನೆ. ಆದರೂ ತಾಯಿಯಾದ ಪ್ರಯುಕ್ತ ನಿನ್ನ

1. ಭವಿಷ್ಯೋತ್ತರ ಪುರಾಣ. ಅ-9

ಬಳಿಯಲ್ಲಿ ತಿಳಿಸುತ್ತೇನೆ. ನಿನ್ನ ಆಜ್ಞೆಯಿಂದ ನಾನು ಸಖಿಯರನ್ನು ಕರೆದುಕೊಂಡು ಹೂವನ್ನು ಕೊಯ್ಯುವುದಕ್ಕೋಸ್ಕರ ಉದ್ಯಾನಕ್ಕೆ ಹೋದನು. ಅಲ್ಲಿಗೆ ಒಬ್ಬ ಪುರುಷಶ್ರೇಷ್ಠನು ಬಂದನು. ಅಮ್ಮ! ನನಗೆ ಅವನ ಮುಖವೇ ಸ್ಮರಣೆಗೆ ಬರುತ್ತದೆ. ಅವನಿಲ್ಲದೆ ನಾನು ಬದುಕಲಾರೆನು. ಸತ್ಯವನ್ನೇ ಹೇಳುತ್ತೇನೆ. ಆ ಕೃಷ್ಣನ ಚರಿತ್ರೆಯನ್ನು ದೇವತೆಗಳು ಮಾತ್ರ ತಿಳಿಯುವರು. ಮನುಷ್ಯರಾಗಲೀ ಅಸುರರಾಗಲೀ ತಿಳಿಯ ಲಾರರು. ಅವನೇ ಸರ್ವೋತ್ತಮನು. ಅವನ ಬಲಕೈಯಲ್ಲಿ ಚಕ್ರವು ಶೋಭಿಸುತ್ತದೆ. ಎಡಕೈಯಲ್ಲಿ ಶಂಖವು ಶೋಭಿಸುತ್ತದೆ. ಕುತ್ತಿಗೆಯಲ್ಲಿ ಕೌಸ್ತುಭಮಣಿಯು ಪ್ರಕಾಶಿಸುತ್ತದೆ. ಕಿವಿಗಳಲ್ಲಿ ಮಕರ ಕುಂಡಲಗಳು ಹೊಳೆಯುತ್ತವೆ. ಅವನ ಚಕ್ರದ ಪ್ರಭಾವದಿಂದ ಕಾಶೀಪಟ್ಟಣವೇ ಸುಟ್ಟುಹೋಯಿತು. ಅವನ ಶಂಖದ ಧ್ವನಿಯನ್ನು ಕೇಳಿದರೆ ಅಸುರರೆಲ್ಲರೂ ಓಡಿ ಹೋಗುವರು. ಅವನ ಭಕ್ತರ ಲಕ್ಷಣವನ್ನು ಹೇಳುವೆನು. ಯಾರು ವೇದಶಾಸ್ತ್ರಗಳಲ್ಲಿ ಆಸಕ್ತರಾಗಿರುವರೋ ತಮಗೆ ವಿಹಿತಧರ್ಮ ದಲ್ಲಿ ಆಸಕ್ತರಾಗಿರುವರೋ ವೇದದಲ್ಲಿ ಹೇಳಿದ ಕರ್ಮವನ್ನು ಮಾಡುತ್ತಾರೋ ಶಂಖಚಕ್ರಮುದ್ರೆಗಳನ್ನು ಧರಿಸುತ್ತಾರೋ ನಾಮಗಳನ್ನು ಹಚ್ಚಿಕೊಳ್ಳುತ್ತಾರೋ ಸುಳ್ಳು ಹೇಳುವುದಿಲ್ಲವೋ ತಂದೆತಾಯಿಗಳ ಹಿತದಲ್ಲಿ ಆಸಕ್ತರಾಗಿರುವರೋ ಅವರೆಲ್ಲರೂ ಅವನ ಭಕ್ತರು. ಅವನಿಲ್ಲದೆ ಯಾರಿಂದಲೂ ಬದುಕಿರಲಾಗದು' ಎಂದು ಹೇಳಿದಳು.

ಮಗಳ ಮಾತನ್ನು ಕೇಳಿ ಧರಣೀದೇವಿಯು ಆನಂದದಿಂದ 'ಮಗಳೇ! ನೀನು ಆ ಪುರುಷನನ್ನು ನೋಡಿ ಭ್ರಮಿಸಿಕೊಂಡದ್ದೇ ಜ್ವರಕ್ಕೆ ಕಾರಣವೇ?' ಎಂದು ಕೇಳಿದಳು.

ಪದ್ಮಾವತೀದೇವಿಯು 'ಅಮ್ಮ! ಸತ್ಯವಾಗಿಯೂ ನಾನು ಹೇಳುವೆನು. ನಾನು ಯಾವ ಆ ಮಹಾಪುರುಷನನ್ನು ನೋಡಿದೆನೋ ಅವನನ್ನೇ ನೋಡಬೇಕೆಂದೇ ಆಸೆಯಿಂದ ನನ್ನ ಮೈಯು ಕೃಶವಾಗುತ್ತಿರುವುದು' ಎಂದಳು.

ತರುವಾಯ ಧರಣೀದೇವಿಯು ಮಗಳಿಗೆ ಸಮಾಧಾನ ಹೇಳಿ ಸಂತೋಷದಿಂದ ಅಡಿಗೆ ಮಾಡಲಿಕ್ಕೆ ಒಳಗೆ ಬಂದಳು. ಮಗಳು ಅನಾರೋಗ್ಯದಿಂದ ದುಃಖಪಡುತ್ತಿದ್ದ ಗಂಡನ ಬಳಿಗೆ ಬಂದು ಮಗಳು ಕೃಶಳಾಗಲಿಕ್ಕೆ ಕಾರಣವನ್ನು ಹೇಳಿ ಧರ್ಮದೇವತೆಯು ಹೇಳಿದ ಅದರ ಶಾಂತಿಯನ್ನು ಹೇಳಿದಳು. ಮಗಳ ಮನಸ್ಸಿನ ಅಭಿಪ್ರಾಯವನ್ನೆಲ್ಲಾ ಹೇಳಿದಳು.

ಅದೇ ಸಮಯದಲ್ಲಿ ಅಗಸ್ತ್ಯೇಶ್ವರನಿಗೆ ಅಭಿಷೇಕ ಮಾಡಿಸಲಿಕ್ಕೆ ಹೋದ ಸ್ತ್ರೀಯರು ಬಕುಳೆಯೊಡನೆ ಬಂದು ಸೇರಿದರು. ಪುರೋಹಿತರೂ ಬ್ರಾಹ್ಮಣರೂ

ಬಂದರು. ಆಕಾಶರಾಜನು ಬಂದಿರುವ ಬ್ರಾಹ್ಮಣರಿಗೆ ಸತ್ಕಾರ ಮಾಡಿ ಮಗಳಿಗೆ ತೀರ್ಥಪ್ರೋಕ್ಷಣೆ ಮಾಡಲಿಕ್ಕೆ ಹೇಳಿ ಆಶೀರ್ವಾದವನ್ನು ಮಾಡಿಸಿ ಅವರ ಆಜ್ಞೆಯಿಂದ ಭೋಜನವನ್ನು ಮಾಡಿದನು. ತರುವಾಯ ಧರಣೀದೇವಿಯು ತಾನು ಭೋಜನ ಮಾಡಿ ಹೊರಗೆ ಬಂದವಳು. ಬಕುಳೆಯನ್ನು ನೋಡಿದಳು. ಆಗಲೇ ಧರ್ಮದೇವತೆಯ ಮಾತನ್ನು ಸ್ಮರಿಸಿಕೊಂಡು ಬಕುಳೆಯ ಬಳಿಗೆ ಬಂದು ಹೆಂಗಸರೊಡನೆ 'ಇವಳು ಯಾರು? ಪೂಜ್ಯಳಾಗಿರುವಂತೆ ನನಗೆ ತೋರುತ್ತದೆ. ಇವಳು ಇಲ್ಲಿಗೆ ಬರಲಿಕ್ಕೆ ಕಾರಣವೇನು ? ಎಂದು ಕೇಳಿರಿ' ಎಂದು ಹೇಳಿದಳು. ಅದಕ್ಕೆ ಆ ಹೆಂಗಸರು ರಾಣಿಯೊಡನೆ 'ನಾವು ಇವಳ ಹತ್ತಿರ ವಿಚಾರಿಸಿದೆವು. ಶೇಷಾಚಲದಲ್ಲಿ ವಾಸವಂತೆ. ವೇಂಕಟೇಶ್ವರನು ಸ್ವಾಮಿಯಂತೆ. ಆ ಶ್ರೀನಿವಾಸನ ಆಜ್ಞಾಧಾರಕಳಾದ ದಾಸಿಯಂತೆ. ತನಗೆ ಧರಣೀದೇವಿಯ ಬಳಿಗೆ ಮಹತ್ತಾದ ಕಾರ್ಯವಿದೆಯೆಂದಳು. ಅದಕ್ಕಾಗಿ ನಾವು ಇವಳನ್ನು ನಿಮ್ಮ ಬಳಿಗೆ ಕರೆದುಕೊಂಡು ಬಂದಿರುವೆವು. ನೀವೇ ಇವರ ಹತ್ತಿರ ಏನು ಕಾರ್ಯವಿದೆಯೆಂದು ಪ್ರಶ್ನೆ ಮಾಡಬೇಕು' ಎಂದರು.

ಧರಣೀದೇವಿಯು ಬಕುಳೆಯೊಡನೆ 'ಅಮ್ಮ! ಬರಬೇಕು. ಈ ರತ್ನಪೀಠದಲ್ಲಿ ಕೂತುಕೊಳ್ಳಬೇಕು' ಎಂದಳು. ಆಗ ಬಕುಳೆಯು ಆನಂದದಿಂದ ರತ್ನದ ಪೀಠದಲ್ಲಿ ಕೂತುಕೊಂಡು ತಾನು ಕೃತಾರ್ಥಳಾದೆನು ಎಂದು ಅಂದುಕೊಂಡಳು.

ಧರಣೀದೇವಿಯು 'ಅಮ್ಮ! ಬರಬೇಕು. ನನ್ನ ಪುಣ್ಯದಿಂದಲೇ ನೀನು ಬಂದಿರುವೆಯೆಂದು ತಿಳಿದಿರುವೆನು. ನಿನ್ನಂತಹ ಸಜ್ಜನರ ಸಮಾಗಮದಿಂದ ನಾನು ಕೃತಾರ್ಥಳಾದೆನು. ನೀನು ಇಲ್ಲಿಗೆ ಬಂದಿರುವ ಕಾರಣವೇನು? ಬೇಗನೇ ಹೇಳ ಬೇಕು' ಎಂದಳು.

ಬಕುಳೆಯು 'ಮುಖ್ಯಕಾರ್ಯವು ಕನ್ಯಾಪೇಕ್ಷೆಯು. ಬೇರೆ ನೂರಾರು ಕಾರ್ಯಗಳಿಂದ ಏನು ಪ್ರಯೋಜನವಿದೆ?' ಎಂದಳು.

ಧರಣಿಯು 'ಅಮ್ಮ! ಸರಿಯಾದ ಮಾತನ್ನು ಹೇಳಿದಿ. ನಮಗೂ ವರನ ಅಪೇಕ್ಷೆಯಿದೆ. ವರನು ಯಾರು? ಅವನ ದೇಶವು ಯಾವುದು? ನಕ್ಷತ್ರವು ಯಾವುದು? ಗೋತ್ರವೇನು? ತಂದೆತಾಯಿಗಳು ಯಾರು? ಕುಲವೇನು? ಆಚಾರವೇನು? ಜಾತಿಯೇನು?' ಎಂದು ಕೇಳಿದಳು.

ಬಕುಳೆಯು 'ರಾಣಿಯೇ! ಗೋತ್ರಾದಿಗಳನ್ನು ವಿಸ್ತರಿಸಿಹೇಳುವೆನು. ಕೇಳು. ವರನ ತಾಯಿಯು ದೇವಕೀದೇವಿಯು ತಂದೆಯು ವಸುದೇವನು. ಚಂದ್ರವಂಶವು

ಕೃಷ್ಣನೆಂದು ಹೆಸರು. ವಸಿಷ್ಠಗೋತ್ರವು ಶ್ರವಣನಕ್ಷತ್ರವು. ವೇಂಕಟಗಿರಿಯಲ್ಲಿ ವಾಸಮಾಡುವನು. ವರನು ಒಳ್ಳೇ ಓದಿಕೊಂಡವನು. ಹಣವಂತನು. ಬಲಿಷ್ಠನು ತುಂಬಾ ಆಚಾರವುಳ್ಳವನು. ಇಪ್ಪತ್ತೈದು ವರ್ಷ ವಯಸ್ಸು. ಅವನನ್ನು ನೋಡಿದರೆ ನೀನೇ ಸಂತೋಷಪಡುವೆ. ಬಾಯಿಯಲ್ಲಿ ಹೆಚ್ಚಿಗೆ ಹೇಳಿದರೆ ಏನು ಪ್ರಯೋಜನವಿದೆ? ಕಣ್ಣಾರೆ ನೋಡಿದರೆ ಸಂತೋಷವಾಗುವುದು' ಎಂದಳು.

ಅದನ್ನು ಕೇಳಿ ಧರಣೀದೇವಿಯು 'ಅಮ್ಮ! ನನಗೊಂದು ಸಂದೇಹವು ಉಂಟಾಗಿದೆಯಲ್ಲಾ! ವರನು ಒಳ್ಳೇ ಭಾಗ್ಯವಂತನು. ಒಳ್ಳೇ ವಂಶದಲ್ಲಿ ಹುಟ್ಟಿರುವನು. ಬುದ್ಧಿವಂತನು. ಯುವಕನು. ಬಲಿಷ್ಠನು. ಓದಿಕೊಂಡವನು ಎಂದು ಹೇಳುವಿ. ಹಾಗಾದರೆ ಇಷ್ಟರವರೆಗೆ ಮದುವೆಯೇಕೆ ಆಗಲಿಲ್ಲ?' ಎಂದಳು.

ಬಕುಳೆಯು ಧೈರ್ಯದಿಂದ 'ಅಮ್ಮ! ಅವನಿಗೆ ಬಾಲ್ಯದಲ್ಲಿಯೇ ಒಂದು ಮದುವೆಯಾಗಿದೆ. ಆ ಹೆಂಡತಿಯಲ್ಲಿ ಮಕ್ಕಳಾಗಿಲ್ಲವೆಂದು ಇನ್ನೊಂದು ಮದುವೆ ಯಾಗಬೇಕೆಂದು ಪ್ರಯತ್ನ. ಬೇರೊಂದು ದೋಷವೂ ಅವನಲ್ಲಿ ಇರುವುದಿಲ್ಲ' ಎಂದಳು.

ಧರಣೀದೇವಿಯು ಎಲ್ಲಾ ವೃತ್ತಾಂತವನ್ನೂ ತಿಳಿದು ಏಕಾಂತದಲ್ಲಿ ಗಂಡನೊಡನೆ 'ಕನ್ಯಾರ್ಥಿನಿಯಾಗಿ ಬಕುಳೆಯು ವೇಂಕಟಾಚಲದಿಂದ ಬಂದಿರು ವಳು. ಮಗನನ್ನು ಕಳುಹಿಸಿ ಪುರೋಹಿತರನ್ನು ಕರೆಸಿರಿ. ಪುರೋಹಿತರು ಮಂತ್ರಿಗಳು ಇವರಿಂದ ಕೂಡಿಕೊಂಡು ವರನ ಕುಲಗೋತ್ರಾದಿಗಳನ್ನು ವಿಚಾರಿಸಿ ಸರಿಯಾಗಿ ಯೋಚನೆ ಮಾಡಿ ಕನ್ಯಾದಾನ ಮಾಡಿರಿ. ಮಗಳ ಅಭಿಪ್ರಾಯವನ್ನು ನಾವು ತಿಳಿದಿರುವೆನು. ನಿಮ್ಮ ಮಗಳು ಆ ವೇಂಕಟಾಚಲವಾಸಿಯಾದ ಶ್ರೀನಿವಾಸನನ್ನೇ ಅಪೇಕ್ಷಿಸುತ್ತಾಳೆ. ಧರ್ಮದೇವತೆಯ ಮಾತು ಸತ್ಯವಾದದ್ದು ಶುಭಕಾರ್ಯವನ್ನು ಬೇಗನೇ ಮಾಡಿರಿ' ಎಂದಳು.

ಹೆಂಡತಿಯ ಮಾತನ್ನು ಕೇಳಿ ರಾಜನಿಗೆ ಬಹುಸಂತೋಷವಾಯಿತು. 'ಪೂರ್ವಪುಣ್ಯದಿದಂದ ನಮಗೆ ಮಂಗಳವುಂಟಾಯಿತು. ನಮ್ಮ ಪಿತೃಗಳೆಲ್ಲರೂ ಕೃತಾರ್ಥರಾಗಿ ಮುಕ್ತಿಯನ್ನು ಹೊಂದುವರು. ನಿನ್ನ ಮಾತೆಂಬ ಅಮೃತವನ್ನು ಪಾನಮಾಡಿ ನನಗೆ ರೋಮಾಂಚವು ಉಂಟಾಗುತ್ತಿದೆ. ಯಾವಾಗ ಮಗಳ ಮದುವೆಯನ್ನು ನೋಡುವೆನು? ಯಾವಾಗ ಮಗಳು ಗಂಡನೊಡನೆ ಸಿಂಹಾಸನದಲ್ಲಿ ಕೂತಿರುವುದನ್ನು ನೋಡುವೆನು ಎಂದು ಆಸೆಯಾಗಿದೆ. ಎಂದು ಹೇಳಿ ಆಕಾಶರಾಜನು ಹೆಂಡತಿಯೊಡನೆ ಮಗಳಿದ್ದಲ್ಲಿಗೆ ಹೋಗಿ 'ಮಗಳೇ! ನಿನ್ನ

ಮನಸ್ಸಿನಲ್ಲಿರುವ ದುಃಖವನ್ನು ಬಿಟ್ಟುಬಿಡು. ನಿನ್ನ ಮನಸ್ಸಿನಲ್ಲಿ ಯಾವುದರ ಅಪೇಕ್ಷೆಯಿದೆ? ಹೇಳು. ನಿನ್ನ ಮನಸ್ಸಿನಲ್ಲಿ ಇದ್ದಂತೆಯೇ ನಾನು ಮಾಡುವೆನು' ಎಂದನು.

ಆದಕ್ಕೆ ಪದ್ಮಾವತಿಯು ತಾಯಿಯೊಡನೆ 'ಅಮ್ಮ! ನನ್ನ ಅಭಿಪ್ರಾಯವನ್ನೆಲ್ಲಾ ನಿನ್ನೊಡನೆ ಹೇಳಿರುವೆನು. ಅದನ್ನು ತಂದೆಯೊಡನೆ ಹೇಳು. ನನಗೆ ಹೇಳಲಿಕ್ಕೆ ಸಂಕೋಚವಾಗುತ್ತದೆ' ಎಂದಳು.

ಮಗಳ ಮಾತನ್ನು ಕೇಳಿ ಧರಣೀದೇವಿಯು 'ನೀವು ಮೊದಲು ಮಗಳಿಗೆ ಮದುವೆ ಮಾಡಿರಿ. ಶುಭಕಾರ್ಯಕ್ಕೆ ಸಾವಕಾಶವನ್ನು ಮಾಡಬೇಡಿ' ಎಂದಳು.

ಆಕಾಶರಾಜನು 'ಮಗಳೇ! ನಿನ್ನನ್ನು ಆ ಶ್ರೀನಿವಾಸನಿಗೇ ಕೊಟ್ಟು ಮದುವೆ ಮಾಡುವೆನು' ಎಂದು ಸಮಾಧಾನಪಡಿಸಿ ಮಗಳಿಗೆ ಮದುವೆ ಮಾಡುವೆನೆಂದು ಪತ್ರವನ್ನು ಬರೆದು ಮಗನ ಕೈಯಲ್ಲಿ ಕೊಟ್ಟು ಬೃಹಸ್ಪತ್ಯಾಚಾರ್ಯರಿದ್ದಲ್ಲಿಗೆ ಕಳುಹಿಸಿದನು.

ಮಗನಾದ ವಸುದಾನನು ಚಂದ್ರಾಂಶನಾದ ಕಾರಣ ವಾಯುವೇಗದಿಂದ ಹೋಗಿ ಗುರುಗಳಿಗೆ ನಮಸ್ಕರಿಸಿದನು. ಗುರುಗಳು ರಾಜಪುತ್ರನನ್ನು ಅವನ ಕೈಯಲ್ಲಿ ಇರುವ ಪತ್ರಿಕೆಯನ್ನು ನೋಡಿ ಅವನನ್ನು ಆಸನದಲ್ಲಿ ಕೂತುಕೊಳ್ಳಿಸಿ ಅವನು ತಂದಿರುವ ಪತ್ರಿಕೆಯನ್ನು ಓದಿದರು. ಆಗಲೇ ಆಕಾಶರಾಜನಿದ್ದಲ್ಲಿಗೆ ಬಂದು ಸೇರಿದರು.

ಬಂದಿರುವ ಪುರೋಹಿತರನ್ನು ನೋಡಿ ಆಕಾಶರಾಜನು ವಿಧಿಯಂತೆ ಪೂಜಿಸಿ ನಮಸ್ಕರಿಸಿ 'ತಮ್ಮ ಆಜ್ಞೆಯಿಂದ ಮಗಳಿಗೆ ಮದುವೆ ಮಾಡಬೇಕೆಂದು ಅಭಿಪ್ರಾಯ ವುಳ್ಳವನಾಗಿರುವೆನು. ಶ್ರೀನಿವಾಸನ ಸಂಬಂಧವು ಪ್ರಶಸ್ತವಾಗಿದೆಯೆಂದು ಕಾಣುತ್ತದೆ. ಕನ್ಯಾರ್ಥಿನಿಯಾಗಿ ಬಕುಳೆಯೆಂಬವಳು ಬಂದವಳು. ವರನ ಗೋತ್ರ ಹೆಸರು ಎಲ್ಲಾ ತಿಳಿಯಿತು. ಆದರೂ ತಮ್ಮ ಆಜ್ಞೆಯಿಂದ ವಿವಾಹವನ್ನು ಮಾಡಬೇಕೆಂದು ಇರುವೆನು' ಎಂದು ಹೇಳಿದನು. ಅದನ್ನು ಕೇಳಿ ಗುರುಗಳು ಹಣ್ಣುಉಳ್ಳ ಮರವನ್ನು ಆಶ್ರಯಿಸಿ ಬಹುಜನರು ಭೂಮಿಯಲ್ಲಿ ಬದುಕುವರು. ಹಾಗೆಯೇ ನಿನ್ನ ಪುಣ್ಯವನ್ನು ಆಶ್ರಯಿಸಿ ನಾವೆಲ್ಲರೂ ಬದುಕುವೆವು. ನಾನು ಕೆಲವು ಸಮಯದಲ್ಲಿ ಮಾತ್ರ ಭೂಮಿಗೆ ಬರುವೆನು. ಶುಕಾಚಾರ್ಯರು ಯಾವಾಗಲೂ ಇಲ್ಲಿಯೇ ಇರುವವರು. ಅವರು ತಿಳಿದಷ್ಟು ಶ್ರೀನಿವಾಸನ ವಿಷಯವು ನನಗೆ ತಿಳಿಯಲಾರದು. ಇಲ್ಲಿಯೇ

ಉತ್ತರದಿಕ್ಕಿನಲ್ಲಿ ಹತ್ತು ಮೈಲು ದೂರದಲ್ಲಿ ವ್ಯಾಸಪುತ್ರರಾದ ಶ್ರೀನಿವಾಸದೇವರ ಭಕ್ತರಾದ ಶುಕಾಚಾರ್ಯರು ಇರುವರು. ಅವರನ್ನು ಬೇಗನೇ ಕರೆಸು. ಅವರು ಆ ಭಗವಂತನ ವಿಷಯವನ್ನು ಹೇಳುವರು' ಎಂದರು.

ಕೂಡಲೇ ಆಕಾಶರಾಜನು ತಮ್ಮನಾದ ತೋಂಡಮಾನನನ್ನು ಶುಕಾಚಾರ್ಯರನ್ನು ಕರೆದುಕೊಂಡು ಬರುವಂತೆ ಆಜ್ಞಾಪಿಸಿದನು. ಅವನು ವಾಯುವೇಗದಿಂದ ಹೋಗುವ ರಥದಲ್ಲಿ ಕೂತುಕೊಂಡು ಶುಕಾಚಾರ್ಯರಿದ್ದಲ್ಲಿಗೆ ಹೋದನು. ಆಗಲೇ ಧ್ಯಾನದಿಂದ ಎದ್ದಿರುವ ಅವರೊಡನೆ 'ತಪಸ್ವಿಶ್ರೇಷ್ಠರೇ! ಕೇಳಬೇಕು. ರಾಜರು ಹೀಗೆ ಹೇಳಿರುವರು. ಪದ್ಮಾವತಿಯು ಮದುವೆಗೆ ಯೋಗ್ಯಪ್ರಾಯವುಳ್ಳವಳಾಗಿರುವಳು. ಶ್ರೀನಿವಾಸನಿಗೆ ಅವಳನ್ನು ಮದುವೆ ಮಾಡಬೇಕೆಂದು ರಾಜರ ಅಭಿಪ್ರಾಯವಿದೆ. ಅದು ಸರಿಯೋ ಅಲ್ಲವೋ ಎಂದು ಯೋಚಿಸುವುದಕ್ಕಾಗಿ ಬೃಹಸ್ಪತ್ಯಾಚಾರ್ಯರನ್ನು ಕರೆದಿರುವರು. ಅದಕ್ಕಾಗಿಯೇ ನಿಮ್ಮನ್ನು ಕರೆದಿರುವರು. ತಾವು ಸಾವಕಾಶಮಾಡದೆ ರಾಜ್ಯಕ್ಕೆ ಬರಬೇಕು' ಎಂದು ಹೇಳಿದನು.

ಈ ಮಾತನ್ನು ಕೇಳಿದ ಕೂಡಲೇ ಮಹಾಭಕ್ತರಾದ ಶುಕಾಚಾರ್ಯರಿಗೆ ಭಗವಂತನಲ್ಲಿ ಭಕ್ತ್ಯುದ್ರೇಕವಾಗಿ ಹುಚ್ಚುಹಿಡಿದಂತೆ ಆಯಿತು. ಎದ್ದು ನಿಂತರು. ಕಮಂಡಲನ್ನು ಒಡೆದುಹಾಕಿದರು. ಕೃಷ್ಣಾಜಿನವನ್ನು ಸರ್‍ರನೆ ಸೀಳಿದರು. ಜಪಸರವನ್ನು ಕಡಿದುಹಾಕಿದರು. ಕುಣಿಯಲಿಕ್ಕೆ ಆರಂಭಿಸಿದರು. ಒಂದು ಮುಹೂರ್ತಕಾಲ ಹೀಗೇ ಅವರ ಬುದ್ಧಿಯು ಪರವಶವಾಗಿತ್ತು. ಆಮೇಲೆ ಶುಕಾಚಾರ್ಯರು ತೋಂಡಮಾನ ರಾಜನೊಡನೆ 'ಒಳ್ಳೇ ಮಾತನ್ನು ಆಡಿದಿ. ಶ್ರೀನಿವಾಸನಿಗೆ ಕನ್ಯಾದಾನವನ್ನು ಮಾಡುವುದು ಪುರುಷಾರ್ಥಕ್ಕೆ ಕಾರಣವಾದದ್ದು. ಎಲ್ಲಾ ಲೋಕಗಳಿಗೂ ಮಂಗಳವಾಗಲಿಕ್ಕೆ ಕಾರಣವಾದದ್ದು. ಆಕಾಶರಾಜನೂ ಬೃಹಸ್ಪತ್ಯಾಚಾರ್ಯರೂ ಹೀಗೆಯೇ ಮಹಾಕಾರ್ಯವನ್ನು ಮಾಡುತ್ತಾ ಇರಲಿ ಎಂದು ಹೇಳಿದರು.

ಆಮೇಲೆ ಶುಕಾಚಾರ್ಯರು ಪದ್ಮಸರೋವರದಲ್ಲಿ ಸ್ನಾನಮಾಡಿ ಮಾಧ್ಯಾಹ್ನಿಕ ಸಂಧ್ಯಾವಂದನೆಯನ್ನು ತೀರಿಸಿ ಜೀರ್ಣಗಳಾದ ಪದಾರ್ಥಗಳನ್ನು ತೆಗೆದು ಹಾಕಿ ಹೊಸದರ್ಭೆಗಳು ಕೊಯಿದು ಅದರಿಂದ ತಲೆಗೆ ಕಿರೀಟವನ್ನು ಮಾಡಿಕೊಂಡರು. ದರ್ಭೆಗಳ ಅಗ್ರದಿಂದ ಪುಷ್ಪದಿಂದ ಕವಚವನ್ನು ಮಾಡಿಕೊಂಡರು. ಕುತ್ತಿಗೆಗೆ ತುಲಸೀಮಣಿಮಾಲೆಗಳಿಂದ ಅಲಂಕರಿಸಿಕೊಂಡರು. ಕಾಲಿನವರೆಗೆ ಕೃಷ್ಣಾಜಿನದ ಅಂಗಿಯನ್ನು ಹಾಕಿಕೊಂಡರು. ತೋಂಡಮಾನನು ಅವರನ್ನು ಕುದುರೆಯ ಮೇಲೆ ಕೂತುಕೊಳ್ಳಿಸಿ ಊರಿಗೆ ಕರೆದುಕೊಂಡು ಹೋದನು.

ಆಕಾಶರಾಜನು ಶುಕಾಚಾರ್ಯರು ಬರುತ್ತಿರುವರೆಂದು ತಿಳಿದು ಚತುರಂಗ ಸೈನ್ಯ ಸಹಿತನಾಗಿ ಪುರೋಹಿತರನ್ನೂ ಮುಂದೆ ಮಾಡಿಕೊಂಡು ದರ್ಭೆಗಳು ಗೆಡ್ಡೆಗೆಣಸು ಹಣ್ಣುಗಳನ್ನು ನೀರನ್ನು ಹಿಡಿದುಕೊಂಡು ಎದುರುಗೊಳ್ಳಲಿಕ್ಕೆ ಬಂದನು. ಎಲ್ಲಾ ಊರೇ ಸಂತೋಷವನ್ನು ಹೊಂದಿತು. ರಾಜನು ವಾಹನದಿಂದ ಕೆಳಗೆ ಇಳಿದು ಉದ್ದಕ್ಕೆ ನಮಸ್ಕಾರಮಾಡಿ ಶುಕಾಚಾರ್ಯರನ್ನು ಆನೆಯ ಮೇಲೆ ಕೂತುಕುಳ್ಳಿಸಿ ಪುರೋಹಿತರೊಡನೆ ಸಹಿತನಾಗಿ ಊರ ಒಳಗೆ ಕರೆದುಕೊಂಡು ಬಂದನು. ಶುಕಾಚಾರ್ಯರನ್ನು ಮನೆಗೆ ಒಳಗೆ ಕರೆದುಕೊಂಡು ಹೋಗಿ ಸತ್ಕಾರ ಮಾಡಿದನು. ನಮಸ್ಕರಿಸಿದನು. ಬೃಹಸ್ಪತ್ಯಾಚಾರ್ಯರ ಮುಂಭಾಗದಲ್ಲಿ ಶುಕಾಚಾರ್ಯರೊಡನೆ 'ನಿಮ್ಮಿಬ್ಬರ ಅನುಮತಿಯಿಂದ ಪದ್ಮಾವತಿಯನ್ನು ಶ್ರೀನಿವಾಸನಿಗೆ ಮದುವೆ ಮಾಡಿ ಕೊಡಬೇಕೆಂದು ಇದ್ದೇನೆ' ಎಂದು ಹೇಳಿದನು.

ಆ ಮಾತನ್ನು ಕೇಳಿ ಶುಕಾಚಾರ್ಯರು 'ರಾಜನೇ! ನೀನು ಶ್ರೀನಿವಾಸನಿಗೆ ಹೆಣ್ಣನ್ನು ಕೊಡುವ ವಿಷಯದಲ್ಲಿ ಸಂದೇಹಪಡಬೇಡ. ನೀನು ಧನ್ಯನಾಗಿರುವಿ. ನಿನ್ನ ಕುಲವು ಪವಿತ್ರವಾಯಿತು. ನಿನ್ನ ಪಿತೃಗಳೆಲ್ಲರೂ ಸ್ವರ್ಗವನ್ನು ಹೊಂದುವರು. ಸಂದೇಹವೇ ಬೇಡ. ನೀನು ಪೂರ್ವಜನ್ಮದಲ್ಲಿ ಬಹುಪುಣ್ಯಮಾಡಿರುವಿ. ಆದುದ ರಿಂದಲೇ ಸಜ್ಜನರಿಗೆ ಆಶ್ರಯನಾದ ಭಗವಂತನು ನಿನಗೆ ಅಳಿಯನಾಗುವನು. ನಿನ್ನಿಂದ ಶ್ರೇಷ್ಠರಾದವರು ಇಲ್ಲವೇ ಇಲ್ಲ. ಈ ಶುಭಕಾರ್ಯಕ್ಕೆ ಸಾವಕಾಶ ಮಾಡಬೇಡ. ಬೇಗನೇ ಮಾಡು. ನಿನ್ನ ಸಹವಾಸದಿಂದ ನಾವೆಲ್ಲರೂ ಧನ್ಯರಾಗಿರು ವೆವು. ನಾವೆಲ್ಲರೂ ಗೆಡ್ಡೆಹಣ್ಣುಗಳನ್ನು ತಿನ್ನುತ್ತಾ ಸರ್ವಸಂಗವನ್ನು ಪರಿತ್ಯಾಗ ಮಾಡಿ ತಪಸ್ಸು ಮಾಡಿದರೂ ಯಾವ ಭಗವಂತನನ್ನು ನಮ್ಮ ಸಾಮರ್ಥ್ಯದಿಂದ ನೋಡಲಾರೆವೋ ಅಂತಹ ಭಗವಂತನನ್ನು ಈಗ ಭಗವಂತನ ಭಕ್ತನಾದ ನಿನ್ನ ಸಹವಾಸದಿಂದ ಈಗ ನೋಡುವೆವು. ನಿನ್ನ ಸಹವಾಸವು ಒಂದೊಂದು ಜನ್ಮದಲ್ಲಿಯೂ ಇರಲಿ! ಈರೀತಿಯಾಗಿ ಹೇಳಿ ಶುಕಾಚಾರ್ಯರು ಸುಮ್ಮನೆ ಆದರು.

ಆಕಾಶರಾಜನು ಶುಕಾಚಾರ್ಯರ ಮಾತನ್ನು ಕೇಳಿ ಸಂತೋಷವುಳ್ಳವನಾಗಿ ಶುಕಾಚಾರ್ಯರಿಗೆ ನಮಸ್ಕಾರವನ್ನು ಹೇಳಿ ವಧೂವರರ ಘಟನೆಯನ್ನು ನೋಡಬೇಕೆಂದನು. ಬೃಹಸ್ಪತ್ಯಾಚಾರ್ಯರು ಬಕುಳೆಯೊಡನೆ ವೇಂಕಟೇಶ್ವರನ ಗೋತ್ರವನ್ನು ನಕ್ಷತ್ರವನ್ನು ಹೇಳಬೇಕೆಂದರು. ಬಕುಳೆಯು ಸ್ವಲ್ಪ ಕೋಪಿಸಿಕೊಂಡು 'ಬ್ರಾಹ್ಮಣರು ಸತ್ಯ ಹೇಳುವವರು. ಆದರೆ ಕಲಿಯುಗದಲ್ಲಿ ಎಲ್ಲರೂ ಸುಳ್ಳು ಹೇಳುವರು. ತಿಳಿದರೂ ಹಿತಾಹಿತವನ್ನು ಹೇಳಲಾರರು' ಎಂದು ಹೇಳಿದಳು. ಆಗ

ಶುಕಾಚಾರ್ಯರು 'ಹಾಗೆ ಹೇಳಬೇಡಮ್ಮಾ! ಕ್ಷತ್ರಿಯರು ಬ್ರಾಹ್ಮಣರಲ್ಲಿ ವಿಶ್ವಾಸವನ್ನಿಡುವುದಿಲ್ಲ. ಹಾಗೆ ಮಾಡಬಾರದು. ಆದುದರಿಂದ ನೀನು ಹಿತಾಹಿತವನ್ನು ಹೇಳಬೇಕು' ಎಂದರು.

ಆಗ ಬಕುಳೆಯು 'ಮತ್ಸ್ಯಕೂರ್ಮಕೃಷ್ಣ ಇತ್ಯಾದಿ ರೂಪವುಳ್ಳ ಶ್ರೀನಿವಾಸನಿಗೆ ಶ್ರವಣನಕ್ಷತ್ರವೆಂದೂ ವಸಿಷ್ಠಗೋತ್ರವೆಂದೂ ದೊಡ್ಡವರು ಹೇಳುವರು' ಎಂದಳು.

ಆಕಾಶರಾಜನು 'ಸೀತಾ ಸತ್ಯಾ ಇತ್ಯಾದಿ ರೂಪವುಳ್ಳ ಪದ್ಮಾವತಿಗೆ ಅತ್ರಿಕೋತ್ರವೆಂದೂ ಮೃಗಶಿರನಕ್ಷತ್ರವೆಂದೂ ಹೇಳುವರು' ಎಂದನು.

ಬೃಹಸ್ಪತ್ಯಾಚಾರ್ಯರು 'ಎಲ್ಲವೂ ಸರಿಹೋಗುತ್ತದೆ. ಬಂಧುಮಿತ್ರಾದಿಗಳಿಂದ ಕೂಡಿಕೊಂಡು ಯೋಚಿಸಿ ಕನ್ಯಾದಾನವನ್ನು ಮಾಡು' ಎಂದರು.

ಆಕಾಶರಾಜನು ಸಂತೋಷದಿಂದ ಬಂಧುಗಳನ್ನೆಲ್ಲಾ ಕರೆದು ಕನ್ಯಾದಾನ ವಿಷಯವಾಗಿ ಯೋಚಿಸಿದನು. ಎಲ್ಲ ಬಂಧುಗಳು ತಮ್ಮ ಸಮ್ಮತಿಯನ್ನು ಸೂಚಿಸಿದರು. ರಾಜನು ಕನ್ಯಾನಿಶ್ಚಯವನ್ನು ಮಾಡುವುದಕ್ಕಾಗಿ ಪುಣ್ಯಾಹವಾಚನೆ ಯನ್ನು ಮಾಡಿಸಿದನು. ಸಭೆಯಲ್ಲಿ ವಿಘ್ನೇಶಪೂಜೆಯನ್ನು ಮಾಡಿ ತಾಂಬೂಲ ದಕ್ಷಿಣೆಯನ್ನು ಕೊಟ್ಟನು. ಸಭಾ ಮಧ್ಯದಲ್ಲಿ ಕೈಎತ್ತಿ 'ನಾನು ಪದ್ಮಾವತಿಯನ್ನು ಶ್ರೀನಿವಾಸನಿಗೆ ಕೊಟ್ಟು ಮದುವೆ ಮಾಡುತ್ತೇನೆ. ಬಂಧುಗಳಾದ ನೀವೆಲ್ಲರೂ ಕೃಪೆಯನ್ನು ಮಾಡಬೇಕು' ಎಂದು ಹೇಳಿದನು.



## ಲಗ್ನಪತ್ರಿಕೆಯನ್ನು ಬರೆದುದು [1]

ಆಕಾಶರಾಜನು ಗುರುಗಳೊಡನೆ 'ನಾನು ಸಂಕಲ್ಪಮಾಡಿಯಾಯಿತು. ಇನ್ನೇನು ಮಾಡಬೇಕು?' ಎಂದು ಕೇಳಿದನು. ಗುರುಗಳು 'ಶ್ರೀನಿವಾಸನಿಗೆ ಪತ್ರವನ್ನು ಬರೆದು ಶುಕಾಚಾರ್ಯರ ಕೈಯಲ್ಲಿ ಕೊಟ್ಟು ಕಳುಹಿಸು' ಎಂದರು. ರಾಜನು ಅಪ್ರಾಕೃತ ಶರೀರವುಳ್ಳ ಆ ಭಗವಂತನಿಗೆ ನಾನು ಹೇಗೆ ಪತ್ರವನ್ನು ಬರೆಯಲಿ ಎಂದು ಕೇಳಲು ಗುರುಗಳು ಪತ್ರವನ್ನು ಬರೆಯುವ ವಿಧಾನವನ್ನು ಹೇಳಿದರು. ಗುರುಗಳು ಹೇಳಿದ ರೀತಿಯಾಗಿ ರಾಜನು ಈಪ್ರಕಾರವಾಗಿ ಬರೆದನು.

''ಅಪ್ರಾಕೃತನಾದ ನಿತ್ಯನಾದ ಜ್ಞಾನಾನಂದರೂಪಿಯಾದ ಸ್ವತಂತ್ರನಾದ

---

1. ಭ.ಪು.ಅ.9

ಆಕಾಶರಾಜನು ಶುಕಾಚಾರ್ಯರು ಬರುತ್ತಿರುವರೆಂದು ತಿಳಿದು ಚತುರಂಗ ಸೈನ್ಯ ಸಹಿತನಾಗಿ ಪುರೋಹಿತರನ್ನೂ ಮುಂದೆ ಮಾಡಿಕೊಂಡು ದರ್ಭೆಗಳು ಗೆಡ್ಡೆಗೆಣಸು ಹಣ್ಣುಗಳನ್ನು ನೀರನ್ನು ಹಿಡಿದುಕೊಂಡು ಎದುರುಗೊಳ್ಳಲಿಕ್ಕೆ ಬಂದನು. ಎಲ್ಲಾ ಊರೇ ಸಂತೋಷವನ್ನು ಹೊಂದಿತು. ರಾಜನು ವಾಹನದಿಂದ ಕೆಳಗೆ ಇಳಿದು ಉದ್ದಕ್ಕೆ ನಮಸ್ಕಾರಮಾಡಿ ಶುಕಾಚಾರ್ಯರನ್ನು ಆನೆಯ ಮೇಲೆ ಕೂತುಕುಳ್ಳಿಸಿ ಪುರೋಹಿತರೊಡನೆ ಸಹಿತನಾಗಿ ಊರ ಒಳಗೆ ಕರೆದುಕೊಂಡು ಬಂದನು. ಶುಕಾಚಾರ್ಯರನ್ನು ಮನೆಗೆ ಒಳಗೆ ಕರೆದುಕೊಂಡು ಹೋಗಿ ಸತ್ಕಾರ ಮಾಡಿದನು. ನಮಸ್ಕರಿಸಿದನು. ಬೃಹಸ್ಪತ್ಯಾಚಾರ್ಯರ ಮುಂಭಾಗದಲ್ಲಿ ಶುಕಾಚಾರ್ಯರೊಡನೆ 'ನಿಮ್ಮಿಬ್ಬರ ಅನುಮತಿಯಿಂದ ಪದ್ಮಾವತಿಯನ್ನು ಶ್ರೀನಿವಾಸನಿಗೆ ಮದುವೆ ಮಾಡಿ ಕೊಡಬೇಕೆಂದು ಇದ್ದೇನೆ' ಎಂದು ಹೇಳಿದನು.

ಆ ಮಾತನ್ನು ಕೇಳಿ ಶುಕಾಚಾರ್ಯರು 'ರಾಜನೇ! ನೀನು ಶ್ರೀನಿವಾಸನಿಗೆ ಹೆಣ್ಣನ್ನು ಕೊಡುವ ವಿಷಯದಲ್ಲಿ ಸಂದೇಹಪಡಬೇಡ. ನೀನು ಧನ್ಯನಾಗಿರುವಿ. ನಿನ್ನ ಕುಲವು ಪವಿತ್ರವಾಯಿತು. ನಿನ್ನ ಪಿತೃಗಳೆಲ್ಲರೂ ಸ್ವರ್ಗವನ್ನು ಹೊಂದುವರು. ಸಂದೇಹವೇ ಬೇಡ. ನೀನು ಪೂರ್ವಜನ್ಮದಲ್ಲಿ ಬಹುಪುಣ್ಯಮಾಡಿರುವಿ. ಆದುದ ರಿಂದಲೇ ಸಜ್ಜನರಿಗೆ ಆಶ್ರಯನಾದ ಭಗವಂತನು ನಿನಗೆ ಅಳಿಯನಾಗುವನು. ನಿನ್ನಿಂದ ಶ್ರೇಷ್ಠರಾದವರು ಇಲ್ಲವೇ ಇಲ್ಲ. ಈ ಶುಭಕಾರ್ಯಕ್ಕೆ ಸಾವಕಾಶ ಮಾಡಬೇಡ. ಬೇಗನೇ ಮಾಡು. ನಿನ್ನ ಸಹವಾಸದಿಂದ ನಾವೆಲ್ಲರೂ ಧನ್ಯರಾಗಿರು ವೆವು. ನಾವೆಲ್ಲರೂ ಗೆಡ್ಡೆಹಣ್ಣುಗಳನ್ನು ತಿನ್ನುತ್ತಾ ಸರ್ವಸಂಗವನ್ನು ಪರಿತ್ಯಾಗ ಮಾಡಿ ತಪಸ್ಸು ಮಾಡಿದರೂ ಯಾವ ಭಗವಂತನನ್ನು ನಮ್ಮ ಸಾಮರ್ಥ್ಯದಿಂದ ನೋಡಲಾರೆವೋ ಅಂತಹ ಭಗವಂತನನ್ನು ಈಗ ಭಗವಂತನ ಭಕ್ತನಾದ ನಿನ್ನ ಸಹವಾಸದಿಂದ ಈಗ ನೋಡುವೆವು. ನಿನ್ನ ಸಹವಾಸವು ಒಂದೊಂದು ಜನ್ಮದಲ್ಲಿಯೂ ಇರಲಿ! ಈರೀತಿಯಾಗಿ ಹೇಳಿ ಶುಕಾಚಾರ್ಯರು ಸುಮ್ಮನೆ ಆದರು.

ಆಕಾಶರಾಜನು ಶುಕಾಚಾರ್ಯರ ಮಾತನ್ನು ಕೇಳಿ ಸಂತೋಷವುಳ್ಳವನಾಗಿ ಶುಕಾಚಾರ್ಯರಿಗೆ ನಮಸ್ಕಾರವನ್ನು ಹೇಳಿ ವಧೂವರರ ಘಟನೆಯನ್ನು ನೋಡಬೇಕೆಂದನು. ಬೃಹಸ್ಪತ್ಯಾಚಾರ್ಯರು ಬಕುಳೆಯೊಡನೆ ವೇಂಕಟೇಶ್ವರನ ಗೋತ್ರವನ್ನು ನಕ್ಷತ್ರವನ್ನು ಹೇಳಬೇಕೆಂದರು. ಬಕುಳೆಯು ಸ್ವಲ್ಪ ಕೋಪಿಸಿಕೊಂಡು 'ಬ್ರಾಹ್ಮಣರು ಸತ್ಯ ಹೇಳುವವರು. ಆದರೆ ಕಲಿಯುಗದಲ್ಲಿ ಎಲ್ಲರೂ ಸುಳ್ಳು ಹೇಳುವರು. ತಿಳಿದರೂ ಹಿತಾಹಿತವನ್ನು ಹೇಳಲಾರರು' ಎಂದು ಹೇಳಿದಳು. ಆಗ

ಶುಕಾಚಾರ್ಯರು 'ಹಾಗೆ ಹೇಳಬೇಡಮ್ಮಾ! ಕ್ಷತ್ರಿಯರು ಬ್ರಾಹ್ಮಣರಲ್ಲಿ ವಿಶ್ವಾಸವನ್ನಿಡುವುದಿಲ್ಲ. ಹಾಗೆ ಮಾಡಬಾರದು. ಆದುದರಿಂದ ನೀನು ಹಿತಾಹಿತವನ್ನು ಹೇಳಬೇಕು' ಎಂದರು.

ಆಗ ಬಕುಳೆಯು 'ಮತ್ಸ್ಯಕೂರ್ಮಕೃಷ್ಣ ಇತ್ಯಾದಿ ರೂಪವುಳ್ಳ ಶ್ರೀನಿವಾಸನಿಗೆ ಶ್ರವಣನಕ್ಷತ್ರವೆಂದೂ ವಸಿಷ್ಠಗೋತ್ರವೆಂದೂ ದೊಡ್ಡವರು ಹೇಳುವರು' ಎಂದಳು.

ಆಕಾಶರಾಜನು 'ಸೀತಾ ಸತ್ಯಾ ಇತ್ಯಾದಿ ರೂಪವುಳ್ಳ ಪದ್ಮಾವತಿಗೆ ಅತ್ರಿಕೋತ್ರವೆಂದೂ ಮೃಗಶಿರನಕ್ಷತ್ರವೆಂದೂ ಹೇಳುವರು' ಎಂದನು.

ಬೃಹಸ್ಪತ್ಯಾಚಾರ್ಯರು 'ಎಲ್ಲವೂ ಸರಿಹೋಗುತ್ತದೆ. ಬಂಧುಮಿತ್ರಾದಿಗಳಿಂದ ಕೂಡಿಕೊಂಡು ಯೋಚಿಸಿ ಕನ್ಯಾದಾನವನ್ನು ಮಾಡು' ಎಂದರು.

ಆಕಾಶರಾಜನು ಸಂತೋಷದಿಂದ ಬಂಧುಗಳನ್ನೆಲ್ಲಾ ಕರೆದು ಕನ್ಯಾದಾನ ವಿಷಯವಾಗಿ ಯೋಚಿಸಿದನು. ಎಲ್ಲ ಬಂಧುಗಳು ತಮ್ಮ ಸಮ್ಮತಿಯನ್ನು ಸೂಚಿಸಿದರು. ರಾಜನು ಕನ್ಯಾನಿಶ್ಚಯವನ್ನು ಮಾಡುವುದಕ್ಕಾಗಿ ಪುಣ್ಯಾಹವಾಚನೆಯನ್ನು ಮಾಡಿಸಿದನು. ಸಭೆಯಲ್ಲಿ ವಿಘ್ನೇಶಪೂಜೆಯನ್ನು ಮಾಡಿ ತಾಂಬೂಲ ದಕ್ಷಿಣೆಯನ್ನು ಕೊಟ್ಟನು. ಸಭಾ ಮಧ್ಯದಲ್ಲಿ ಕೈಎತ್ತಿ 'ನಾನು ಪದ್ಮಾವತಿಯನ್ನು ಶ್ರೀನಿವಾಸನಿಗೆ ಕೊಟ್ಟು ಮದುವೆ ಮಾಡುತ್ತೇನೆ. ಬಂಧುಗಳಾದ ನೀವೆಲ್ಲರೂ ಕೃಪೆಯನ್ನು ಮಾಡಬೇಕು' ಎಂದು ಹೇಳಿದನು.



## ಲಗ್ನಪತ್ರಿಕೆಯನ್ನು ಬರೆದುದು [1]

ಆಕಾಶರಾಜನು ಗುರುಗಳೊಡನೆ 'ನಾನು ಸಂಕಲ್ಪಮಾಡಿಯಾಯಿತು. ಇನ್ನೇನು ಮಾಡಬೇಕು?' ಎಂದು ಕೇಳಿದನು. ಗುರುಗಳು 'ಶ್ರೀನಿವಾಸನಿಗೆ ಪತ್ರವನ್ನು ಬರೆದು ಶುಕಾಚಾರ್ಯರ ಕೈಯಲ್ಲಿ ಕೊಟ್ಟು ಕಳುಹಿಸು' ಎಂದರು. ರಾಜನು ಅಪ್ರಾಕೃತ ಶರೀರವುಳ್ಳ ಆ ಭಗವಂತನಿಗೆ ನಾನು ಹೇಗೆ ಪತ್ರವನ್ನು ಬರೆಯಲಿ ಎಂದು ಕೇಳಲು ಗುರುಗಳು ಪತ್ರವನ್ನು ಬರೆಯುವ ವಿಧಾನವನ್ನು ಹೇಳಿದರು. ಗುರುಗಳು ಹೇಳಿದ ರೀತಿಯಾಗಿ ರಾಜನು ಈಪ್ರಕಾರವಾಗಿ ಬರೆದನು.

''ಅಪ್ರಾಕೃತನಾದ ನಿತ್ಯನಾದ ಜ್ಞಾನಾನಂದರೂಪಿಯಾದ ಸ್ವತಂತ್ರನಾದ

1. ಭ.ಪು.ಅ.9

ಸಮಾಧಿಕರಹಿತನಾದ ಅನಂತರೂಪವುಳ್ಳ ಶಾರ್ಂಗ ಎಂಬ ಧನುಸ್ಸುಳ್ಳ ಭಕ್ತಪ್ರಿಯನಾದ ಭಕ್ತಿಯಿಂದಲೇ ಸಿಗುವವನಾದ ದೇವಾಧಿದೇವನಾದ ಬ್ರಹ್ಮದೇವರಿಂದಲೂ ಪೂಜ್ಯನಾದ ವ್ಯಾಪ್ತನಾದ ವೇಂಕಟಾಚಲವಾಸಿಯಾದ ಸಮಸ್ತಶಾಸ್ತ್ರಗಳಿಂದ ಸಂಪೂರ್ಣವಾಗಿ ತಿಳಿಯಲಿಕ್ಕೆ ಅಶಕ್ಯಗಳಾದ ಅನಂತಮಹಿಮೆಯುಳ್ಳ ಶ್ರೀನಿವಾಸನಿಗೆ.

ನಿನ್ನ ಪಾದಪದ್ಮವನ್ನು ನೋಡುವ ಆಸೆಯುಳ್ಳವನಾದ ಆಕಾಶರಾಜನೆಂದು ಹೆಸರುಳ್ಳ ನಾನು ಬಂಧುವಾದ ಪ್ರಯುಕ್ತ ನಿನಗೆ ಆಶೀರ್ವಾದವನ್ನು ಮಾಡುತ್ತೇನೆ. ನಾನು ನಿನ್ನ ಆಶ್ರಯವನ್ನು ಅಪೇಕ್ಷಿಸುವವನಾಗಿ ಈ ಪತ್ರವನ್ನು ಬರೆದಿರುವೆನು. ಪತ್ನೀಪುತ್ರ ಸಹೋದರಾದಿಗಳಿಂದ ಸಹಿತನಾದ ನಾನು ಕ್ಷೇಮದಿಂದ ಇದ್ದೇನೆ. ನಿಮ್ಮೆಲ್ಲರ ಕ್ಷೇಮ ಸಮಾಚಾರವನ್ನು ಪತ್ರದ್ವಾರಾ ತಿಳಿಸಬೇಕು. ಚೈತ್ರಶುಕ್ಲ ತ್ರಯೋದಶೀ ದಿನ ಪತ್ರವನ್ನು ಬರೆಯುತ್ತಿದ್ದೇನೆ. ನನ್ನ ಮಗಳಾದ ಪದ್ಮಾವತಿಯನ್ನು ನಿನಗೆ ಕೊಟ್ಟು ಮದುವೆ ಮಾಡಬೇಕೆಂದು ನನ್ನ ಅಭಿಪ್ರಾಯವಿದೆ. ನೀನು ಅದನ್ನು ಅಂಗೀಕರಿಸಬೇಕು. ನನ್ನ ಅಭಿಪ್ರಾಯವೆಲ್ಲ ಶುಕಾಚಾರ್ಯರಿಗೆ ತಿಳಿಯುವುದು. ಕನ್ಯಾವಿಷಯದಲ್ಲಿ ನೀನು ಯಾವ ಸಂದೇಹವನ್ನೂ ಮಾಡಬಾರದು. ವೈಶಾಖ ಶುದ್ಧ ದಶಮೀ ಶುಕ್ರವಾರದಲ್ಲಿ ನೀನು ಬಂಧುಗಳಿಂದ ಸಹಿತನಾಗಿ ಬಂದು ನನ್ನನ್ನು ಉದ್ಧಾರಮಾಡಿ ನನ್ನ ಮಗಳ ಪಾಣಿಗ್ರಹಣವನ್ನು ಮಾಡಬೇಕು. ನಿನಗೆ ನಾನು ಹೆಚ್ಚಿಗೆ ಬರೆಯತಕ್ಕದ್ದೇನಿದೆ. ಶುಕಾಚಾರ್ಯರು ಹೇಳುವ ಮಾತನ್ನು ಅಂಗೀಕರಿಸು. ಈಪ್ರಕಾರವಾಗಿ ಸಮಸ್ತಲೋಕಪ್ರಭುವಾದ ಮಹಾನುಭಾವನಾದ ನಿನಗೆ ಆಶೀರ್ವಾದಗಳು''

ಈ ಪ್ರಕಾರವಾಗಿ ಆಕಾಶರಾಜನು ಶುಭಪತ್ರಿಕೆಯನ್ನು ಬರೆದು ಶುಕಾಚಾರ್ಯರ ಕೈಯಿಂದ ಭಗವಂತನಿಗೆ ಕಳುಹಿಸಿದನು. ಶುಕಾಚಾರ್ಯರು ಹೋಗುವಾಗ ಆಕಾಶರಾಜನು ಸ್ವಲ್ಪದೂರ ಅವರ ಹಿಂದೆಯೇ ಹೋಗಿ 'ಹೇಗಾದರೂ ಮಾಡಿ ಆ ಭಗವಂತನ ಮನಸ್ಸನ್ನು ವಶಮಾಡಿಕೊಳ್ಳಿರಿ. ವರದಕ್ಷಿಣೆಯ ವಿಷಯ ಒಂದೂ ಯೋಚಿಸಬೇಡ. ಹತ್ತುಸಾವಿರವೋ ಲಕ್ಷವೋ ಕೋಟಿಯೋ ಎಷ್ಟು ಬೇಕಾದರೂ ನಾನು ಕೊಡಲಿಕ್ಕೆ ಸಿದ್ಧನಿರುವೆನು' ಎಂದು ಹೇಳಿದನು. ಈರೀತಿಯಾಗಿ ರಾಜನು ಹೇಳಿದ ಮೇಲೆ ಶುಕಾಚಾರ್ಯರು ಮಧ್ಯಾಹ್ನಕಾಲದಲ್ಲಿ ಶುಕಾಚಾರ್ಯರು ವೇಂಕಟಾಚಲಕ್ಕೆ ಹೋದರು.

ಶ್ರೀನಿವಾಸನು ತಾಯಿಯನ್ನು ನೋಡದೆ ತಾಯಿಯು ಯಾಕೆ ಬರಲಿಲ್ಲ? ಎಂದು

ಯೋಚಿಸುವಂತೆ ಕೂತಿದ್ದನು. ಅದೇ ಸಮಯದಲ್ಲಿ ಶುಕಾಚಾರ್ಯರು ಬರುವುದನ್ನು ನೋಡಿದನು. ಕೂಡಲೇ ಶ್ರೀನಿವಾಸನು 'ಮುನಿಗಳೇ ಕಾರ್ಯವು ಕಾಯೋ ಹಣ್ಣೋ ಎಂದರು. ಅದಕ್ಕೆ ಶುಕಮುನಿಗಳು 'ಭಗವಂತನೇ! ನಿನ್ನ ಕಾರ್ಯವು ಯಾವಾಗಲೂ ಹಣ್ಣೇ. ಕಾಯಿಯು ಯಾಕೆ ಆಗುತ್ತದೆ?' ಎಂದರು. ಶ್ರೀನಿವಾಸನಿಗೆ ಉದ್ದಕ್ಕೆ ನಮಸ್ಕರಿಸಿದರು. ಭಗವಂತನು ಎಬ್ಬಿಸಿ ಗಾಢಾಲಿಂಗನ ಮಾಡಿದನು. ಆಮೇಲೆ ಶುಕಾಚಾರ್ಯರೊಡನೆ 'ಲೋಕದಲ್ಲಿ ಒಬ್ಬರಿಗೆ ಮದುವೆ ಮಾಡಿಸುವುದಕ್ಕಾಗಿ ಸಾವಿರಾರು ಸುಳ್ಳು ಹೇಳುವರು. ಆದರೂ ಅವರು ದೋಷವನ್ನು ಹೊಂದದೆ ನನ್ನ ಲೋಕಕ್ಕೆ ಹೋಗುವರು. ಹೀಗಿರುವಾಗ ನನಗೆ ಮದುವೆ ಮಾಡಿಸಿದ ನಿಮಗೆ ''ನಾನೇನೆನ್ನಬೇಕು? ಲೋಕದಲ್ಲಿ ಒಬ್ಬ ಯಜಮಾನನು ತನ್ನ ಹೆಂಡತಿ ಮಕ್ಕಳನ್ನು ರಕ್ಷಿಸುವನು. ನನಗೋ ಹಾಗಲ್ಲ. ಬ್ರಹ್ಮಾಂಡವೇ ಮನೆಯು. ಬ್ರಹ್ಮನೇ ನಾಭಿಯಿಂದ ಹುಟ್ಟಿದ ಮಗನು. ಲಕ್ಷ್ಮೀದೇವಿಯೇ ಪತ್ನಿಯು. ತೊಂಭತ್ತು ಲಕ್ಷ ಯೋನಿಗಳಲ್ಲಿ ಹುಟ್ಟಿರುವ ಜೀವರೆಲ್ಲರೂ ನನ್ನ ಮಕ್ಕಳು. ಇವರನ್ನೆಲ್ಲಾ ರಕ್ಷಣೆ ಮಾಡಲಿಕ್ಕೆ ನಾನು ದೀಕ್ಷಿತನಾಗಿರುವೆನು. ಇಂತಹ ಜಗತ್ಕುಟುಂಬಿಯಾದ ನನಗೆ ಮದುವೆ ಮಾಡಿಸಲಿಕ್ಕೆ ನೀವು ಸುಳ್ಳು ಹೇಳಿದ್ದರೂ ಅದು ನಿಮಗೆ ದೋಷವೇ ಆಗಲಾರದು. ನೀವು ಮಾಡಿದ ಉಪಕಾರಕ್ಕೆ ಪ್ರತ್ಯುಪಕಾರ ಮಾಡಲಿಕ್ಕೆ ಇಲ್ಲವೇ ಇಲ್ಲ. ಆದರೂ ನನ್ನ ಶರೀರಾಲಿಂಗನವನ್ನು ಕೊಡುವೆನು. ನನ್ನ ಶರೀರದಿಂದ ಶ್ರೇಷ್ಠವಾದದ್ದು ನಿಮಗೆ ಮತ್ತೊಂದು ಇರುವುದಿಲ್ಲ' ಎಂದು ಹೇಳಿ ಆಲಂಗಿಸಿದನು. 'ನೀವು ಮಾಡಿದ ಪುಣ್ಯಕ್ಕೆ ಅವಧಿಯೇ ಇಲ್ಲ. ಇದೇ ರೀತಿಯಾದ ಪೂರ್ವದಲ್ಲಿ ಹನುಮಂತನು ಸೀತಾನಿಮಿತ್ತವಾಗಿ ಉಪಕಾರವನ್ನು ಮಾಡಿದ್ದನು. ಅವನಿಗೆ ನಾನು ಸಂತೋಷದಿಂದ ಸತ್ಯಲೋಕಾಧಿಪತ್ಯವನ್ನು ಕೊಟ್ಟಿರುವೆನು. ನೀವೂ ಹಾಗೆಯೇ ಶ್ರೇಷ್ಠವಾದ ಕರ್ಮವನ್ನು ಮಾಡಿರುವಿರಿ' ಎಂದು ಹೇಳಿ ಅನೇಕ ಉಪಚಾರ ವಚನಗಳನ್ನು ಹೇಳಿದರು.

ತರುವಾಯ ಭಗವಂತನು 'ನಿಮ್ಮ ಕಂಕುಳಲ್ಲಿ ಸೂರ್ಯನಂತೆ ಪ್ರಕಾಶಿಸುವುದೇನು? ಎಂದು ಕೇಳಿದನು. ಶುಕಾಚಾರ್ಯರು 'ಇದು ರಾಜಾಧಿರಾಜನು ಬರೆದು ಕಳುಹಿಸಿರುವ ಪತ್ರಿಕೆಯು. ಇದರ ಕಾರಣವನ್ನು ಮೊದಲೇ ನಿಮ್ಮ ಹತ್ತಿರ ಹೇಳಿರುವೆನು. ಈರೀತಿಯಾಗಿ ಹೇಳಿ ಆ ಪತ್ರಿಕೆಯ ಕೊಡಲು ಶ್ರೀನಿವಾಸದೇವರು ಅದನ್ನು ತಲೆಯಮೇಲೆ ಇಟ್ಟುಕೊಂಡರು. 'ರಾಜರು ಕ್ಷೇಮದಿಂದ ಇದ್ದಾರೋ? ಅವರ ಪತ್ನಿಯು ಆರೋಗ್ಯದಿಂದ ಇದ್ದಾಳೋ? ಅವನ ತಮ್ಮನಿಗೂ ಮಗನಿಗೂ

ಕ್ಷೇಮವೋ? ಎಂದು ಕುಶಲ ಪ್ರಶ್ನೆಯನ್ನು ಕೇಳಿದರು. ಭಗವಂತನೇ! ಅವರೆಲ್ಲರಿಗೂ ಕ್ಷೇಮವೇ! ಎಂದು ಶುಕಮುನಿಗಳು ಹೇಳಿದರು. ತರುವಾಯ ಪರಮಾತ್ಮನು ಸಂತೋಷದಿಂದ ಆ ಪತ್ರಿಕೆಯನ್ನು ಓದಿದನು. 'ನಿಮ್ಮ ಮಾತನ್ನು ಅನುಸರಿಸಿ ನಾನೂ ರಾಜನಿಗೆ ಪತ್ರಿಕೆಯನ್ನು ಬರೆಯುವೆನು' ಎಂದನು.

ತರುವಾಯ ಭಗವಂತನು 'ರಾಜಾಧಿರಾಜ ಪೂಜ್ಯನಾದ ಸುಧರ್ಮರಾಜನ ಮಗನಾದ ಮಹಾರಾಜನಿಗೆ ಭಕ್ತಿಯಿಂದ ನಮಸ್ಕಾರವನ್ನು ಮಾಡಿ ಶ್ರೀನಿವಾಸನು ಬರೆದಿರುವ ಶುಭಪತ್ರಿಕೆಯು ರಾಜಾಧಿರಾಜರ ಕಿರೀಟದಿಂದ ತಾಡಿತವಾದ ಪಾದಪೀಠವುಳ್ಳ ನಮ್ಮ ಬಂಧುಗಳಲ್ಲಿ ಶ್ರೇಷ್ಠನಾದ ಸುಧರ್ಮರಾಜನ ಪುತ್ರನಾದ ಆಕಾಶರಾಜನೆಂದು ಪ್ರಸಿದ್ಧವಾದ ಹೆಸರಿನಿಂದ ದಿಕ್ಕುಗಳಲ್ಲಿ ವ್ಯಾಪ್ತವಾದ ಕೀರ್ತಿಯುಳ್ಳ ಮಹಾನುಭಾವನೇ! ಬಾಲಕನಾದ ಶ್ರೀನಿವಾಸನು ವಿಜ್ಞಾಪನೆಯನ್ನು ಮಾಡುತ್ತಿರುವನು. ನೀವು ಬರೆದ ಪತ್ರಿಕೆಯನ್ನು ನೋಡಿ ನನಗೆ ಸಂತೋಷ ವುಂಟಾಯಿತು. ವೈಶಾಖಶುದ್ಧ ದಶಮೀ ಶುಕ್ರವಾರದಲ್ಲಿ ನಾನು ನಿಮ್ಮ ಕನ್ಯೆಯನ್ನು ಅಂಗೀಕಾರ ಮಾಡುತ್ತೇನೆ. ಪೂರ್ವದಲ್ಲಿ ಸಮುದ್ರರಾಜನು ನನಗೆ ಕನ್ಯಾದಾನವನ್ನು ಮಾಡಿ ಒಳ್ಳೇ ಕೀರ್ತಿಯನ್ನು ಪಡೆದಿರುವನೋ ಅದೇರೀತಿಯಾಗಿ ನೀನೂ ಕೂಡ ನನಗೆ ಕನ್ಯಾದಾನವನ್ನು ಮಾಡಿ ಕೀರ್ತಿಯನ್ನು ಪಡೆಯುವ ಪೂರ್ವದಲ್ಲಿ ಕಪಿಲದೇವರಿಂದ ಮೃತರಾಗಿರುವ ಸಗರರಾಜನ ಮಕ್ಕಳನ್ನು ಭಗೀರಥನು ಗಂಗೆಯನ್ನು ತಂದು ಉದ್ಧರಿಸಿ ಕೀರ್ತಿಯನ್ನು ಪಡೆದನೋ ಅದೇರೀತಿಯಾಗಿ ನೀನೂ ಕೂಡ ನನಗೆ ಕನ್ಯಾದಾನವನ್ನು ಮಾಡಿ ಪೂರ್ವಿಕರನ್ನೆಲ್ಲಾ ಉದ್ಧಾರ ಮಾಡಿ ಕೀರ್ತಿಯನ್ನು ಹೊಂದು. ನಿನಗೆ ವಿಶೇಷವಾಗಿ ನಾನು ಬರೆಯತಕ್ಕದ್ದೇನಿದೆ? ಶುಕಾಚಾರ್ಯರು ಎಲ್ಲವನ್ನು ತಿಳಿದವರಾಗಿರುವರು. ಈರೀತಿಯಾಗಿ ನಮಸ್ಕಾರಪೂರ್ವಕವಾದ ವಿಜ್ಞಾಪನೆಯು'' ಈ ಪ್ರಕಾರವಾಗಿ ಶ್ರೀನಿವಾಸನು ಪತ್ರಿಕೆಯನ್ನು ಬರೆದು ಶುಕಾಚಾರ್ಯರ ಮೂಲಕ ಕಳುಹಿಸಿದನು.

ಶುಕಾಚಾರ್ಯರೊಡನೆ ಕಳುಹಿಸುವಾಗ ''ನನ್ನ ಕುಲಗೋತ್ರ ಇತ್ಯಾದಿಗಳನ್ನು ಒಂದನ್ನೂ ತಿಳಿಯದೆ ರಾಜನು ನನಗೆ ಹೇಗೆ ಕನ್ಯಾದಾನವನ್ನು ಮಾಡುವನು' ಎಂದು ಕೇಳಿದನು. ಶುಕಾಚಾರ್ಯರು 'ಭಗವಂತನೇ ನಿನಗೆ ಕುಲವಿಲ್ಲ. ಗೋತ್ರವಿಲ್ಲ. ಜನ್ಮವಿಲ್ಲ. ಮರಣವಿಲ್ಲ. ವಾರ್ಧಕ್ಯವಿಲ್ಲ. ವೃದ್ಧಿಯಿಲ್ಲ. ಹ್ರಾಸವಿಲ್ಲ. ಲೋಕವಿಡಂಬನೆ ಯನ್ನು ಮಾಡುವಿ. ಜಗತ್ತಿನಲ್ಲಿ ಪ್ರಸಿದ್ಧನಾದ ನಿನಗೆ ಕುಲಗೋತ್ರಗಳ ಆವಶ್ಯಕತೆಯು ಇರುವುದಿಲ್ಲ. ನನ್ನ ಮಾತಿನಿಂದ ರಾಜನು ನಿನಗೆ ಕನ್ಯಾದಾನವನ್ನು ಮಾಡುವನು. ನನ್ನ

ಮಾತಿನಿಂದ ದಯಮಾಡಿ ನೀನು ಸ್ವೀಕರಿಸಬೇಕು'' ಈ ರೀತಿಯಾಗಿ ಶುಕಾಚಾರ್ಯರು ಭಗವಂತನನ್ನು ಸ್ತುತಿಸಿ ಭಗವಂತನ ದರ್ಶನದಿಂದ ಉಂಟಾದ ಸಂತೋಷವನ್ನು ಅನುಭವಿಸುತ್ತಾ ಹೋದರು.



## ಬಕುಳೆಯ ಆಗಮನ [1]

ಶುಕಾಚಾರ್ಯರು ಹೊರಟುಹೋದ ಮೇಲೆ ಶ್ರಮದಿಂದ ಬರುತ್ತಿರುವ ತಾಯಿ ಬಕುಳೆಯನ್ನು ಭಗವಂತನು ನೋಡಿದನು. ಭಗವಂತನು ಏನೂ ತಿಳಿಯದವನಂತೆ ನಟಿಸುತ್ತಾ ತಾಯಿಗೆ ನಮಸ್ಕರಿಸಿ ಅಮ್ಮ ಏಕೆ ಇಷ್ಟು ಹೊತ್ತು ಆಯಿತು? ಅಲ್ಲಿ ಏನು ವೃತ್ತಾಂತವು ನಡೆಯಿತು? ಹೇಳು ಎಂದು ಕೇಳಿದನು.

ಅದಕ್ಕೆ ಬಕುಳೆಯು 'ವೇಂಕಟೇಶ! ಬಹಳ ಯತ್ನದಿಂದ ನಿನ್ನ ಕಾರ್ಯವು ಸಾಧಿಸಲ್ಪಟ್ಟಿತು. ಆದರೆ ದೈವವೇ ಮುಖ್ಯಕಾರಣವು. ಪೌರುಷವು ಮುಖ್ಯವಲ್ಲ. ದೈವೇಚ್ಛೆಯಿಂದ ನಾರಾಯಣಾಶ್ರಮದಿಂದ ಧರ್ಮದೇವತೆಯೆಂಬವಳು ಒಬ್ಬಳು ಬಂದಿದ್ದಳಂತೆ. ಅವಳು ನಿನಗೆಯೇ ಕನ್ಯೆಯನ್ನು ಕೊಡಬೇಕೆಂದು ಹೇಳಿದಳಂತೆ. ಕನ್ಯೆಯೂ ಕೂಡ ನೀನು ಹೊರತು ಬೇರೆ ಲೌಕಿಕವನ್ನು ಇಚ್ಛಿಸುವುದಿಲ್ಲ. ಅವರಿಬ್ಬರ ಮಾತನ್ನು ಕೇಳಿ ಆಕಾಶರಾಜನು ನನ್ನ ಮಗಳನ್ನು ವೇಂಕಟಾದ್ರಿನಿವಾಸಿಯಾದ ಶ್ರೀನಿವಾಸನಿಗೆ ಮದುವೆ ಮಾಡಿಕೊಡುತ್ತೇನೆ ಎಂದು ಸಭಾಮಧ್ಯದಲ್ಲಿ ಸಂತೋಷದಿಂದ ಸಂಕಲ್ಪ ಮಾಡಿರುವನು. ಶ್ರೀನಿವಾಸ! ಈ ಮಹಾಕಾರ್ಯವು ನಿನ್ನಿಂದಲೇ ನಡೆಯಿತು. ನೀನು ಹೊರತು ಬೇರೆ ಮುಖ್ಯದೇವತೆಯು ಯಾರಿದ್ದಾನೆ?' ಎಂದು ಹೇಳಿದಳು.

ಬಕುಳೆಯ ಮಾತನ್ನು ಕೇಳಿ ಭಗವಂತನು ಮುಗುಳುನಗೆಯುಳ್ಳವನಾದನು. ಬಕುಳೆಯ ಮಾತನ್ನು ಕೇಳಿ ಅವಳನ್ನು ಸಂತೋಷಪಡಿಸಿ ಯೋಚನೆ ಮಾಡುವಂತೆ ನಟಿಸುತ್ತಾ ಕೂತುಕೊಂಡನು.



1. ಭ.ಪು.ಅ.9

# ದೇವತೆಗಳನ್ನು ಕರೆಯುವುದಕ್ಕೆ ಗರುಡಶೇಷರ ಆಗಮನ[1]

ಶ್ರೀಭಗವಂತನು ಬಕುಳೆಯೊಡನೆ 'ಅಮ್ಮ! ನನಗೆ ಮದುವೆಯಾಗುವ ಯೋಚನೆಯಿಲ್ಲ. ನನಗೊಬ್ಬರೂ ಬಂಧುಗಳಿಲ್ಲ. ನಾವಿಬ್ಬರೇ ಮದುವೆಯ ಮನೆಗೆ ಹೋಗಬೇಕು. ಆ ಮಹಾರಾಜನಿಗೆ ಅನೇಕ ಬಂಧುಗಳಿರುವರು. ಬಂಧುಗಳಿಲ್ಲದಿರುವ ನನಗೂ ಬಂಧುಗಳುಳ್ಳ ರಾಜನಿಗೆ ಸಂಬಂಧವು ಪ್ರಶಸ್ತವಲ್ಲ. ಯಾರಿಬ್ಬರಿಗೆ ಸಮವಾದ ಹಣವಿರುವುದೋ, ಸಮವಾದ ಕುಲವಿರುವುದೋ ಅವರಿಬ್ಬರಿಗೇ ವಿವಾಹವೂ ಸ್ನೇಹವೂ ಶೋಭಿಸುವುದು. ಉತ್ತಮಾಧಮರಿಗೆ ಶೋಭಿಸಲಾರದು. ನಾನು ಒಬ್ಬಂಟಿಗನು. ರಾಜನಿಗೆ ಬಹುಜನ ಬಂಧುಗಳಿರುವರು. ಆದುದರಿಂದ ಅವನಿಗೂ ನನಗೂ ಸಂಬಂಧವು ಹೇಗೆ ಸರಿಬೀಳುವುದು. ಇದೊಂದು ಯೋಚನೆಯು ನನ್ನನ್ನು ಪೀಡಿಸುತ್ತಿದೆ. ಆ ರಾಜನಾದರೂ ಬಂಧುಹೀನನಾದ ನನಗೆ ಹೇಗೆ ಹೆಣ್ಣನ್ನು ಕೊಡುವನು' ಎಂದು ಹೇಳಿದನು.

ಅದನ್ನು ಕೇಳಿ ಬಕುಳೆಯು 'ಭಗವಂತ! ನಿನ್ನಂತೆ ಇರುವ ಪುರುಷರು ಸುಳ್ಳು ಹೇಳಲಾರರಲ್ಲಾ! ಮುನಿಗಳು ಸತ್ಯವನ್ನೇ ಪ್ರಶಂಸಿಸುತ್ತಾರೆ. ಶುಕಾಚಾರ್ಯರು ಬೃಹಸ್ಪತ್ಯಾಚಾರ್ಯರು ನಿನ್ನ ಕಾರ್ಯದಲ್ಲಿ ಆಸಕ್ತರಾಗಿದ್ದಾರೆ. ಆ ರಾಜನೂ ನಿನಗೆ ಹೆಣ್ಣನ್ನು ಕೊಡಬೇಕೆಂದು ತುಂಬಾ ಆಸೆಪಡುತ್ತಿದ್ದಾನೆ. ಧರ್ಮಿಷ್ಠನಾದ ಆ ರಾಜನ ಆಸೆಯನ್ನು ವ್ಯರ್ಥಮಾಡಬೇಡ. ನಿನ್ನ ಬಂಧುಗಳಿಗೇನೆ ಕಡಿಮೆಯದೆ? ನಿನ್ನ ಬಂಧುಗಳಾದ ಬ್ರಹ್ಮರುದ್ರಾದೇವತೆಗಳನ್ನೆಲ್ಲಾ ಕರೆಯುವವನಾಗು. ನಿನ್ನ ಮಕ್ಕಳು ಮೊಮ್ಮಕ್ಕಳು ಸೊಸೆಯಂದಿರು ಎಲ್ಲರೂ ಬರಲಿ. ಆ ರಾಜನೂ ನಿನ್ನ ಬಂಧುಗಳನ್ನೆಲ್ಲಾ ನೋಡಲಿ! ಎಂದು ಹೇಳಿದಳು.

ಆಗ ಭಗವಂತನು ಗರುಡದೇವರನ್ನು ಶೇಷದೇವರನ್ನು ಸ್ಮರಿಸಿದನು. ಆಗಲೇ ಗರುಡದೇವರೂ ಶೇಷದೇವರೂ ಅಲ್ಲಿಗೆ ಬಂದರು. ಭಕ್ತಿಯಿಂದ ಮುಂದೆ ಬಂದು ನಿಂತಿರುವ ಅವರಿಬ್ಬರನ್ನು ಭಗವಂತನು ನೋಡಿದನು.

ಶ್ರೀನಿವಾಸನು 'ಗರುಡ! ನೀನು ನನ್ನ ಮಗನಾದ ಸತ್ಯಲೋಕಾಧಿಪತಿಯಾದ ಬ್ರಹ್ಮನ ಸಮೀಪಕ್ಕೆ ಹೋಗು. ಶೇಷ! ನೀನು ನನ್ನ ಮೊಮ್ಮಗನಾದ ರುದ್ರನ ಬಳಿಗೆ ಹೋಗು' ಎಂದು ಹೇಳಿ ಇಬ್ಬರ ಕೈಯಲ್ಲಿಯೂ ಪತ್ರವನ್ನು ಬರೆದು ಕಳುಹಿಸಿದನು. ಅವರಿಬ್ಬರೂ ಭಗವಂತನಿಗೆ ನಮಸ್ಕರಿಸಿ ಆಕಾಶಮಾರ್ಗದಲ್ಲಿ ಹೋದರು.

---

1. ಭ.ಪು.ಅ.10

# ಬ್ರಹ್ಮದೇವರ ಆಗಮನ [1]

ಗರುಡದೇವರು ಸತ್ಯಲೋಕಕ್ಕೆ ಹೋಗಿ ಅಲ್ಲಿ ಸೂರ್ಯನಂತೆ ಪ್ರಕಾಶಿಸುತ್ತಿದ್ದ ಬ್ರಹ್ಮದೇವರನ್ನು ನೋಡಿ ಭಕ್ತಿಯಿಂದ ನಮಸ್ಕರಿಸಿ ಪತ್ರಿಕೆಯನ್ನು ಕೊಟ್ಟರು. ಬ್ರಹ್ಮದೇವರು ಗರುಡದೇವರನ್ನು ನೋಡಿ 'ಗರುಡ! ಬಹುಕಾಲದ ಮೇಲೆ ಬಂದಿರುವಿ. ನಮ್ಮ ತಂದೆಯಾದ ಭಗವಂತನು ಎಲ್ಲಿ ಇರುವನು' ಎಂದು ಕೇಳಿದರು.

ಅದಕ್ಕೆ ಗರುಡದೇವರು—'ಶ್ರೀಭಗವಂತನು ವೈಕುಂಠಗಿರಿಯಲ್ಲಿ ವಾಸ ಮಾಡುತ್ತಿರುವನು. ಅವನ ವಿವಾಹನಿಮಿತ್ತವಾಗಿ ನಾನೀಗ ಬರುತ್ತಿರುವೆನೆಂದು ತಿಳಿಯಿರಿ. ಆ ಭಗವಂತನು ಬರೆದು ಕಳುಹಿಸಿರುವ ಈ ಪತ್ರಿಕೆಯನ್ನು ನೋಡಿರಿ' ಎಂದು ಹೇಳಿ ಪತ್ರಿಕೆಯನ್ನು ಕೊಟ್ಟರು.

ಬ್ರಹ್ಮದೇವರು ಪತ್ರಿಕೆಯನ್ನು ತೆಗೆದುಕೊಂಡು 'ಚಿರಂಜೀವಿಯಾದ ನಾಭಿಯಿಂದ ಉದ್ಭವಿಸಿದ ಮಗನಾದ ಬ್ರಹ್ಮನಿಗೆ ವೇಂಕಟಾದ್ರಿನಾಥನಾದ ಶ್ರೀನಿವಾಸನ ಸಂಪೂರ್ಣವೇದೋಕ್ತ ಮಂಗಲ ಆಶೀರ್ವಾದಗಳು. ಕಲಿಯುಗದಲ್ಲಿ ಆಕಾಶರಾಜನು ನನಗೆ ಕನ್ಯಾದಾನವನ್ನು ಮಾಡುತ್ತಾನೆ. ಪತ್ರವನ್ನು ನೋಡಿದ ಕೂಡಲೇ ಎಲ್ಲರನ್ನೂ ಕರೆದುಕೊಂಡು ಬೇಗನೇ ಬಂದು ನನ್ನ ಮದುವೆಯನ್ನು ನೋಡಿ ಸುಖದಿಂದ ಹೋಗು' ಎಂದು ಓದಿದರು. ಈರೀತಿಯಾಗಿ ಪತ್ರದ ಅಭಿಪ್ರಾಯವನ್ನು ಓದಿ ಸ್ವಲ್ಪಹೊತ್ತು ಯೋಚನೆ ಮಾಡಿ ಬ್ರಹ್ಮದೇವರು ಬಹುಸಂತೋಷ ಹೊಂದಿದರು. ದೇವರ ಮದುವೆಯನ್ನು ನೋಡಲು ಕುತೂಹಲವುಳ್ಳವರಾದರು.

ಆಮೇಲೆ ಬ್ರಹ್ಮದೇವರು ದ್ವಾರಪಾಲಕರನ್ನು ಕರೆದು ಭೂಮಿಗೆ ಪ್ರಯಾಣ ಮಾಡುವುದನ್ನು ಸೂಚಿಸುವುದಕ್ಕಾಗಿ ಭೇರಿಯನ್ನು ಬಡೆಯಲು ಹೇಳಿದರು. ದ್ವಾರಪಾಲಕರು ಭೇರಿಯನ್ನು ಬಡೆಯಲು ವೃತ್ತಾಂತವನ್ನು ತಿಳಿಸುವ ಪುರುಷನು ಬಂದು ಬ್ರಹ್ಮದೇವರೊಡನೆ 'ಪ್ರಯಾಣಸೂಚಕವಾದ ಭೇರಿಯ ಶಬ್ದವನ್ನು ಎಲ್ಲ ಜನರೂ ಕುತೂಹಲದಿಂದ ಕೇಳುತ್ತಿದ್ದಾರೆ. ಯಾವ ದೇಶಕ್ಕೆ ಪ್ರಯಾಣಮಾಡಲು ಭೇರಿಯನ್ನು ಬಡಿಯುತ್ತಿರುವುದು?' ಎಂದು ಕೇಳಿದನು.

ಅದಕ್ಕೆ ಬ್ರಹ್ಮದೇವರು ಭಾರತವರ್ಷದಲ್ಲಿ ಶೇಷಾಚಲವನ್ನು ಕುರಿತು ಚತುರಂಗಸೈನ್ಯವು ಹೋಗಬೇಕಾಗಿದೆ ಎಂದು ಹೇಳಿ ಸೇನಾಪತಿಯಾದ ಸ್ಕಂದನನ್ನು

1. ಭ.ಪು.ಅ.10

ಕರೆದು 'ಸ್ಕಂದ ! ಎಲ್ಲ ದೇವತೆಗಳನ್ನೂ ದಿಕ್ಪಾಲಕರನ್ನೂ ಕರೆಯುವವನಾಗು ಎಂದು ಹೇಳಿ ಸತ್ಯಲೋಕದ ಜನರೊಡನೆ 'ನೀವೆಲ್ಲರೂ ರಸಿಕರು. ಕಲಿಯುಗದಲ್ಲಿ ನಡೆಯುವ ನಮ್ಮ ತಂದೆಯ ಮದುವೆಗೆ ಎಲ್ಲರೂ ಬನ್ನಿರಿ' ಎಂದರು.

ಸೇನಾನಾಯಕರು 'ನಮಗೆ ಕೊಡುವ ಒಂದು ವರ್ಷದ ಹಣವನ್ನು ಈಗಲೇ ಕೊಡಬೇಕು. ಹಾಗಾದರೆ ನಾವೆಲ್ಲರೂ ನಿಮ್ಮೊಡನೆ ಬರುವೆವು' ಎಂದರು. ಹಾಗೆಯೇ ಆಗಲಿ ಎಂದು ಹೇಳಿ ಬ್ರಹ್ಮದೇವರು ಅವರಿಗೆ ಹಣವನ್ನು ಕೊಟ್ಟರು. ನಾನಾವಿಧ ಆಭರಣಗಳನ್ನು ವಸ್ತ್ರಗಳನ್ನೂ ಮದುವೆಗೆ ಹೋಗುವುದಕ್ಕಾಗಿ ತನ್ನ ಹೆಂಡತಿಯರ ಬಳಿಗೆ ಕಳುಹಿಸಿದರು. ತಾನೇ ಮನೆಯ ಒಳಗೆ ಬಂದು ತನ್ನನ್ನು ಅಲಂಕರಿಸಿಕೊಂಡರು. ಒಂದು ತಲೆಗೆ ಕಿರೀಟವನ್ನು ಇಟ್ಟುಕೊಂಡರು. ಮತ್ತೊಂದು ತಲೆಗೆ ಕೆಂಪಾದ ರುಮಾಲೆಯನ್ನು ಕಟ್ಟಿಕೊಂಡರು. ಇನ್ನೊಂದು ತಲೆಗೂ ವಸ್ತ್ರವನ್ನು ಸುತ್ತಿಕೊಂಡರು. ಇನ್ನೊಂದು ತಲೆಯನ್ನು ಧರ್ಭೆಗಳಿಂದ ಅಲಂಕರಿಸಿಕೊಂಡರು. ನಾನಾ ಆಭರಣಗಳನ್ನು ಧರಿಸಿದರು. ನವರತ್ನಗಳಿಂದ ಕೂಡಿರುವ ಕವಚವನ್ನು ಧರಿಸಿದರು. ನಾನಾ ಆಭರಣಗಳನ್ನು ಧರಿಸಿದರು. ಗಾಯತ್ರೀ, ಸಾವಿತ್ರೀ, ಸರಸ್ವತಿಯರನ್ನೂ ಮಕ್ಕಳು ಮೊಮ್ಮಕ್ಕಳನ್ನೂ ಆನೆ ಕುದುರೆ ಇತ್ಯಾದಿಗಳನ್ನು ಅಲಂಕಾರಗೊಳಿಸಿ ಪ್ರಯಾಣಕ್ಕೆ ಉದ್ಯುಕ್ತರಾದರು. ತನ್ನ ಸೇನೆಯನ್ನು ಮುಂದೆ ಮಾಡಿಕೊಂಡು ಬ್ರಹ್ಮದೇವರು ಚಂದ್ರನಂತೆ ಶೋಭಿಸುವ ಹಂಸಪಕ್ಷಿಯನ್ನು ಏರಿದರು. ಹೆಂಗಸರು ವಿಚಿತ್ರಗಳಾದ ನಾನಾ ವಿಮಾನಗಳನ್ನು ಏರಿದರು. ಅನೇಕ ಶೂರರು ಆನೆ ಕುದುರೆಗಳ ಮೇಲೆ ಕುಳಿತುಕೊಂಡರು. ಮೇಲೆ ಎತ್ತಿದ ಪತಾಕೆಗಳಿಂದ ಅಲಂಕೃತರಾಗಿ ನಾನಾ ಆಯುಧಗಳನ್ನು ಧರಿಸಿಕೊಂಡು ವೀರರು ಶೋಭಿಸಿದರು. ಅವರ ಮಧ್ಯದಲ್ಲಿ ಬ್ರಹ್ಮದೇವರು ನಕ್ಷತ್ರಗಳ ಮಧ್ಯದಲ್ಲಿ ಚಂದ್ರನಂತೆ ಪ್ರಕಾಶಿಸಿದರು. ಆಗ ಬಂಗಾರದ ಕೋಲುಉಳ್ಳ ರತ್ನಕಲಶದಿಂದ ಅಲಂಕೃತವಾದ ಮೂವತ್ತುಮೈಲು ವಿಸ್ತೃತವಾದ ಹತ್ತುಲಕ್ಷ ಜನರಿಂದ ಕೂಡಿದ ಶ್ವೇತಛತ್ರವು ಆಕಾಶವನ್ನು ಪ್ರಕಾಶಿಸಿತು. ಆಗ ಅನೇಕ ವಾದ್ಯಗಳನ್ನು ಬಾರಿಸಿದರು. ಎಲ್ಲಾ ದೇವತೆಗಳೂ ಶ್ರೀನಿವಾಸದೇವರ ಮದುವೆಯನ್ನು ನೋಡಬೇಕೆಂಬ ಕುತೂಹಲದಿಂದ ಬ್ರಹ್ಮದೇವರನ್ನು ಅನುಸರಿಸಿ ಹೋದರು.

ಸತ್ಯಲೋಕದಿಂದ ತಪೋಲೋಕಕ್ಕೆ ಅಲ್ಲಿಂದ ಜನೋಲೋಕಕ್ಕೆ ಆಮೇಲೆ ಮಹರ್ಲೋಕಕ್ಕೆ ಅನಂತರ ಸುವರ್ಲೋಕಕ್ಕೆ ತರುವಾಯ ಭೂಲೋಕಕ್ಕೆ ಈರೀತಿಯಾಗಿ ಕ್ರಮದಿಂದ ಬರುತ್ತಿರುವ ಬ್ರಹ್ಮದೇವರನ್ನು ಋಷಿಗಳು ನೋಡಿದರು.

ಕೆಲವರು ಬ್ರಹ್ಮದೇವರನ್ನು ನೋಡಿ ನಾರಾಯಣದೇವರೇ ಬರುತ್ತಿರುವರೆಂದರು. ಇನ್ನು ಕೆಲವು 'ನಾಲ್ಕು ಮುಖಗಳಿವೆ. ನಾರಾಯಣನಲ್ಲವೆಂದರು. ಇನ್ನು ಕೆಲವರು ಹಂಸಪಕ್ಷಿಯ ಮೇಲೆ ಕೂತಿರುವ ಬ್ರಹ್ಮದೇವರನ್ನು ನೋಡಿ ಬ್ರಹ್ಮದೇವರು ಎಲ್ಲಿಗೆ ಪ್ರಯಾಣಮಾಡುವರೆಂದು ಕೇಳಿದರು. ಅದಕ್ಕೆ ಬ್ರಹ್ಮದೇವರೊಡನೆ ಬರುತ್ತಿರುವ ಜನರು ನಾವು ಭೂಮಿಯಲ್ಲಿ ನಡೆಯುವ ಶ್ರೀನಿವಾಸದೇವರ ಮದುವೆಯನ್ನು ನೋಡಲಿಕ್ಕೆ ಹೋಗುತ್ತಿರುವೆವು' ಎಂದರು. ಅದನ್ನು ಕೇಳಿ ಋಷಿಗಳೆಲ್ಲರೂ ಶಿಷ್ಯರನ್ನೂ ಮಕ್ಕಳನ್ನೂ ಪತ್ನಿಯರನ್ನೂ ಕರೆದುಕೊಂಡು ಅಗ್ನಿಹೋತ್ರಸಹಿತರಾಗಿ ಹೋದರು. ಈರೀತಿಯ ವೈಭವದಿಂದ ಬ್ರಹ್ಮದೇವರು ವೇಂಕಟಾಚಲಕ್ಕೆ ಹೋದರು. ವಾದ್ಯಗಳ ದುಂದುಭಿಗಳ ಶಬ್ದದಿಂದ ಲೋಕಗಳೆಲ್ಲ ವ್ಯಾಪಿಸಿಹೋದವು.

ಈ ಸಮಯದಲ್ಲಿ ಸರ್ವಜ್ಞನಾದ ಶ್ರೀಭಗವಂತನು ಲೋಕದ ಜನರಂತೆ ನಟನೆ ಮಾಡುತ್ತಾ 'ಅಮ್ಮ! ಮಗನ ಬಳಿಗೆ ಕಳುಹಿಸಿದ ಗರುಡನು ಬರಲೇ ಇಲ್ಲವಲ್ಲಾ!' ಎಂದು ಹೇಳುತ್ತಿದ್ದನು. ಆಸಮಯದಲ್ಲಿ ಒಬ್ಬ ಆಳು ಕಣ್ಣಿಗೆ ಬಿದ್ದನು. ಅವನನ್ನು ನೋಡಿ ಭಗವಂತನು ಸಂತೋಷಪಟ್ಟನು. 'ನನ್ನ ಮಗನು ಎಲ್ಲಿ? ನಿನ್ನನ್ನು ಇಲ್ಲಿಗೆ ಯಾರು ಕಳುಹಿಸಿದರು?' ಎಂದು ಕೇಳಿದನು. ಅದಕ್ಕೆ ಆ ಆಳು 'ನಿಮ್ಮ ಮಗನು ಬರುತ್ತಾ ಇದ್ದಾರೆ. ಗಂಗಾನದಿಯನ್ನು ದಾಟುತ್ತಾ ಇದ್ದಾರೆ' ಎಂದನು. ಈರೀತಿಯಾಗಿ ಹೇಳುತ್ತಿರುವಾಗಲೇ ಮತ್ತೊಬ್ಬ ಭೃತ್ಯನು ಬಂದು 'ನಿಮ್ಮ ಮಗನು ಜನರಿಂದ ಕೂಡಿಕೊಂಡು ಗೋದಾವರೀನದಿಯನ್ನು ದಾಟುತ್ತಿರುವರು' ಎಂದನು. ಆ ದೂತನ ಮಾತನ್ನು ಕೇಳಿ ಶ್ರೀನಿವಾಸನು ಮುಗುಳುನಗೆ ಉಳ್ಳವನಾದನು. ಆಗ ಬ್ರಹ್ಮದೇವರಿಂದ ಕಳುಹಿಸಲ್ಪಟ್ಟ ಗರುಡದೇವರು ಬಂದರು. ಶ್ರೀನಿವಾಸನಿಗೆ ನಮಸ್ಕರಿಸಿ 'ಬ್ರಹ್ಮದೇವರು ಕೃಷ್ಣಾನದಿಯನ್ನು ದಾಟಿ ಶ್ರೀಶೈಲಕ್ಕೆ ಬಂದು ಅಹೋಬಲಕ್ಷೇತ್ರಕ್ಕೂ ಬಂದುಬಿಟ್ಟರು' ಎಂದು ಹೇಳಿದರು. ಆಗಲೇ ವಿಷ್ವಕ್ಸೇನನು ಬಂದು 'ನಿಮ್ಮ ಮಕ್ಕಳಾದ ಬ್ರಹ್ಮದೇವರು ತಂಬುರುತೀರ್ಥಕ್ಕೆ ಬಂದು ಸ್ನಾನ ಮಾಡುತ್ತಿರುವರು. ನಿಮ್ಮನ್ನು ನೋಡುವ ಕುತೂಹಲದಿಂದ ಇಲ್ಲಿಗೇ ಬರುವರು' ಎಂದರು. ಈರೀತಿಯಾಗಿ ಹೇಳಿದ ಮಾತನ್ನು ಕೇಳಿ ಭಗವಂತನು ಪುತ್ರಸ್ನೇಹದಿಂದ ಗರುಡಾರೂಢನಾಗಿ ಉತ್ತರದಿಕ್ಕಿಗೆ ಬ್ರಹ್ಮದೇವರಿದ್ದಲ್ಲಿಗೆ ಹೊರಟನು. ಆಗಲೇ ವಿಷ್ವಕ್ಸೇನನು ಓಡಿಹೋಗಿ ಬ್ರಹ್ಮದೇವರೊಡನೆ ಭಗವಂತನು ನಿಮ್ಮನ್ನು ನೋಡಲು ಗರುಡಾರೂಢನಾಗಿ ಬರುತ್ತಿರುವನು ಎಂದನು. ಆ ಮಾತನ್ನು ಕೇಳಿ ಹಂಸದ ಮೇಲೆ ಕೂತಿದ್ದ ಬ್ರಹ್ಮದೇವರು ಕೂಡಲೇ ಹಂಸದಿಂದ ಕೆಳಗೆ ಇಳಿದರು. ಪರಮಾತ್ಮನು

ಬರುತ್ತಿರುವ ದಿಕ್ಕಿಗೆ ಕಾಲು ನಡೆಯಿಂದಲೇ ಹೋದರು. ಬ್ರಹ್ಮದೇವರು ತಂದೆಯಾದ ಗೋವಿಂದನನ್ನು ನೋಡಿದರು. ಉದ್ದಕ್ಕೆ ನಮಸ್ಕರಿಸಿ ಕೈಮುಗಿದರು. ಶ್ರೀಭಗವಂತನು ಗರುಡದೇವರಿಂದ ಕೆಳಗೆ ಇಳಿದು ಬ್ರಹ್ಮದೇವರನ್ನು ಎಬ್ಬಿಸಿ ಆಲಿಂಗಿಸಿ ಹೇಳಿದನು. 'ಮಗನೇ ಏಳು. ಕೃಶನಾಗಿ ದುಃಖದಿಂದ ಇರುವ ನನ್ನನ್ನು ನೋಡು. ಬಹುಕಾಲದಿಂದ ನಿನ್ನನ್ನು ನೋಡಬೇಕೆಂದು ಆಸೆಯಿದ್ದಿತು. ನೀನು ನೋಡಲು ಸಿಗಲೇ ಇಲ್ಲ. ನೀನಿಲ್ಲದೆ ಇರಲಿಕ್ಕೆ ಆಗುವುದಿಲ್ಲ' ಎಂದು ಹೇಳಿದನು. ಈರೀತಿಯಾಗಿ ಭಗವಂತನು ಹೇಳುತ್ತಿರಲು ಬ್ರಹ್ಮದೇವರು ಒಂದು ಮಾತನ್ನು ಆಡಲಿಲ್ಲ. ಒಂದು ಮುಹೂರ್ತ ಆಮೇಲೆ ಪರಮಾತ್ಮನೂ ಮಾತಾಡಲಿಲ್ಲ. ಇಬ್ಬರೂ ಆನಂದಬಾಷ್ಪವುಳ್ಳವರಾಗಿ ಒಬ್ಬೊಬ್ಬರ ಮುಖವನ್ನು ನೋಡಿಕೊಂಡರು. ಈರೀತಿಯಾಗಿ ಕ್ರೀಡಾಮಾಡಿದರು. ಈಪ್ರಕಾರವಾಗಿರುವ ತಂದೆಮಕ್ಕಳನ್ನು ನೋಡಿ ಸತ್ಯಲೋಕದಲ್ಲಿರುವ ಜನರೆಲ್ಲರೂ ಭಗವಂತನ ಇಚ್ಛೆಯಿಂದ ಮೋಹಿತರಾಗಿ 'ಈ ತಂದೆಗೆ ಸದೃಶ ತಂದೆಯಿಲ್ಲ. ಈ ಮಗನಂತೆ ಇರುವ ಮಗನಿಲ್ಲ' ಎಂದುಕೊಂಡರು.

ತರುವಾಯ ಭಗವಂತನು ಬ್ರಹ್ಮದೇವರನ್ನು ಸಮಾಧಾನಪಡಿಸಿ ಅವರ ಕಣ್ಣಿನ ನೀರನ್ನು ವರಸಿ, ಅವರ ಕೈಯಿಂದ ತನ್ನ ಕಣ್ಣಿನ ನೀರನ್ನು ವರಿಸಿಕೊಂಡನು. ಹುತ್ತಕ್ಕೆ ಹೋಗಿ ಬ್ರಹ್ಮದೇವರೊಡನೆ ಕೂತುಕೊಂಡನು. ಶ್ರೀಭಗವಂತನು 'ಸೊಸೆಯು ಸೌಖ್ಯದಿಂದ ಇದ್ದಾಳೋ? ಮಕ್ಕಳು ಮೊಮ್ಮಕ್ಕಳ ಎಲ್ಲರ ಕ್ಷೇಮವನ್ನು ತಿಳಿಸು' ಎಂದು ಕೇಳಿದನು.

ಬ್ರಹ್ಮದೇವರು 'ತಂದೆಯೇ! ನಿಮ್ಮ ಅನುಗ್ರಹದಿಂದ ನಮಗೆಲ್ಲರಿಗೂ ಮಂಗಳವೇ! ನಿಮ್ಮ ಕ್ಷೇಮ ಸಮಾಚಾರವನ್ನು ತಿಳಿಸಬೇಕು' ಎಂದರು.

ಶ್ರೀಭಗವಂತನು 'ಮಗ! ದ್ವಾಪರಾಂತ್ಯದಲ್ಲಿ ನಡೆದ ಕಾರ್ಯವನ್ನು ಕೇಳು. ವೈಕುಂಠದಲ್ಲಿ ಶೇಷನ ಮೇಲೆ ಮಲಗಿರುವ ಸಮಯದಲ್ಲಿ ಭೃಗು ಋಷಿಗಳು ಬಂದು ನಿನ್ನ ತಾಯಿಯು ನನ್ನ ಆಲಿಂಗಿಸುವ ಸ್ಥಳವಾದ ಎದೆಗೆ ಒದೆದರು. ಇದರಿಂದ ನಿನ್ನ ತಾಯಿಯು ಕೋಪಿಸಿಕೊಂಡು ಕೊಲ್ಲಾಪುರಕ್ಕೆ ಹೊರಟುಹೋದಳು. ನಾನು ಆ ದುಃಖದಿಂದ ಪೀಡಿತನಾಗಿ ವೈಕುಂಠವನ್ನು ಬಿಟ್ಟು ಇಲ್ಲಿಗೆ ಬಂದವನಾಗಿ ಸರಿಯಾದ ಮನೆಯು ಸಿಗದೆ ಹುತ್ತದಲ್ಲಿ ವಾಸಮಾಡುತ್ತಿದ್ದೆನು. ಇಲ್ಲಿ ಒಬ್ಬ ಚೋಲರಾಜನ ಭೃತ್ಯನು ಬಂದು ಕೊಡಲಿಯಿಂದ ನನ್ನ ತಲೆಯನ್ನು ಒಡೆದನು. ಗುರುಗಳು ಅದಕ್ಕೆ ಔಷಧ ಹೇಳಿದರು. ಗುರುಗಳ ಅನುಗ್ರಹದಿಂದ ಬದುಕಿದ್ದೇನೆ. ಮಗ! ನನ್ನ ತಾಯಿಗೆ ನಮಸ್ಕರಿಸು' ಎಂದನು.

ಬ್ರಹ್ಮದೇವರು ದೇವರ ಆಜ್ಞೆಯಂತೆ ಬಕುಳೆಗೆ ನಮಸ್ಕರಿಸಿದರು. 'ಗೋವಿಂದ! ನಿಮಗೆ ಯಾವ ತಾಯಿಯು. ಇವಳ ಕಥೆಯನ್ನು ಹೇಳಬೇಕು' ಎಂದರು.

ಶ್ರೀನಿವಾಸನು 'ಯಶೋದೆಯೇ ಈಗ ಬಕುಳೆಯಾಗಿ ವೇಂಕಟಾಚಲದಲ್ಲಿ ವಾಸಮಾಡುತ್ತಿದ್ದಾಳೆ. ಅವಳು ಬಹುಕಾಲ ನನ್ನನ್ನು ಸಲಹುತ್ತಿದ್ದಾಳೆ. ಆಪತ್ಕಾಲದಲ್ಲಿ ಯಾರು ರಕ್ಷಿಸುವರೋ ಅವರೇ ತಂದೆ ತಾಯಿ ಗುರುಗಳು. ನಾನು ಒಂದುದಿನ ಮೃಗಬೇಟೆಗಾಗಿ ಪದ್ಮಸರೋವರದ ಬಳಿಗೆ ಹೋಗಿದ್ದೆನು. ಅಲ್ಲಿ ಆಕಾಶರಾಜನ ಮಗಳು ಪದ್ಮಾವತಿಯನ್ನು ನೋಡಿದೆನು. ಅವಳನ್ನೇ ನನ್ನ ಮನಸ್ಸು ಬಯಸುತ್ತದೆ. ಮಗನೇ! ನೀನು ಸ್ವಲ್ಪ ಘಟನಾ ಮಾಡು' ಎಂದನು.



## ದೇವತೆಗಳ ಆಗಮನ [1]

ಶ್ರೀನಿವಾಸದೇವರು ಬ್ರಹ್ಮದೇವರೊಡನೆ ಮಾತಾಡುತ್ತಿರಲು ದುಂದುಭಿಯ ಶಬ್ದವು ಕೇಳಿಸಿತು. ಶ್ರೀನಿವಾಸದೇವರು 'ಲೋಕದ ಜನರಂತೆ ನಟಿಸುತ್ತಾ ಇದು ಯಾವ ನಗಾರಿಯ ಶಬ್ದ? ಯಾರು ನಾನಿರುವಲ್ಲಿಗೆ ಬರುತ್ತಿರುವರು?' ಎಂದರು. ಈರೀತಿಯಾಗಿ ಹೇಳುತ್ತಿರುವಾಗಲೇ ರುದ್ರದೇವರು ಪಾರ್ವತೀದೇವಿಯರಿಂದಲೂ ಷಣ್ಮುಖ ಮತ್ತು ಪ್ರಮಥಗಣಗಳಿಂದಲೂ ಸಹಿತರಾಗಿ ಬಂದು ಬ್ರಹ್ಮದೇವರಿಗೂ ಶ್ರೀನಿವಾಸದೇವರಿಗೂ ನಮಸ್ಕರಿಸಿದರು. ಶ್ರೀನಿವಾಸದೇವರು ಬಂದಿರುವ ರುದ್ರದೇವರನ್ನು ಆಲಿಂಗನ ಮಾಡಿ 'ಮಗು! ಬಾ. ಕುತುಕೊ' ಎಂದರು. ಅಷ್ಟರಲ್ಲಿಯೇ ಪತ್ನೀಪುತ್ರರಿಂದಲೂ ಯಕ್ಷರಿಂದಲೂ ಕೂಡಿಕೊಂಡು ಕುಬೇರನು ಬಂದು ಸೇರಿದನು. ಶ್ರೀನಿವಾಸದೇವರು ಕುಬೇರನನ್ನು ನೋಡಿ 'ಧನಾಧಿಪ! ಮಹಾಪ್ರಾಜ್ಞ! ಯಾವಾಗಲೂ ಹಣವಂತನಾಗಿಯೇ ಇರು' ಎಂದು ಹೇಳಿ ಆಶೀರ್ವಾದವನ್ನು ಮಾಡಿ ಸಂತೋಷಪಡಿಸಿದರು. ಆಗಲೇ ಅಗ್ನಿದೇವರು ಕುರಿಯಮೇಲೆ ಕೂತುಕೊಂಡು ಸ್ವಾಹಾ ಸ್ವಧಾ ಎಂಬ ಇಬ್ಬರು ಹೆಂಡತಿಯರನ್ನು ಕರೆದುಕೊಂಡು ಮತ್ತು ಮಕ್ಕಳು ಬಂಧುಗಳಿಂದ ಕೂಡಿಕೊಂಡು ವೇಂಕಟಾಚಲಕ್ಕೆ ಬಂದು ಸೇರಿದರು. ಶ್ರೀನಿವಾಸದೇವರು ಅಗ್ನಿದೇವರನ್ನು ನೋಡಿ ಸಂತೋಷವುಳ್ಳವರಾಗಿ ಬೇಗನೇ ಆಲಿಂಗಿಸಿ 'ಕುತುಕೋ ಕೂತುಕೊ' ಎಂದರು. ಅಷ್ಟರಲ್ಲೇ

1. ಭ.ಪು.ಅ.10

ಯಮದೇವರೂ ತನ್ನ ವಾಹನವಾದ ಕೋಣದ ಮೇಲೆ ಕೂತುಕೊಂಡು ಪತ್ನಿಯಿಂದಲೂ ತನ್ನ ದೂತರಿಂದಲೂ ಸಹಿತರಾಗಿ ಶ್ರೀನಿವಾಸದೇವರ ಬಳಿಗೆ ಬಂದು ಸೇರಿದರು. ಚಿತ್ರಗುಪ್ತನೂ ಬಂದನು. ತರುವಾಯ ವರುಣದೇವರೂ ಮೊಸಳೆಯ ಮೇಲೆ ಕೂತುಕೊಂಡು ಪತ್ನಿಯಿಂದ ಸಹಿತರಾಗಿ ಬಹುರತ್ನಗಳನ್ನು ಹಿಡಿದುಕೊಂಡು ಬಂದರು. ಇಂದ್ರದೇವರು ಐರಾವತದ ಮೇಲೆ ಕೂತುಕೊಂಡು ಶಚೀದೇವಿಯಿಂದ ಸಹಿತರಾಗಿ ಬಂದರು. ಅವರಿಗೂ ಭಗವಂತನು ಸತ್ಕರಿಸಿ ಕೂತುಕೊಳ್ಳಿಸಿದನು. ಆಮೇಲೆ ವಾಯುದೇವರು ಭಾರತೀದೇವಿಯಿಂದ ಸಹಿತರಾಗಿ ಗಂಧದ್ರವ್ಯವನ್ನು ಹಿಡಿದುಕೊಂಡು ಬಂದರು. ಭಗವಂತನಿಂದ ಸತ್ಕೃತರಾದರು. ತರುವಾಯ ಚಂದ್ರಸೂರ್ಯರು ಬಂದರು. ಹಾಗೆಯೇ ಮನ್ಮಥನು ರತಿಯಿಂದ ಸಹಿತನಾಗಿ ಕುದುರೆಯ ಮೇಲೆ ಕೂತು ಬಂದನು. ಕಶ್ಯಪಾದಿ ಮುನಿಗಳು ಬಂದರು. ಶ್ರೀಭಗವಂತನು ಎಲ್ಲರಿಗೂ ಸತ್ಕರಿಸಿದನು.

ತರುವಾಯ ದೇವತೆಗಳ ಬಡಗಿಯಾದ ವಿಶ್ವಕರ್ಮನು ಶ್ರೀನಿವಾಸದೇವರ ಕಣ್ಣಿಗೆ ಬಿದ್ದನು. ಭಗವಂತನು ಕೋಪಿಸಿಕೊಂಡಂತೆ ತೋರಿಸುತ್ತಾ 'ಇಂದ್ರ! ನೋಡಿದಿಯಾ ಈ ವಿಶ್ವಕರ್ಮನ ಅಹಂಕಾರವನ್ನು ತನ್ನ ಅಣ್ಣನಾದ ಮಯಾಸುರನ ಬಾಹುಬಲದಿಂದ ಹಿತಾಹಿತವನ್ನು ತಿಳಿಯದವನಾಗಿದ್ದಾನೆ. ಎಲ್ಲರಂತೆಯೇ ನನ್ನನ್ನೂ ನೋಡುತ್ತಾನೆ. ಒಳ್ಳೇದಾಯಿತು. ಇವನನ್ನು ಬಿಟ್ಟುಬಿಡು. ಇನ್ನು ಬೇರೆಯಾರನ್ನಾದರೂ ನನ್ನಲ್ಲಿ ಭಕ್ತಿಯುಳ್ಳವರನ್ನು ಸೇರಿಸಿಕೋ' ಎಂದು ಹೇಳಿದರು. ಆ ಮಾತನ್ನು ಕೇಳಿ ವಿಶ್ವಕರ್ಮನು ದೇವರ ಕಾಲಿಗೆ ಬಿದ್ದು ಭಯವುಳ್ಳವನಾಗಿ 'ಭಗವಂತನೇ! ನಿಮ್ಮ ಕಾರ್ಯವನ್ನು ನಾನು ತಿಳಿಯದೆ ಮಾಡಲಿಲ್ಲ, ಕ್ಷಮಿಸಬೇಕು. ಅಲ್ಪನಾದ ನನ್ನ ಮೇಲೆ ಇಷ್ಟು ಕೋಪವೇಕೆ?' ಎಂದು ಹೇಳಿಕೊಂಡನು. ತರುವಾಯ ಭಗವಂತನು ಇಂದ್ರದೇವರೊಡನೆ ದೇವತೆಗಳು ಮುನಿಗಳೆಲ್ಲರೂ ಇಳಿದುಕೊಳ್ಳಲಿಕ್ಕೆ ಸಭೆಯನ್ನು ಮಾಡಿಸು ಎಂದನು. ಇಂದ್ರದೇವರು ಹಾಗೆಯೇ ಮಾಡಿಸಿದರು.

ಮತ್ತೆ ಭಗವಂತನು 'ಇಂದ್ರ! ಬೇಗನೇ ಆಕಾಶರಾಜನ ನಗರಕ್ಕೆ ಹೋಗು. ರಾಜನಿಗೆಲ್ಲಾ ಸಮಾಧಾನ ಮಾತಿನಿಂದ ತಿಳಿಸು. ಅಲ್ಲಿಯೂ ವಿಶ್ವಕರ್ಮನು ಸಭೆ ಮನೆ ಮೊದಲಾದವನ್ನು ಮಾಡಬೇಕು' ಎಂದು ಹೇಳಿದನು. ಶ್ರೀನಿವಾಸದೇವರ ಆಜ್ಞೆಯಂತೆ ಇಂದ್ರದೇವರು ವಿಶ್ವಕರ್ಮನನ್ನು ಕರೆದುಕೊಂಡು ಆಕಾಶರಾಜನ ನಗರಿಗೆ ಹೋದರು. ಅಲ್ಲಿ ಕಾಡುಗಳನ್ನೆಲ್ಲಾ ಕಡಿದು ನಗರವನ್ನು ದೊಡ್ಡದು ಮಾಡಿಸಿದರು. ಎತ್ತರ ತಗ್ಗಾದ ಪ್ರದೇಶವನ್ನು ಸರಿಯಾಗಿ ಮಾಡಿಸಿದರು.

ವಿಚಿತ್ರಮನೆಗಳನ್ನು ಸಭೆಗಳನ್ನೂ ಮಂಟಪಗಳನ್ನೂ ಮಾಡಿಸಿದರು. ರಾಜನು ಮಾಡಿಸಿರುವ ಮುತ್ತುರತ್ನಗಳ ಕಂಭಗಳಿಂದ ಕೂಡಿದ ರತ್ನಗಳಿಂದ ಪೂರ್ಣವಾದ ಕಲ್ಯಾಣಮಂಟಪವನ್ನು ನೋಡಿದರು. ಭಗವಂತನಿಗೆ ಇಳಿದುಕೊಳ್ಳಲಿಕ್ಕೆ ಮನೆಯನ್ನೂ, ನೂರಾರು ಇಳಿಭಾವಿಗಳನ್ನು, ಭಾವಿಗಳನ್ನು, ಆನೆ ಕುದುರೆಗಳನ್ನು, ಕಟ್ಟುವ ಶಾಲೆಗಳನ್ನು, ಇಂದ್ರದೇವರು ವಿಶ್ವಕರ್ಮನಿಂದ ಮಾಡಿಸಿದರು.



## ದೇವತೆಗಳನ್ನು ನಾನಾಕಾರ್ಯಗಳಲ್ಲಿ ಆಜ್ಞಾಪಿಸಿದ್ದು [1]

ಇಂದ್ರದೇವರು ಆಕಾಶರಾಜನ ನಗರಿಗೆ ಹೊರಟುಹೋದ ಮೇಲೆ ಶ್ರೀಭಗವಂತನು ಎಲ್ಲಾ ದೇವತೆಗಳೊಡನೆ 'ಆಕಾಶರಾಜನಿಗೆ ಸುಂದರಿಯಾದ ಮಗಳೊಬ್ಬಳಿದ್ದಾಳೆ. ನಿಮಗೆಲ್ಲರಿಗೂ ಸಮ್ಮತವಾಗಿದ್ದರೆ ನಾನು ಆ ರಾಜಪುತ್ರಿಯನ್ನು ಮದುವೆ ಮಾಡಿಕೊಳ್ಳಬೇಕೆಂಬ ಅಭಿಪ್ರಾಯವುಳ್ಳವನಾಗಿದ್ದೇನೆ' ಎಂದು ಹೇಳಿದನು. ಭಗವಂತನ ಮಾತನ್ನು ಕೇಳಿ ಭಗವದ್ಭಕ್ತರಾದ ಬ್ರಹ್ಮಾದಿದೇವತೆಗಳು 'ನಾವೆಲ್ಲರೂ ನಿಮ್ಮ ದಾಸರಾಗಿರುವೆವು. ನಿಮ್ಮ ಅನುಗ್ರಹದಿಂದ ನಾವು ಮಹಾ ಉತ್ಸವವನ್ನು ನೋಡುವೆವು' ಎಂದರು. ಆಗ ರುದ್ರದೇವರು 'ಭಗವಂತನೇ! ಪ್ರಾಕೃತ ಮನುಷ್ಯರಂತೆ ವಿನೋದ ವಚನವನ್ನು ಹೇಳುವೆಯಲ್ಲಾ! ನಿನ್ನ ಮನಸ್ಸಿಗೆ ಹಿಡಿದರೆ ಅವಶ್ಯವಾಗಿ ಮಾಡಿಕೊ' ಎಂದು ಹೇಳಿದರು. ರುದ್ರದೇವರ ಮಾತನ್ನು ಕೇಳಿ ಭಗವಂತನು ಅವರನ್ನು ಹೊಗಳಿದನು.

ತರುವಾಯ ಬ್ರಹ್ಮದೇವರು ಶ್ರೀನಿವಾಸದೇವರೊಡನೆ 'ಭಗವಂತನೇ! ಮದುವೆಯ ಮೊದಲು ಅಷ್ಟವರ್ಗವನ್ನು ಮಾಡಬೇಕು. ಪುಣ್ಯಾಹವಾಚನೆ ಮಾಡಿಸಲಿಕ್ಕೆ ನನಗೆ ಅನುಜ್ಞೆಯನ್ನು ಕೊಡಬೇಕು' ಎಂದರು. ಶ್ರೀನಿವಾಸದೇವರು ಬ್ರಹ್ಮದೇವರ ಮಾತನ್ನು ಕೇಳಿ ವಸಿಷ್ಠರನ್ನು ಬರಮಾಡಿದನು. 'ವಸಿಷ್ಠರೇ! ನೀವು ಯಜುರ್ವೇದದ ಮಂತ್ರಗಳಿಂದ ಪುಣ್ಯಾಹವಾಚನೆಯನ್ನು ಮಾಡಿಸಬೇಕು. ಎಲ್ಲಾ ದೇವತೆಗಳಿಗೂ ನೀವೇ ಯಜಮಾನರು' ಎಂದು ಹೇಳಿದರು. ತರುವಾಯ ಎಲ್ಲಾ ದೇವತೆಗಳನ್ನೂ ಋಷಿಗಳನ್ನೂ ಕರೆಯಲಿಕ್ಕೆ ಷಣ್ಮುಖನನ್ನೂ, ಎದುರುಗೊಂಡು ಕರತರಲಿಕ್ಕೆ ಮನ್ಮಥನನ್ನು ಆಜ್ಞಾಪಿಸಿದರು. ಎಲ್ಲರಿಗೂ ತಾಂಬೂಲವನ್ನು ಕೊಟ್ಟರು.

1. ಭ.ಪು.ಅ.11

ಹಾಗೆಯೇ ಅಗ್ನಿದೇವರನ್ನು ಕರೆದು 'ಅಗ್ನಿ! ನೀನು ಅಡಿಗೆ ಮಾಡುವ ಕೆಲಸವನ್ನು ವಹಿಸಿಕೊಳ್ಳುವುದಕ್ಕಾಗಿ ತಾಂಬೂಲವನ್ನು ಸ್ವೀಕರಿಸು. ನೀನು ಅಡಿಗೆ ಮಾಡುವುದು, ಎಲ್ಲಾ ದೇವತೆಗಳಿಗೂ ಋಷಿಗಳಿಗೂ ಸಮ್ಮತವು. ಆದುದರಿಂದ ಸ್ವಾಹಾಸ್ವಧಾ ದೇವಿಯರಿಂದ ಸಹಿತನಾಗಿ ಅಡಿಗೆ ಮಾಡುವವನಾಗು' ಎಂದು ಹೇಳಲು ಅಗ್ನಿದೇವರು ಹಾಗೆಯೇ ಆಗಲಿ ಎಂದು ಅಂಗೀಕರಿಸಿದರು. ಆಮೇಲೆ ವರುಣದೇವರನ್ನು ನೀರನ್ನು ತರಲಿಕ್ಕೂ ಯಮದೇವರನ್ನು ದುಷ್ಟರನ್ನು ಶಿಕ್ಷಿಸುವ ವಿಷಯದಲ್ಲಿಯೂ ಶಿಷ್ಟರನ್ನು ರಕ್ಷಿಸುವ ವಿಷಯದಲ್ಲಿಯೂ ಆಜ್ಞಾಪಿಸಿದರು. ಗಂಧದ್ರವ್ಯವನ್ನು ತರಲು ವಾಯುದೇವರಿಗೂ ಬ್ರಾಹ್ಮಣರಿಗೆ ವಸ್ತ್ರ ಅಲಂಕಾರ ಧನಗಳನ್ನು ಕೊಡಲು ಕುಬೇರನಿಗೆ ಆಜ್ಞಾಪಿಸಿದರು. ದೀಪವನ್ನು ಧರಿಸಲು ಚಂದ್ರನಿಗೂ ಪಾತ್ರೆಗಳನ್ನು ತೊಳೆಯಲು ಅಷ್ಟವಸುಗಳಿಗೂ, ದೊಣ್ಣೆಹಚ್ಚಲು ಗ್ರಹಗಳಿಗೂ ಆಜ್ಞಾಪಿಸಿದರು. ಈರೀತಿಯಾಗಿ ಭಗವಂತನಿಂದ ಆಜ್ಞಪ್ತರಾದ ಎಲ್ಲರೂ ಭಗವಂತನು ಹೇಳಿದಂತೆ ಸೇವೆಯನ್ನು ಮಾಡಲು ಸಿದ್ಧರಾಗಿದ್ದರು.



## ರಮಾದೇವಿಯರ ಆಗಮನ [1]

ತೆರುವಾಯ ಬ್ರಹ್ಮದೇವರು 'ಭಗವಂತನೇ! ಮಂಗಳಸ್ನಾನವನ್ನು ಮಾಡು. ಪುಣ್ಯಾಹವಾಚನೆಯಾಗಬೇಕು. ಇಷ್ಟದೇವತೆಯ ಪೂಜೆಯನ್ನು ಮಾಡು. ಕುಲದೇವತಾ ಪ್ರತಿಷ್ಠೆಯನ್ನು ಮಾಡು' ಎಂದು ಹೇಳಿದರು.

ಮಗನ ಮಾತನ್ನು ಕೇಳಿ ಶ್ರೀನಿವಾಸದೇವರು ಲೋಕದ ಜನರಂತೆ ನಟಿಸುತ್ತಾ ಕೊಲ್ಲಾಪುರದಲ್ಲಿ ಇರುವ ರಮಾದೇವಿಯರನ್ನು ಸ್ಮರಿಸಿಕೊಂಡು ಅಳಲಿಕ್ಕೆ ಆರಂಭಿಸಿದರು. 'ಬ್ರಹ್ಮನೇ! ಆ ರಮೆಯಿಂದ ರಹಿತವಾದ ಈ ಸಬೆಯು ಶೋಭಿಸುವುದಿಲ್ಲ. ನೀನು ನಾನು ದೇವತೆಗಳು ಯಾರೂ ಶೋಭಿಸುವುದಿಲ್ಲ. ಚಂದ್ರನಿಲ್ಲದೆ ನಕ್ಷತ್ರಗಳಂತೆಯೂಸ ಮರಗಳಿಲ್ಲದ ಕಾಡಿನಂತೆಯೂಸ ಹಣ್ಣಿಲ್ಲದ ಮರಗಳಂತೆಯೂಸ ಹಣವಿಲ್ಲದ ಮಿತ್ರರಂತೆಯೂಸ ರಮೆಯಿಂದ ರಹಿತರಾದ ನಾವು ಶೋಭಿಸುವುದಿಲ್ಲ' ಎಂದು ಶ್ರೀನಿವಾಸದೇವರು ಹೇಳಿದರು. ಅದನ್ನು ಕೇಳಿ ರುದ್ರದೇವರು ನಿಂತುಕೊಂಡು 'ಯಾಕೆ ಹೀಗೆ ಅಳುತ್ತಿರುವೆ ಭಗವಂತ! ಯಾಕೆ ಹೀಗೆ

1. ಭ.ಪು.ಅ.10

ವಿಡಂಬನ ಮಾಡುವೆ? ಅಸಂಗನಾದ ಅಕ್ರೂರವರದನಾದ ಕ್ಲೇಶಶೂನ್ಯನಾದ ನಿನಗೆ ಈ ಕ್ಲೇಶವೇಕೆ?' ಎಂದರು. ಶ್ರೀನಿವಾಸದೇವರು 'ಮಗು ರುದ್ರ! ನಿನಗಿನ್ನೂ ತಿಳಿಯಲಾರೆನು. ಹುಡುಗನಾಗಿರುವೆ. ಬ್ರಹ್ಮನೂ ಇಲ್ಲದಿರುವ ಪ್ರಲಯಕಾಲದಲ್ಲಿ ಆ ರಮಾದೇವಿಯೇ ನನಗೆ ಹಾಸಿಗೆಯಾಗಿಯೂಸ ಸಖಿಯಾಗಿಯೂಸ ಹಿತವನ್ನು ಮಾಡುತ್ತಿರುವವಳು. ಅವಳನ್ನು ಬಿಟ್ಟು ನನಗೆ ಸುಖವು ಹೇಗಾಗಬೇಕು?' ಎಂದು ಹೇಳಿದರು. ಅದಕ್ಕೆ ಬ್ರಹ್ಮದೇವರು 'ಮೊದಲೇ ನನ್ನೊಡನೆ ಈ ವಿಷಯವನ್ನು ತಿಳಿಸಲಿಲ್ಲವಲ್ಲಾ! ಆಗಲಿ. ಈಗಲಾದರೂ ಆಜ್ಞಾಪಿಸಬೇಕು. ನಾನು ಹೋಗಿ ಕರೆದುಕೊಂಡು ಬರುವೆನು' ಎಂದರು.

ಶ್ರೀನಿವಾಸದೇವರು ಮಗನಾದ ಬ್ರಹ್ಮದೇವರ ಮಾತನ್ನು ಕೇಳಿ ಬೇಗನೇ ಷಣ್ಮುಖನನ್ನು ಕಳುಹಿಸಿ ಸೂರ್ಯದೇವರನ್ನು ಬರಮಾಡಿಕೊಂಡರು. ಸೂರ್ಯ ದೇವರು ಬಂದು ನಮಸ್ಕರಿಸಿ ಕೈಮುಗಿದುಕೊಂಡು ಬಗ್ಗಿ ನಿಂತುಕೊಂಡರು. ಶ್ರೀನಿವಾಸದೇವರು 'ಸೂರ್ಯ! ನೀನು ಸೃಗಾಲವಾಸುದೇವನ ನಗರವಾದ ಕೊಲ್ಲಾಪುರಕ್ಕೆ ಹೋಗಬೇಕು. ಅಲ್ಲಿ ಲೋಕಮಾತೆಯಾದ ರಮಾದೇವಿಯು ಇರುತ್ತಿರುವಳು. ಅವಳನ್ನು ಇಲ್ಲಿಗೆ ಕರೆದುಕೊಂಡು ಬರಬೇಕು' ಎಂದು ಹೇಳಿದರು. ಭಗವಂತನ ಮಾತನ್ನು ಕೇಳಿ ಸೂರ್ಯದೇವರು ಭಗವಂತನಿಗೆ ಶಿರಸ್ಸಿನಿಂದ ನಮಸ್ಕರಿಸಿ 'ಲೋಕಮಾತೆಯನ್ನು ನಿಮ್ಮ ಬಳಿಗೆ ಹೇಗೆ ಕರೆದುಕೊಂಡು ಬರಲಿ. ಅದನ್ನು ಹೇಳಬೇಕು' ಎಂದರು. ಶ್ರೀನಿವಾಸದೇವರು ''ಅವಳಿಗೆ ನಿನ್ನಲ್ಲಿ ವಿಶೇಷ ಅನುಗ್ರಹವಿದೆ. ನೀನು ಹೋದರೆ ಸಂತೋಷದಿಂದ ಇಲ್ಲಿಗೆ ಬಂದುಬಿಡುವಳು. ಅವಳನ್ನು ಕರೆದುಕೊಂಡು ಬರಲಿಕ್ಕೆ ಒಂದು ಉಪಾಯವನ್ನು ಹೇಳುತ್ತೇನೆ. ನೀನು ಹೋಗುವಾಗ ಕಣ್ಣೀರನ್ನು ಸುರಿಸುತ್ತಾ ಹೋಗಿ ಬಾಗಿಲಲ್ಲಿ ನಿಂತುಕೊ. ಆಗ ಅಳುವ ನಿನ್ನನ್ನು ನೋಡಿ ಅವಳು ಸಮಾಧಾನಪಡಿಸುವಳು. ಸ್ವಲ್ಪದುಃಖವುಳ್ಳವಳಂತೆ ತೋರಿಸುತ್ತಾ 'ನೀನು ಯಾರ ಮಾತಿನಿಂದ ಇಲ್ಲಿಗೆ ಬಂದಿರುವಿ?' ಎಂದು ಕೇಳುವಳು. ಆಗ ನೀನು ತುಂಬಾ ದುಃಖವುಳ್ಳವನಾಗಿ 'ಅಮ್ಮ! ನಾನು ಬೇರೆ ಯಾರ ಮಾತಿನಿಂದಲೂ ಇಲ್ಲಿಗೆ ಬಂದವನಲ್ಲ. ಯಾರ ಮಾತಿನಿಂದ ಬಂದಿರುವೆನೋ ಅವರು ನಿಮ್ಮ ಯಜಮಾನರು ನೆಲದಲ್ಲಿ ಮಲಗಿರುವರು. ಈಗ ಅವರಿಗೆ ಜ್ಞಾನವೇ ಇಲ್ಲ. ಬದುಕುತ್ತಾರೋ ಇಲ್ಲವೋ ತಿಳಿಯಲಿಲ್ಲ. ತುಂಬಾ ಅಶಕ್ತರಾಗಿ ಕಾಣುತ್ತಾರೆ. ನಾನು ಯಾವಾಗ ದೇವಿಯನ್ನು ನೋಡುವೆನು ಎಂದು ಹೇಳುತ್ತಾ ಇದ್ದಾರೆ' ಎಂದು ಹೇಳುವವನಾಗು. ನಿನ್ನ ಮಾತನ್ನು ಕೇಳಿ ಅವಳು ಇಲ್ಲಿಗೆ ಬಂದೇ ಬರುವಳು.

ಸಂದೇಹವೇ ಇಲ್ಲ'' ಎಂದು ಹೇಳಿದರು. ದೇವರು ಹೇಳಿದ ಉಪಾಯವನ್ನು ಕೇಳಿ ಸೂರ್ಯದೇವರು ನಗುತ್ತಾ ಭಯಭಕ್ತಿಯುಳ್ಳವರಾಗಿ 'ಸರ್ವಜ್ಞರಾದ ಲೋಕಪ್ರಸಿದ್ಧರಾದ ರಮಾದೇವಿಯರು ಎಲ್ಲರ ಮನಸ್ಸಿನಲ್ಲಿ ಇರುವುದನ್ನೂ ತಿಳಿಯಲಿಕ್ಕೆ ಸಮರ್ಥರಾದ ನನ್ನ ಮಾತನ್ನು ಹೇಗೆ ನಂಬುವರು? ರೋಗರಹಿತರಾದ ನಿಮಗೆ ರೋಗವನ್ನಾದರೂ ನಾನು ಹೇಗೆ ಹೇಳಲಿ?' ಎಂದು ಕೇಳಿದರು.

ಸೂರ್ಯದೇವರ ಮಾತನ್ನು ಕೇಳಿ ಶ್ರೀನಿವಾಸದೇವರು 'ನನ್ನ ಇಚ್ಛೆಯಿಂದ ಅವಳೂ ಮೋಹಿತಳಾಗುವಳು. ಹೋಗು' ಎಂದರು. ಸೂರ್ಯದೇವರು ಹಾಗೆಯೇ ಆಗಲಿ ಎಂದು ಹೇಳಿ ಭಗವಂತನಿಗೆ ನಮಸ್ಕರಿಸಿ ಭಗವಂತನ ರಥದಲ್ಲಿಯೇ ಕೂತುಕೊಂಡು ಕೊಲ್ಲಾಪುರಕ್ಕೆ ಹೋಗಿ ದೇವರು ಹೇಳಿದಂತೆಯೇ ಮಾಡಿದರು. ರಮಾದೇವಿಯರು ರಥದಲ್ಲಿ ಕೂತುಕೊಂಡು ಸೂರ್ಯದೇವರಿಂದ ಸಹಿತರಾಗಿ ವಾಯುವೇಗದಿಂದ ಬಂದರು. ರಮಾದೇವಿಯರು ಬರುವ ಸಮಯದಲ್ಲಿ ತುಂಬಾ ಅಶಕ್ತರಾದವರ ವೇಷವನ್ನು ಧರಿಸಿದರು. ಅವರ ರೂಪವನ್ನು ನೋಡಿ ದೇವತೆಗಳಿಗೂ ಮುನಿಗಳಿಗೂ ಎಲ್ಲರಿಗೂ ಆಶ್ಚರ್ಯವಾಯಿತು. ಶ್ರೀನಿವಾಸದೇವರು ಒಂದು ಕೈಯನ್ನು ರುದ್ರದೇವರ ಹೆಗಲಲ್ಲಿಯೂ ಮತ್ತೊಂದು ಕೈಯನ್ನು ಬ್ರಹ್ಮದೇವರ ಹೆಗಲಲ್ಲಿಯೂ ಇಟ್ಟುಕೊಂಡು ತುಂಬಾ ಅಶಕ್ತರಂತೆ ನಿಂತುಕೊಂಡಿದ್ದರು. ಈ ವೇಷವುಳ್ಳ ಭಗವಂತನನ್ನು ರಮಾದೇವಿಯರು ನೋಡಿದರು. ರಮಾದೇವಿಯರು ಬೇಗನೇ ರಥದಿಂದ ಇಳಿಯುವವರಾಗಿ ಮಂದಹಾಸವನ್ನು ಮಾಡುತ್ತಾ ಸಂಪಿಗೆ ಪುಷ್ಪಗಳನ್ನು ಭಗವಂತನ ಪಾದಗಳಿಗೆ ಸುರಿಸಿ ಅತಿಭಕ್ತಿಯಿಂದ ಆಲಿಂಗನ ಮಾಡಿದರು. ಅವರು ಆಲಿಂಗನ ಮಾಡುವ ಮಾತ್ರದಿಂದ ಅಶಕ್ತರಂತೆ ಕಾಣಿಸುತ್ತಿದ್ದ ಪರಮಾತ್ಮನು ಅತಿ ಪುಷ್ಟನಾಗಿ ಕಾಣಿಸಿದನು. ರಮಾದೇವಿಯರೊಡನೆ ಕುಶಲ ಪ್ರಶ್ನೆಯನ್ನು ಮಾಡಿದನು. ರಮಾದೇವಿಯರೂ ಭಗವಂತನೊಡನೆ ಕುಶಲ ಪ್ರಶ್ನೆಯನ್ನು ಮಾಡಿದರು. ಆಮೇಲೆ ಲೋಕಕ್ಕೆ ತಂದೆತಾಯಿಗಳಾದ ಅವರಿಬ್ಬರೂ ಸ್ವಸ್ಥರಾಗಿದ್ದರು. ರಮಾದೇವಿಯರು 'ಭಗವಂತನೇ! ನಿಮ್ಮ ಮಾಯೆಯು ನನ್ನನ್ನು ಮೋಹಗೊಳಿಸುತ್ತದೆ. ಸೂರ್ಯನನ್ನು ಕಳುಹಿಸಿ ಏನು ವಿಚಿತ್ರ ಕಾರ್ಯವನ್ನು ಮಾಡಿದಿರಿ? ನನ್ನನ್ನು ಇಲ್ಲಿಗೆ (ಕರೆಯಿಸಲು) ತರಿಸುವರೆ ಕಾರಣವನ್ನು ಹೇಳಬೇಕು' ಎಂದರು. ಭಗವಂತನು 'ಸುಂದರಿ! ನೀನು ರಾಮಾವತಾರದಲ್ಲಿ ಹೇಳಿದ ಮಾತನ್ನು ಸ್ಮರಿಸು. ಆ ವೇದವತಿಯನ್ನು ಮದುವೆಯಾಗುವ ಕಾಲವು ಈಗ ಬಂದಿದೆ. ನಿನ್ನ ಸಮೀಪದಲ್ಲಿ ಅವಳನ್ನು ಮದುವೆಯಾಗುವ ಅಭಿಪ್ರಾಯವಿದೆ' ಎಂದು ಹೇಳಿದರು.

ರಮಾದೇವಿಯರು 'ಭಗವಂತನೇ! ಅವಶ್ಯವಾಗಿ ಅವಳನ್ನು ಮದುವೆಯಾಗಿರಿ. ನನ್ನ ಮಾತನ್ನು ಸತ್ಯವನ್ನಾಗಿ ಮಾಡಿರಿ' ಎಂದು ಹೇಳಿ ಭಗವಂತನನ್ನು ನಮಸ್ಕರಿಸಿದರು. ಶ್ರೀಭಗವಂತನು ರಮಾದೇವಿಯರ ಮಾತನ್ನು ಕೇಳಿ ಸಂತೋಷದಿಂದ ಇದ್ದನು.



## ಶ್ರೀನಿವಾಸದೇವರ ಮಂಗಳಸ್ನಾನ [1]

ಶ್ರೀನಿವಾಸದೇವರು ಬ್ರಹ್ಮದೇವರನ್ನು ನೋಡಿ ಮುಂದಿನ ಕಾರ್ಯವನ್ನು ಬೇಗನೇ ಮಾಡು ಎಂದರು. ದೇವರ ಮಾತನ್ನು ಕೇಳಿ ಬ್ರಹ್ಮದೇವರು ಗರುಡದೇವರೇ ಮೊದಲಾದವರನ್ನು ಪಾತ್ರೆಗಳನ್ನು ತರಲು ಆಜ್ಞಾಪಿಸಿದರು. ಗರುಡಾದಿಗಳು ಒಂದೇ ಕ್ಷಣದಲ್ಲಿ ಪಾತ್ರೆಗಳನ್ನು ತಂದರು. ವರುಣದೇವರು ವಾಸನೆಯುಳ್ಳ ನೀರನ್ನು ಪಾತ್ರೆಗಳಲ್ಲಿ ತುಂಬಿಸಿದರು. ತರುವಾಯ ಅಲಂಕೃತರಾದ ಮುತ್ತೈದೆಯರು ಅರುಂಧತಿಯನ್ನು ಮುಂದೆ ಮಾಡಿಕೊಂಡು ಮಂಗಳಕಾರ್ಯವನ್ನು ಮಾಡಿದರು. ಪಾರ್ವತೀ ಸರಸ್ವತೀ ದೇವಿಯರೇ ಮೊದಲಾದವರು ಪರಮಾತ್ಮನ ಕೃಷ್ಣಾವತಾರ ಚರಿತ್ರೆಯನ್ನು ಹಾಡನ್ನಾಗಿ ಹೇಳಿದರು. ಭಗವಂತನ ಸೊಸೆಯರು ನಗುತ್ತಾ ಅತ್ತೆಯಾದ ಬಕುಳೆಯನ್ನು ಮುಂದೆ ಮಾಡಿಕೊಂಡು ಮಂಗಳಕಾರ್ಯವನ್ನು ಮಾಡಿದರು. ಈರೀತಿಯಾಗಿ ಸಪ್ತಮೀದಿವಸದಲ್ಲಿ ಮಹೋತ್ಸವವು ನಡೆಯಿತು.

ನಾಲ್ಕು ದಿಕ್ಕುಗಳಲ್ಲಿ ನೀರು ತುಂಬಿದ ನಾಲ್ಕು ಕಲಶಗಳನ್ನಿಟ್ಟು ಸೂತ್ರದಿಂದ ಸುತ್ತಿ ಮಧ್ಯದಲ್ಲಿ ರತ್ನದ ಪೀಠವನ್ನು ಇಟ್ಟು ಹೆಂಗಸರು ಪರಮಾತ್ಮನೊಡನೆ 'ಭಗವಂತನೇ! ಏಳು' ಎಂದು ಹೇಳಿದರು. ಆಗ ಭಗವಂತನು ದೈನ್ಯಯುಕ್ತವಾದ ಮುಖವುಳ್ಳವನಾಗಿ ಕಣ್ಣಿನಲ್ಲಿ ನೀರನ್ನು ತುಂಬಿಸಿಕೊಂಡು 'ಬ್ರಹ್ಮನೇ! ನನಗೆ ಈ ವೈಭವದಲ್ಲಿ ಎಣ್ಣೆಹಚ್ಚಿ ಮಂಗಳಸ್ನಾನ ಮಾಡಿಸುವವರು ಯಾರಿದ್ದಾರೆ? ಯಾರಿಗೆ ತಂದೆಯೋ ತಾಯಿಯೋ ಇಲ್ಲವೋ ಅವನಿಗೆ ಮದುವೆಯ ಕಾಲದಲ್ಲಿ ಅಥವಾ ಇತರ ಕಾಲದಲ್ಲಿ ಅವನಿಗೆ ಧಿಕ್ಕಾರವಿರಲಿ. ನನಗೊಬ್ಬರೂ ಇಲ್ಲವಲ್ಲಾ! ತಾಯಿಯಿಲ್ಲದವರಿಗೆ ಏನು ಗತಿಯಾಗಲಿಕ್ಕೆ ಹೋಗುತ್ತದೆ. ನನಗೆ ಯಾವ ಬಂಧುಗಳೂ ಇಲ್ಲ. ತಾಯಿಗೆ ಸಮ ಮಿತ್ರರಿಲ್ಲ. ಸಹೋದರರಿಗೆ ಸಮ ಬಂಧುವಿಲ್ಲ. ವಿಷ್ಣುವಿನಿಂದ ಉತ್ತಮ ದೇವತೆಯಿಲ್ಲ' ಎಂದು ಬ್ರಹ್ಮದೇವರ ಮುಖವನ್ನು ನೋಡುತ್ತಾ ಲೋಕದ ಜನರಂತೆ ನಟಿಸುತ್ತಾ

1. ಭ.ಪು.ಅ.11

ಆಳುವವರಾರು ಆಗ ಬ್ರಹ್ಮದೇವರು 'ಭಗವಂತನೇ! ನಿನ್ನ ಬಂಧಕಶಕ್ತಿಯ ವಶರಾಗಿರುವ ನಮ್ಮನ್ನು ಯಾಕೆ ಮೋಹಗೊಳಿಸುವಿರಿ? ಯಾವ ಬಂಧುಗಳೂ ಇಲ್ಲವೆಂಬ ಮಾತು ಸುಳ್ಳಲ್ಲವೇ? ನಾನು ಮಗನಿದ್ದೇನೆ. ರುದ್ರನು ಮೊಮ್ಮಗನು ಮನ್ಮಥನು ಇನ್ನೊಬ್ಬ ಮಗನು. ಷಣ್ಮುಖನು ಮೊಮ್ಮಗನ ಮಗನು ಭಾರತಿಯು ನಿನ್ನ ಸೊಸೆಯು. ಸರಸ್ವತಿಯೇ ಮೊದಲಾದವರೆಲ್ಲರೂ ನಿನ್ನ ಪಾದಸೇವಕಿಯರು. ನೀವು ಪರಮಪುರುಷರು. ಜಗತ್ತಿಗೇ ತಾಯಿಯಾದ ರಮಾದೇವಿಯರು ನಿಮ್ಮ ಪತ್ನಿಯರು. ನೀವು ಬರೇ ಕ್ರೀಡಾಮಾಡುವಿರಿ. ಈ ಪ್ರಕಾರವಾದ ವೈಭವವುಳ್ಳ ನೀವು ನಮ್ಮನ್ನು ಮೋಹಗೊಳಿಸುವಿರಿ' ಎಂದು ಹೇಳಿದರು. ಆಗ ಪರಮಾತ್ಮನು ರಮಾದೇವಿಯರ ಮುಖವನ್ನು ನೋಡಿದನು.

ಆಗ ರಮಾದೇವಿಯರು 'ಭಗವಂತ! ನಿಮ್ಮ ಅಭಿಪ್ರಾಯವು ನನಗೆ ತಿಳಿಯಿತು. ನಾನು ನಿಮಗೆ ಎಣ್ಣೆಹಚ್ಚಿ ಮಂಗಳಸ್ನಾನವನ್ನು ಮಾಡಿಸುವೆನು. ಏಳಿರಿ. ದುಃಖವನ್ನು ಬಿಡಿರಿ. ಆಸನದಲ್ಲಿ ಕೂತುಕೊಳ್ಳಿರಿ' ಎಂದು ಹೇಳಿದರು. ಆಗ ಶ್ರೀನಿವಾಸದೇವರು ಕಣ್ಣಿನಲ್ಲಿ ಆನಂದಬಾಷ್ಪವನ್ನು ಸುರಿಸುವವರಾದರು. ಲೋಕದ ಜನರಂತೆ ಕಶ್ಯಪಾದಿ ಋಷಿಗಳಿಗೆಲ್ಲಾ ನಮಸ್ಕರಿಸಿ ವಸಿಷ್ಠರೊಡನೆ 'ನನಗೆ ಮಂಗಳಸ್ನಾನವನ್ನು ಮಾಡಲಿಕ್ಕೆ ಆಜ್ಞೆಯನ್ನು ಕೊಡಬೇಕು' ಎಂದು ಕೇಳಿದರು. ಪುರೋಹಿತರಾದ ವಸಿಷ್ಠರು 'ಹಾಗೆಯೇ ಆಗಲಿ' ಎಂದರು. ಎಲ್ಲಾ ದೇವತೆಗಳೊಡನೆಯೂ ದೇವತೆಗಳ ಸ್ತ್ರೀಯರೊಡನೆಯೂ ಋಷಿಗಳೊಡನೆಯೂ ಋಷಿಗಳ ಸ್ತ್ರೀಯರೊಡನೆಯೂ ಅನುಜ್ಞೆಯನ್ನು ಪಡೆದು ಶ್ರೀನಿವಾಸದೇವರು ಮಂಗಳಸ್ನಾನಕ್ಕೆ ಎದ್ದರು. ಹೆಂಗಸರು ಶ್ರೀನಿವಾಸದೇವರನ್ನು ಪೀಠದಲ್ಲಿ ಕೂತುಕೊಳ್ಳಿಸಿದರು. ಅವರ ಮಧ್ಯದಲ್ಲಿ ರಮಾದೇವಿಯರು ಬಂಗಾರದ ಪಾತ್ರೆಯಲ್ಲಿ ಎಣ್ಣೆಯನ್ನು ಹಿಡಿದುಕೊಂಡು 'ಗೋವಿಂದ! ದೀರ್ಘಾಯುಷ್ಯವಂತನಾಗು. ಬಹುಪುತ್ರವಂತನಾಗು. ಹಣವಂತ ನಾಗು. ಏಕಛತ್ರಾಧಿಪತಿಯಾಗಿ ಇರು' ಎಂದು ಸ್ತೋತ್ರ ಮಾಡಿ ಎಣ್ಣೆ ಹಚ್ಚಿದರು. ನಾನಾವಿಧ ತೈಲಗಳನ್ನು ಹಚ್ಚಿದರು. ಅರಸಿನದ ಪುಡಿಯನ್ನು ಹಚ್ಚಿದರು. ಮಂಗಳವಾದ್ಯ ಘೋಷಗಳಿಂದ ಆನೆಯ ತಲೆಯ ಮೇಲಿನಿಂದ ತಂದಿರುವ ಪುಣ್ಯತೀರ್ಥಜಲಗಳಿಂದ ರಮಾದೇವಿಯರು ಪರಮಾತ್ಮನಿಗೆ ಅಭಿಷೇಕವನ್ನು ಮಾಡಿದರು. ಕಾಲಿನಿಂದ ಶಿರಸ್ಸಿನವರೆಗೆ ಪರಮಾತ್ಮನ ಮೈಯನ್ನು ತೊಳೆದು ಈ ರಮಾದೇವಿಯರು ತಾನು ಮಾಡಿದ ದೇವರ ಸೇವೆಯಿಂದ ಕೃತಾರ್ಥಳಾದೆನೆಂದು ಭಾವಿಸಿಕೊಂಡರು. ನಾಲ್ಕು ಜನ ಮುತ್ತೈದೆಯರು ತಮ್ಮ ಕೈಗಳಿಂದ ಕಲಶಗಳನ್ನು

ಹಿಡಿದುಕೊಂಡು ಮುತ್ತುಗಳಿಂದ ಮಿಶ್ರ ನೀರಿನಿಂದ ಅಭಿಷೇಕ ಮಾಡಿದರು. ಪುತ್ರವಂತನಾಗು. ಹಣವಂತನಾಗು ಎಂದು ಸ್ತುತಿಸುತ್ತಾ ದೇವತಾಸ್ತ್ರೀಯರು ನೀರಿನಿಂದ ಆರತಿಯನ್ನು ಮಾಡಿದರು. ತರುವಾಯ ಸಾವಿತ್ರೀದೇವಿಯರು ಉತ್ತಮವಾದ ವಸ್ತ್ರವನ್ನು ತಂದುಕೊಟ್ಟರು. ರಮಾದೇವಿಯರು ಆ ವಸ್ತ್ರದಿಂದ ಶ್ರೀನಿವಾಸದೇವರ ಸರ್ವಾಂಗವನ್ನು ಒರಸಿದರು. ಪಾರ್ವತೀದೇವಿಯರು ಧೂಪವನ್ನು ತಂದು ರಮಾದೇವಿಯರ ಕೈಯಲ್ಲಿ ಕೊಟ್ಟರು. ರಮಾದೇವಿಯರು ಅದರಿಂದ ದೇವರ ತಲೆಕೂದಲನ್ನು ಒಣಗಿಸಿ ಗಂಟುಹಾಕಿದರು. ಸಾವಿತ್ರೀದೇವಿಯರು ಬಂಗಾರದಿಂದ ಅಲಂಕೃತವಾದ ಕನ್ನಡಿಯನ್ನು ದೇವರಿಗೆ ತೋರಿಸಿದರು. ಭಾರತೀದೇವಿಯರು ಭಕ್ತಿಯಿಂದ ಕೊಡೆಯನ್ನು ಹಿಡಿದರು. ಗಂಗಾದೇವಿಯರು ಹಾವಿಗೆಗಳನ್ನು ತಂದುಕೊಟ್ಟರು. ಶ್ರೀನಿವಾಸದೇವರು ಹಾವಿಗೆಗಳಲ್ಲಿ ಪಾದಗಳನ್ನು ಇಟ್ಟು ನಡೆದುಕೊಂಡು ಹೋದರು. ಸ್ವಾಮೀಪುಷ್ಕರಿಣಿಯ ದಕ್ಷಿಣತೀರದಲ್ಲಿ ಶ್ರೀನಿವಾಸದೇವರು ನಾಮ ಹಚ್ಚಿಕೊಂಡರು. ಆಗ ಬಕುಳೆಯು ರಮಾದೇವಿಯರೊಡನೆ ಶ್ರೀನಿವಾಸದೇವರಿಗೆ ಕುಂಕುಮ ಹಚ್ಚಲು ಹೇಳಿದಳು. ಹಾಗೆಯೇ ರಮಾದೇವಿಯರು ದೇವರ ಹಣೆಗೆ ಕುಂಕುಮವನ್ನು ಹಚ್ಚಿದರು. ಆಗ ಜ್ಯೋತಿಷ್ಕರು ಮುಹೂರ್ತ ಸಮಯವು ಬಂದಿತೆಂದರು. ಆಗ ರಮಾದೇವಿಯರು ಕುಬೇರನ ಹತ್ತಿರ ಕೇಳಿ ಆಭರಣಗಳನ್ನು ತಂದುಕೊಟ್ಟರು. ಭಗವಂತನು ತನ್ನನ್ನು ಆಭರಣಗಳಿಂದ ಅಲಂಕರಿಸಬೇಕೆಂದನು. ರಮಾದೇವಿಯರು ನಗುತ್ತಾ ಭಗವಂತನಿಗೆ ಅಲಂಕಾರ ಮಾಡಿದರು. ಶ್ರೀನಿವಾಸದೇವರು ಪೀತಾಂಬರವನ್ನು ಉಟ್ಟುಕೊಂಡರು. ಆಭರಣಗಳಿಂದ ಅಲಂಕೃತರಾಗಿ ಲೋಕದ ಜನರಂತೆ ನಟಿಸುತ್ತಾ ಕಶ್ಯಪಾದಿ ಋಷಿಗಳಿಗೆ ನಮಸ್ಕಾರ ಮಾಡಿದರು. ಆಮೇಲೆ ಶ್ರೀನಿವಾಸದೇವರು ಸಂಧ್ಯಾವಂದನೆಯನ್ನು ಮಾಡಿದರು.



# ಕುಲದೇವತಾ ಪ್ರತಿಷ್ಠೆ[1]

ಶ್ರೀನಿವಾಸದೇವರು ವಸಿಷ್ಠರನ್ನು ಕರೆದು ವಸಿಷ್ಠರೇ! ಇನ್ನು ಮಾಡಬೇಕಾದ ಕಾರ್ಯವನ್ನು ಮಾಡಿರಿ ಎಂದರು. ದೇವರ ಮಾತನ್ನು ಕೇಳಿ ವಸಿಷ್ಠರು ಮುತ್ತುಗಳಿಂದ ವೇದಿಕೆಯನ್ನು ಬರೆದು ಅದರಲ್ಲಿ ಶ್ರೀನಿವಾಸದೇವರನ್ನು ಕೂತುಕೊಳ್ಳಿಸಿದರು. ಸಂಕಲ್ಪಮಾಡಿ ಪುಣ್ಯಾಹ ಕರ್ಮವಾದ ಮೇಲೆ ಬ್ರಹ್ಮದೇವರು ಅಷ್ಟವರ್ಗವನ್ನು ಮಾಡಿದರು. ಆಗ ಬ್ರಾಹ್ಮಣರಿಗೆ ತಾಂಬೂಲ ದಕ್ಷಿಣೆಯನ್ನು ಕೊಟ್ಟರು. ದೇವತೆಗಳೆಲ್ಲರೂ ಆ ಕಾಲದಲ್ಲಿ ಭಗವಂತನಿಗೆ ಹಣವನ್ನೂ ವಸ್ತ್ರವನ್ನೂ ಓದಿಸಿದರು (ಉಡುಗರೆ ಮಾಡಿದರು) ಈರೀತಿಯಾಗಿ ಶಾಸ್ತ್ರದಲ್ಲಿ ಹೇಳಿದ ಕರ್ಮಗಳನ್ನು ಮುಗಿಸಿ ವಸಿಷ್ಠರು ದೇವರೊಡನೆ ಕುಲದೇವತೆಯನ್ನು ಕೇಳಿದರು. ಆಗ ಶ್ರೀನಿವಾಸದೇವರು 'ವಸಿಷ್ಠರೇ! ನನಗೆ ಶಮೀಮರವು ಕುಲದೇವತೆಯು. ನನಗೂ ಪಾಂಡವರಿಗೂ ಶಮಿಯೇ ಕುಲದೇವತೆಯು' ಎಂದರು. ಶಮೀಮರವು ಎಲ್ಲಿ ಇದೆ? ಎಂದು ಕೇಳಲು, ಅಗಸ್ತ್ಯರು ಇಲ್ಲಿಯೇ ಉತ್ತರದಿಕ್ಕಿನಲ್ಲಿ ಕುಮಾರತೀರ್ಥರ ಹತ್ತಿರ ಆ ಮರವಿದೆ. ಅಲ್ಲಿಗೆ ಹೋಗಿ ತರಬೇಕು ಎಂದರು. ಶ್ರೀನಿವಾಸದೇವರು ಆ ಮಾತನ್ನು ಕೇಳಿ ಲೋಕದ ಜನರಂತೆ ನಟಿಸುತ್ತಾ ಅಲ್ಲಿಗೆ ಹೋಗಿ ಆ ಮರಕ್ಕೆ ನಮಸ್ಕರಿಸಿದನು. 'ಶತ್ರುವನ್ನು ನಾಶಮಾಡುವ ಶಮೀದೇವಿಯೇ! ನನ್ನ ಪಾಪವನ್ನು ಪರಿಹರಿಸು. ಅಮ್ಮ! ನನಗೆ ನಿರ್ವಿಘ್ನವಾಗಿ ಮದುವೆಯಾಗುವಂತೆ ಅನುಗ್ರಹಿಸು. ಎಲ್ಲ ದೇವತೆಗಳಿಗೂ ಆ ಆಕಾಶರಾಜನಿಗೂ ಕಲಹವುಂಟಾಗದಂತೆ ಕರುಣಿಸು' ಎಂದು ಶ್ರೀನಿವಾಸದೇವರು ಲೋಕದ ಜನರಂತೆ ಪ್ರಾರ್ಥಿಸಿ ಪೂಜಾ ಮಾಡಿದರು. ಅದರ ಒಂದು ಸಮಿಧೆಯನ್ನು ಹಿಡಿದುಕೊಂಡು ತಲೆಯ ಮೇಲೆ ಇಟ್ಟುಕೊಂಡು ವಾದ್ಯಘೋಷದಿಂದ ಆಕಾಶವನ್ನು ತುಂಬಿಸುತ್ತಾ ತನ್ನ ಸ್ಥಾನಕ್ಕೆ ಬಂದರು. ಶ್ರೀನಿವಾಸದೇವರು ವಸಿಷ್ಠರೊಡನೆ ಕುಲದೇವತೆಯನ್ನು ಎಲ್ಲಿ ಸ್ಥಾಪಿಸಬೇಕು ಎಂದು ಕೇಳಿದರು. ಆಗ ವಸಿಷ್ಠರೂ ನಾರದರೂ ಶ್ರೀನಿವಾಸದೇವರ ಬಳಿಗೆ ಬಂದರು. ನಾರದರು 'ಭಗವಂತನೇ! ವರಾಹದೇವರ ಮನೆಯಲ್ಲಿ ಸ್ಥಾಪಿಸಿರಿ. ಎಲ್ಲಿ ತಮ್ಮ ಸ್ಥಾನವಿದೆಯೋ ಅಲ್ಲಿಯೇ ಸ್ಥಾಪಿಸಬೇಕೆಂದು ಬ್ರಹ್ಮದೇವರಿಂದ ನಿರ್ಮಿತವಾದದ್ದು. ಜ್ಞಾನಿಗಳಿಗೆ ಸಮ್ಮತವಾದದ್ದು' ಎಂದರು. ನಾರದರ ಮಾತನ್ನು ಕೇಳಿ ಶ್ರೀನಿವಾಸದೇವರು ವಸಿಷ್ಠರಿಂದ ಸಹಿತರಾಗಿ ವರಾಹದೇವರ ಮಂದಿರಕ್ಕೆ ಹೋಗಿ 'ಗೋವಿಂದ' ನಿಮ್ಮ

1. ಭ.ಪು.ಅ.11

ಅನುಗ್ರಹದಿಂದ ನಾನೊಂದು ಮದುವೆಯನ್ನು ಮಾಡಿಕೊಳ್ಳಬೇಕೆಂದು ಇರುವೆನು. ನೀವು ನಿಮ್ಮ ಪತ್ನಿಯಾದ ಧರಾದೇವಿಯಿಂದ ಸಹಿತರಾಗಿ ಮದುವೆಗೆ ಬಂದು ನನ್ನನ್ನು ಕೃತಾರ್ಥನನ್ನಾಗಿ ಮಾಡಬೇಕು' ಎಂದರು. ಶ್ರೀನಿವಾಸದೇವರ ಮಾತನ್ನು ಕೇಳಿ ವರಾಹದೇವರು 'ನನ್ನ ಸ್ಥಾನದಲ್ಲಿ ಬಕುಳೆಯನ್ನು ಇಟ್ಟುಕೊಳ್ಳಬೇಕು. ಇದು ನನ್ನ ಕ್ಷೇತ್ರವಾದ ಕಾರಣ ನಾನು ಇಲ್ಲಿಯೇ ಇರಬೇಕಾಗಿದೆ. ನನ್ನನ್ನು ಬಿಟ್ಟುಬಿಡಬೇಕು' ಎಂದರು. ಶ್ರೀನಿವಾಸದೇವರು ನಿಮ್ಮ ಮನೆಯಲ್ಲಿ ಕುಲದೇವತಾ ಪ್ರತಿಷ್ಠೆಯನ್ನು ಮಾಡುವೆನು. ಅದಕ್ಕೆ ಅನುಜ್ಞೆಯನ್ನು ಕೊಡಬೇಕು ಎಂದು ಹೇಳಿದರು. ವರಾಹದೇವರು ಹಾಗೆಯೇ ಆಗಲಿ ಎಂದು ಅಂಗೀಕರಿಸಿದರು. ಶ್ರೀನಿವಾಸದೇವರು ಬಂಗಾರದ ಕಲಶದಲ್ಲಿ ಮುತ್ತನ್ನು ತುಂಬಿಸಿ ಶಮಿಯ ಸಮಿಧೆಯನ್ನು ಇಟ್ಟು ವಸ್ತ್ರದಿಂದ ಸುತ್ತಿ ಪೂಜೆಯನ್ನು ಮಾಡಿ ವರಾಹದೇವರ ಮನೆಯಲ್ಲಿ ಇಟ್ಟು ತನ್ನ ಸ್ಥಳಕ್ಕೆ ಬಂದರು.



## ಕುಲದೇವತಾಸಮಾರಾಧನೆಯು

ಶ್ರೀನಿವಾಸದೇವರು ಬ್ರಹ್ಮದೇವರೊಡನೆ 'ಮಗನೇ! ಬೇಗನೆ ಚತುರಂಗ ಸೈನ್ಯಕ್ಕೆ ಆಜ್ಞೆ ಮಾಡು. ಎಲ್ಲರೂ ಹೊರಡಿರಿ. ನಾರಾಯಣಪುರಕ್ಕೆ ಈಗಲೇ ಹೋಗಬೇಕು. ಸುಮ್ಮನೆ ಹೊತ್ತು ಕಳೆಯುವುದು ಬೇಡ. ಬಹಳ ದೂರವಿದೆ. ಮುದುಕರು ಹೆಂಗಸರು ಮಕ್ಕಳು ಎಲ್ಲರೂ ಮೆಲ್ಲನೆ ವನಮಾರ್ಗದಲ್ಲಿ ಹೋಗಲಿ' ಎಂದು ಹೇಳಿದರು. ಅದಕ್ಕೆ ಬ್ರಹ್ಮದೇವರು 'ಪುಣ್ಯಾಹಕರ್ಮವನ್ನು ಮುಗಿಸಿ ಕುಲದೇವತಾ ಪ್ರತಿಷ್ಠೆಯನ್ನು ಮಾಡಿ ಉಪವಾಸದಿಂದ ಹೋಗಬಾರದು ಎಂದು ನನ್ನ ಮನಸ್ಸಿಗೆ ತೋರುತ್ತದೆ. ಮುನಿಗಳಿಗೆ ಹುಡುಗರಿಗೆ ಹೆಂಗಸರಿಗೆ ಮುದುಕರಿಗೆ ಎಲ್ಲಾ ತುಂಬಾ ಹಸಿವೆಯಾಗಿರುವುದು' ಎಂದರು. ಅದನ್ನು ಕೇಳಿ ಶ್ರೀನಿವಾಸದೇವರು 'ಮಗ1 ದೊಡ್ಡ ಮಾತುಗಳನ್ನು ಆಡುವಿಯಲ್ಲಾ' ಇಷ್ಟು ಜನರಿಗೆ ಅನ್ನಹಾಕಲಿಕ್ಕೆ ಸಾಧ್ಯವೋ ಅಲ್ಲವೋ ಎಂದು ಸ್ವಲ್ಪವೂ ವಿಚಾರಮಾಡುವುದಿಲ್ಲವಲ್ಲಾ. ದೇಶ ಕಾಲಗಳನ್ನು ಯೋಚಿಸದೆ ಹುಡುಗರಂತೆ ಮಾತಾಡುವಿಯಲ್ಲಾ! ಬಹುಕಾಲ ಕಾಡಿನಲ್ಲಿ ಬೆಟ್ಟದಲ್ಲಿ ವಾಸಮಾಡಿಕೊಂಡಿದ್ದೇನೆ. ನನ್ನ ಕೈಯಲ್ಲಿ ಹಣವೆಲ್ಲಿದೆ? ನನ್ನ ಅವಸ್ಥೆಯನ್ನು ತಿಳಿದೂ ಕೂಡ ನೀನು ಹೀಗೆ ಹೇಳಿದರೆ ಹೇಗೆ ಆಗುವುದು?' ಎಂದರು. ಬ್ರಹ್ಮದೇವರು ಆ ಮಾತನ್ನು ಕೇಳಿ ಸುಮ್ಮನೆ ಆದರು.

---

1. ಭ.ಪು.ಅ.11

ತರುವಾಯ ರುದ್ರದೇವರು 'ತಾತ! ಹುಡುಗನಾದ ನನ್ನ ಮಾತನ್ನು ಕೇಳಬೇಕು. ಮದುವೆಗೆ ಹೊರಟಮೇಲೆ ಹಾಗೆ ಮನೆ ಕಟ್ಟಲಿಕ್ಕೆ ಹೊರಟಮೇಲೆ ಆರಂಭಿಸಿದ ಕಾರ್ಯವನ್ನು ಕೊನೆಯವರೆಗೂ ಮಾಡಲಿಕ್ಕೆ ಪ್ರಯತ್ನಿಸಬೇಕು. ಅವನೇ ಪುಣ್ಯವಂತ ನಾಗುವುದು. ಅವನೇ ಕೀರ್ತಿವಂತನಾಗುವನು. ಬಹು ಹಣವನ್ನು ಖರ್ಚು ಮಾಡಿಯಾದರೂ ಬೇಕಾದ ಸಾಮಗ್ರಿಗಳನ್ನು ಸಂಗ್ರಹಿಸಬೇಕು. ಹಣವಿಲ್ಲದಿದ್ದರೆ ಸಾಲಮಾಡಬೇಕು' ಎಂದರು.

ಶ್ರೀನಿವಾಸದೇವರು 'ಏನು ಶಿವ! ಸಭೆಯಲ್ಲಿ ಪೌರುಷಮಾತನ್ನು ಆಡಿದಿ' ನನ್ನ ಮದುವೆಗೆ ಬೇಕಾದಷ್ಟು ಸಾಲಕೊಡುವವರು ಯಾರು ಇದ್ದಾರೆ? ಪುರುಷನು ಬಾಯಿಯಲ್ಲಿ ಹೇಳಿ ಉಪಾಯೋಗವಿಲ್ಲ. ಕಾರ್ಯವನ್ನು ಮಾಡಿ ತೋರಿಸಬೇಕು' ಎಂದು ಹೇಳಿ ಕುಬೇರನೊಡನೆ 'ಧನಾಧಿಪ' ಸ್ವಲ್ಪ ಕಾರ್ಯವಿದೆ. ಇಲ್ಲಿಗೆ ಬರಬೇಕು' ಎಂದು ಹೇಳಿದರು. ಹೀಗೆ ಹೇಳಲು ಕುಬೇರನು ಬ್ರಹ್ಮದೇವರಿಂದಲೂ ರುದ್ರ ದೇವರಿಂದಲೂ ಕೂಡಿಕೊಂಡು ಸಭಾಮಧ್ಯದಿಂದ ಎದ್ದನು. ಶ್ರೀನಿವಾಸದೇವರು ಬ್ರಹ್ಮದೇವರನ್ನು ರುದ್ರದೇವರನ್ನು ಕುಬೇರನನ್ನು ಕರೆದುಕೊಂಡು ಸ್ವಾಮಿ ಪುಷ್ಕರಿಣಿಯ ಪಶ್ಚಿಮದಲ್ಲಿ ಅಶ್ವತ್ಥಮರದ ಬುಡದಲ್ಲಿ ಏಕಾಂತಸ್ಥಳದಲ್ಲಿ ಹೋಗಿ ಕುಬೇರನೊಡನೆ 'ಮಹಾನುಭಾವ! ನನ್ನ ಮಗ ಬ್ರಹ್ಮನು ಹೇಳಿದಷ್ಟು ಹಣವನ್ನು ಸಾಲವನ್ನಾಗಿ ಕೊಟ್ಟು ಈ ಕಲಿಯುಗದಲ್ಲಿ ನಡೆಯುವ ನನ್ನ ಮದುವೆಯನ್ನು ನಡಿಸಿಕೊಡಬೇಕು' ಎಂದರು. ಅದಕ್ಕೆ ಕುಬೇರನು 'ದೇವ! ಈ ಚರಾಚರ ಪ್ರಪಂಚವೇ ನಿಮ್ಮ ಅಧೀನವಾಗಿರುವುದು. ಬಹು ಜೀವರಾಶಿಗಳ ಮಧ್ಯದಲ್ಲಿ ನಾನು ಎಷ್ಟರವನು? ನಿಮ್ಮ ಆಜ್ಞೆಯಿಂದ ನಿಮ್ಮ ಹಣವನ್ನೇ ನಾನು ರಕ್ಷಿಸುತ್ತಿರುವೆನು. ಆದುದರಿಂದ ಕೊಡಲಿಕ್ಕೂ ತೆಗೆದುಕೊಳ್ಳಲಿಕ್ಕೂ ನನಗೆ ಸಾಮರ್ಥ್ಯವಿಲ್ಲ. ನೀನೇ ಕೊಟ್ಟವನು. ನೀನೇ ತೆಗೆದುಕೊಳ್ಳುವವನು. ನೀನೆ ಸ್ವತಂತ್ರನು' ಎಂದು ಹೇಳಿದನು. ಅದನ್ನು ಕೇಳಿ ಶ್ರೀನಿವಾಸದೇವರು 'ನಾನು ಒಂದು ಬ್ರಹ್ಮನ ದಿವಸದಲ್ಲಿ ಹತ್ತು ಅವತಾರಗಳನ್ನು ಮಾಡುವೆನು. ನಾನು ಅವತಾರ ಮಾಡುವಾಗ ವೈಕುಂಠದಿಂದ ಭೂಲೋಕಕ್ಕೆ ಹಣವನ್ನು ತರುವುದಿಲ್ಲ. ಭೂಮಿಯಲ್ಲಿ ಇರುವ ಹಣವನ್ನು ನಾನು ತೆಗೆದುಕೊಂಡು ಹೋಗುವುದೂ ಇಲ್ಲ. ನಾನು ಅವತಾರಮಾಡಿ ರಮಾದೇವಿ ಯೊಡನೆ ದೇಶಕಾಲ ಯುಗಗಳನ್ನು ಅನುಸರಿಸಿ ವಿಹರಿಸುತ್ತಿರುವೆನು. ಹಣವನ್ನು ಕೊಡಲಿಕ್ಕೆ ನೀನು ನಿಮಿತ್ತಮಾತ್ರವಾಗು. ಯುಗವನ್ನು ಅನುಸರಿಸುತ್ತಿರುವ ನನಗೆ ದೇಶ ಕಾಲಾನುಸಾರವಾಗಿ ಹಣವನ್ನು ಕೊಡುವವನಾಗು' ಎಂದರು.

ಅದಕ್ಕೆ ಕುಬೇರನು ಯುಗವನ್ನು ಅನುಸರಿಸುತ್ತಿರುವ ನಿಮಗೆ ನಾನು ಹೇಗೆ ಸಾಲ ಕೊಡಲಿ. ಸಾಲಪತ್ರವನ್ನು ಬರೆದು ಕೊಟ್ಟು ಹಣವನ್ನು ಪಡೆಯಿರಿ' ಎಂದನು. ಶ್ರೀನಿವಾಸದೇವರು 'ಬ್ರಹ್ಮ! ಸಾಲಪತ್ರವನ್ನು ಹೇಗೆ ಬರೆಯಬೇಕು?' ಎಂದು ಕೇಳಿದರು. ಬ್ರಹ್ಮದೇವರು 'ಸಾಲವನ್ನು ಪಡೆಯುವವನು ಶ್ರೀನಿವಾಸನು. ಸಾಲಕೊಡುವವನು ಕುಬೇರನು. ನಾನು ಕಲಿಯುಗದಲ್ಲಿ ನಡೆಯುವ ನನ್ನ ಮದುವೆಗಾಗಿ ವಿಲಂಬಿ ಸಂವತ್ಸರದ ವೈಶಾಖ ಶುದ್ಧ ಸಪ್ತಮೀದಿನದಲ್ಲಿ ಹದಿನಾಲ್ಕು ಲಕ್ಷ ಬಂಗಾರದ ರಾಮಟಂಕೆ ನಾಣ್ಯಗಳನ್ನು ಬಡ್ಡಿಸಹಿತವಾಗಿ ಕೊಡುವೆನೆಂದು ಸ್ವೀಕರಿಸಿರುವೆನು. ಕುಬೇರನು ಕೊಟ್ಟಿರುವನು. ಮದುವೆಯ ವರ್ಷವನ್ನು ಆರಂಭಿಸಿ ಸಹಸ್ರವರ್ಷವಾದ ಮೇಲೆ ಕುಬೇರನಿಗೆ ಶ್ರೀನಿವಾಸನು ಕೊಡಬೇಕಾದದ್ದು. ಈ ವಿಷಯದಲ್ಲಿ ಬ್ರಹ್ಮನು ಒಬ್ಬ ಸಾಕ್ಷಿಯು. ರುದ್ರನು ಎರಡನೇ ಸಾಕ್ಷಿಯು. ಅಶ್ವತ್ಥಮರವು ಮೂರನೇ ಸಾಕ್ಷಿಯು. ಈರೀತಿಯಾಗಿ ಶ್ರೀನಿವಾಸನು ಬರೆದು ಕೊಟ್ಟ ಸಾಲಪತ್ರವು' ಎಂದು ಬರೆದುಕೊಡಬೇಕೆಂದರು. ಶ್ರೀನಿವಾಸದೇವರು ಈ ರೀತಿಯಾಗಿ ಸಾಲಪತ್ರವನ್ನು ಬರೆದು ಕುಬೇರನ ಕೈಯಲ್ಲಿ ಕೊಟ್ಟು ಪತ್ರದಲ್ಲಿ ಬರೆದಿರುವಷ್ಟು ಹಣವನ್ನು ಕೊಡು ಎಂದು ಹೇಳಿದರು. ಕುಬೇರನು ಅಷ್ಟು ಹಣವನ್ನು ಎಣಿಸಿ ದೇವರಿಗೆ ಕೊಟ್ಟನು. ಶ್ರೀನಿವಾಸದೇವರು ಅಷ್ಟು ಹಣವನ್ನೂ ಬೇಕಾದ ಸಾಮಗ್ರಿಗಳನ್ನು ತರಿಸುವುದಕ್ಕಾಗಿ ಕುಬೇರನ ಕೈಯಲ್ಲೇ ಕೊಟ್ಟರು. 'ಕುಬೇರ! ಬೇಕಾದಷ್ಟು ಅಕ್ಕಿಯನ್ನು ತರಿಸು. ಮತ್ತು ಉದ್ದು ಹೆಸರು ಗೋಧಿ ಬೆಲ್ಲ ಎಣ್ಣೆ ಜೇನು ಹಾಲು ಸಕ್ಕರೆ ತುಪ್ಪ ಮೊಸರು ಮೊದಲಾದ ಎಲ್ಲಾ ಪದಾರ್ಥಗಳನ್ನೂ ತರಿಸು. ವಸ್ತ್ರಗಳನ್ನೂ, ಉತ್ತರೀಯವಸ್ತ್ರಗಳನ್ನೂ, ಎಳ್ಳು ಹಿಂಗು ಮೆಣಸು ಜೀರಿಗೆ ಸಾಸಿವೆ ಮೆಂತೆಗಳನ್ನೂ ತರಿಸು. ಬ್ರಾಹ್ಮಣರಿಗೆ ಹೆಂಗಸರಿಗೆ ಕೊಡುವ ವಸ್ತ್ರಗಳಿಗೆಲ್ಲಾ ಅರಸಿನ ಹಚ್ಚಬೇಕು. ಕಂಬಳಿಗಳನ್ನು ತರಿಸಬೇಕು. ದೇವತೆಗಳಿಗೆಲ್ಲಾ ಉತ್ತರೀಯ ವಸ್ತ್ರಗಳನ್ನು ತರಿಸಬೇಕು. ದೇವತಾಸ್ತ್ರೀಯರಿಗೆ ಪಟ್ಟೆಸೀರೆಗಳನ್ನು ತರಿಸು ಮತ್ತು ಒಳ್ಳೇ ಅಡಿಕೆ, ವೀಳ್ಯದೆಲೆ, ಯಾಲಕ್ಕಿ, ಲವಂಗ, ಪಚ್ಚಕರ್ಪೂರ, ಕಸ್ತೂರಿಗಳನ್ನು ತರಿಸು. ಕನ್ಯೆಗೆ ಮಾಂಗಲ್ಯತಂತುವನ್ನು ಮಾಡಿಸ. ಕಾಲುಂಗರ ಕೈಗೆ ಉಂಗುರಗಳನ್ನು ಮಾಡಿಸು. ಎಲ್ಲಾ ಬೇಗನೇ ಆಗಬೇಕು' ಎಂದು ಹೇಳಿದರು. ಕುಬೇರನು 'ನಿಮ್ಮ ಅನುಗ್ರಹದಿಂದ ಎಲ್ಲವನ್ನೂ ಸಿದ್ಧಪಡಿಸಿರುವೆನು. ಅಡಿಗೆ ಮಾಡಲಿಕ್ಕೆ ಆಜ್ಞಾಪಿಸಬೇಕು' ಎಂದನು.

ಆಗ ಶ್ರೀನಿವಾಸದೇವರು ಅಗ್ನಿಯನ್ನು ಕರೆದುಕೊಂಡು ಬರಲು ಷಣ್ಮುಖನನ್ನು ಕಳುಹಿಸಿದರು. ಅಗ್ನಿದೇವರು ಓಡಿ ಬಂದರು. ಶ್ರೀನಿವಾಸದೇವರು 'ಅಗ್ನಿ!

ಸ್ವಾಹೆಯಿಂದ ಕೂಡಿಕೊಂಡು ಕೂಡಲೇ ಭಕ್ಷ್ಯಭೋಜ್ಯಾದಿಗಳನ್ನು ಮಾಡು' ಎಂದರು. ಅದಕ್ಕೆ ಅಗ್ನಿದೇವರು 'ಬಹು ಜನರಿಗೆ ಅಡಿಗೆಯಾಗಬೇಕು. ಪಾತ್ರೆಗಳು ಇಲ್ಲವಲ್ಲಾ' ಎಂದರು. ಶ್ರೀನಿವಾಸದೇವರು 'ನಿಮ್ಮ ಮನೆಯಲ್ಲಿ ಏನಾದರೂ ಆದರೆ ಆಲದ ಬೀಜದಂತೆ ಪಾತ್ರೆಗಳು ಬೆಳೆಯುತ್ತವೆ. ನನ್ನ ಮದುವೆಯೆಂದರೆ ಒಂದು ಪಾತ್ರವೂ ಕಾಣಿಸುವುದಿಲ್ಲ. ಎಲ್ಲಾ ಕಾರ್ಯವಾಗಬೇಕಾದರೂ ದೈವಾನುಗ್ರಹವಿರ ಬೇಕು. ಆಗಲಿ. ಪಾತ್ರೆಗಳಿಲ್ಲದೆ ಅಡಿಗೆ ಮಾಡಲು ಉಪಾಯವನ್ನು ಹೇಳುತ್ತೇನೆ. ಸ್ವಾಮಿ ಪುಷ್ಕರಣಿಯಲ್ಲಿಯೇ ಅನ್ನವನ್ನು ಮಾಡು. ಪಾಪವಿನಾಶಿನಿಯಲ್ಲಿ ತೊವ್ವೆ ಯನ್ನು, ಆಕಾಶಗಂಗೆಯಲ್ಲಿ ಬೆಲ್ಲಹಾಕಿ ಪಾಯಸವನ್ನೂ ಮಾಡು. ದೇವತೀರ್ಥದಲ್ಲಿ ಪಲ್ಯಗಳನ್ನು ಮಾಡು. ತುಂಬುರುತೀರ್ಥದಲ್ಲಿ ಚಿತ್ರಾನ್ನವನ್ನು ಕಲಿಸು. ಕುಮಾರಧಾರಿಕಾತೀರ್ಥದಲ್ಲಿ ನಾನಾವಿಧಭಕ್ಷ್ಯಗಳನ್ನು ಮಾಡು. ಪಾಂಡುತೀರ್ಥ ದಲ್ಲಿ ಒಳ್ಳೇ ಹುಣಿಸೆಹಣ್ಣುಹಾಕಿ ಗೊಜ್ಜು ಮಾಡು. ಬೇರೆಬೇರೆ ತೀರ್ಥಗಳಲ್ಲಿ ಬೇರೆಬೇರೆ ಪದಾರ್ಥಗಳನ್ನು ಮಾಡು' ಎಂದರು. ಆ ಮಾತನ್ನು ಕೇಳಿ ಎಲ್ಲಾ ಋಷಿಗಳೂ ಪ್ರಶಂಸಾಮಾಡಿದರು. ಅದೇ ರೀತಿಯಾಗಿ ಅಗ್ನಿದೇವರು ಅಡಿಗೆಯನ್ನು ಮಾಡಿದರು. ಈರೀತಿಯಾಗಿ ಯುಗವನ್ನು ಅನುಸರಿಸುತ್ತಿರುವ ಆ ಭಗವಂತನ ಚರಿತ್ರೆಯು ಅತ್ಯದ್ಭುತವಾಗಿರುವುದು.

ಅಗ್ನಿದೇವರು ಬಂದು ಶ್ರೀನಿವಾಸದೇವರೊಡನೆ 'ಅಡಿಗೆಯು ಸಂಪೂರ್ಣ ವಾಯಿತು. ಮೊಸರನ್ನವನ್ನು ಮಾಡಿರುವೆನು. ಎಳ್ಳುಪುಡಿಯನ್ನವನ್ನು ಕಲಿಸಿರುವೆನು. ಜೇನುಹಾಕಿ ಒಳ್ಳೇ ಪರಮಾನ್ನವನ್ನು ಮಾಡಿರುವೆನು. ಆಂಬಡೆಗಳನ್ನೂ ಅಪ್ಪಗಳನ್ನೂ, ಎರಡು ಪಲ್ಯಗಳನ್ನು ಮಾಡಿರುವೆನು. ತಮ್ಮ ಅನುಗ್ರಹದಿಂದ ಎಲ್ಲವೂ ಸಿದ್ಧವಾಗಿರುವುದು. ಬ್ರಾಹ್ಮಣರನ್ನೂ, ದೇವತೆಗಳನ್ನೂ, ಋಷಿಗಳನ್ನೂ, ಭೋಜನಕ್ಕೆ ಕರಿಯಬೇಕು (ಕೂಗಬೇಕು)' ಎಂದು ಹೇಳಿದರು.

ಅಗ್ನಿಯ ಮಾತನ್ನು ಕೇಳಿ ಶ್ರೀನಿವಾಸದೇವರು ಎಲ್ಲರನ್ನೂ ಕರೆದು ಬರುವುದಕ್ಕಾಗಿ ಷಣ್ಮುಖನನ್ನು ಕಳುಹಿಸಿದರು. ಷಣ್ಮುಖನು ವೇಗದಿಂದ ಹೋಗಿ ಜಪಮಾಡುತ್ತಾ ಕೂತಿದ್ದ ಬ್ರಾಹ್ಮಣರೊಡನೆ 'ಅಡಿಗೆಯಾಯಿತು. ಎಲ್ಲರೂ ಊಟಕ್ಕೆ ಏಳಿರಿ' ಎಂದು ಹೇಳಿದನು. ಈರೀತಿಯಾಗಿ ಎಲ್ಲರನ್ನೂ ಕರೆಯಲು ಕಶ್ಯಪಾದಿ ಋಷಿಗಳೂ ದೇವತೆಗಳೂ ಅಡಿಗೆ ಮನೆಯ ಬಳಿಗೆ ಬಂದರು. ಪಾತ್ರಾಪಾತ್ರರನ್ನು ತಿಳಿದವರಾದ ರುದ್ರದೇವರು ತಾರತಮ್ಯವನ್ನು ಅನುಸರಿಸಿ ಬೇರೆಬೇರೆ ಪಂಕ್ತಿಗಳನ್ನು ಮಾಡಿ ಎಲ್ಲರನ್ನೂ ಕೂತುಕೊಳ್ಳಿಸಿ ಎಲೆಹಾಕಿದರು. ಪಾಂಡುತೀರ್ಥವನ್ನು ಆರಂಭಿಸಿ

ಶ್ರೀಶೈಲದವರೆಗೆ ಬ್ರಾಹ್ಮಣರೂ ದೇವತೆಗಳೂ ಋಷಿಗಳೂ ಹತ್ತಿರಹತ್ತಿರ ಎಲೆಗಳಲ್ಲಿ ಕೂತಿದ್ದರು.

ಆಗ ಶ್ರೀನಿವಾಸದೇವರು ಬ್ರಹ್ಮದೇವರೊಡನೆ 'ಮಗ! ಸಮರ್ಪಣೆ ಮಾಡದೆ ಅನ್ನವನ್ನು ದೇವತೆಗಳಿಗೂ ಬ್ರಾಹ್ಮಣರಿಗೆ ಹಾಕಬಾರದು' ಎಂದರು. ಅದಕ್ಕೆ ಬ್ರಹ್ಮದೇವರು 'ನಿಮ್ಮನ್ನೇ ಸರ್ವಜ್ಞರನ್ನಾಗಿಯೂ ಸರ್ವಲೋಕ ಸ್ವಾಮಿಯನ್ನಾಗಿಯೂ ತಿಳಿದಿರುವೆನು. ನಿಮಗೆ ಸಮಾನರೂ ನಿಮ್ಮಿಂದ ಉತ್ತಮರೂ ಯಾರೂ ಇಲ್ಲವೇ ಇಲ್ಲ. ಆದುದರಿಂದ ಯಾರಿಗೆ ನಾನು ನೈವೇದ್ಯ ಸಮರ್ಪಣೆ ಮಾಡಲಿ' ಎಂದು ಕೇಳಿದರು. ಆಗ ಶ್ರೀನಿವಾಸದೇವರು ನಗುತ್ತಾ 'ಅಹೋಬಲ ನೃಸಿಂಹದೇವರಿಗೆ ಸಮರ್ಪಣೆ ಮಾಡು' ಎಂದರು. ಬ್ರಹ್ಮದೇವರು ನೃಸಿಂಹದೇವರಿಗೆ ಸಮರ್ಪಣೆ ಮಾಡಿದರು. ಬ್ರಹ್ಮದೇವರು ದೇವರಿಗೆ ಸಮರ್ಪಣೆ ಮಾಡುವುದು ಎಲ್ಲಾ ದೇವತೆಗಳಿಗೂ ಋಷಿಗಳಿಗೂ ಸಮ್ಮತವಾಗಿತ್ತು. ಆಮೇಲೆ ನವಗ್ರಹಗಳ ಆರಾಧನೆಯನ್ನು ಮಾಡಿದರು. ಆಮೇಲೆ ಬ್ರಾಹ್ಮಣರಿಗೆ ಬ್ರಹ್ಮದೇವರು ಪೂಜೆಯನ್ನು ಮಾಡಿದರು. ಶ್ರೀನಿವಾಸದೇವರು ಎಲ್ಲರಿಗೂ ಲೋಕದ ಜನರಂತೆ ನಮಸ್ಕರಿಸಿದರು. ತರುವಾಯ ಅಷ್ಟದಿಕ್ಪಾಲಕರೂ ಎಲೆಗಳಲ್ಲಿ ಬಡಿಸಿದರು. ಪಾತ್ರ ಸಂಸ್ಕಾರವನ್ನು ಮಾಡಿ ಎಲ್ಲವನ್ನೂ ಬಡಿಸಿದರು. ಅಗ್ನಿದೇವರು ಬಂದು ಎಲ್ಲವನ್ನೂ ಬಿಡಿಸಿಯಾಯಿತು ಎಂದು ಹೇಳಲು ಶ್ರೀನಿವಾಸದೇವರು 'ಏಕೋ ವಿಷ್ಣುರ್ಮಹದ್ಭೂತಂ' ಎಂಬ ಮಂತ್ರವನ್ನು ಹೇಳಿ ಕೃಷ್ಣಾರ್ಪಣಮಸ್ತು ಎಂದು ನೃಸಿಂಹದೇವರ ಹೆಸರನ್ನು ಹೇಳಿದರು. ಕಶ್ಯಪಾದಿ ಗಳೊಡನೆ ಸಾವಕಾಶಭೋಜನ ಮಾಡಬೇಕೆಂದರು. 'ನೀವೆಲ್ಲರೂ ಜ್ಞಾನದಿಂದ ಪೂರ್ಣರಾದವರು. ಅನ್ನದಿಂದ ಪೂರ್ಣರಾಗುವವರಲ್ಲ. ನೀವೆಲ್ಲರೂ ದಯವುಳ್ಳ ವರು. ನನ್ನ ವಿಷಯವೆಲ್ಲ ನಿಮಗೆ ತಿಳಿದಿರುವುದು. ನಾನು ದರಿದ್ರನೆಂದು ತಿಳಿದಿರುವಿರಿ. ನಾನು ಹಾಕಿರುವ ಅನ್ನ ನೀರನ್ನು ಬಹಳವೆಂದು ಸ್ವೀಕರಿಸಬೇಕು' ಎಂದು ಬ್ರಾಹ್ಮಣರಲ್ಲಿ ಪ್ರಾರ್ಥನಾ ಮಾಡಿದನು. ಲೋಕದ ಮನುಷ್ಯರಂತೆ ನಟಿಸುತ್ತಿರುವ ಭಗವಂತನ ಮಾತನ್ನು ಕೇಳಿ ಋಷಿಗಳು 'ನೀವು ಹಾಕಿರುವ ಅನ್ನವು ಅಮೃತಕ್ಕೆ ಸಮಾನವು. ಮೋಕ್ಷಕ್ಕೆ ಸಾಧನವು. ಪಾಪಯುಕ್ತವಾದ ಈ ಕಲಿಯುಗದಲ್ಲಿ ನಾವು ಧನ್ಯರಾದೆವು' ಎಂದು ಹೇಳಿದರು. ಈರೀತಿಯಾಗಿ ಹೇಳಿ ಎಲ್ಲರೂ ಸಂತೋಷದಿಂದ ಭೋಜನವನ್ನು ಮಾಡಿದರು. ಭೋಜನವಾದ ಮೇಲೆ ಶ್ರೀನಿವಾಸ ದೇವರು ಎಲ್ಲರಿಗೂ ತಾಂಬೂಲದಕ್ಷಿಣೆಯನ್ನು ಕೊಟ್ಟರು. ತರುವಾಯ ಅವರು ಮಗನಿಂದಲೂ, ಮೊಮ್ಮಗನಿಂದಲೂ, ಪತ್ನಿಯಿಂದಲೂ, ಬಂಧುಗಳಿಂದಲೂ,

ಕೂಡಿಕೊಂಡು ಅಗ್ನಿಯಿಂದ ಲೋಕಪಾಲಕರಿಂದಲೂ, ಗರುಡಶೇಷರಿಂದಲೂ, ಸಹಿತನಾಗಿ ಭೋಜನವನ್ನು ಮಾಡಿದರು. ತರುವಾಯ ರಾತ್ರಿಯಾಯಿತು. ಶ್ರೀನಿವಾಸದೇವರು ನಿದ್ರಾಹೀನರಾದರೂ ಮಂಚದಲ್ಲಿ ರಮಾದೇವಿಯರೊಡನೆ ಮಲಗಿದರು. ಬ್ರಹ್ಮಾದಿದೇವಶ್ರೇಷ್ಠರೂ ಕಶ್ಯಪಾದಿ ಮುನೀಶ್ವರರೂ ಅಲ್ಲಲ್ಲಿ ಮರಗಳ ಬುಡಗಳಲ್ಲಿಯೂ, ಪರ್ವತ ಪ್ರದೇಶಗಳಲ್ಲಿಯೂ, ಗುಹೆಗಳಲ್ಲಿಯೂ ನಿದ್ರೆ ಮಾಡಿದರು.



## ನಾರಾಯಣಪುರಕ್ಕೆ ಪ್ರಯಾಣ [1]

ಮರುದಿನ ಬೆಳಗಾಗಲು ಶ್ರೀನಿವಾಸದೇವರು ಬ್ರಹ್ಮದೇವರಿದ್ದಲ್ಲಿಗೆ ಗರುಡ ದೇವರನ್ನು ಕಳುಹಿಸಿದರು. ಗರುಡದೇವರು ಹಾಸಿಗೆಯಲ್ಲಿ ಕೂತಿರುವ ಬ್ರಹ್ಮದೇವರ ಬಳಿಗೆ ಹೋಗಿ 'ವಸ್ತ್ರಾಭರಣಗಳಿಂದ ಅಲಂಕೃತರಾಗಿ ಬೇಗನೆ ಭಗವಂತನ ಬಳಿಗೆ ಬನ್ನಿರಿ. ಹಂಸಪಕ್ಷಿಯನ್ನು ಏರಿರಿ. ವಿಚಿತ್ರಗಳಾದ ವಾದ್ಯಗಳನ್ನು ಬಾರಿಸಲಿ. ಆನೆಯ ಮೇಲೆ ನಗಾರಿಯನ್ನು ಬಡಿಯಲಿ. ವಿಚಿತ್ರ ವಾಹನಗಳೂ ರಥಗಳೂ ವಿಮಾನಗಳೂ ಅಲಂಕಾರ ಮಾಡಲ್ಪಡಲಿ. ಬೇಗನೇ ಆಕಾಶರಾಜನ ನಗರಿಗೆ ಹೋಗಬೇಕು' ಎಂದು ಹೇಳಿದರು.

ಗರುಡದೇವರ ಮಾತನ್ನು ಕೇಳಿ ಬ್ರಹ್ಮದೇವರು ದೇವತಾಸೈನ್ಯಕ್ಕೆ ಆಜ್ಞಾ ಮಾಡಿದರು. ಆನೆಗಳಿಗೂ, ಕುದುರೆಗಳಿಗೂ, ಎತ್ತುಗಳಿಗೂ, ಪದಾತಿಗಳಿಗೂ, ಅಲಂಕಾರ ಮಾಡಿದರು. ಎಷ್ಟೋ ಶೂರರು ಆಯುಧಧಾರಿಗಳಾಗಿ ಬ್ರಹ್ಮದೇವರನ್ನು ಮುಂದೆ ಮಾಡಿಕೊಂಡು ಶ್ರೀನಿವಾಸದೇವರ ಬಳಿಗೆ ಬಂದರು. ಶ್ರೀನಿವಾಸದೇವರು ಬ್ರಹ್ಮದೇವರನ್ನು ನೋಡಿ 'ಮಗ! ಏಕೆ ಸಾವಕಾಶ ಮಾಡುವೆ? ಆಕಾಶರಾಜನ ರಾಜಧಾನಿಗೆ ಹೋಗಲು ಸೈನ್ಯಕ್ಕೆ ಆಜ್ಞಾಪಿಸು' ಎಂದು ಹೇಳಿದರು. ಅದಕ್ಕೆ ಬ್ರಹ್ಮದೇವರು 'ಎಲ್ಲ ಸೈನ್ಯವೂ ಆಯುಧಗಳನ್ನು ಧರಿಸಿಕೊಂಡು ಸಿದ್ಧವಾಗಿದೆ. ತಾವು ಗರುಡಾರೂಢರಾಗಬೇಕು' ಎಂದು ಹೇಳಿದರು. ಕೂಡಲೇ ಶ್ರೀನಿವಾಸದೇವರು ಗರುಡನ ಮೇಲೆ ಕೂತುಕೊಂಡರು. ಬ್ರಹ್ಮದೇವರನ್ನು ಮುಂದೆ ಮಾಡಿಕೊಂಡರು. ಎಡಬದಿಯಲ್ಲಿ ವಾಯುದೇವರೂ ಬಲಬದಿಯಲ್ಲಿ ರುದ್ರದೇವರೂ ಹಿಂದಿನಿಂದ

---

1. ಭ.ಪು.ಅ.11

ಷಣ್ಮುಖನೂ ಹೋದರು. ರಮಾದೇವಿಯರನ್ನು ಬಂಗಾರದ ರಥದಲ್ಲಿ ಕೂತುಕೊಳ್ಳಿಸಿದರು. ಶ್ರೀನಿವಾಸದೇವರು ಗರುಡನ ಮೇಲೆ ಕೂತುಕೊಂಡು ಹೋದರು. ಆಗ ಶೇಷದೇವರು ಛತ್ರವನ್ನು ಹಿಡಿದರು. ವಿಷ್ವಕ್ಸೇನನು ಚಾಮರವನ್ನು ಬೀಸಿದನು. ಭೇರೀದುಂದುಭಿ ಮೊದಲಾದ ವಾದ್ಯಗಳನ್ನು ಬಾರಿಸಿದರು. ನರ್ತಕರೂ ನಟರೂ ಹಾಹಾ ಹೂಹೂ ಗಂಧರ್ವರೂ ಹೋದರು. ಈ ರೀತಿಯಾದ ವೈಭವದಿಂದ ಭಗವಂತನು ಪ್ರಯಾಣ ಮಾಡಿದನು.

ಪ್ರಯಾಣಕಾಲದಲ್ಲಿ ದೇವತೆಗಳಿಗೂ ಋಷಿಗಳಿಗೂ ಗಂಧರ್ವರಿಗೂ ಮನುಷ್ಯರಿಗೂ ನಿಗ್ಗಾಟ(ತಿಕ್ಕಾಟ-ತಡೆಯಾಟ)ವಾಯಿತು. ಹೆಂಗಸರಿಗೆ ಮಕ್ಕಳಿಗೆ ಜಗಳವೂ ಆಯಿತು. ಒಬ್ಬ ದರಿದ್ರ ಹೆಂಗಸು ಹೆಗಲಲ್ಲಿ ಮಗುವನ್ನು ಹೊತ್ತುಕೊಂಡು ತಲೆಯಲ್ಲಿ ಭಾರವನ್ನು ಹೊತ್ತುಕೊಂಡು ಗಂಡನನ್ನು ಆಶ್ರಯಿಸಿಕೊಂಡು ನಡೆದುಕೊಂಡು ಹೋಗುತ್ತಿದ್ದಳು. ಆ ಸಮಯದಲ್ಲಿ ರಥದಲ್ಲಿ ಹೋಗುತ್ತಿದ್ದ ದೇವತಾಸ್ತ್ರೀಯರು ಅವಳನ್ನು ಬೆದರಿಸುತ್ತಾ ಹೋದರು. ಆ ಸಂಭ್ರಮದಲ್ಲಿ ಅವಳ ಗಂಡನು ತಪ್ಪಿಹೋದನು. ಅವಳು ಹಾಹಾಕಾರ ಮಾಡುತ್ತಾ ಗಂಡನನ್ನು ಕೂಗುತ್ತಾ ಅಲ್ಲಿಯೇ ಬಿದ್ದುಬಿಟ್ಟಳು. ಮಕ್ಕಳು ಅತ್ತವು. ಕೆಲವರು ಸಂತೋಷಪಟ್ಟರು. ಕೆಲವರು ಹಾಲನ್ನು ಕೇಳುವರು. ಕೆಲವರು ಅನ್ನವನ್ನು ಅಪೇಕ್ಷಿಸುವರು. ಕೆಲವರು ನಗುವವರು. ಕೆಲವರು ಅಳುವವರು. ಬೀಳುವವರನ್ನು ಎತ್ತುವವರು ಕೆಲವರು. ದೇವತಾ ಸ್ತ್ರೀಯರೂ, ಋಷಿಸ್ತ್ರೀಯರೂ, ಗಂಧರ್ವಸ್ತ್ರೀಯರೂ, ಬೆಟ್ಟದಿಂದ ಕೆಳಗೆ ಇಳಿದುಹೋದರು. ಶೇಷಾಚಲವನ್ನು ಆರಂಭಿಸಿ ನಾರಾಯಣಪುರದವರೆಗೂ ದಾರಿಯಲ್ಲಿ ಎಳ್ಳು ಹಾಕಲಿಕ್ಕೂ ಅವಕಾಶವಿರಲಿಲ್ಲ. ಈರೀತಿಯಾಗಿ ಭಗವಂತನ ಸೇನೆಯು ಪದ್ಮಸರೋವರದ ದಾರಿಯಿಂದ ಹೊರಟುಹೋಯಿತು. ಶ್ರೀಭಗವಂತನು ಪದ್ಮ ಸರೋವರದ ಬಳಿಗೆ ಬಂದನು.



# ಶುಕಾಚಾರ್ಯರ ಆತಿಥ್ಯ [1]

ಪದ್ಮತೀರ್ಥದ ಬಳಿಯಲ್ಲಿ ಗರುಡಾರೂಢರಾಗಿ ಬರುತ್ತಿರುವ ಶ್ರೀನಿವಾಸದೇವರನ್ನು ನೋಡಿ ಶುಕಾಚಾರ್ಯರು ಉದ್ದಕ್ಕೆ ನಮಸ್ಕರಿಸಿದರು. 'ನನ್ನ ತಪಸ್ಸು ಸಫಲವಾಯಿತು. ಬ್ರಹ್ಮರುದ್ರಾದಿಗಳಿಂದಲೂ ತಮ್ಮ ಶಕ್ತಿಯಿಂದ ನೋಡಲಿಕ್ಕೆ ಆಗದ ನಿನ್ನನ್ನು ಪುತ್ರಮಿತ್ರರಿಂದಲೂ ಲೋಕಪಾಲರಿಂದಲೂ ಶೇಷದೇವರಿಂದಲೂ ರಮಾದೇವಿಯರಿಂದಲೂ ಸಹ ಎರಡು ಕಣ್ಣುಗಳಿದ ನೋಡುತ್ತಿರುವೆನು. ನನ್ನ ವಿಜ್ಞಾಪನೆಯನ್ನು ಕೇಳಬೇಕು. ನನ್ನ ಮೇಲೆ ದಯೆಯನ್ನು ಮಾಡಿ ನಾನು ಕೊಡು ಗೆಡ್ಡೆಹಣ್ಣುಗಳನ್ನು ಭುಂಜಿಸಬೇಕು' ಎಂದು ಹೇಳಿದರು. ಅದಕ್ಕೆ ಭಗವಂತನು 'ನೀವು ಕೃಶರಾಗಿರುವಿರಿ. ಬ್ರಹ್ಮಚಾರಿಗಳು ವಿರಕ್ತರು. ನಾವು ಸಂಸಾರದಲ್ಲಿ ಆಸಕ್ತರು. ಬಹಳ ಜನರಿದ್ದೇವೆ. ಈದಿನವೇ ಮಹಾನುಭಾವನಾದ ಆಕಾಶರಾಜನ ನಗರಿಗೆ ಹೋಗಿ ಭೋಜನ ಮಾಡುವೆವು ಎಂದು ನಮ್ಮ ಅಭಿಪ್ರಾಯವಿದೆ? ಎಂದು ಹೇಳಿದನು.

ಅದಕ್ಕೆ ಶುಕಾಚಾರ್ಯರು 'ಭಗವಂತನೇ! ನಾನು ದರಿದ್ರನು ಹೌದು. ನೀನು ದರಿದ್ರರಾದ ವಿರಕ್ತರಾದ ಭಕ್ತರಲ್ಲಿ ಪ್ರೀತಿ ಉಳ್ಳವನಷ್ಟೆ. ನೀನೊಬ್ಬನು ಭೋಜನವನ್ನು ಮಾಡಿದರೆ ಮೂರುಲೋಕವು ಭೋಜನ ಮಾಡಿದಂತೆ ಆಗುವುದು' ಎಂದರು.

ಆಗ ಬಕುಳೆಯು ಶ್ರೀನಿವಾಸದೇವರೊಡನೆ 'ಕೃಷ್ಣ! ಇವರ ಮಾತಿನಂತೆ ಕೇಳು. ನಿನ್ನ ಮದುವೆಗಾಗಿ ಇವರು ಬಹಳ ಪ್ರಯತ್ನ ಮಾಡಿರುವರು. ರಾಜನಿಗೆ ನಿನ್ನ ವಿಷಯವಾಗಿ ಚೆನ್ನಾಗಿ ಉಪದೇಶ ಮಾಡಿರುವರು' ಎಂದಳು.

ತಾಯಿಯ ಮಾತನ್ನು ಕೇಳಿ ಶ್ರೀನಿವಾಸದೇವರು 'ಮುನಿಗಳೇ! ನಿಮ್ಮ ಮಾತು ಎಂಬ ಅಮೃತದ ಪಾನದಿಂದ ನನಗೆ ಬಹಳ ತೃಪ್ತಿಯಾಯಿತು. ಪ್ರಾಕೃತವಾದ ಅನ್ನದಿಂದ ಅಲ್ಪರಸವುಳ್ಳ ಹಣ್ಣುಗಳಿಂದ ಏನಾಗಬೇಕು? ಆದರೂ ನಿಮ್ಮ ಮಾತಿನಂತೆ ಭೋಜನ ಮಾಡುತ್ತೇನೆ' ಎಂದು ಸಮಾಧಾನಪಡಿಸಿ ಗರುಡದೇವರಿಂದ ಕೆಳಗೆ ಇಳಿದು ಶುಕಾಚಾರ್ಯರ ಪರ್ಣಾಶಾಲೆಯನ್ನು ಪ್ರವೇಶಿಸಿ ಹುಲ್ಲಿನ ಚಾಪೆಯಲ್ಲಿ ಕೂತುಕೊಂಡರು. ಶುಕಾಚಾರ್ಯರು ಪದ್ಮತೀರ್ಥದಲ್ಲಿ ಸ್ನಾನಮಾಡಿಕೊಂಡು ಬಂದು ಉತ್ತರಾಯಣಕಡ್ಡಿಯ ಬೀಜವನ್ನು ಮುಷ್ಟಿಯಿಂದಲೆ ಕುಟ್ಟಿ ಅದರ ಅಕ್ಕಿಯಿಂದ ಅನ್ನವನ್ನು ಮಾಡಿದರು. ಮುಳ್ಳೀಕಾಯಿಯನ್ನು ಹಾಕಿ ಹುಣಸೆಹಣ್ಣಿನ ಗೊಜ್ಜನ್ನೂ ಮಾಡಿ ತನ್ನ ಅಂತರ್ಯಾಮಿಯನ್ನು ನಿತ್ಯವೂ ಪೂಜಿಸುವ ಈ

1. ಭ.ಪು.ಅ.11

ಪದಾರ್ಥದಿಂದಲೇ ಬಾಹ್ಯಮೂರ್ತಿಯನ್ನು ಪೂಜಿಸುವೆನು ಎಂದು ಅನುಸಂಧಾನ ವುಳ್ಳವರಾಗಿ ಶ್ರೀನಿವಾಸದೇವರ ಕಾಲು ತೊಳೆದು ಪದ್ಮದ ಎಲೆಗಳನ್ನು ಹಾಕಿ ಅವುಗಳಲ್ಲಿ ಗೊಜ್ಜು ಅನ್ನಗಳನ್ನು ಹಾಕಿದರು. ಉದ್ದಕ್ಕೆ ನಮಸ್ಕರಿಸಿ 'ಭಗವಂತನೇ! ಭೋಜನವನ್ನು ಮಾಡು' ಎಂದು ಪ್ರಾರ್ಥಿಸಿಕೊಂಡರು. ಈರೀತಿಯಾಗಿ ಶುಕಾಚಾರ್ಯರಿಂದ ಪ್ರಾರ್ಥಿತನಾಗಿ ಪರಮಾತ್ಮನು ಋಷಿಗಳಿಗೆ ಉಚಿತವಾದ ಆಹಾರವನ್ನು ಭೋಜನಮಾಡಿದನು. ಭಗವಂತನ ಆಜ್ಞೆಯಿಂದ ರಮಾದೇವಿಯರೂ ಬಕುಳೆಯೂ ಭೋಜನ ಮಾಡಿದರು.

ಈರೀತಿಯಾಗಿ ಭಗವಂತನು ಭೋಜನ ಮಾಡಲು ಋಷಿಗಳು ಸ್ವಲ್ಪ ಅಜ್ಞಾನದಿಂದ ಕೋಪವುಳ್ಳವರಾದರು. ಶುಕಾಚಾರ್ಯರನ್ನು ಬೆದರಿಸಲಿಕ್ಕೆ ಎದ್ದರು. ಅವರು ಶಾಪಕ್ಕೂ ಅನುಗ್ರಹ ಮಾಡಲಿಕ್ಕೂ ಸಮರ್ಥರಾಗಿದ್ದರು. ಅವರ ಅಭಿಪ್ರಾಯವನ್ನು ತಿಳಿದು ಶ್ರೀನಿವಾಸದೇವರು ಹೊರಗೆ ಬಂದು ಅವರೆಲ್ಲರಿಗೂ ತೃಪ್ತಿಯಾಗಲಿ ಎಂದು ಒಂದು ತೇಗುಬಿಟ್ಟರು. ಆ ಭಗವಂತನ ಮುಖದ ಗಾಳಿ ಯಿಂದಲೇ ಕಾಮಧೇನುವಿನಿಂದ ತೃಪ್ತಿಯಾಗುವಂತೆ ಎಲ್ಲರಿಗೂ ತೃಪ್ತಿಯಾಯಿತು. ಎಲ್ಲಾ ಮುನಿಶ್ರೇಷ್ಠರೂ ಶುಕಾಚಾರ್ಯರನ್ನು ಹೊಗಳಿದರು. ಈರೀತಿಯಾಗಿ ಅಷ್ಟಮೀದಿವಸ ಅಲ್ಲಿ ವಾಸಮಾಡಿದರು.



## ವರಪೂಜಾ ಶ್ರೀನಿವಾಸದೇವರ ಮೆರವಣಿಗೆ [1]

ಮರುದಿನ ಗುರುವಾರ ನವಮೀದಿನ ಬೆಳಗಾಗಲು ಶ್ರೀನಿವಾಸದೇವರು ಬೇಗನೆ ಗರುಡದೇವರನ್ನು ಏರಿದವರಾಗಿ ಚತುರಂಗ ಸೈನ್ಯಕ್ಕೆ ಅಧ್ಯಕ್ಷರಾದ ಬ್ರಹ್ಮದೇವರನ್ನು ಮುಂದೆ ಮಾಡಿಕೊಂಡು ಹೋದರು.

ಸಾಯಂಕಾಲ ಸಮಯದಲ್ಲಿ ಆಕಾಶರಾಜನು ಅಷ್ಟವರ್ಗವನ್ನು ಮಾಡಿಕೊಂಡು ಪದ್ಮಾವತೀದೇವಿಯನ್ನು ವಾಸನೆತೈಲದಿಂದ ಮಂಗಳಸ್ನಾನ ಮಾಡಿಸಿ ಆಭರಣಗಳಿಂದ ಅಲಂಕರಿಸಿ ಆನೆಯ ಮೇಲೆ ಕೂತುಕೊಳ್ಳಿಸಿ ಮಗನಿಂದಲೂ, ಪುರೋಹಿತ ರಿಂದಲೂ, ಇಂದ್ರದೇವರಿಂದಲೂ, ತೋಂಡಮಾನರಾಜನಿಂದಲೂ, ಸಹಿತನಾಗಿ ಶ್ರೀನಿವಾಸದೇವರನ್ನು ನೋಡಲಿಕ್ಕೆ ಹೋದನು. ಚತುರಂಗಸೈನ್ಯಗಳಿಂದ,

1. ಭ.ಪು.ಅ.11

ಧ್ವಜಪತಾಕೆಗಳಿಂದ, ವಾದ್ಯಗಳ ಧ್ವನಿಗಳಿಂದ, ನರ್ತಕರಿಂದಲೂ, ನಟರಿಂದಲೂ, ಸಹಿತನಾಗಿ ಸೂತಮಾಗಧರಿಂದ ಸ್ತೋತ್ರ ಮಾಡಲ್ಪಡುವವನಾಗಿ ಆಕಾಶರಾಜನು ಪ್ರಕಾಶಿಸಿದನು. ಆಕಾಶದಲ್ಲಿ ನಕ್ಷತ್ರಗಳ ಮಧ್ಯದಲ್ಲಿ ಶೋಭಿಸುವ ಚಂದ್ರನಂತೆ ಗರುಡದೇವರ ಮೇಲೆ ಕೂತಿರುವ ಶ್ವೇತಛತ್ರಾದಿಗಳಿಂದ ಕೂಡಿದ ಸುಕುಮಾರನಾದ ಯುವಕನಾದ ಇಂದ್ರದೇವರು ತೋರಿಸಿದ ಶ್ರೀಭಗವಂತನನ್ನು ಆಕಾಶರಾಜನು ನೋಡಿದನು. ಶ್ರೀಭಗವಂತನನ್ನು ನೋಡಿ ಸಂತೋಷಯುಕ್ತವಾದ ಮನಸ್ಸಿನಿಂದ ರಥದಿಂದ ಕೆಳಗೆ ಇಳಿದು ತನ್ನ ಮಗಳಾದ ಪದ್ಮಾವತಿಯನ್ನು ಮುಂದೆ ಮಾಡಿಕೊಂಡು ಪುರೋಹಿತರನ್ನು ಮುಂದೆ ಮಾಡಿಕೊಂಡು ರಾಜನು 'ನಾನು ಧನ್ಯನಾದೆನು. ಕೃತಾರ್ಥನಾದೆನು. ಸ್ವರ್ಗಮಾರ್ಗವನ್ನು ಹೊಂದಿದೆನು' ಎಂದು ಹೇಳಿದನು. ಈರೀತಿಯಾಗಿ ಹೇಳುತ್ತಿರುವ ರಾಜನನ್ನು ನಾರದರು ಶ್ರೀನಿವಾಸದೇವರಿಗೆ ತೋರಿಸಿದರು. ನಾರದರು 'ಗೋವಿಂದ! ಉದ್ದವಾದ ಮೀಸೆಯುಳ್ಳ ಉದ್ದವಾದ ಕೈಯುಳ್ಳ ನಿನ್ನ ಮಾವನಾದ ಆಕಾಶರಾಜನನ್ನು ನೋಡು' ಎಂದು ಹೇಳಿದರು.

ಆಗ ಶ್ರೀನಿವಾಸದೇವರು 'ಆಕಾಶರಾಜನು ನನಗೆ ಬಂಧುವಾಗಿ ಬಂದ ಕಾರಣ ನನ್ನ ಜನ್ಮವು ಸಾರ್ಥಕವಾಯಿತು. ಈ ರಾಜನ ಸಂಬಂಧವು ಉಂಟಾಗಲಿಕ್ಕೆ ನಾವು ಪೂರ್ವದಲ್ಲಿ ಏನು ಪುಣ್ಯಮಾಡಿದ್ದೇನೋ' ಎಂದು ಹೇಳಿದರು. ಈರೀತಿಯಾಗಿ ಶ್ರೀನಿವಾಸದೇವರು ಹೇಳುತ್ತಿರಲು ಆಕಾಶರಾಜನು ತೋರಣದ ಬಳಿಗೆ ಬಂದು ಶ್ರೀನಿವಾಸದೇವರನ್ನು ನೋಡಿದನು. ರಾಜನು ಶ್ರೀನಿವಾಸದೇವರನ್ನು ವಸ್ತ್ರ ಆಭರಣ ಗಂಧತೈಲ ಇತ್ಯಾದಿಗಳಿಂದ ಪೂಜಿಸಿದನು. ಪದ್ಮಾವತೀದೇವಿಯರು ಲಜ್ಜೆಯಿಂದ ಶ್ರೀನಿವಾಸದೇವರನ್ನು ನೋಡಿದರು. ಶ್ರೀನಿವಾಸದೇವರು ಪದ್ಮಾವತೀದೇವಿಯರನ್ನು ನೋಡಿದರು. ಪದ್ಮಾವತೀದೇವಿಯರೂ ಶ್ರೀನಿವಾಸದೇವರೂ ವಾಹನದಿಂದ ಕೆಳಗೆ ಇಳಿದು ಪರಸ್ಪರ ಒಬ್ಬರನ್ನೊಬ್ಬರು ನೋಡಿಕೊಂಡರು.

ಶ್ರೀನಿವಾಸದೇವರ ಭಕ್ತರೆಲ್ಲರೂ ಪರಸ್ಪರ ಆಲಿಂಗನ ಮಾಡಿಕೊಂಡರು. ಊರಿನ ಬಾಗಿಲಲ್ಲಿ ದುರ್ಗಾದೇವಿಯರ ಗುಡಿಯಿತ್ತು. ಅಲ್ಲಿಗೆ ಹೋಗಿ ಶ್ರೀನಿವಾಸದೇವರು ಲೋಕದ ಜನರಂತೆ 'ನನಗೆ ಪದ್ಮಾವತಿಯೇ ಹೆಂಡತಿ ಯಾಗುವಂತೆ ಅನುಗ್ರಹಿಸು' ಎಂದು ಹೇಳಿಕೊಂಡರು. ಹಾಗೆಯೇ ಪದ್ಮಾವತೀದೇವಿ ಯರೂ 'ನನಗೆ ಶ್ರೀನಿವಾಸದೇವರೇ ಪತಿಯಾಗಬೇಕು' ಎಂದು ವರವನ್ನು ಕೇಳಿಕೊಂಡರು.

ತರುವಾಯ ಪದ್ಮಾವತೀದೇವಿಯರು ಐರಾವತವನ್ನು ಏರಿದರು.

ಶ್ರೀನಿವಾಸದೇವರು ಗರುಡದೇವರನ್ನು ಏರಿದರು. ಸಾವಿರಾರು ದೀಪಗಳನ್ನು ಹಿಡಿದುಕೊಂಡು ಬಂದರು. ಅನೇಕರು ಶ್ರೀನಿವಾಸದೇವರ ಮೇಲೆ ಹೂಗಳನ್ನು ಅರಳುಗಳನ್ನು ಮಂತ್ರಾಕ್ಷತೆಗಳನ್ನು ಚೆಲ್ಲುತ್ತಿದ್ದರು. ಸೂತಮಾಗಧರು ಸ್ತೋತ್ರ ಮಾಡುತ್ತಿದ್ದರು. ಋಷಿಗಳು ವೇದಘೋಷವನ್ನು ಮಾಡುತ್ತಿದ್ದರು. ಬ್ರಹ್ಮಾದಿ ದೇವತೆಗಳೂ ಶುಕಾಚಾರ್ಯರೇ ಮೊದಲಾದ ಬ್ರಾಹ್ಮಣರೂ ಶ್ರೀನಿವಾಸದೇವರನ್ನು ನೋಡುತ್ತಾ ಬರುತ್ತಿದ್ದರು. ಊರಿನ ಹೆಂಗಸರೂ ಗಂಡಸರೂ ಬರುತ್ತಿದ್ದರು. ವೀಣಾ ಇತ್ಯಾದಿ ವಾದ್ಯಗಳನ್ನು ಬಾರಿಸುತ್ತಿದ್ದರು. ಅಪ್ಸರ ಸ್ತ್ರೀಯರೂ ಗಂಧರ್ವರೂ ಬರುತ್ತಿದ್ದರು. ಎಲ್ಲರಿಂದಲೂ ಕೂಡಿಕೊಂಡು ಆಕಾಶರಾಜನು ನಾರಾಯಣಪುರದಲ್ಲಿ ಮೆಲ್ಲನೆ ಪದ್ಮಾವತೀ ದೇವಿಯರಿಂದ ಸಹ ಶ್ರೀನಿವಾಸದೇವರನ್ನು ಕರೆದುಕೊಂಡು ಬಂದನು. ಎಲ್ಲಿ ನೋಡಿದರೂ ಬಾಳೆಕಂಬವನ್ನು ಕಟ್ಟಿದ್ದರು. ತೋರಣವನ್ನು ಕಟ್ಟಿದ್ದರು. ಪೂರ್ಣ ಕಲಶವನ್ನು ಇಟ್ಟಿದ್ದರು. ನವರತ್ನಗಳಿಂದ ಅಲಂಕರಿಸಿದ್ದರು. ಹೆಂಗಸರು ಬಂಗಾರದ ತಟ್ಟೆಯಲ್ಲಿ ಆರತಿ ಮಾಡುತ್ತಿದ್ದರು. ಈ ವೈಭವದಿಂದ ಶ್ರೀನಿವಾಸದೇವರನ್ನು ಕರೆದುಕೊಂಡು ಬಂದು ಆಕಾಶರಾಜನು ಅವರಿಗಾಗಿ ಮಾಡಿ ಇಟ್ಟಿರುವ ಮನೆಯಲ್ಲಿ ಇಳಿಸಿ ತನ್ನ ಮನೆಗೆ ಹೊರಟುಹೋದನು. ಆಗ ರಾತ್ರಿ ಐದು ಗಳಿಗೆಯಾಗಿತ್ತು.

ತರುವಾಯ ತೋಂಡಮಾನರಾಜನು ಭಗವಂತನ ಬಳಿಗೆ ಬಂದನು. ಆಗ ಶ್ರೀನಿವಾಸದೇವರು ಒಳ್ಳೇ ಹಸಿವೆವುಳ್ಳವರಂತೆ ಕಾಣಿಸುತ್ತಾ ತೋಂಡಮಾನರಾಜ ನೊಡನೆ 'ಮದುವೆಗೆ ಬಂದ ಜನರೆಲ್ಲರೂ ಉಪವಾಸದಿಂದ ಇರುವರು. ನಾನು ನನ್ನ ಮಗ ನನ್ನ ತಾಯಿ ಎಲ್ಲಾ ದೇವತೆಗಳೂ ನನ್ನ ಪತ್ನಿಯಾದ ಪತಿವ್ರತೆಯಾದ ಲಕ್ಷ್ಮಿಯು ಎಲ್ಲರೂ ತುಂಬಾ ಹಸಿವೆಯಿಂದ ಇರುವೆವು. ಅವರಿಗೆಲ್ಲಾ ನಾನಾ ಭಕ್ಷ್ಯಗಳಿಂದ ಸಹಿತವಾಗಿ ಅಡಿಗೆ ಮಾಡಿಸಬೇಕು. ಅಗ್ನಿಯು ತಾನೇ ಅಡಿಗೆ ಮಾಡಬೇಕು. ನನಗೂ ಪಕ್ವಾನ್ನವನ್ನು ಕಳುಹಿಸಬೇಕು' ಎಂದು ಹೇಳಿದರು. ಈರೀತಿಯಾಗಿ ಶ್ರೀನಿವಾಸ ದೇವರು ಹೇಳಿದ್ದನ್ನು ಕೇಳಿ ತೋಂಡಮಾನನು 'ಈ ಶರೀರವು ಈ ಜಗತ್ತು ಎಲ್ಲರೂ ನಿನ್ನ ಅಧೀನವೇ. ಲೋಕದ ಜನರಂತೆ ನಟನೆ ಮಾಡುತ್ತಿರುವಿ' ಎಂದು ಹೇಳಿ ತನ್ನ ಮನೆಗೆ ಹೋದನು. ಬೇಗನೇ ಅಗ್ನಿದೇವರಿಂದ ಅಡಿಗೆಯನ್ನು ಮಾಡಿಸಿದನು. ಋಷಿಗಳಿಗೂ ದೇವತೆಗಳಿಗೂ ಬ್ರಾಹ್ಮಣರಿಗೂ ದೇವತಾಸ್ತ್ರೀಯರಿಗೂ ಎಲ್ಲರಿಗೂ ಭೋಜನ ಮಾಡಿಸಿದನು. ಆಕಾಶರಾಜನು ಶ್ರೀನಿವಾಸದೇವರಿಗೆ ಭಕ್ಷ್ಯಭೋಜ್ಯ ಸಹಿತವಾಗಿ ಅನ್ನವನ್ನು ಕಳುಹಿಸಿದನು. ತಾನೇ ಬಂದು ಶ್ರೀನಿವಾಸದೇವರಿಗೆ

ಭೋಜನ ಮಾಡಿಸಿದನು. ಶ್ರೀನಿವಾಸದೇವರು ರಮಾದೇವಿಯರಿಂದಲೂ, ಬ್ರಹ್ಮದೇವರಿಂದಲೂ, ಬಕುಳೆಯಿಂದಲೂ, ಶೇಷಗರುಡರಿಂದಲೂ ಸಹಿತರಾಗಿ ಭೋಜನ ಮಾಡಿದರು. ಆಕಾಶರಾಜನು ಅಳಿಯನಾದ ಶ್ರೀನಿವಾಸದೇವರಿಗೆ ದಿವ್ಯವಸ್ತ್ರಗಳನ್ನು ಕೊಟ್ಟು ಹೊರಟುಹೋದನು. ತರುವಾಯ ಶ್ರೀನಿವಾಸದೇವರು ಮಲಗಿಕೊಂಡರು. ಈರೀತಿಯಾಗಿ ಆ ರಾತ್ರಿಯು ಕಳೆಯಿತು.



## ವರಪೂಜೆ [1]

ಮರುದಿನ ಶುಕ್ರವಾರ ದಶಮೀದಿನದಲ್ಲಿ ಶ್ರೀನಿವಾಸದೇವರು ಎದ್ದು ಮಂಗಳಸ್ನಾನವನ್ನು ಮಾಡಿದರು. ವಸಿಷ್ಠರೊಡನೆ 'ಈದಿನ ನಾನು ಭೋಜನ ಮಾಡಬಾರದು. ಲಕ್ಷ್ಮಿಯೂ, ಬ್ರಹ್ಮನೂ, ತಾಯಿಯೂ, ಪುರೋಹಿತರೂ ಐದು ಜನರು ಭೋಜನ ಮಾಡಬಾರದು. ಅದೇ ರೀತಿಯಾಗಿ ರಾಜನ ಮನೆಯಲ್ಲಿ ರಾಜನೂ, ರಾಜಪತ್ನಿಯೂ, ಕನ್ಯೆಯೂ, ಪುರೋಹಿತರೂ, ರಾಜನ ತಮ್ಮನೂ, ಐದು ಜನರು ಭೋಜನ ಮಾಡಬಾರದು' ಎಂದು ಹೇಳಿ ಕುಬೇರನೊಡನೆ 'ಕುಬೇರ! ನೀನು ಬೇಗನೇ ಹೋಗಿ ಬ್ರಾಹ್ಮಣರ ಭೋಜನದ ವಿಷಯವನ್ನು ರಾಜನೊಡನೆ ತಿಳಿಸಿಬರಬೇಕು' ಎಂದು ಹೇಳಿದರು. ಕುಬೇರನು ಹೋಗಿ ರಾಜನೊಡನೆ ಶ್ರೀನಿವಾಸದೇವರು ಹೇಳಿ ಕಳುಹಿಸಿದ ಮಾತನ್ನು ಈ ಪ್ರಕಾರವಾಗಿ ಹೇಳಿದನು. 'ಋಷಿಗಳಿಗೆಲ್ಲಾ ಭೋಜನವು ಮೊದಲೇ ಆಗಬೇಕು. ರಾತ್ರಿ ಹದಿಮೂರು ಘಳಿಗೆಗೆ ಮದುವೆಯ ಮುಹೂರ್ತವಾದ ಕಾರಣ ಆ ರಾತ್ರಿಯಲ್ಲಿ ಬ್ರಾಹ್ಮಣಭೋಜನವು ಆಗಲಾರದು'. ಈರೀತಿಯಾಗಿ ಕುಬೇರನು ತಿಳಿಸಿ ಬಂದನು. ಅದೇ ಪ್ರಕಾರವಾಗಿ ಆಕಾಶರಾಜನು ಎಲ್ಲರಿಗೂ ಭೋಜನ ಮಾಡಿಸಿದನು. ಬಂಗಾರದ ನಾಣ್ಯವನ್ನು ದಕ್ಷಿಣೆಯಾಗಿ ಕೊಟ್ಟನು.

ಈರೀತಿಯಾಗಿ ದೇವರ ಮದುವೆಯ ದಿನವಾದ ದಶಮೀ ಶುಕ್ರವಾರ ದಿವಸದಲ್ಲಿ ಸಾಯಂಕಾಲದಲ್ಲಿ ಆಕಾಶರಾಜನು ಚತುರಂಗ ಸೈನ್ಯಸಹಿತನಾಗಿ ಮಗನಾದ ವಸುದಾನವನ್ನು ತೋಂಡಮಾನನನ್ನು ಪುರೋಹಿತರನ್ನೂ ಮುಂದೆ ಮಾಡಿಕೊಂಡು ಸಂಬಂಧಿಗಳಿಂದಲೂ ಬಂಧುಗಳಿಂದಲೂ ಕೂಡಿಕೊಂಡು

---

1. ಭ.ಪು.ಅ.11

ಅಲಂಕಾರ ಮಾಡಿದ ಐರಾವತ ಆನೆಯನ್ನು ಮುಂದೆ ಮಾಡಿಕೊಂಡು ಇಂದ್ರದೇವರನ್ನು ಮುಂದೆ ಮಾಡಿಕೊಂಡು ಶ್ರೀನಿವಾಸದೇವರನ್ನು ಕರೆದುಕೊಂಡು ಹೋಗಲಿಕ್ಕೆ ಬಂದನು. ಅಲ್ಲಿ ಸಭೆಯಲ್ಲಿ ಶ್ರೀನಿವಾಸದೇವರು ಕೂತಿದ್ದರು. ಬ್ರಹ್ಮಾದಿದೇವತೆಗಳೂ, ವಸಿಷ್ಠಾದಿ ಮಹರ್ಷಿಗಳೂ, ಬ್ರಾಹ್ಮಣರೂ ಕೂತಿದ್ದರು. ಎಲ್ಲರ ಮಧ್ಯದಲ್ಲಿ ಶ್ರೀನಿವಾಸದೇವರು ರತ್ನಕಂಬಳಿಯಲ್ಲಿ ಶ್ರೀನಿವಾಸದೇವರು ಕೂತಿದ್ದರು. ಅಲ್ಲಿಯೇ ಬ್ರಹ್ಮದೇವರು ಕೈಮುಗಿದುಕೊಂಡು ಇದ್ದರು.

ಆ ಸಭೆಯ ಬಾಗಿಲಿಗೆ ಬಂದು ಆಕಾಶರಾಜನು ಪುರೋಹಿತರನ್ನು ಮುಂದೆ ಮಾಡಿಕೊಂಡು ದೇವರ ಬಳಿಗೆ ಬಂದನು. ರಾಜನನ್ನು ನೋಡಿದ ಕೂಡಲೇ ಶ್ರೀನಿವಾಸದೇವರು ಎದ್ದು ನಿಂತರು. ರಾಜನು ದೇವರನ್ನು ಆಲಂಗಿಸಿದನು. ಶ್ರೀನಿವಾಸದೇವರು 'ಮಹಾರಾಜ! ನೀವು ಅತ್ಯಂತ ಶ್ರೇಷ್ಠರು. ವಯಸ್ಸಾದವರು. ನೀವು ಯಾಕೆ ಇಲ್ಲಿಯವರೆಗೆ ಬರಬೇಕು? ನಿಮ್ಮ ಮಗ ವಸುದಾನವನ್ನು ಕಳುಹಿಸಿದರೆ ಸಾಕು' ಎಂದು ಹೇಳಿದರು. ಆಗ ಆಕಾಶರಾಜನು ಪುರೋಹಿತರೊಡನೆ 'ಯಾಕೆ ಸಾವಕಾಶ ಮಾಡುವಿರಿ? ಶ್ರೀನಿವಾಸದೇವರ ಪೂಜೆಯು ಆಗಲಿ' ಎಂದನು. ಆಗ ವಸಿಷ್ಠರು ರಾಜಪತ್ನಿಯಾದ ಧರಣೀದೇವಿಯೊಡನೆ 'ಅರುಂಧತೀಯನ್ನು ಮುಂದೆ ಮಾಡಿಕೊಂಡು ಭಗವಂತನನ್ನು ಪೂಜಿಸು' ಎಂದರು. ಆಗ ಧರಣೀದೇವಿಯು ಕಣ್ಣಿನಲ್ಲಿ ಆನಂದಬಾಷ್ಪವನ್ನು ಧರಿಸಿಕೊಂಡು ಸಂಭ್ರಮದಿಂದ ಎದ್ದು ಶ್ರೀನಿವಾಸ ದೇವರ ಮುಖವನ್ನು ನೋಡಿ ತಾನು ಕೃತಾರ್ಥಳಾದೆನೆಂದು ಸಂತೋಷದಲ್ಲಿ ಮುಳುಗಿದವಳಾಗಿ ಸ್ವಲ್ಪ ನಾಚಿಕೆಯುಳ್ಳವಳಾಗಿ ಶ್ರೀನಿವಾಸದೇವರನ್ನು ಪೂಜಿಸಿದಳು. ಅದನ್ನು ನೋಡಿ ಎಲ್ಲಾ ಹೆಂಗಸರೂ ಆಶ್ಚರ್ಯಯುಕ್ತವಾದ ಮನಸ್ಸುಳ್ಳವರಾಗಿ ರಾಜಪತ್ನಿಯೊಡನೆ 'ಅಮ್ಮ ಧರಣೀದೇವಿ! ನೀನು ಪೂರ್ವಜನ್ಮದಲ್ಲಿ ಏನು ಪುಣ್ಯಮಾಡಿರುವಿಯೋ? ಭಗವಂತನನ್ನು ಪೂಜಿಸಲಿಕ್ಕೆ ಬ್ರಹ್ಮದೇವರಿಂದ ಸೃಷ್ಟಿ ಮಾಡಲ್ಪಟ್ಟಿರುವಿ. ಈರೀತಿಯಾಗಿ ಸಾಕ್ಷಾತ್ ನಾರಾಯಣನನ್ನು ಪೂಜಿಸುತ್ತಿರುವಿ' ಎಂದು ಸ್ತೋತ್ರ ಮಾಡಿದರು. ಈರೀತಿಯಾಗಿ ಸ್ತೋತ್ರ ಮಾಡಲ್ಪಟ್ಟ ರಾಜಪತ್ನಿಯು ವಾಸನೆತೈಲ ವಾಸನೆಯುಳ್ಳ ಗಂಧ ಇತ್ಯಾದಿಗಳಿಂದ ಶ್ರೀನಿವಾಸದೇವರನ್ನು ಪೂಜಿಸಿದಳು. ಮತ್ತು ನಾನಾವಿಧ ರತ್ನಗಳಿಂದಲೂ ವಸ್ತ್ರಗಳಿಂದಲೂ ಪೂಜಿಸಿದಳು.

ತರುವಾಯ ಪುರೋಹಿತರಿಂದ ಆಜ್ಞಪ್ತನಾಗಿ ಆಕಾಶರಾಜನು ಅಳಿಯನಾದ ಭಗವಂತನನ್ನು ಆನೆಯ ಮೇಲೆ ಕೂತುಕೊಳ್ಳಿಸಿಕೊಂಡು ಹೋದನು. ಶ್ರೀನಿವಾಸ ದೇವರು ಬ್ರಹ್ಮದೇವರಿಂದಲೂ, ರುದ್ರದೇವರಿಂದಲೂ ಕೂಡಿಕೊಂಡು ಕುಬೇರ

ಶೇಷಗರುಡ ಅಗ್ನಿವಾಯು ವರುಣಯಮರಿಂದಲೂ ಇತರ ದೇವತೆಗಳಿಂದಲೂ ಪತ್ನೀಪುತ್ರರಿಂದ ಸಹಿತರಾದ ವಸಿಷ್ಠಾದಿ ಮುನಿಶ್ರೇಷ್ಠರಿಂದಲೂ ಸಹಿತರಾಗಿ ರತ್ನತೋರಣಗಳಿಂದ ಅಲಂಕೃತವಾದ ರಾಜನ ಮನೆಗೆ ಹೋದರು. ಅಲ್ಲಿ ನಾನಾ ಜನರು ತುಂಬಿದ್ದರು. ಅನೇಕ ವಾದ್ಯಗಳನ್ನು ಬಾರಿಸುತ್ತಿದ್ದರು. ಅನೇಕ ದೀಪಗಳು ಇದ್ದವು. ಅಳಿಯನಿಂದ ಸಹಿತನಾಗಿ ಬಂದ ರಾಜನು ಮನೆಯ ಬಾಗಿಲಲ್ಲಿ ಚತುರಂಗಸೈನ್ಯವನ್ನು ಬಿಟ್ಟು ಮನೆಯ ಒಳಗೆ ಹೋಗಲು ಸಿದ್ಧನಾದನು. ಆಗ ತೋಂಡಮಾನರಾಜನ ಹೆಂಡತಿಯು ಕುಂಕುಮ ನೀರಿನಿಂದ ಕೂಡಿದ ಪಾತ್ರೆಯನ್ನು ಹಿಡಿದುಕೊಂಡು ಶ್ರೀನಿವಾಸದೇವರಿಗೆ ಪೂಜಿಸಲಿಕ್ಕೆ ಬಂದಳು. ತರುವಾಯ ಶ್ರೀನಿವಾಸದೇವರು ರಾಜನ ಮನೆಯ ಒಳಗೆ ಪ್ರವೇಶಿಸಿದರು. ಅನೇಕ ಬಾಗಿಲುಗಳನ್ನು ದಾಟಿ ಒಳಗೆ ಹೋಗಿ ನಾಲ್ಕು ಕಂಬಗಳಿಂದ ಕೂಡಿದ ರತ್ನಖಚಿತವಾದ ಜಗಲಿಯಲ್ಲಿ ರತ್ನಸಿಂಹಾಸನದಲ್ಲಿ ಶ್ರೀನಿವಾಸದೇವರು ಕೂತುಕೊಂಡರು. ಅವರ ಸುತ್ತಲೂ ಋಷಿಗಳೂ ಬ್ರಹ್ಮದೇವರನ್ನು ಮುಂದೆ ಮಾಡಿಕೊಂಡು ಎಲ್ಲಾ ದೇವತೆಗಳೂ ಬಂಗಾರದ ಆಸನದಲ್ಲಿ ಕೂತುಕೊಂಡರು.

ತರುವಾಯ ಆಕಾಶರಾಜನು ಮಂಗಳಸ್ನಾನವನ್ನು ಮಾಡಿದನು. ರಾಜಪತ್ನಿಯೂ ಮಂಗಳಸ್ನಾನವನ್ನು ಮಾಡಿ ಅನೇಕ ಆಭರಣಗಳಿಂದ ತನ್ನನ್ನು ಅಲಂಕರಿಸಿಕೊಂಡಳು. ತರುವಾಯ ಬಂಗಾರದ ಕೊಡದಲ್ಲಿ ಸ್ವಾಮಿ ಪುಷ್ಕರಿಣಿಯ ನೀರನ್ನು ತಂದು ಆಕಾಶರಾಜನು ವಿಧಿಪ್ರಕಾರವಾಗಿ ಕನ್ಯಾದಾನದ ಸಂಕಲ್ಪವನ್ನು ಮಾಡಿದನು. ಪುರೋಹಿತರು ಮಧುಪರ್ಕವನ್ನು ಮಾಡಿದರು. ತರುವಾಯ ಪುರೋಹಿತರು ಹೇಳಿದ ರೀತಿಯಾಗಿ ಪುರುಷಸೂಕ್ತವನ್ನು ಹೇಳುತ್ತಾ ರಾಜನು ಧರಣೀದೇವಿಯು ಸ್ವಾಮಿಪುಷ್ಕರಿಣಿಯ ನೀರನ್ನು ಹಾಕಲು ಶ್ರೀನಿವಾಸದೇವರ ಕಾಲನ್ನು ತೊಳೆದನು. ಪರಮಪವಿತ್ರವಾದ ಶ್ರೀನಿವಾಸದೇವರ ಕಾಲುತೊಳೆದ ನೀರನ್ನು ತಾನು ತಲೆಯಮೇಲೆ ಹಾಕಿಕೊಂಡು ಹೆಂಡತಿಯ ತಲೆಯ ಮೇಲೆ ಹಾಕಿ ಹಾಗೆಯೆ ಮಗನ ಮೇಲೆ, ತಮ್ಮನ ಮೇಲೆ ಹಾಕಿ, ಮನೆ ಕೋಶ ಆನೆಯನ್ನು ಕಟ್ಟುವ ಸ್ಥಳ ಕುದುರೆಯನ್ನು ಕಟ್ಟುವ ಸ್ಥಳ ರಥವಿಡುವ ಸ್ಥಳ ಇತ್ಯಾದಿ ಎಲ್ಲಾ ಸ್ಥಳಗಳಿಗೆ ಕೂಡ ಆ ನೀರನ್ನು ಹಾಕಿದನು. ತರುವಾಯ ರಾಜನು 'ಈಗ ನನ್ನ ಜನ್ಮವು ಸಫಲವಾಯಿತು. ನಾನು ಬದುಕಿದ್ದು ಸಫಲವಾಯಿತು. ಭಗವಂತನ ಪಾದೋದಕದಿಂದ ಪಿತೃಗಳು ತೃಪ್ತರಾದರು' ಎಂದು ಪದ್ಮಾವತೀದೇವಿಯರಿಗೆ ನಾನಾ ಆಭರಣಗಳಿಂದ ಅಲಂಕಾರ ಮಾಡಿದನು.

ತರುವಾಯ ಮುಹೂರ್ತದ ಸಮಯವು ಬಂದಿತೆಂದು ಜೋತಿಷ್ಕರು ಗಂಟೆಯನ್ನು ಬಾರಿಸಿದರು. ಬ್ರಾಹ್ಮಣರು ಮಂಗಳಾಷ್ಟಕವನ್ನು ಹೇಳಿದರು. ಕನ್ಯಾದಾನ ಕಾಲದಲ್ಲಿ ರಾಜನು ಶ್ರೀನಿವಾಸದೇವರಿಗೆ ಕೋಟಿ ಬಂಗಾರದ ನಾಣ್ಯಗಳನ್ನು ವರದಕ್ಷಿಣೆಯನ್ನಾಗಿ ಕೊಟ್ಟನು. ಆ ಹಣದ ರಾಶಿಯನ್ನು ನೋಡಿ ಶ್ರೀನಿವಾಸದೇವರು ರಾಜನೊಡನೆ 'ಮಹಾರಾಜ! ನಿನ್ನ ಮಗನಂತೆ ಇರುವ ನನಗೆ ಇಷ್ಟು ಹಣವನ್ನು ಕೊಡಬೇಕೆ? ನೀನು ಮದುವೆಮಾಡುವುದರಲ್ಲಿ ಮಹಾಸಮರ್ಥನು. ಒಳ್ಳೇ ದಾನಮಾಡುವ ಸ್ವಭಾವವುಳ್ಳವನು. ಇನ್ನು ಬೇಕಾದರೆ ಬೇಕಾದಷ್ಟು ಆಭರಣಗಳು ಕೊಡುವವನಾಗು' ಎಂದು ಹೇಳಿದರು. ಆಕಾಶರಾಜನು ಶ್ರೀನಿವಾಸದೇವರಿಗೆ ನೂರುಭಾರ ತೂಕವುಳ್ಳ ಕಿರೀಟವನ್ನೂ ಇನ್ನೂ ಅನೇಕ ಪದಕಗಳನ್ನೂ ಮುತ್ತಿನ ಸರಗಳನ್ನು ಕಿವಿಯ ಆಭರಣಗಳನ್ನು ತೋಳು ಸರಿಗೆಗಳನ್ನು ರತ್ನಖಚಿತಗಳಾದ ಕೈಗಳ ಬಳೆಗಳನ್ನೂ, ಉಂಗುರಗಳನ್ನೂ, ಕಟಿಸೂತ್ರವನ್ನೂ, ಪಾದುಕೆಗಳನ್ನೂ, ಭೋಜನ ತಟ್ಟೆಗಳನ್ನೂ, ಚಿಕ್ಕಪಾತ್ರೆಗಳನ್ನೂ, ನೀರು ಕುಡಿಯುವ ಪಾತ್ರೆಗಳನ್ನೂ, ಕಂಬಳಿ ಗಳನ್ನೂ ಕೊಟ್ಟನು.



## ಶ್ರೀನಿವಾಸದೇವರ ಮದುವೆ [1]

ಆಭರಣಗಳಿಂದ ಅಲಂಕೃತರಾದ ಶ್ರೀನಿವಾಸದೇವರಿಗೆ ಆಕಾಶರಾಜನು ಕನ್ಯಾದಾನ ವನ್ನು ಮಾಡಿದನು. ಬೃಹಸ್ಪತ್ಯಾಚಾರ್ಯರೇ ಕನ್ಯಾಪ್ರವರವನ್ನು ಹೇಳಿದರು. 'ಅತ್ರಿಗೋತ್ರದಲ್ಲಿ ಹುಟ್ಟಿರುವ ಸುವೀರರಾಜನ ಪ್ರಪೌತ್ರಿಯಾದ ಸುಧರ್ಮರಾಜನ ಪೌತ್ರಿಯಾದ ಆಕಾಶರಾಜನ ಪುತ್ರಿಯಾದ ಕಮಲದಂತೆ ಕಣ್ಣು ಉಳ್ಳವಳಾದ ಕನ್ಯೆಯನ್ನು ಶ್ರೀನಿವಾಸನೇ ಸ್ವೀಕಾರ ಮಾಡು' ಎಂದು ಬೃಹಸ್ಪತ್ಯಾಚಾರ್ಯರು ಹೇಳಿ ದರು. ವಸಿಷ್ಠರು 'ಯಯಾತಿರಾಜನ ಪ್ರಪೌತ್ರನಾದ ಶೂರಸೇನರಾಜನ ಪೌತ್ರನಾದ ವಸುದೇವನ ಪುತ್ರನಾದ ವಸಿಷ್ಠಗೋತ್ರದಲ್ಲಿ ಅವತರಿಸಿದ ಶ್ರೀವೇಂಕಟೇಶನಿಗೆ ಅತ್ರಿಕುಲೋತ್ಪನ್ನಳಾದ ಬಂಗಾರದಿಂದ ಅಲಂಕೃತಳಾದ ನಿನ್ನ ಮಗಳಾದ ಕನ್ಯೆಯನ್ನು ನಾವು ಅಂಗೀಕರಿಸುವೆವು' ಎಂದು ಹೇಳಿದರು.

ಈರೀತಿಯಾಗಿ ಕನ್ಯಾವರ ಪ್ರವರಗಳನ್ನು ಹೇಳಿಯಾದ ಮೇಲೆ

1. ಭ.ಪು.ಅ.11

ಧರಣೀದೇವಿಯಿಂದ ಕೂಡಿಕೊಂಡು ಆಕಾಶರಾಜನು ಸಂತೋಷದಿಂದ 'ಪುರುಷೋತ್ತಮ! ಈ ಕನ್ಯೆಯನ್ನು ಕೊಡುವೆನು. ಸ್ವೀಕರಿಸು' ಎಂದು ಹೇಳಿ ಧರಣೀದೇವಿಯು ಹಾಕಿದ ಸ್ವಾಮಿಪುಷ್ಕರಣಿಯ ನೀರನ್ನು ಬಂಗಾರಸಹಿತವಾಗಿ ಶ್ರೀನಿವಾಸದೇವರ ಬಲಕ್ಕೈಯಲ್ಲಿ ಹಾಕಿದರು. ತರುವಾಯ ಪದ್ಮಾವತಿಯನ್ನು ದಾನ ಮಾಡಿದರು. ರಾಜನು ಪುರೋಹಿತರಿಂದ ಕೂಡಿಕೊಂಡು ಗಂಧವಸ್ತ್ರಾದಿಗಳಿಂದ ಶ್ರೀನಿವಾಸದೇವರನ್ನು ಪೂಜಿಸಿ ದೇವರ ಕೈಯಲ್ಲಿ ಪದ್ಮಾವತೀದೇವಿಯರ ಕೈಯಿಂದ ಕಂಕಣ ಬಂಧವನ್ನು ಮಾಡಿಸಿದರು. ಅದೇ ರೀತಿಯಾಗಿ ಪದ್ಮಾವತೀದೇವಿಯರ ಕೈಯಲ್ಲಿಯೂ ಕಂಕಣ ಬಂಧ ಮಾಡಿಸಿದರು. ಶ್ರೀನಿವಾಸದೇವರ ಕೈಯಿಂದ ಪದ್ಮಾವತೀದೇವಿಯರಿಗೆ ಮಾಂಗಲ್ಯಸೂತ್ರವನ್ನು ಕಟ್ಟಿಸಿದರು. ಆಗ ಹೆಂಗಸರು 'ಸಾವಿತ್ರಿಯಾಗಿ ಬಹುಪುತ್ರವತಿಯಾಗು. ಪರಮಮಂಗಳೆಯಾಗು. ಸರ್ವಲೋಕಕ್ಕೆ ತಾಯಿಯಾಗು. ಎಲ್ಲರಿಗೂ ಮಂಗಳವನ್ನು ಉಂಟುಮಾಡುವವಳಾಗು' ಎಂದು ಹರಸಿದರು. ಈರೀತಿಯಾಗಿ ಸುವಾಸಿನಿಯರು ಹರಸುತ್ತಿರಲು ಎಲ್ಲಾ ಬ್ರಾಹ್ಮಣರ ಮತ್ತು ರಾಜನ ಕೈಗೆ ಮುಟ್ಟಿಸಿ ಶ್ರೀನಿವಾಸದೇವರು.

**''ಮಾಂಗಲ್ಯಂ ತಂತುನಾನೇನ ಜಗಜ್ಜೀವನಹೇತುನಾ ।**
**ಕಂಠೇ ಬಧ್ನಾಮಿ ಸುಭಗೇ ಚಿರಂ ಜೀವ ಮಯಾ ಸಹ ॥''**

(ಸುಂದರಿಯೇ! ಜಗತ್ತೆಲ್ಲಾ ಬದುಕಿರಲು ಕಾರಣವಾದ ಈ ಮಾಂಗಲ್ಯತಂತುವಿನಿಂದ ನಿನ್ನ ಕುತ್ತಿಗೆಗೆ ಕಟ್ಟುತ್ತೇನೆ. ನನ್ನೊಡನೆ ಬಹುಕಾಲ ನೀನು ಜೀವಿಸಿಕೊಂಡು ಇರು) ಎಂಬ ಈ ಮಂತ್ರದಿಂದ ಪದ್ಮಾವತೀದೇವಿಯರ ಕೊರಳಲ್ಲಿ ಮಾಂಗಲ್ಯತಂತುವನ್ನು ಕಟ್ಟಿದರು. ತರುವಾಯ ಪಂಡಿತರಾದ ಮುನಿಗಳಿಂದ ಕೂಡಿಕೊಂಡು ವಸಿಷ್ಠರು ಪದ್ಮಾವತೀದೇವಿಯರ ಕೈಯಿಂದ ಅರ್ಪಿತಗಳಾದ ಅರಳುಗಳಿಂದ ಲಾಜಹೋಮವನ್ನು ಮಾಡಿಸಿದರು. ಯಜುಃ ಶಾಖಾ ಕ್ರಮದಿಂದ ವಸಿಷ್ಠರು ವೈವಾಹಿಕ ವಿಧಾನವನ್ನೆಲ್ಲಾ ಮುಗಿಸಿದರು. ತರುವಾಯ ಪುರೋಹಿತರು ಸ್ವಸ್ತಿವಾಚನೆಯನ್ನು ಹೇಳಿ ಮುನಿಗಳ ಕೈಯಲ್ಲಿ ನವರತ್ನಮಯ ಮಂತ್ರಾಕ್ಷತೆಯನ್ನು ಕೊಟ್ಟರು. ಎಲ್ಲಾ ವೇದಮಂತ್ರಗಳಿಂದ ದೇವರಮೇಲೆ ಮಂತ್ರಾಕ್ಷತೆಯನ್ನು ಹಾಕಿದರು. ಆಗ ಆಕಾಶರಾಜನ ಊರಿನಲ್ಲಿದ್ದ ಜನರಿಗೆಲ್ಲಾ ಮಹಾಉತ್ಸವವು ನಡೆಯಿತು.

ಆ ಕಾಲದಲ್ಲಿ ಸಂತೋಷದಿಂದ ರಾಜನು ಬ್ರಾಹ್ಮಣರಿಗೆ ತಾಂಬೂಲ ದಕ್ಷಿಣೆಯನ್ನು ಕೊಟ್ಟನು. ಕೋಟಿ ಸಾವಿರ ಗೋವುಗಳನ್ನು ಹತ್ತುಸಾವಿರ

ಕುದುರೆಗಳನ್ನು ಅನೇಕ ವಸ್ತ್ರಗಳ ಸಮೂಹಗಳನ್ನೂ ಬ್ರಾಹ್ಮಣರಿಗೆ ದಾನ ಮಾಡಿದನು. ಈರೀತಿಯಾಗಿ ದಶಮೀದಿನದಲ್ಲಿ ಮಹಾ ಉತ್ಸವವು ನಡೆಯಿತು. ವಧೂವರರನ್ನು ಕೂತುಕೊಳ್ಳಿಸಿ ಭೋಜನ ಮಾಡಿಸಿದನು. ತೊವ್ವೆ ಪಾಯಸ ನಾನಾವಿಧ ಭಕ್ಷ್ಯಗಳನ್ನೂ ಮಾಡಿಸಿದ್ದನು. ಶ್ರೀನಿವಾಸದೇವರು ಪುರೋಹಿತರಿಂದ ತಾಯಿಯಿಂದ ರಮಾದೇವಿಯಿಂದ ಸಹಿತರಾಗಿ ಭೋಜನ ಮಾಡಿದರು. ಆಕಾಶರಾಜನೂ ಪುರೋಹಿತರಿಂದ ಮಗನಿಂದ ಸಹಿತನಾಗಿ ಶ್ರೀನಿವಾಸದೇವರ ಬಳಿಯಲ್ಲೇ ಭೋಜನ ಮಾಡಿದರು.



## ನಾಕಬಲಿ [1]

ಮರುದಿನ ಬೆಳಿಗ್ಗೆ ಸುವಾಸಿನಿಯರು ಶ್ರೀನಿವಾಸದೇವಿಯರಿಗೆ ಮಂಗಳಸ್ನಾನವನ್ನು ಮಾಡಿಸಿದರು. ವಾಸನೆತ್ತೈಲವನ್ನು ಹಚ್ಚಿದರು. ಅಲ್ಲಿ ಪದ್ಮಾವತೀದೇವಿಯರ ಕೈಯಿಂದ ಶ್ರೀನಿವಾಸದೇವರಿಗೂ ಶ್ರೀನಿವಾಸದೇವಿಯರ ಕೈಯಿಂದ ಪದ್ಮಾವತೀದೇವಿಯರಿಗೂ ಎಣ್ಣೆಯನ್ನು ಹಚ್ಚಿದರು. ತರುವಾಯ ರಾಜನು ಬ್ರಾಹ್ಮಣರಿಗೂ, ದೇವತೆಗಳಿಗೂ, ಋಷಿಗಳಿಗೂ, ಹೆಂಗಸರಿಗೂ, ಎಲ್ಲರಿಗೂ ಬಹುಮಾನಪೂರ್ವಕವಾಗಿ ಭೋಜನವನ್ನು ಮಾಡಿಸಿದನು. ನಾನಾವಿಧ ಭಕ್ಷ್ಯಗಳನ್ನೂ ತೊವ್ವೆ ಪಾಯಸ ಇತ್ಯಾದಿ ಅನೇಕ ವಿಧವಾದ ಅಡಿಗೆಯನ್ನು ಮಾಡಿಸಿದ್ದನು. ತುಪ್ಪದ ಕಾಲಿವೆಯನ್ನೇ, ಮೊಸರಿನ ಕಾಲಿವೆಯನ್ನೇ, ಹಾಲಿನ ಕಾಲಿವೆಯನ್ನೋ ಹರಿಸಿದನು. ಊಟಮಾಡಿ ಹೊರಗೆ ಹಾಕಿದ ಎಂಜಲನ್ನವನ್ನು ತಿನ್ನಲಿಕ್ಕೆ ಬೇಕಾದ ನಾಯಿಗಳೂ ರಾಕ್ಷಸರೂ ಬಂದರು. ಈರೀತಿಯಾಗಿ ಐದು ದಿವಸ ಕೋಲಾಹಲವನ್ನು ಮಾಡಿದನು.

ಐದನೇ ದಿನದಲ್ಲಿ ನಾಕಬಲಿಯನ್ನು ಮಾಡಿದನು. ನಾಲ್ಕು ಕಲಶಗಳನ್ನು ಇಟ್ಟು, ದೀಪಗಳನ್ನು ಇಟ್ಟು ವಧೂವರರನ್ನು ರತ್ನಖಚಿತ ಸಿಂಹಾಸನದಲ್ಲಿ ಇಟ್ಟು ಕೂತುಕೊಳ್ಳಿಸಿ ಆಕಾಶರಾಜನು ಕ್ಷೀರಪಾತ್ರೆಯನ್ನು ಕೈಯಲ್ಲಿ ಹಿಡಿದುಕೊಂಡು ಅಳಿಯನಾದ ಶ್ರೀನಿವಾಸದೇವರನ್ನು ಪೂಜಿಸಿದನು. ತರುವಾಯ ಬಕುಳೆಗೂ ವಸ್ತ್ರಾಲಂಕಾರಭೂಣಗಳಿಂದ ಸತ್ಕರಿಸಿ ನಾಭಿಗೆ ಕ್ಷೀರವನ್ನು ಹಾಕಿ ದುಃಖದಿಂದ ಪದ್ಮಾವತೀದೇವಿಯನ್ನು ಒಪ್ಪಿಸಿದನು. ಹಾಗೆಯೇ ರಮಾದೇವಿಯರ ನಾಭಿಗೂ

1. ಭ.ಪು.ಅ.11

ಕ್ಷೀರವನ್ನೂ ತುಪ್ಪವನ್ನೂ ಹಾಕಿ ಅಳುತ್ತಾ ಮಗಳನ್ನು ಒಪ್ಪಿಸಿದನು. ತರುವಾಯ ರಾಜಪತ್ನಿಯಾದ ಧರಣೀದೇವಿಯು ಕುರರೀ ಎಂಬ ಪಕ್ಷಿಯಂತೆ ಅಳುತ್ತಾ ಮಗಳ ಕೈಯನ್ನು ಹಿಡಿದುಕೊಂಡು ಶ್ರೀನಿವಾಸದೇವರ ನಾಭಿಗೆ ಹಾಲನ್ನು ಹಾಕಿ ಶ್ರೀನಿವಾಸದೇವರ ಕೈಯಲ್ಲಿ ಒಪ್ಪಿಸಿದಳು. 'ಒಂಭತ್ತು ತಿಂಗಳು ಧರಿಸಿ ರಕ್ಷಿತಳಾದ ಆದರದಿಂದ ಪೋಷಿಸಲ್ಪಟ್ಟ ನನ್ನ ಮಗಳನ್ನು ಭಗವಂತನೇ! ನಿನ್ನ ವಶಳನ್ನಾಗಿ ಮಾಡುತ್ತೇನೆ' ಎಂದು ಅಳುತ್ತಾ ಹೇಳಿದಳು. ಅವಳು ಅಳುವುದನ್ನು ನೋಡಿ ಆಕಾಶರಾಜನು ತಡೆಯಲಾರದೆ ಗಟ್ಟಿಯಾಗಿ ಅಳುವವನಾದನು. ಮಗಳನ್ನು ಆಲಿಂಗಿಸಿ 'ಹಾ ಮಗಳೇ! ನನ್ನನ್ನು ಬಿಟ್ಟು ಹೋಗುವೆಯಾ? ನಿನ್ನ ವಿಯೋಗದಿಂದ ನಾನು ಮಂದಭಾಗ್ಯನಾದೆನು. ನೀನು ಹೋದಮೇಲೆ ಬಹಳ ಕಾಲ ನಾನು ಬದುಕಲಾರೆನು. ನೀನು ಹೋದಮೇಲೆ ನಿನ್ನ ತಮ್ಮನು ಹೇಗೆ ಆಟವಾಡುವನು? ಹೇಗೆ ಊಟಮಾಡುವನು?' ಎಂದು ಹೇಳಿದನು. ಈರೀತಿಯಾಗಿ ಅಳುತ್ತಿರುವ ಆಕಾಶರಾಜನನ್ನು ನೋಡಿ ತೋಂಡಮಾನರಾಜನು ದುಃಖದಿಂದ 'ಮಗಳೇ! ನೀನು ಹೋಗುವುದರಿಂದ ನಾನು ದರಿದ್ರನಾಗಿಯೂ ನಿರ್ಭಾಗ್ಯನಾಗಿಯೂ ಸತ್ತಪ್ರಾಯ ನಾಗಿಯೂ ಆಗುವೆನು. ನಿನ್ನಂತಹ ಮಗಳು ಕಲಿಯುಗದಲ್ಲಿ ಎಷ್ಟು ಮಾತ್ರಕ್ಕೂ ಸಿಗಲಾರಳು' ಎಂದು ಹೇಳಿದನು. ಈರೀತಿಯಾಗಿ ಇವರೆಲ್ಲರೂ ಅಳುವುದನ್ನು ಕೇಳಿ ವಸುದಾನನು ಅಕ್ಕನಿಂದ ಆಲಿಂಗಿಸಿ ಅಳುತ್ತಾ 'ಹಣ ಸಂಪಾದಿಸುವವನು ಲೋಕದಲ್ಲಿ ತಾಯಿಯನ್ನೂ ಮಗುವನ್ನೂ ಬಿಟ್ಟು ಹೋಗುವಂತೆ ಅಕ್ಕ! ನೀನು ನನ್ನನ್ನು ಬಿಟ್ಟು ಎಲ್ಲಿಗೆ ಹೋಗುವೆ?' ಎಂದು ಹೇಳಿದನು. ಇದನ್ನು ನೋಡಿ ಅಲ್ಲಿದ್ದ ದೇವತೆಗಳಿಗೂ ಕಶ್ಯಪಾದಿ ಋಷಿಗಳಿಗೂ ಅತ್ಯಂತ ದುಃಖವು ಆಯಿತು.

ಈರೀತಿಯಾಗಿ ಆಕಾಶರಾಜನು ಅಳುವುದನ್ನು ನೋಡಿ ಶ್ರೀನಿವಾಸದೇವರು ತನ್ನ ತಂಗಿಯಾದ ಸುಭದ್ರೆಯನ್ನು ಜ್ಞಾಪಿಸಿಕೊಂಡು ಅಳುವವರಾದರು. ಅದು ಅತ್ಯದ್ಭುತವಾಗಿ ಕಂಡಿತು. ಈರೀತಿಯಾಗಿ ಶ್ರೀನಿವಾಸದೇವರು ಲೋಕದ ಜನರಂತೆ ನಟನೆಮಾಡಿ ಪದ್ಮಾವತೀದೇವಿಯಿಂದ ಸಹಿತರಾಗಿ ಐರಾವತದ ಬಳಿಗೆ ಬಂದರು. ಸರ್ವವಾದ್ಯಘೋಷದಿಂದ ಗ್ರಾಮಕ್ಕೆ ಪ್ರದಕ್ಷಿಣೆಬಂದು ಶ್ರೀನಿವಾಸದೇವರು ಬ್ರಹ್ಮರುದ್ರಾದಿಗಳಿಂದ ಕೂಡಿಕೊಂಡು ತಾನು ಇಳಿದುಕೊಂಡ ಮನೆಗೆ ಬಂದರು. ತರುವಾಯ ಶ್ರೀನಿವಾಸದೇವರು ತನ್ನ ಸ್ಥಳಕ್ಕೆ ಹೋಗಬೇಕೆಂಬ ಅಭಿಪ್ರಾಯದಿಂದ ಪದ್ಮಾವತೀದೇವಿಯರೊಡನೆ ಗರುಡದೇವರ ಮೇಲೆ ಕೂತರು. ಅತ್ತೆ ಮಾವಂದಿರ ಅನುಜ್ಞೆಯನ್ನು ತೆಗೆದುಕೊಳ್ಳುವುದಕ್ಕೋಸ್ಕರ ಅವರ ಬಳಿಗೆ ಹೋದರು.

ಶ್ರೀನಿವಾಸದೇವರು ಅತ್ತೆಮಾವಂದಿರಿಗೆ ನಮಸ್ಕರಿಸಿದರು. ಆಕಾಶರಾಜನು ಪತ್ನಿಯಿಂದ ಸಹಿತನಾಗಿ ಆಶೀರ್ವದಿಸಿ 'ಗೋವಿಂದ! ಈಗ ತಾನೇ ಮದುವೆಯಾಗಿರುವ ಹುಡುಗಿಯಿಂದ ಸಹಿತನಾಗಿ ಒಂದು ತಿಂಗಳು ಇಲ್ಲಿ ಇದ್ದು ಹೊರಟುಹೋಗು. ಮುದುಕನಾದ ಮಾವನಾದ ನನ್ನನ್ನು ನಿನ್ನ ಅತ್ತೆಯನ್ನೂ ಬಹುಮಾನಿಸು' ಎಂದು ಹೇಳಿದನು. ಅದಕ್ಕೆ ಶ್ರೀನಿವಾಸದೇವರು 'ಮಹಾರಾಜರೇ! ನನಗೆ ತುಂಬಾ ಅವಸರದ ಕಾರ್ಯವಿದೆ. ಆದುದರಿಂದ ನಾನೀಗ ಹೋಗಿಯೇ ಆಗಬೇಕು. ನೀವು ಆಜ್ಞಾಕೊಡಬೇಕು. ನನ್ನ ಮೇಲೆ ಅನುಗ್ರಹ ಮಾಡಬೇಕು' ಎಂದು ಹೇಳಿ ಗರುಡದೇವರ ಮೇಲೆ ಕೂತುಕೊಂಡು ತಾನು ಇಳಿದಕೊಂಡಿದ್ದ ಮನೆಗೆ ಹೋದರು.



## ಉಪಸಂಹಾರ [1]

ಊರಜನರೆಲ್ಲರೂ ವ್ಯಾಕುಲರಾದರು. ಮಾಡಿಯ ಮೇಲೆ ಹತ್ತಿ ನೋಡುತ್ತಾ 'ಪದ್ಮಾವತಿಯು ಪರಮಧನ್ಯಳು. ಶ್ರೀಭಗವಂತನನ್ನು ಅನುಸರಿಸಿ ಹೋಗುತ್ತಿರುವಳು. ನೋಡಿರಿ' ಎಂದು ಹೇಳುತ್ತಿದ್ದರು. ಆಗ ಆಕಾಶರಾಜನು ಶ್ರೀನಿವಾಸದೇವರಿಗೆ ಉಡುಗೊರೆ ಕೊಡಬೇಕೆಂದು ನೂರು ಅಕ್ಕಿಯ ಮೂಟೆಗಳನ್ನು, ಎತ್ತುಗಳ ಮೇಲೆ ಇಟ್ಟು ಕಳುಹಿಸಿದನು. ಹಾಗೆಯೇ ಮೂವತ್ತು ಮೂಟೆ ಹೆಸರನ್ನು, ತುಂಬಾ ಬೆಲ್ಲದ ಮೂಟೆಗಳನ್ನೂ, ಹುಣಸೆಹಣ್ಣಿನ ಮೂಟೆಗಳನ್ನೂ, ಸಾವಿರ ಗಡಿಗೆಗಳಲ್ಲಿ ಹಾಲನ್ನು, ನೂರುಗಡಿಗೆಗಳಲ್ಲಿ ಮೊಸರನ್ನೂ, ಐನೂರು ಚರ್ಮಪಾತ್ರೆಗಳಲ್ಲಿ ತುಪ್ಪವನ್ನೂ ಸಾಸಿವೆ ಮೆಂತೆ ಹಿಂಗು ಉಪ್ಪು ತೈಲಗಳನ್ನೂ, ಇನ್ನೂರು ಗಡಿಗೆಗಳಲ್ಲಿ ಸಕ್ಕರೆಯನ್ನೂ, ಸೌತೆಕಾಯಿ, ಮಾವಿನಹಣ್ಣು, ಬಾಳೆಹಣ್ಣು, ಲಿಂಬೆಹಣ್ಣು, ಗುಂಬಳಕಾಯಿ, ಗೆಡ್ಡೆಹಣ್ಣುಗಳು, ನೆಲ್ಲಿಕಾಯಿಗಳನ್ನು, ಇನ್ನೂರು ಗಡಿಗೆಗಳಲ್ಲಿ ಜೇನುತುಪ್ಪವನ್ನು ಮತ್ತು ಬಾಳೆಎಲೆಗಳನ್ನು ಕಟ್ಟಿಗೆಗಳನ್ನೂ ಪತ್ರಾವಳಿಗಳನ್ನೂ ಹತ್ತುಸಾವಿರ ಕುದುರೆಗಳನ್ನೂ, ಸಾವಿರ ಆನೆಗಳನ್ನು, ಐದುಸಾವಿರ ದನಗಳನ್ನೂ, ನೂರು ಮೇಕೆಗಳನ್ನೂ, ಇನ್ನೂರು ದಾಸಿಯರನ್ನೂ, ಮುನ್ನೂರು ದಾಸರನ್ನೂ, ನಾನಾ ವಸ್ತ್ರಗಳನ್ನೂ, ರತ್ನಭೂಷಿತವಾದ ಮಂಚವನ್ನೂ, ಮೆತ್ತೆ ತಲೆದಿಂಬುಗಳನ್ನೂ ಇತ್ಯಾದಿ ವಸ್ತುಗಳನ್ನು ಸಂಗ್ರಹಿಸಿ ಮಗನನ್ನು

1. ಭ.ಪು.ಅ.11

ಕರೆದುಕೊಂಡು ಶ್ರೀನಿವಾಸದೇವರ ಬಳಿಗೆ ಬಂದನು. ಬಂದಿರುವ ಮಾವನನ್ನು ನೋಡಿ ಶ್ರೀನಿವಾಸದೇವರು ಎದ್ದು ನಿಂತರು. 'ಇಷ್ಟು ದೂರ ನೀವು ಯಾಕೆ ಬರಬೇಕು? ನಾನು ನಿಮ್ಮ ಮಗ ಇಷ್ಟೆಲ್ಲಾ ನನಗೆ ಕೊಡಬೇಕೆ? ಹೆಣ್ಣನ್ನು ಕೊಟ್ಟಿರಿ. ಅದರಿಂದಲೇ ನನಗೆ ಬಹಳ ಸಂತೋಷವಾಗಿದೆ. ಇದರಲ್ಲಿ ಸಂಶಯವೇ ಇಲ್ಲ. ನಿಮ್ಮ ಮನಸ್ಸಿನಲ್ಲಿ ಏನಿದೆ? ಅದನ್ನು ಹೇಳಿರಿ. ಕೊಡುವುದೋ ತೆಗೆದುಕೊಳ್ಳುವುದೋ ಈ ವಿಷಯದಲ್ಲಿ ಸಂಕೋಚಮಾಡದೆ ಹೇಳಿರಿ' ಎಂದು ಹೇಳಿದರು.

ಶ್ರೀನಿವಾಸದೇವರ ಮಾತನ್ನು ಕೇಳಿ ಆಕಾಶರಾಜನು 'ಕೇಶವ! ನಿಮ್ಮ ಅನುಗ್ರಹದಿಂದ ನಮಗೆ ಎಲ್ಲಾ ಮಂಗಳವಾಗಿದೆ. ನಾನು ಬೇರೆ ಯಾವುದನ್ನೂ ಅಪೇಕ್ಷಿಸುವುದಿಲ್ಲ. ಸಕುಟುಂಬನಾದ ನನಗೆ ನಿಮ್ಮ ಪಾದಕಮಲಗಳಲ್ಲಿ ನಿಶ್ಚಲವಾದ ಭಕ್ತಿಯನ್ನು ಕೊಡಬೇಕು' ಎಂದು ಹೇಳಿಕೊಂಡನು. ಈರೀತಿಯಾದ ಮಾವನ ಮಾತನ್ನು ಕೇಳಿ ಭಗವಂತನು ಅವನಿಗೆ ಸಾಯುಜ್ಯಮೋಕ್ಷವನ್ನು ದಯಪಾಲಿಸಿದನು. ತನ್ನ ಮೈಮೇಲಿನ ವಸ್ತ್ರವನ್ನು ಭಾವಮೈದುನನಾದ ವಸುದೇವನಿಗೆ ಕೊಟ್ಟನು. ಆಕಾಶರಾಜನು ಅಳಿಯನಿಂದ ಅನುಜ್ಞೆಯನ್ನು ಪಡೆದು ಮಗಳ ಬಳಿಗೆ ಹೋಗಿ 'ಮಗಳೇ! ನಾನು ನಗರಕ್ಕೆ ಹೋಗುತ್ತೇನೆ. ನೀನು ಸಂತೋಷದಿಂದ ಇರು. ಶ್ರೀನಿವಾಸದೇವರು ಮಲಗಿದ ಮೇಲೆಯೇ ಮಲಗು' ಎಂದು ಸಮಾಧಾನಪಡಿಸಿದನು. ಪದ್ಮಾವತೀದೇವಿಯರು ಶ್ರೀನಿವಾಸದೇವರ ಬಳಿಗೆ ಬಂದರು. ಆಕಾಶರಾಜನು ಅಳುತ್ತಾ ತನ್ನ ಮನೆಗೆ ಹೋದನು.

ಶ್ರೀನಿವಾಸದೇವರು ಪದ್ಮಾವತೀದೇವಿಯರಿಂದ ಸಹಿತರಾಗಿ ಬ್ರಹ್ಮರುದ್ರಾದಿ ದೇವತೆಗಳಿಂದಲೂ ಸಹಿತರಾಗಿ ಸುವರ್ಣಮುಖರೀನದಿಯ ತೀರಕ್ಕೆ ಬಂದು ಅಲ್ಲೇ ವಾಸಮಾಡಿದರು. ಆರು ತಿಂಗಳು ನಾನು ದೀಕ್ಷಿತನಾಗಿದ್ದೇನೆ. ಬೆಟ್ಟವನ್ನು ಏರಲಾರೆನು ಎಂದು ನಿಶ್ಚಯಿಸಿ ಅಗಸ್ತ್ಯರ ಮನೆಗೆ ಹೋಗಿ ಅಲ್ಲಿ ವಾಸಮಾಡಿದರು. ದೇವತೆಗಳನ್ನೆಲ್ಲಾ ಅವರವರ ಸ್ಥಾನಕ್ಕೆ ಕಳುಹಿಸಿದರು. ಭಕ್ತವತ್ಸಲರಾದ ಶ್ರೀನಿವಾಸದೇವರು ಮದುವೆಗೆ ಬಂದಿರುವ ದೇವತೆಗಳಿಗೂ ಮುನಿಗಳಿಗೂ ಇತರರಿಗೂ ಎಲ್ಲರಿಗೂ ಅವರವರ ಯೋಗ್ಯತೆಯನ್ನು ಅನುಸರಿಸಿ ವಸ್ತ್ರವನ್ನು ಕೊಟ್ಟರು. ಶ್ರೀನಿವಾಸದೇವರಿಂದ ಆಜ್ಞಪ್ತರಾಗಿ ಎಲ್ಲಾ ದೇವತೆಗಳೂ ತಮ್ಮ ಲೋಕಕ್ಕೆ ಹೋದರು. ಪರಮಾತ್ಮನ ಭಕ್ತರಾದ ಋಷಿಗಳೆಲ್ಲರೂ ತಾವು ತಪಸ್ಸು ಮಾಡುತ್ತಿದ್ದ ಅರಣ್ಯಕ್ಕೆ ಹೋದರು. ರಮಾದೇವಿಯರು ಶ್ರೀನಿವಾಸದೇವರ ಆಜ್ಞೆಯನ್ನು ಪಡೆದು ಆ ರೂಪದಿಂದ ಕೊಲ್ಲಾಪುರಕ್ಕೆ ಹೋದರು. ಈರೀತಿಯಾಗಿ ಮಹಾನುಭಾವರಾದ

ಬ್ರಹ್ಮಾದಿದೇವತೆಗಳು ಶ್ರೀನಿವಾಸದೇವರ ವಿವಾಹೋತ್ಸವವನ್ನು ಅನುಭವಿಸಿ ಆಕಾಶರಾಜನನ್ನು ಹೊಗಳುತ್ತಾ ಹೋದರು. ದೇವತೆಗಳೆಲ್ಲರೂ ಹೊರಟುಹೋದ ಮೇಲೆ ಶ್ರೀನಿವಾಸದೇವರು ಅಗಸ್ತ್ಯರ ಮನೆಯಲ್ಲೇ ಬೇಕಾದ ಭೋಗಗಳನ್ನು ಅನುಭವಿಸುತ್ತಾ ಇದ್ದರು.

ಶ್ರೀನಿವಾಸದೇವರ ಮದುವೆಯ ಕಥೆಯನ್ನು ಕೇಳಿದವರಿಗೆ ಕೋಟಿ ಕನ್ಯಾದಾನ ಮಾಡುವುದರಿಂದಲೂ ಸಂಪೂರ್ಣ ಭೂಮಿಯನ್ನು ದಾನಮಾಡುವುದರಿಂದಲೂ ಉಂಟಾಗುವ ಫಲವು ಸಿಗುವುದು. ಶ್ರೀನಿವಾಸದೇವರಿಗೆ ಯಾರು ಕಲ್ಯಾಣೋತ್ಸವ ವನ್ನು ಮಾಡಿಸುವರೋ ಅವರಿಗೆ ಶ್ರೀನಿವಾಸದೇವರ ಅನುಗ್ರಹದಿಂದ ಮಂಗಳವೇ ಉಂಟಾಗುವುದು. ಇದು ಭಕ್ತಿಯಿಂದ ಕೇಳುವವರಿಗೂ ಹೇಳುವವರಿಗೂ ಸರ್ವಾಭೀಷ್ಟಪ್ರದವಾದದ್ದು.



## ಆಕಾಶರಾಜನ ವೈಕುಂಠಯಾತ್ರೆ [1]

ಈರೀತಿಯಾಗಿ ಇರುತ್ತಿರಲು ಆರುತಿಂಗಳು ಕಳೆದುಹೋದವು. ಒಂದುದಿನ ನಾರಾಯಣಪುರದಿಂದ ಒಬ್ಬ ದೂತನು ಶ್ರೀನಿವಾಸದೇವರ ಬಳಿಗೆ ಬಂದನು. ಆಗ ಪದ್ಮಾವತೀದೇವಿಯರು ಸುವರ್ಣಮುಖರೀನದಿಯಲ್ಲಿ ಮೈತೊಳೆದುಕೊಳ್ಳಲಿಕ್ಕೆ ಹೋಗಲು ಹೊರಟಿದ್ದರು. ದೂತನನ್ನು ನೋಡಿದ ಕೂಡಲೇ 'ದೂತ! ನೀನು ಯಾಕೆ ಬಂದೆ? ಯಾರು ನಿನ್ನನ್ನು ಕಳುಹಿಸಿದರು? ಮಹಾರಾಜರೇ ಕಳುಹಿಸಿದರೇ? ಅಥವಾ ರಾಜಪತ್ರನು ಕಳುಹಿಸಿದನೇ? ಅಥವಾ ತೋಂಡಮಾನರಾಜನು ಕಳುಹಿಸಿ ರುವರೇ? ತಂದೆಯು ಸೌಖ್ಯದಿಂದ ಇರುವರೇ? ತಾಯಿಗೆ ಕ್ಷೇಮವೇ? ತೋಂಡ ಮಾನರಾಜರಿಗೆ ಆರೋಗ್ಯವೇ? ಪ್ರಜೆಗಳೆಲ್ಲರೂ ಕ್ಷೇಮದಿಂದ ಇರುವರೇ?' ಎಂದು ಕೇಳಿದರು. ಆಗ ದೂತನು ದುಃಖದಿಂದ ಕಣ್ಣೀರು ಸುರಿಸುವವನಾಗಿ ದೈನ್ಯದಿಂದ 'ಅಮ್ಮ! ನಾನೇನೆಂದು ಹೇಳಲಿ. ನಿಮ್ಮ ತಂದೆಗೆ ಕಾಲವು ಸಮೀಪಿಸಿದೆ. ಸಾಯಲಿಕ್ಕೆ ಹೊರಟಿರುವರು. ಸ್ವಲ್ಪ ತಾನೇ ಶ್ವಾಸವಿದೆ. ನಿಮ್ಮನ್ನೂ ಶ್ರೀನಿವಾಸದೇವರನ್ನೂ ನೋಡಬೇಕೆಂದು ತುಂಬಾ ಆಸೆಪಡುತ್ತಿರುವರು. ಆದುದರಿಂದ ಬೇಗನೇ ನೀವು ಗಂಡನನ್ನು ಕರೆದುಕೊಂಡು ಊರಿಗೆ ಬನ್ನಿರಿ' ಎಂದು ಹೇಳಿದನು.

---

1. ಭ.ಪು.ಅ.12

ಆ ಮಾತನ್ನು ಕೇಳಿ ಪದ್ಮಾವತೀದೇವಿಯರು ಹಾಗೆಯೇ ಮೂರ್ಛಿತರಾಗಿ ಬಿದ್ದರು. ಅಗಸ್ತ್ಯರ ಪತ್ನಿಯು ಬಂದು ಎಬ್ಬಿಸಿ ಅವರನ್ನು ಶ್ರೀನಿವಾಸದೇವರ ಬಳಿಗೆ ಕರೆದುಕೊಂಡು ಹೋದರು. ದೇವಿಯರು ಶ್ರೀನಿವಾಸದೇವರ ಹತ್ತಿರ ವೃತ್ತಾಂತವನ್ನು ತಿಳಿಸಿದರು. ಅದನ್ನು ಕೇಳಿ ಸರ್ವಜ್ಞರಾದ ದುಃಖಲೇಶರಹಿತರಾದ ಶ್ರೀನಿವಾಸ ದೇವರು ಲೋಕದ ಜನರಂತೆ ಅಳುವವರಾದರು 'ಆಹಾ! ಸುಂದರಿ! ನನ್ನ ದೊಡ್ಡ ಕಷ್ಟವು ಬಂದು ಸೇರಿತಲ್ಲಾ? ನಾನು ಏನು ಮಾಡಲಿ? ಎಲ್ಲಿಗೆ ಹೋಗಲಿ?' ಎಂದು ಹೇಳಿ ಅಗಸ್ತ್ಯರೊಡನೆ 'ಅಗಸ್ತ್ಯರೇ! ನಾನೀಗಲೇ ತಾಯಿಯಾದ ಬಕುಳೆಯನ್ನೂ ಪದ್ಮಾವತೀಯನ್ನೂ ಕರೆದುಕೊಂಡು ಮಾವನ ಮನೆಗೆ ಹೋಗುವೆನು' ಎಂದು ಹೇಳಿ ಅಗಸ್ತ್ಯರನ್ನು ಕರೆದುಕೊಂಡೇ ಆಕಾಶರಾಜನ ನಗರಿಗೆ ಹೋದರು. ಸಾಯಂಕಾಲದಲ್ಲಿ ಊರಿನ ಬಾಗಿಲಿಗೆ ಬಂದು ಸೇರಿದರು. ದ್ವಾರಪಾಲಕರಹತ್ತಿರ ರಾಜನ ಕ್ಷೇಮವನ್ನು ವಿಚಾರಿಸಿದರು. ಶ್ರೀನಿವಾಸದೇವರು ದೇವಿಯಿಂದ ಕೂಡಿಕೊಂಡು ಮನೆಯ ಒಳಗೆ ಹೋಗಿ ಹಾಸಿಗೆಯಲ್ಲಿ ಮಲಗಿರುವ ದೀರ್ಘಶ್ವಾಸಬಿಡುತ್ತಿರುವ ಆಕಾಶರಾಜನನ್ನು ನೋಡಿದರು. ಆಕಾಶರಾಜನ ಮೇಲೆ ಬಿದ್ದರು. ಅವನನ್ನು ಆಲಿಂಗನ ಮಾಡಿದರು. 'ಹಾ ತಂದೆ! ಮಗನನ್ನೂ ಮಗಳನ್ನೂ ತಮ್ಮನನ್ನೂ ರಾಜ್ಯವನ್ನೂ ಬಿಟ್ಟು ಈ ದೇಹವನ್ನು ಬಿಟ್ಟು ಎಲ್ಲಿಗೆ ಹೋಗುವಿರಿ? ತಂದೆತಾಯಿಗಳು ಇಲ್ಲದಿರುವ ನಮಗೆ ನೀವೇ ತಂದೆಯಾಗಿದ್ದಿರಿ. ನಿಮ್ಮ ಮುಖವನ್ನು ಈ ಕಣ್ಣುಗಳಿಂದ ಹೇಗೆ ನೋಡಲಿ. ನಿಮ್ಮ ಮಗಳು ಅಳುತ್ತಾ ಬಿದ್ದಿರುವಳು ಎಬ್ಬಿಸಿರಿ. ಮಗನನ್ನು ಎಬ್ಬಿಸಿರಿ. ತಂದೆಯಿಲ್ಲದ ವಸುದಾನನನ್ನು ನನ್ನನ್ನೂ ಇನ್ನು ರಕ್ಷಿಸುವವರು ಯಾರು ಇದ್ದಾರೆ? ನಮಗೇನು ಗತಿ? ಅನಾಥರಾದ ನಮ್ಮನ್ನು ರಕ್ಷಿಸಿರಿ. ಪ್ರಜೆಗಳನ್ನು ರಕ್ಷಿಸಿರಿ' ಎಂದು ಲೋಕದ ಜನರಂತೆ ವಿಲಾಪವನ್ನು ಮಾಡಿದರು. 'ಈ ಸುಂದರವಾದ ನಿಮ್ಮ ದೇಹವನ್ನು ಹೇಗೆ ಬೆಂಕಿಗೆ ಕೊಡಲಿ. ಇದಕ್ಕಾಗಿಯೇ ನಿಮ್ಮ ಮಗಳನ್ನು ಕೊಟ್ಟು ಈಗ ಸಾಯುವಿರಾ? 'ಶ್ರೀನಿವಾಸ! ಈಗ ಹೋಗಬೇಡ' ಎಂದು ನೀವು ಮೊದಲೇ ಹಿತವನ್ನು ಹೇಳಿದಿರಿ. ನಾನು ಆ ಮಾತನ್ನು ಕೇಳಲಿಲ್ಲ. ನಿಮ್ಮ ಮುಖವನ್ನು ನೋಡಿ ನನಗೆ ತೃಪ್ತಿಯಾಗಲೇ ಇಲ್ಲ. ನನಗೆ ಮುಂದೆ ಏನು ಗತಿ? ಏನು ಆಗಲಿಕ್ಕೆ ಇದೆಯೋ? ಮಹಾರಾಜರೇ! ನನ್ನನ್ನು ನಿಮ್ಮ ಮಗಳನ್ನೂ ನೋಡಿರಿ'' ಎಂದು ಹೇಳಿದರು.

ಆಗ ಅಗಸ್ತ್ಯರು 'ಮಹಾರಾಜ! ನಿನ್ನ ಅಳಿಯನು ಪದ್ಮಾವತಿಯನ್ನು ಕರೆದುಕೊಂಡು ಬಂದಿರುವನು. ಪೂರ್ವದಂತೆ ಮನೆಯ ಹೊರಗೆ ಬಂದು ಕರೆದುಕೊಂಡು ಬಾ. ಅಳಿಯನಿಗೆ ಭೋಜನ ಮಾಡಿಸು. ಆನೆಗಳನ್ನು ಕುದುರೆಗಳನ್ನು

ವಸ್ತ್ರಗಳನ್ನೂ ಅಪೇಕ್ಷಿಸುತ್ತಾನೆ. ಕೊಡು' ಎಂದು ಮಾತಾಡಿದರು. ರಾಜನು ಮಾತಾಡಲೇ ಇಲ್ಲ. ಆಗ ಲೋಕದ ಜನರಂತೆ ನಟನೆ ಮಾಡುವ ಶ್ರೀನಿವಾಸದೇವರು ಬಹಳವಾಗಿ ಅಳುವಂತೆ ನಟನ ಮಾಡಿದರು. ಈರೀತಿಯಾಗಿ ದೇವರು ಅಳುತ್ತಿರಲು ಆಕಾಶರಾಜನು ಸ್ವಲ್ಪ ಜ್ಞಾನವುಳ್ಳವನಾಗಿ 'ಶ್ರೀನಿವಾಸ! ನನ್ನ ಮಗನನ್ನೂ ತಮ್ಮನನ್ನೂ ರಕ್ಷಿಸಿರಿ' ಎಂದು ಹೇಳಿ ಅವರಿಬ್ಬರನ್ನೂ ಶ್ರೀನಿವಾಸದೇವರ ಕೈಯಲ್ಲಿ ಕೊಟ್ಟರು. ಹೆಂಡತಿಗೆ ನೀನು ಸಹಗಮನ ಮಾಡು ಎಂದು ಹೇಳಿದನು. ಈರೀತಿಯಾಗಿ ಹೇಳಿ ಆಕಾಶರಾಜನು ದೇಹವನ್ನು ಪರಿತ್ಯಾಗ ಮಾಡಿ ದಿವ್ಯವಿಮಾನದಲ್ಲಿ ಕೂತುಕೊಂಡು ಸತ್ಯಲೋಕಕ್ಕೆ ಹೋದನು. ಧರಣೀದೇವಿಯೂ ಕೂಡ ಸಹಗಮನ ಮಾಡಿ ಹೊರಟುಹೋದಳು. ತರುವಾಯ ರಾಜನಿಗೆ ವಿಧಿಪ್ರಕಾರವಾಗಿ ಉತ್ತರಕ್ರಿಯೆಯನ್ನು ಮಾಡಿದರು. ಹದಿನಾರನೇ ದಿನದಲ್ಲಿ ರಾಜಪುತ್ರನು ಮಾಸಿಕಗಳನ್ನು ಮಾಡಿದನು. ಮಾಸಿಕದಲ್ಲಿ ಕಶ್ಯಪ ಅತ್ರಿ ಭರದ್ವಾಜ ವಿಶ್ವಾಮಿತ್ರ, ಗೌತಮ, ವಾಮದೇವ, ಪುಲಸ್ತ್ಯ ,ವಾಲ್ಮೀಕಿ, ಜಮದಗ್ನಿ, ಭೃಗು, ಸನಂದ, ಪರಾಶರ, ಯಾಜ್ಞವಲ್ಕ್ಯ, ಜಾಬಾಲಿ, ಶುನಃಶೇಫ, ಕಾಹಲಿ ಎಂಬ ವೇದಶಾಸ್ತ್ರಪಾರಂಗತರಾದ ಋಷಿಗಳು ನಿಮಂತ್ರಿತರಾಗಿ ಭೋಜನವನ್ನು ಮಾಡಿದರು. ಸಮಸ್ತಕಾರ್ಯವನ್ನು ಮುಗಿಸಿ ಶ್ರೀನಿವಾಸದೇವರು ಪದ್ಮಾವತೀದೇವಿಯರೊಡನೆ ಅಗಸ್ತ್ಯರ ಆಶ್ರಮಕ್ಕೆ ಬಂದು ಅಲ್ಲಿಯೇ ಸುಖವಾಗಿ ಇದ್ದರು.



## ತೋಂಡಮಾನ ವಸುದಾನರ ಕಲಹ [1]

ಆಕಾಶರಾಜನ ಮರಣವಾದ ಮೇಲೆ ತೋಂಡಮಾನರಾಜನಿಗೂ ವಸುದಾನನಿಗೂ ರಾಜ್ಯದ ವಿಷಯದಲ್ಲಿ ಜಗಳವಾಯಿತು. ತೋಂಡಮಾನರಾಜನು ಅಣ್ಣನು ಮೃತನಾದ ಮೇಲೆ ಪರಂಪರೆಯಿಂದ ಬಂದ ರಾಜ್ಯವು ತಮ್ಮನಿಗೆ ಸಿಗಬೇಕೆಂದು ಜ್ಞಾನಿಗಳಿಗೆ ಸಮ್ಮತವಾದದ್ದು ಎಂದು ಹೇಳಿದನು. ಅದಕ್ಕೆ ವಸುದಾನನು ನನ್ನ ತಂದೆಯು ಪರಾಕ್ರಮದಿಂದ ಸಂಪಾದಿಸಿದ ರಾಜ್ಯವಿದು. ಇದು ನನಗೇ ಸೇರಬೇಕು ಎಂದನು. ಹೀಗೆ ಇಬ್ಬರೂ ರಾಜ್ಯಕ್ಕಾಗಿ ಜಗಳವಾಡಿಕೊಂಡು ಕೊನೆಗೆ ಯುದ್ಧವನ್ನು ಮಾಡಿಕೊಂಡು ಯುದ್ಧದಲ್ಲಿ ಯಾರಿಗೆಜಯವಾಗುತ್ತದೋ ಅವರಿಗೆ ರಾಜ್ಯವೆಂದು

1. ಭ.ಪು.ಅ.12

ನಿಶ್ಚಯಿಸಿಕೊಂಡರು. ತೋಂಡಮಾನರಾಜನು ನಾನಾ ಕಿರಾತರನ್ನೂ, ನಾನಾ ದೇಶದ ರಾಜರನ್ನೂ, ಕರೆತರಿಸಿದನು. ಅವನು ಎರಡು ಅಕ್ಷೌಹಿಣೀಸೈನ್ಯವನ್ನು ಸೇರಿಸಿದನು. ವಸುದಾನನೂ ಅಷ್ಟೇ ಸೈನ್ಯವನ್ನು ಸೇರಿಸಿದನು. ನಾರಾಯಣಪುರದ ಹತ್ತಿರವೇ ದಕ್ಷಿಣಭಾಗದಲ್ಲಿ ರಣರಂಗವು ಏರ್ಪಟ್ಟಿತು.

ಆಮೇಲೆ ತೋಂಡಮಾನನೂ, ವಸುದಾನನೂ, ಶ್ರೀನಿವಾಸದೇವರ ಬಳಿಗೆ ಸಹಾಯವನ್ನು ಪಡೆಯಲು ಬಂದರು. ಶ್ರೀನಿವಾಸದೇವರು ಅವರಿಬ್ಬರೂ ಬಂದದ್ದನ್ನು ನೋಡಿ ಇಬ್ಬರನ್ನೂ ಆಲಂಗಿಸಿದರು. ಕೂತುಕೊಳ್ಳಲಿಕ್ಕೆ ರತ್ನಪೀಠವನ್ನು ಕೊಟ್ಟು ನೀವಿಬ್ಬರೂ ಬಂದಿರುವ ಕಾರಣವೇನೆಂದು ಕೇಳಿದರು. ಆಗ ವಸುದಾನನು 'ನನಗೆ ಚಿಕ್ಕಪ್ಪನೊಡನೆ ಯುದ್ಧವು ಪ್ರಸಕ್ತವಾಗಿದೆ. ರಾಜ್ಯನಿಮಿತ್ತವಾಗಿ ಯುದ್ಧವು ನಾನು ಚಿಕ್ಕವನು. ತಂದೆಯಿಲ್ಲದವನು. ಆದುದರಿಂದ ನನಗೆ ತಾವು ಸಹಾಯ ಮಾಡಬೇಕು' ಎಂದನು. ಆಗ ತೋಂಡಮಾನನೂ ಶ್ರೀನಿವಾಸ ದೇವರೊಡನೆ ತನಗೆ ಸಹಾಯಮಾಡಬೇಕೆಂದನು. ಅದಕ್ಕೆ ಶ್ರೀನಿವಾಸದೇವರೊಡನೆ ತನಗೆ ಸಹಾಯ ಮಾಡಬೇಕೆಂದನು. ಅದಕ್ಕೆ ಶ್ರೀನಿವಾಸದೇವರು ನಾನೊಬ್ಬನು ಯಾರಿಗೆ ಸಹಾಯ ಮಾಡಲಿ ಎಂದು ಹೇಳಿ ಮನೆಯ ಒಳಗೆ ಹೋದರು. ಪದ್ಮಾವತೀದೇವಿಯರೊಡನೆ 'ಕಲ್ಯಾಣಿ! ನನಗೀಗ ಬಹಳ ಕಷ್ಟಕರವಾದ ಕಾರ್ಯವು ಬಂದು ಸೇರಿದೆ. ನಿನ್ನ ತಮ್ಮನೂ ಚಿಕ್ಕಪ್ಪನೂ ರಾಜ್ಯಕ್ಕೋಸ್ಕರ ಜಗಳವಾಡಿಕೊಂಡು ನನ್ನ ಸಹಾಯವನ್ನು ಅಪೇಕ್ಷಿಸಿಕೊಂಡು ಬಂದಿರುವರು. ನಾನು ಯಾರಿಗೆ ಸಹಾಯ ಮಾಡುವುದು ಎಂದು ಸಂದೇಹವುಂಟಾಗಿದೆ. ನೀನು ಯೋಚಿಸಿ ಹೇಳು. ನೀನು ಹೇಳಿದಂತೆ ಮಾಡುವೆನು' ಎಂದರು. ಅದಕ್ಕೆ ಪದ್ಮಾವತೀದೇವಿಯರು ಮನುಷ್ಯರಲ್ಲಿ ಧರ್ಮ ಅಧರ್ಮ ಎರಡೂ ಇರುವುದು ಜ್ಞಾನಿಗಳು ಧರ್ಮವನ್ನೇ ಪ್ರಶಂಸಿಸುತ್ತಾರೆ. ಅಧರ್ಮವನ್ನು ಪ್ರಶಂಸಿಸಲಾರರು. ನೀವೂ ಧರ್ಮವನ್ನೇ ಮಾಡಬೇಕು. ನೀವು ಧರ್ಮಕ್ಕೆ ಆಶ್ರಯರು. ವಸುದಾನನು ಚಿಕ್ಕವನು. ತಂದೆ ತಾಯಿಗಳೂ ಇಲ್ಲ. ಹಣವಿಲ್ಲ. ಆದುದರಿಂದ ಅವನನ್ನು ರಕ್ಷಿಸಿದರೆ ಪುಣ್ಯವು ಬರುವುದು. ತೋಂಡಮಾನರಾಜನು ಬಹಳ ಹಣವುಳ್ಳವನು. ನನ್ನ ತಂದೆಯ ರಾಜ್ಯವನ್ನು ಅಪಹರಿಸುವನು. ಧರ್ಮತತ್ವವನ್ನು ಯೋಚಿಸಿ ತಾವು ಕಾರ್ಯವನ್ನು ಮಾಡಬೇಕು' ಎಂದು ಹೇಳಿದರು.

ಶ್ರೀನಿವಾಸದೇವರು ಪತ್ನಿಯ ಮಾತನ್ನು ಕೇಳಿ ವಸುದಾನನಿಗೆ ಸಹಾಯ ಮಾಡುವ ಅಭಿಪ್ರಾಯವುಳ್ಳವರಾಗಿ ತೋಂಡಮಾನರಾಜನಿಗೆ ಶಂಖಚಕ್ರಗಳನ್ನು

ಕೊಟ್ಟರು. ಉಚ್ಚೈಃಶ್ರವದಂತಿರುವ ಕುದುರೆಯಲ್ಲಿ ಕೂತುಕೊಂಡು ಭಾವಮೈದುನನಾದ ವಸುದಾನನೊಡನೆ ಹೊರಟುಹೋದನು. ಚೈತ್ರ ಶುಕ್ಲ ತ್ರಯೋದಶಿಯಲ್ಲಿ ಭಯಂಕರವಾದ ಯುದ್ಧವು ನಡೆಯಿತು. ಯುದ್ಧದಲ್ಲಿ ಪಶುಗಳನ್ನು ಕೊಂದರು. ಶೂರರು ಬಂದು ಸೇರಿದರು. ಸಿಂಹಗರ್ಜನೆಯೂ, ಶಂಖಧ್ವನಿಯೂ, ನಗಾರಿಯ ಶಬ್ದವೂ, ಶಸ್ತ್ರಾಸ್ತ್ರಗಳ ಶಬ್ದವೂ, ಆನೆಗಳ ಕೂಗುವ ಶಬ್ದವೂ, ಕುದುರೆಗಳ ಶಬ್ದವೂ, ರಥದ ಶಬ್ದವೂ, ಉಂಟಾದವು. ಪದ್ಮವ್ಯೂಹ, ಗೃಧ್ರವ್ಯೂಹ ಎಂಬ ವ್ಯೂಹಗಳನ್ನು ಮಾಡಿದ್ದರು. ಶ್ರೀನಿವಾಸದೇವರು ಯುದ್ಧಕ್ಕೆ ಹೋದರು. ವಸುದಾನನು ತೋಂಡಮಾನರಾಜನನ್ನು ಹತ್ತು ಬಾಣಗಳಿಂದ ಬಡೆದನು. ಅವನೂ ಕೋಪಿಸಿಕೊಂಡು ಇಪ್ಪತ್ತು ಬಾಣಗಳಿಂದ ಬಡೆದನು. ಮತ್ತು ತೋಂಡಮಾನರಾಜನು ಕೋಪದಿಂದ ಶ್ರೀನಿವಾಸದೇವರ ಎದೆಗೆ ಐದು ಸಾವಿರ ಬಾಣಗಳನ್ನು ಬಿಟ್ಟನು. ತೋಂಡಮಾನರಾಜನು ವಸುದಾನನನ್ನು ಶ್ರೀನಿವಾಸದೇವರನ್ನೂ ಹತ್ತು ಬಾಣಗಳಿಂದ ಬಡೆದನು. ಅದು ಆಶ್ಚರ್ಯಕರವಾಗಿತ್ತು. ಮತ್ತು ವಸುದಾನನ ನಾಲ್ಕು ಕುದುರೆಗಳನ್ನು ನಾಲ್ಕು ಬಾಣಗಳಿಂದ ಬಡೆದನು. ಒಂದು ಬಾಣದಿಂದ ಸಾರಥಿಯನ್ನು ಬಡೆದನು. ಮತ್ತೊಂದು ಬಾಣದಿಂದ ಛತ್ರವನ್ನು ಕತ್ತರಿಸಿದನು. ಐದು ಬಾಣಗಳಿಂದ ರಥವನ್ನು ಪುಡಿ ಮಾಡಿದನು. ವಸುದಾನನು ರಥದಿಂದ ಕೆಳಗೆ ಹಾರಿದನು. ತೋಂಡಮಾನನು ಶ್ರೀನಿವಾಸದೇವರ ಕುದುರೆಯ ಮೇಲೂ ಎದೆಯ ಮೇಲೂ ಚಕ್ರವನ್ನು ಬಿಟ್ಟನು. ಆಗ ಶ್ರೀನಿವಾಸದೇವರು ಸರ್ವದುಃಖರಹಿತರಾದರೂ ಲೋಕದ ಜನರಂತೆ ನಟಿಸುತ್ತಾ ಮೂರ್ಛಾ ಬಂದವರಂತೆ ರಣರಂಗದಲ್ಲಿ ಮಲಗಿದರು.

ಆ ಸಮಯದಲ್ಲಿ ಪದ್ಮಾವತೀ ದೇವಿಯರು ಪ್ರಾಕಾರದ ಮೇಲೆ ಹತ್ತಿ ನೋಡುತ್ತಿದ್ದರು. ಅವರು ಶ್ರೀನಿವಾಸದೇವರು ಬಿದ್ದದ್ದನ್ನು ನೋಡಿ ಆಗಸ್ತ್ಯರನ್ನು ಕರೆದು 'ನೋಡಿರಿ. ದೇವರು ಯುದ್ಧರಂಗದಲ್ಲಿ ಮೂರ್ಛಿತರಾಗಿರುವರು. ಈಗೇನು ಮಾಡಲಿ? ನೀವು ಹೇಳಿರಿ' ಎಂದು ಹೇಳಿದರು. ಪದ್ಮಾವತೀದೇವಿಯರ ಮಾತನ್ನು ಕೇಳಿ ಆಗಸ್ತ್ಯರು ದೇವರನ್ನು ಸ್ಮರಿಸಿಕೊಂಡು ಕಾಲೋಚಿತವಾದ ಮಾತನ್ನು ಹೇಳಿದರು. 'ದೇಶಕಾಲವನ್ನು ಅತಿಕ್ರಮಿಸಿ ಒಂದು ಕಾರ್ಯವನ್ನು ಮಾಡಿದರೆ ಸುಖವನ್ನು ಹೊಂದಲಾರರು. ಎಲ್ಲರೂ ತಮ್ಮ ಕಾರ್ಯದಲ್ಲಿ ನಿಪುಣರು. ಇನ್ನೊಬ್ಬರ ಕಾರ್ಯವನ್ನು ನೋಡಲಾರರು. ಕೆಳಗೆ ಬಿದ್ದಿರುವ ಶ್ರೀನಿವಾಸದೇವರನ್ನು ಒಬ್ಬರೂ ನೋಡುವವರೇ ಇಲ್ಲ. ಆದುದರಿಂದ ನೀನೇ ಹೋಗಿ ನಿನ್ನ ಗಂಡನನ್ನು ಯುದ್ಧದಿಂದ

ಹಿಂದೆ ತಿರುಗಿಸು. ಸ್ತ್ರೀಯರಿಗೆ ಪತಿಯಲ್ಲಿ ಭಕ್ತಿಯನ್ನು ಮಾಡುವುದು ಪರಮಧರ್ಮವು. ನಿನ್ನ ತಮ್ಮನಿಗೂ ಚಿಕ್ಕಪ್ಪನಿಗೂ ಇಬ್ಬರಿಗೂ ಕ್ಷೇಮವಾಗಲಿ. ಇಬ್ಬರಿಗೂ ರಾಜಿ ಮಾಡಿಸುವುದೇ ಒಳ್ಳೆಯದೆಂದು ನನಗೆ ತೋರುತ್ತದೆ. ಇಬ್ಬರೂ ರಾಜ್ಯಭಾರವನ್ನು ಮಾಡಲಿ' ಎಂದು ಹೇಳಿದರು. ತರುವಾಯ ಪದ್ಮಾವತೀ ದೇವಿಯರು ಅಗಸ್ತ್ಯರನ್ನು ಕರೆದುಕೊಂಡು ಯುದ್ಧರಂಗಕ್ಕೆ ಹೋದರು. ಅಲ್ಲಿ ಮಲಗಿದ್ದ ಶ್ರೀನಿವಾಸದೇವರನ್ನು ಎಬ್ಬಿಸಿ ತಣ್ಣಗಿನ ನೀರನ್ನು ಹಾಕಿ ಬೀಸಣಿಕೆಯಿಂದ ಬೀಸಿದರು. ಪದ್ಮಾವತಿಯು 'ಮೂರ್ಛೆಯನ್ನು ಬಿಟ್ಟು ಯುದ್ಧರಂಗದಿಂದ ಏಳಿರಿ' ಎಂದು ವಿಜ್ಞಾಪಿಸಿಕೊಂಡರು. ಒಂದು ಮುಹೂರ್ತದ ಮೇಲೆ ಮನುಷ್ಯರಂತೆ ನಟಿಸುತ್ತಾ ಮೂರ್ಛೆಯಿಂದ ಎದ್ದವರಂತೆ ತೋರಿಸಿದರು. ಯುದ್ಧರಂಗದಲ್ಲಿ ಎದ್ದು ಹತ್ತು ದಿಕ್ಕುಗಳನ್ನೂ ನೋಡಿದರು. ಅಲ್ಲಿ ನಿಂತಿದ್ದ ಪದ್ಮಾವತೀದೇವಿಯರನ್ನು ನೋಡಿದರು. ಹುಬ್ಬುಗಂಟು ಹಾಕಿಕೊಂಡು 'ಈ ಘೋರವಾದ ರಣರಂಗದಲ್ಲಿ ಹೆಂಗಸರಿಗೆ ಏನು ಕೆಲಸವಿದೆ? ಮುನಿಶ್ರೇಷ್ಠರಾದ ಅಗಸ್ತ್ಯರೇ! ಇವಳು ಬೇಗನೆ ಇಲ್ಲಿಂದ ಹೊರಟು ಹೋಗಲಿ' ಎಂದರು.

ಈರೀತಿಯಾಗಿ ಹೇಳಲು ಪದ್ಮಾವತೀದೇವಿಯರೊಡನೆ ಬಂದಿದ್ದ ಅಗಸ್ತ್ಯರು 'ಭಗವಂತ1 ನೀವೀಗ ರಾಜಿಮಾಡಿಸಬೇಕು. ಏಳಿರಿ. ನಿಮ್ಮ ಭಾವಮೈದುನನನ್ನು ತರಿಸಿರಿ. ತೋಂಡಮಾನನನ್ನು ಅವನ ಮಗನನ್ನು ಕರೆಯಿರಿ. ನಿಮಗೆ ಸಮಾಧಾನ ಮಾಡಿಸಬೇಕೆಂದೂ ಪದ್ಮಾವತೀದೇವಿಯರು ಬಂದಿರುವುದು' ಎಂದರು. ಅಗಸ್ತ್ಯರ ಮಾತನ್ನು ಕೇಳಿ ಶ್ರೀನಿವಾಸದೇವರು ಸ್ವಲ್ಪ ಕೋಪವುಳ್ಳವರಂತೆ ನಟಿಸುತ್ತಾ ಯುದ್ಧರಂಗಕ್ಕೆ ಬಂದಿರುವ ಪದ್ಮಾವತೀದೇವಿಯರನ್ನು ಬೆದರಿಸುತ್ತಾ 'ಮುನಿಗಳೇ! ಹೆಂಗಸರು ಯುದ್ಧರಂಗಕ್ಕೆ ಬರುವುದು ಸರಿಯಲ್ಲ. ನಾನೀಗಲೇ ತೋಂಡಮಾನ ನನ್ನೂ ಅವನ ಮಗನನ್ನೂ ಕೊಂದು ಹಾಕುವೆನು. ವಸುದಾನನಿಗೆ ರಾಜ್ಯವನ್ನು ಕೊಡುವೆನು' ಎಂದರು.

ಶ್ರೀನಿವಾಸದೇವರ ಮಾತನ್ನು ಕೇಳಿ ಪದ್ಮಾವತೀದೇವಿಯರು ಉದ್ದಕ್ಕೆ ನಮಸ್ಕರಿಸಿ 'ನೀವು ಭಕ್ತರಿಗೆ ಅಭಯಪ್ರದಾನ ಮಾಡಬೇಕು. ನೀವು ಲೋಕವನ್ನು ನಾಶಮಾಡಿ ಏನು ಪ್ರಯೋಜನವಿದೆ? ಇಬ್ಬರೂ ರಾಜ್ಯಭಾರವನ್ನು ಮಾಡಲಿ. ರಾಜ್ಯವನ್ನು ಕೋಶವನ್ನೂ ವಿಭಾಗಮಾಡಿ ಕೊಡಿರಿ. ಎಲ್ಲಾ ಜನರಿಗೂ ನನ್ನ ಚಿಕ್ಕಪ್ಪನಿಗೂ ಕ್ಷೇಮವಾಗಲಿ. ನೀವು ಯುದ್ಧರಂಗವನ್ನು ಬಿಡಿರಿ' ಎಂದು ಹೇಳಿದರು.

ಆ ಮಾತನ್ನು ಕೇಳಿ ಶ್ರೀನಿವಾಸದೇವರು 'ನೀನು ಕ್ಷತ್ರಿಯಧರ್ಮವನ್ನು

ತಿಳಿಯಲಾರೆ. ನೀನು ಯುದ್ಧರಂಗದಿಂದ ಹೊರಟುಹೋಗು. ಈಗಲೇ ನಾನು ತೋಂಡಮಾನನ ಮತ್ತು ಅವನ ಮಗನ ತಲೆಯನ್ನು ಕತ್ತರಿಸುವೆನು. ಅಥವಾ ಭಾವಮೈದುನನಿಗಾಗಿ ನಾನು ಸಾಯುವೆನು. ಇದರಲ್ಲಿ ವಿಚಾರಮಾಡುವುದು ಬೇಡ' ಎಂದು ಹೇಳಿದರು.

ಈರೀತಿ ಹೇಳಲು ಪದ್ಮಾವತೀದೇವಿಯರು ನಡುಗುತ್ತಾ ಅಗಸ್ತ್ಯರೊಡನೆ ಶ್ರೀನಿವಾಸದೇವರು ಯುದ್ಧದಲ್ಲಿ ನಿಲ್ಲಿಸುವಂತೆ ಮಾಡಿರಿ ಎಂದು ಕೇಳಿಕೊಂಡರು. ಆಗ ಅಗಸ್ತ್ಯರು ಶ್ರೀನಿವಾಸದೇವರನ್ನು ಸಮಾಧಾನಪಡಿಸಿ ರಾಜ್ಯವನ್ನು ಕೋಶವನ್ನೂ ವಿಭಾಗ ಮಾಡಿರಿ ಎಂದು ಹೇಳಿದರು.

ಈರೀತಿಯಾಗಿ ಅಗಸ್ತ್ಯರು ಹೇಳಲು ಸಂಧಿ ಮಾಡುವ ಅಭಿಪ್ರಾಯದಿಂದ ತೋಂಡಮಾನನನ್ನು ಕರೆದು 'ರಾಜನೇ! ನಿನ್ನ ಅಭಿಪ್ರಾಯವೇನಿದೆ?' ಎಂದು ಕೇಳಿದರು.

ತೋಂಡಮಾನರಾಜನು 'ನೀವೇ ನನಗೆ ಗತಿಯು. ನಿಮ್ಮಲ್ಲಿಯೇ ನನ್ನ ಮನಸ್ಸು ಇರುವುದು' ಎಂದನು. ಶ್ರೀನಿವಾಸದೇವರು ವಸುದಾನನೊಡನೆ 'ವಸುದಾನ' ನಿನ್ನ ಅಕ್ಕನು ನೀವಿಬ್ಬರೂ ರಾಜಿಮಾಡಿಕೊಳ್ಳಬೇಕೆಂದು ಅಪೇಕ್ಷಿಸುವಳು. ನಿನ್ನ ಅಭಿಪ್ರಾಯವೇನಿದೆ?' ಎಂದು ಕೇಳಿದರು. ಅದಕ್ಕೆ ವಸುದಾನನು 'ಭಗವಂತ! ನಾನು ನಿಮ್ಮ ಆಜ್ಞೆಯಂತೆಯೇ ಸರ್ವಕಾಲದಲ್ಲಿಯೂ ಇರುವವನು. ನಿಮಗೆ ಹೇಗೆ ಇಚ್ಛೆಯಿದೆಯೋ ಹಾಗೆ ಮಾಡಬೇಕು' ಎಂದನು.

ಈರೀತಿಯಾಗಿ ಇಬ್ಬರೂ ವಿಜ್ಞಾಪಿಸಿಕೊಳ್ಳಲು ಶ್ರೀನಿವಾಸದೇವರು ಅವರಿಬ್ಬರಿಗೂ ರಾಜಿ ಮಾಡಿಸಿದರು. ಶ್ರೀನಿವಾಸದೇವರು ಆನೆ ಕುದುರೆ ರಥಗಳಿಂದ ಸಹಿತವಾದ ಸಮಸ್ತರಾಜ್ಯವನ್ನು ಹಣವನ್ನು ಗ್ರಾಮದುರ್ಗನಗರಗಳನ್ನೂ ಸರಿಯಾದ ವಿಭಾಗವನ್ನು ಮಾಡಿ ತೋಂಡಮಾನರಾಜನೊಡನೆಯೂ, ವಸುದಾನನ ಬಳಿ ಯಲ್ಲಿಯೂ, ಹದಿನಾರು ಹದಿನಾರು ಗ್ರಾಮಗಳನ್ನು ಕೇಳಿದರು. ನೀವಿಬ್ಬರೂ ಯುದ್ಧವನ್ನು ಮಾಡಿ ವ್ಯರ್ಥವಾಗಿ ಸಾಯುತ್ತಿದ್ದಿರಿ. ಆದುದರಿಂದ ನನಗೆ ಅಥವಾ ತೋಂಡಮಾನನೇ! ನಿನ್ನ ಮಗಳಿಗಾಗಿ ಹದಿನಾರು ಗ್ರಾಮಗಳನ್ನು ಕೊಡು ಎಂದು ಶ್ರೀನಿವಾಸದೇವರು ಹೇಳಿದರು. ತರುವಾಯ ಅವರಿಬ್ಬರೂ ಒಟ್ಟಿಗೆ ಮೂವತ್ತೆರಡು ಗ್ರಾಮಗಳನ್ನು ಶ್ರೀನಿವಾಸದೇವರಿಗೆ ಕೊಟ್ಟರು. ಶ್ರೀನಿವಾಸದೇವರು ತೋಂಡರಾಜ್ಯ ದಲ್ಲಿ ತೋಂಡಮಾನನನ್ನು ಇಟ್ಟು ನಾರಾಯಣಪುರದಲ್ಲಿ ವಸುದಾನವನ್ನು ಇಟ್ಟು ಅವರಿಬ್ಬರ ಮನೆಯಲ್ಲಿಯೂ ಭೋಜನವನ್ನು ಮಾಡಿ ಅಗಸ್ತ್ಯರ ಮನೆಗೆ ಹೋಗಿ ಅಲ್ಲಿ ಪದ್ಮಾವತೀದೇವಿಯೊಡನೆ ಸಂತೋಷದಿಂದ ಇದ್ದರು.

# ತೋಂಡಮಾನನ ಚರಿತೆ [1]

ಒಂದು ದಿನದಲ್ಲಿ ತೋಂಡಮಾನನು ಶ್ರೀನಿವಾಸದೇವರ ದರ್ಶನಕ್ಕೆ ಹೋಗಿ ಒಬ್ಬನೇ ಶ್ರೀನಿವಾಸದೇವರಿಗೆ ನಮಸ್ಕರಿಸಿದನು. ಶ್ರೀನಿವಾಸದೇವರು ತೋಂಡಮಾನನನ್ನು ಆಲಿಂಗಿಸಿ ಇಲ್ಲಿಗೆ ಬರುವರೆ ಕಾರಣವೇನೆಂದು ಕೇಳಿದರು. ಆಗ ತೋಂಡಮಾನನು ಶ್ರೀನಿವಾಸದೇವರನ್ನು ಸ್ತೋತ್ರ ಮಾಡಿ ಸುಮ್ಮನೆ ಆದನು. ಅವನು ಮಾಡಿದ ಸ್ತೋತ್ರದಿಂದ ಸಂತುಷ್ಟರಾಗಿ ಶ್ರೀನಿವಾಸದೇವರು 'ರಾಜನೇ! ನೀನು ಮಾಡಿದ ಸ್ತೋತ್ರದಿಂದ ನನ್ನನ್ನು ಯಾರು ಸ್ತುತಿಸುವರೋ ಅವರಿಗೆ ಸಾಲೋಕ್ಯವುಂಟಾಗುವುದು. ಧರ್ಮಿಷ್ಠನಾದ ಆಕಾಶರಾಜನು ಮೋಕ್ಷಕ್ಕೇನೇ ಹೋದನು. ಅವನಿಂದ ನಾನು ಭೂಮಿಯಲ್ಲಿ ಪ್ರಸಿದ್ಧಿಯನ್ನು ಹೊಂದಿದೆನು. ನನಗೆ ಮದುವೆ ಮಾಡಿಕೊಟ್ಟು ನನ್ನನ್ನು ನೋಡಿ ಬಹಳ ಸಂತೋಷವನ್ನು ಹೊಂದಿದನು. ದೈವಾನುಗ್ರಹವೇ ಮುಖ್ಯವಾದದ್ದು. ನಾನು ದುಃಖವನ್ನು ಅನುಭವಿಸಬೇಕಾಗಿದೆ. ಆ ಮಹಾನುಭಾವನಾದ ರಾಜನನ್ನು ಕಳೆದುಕೊಂಡ ನನಗೆ ಮುಂದೇನು ಗತಿಯು'? ಎಂದು ಹೇಳಿದರು.

ತೋಂಡಮಾನರಾಜನು 'ಭಗವಂತನೇ! ಪ್ರಾರಬ್ಧಕರ್ಮವುಳ್ಳ ಪುರುಷನಿಗೆ ಹೇಗೆ ಸುಖವಾಗುವುದು? ನೀವು ಏಕೆ ಮೃತನಾದ ಬಂಧುವನ್ನು ಜ್ಞಾಪಿಸಿಕೊಂಡು ದುಃಖಪಡುವಿರಿ? ಸ್ವರ್ಗಸ್ಥನಾದ ರಾಜನನ್ನು ಸ್ಮರಿಸಿಕೊಂಡು ದುಃಖಪಡಬೇಡಿರಿ. ನನ್ನನ್ನು ನೋಡಿರಿ. ಬಾಲಕನಾದ ವಸುದಾನನನ್ನು ನೋಡಿರಿ' ಎಂದು ಹೇಳಿದನು.

ಶ್ರೀನಿವಾಸದೇವರು 'ನಿನ್ನ ಅಣ್ಣನು ನನ್ನ ಕುಟುಂಬವನ್ನು ಸ್ಥಾಪನೆ ಮಾಡಿದನು. ಆದರೆ ನನಗೆ ವಾಸಮಾಡಲು ಮನೆಯಿಲ್ಲ. ನಿನ್ನ ಮಗಳಿಗೆ ವಾಸಮಾಡಲು ಮನೆಯು ಬೇಕಾಗಿದೆ. ಆಕಾಶರಾಜನ ಅಳಿಯನು ಇನ್ನೊಬ್ಬರ ಮನೆಯಲ್ಲಿ ವಾಸಮಾಡುತ್ತಿರುವನು ಎಂಬ ಮಾತು ದಃಖದಾಯಕವಾಗಿದೆ. ಇನ್ನೊಬ್ಬರ ಮನೆಯಲ್ಲಿ ಇರುವುದು ಬಹು ಕಷ್ಟಕ್ಕೆ ಕಾರಣವಾದದ್ದು. ಆದುದರಿಂದ ನೀನು ಒಂದು ಮನೆಯನ್ನು ಕಟ್ಟಿಸಿಕೊಡಬೇಕು. ನೀನು ಹೊರತು ಭೂಮಿಯಲ್ಲಿ ಈ ಶಾಶ್ವತವಾದ ಕೀರ್ತಿಯನ್ನು ಸ್ಥಾಪಿಸಲು ಯಾರು ಸಮರ್ಥರಾಗಿರುವರು?' ಎಂದು ಹೇಳಿದರು. ತರುವಾಯ ಆದಕ್ಕೆ ತೋಂಡಮಾನರಾಜನು ಹಾಗೆಯೇ ಆಗಲಿ ಎಂದು ಹೇಳಿದನು. ತರುವಾಯ ಒಳ್ಳೆಯ ದಿವಸದಲ್ಲಿ ಶ್ರೀನಿವಾಸದೇವರು ಪದ್ಮಾವತೀದೇವಿಯರಿಂದ ಕೂಡಿಕೊಂಡು

---

1. ಭ.ಪು.ಅ.13

ವೇಂಕಟಾಚಲಕ್ಕೆ ಹೋದರು. ಅಲ್ಲಿ ವರಾಹದೇವರ ಅನುಮತಿಯಿಂದ ಸ್ವಾಮಿ ಪುಷ್ಕರಿಣಿಯ ದಕ್ಷಿಣಭಾಗದಲ್ಲಿ ಮನೆಯನ್ನು ಕಟ್ಟಲಿಕ್ಕೆ ಸ್ಥಳವನ್ನು ತೋರಿಸಿದರು. 'ಈ ಸ್ಥಳದಲ್ಲಿ ಪೂರ್ವಾಭಿಮುಖವಾಗಿ ಮೂರು ಗೋಪುರಗಳಿಂದ ಕೂಡಿದ ಮೂರು ಪ್ರಾಕಾರವುಳ್ಳ, ಏಳು ಬಾಗಿಲುಗಳಿಂದ ಕೂಡಿದ ಹೊಸ್ತಿಲು ತೋರಣಗಳಿಂದ ಕೂಡಿದ ಮನೆಯನ್ನು ಕಟ್ಟಬೇಕು. ಧ್ವಜಸ್ತಂಭಗಳಿಂದ ಯುಕ್ತವಾಗಿರಬೇಕು. ಒಳ್ಳೇ ಲಕ್ಷಣವುಳ್ಳದ್ದಾಗಿರಬೇಕು. ಆಸ್ಥಾನ ಮಂಟಪ, ಯಾಗಮಂಟಪ, ಗೋಶಾಲೆ, ಧಾನ್ಯಶಾಲೆ, ಹೂವಿನ ಮನೆ, ವಸ್ತ್ರಗೃಹ, ತೈಲಶಾಲೆ, ಘೃತಶಾಲೆ, ಭಕ್ಷ್ಯಶಾಲೆ, ಭೂಷಣಗಳ ಶಾಲೆ ಇತ್ಯಾದಿ ಗೃಹಗಳನ್ನು ಕಟ್ಟಿಸು. ಅನ್ನಶಾಲೆಯ ಮುಂಭಾಗದಲ್ಲಿ ಭೂತೀರ್ಥವನ್ನು ಕಲ್ಲುಕಟ್ಟಿಸಿ ಸರಿಮಾಡಿಸು. ಅದು ಪೂರ್ವದಲ್ಲಿ ನಿನ್ನಿಂದಲೇ ರಚಿತವಾದದ್ದು ಎಂದರು.

ಅದಕ್ಕೆ ತೋಂಡಮಾನರಾಜನು 'ನಾನು ಪೂರ್ವದಲ್ಲಿ ಈ ಭಾವಿಯನ್ನು ಯಾವ ಜನ್ಮದಲ್ಲಿ ಮಾಡಿಸಿದೆನು? ನಾನು ಪೂರ್ವದಲ್ಲಿ ಯಾವ ಜಾತಿಯವನಾಗಿದ್ದೆನು? ಅದನ್ನು ಹೇಳಬೇಕು' ಎಂದು ಕೇಳಿಕೊಳ್ಳಲು ಶ್ರೀನಿವಾಸದೇವರು 'ಪೂರ್ವದಲ್ಲಿ ವೈಖಾನಸ ಎಂಬ ಅತ್ಯಂತ ಶುದ್ಧವಾದ ಬುದ್ಧಿಯುಳ್ಳ ಮುನಿಗಳು ಇದ್ದರು. ಅವರು ಉತ್ತರಕಾಲದಲ್ಲಿ ಕೃಷ್ಣಾವತಾರವು ಆಗುವುದೆಂದು ತಿಳಿದು ಕೃಷ್ಣರೂಪವನ್ನು ನೋಡಬೇಕೆಂದು ತಪಸ್ಸು ಮಾಡಿದರು. ಆಗ ಭಗವಂತನು ಗೋಪಾಲರೂಪದಿಂದ ಪ್ರತ್ಯಕ್ಷನಾದನು. ವೈಖಾನಸಮುನಿಗಳು ಸ್ತೋತ್ರ ಮಾಡಿದರು. ನಿನ್ನ ಪೂಜೆಯನ್ನು ಮಾಡುವೆನು ಎಂದರು. ಅದಕ್ಕೆ ಭಗವಂತನು ನೀನು ಶ್ರೀನಿವಾಸನನ್ನು ಧ್ಯಾನಮಾಡಬೇಕು. ನನ್ನನ್ನು ಅಲ್ಲ. ಶೇಷಗಿರಿಗೆ ಹೋಗು. ಅಲ್ಲಿ ಹುತ್ತದಲ್ಲಿ ಶ್ರೀನಿವಾಸದೇವರ ಪ್ರತಿಮೆಯಿದೆ. ಅದಕ್ಕೆ ಪೂಜಾಮಾಡು. ದಾರಿಯಲ್ಲಿ ರಂಗದಾಸನೆಂಬ ಶೂದ್ರನು ಸಿಗುವನು. ಅವನು ನಿನಗೆ ಪೂಜಾ ಮಾಡುವವನಿಗೆ ಸೇವೆಯನ್ನು ಮಾಡುವನು' ಎಂದು ಹೇಳಲು ಆ ಮುನಿಗಳು ಶೇಷಾಚಲಕ್ಕೆ ಬಂದರು. ದಾರಿಯಲ್ಲಿ ಅವರಿಗೆ ಆ ಶೂದ್ರನೂ ಸಿಕ್ಕಿದನು.

ತರುವಾಯ ಆ ಶೂದ್ರನಿಂದ ಸಹಿತರಾಗಿ ಶೇಷಾಚಲಕ್ಕೆ ಹೋಗಿ ಹುತ್ತದಲ್ಲಿ ಇದ್ದ ಶ್ರೀನಿವಾಸದೇವರ ಪ್ರತಿಮೆಯನ್ನು ನೋಡಿ ಪೂಜಾಮಾಡಿದರು. ರಂಗದಾಸನು ನಿತ್ಯವೂ ಹೂವನ್ನು ತಂದುಕೊಡುತ್ತಿದ್ದನು. ಒಂದು ದಿವಸದಲ್ಲಿ ದೈವೇಚ್ಛೆಯಿಂದ ಕುಂಡಲ ಎಂಬ ಗಂಧರ್ವನು ತನ್ನ ಸ್ತ್ರೀಯರಿಂದ ಕೂಡಿಕೊಂಡು ಸ್ನಾನಕ್ಕೋಸ್ಕರ ಬಂದಿದ್ದನು. ವಸಂತಋತುವಿನಲ್ಲಿ ಜನರಿಂದ ರಹಿತವಾದ ಪ್ರದೇಶದಲ್ಲಿ

ಜಲಕ್ರೀಡೆಯನ್ನು ಮಾಡುತ್ತಿದ್ದ ಹೆಂಗಸರನ್ನು ನೋಡಿ ರಂಗದಾಸನಿಗೆ ರೇತಸ್ಸು ಕೆಳಗೆ ಬಿದ್ದಿತು. ಆಮೇಲೆ ರಂಗದಾಸನು ಪಶ್ಚಾತ್ತಾಪವುಳ್ಳವನಾಗಿ ಪುನಃ ಸ್ನಾನವನ್ನು ಮಾಡಿ ಮೊದಲು ಕಟ್ಟಿತಂದ ಹೂವಿನ ಮಾಲೆಗಳನ್ನೆಲ್ಲಾ ಪರಿತ್ಯಾಗ ಮಾಡಿ ಪುನಃ ಬೇರೆ ಪುಷ್ಪಗಳನ್ನು ತಂದು ದೇವರಮನಗೆ ಬಂದು ನಿಂತನು. ಆಗ ವೈಖಾನಸಮುನಿಗಳು 'ಪೂಜೆಯನ್ನು ಮಾಡುವ ಹೊತ್ತು ಮೀರಿಹೋಯಿತು. ಯಾಕೆ ಇಷ್ಟು ಸಾವಕಾಶ ಮಾಡಿದೆ?' ಎಂದು ಕೋಪದಿಂದ ನಿಂದಿಸಿದನು. ಶೂದ್ರನು ಸುಮ್ಮನೆ ಇದ್ದನು. ಆಗ ಭಗವಂತನು ರಂಗದಾಸನೊಡನೆ 'ಮಗ ರಂಗದಾಸ! ಭಯಪಡಬೇಡ. ಎಲ್ಲರೂ ಮಾಯೆಯಿಂದ ಮೋಹಿತರಾಗುವರು. ನೀನು ಪಶ್ಚಾತ್ತಾಪವನ್ನು ಹೊಂದಿರುವೆ. ನೀನು ಈ ಶೂದ್ರದೇಹವನ್ನು ಬಿಡು. ಸುಧರ್ಮರಾಜನ ಮಗನಾದ ತೋಂಡದೇಶಕ್ಕೆ ರಾಜನಾಗು. ತೋಂಡಮಾನನೆಂದು ಕೀರ್ತಿಯನ್ನು ಹೊಂದುವಿ. ನೂರುಜನ ಸ್ತ್ರೀಯರಿಗೆ ಪತಿಯಾಗಿ ನನ್ನಲ್ಲಿಯೇ ಭಕ್ತಿಯುಳ್ಳವನಾಗುವಿ. ಆಮೇಲೆ ಚಕ್ರವರ್ತಿಯಾಗಿ ಸಾಮ್ರಾಜ್ಯವನ್ನು ಅನುಭವಿಸುವಿ. ಅಲ್ಲಿ ಕನ್ಯಾದಾನ ಮಾಡುವ ಪ್ರಸಂಗವು ಬರುವುದು. ಆದುದರಿಂದ ಈ ದೇಹವನ್ನು ಉಪವಾಸದಿಂದ ಇಲ್ಲಿಯೇ ಪ್ರರಿತ್ಯಜಿಸು. ಆಕಾಶರಾಜನಿಗೆ ತಮ್ಮನಾಗಿ ಹುಟ್ಟು' ಎಂದು ಆಜ್ಞಾಪಿಸಿದನು. ಆಗ ನೀನು ತೋಟಕ್ಕಾಗಿ ಆ ಭಾವಿಯನ್ನು ಮಾಡಿಸಿರುವಿ. ಈರೀತಿಯಾಗಿ ನಿನ್ನ ಪೂರ್ವಜನ್ಮದ ಚರಿತ್ರೆಯನ್ನು ಹೇಳಿರುವೆನು' ಎಂದು ಹೇಳಿದರು.

ತೋಂಡಮಾನರಾಜನು ತರುವಾಯ ದೇವರ ಆಜ್ಞೆಯಂತೆ ಮನೆಯನ್ನು ಕಟ್ಟಿಸುವವನಾಗಿ ಶ್ರೀನಿವಾಸದೇವರನ್ನು ನಿಮ್ಮ ಮನೆಗೆ ಬರಬೇಕೆಂದು ಪ್ರಾರ್ಥಿಸಿದನು. ಶ್ರೀನಿವಾಸದೇವರು ನಿನ್ನ ಭಕ್ತಿಯಿಂದ ಸಂತುಷ್ಟನಾಗಿ ಅವಶ್ಯವಾಗಿ ಬರುವೆನೆಂದು ಹೇಳಿಹೊರಟರು. ರಾಜನು ವಾದ್ಯಘೋಷದಿಂದ ಬಹಳ ವೈಭವದಿಂದ ಶ್ರೀನಿವಾಸದೇವರನ್ನು ಪದ್ಮಾವತೀದೇವಿಯರನ್ನು ಮನೆಯೊಳಗೆ ಕರೆದುಕೊಂಡು ಹೋದನು. ತರುವಾಯ ಶ್ರೀನಿವಾಸದೇವರು ಆನಂದಕ್ಕೆ ಕಾರಣವಾದ ಪ್ರಯುಕ್ತ ಆನಂದ ನಿಲಯವೆಂದು ಹೆಸರುಳ್ಳ ತೋಂಡಮಾನರಾಜನು ಮಾಡಿಸಿದ ಮನೆಯಲ್ಲಿ ವಾಸಮಾಡಿದರು. ಪದ್ಮಾವತೀದೇವಿಯರನ್ನು ಎದೆಯಲ್ಲಿ ಧರಿಸಿಕೊಂಡು ಶಂಖಚಕ್ರರಹಿತರಾಗಿ ಒಂದು ಕೈಯನ್ನು ಸೊಂಟದಲ್ಲಿ ಇಟ್ಟುಕೊಂಡು ಬಲಕೈಯಿಂದ ದೇವತೆಗಳಿಂದ ಆರಾಧಿತವಾದ ತನ್ನ ಪಾದಪದ್ಮವನ್ನ ತೋರಿಸುತ್ತಾ ಪ್ರಕಾಶಿಸುವವರಾದರು.



# ಶ್ರೀನಿವಾಸದೇವರ ಬ್ರಹ್ಮೋತ್ಸವವು [1]

ಎಲ್ಲರಿಗೂ ಕ್ಷೇಮವಾಗಲೆಂದು ಬ್ರಹ್ಮದೇವರು ಬಂದು ಶ್ರೀನಿವಾಸದೇವರಿಗೆ ಎರಡು ದೀಪಗಳನ್ನು ಇಟ್ಟರು. ಕಲಿಯುಗವು ಮುಗಿಯುವವರೆಗೂ ಈ ದೀಪವಿರಬೇಕೆಂದು ಹೇಳಿದರು. ಶ್ರೀನಿವಾಸದೇವರು ಯಾವಾಗ ಈ ವಿಮಾನವು ಬೀಳುವುದೋ ಯಾವಾಗ ಈ ದೀಪವು ನಾಶವನ್ನು ಹೊಂದುವುದೋ ಆಗ ನನ್ನ ಅವತಾರವೂ ಮುಗಿಯುವುದು ಎಂದು ಹೇಳಿ 'ಬ್ರಹ್ಮನೇ! ನನಗೆ ಉತ್ಸವವನ್ನು ಮಾಡಿಸು. ಧ್ವಜಾರೋಹಣವನ್ನು ಆರಂಭಿಸಿ ರಥೋತ್ಸವಪರ್ಯಂತ ಉತ್ಸವವನ್ನು ಮಾಡಿಸು. ಬಹುವಿಚಿತ್ರವಾದ ನೈವೇದ್ಯಗಳನ್ನು ವೇದಶಾಸ್ತ್ರಪಾರಂಗತರಾದ ಬ್ರಾಹ್ಮಣರಿಂದ ಮಾಡಿಸು. ಮೂರು ಹೊತ್ತು ನನಗೆ ಮೆರವಣಿಗೆ ಮಾಡಿಸು' ಎಂದು ಹೇಳಿದರು.

ತಂದೆಯ ಮಾತನ್ನು ಕೇಳಿ ಬ್ರಹ್ಮದೇವರು ತೋಂಡಮಾನರಾಜನನ್ನು ಕರೆದು 'ದೇವರಿಗೆ ವಿಚಿತ್ರಗಳಾದ ವಾಹನಗಳನ್ನು ಬೇಗನೆ ಮಾಡಿಸು. ವಿಚಿತ್ರವಾದ ಮರದ ರಥವನ್ನೂ ವಿಶ್ವಕರ್ಮನು ಮಾಡಲಿ. ಛತ್ರ, ಚಾಮರ, ಬೀಸಣಿಗೆ ಎಲ್ಲ ತರಿಸಬೇಕು' ಎಂದು ಹೇಳಿ ವಿಶ್ವಕರ್ಮನನ್ನು ಕರೆದು ರಾಜನ ವಶದಲ್ಲಿ ಬಿಟ್ಟರು. ವಿಶ್ವಕರ್ಮನು ಎಲ್ಲವನ್ನು ಮಾಡಿದನು. ಶ್ರೀನಿವಾಸದೇವರು ಬ್ರಹ್ಮದೇವರಿಂದ ಸಹಿತನಾದ ರಾಜನೊಡನೆ 'ಎಲ್ಲಾ ದೇಶದ ಜನರಿಂದ ಕೂಡಿದ ಉತ್ಸವವೇ ಉತ್ತಮವೆಂದು ಹೇಳುವರು. ಆದುದರಿಂದ ನಾನಾ ದೇಶದ ರಾಜರನ್ನು ಇತರ ಜನರನ್ನು ತರಿಸು' ಎಂದು ಹೇಳಿದರು. ಆಗಲೇ ರಾಜನು ಎಲ್ಲರಿಗೂ ಭೃತ್ಯರನ್ನು ಕಳುಹಿಸಿದನು. ಅಂಗ, ವಂಗ, ಕಳಿಂಗ ಇತ್ಯಾದಿ ನಾನಾ ದೇಶದ ರಾಜರು ಕುಟುಂಬ ಸಹಿತರಾಗಿ ವಾಹನಸಹಿತರಾಗಿ ಬಂದರು. ಕೆಲವರು ವಾಹನಗಳಲ್ಲಿ ಕೂತುಕೊಂಡು ಬಂದರು. ಇನ್ನು ಕೆಲವರು ಆನೆಯ ಮೇಲೆ ಕೂತುಕೊಂಡು, ಕುದುರೆಯ ಮೇಲೆ ಕೂತುಕೊಂಡು, ಮೇನೆಯಲ್ಲಿ ಕೂತುಕೊಂಡು, ಕೆಲವರು ನಡೆದುಕೊಂಡೂ ಬಂದರು. ಚಂಡಾಲ ಯವನರನ್ನು ಬಿಟ್ಟು ಎಲ್ಲಾ ಜಾತಿಯವರೂ ಬಂದಿದ್ದರು. ದಾರಿಯಲ್ಲಿ ಕೆಲವು ಭೋಜನ ಮಾಡಿಕೊಂಡು ಬಂದರು. ಕೆಲವರು ಉಪವಾಸ ದಿಂದ ಬಂದರು. ಕೆಲವರು ಹಾಲು ಕುಡಿಯುತ್ತಾ, ಕೆಲವರು ಧಾರಣಪಾರಣವ್ರತ ಮಾಡುತ್ತಲೂ ಬಂದರು. ಬಂದವರು ಹಣ ವಸ್ತ್ರ ಆಭರಣಗಳನ್ನು ತಮ್ಮ ದೇಹಗಳನ್ನೂ ಶ್ರೀನಿವಾಸದೇವರಿಗೆ ಸಮರ್ಪಿಸಿದರು. ಬ್ರಹ್ಮದೇವರು ಎಲ್ಲಾ

---

1. ಭ.ಪು.ಅ.14

ಮುನಿಗಳನ್ನು, ರಾಜರನ್ನೂ ಕರೆದು ಕನ್ಯಾಮಾಸದಲ್ಲಿ ದ್ವಿತೀಯಾದಿನದಲ್ಲಿ ವೈಖಾನಸಮುನಿಗಳಿಂದ ಧ್ವಜಾರೋಹಣವನ್ನು ಅಂಕುರಾ ರ್ಪಣವನ್ನು ಮಾಡಿಸಿದರು. ರತ್ನಮಯವಾದ ನರವಾಹನವನ್ನು ದೇವರ ಮುಂದೆ ಇಟ್ಟು ಬ್ರಹ್ಮದೇವರು ಶ್ರೀನಿವಾಸದೇವರೊಡನೆ ಈ ಮನುಷ್ಯವಾಹನವನ್ನು ಏರಿ ಗ್ರಾಮಪ್ರದಕ್ಷಿಣೆ ಬರಬೇಕೆಂದು ಹೇಳಿದರು.

ತರುವಾಯ ಶ್ರೀನಿವಾಸದೇವರು ಬ್ರಹ್ಮದೇವರೊಡನೆ ವೇದಗಳಲ್ಲಿ ಪರೀಕ್ಷೆಕೊಡು ಎಂದರು. ಆಗ ಭಗವಂತನ ಪ್ರೀತಿಗಾಗಿ ಬ್ರಹ್ಮದೇವರು ಸ್ವಲ್ಪ ತಪ್ಪಿದಂತೆ ಮಾಡಿದರು. ದೇವರು ಅದನ್ನು ಸರಿಪಡಿಸಿದರು. ಆಮೇಲೆ ಬ್ರಹ್ಮದೇವರು ಶ್ರೀನಿವಾಸದೇವರ ಆಜ್ಞೆಯಿಂದ ವೇದ ಮಂತ್ರಗಳಿಂದ ಶ್ರೀನಿವಾಸದೇವರ ನಾಲ್ಕು ಪ್ರತಿಮೆಗಳನ್ನು ಮಾಡಿಸಿದರು. (1)ಉತ್ಸವಶ್ರೀನಿವಾಸದೇವರು, (2)ಉಗ್ರಶ್ರೀನಿವಾಸ ದೇವರು, (3)ಸರ್ವಾಧಿಕ ಶ್ರೀನಿವಾಸದೇವರು, (4)ಲೇಖಕ ಶ್ರೀನಿವಾಸದೇವರು ಎಂದು ನಾಲ್ಕು ಪ್ರತಿಮೆಗಳು. ಈ ನಾಲ್ಕು ಪ್ರತಿಮೆಗಳಿಗೂ ಮೂಲಮೂರ್ತಿಯೊಂದು ಇದ್ದಿತು. ಆವಾವ ಮೂರ್ತಿಗಳಲ್ಲಿರುವ ಭಗವದ್ರೂಪಗಳಿಗೆ ಶ್ರೀನಿವಾಸದೇವರೇ ಕಾರ್ಯಗಳನ್ನು ಹೇಳಿದರು. ಬ್ರಹ್ಮದೇವರು ತನ್ನ ನಾಲ್ಕು ಮುಖಗಳಲ್ಲಿ ನಾಲ್ಕುರೂಪಗಳನ್ನು ಮನಸ್ಸಿನಲ್ಲಿ ಒಂದು ಭಗವದ್ರೂಪವನ್ನು ಧರಿಸಿದರು.

ಉತ್ಸವ ಶ್ರೀನಿವಾಸದೇವರು ಪ್ರತಿಮೆಯಿಂದ ಉತ್ಸವಯಾತ್ರೆಯನ್ನು ಮಾಡಿಸಿದರು. ಬ್ರಹ್ಮೋತ್ಸವದಲ್ಲಿ ಬ್ರಹ್ಮದೇವರು ಗುಡಾನ್ನ, ತಿಲಾನ್ನ, ಹಾಲಿನ ಪಾಯಸ, ಹುಗ್ಗಿ , ಮಾಷಾನ್ನ, ಮೊಸರನ್ನ, ಅಪ್ಪ, ಬೆಲ್ಲದ ಅಪ್ಪ, ಎಳ್ಳಿನ ಅಪ್ಪ, ಉದ್ದಿನ ಅಪ್ಪ, ಮೋದಕ, ದೋಸೆ ಇತ್ಯಾದಿ ನಾನಾ ವಿಧಗಳಾದ ನೈವೇದ್ಯಗಳನ್ನು ಮಾಡಿಸಿದರು. ಬ್ರಹ್ಮದೇವರು ಶ್ರೀನಿವಾಸದೇವರಿಗೆ ಉತ್ಸವವನ್ನು ಮಾಡಿಸಿದರು.

ಧ್ವಜಾರೋಹಣದಿನದ ಪೂರ್ವದಿವಸದಲ್ಲಿ ಸಾಯಂಕಾಲದಲ್ಲಿ ಶೇಷ ಗರುಡಾದಿಗಳೂ ಬ್ರಹ್ಮದೇವರೇ ಮೊದಲಾದ ದೇವತೆಗಳೂ ಋಷಿಗಳೂ ವಿಷ್ವಕ್ಸೇನನೇ ಮೊದಲಾದವರೂ ಊರಿನ ಹೊರಗೆ ಹೋಗಿ ಮಂತ್ರಪೂರ್ವಕವಾಗಿ ಹುತ್ತದ ಮಣ್ಣನ್ನು ತೋಡಿ ತೆಗೆದು ಆನೆಯ ತಲೆಯ ಮೇಲೆ ಇಟ್ಟು ಸರ್ವಮಂಗಲ ಘೋಷದಿಂದ ಸಂಭ್ರಮದಿಂದ ಪ್ರದಕ್ಷಿಣೆಯಾಗಿ ತಂದು ಸಂತೋಷದಿಂದ ಅಂಕುರಾರ್ಪಣವನ್ನು ಮಾಡಿದರು.

ಮರುದಿನ ಧ್ವಜಾರೋಹಣ ಉತ್ಸವವನ್ನು ಆರಂಭಿಸಿ ಅವಭೃತ ಪುಷ್ಪಯಾಗ ಪರ್ಯಂತವಾದ ಉತ್ಸವವನ್ನು ಮಾಡಿಸಿದರು. ಆ ಮಹೋತ್ಸವದಲ್ಲಿ

ಧ್ವಜಾರೋಹಣದಿವಸದಲ್ಲಿ ಮೊದಲು ಮನುಷ್ಯರೇ ಹೊತ್ತುಕೊಂಡು ಬಂದದ್ದು. ರಾತ್ರಿಯಲ್ಲಿ ಶೇಷವಾಹನದಲ್ಲಿ ದೇವರನ್ನು ತಂದರು. ಎರಡನೇ ದಿವಸದಲ್ಲಿಯೂ ಮೊದಲು ಶೇಷವಾಹನವು ರಾತ್ರಿಯಲ್ಲಿ ಹಂಸವಾಹನವು

ಮೂರನೇ ದಿವಸದಲ್ಲಿ ಮೊದಲಿನದ್ದು ಸಿಂಹವಾಹನವು, ರಾತ್ರಿಯಲ್ಲಿ ಮುತ್ತಿನಮಂಟಪವು.

ನಾಲ್ಕನೇ ದಿನ ಮೊದಲಿದ್ದು ಕಲ್ಪವೃಕ್ಷವಾಹನವು. ರಾತ್ರಿಯಲ್ಲಿ ಭೂಪಾಲ ವಾಹನವು.

ಐದನೇ ದಿನದಲ್ಲಿ ಮೊದಲಿನದ್ದು ಊಂಜಲುವಾಹನವು. ರಾತ್ರಿ ಗರುಡವಾಹನವು.

ಆರನೇ ದಿನದಲ್ಲಿ ಮೊದಲು ಹನುಮದ್ವಾಹನವು. ರಾತ್ರಿಯಲ್ಲಿ ಮಂಗಲಗಿರಿ ವಾಹನವು. ಮೂರನೆಯದಾಗಿ ರಾತ್ರಿಯಲ್ಲಿ ಐರಾವತವಾಹನವು.

ಏಳನೇ ದಿನ ಮೊದಲಿನದ್ದು ಸೂರ್ಯ ಮಂಡಲವಾಹನವು. ಸಾಯಂಕಾಲ ದಲ್ಲಿ ಮಂಗಲಗಿರಿವಾಹನವು. ರಾತ್ರಿಯಲ್ಲಿ ಚಂದ್ರಮಂಡಲವಾಹನವು.

ಎಂಟನೇದಿನ ಮೊದಲು ನಾನಾ ವಿಧವಾಗಿ ಆಲಂಕೃತ ವಾದ ರಥವೇ ವಾಹನವು. ಎರಡನೆಯದಾಗಿ ರಾತ್ರಿಯಲ್ಲಿ ಕುದುರೆವಾಹನವು.

ಒಂಬತ್ತನೇ ದಿನ ಮೊದಲು ಊಂಜಲುವಾಹನ. ಎರಡನೆಯದ್ದು ಮಂಗಲಗಿರಿ ಅರಸಿನಪುಡಿ ಇತ್ಯಾದಿಗಳಿಂದ ದೇವರಿಗೆ ಅಭಿಷೇಕಮಾಡಿದರು.

ಮಂದರಗಿರಿಯಲ್ಲಿ ಏರಿಕೊಂಡು ದೇವರು ಮಹಾಜನರಿಂದ ಕೂಡಿಕೊಂಡು ವಾದ್ಯಘೋಷದಿಂದ ಮಹಾವೈಭವದಿಂದ ಗ್ರಾಮಪ್ರದಕ್ಷಿಣೆ ಬಂದು ಸ್ವಾಮಿ ಪುಷ್ಕರಿಣಿಯಲ್ಲಿ ಅವಭೃತ ಸ್ನಾನವಾಯಿತು. ಆದಿವಸವೇ ದೇವರ ಅವತಾರನಕ್ಷತ್ರ ಶ್ರವಣವಾಗಿತ್ತು. ಆದಿನ ರಾತ್ರಿಯೂ ಮಂಗಲಗಿರಿವಾಹನವು ಧ್ವಜಾವರೋಹಣ ರೂಪ ಉತ್ಸವವೂ ಆಗ ಆಗಿತ್ತು.

ಮರುದಿವಸದಲ್ಲಿ ಪುಷ್ಪಯಾಗಮಹೋತ್ಸವವು ನಡೆಯಿತು. ದೇಶಾಂತರದಿಂದ ಬಂದವರೆಲ್ಲಾ ಸತ್ಕಾರವು ನಡೆಯಿತು. ದೇವತೆಗಳೆಲ್ಲರೂ ತಮ್ಮ ಲೋಕಗಳಿಗೆ ಹೋದರು. ರಾಜರೆಲ್ಲರೂ ದಿವ್ಯವಾದ ಈ ಉತ್ಸವವನ್ನು ನೋಡಿ ತಮ್ಮ ರಾಜ್ಯಕ್ಕೆ ಹೊರಟುಹೋದರು. ಬ್ರಹ್ಮದೇವರು ಶ್ರೀನಿವಾಸದೇವರಿಗೆ ನಮಸ್ಕರಿಸಿ ತನ್ನ ಲೋಕಕ್ಕೆ ಹೋದರು. ತೋಂಡಮಾನರಾಜನು ಉತ್ಸವವನ್ನು ಮುಗಿಸಿ ಶ್ರೀನಿವಾಸ

ದೇವರಿಗೆ ನಮಸ್ಕರಿಸಿ ಅವರ ಆಜ್ಞೆಯನ್ನು ಪಡೆದು ತನ್ನ ಊರಿಗೆ ಹೋಗಿ ತನ್ನ ಮನೆಯಲ್ಲಿ ಶ್ರೀನಿವಾಸದೇವರ ಪ್ರತಿಮೆಯನ್ನು ಸ್ಥಾಪನೆಮಾಡಿ ಪೂಜಿಸುತ್ತಾ ರಾಜ್ಯಭಾರ ಮಾಡುತ್ತಾ ಇದ್ದನು. ಬಲಮಾರ್ಗದಿಂದ ಬಂದು ನಿತ್ಯವೂ ಶ್ರೀನಿವಾಸದೇವರನ್ನು ಆರಾಧಿಸುತ್ತಿದ್ದನು.



## ಕೂರ್ಮಬ್ರಾಹ್ಮಣನ ಕಥೆ[1]

ಒಂದು ಕಾರ್ತಿಕಮಾಸದಲ್ಲಿ ದೈವೇಚ್ಛೆಯಿಂದ ವಸಿಷ್ಠಗೋತ್ರದ ಕೂರ್ಮ ಎಂಬ ಬ್ರಾಹ್ಮಣನು ತಂದೆಯ ಅಸ್ಥಿಯನ್ನು (ಎಲುಬನ್ನು) ಹಿಡಿದುಕೊಂಡು ಗಂಗಾಸ್ನಾನ ಮಾಡಬೇಕೆಂದು ಬಂದನು. ಅವನು ತೋಂಡಮಾನರಾಜನ ನಗರಕ್ಕೆ ಬಂದವನಾಗಿ ತೋಂಡಮಾನರಾಜನ ಕೀರ್ತಿಯನ್ನು ಕೇಳಿದನು. ತನ್ನ ಮಗನಾದ ರಾಘವ ಎನ್ನುವವನನ್ನು ಮಹಾಲಕ್ಷ್ಮಿಯೆಂಬ ಹೆಸರುಳ್ಳ ಹೆಂಡತಿಯನ್ನು ಊರಹೊರಗೆ ನಿಲ್ಲಿಸಿ ತಾನು ಮಾತ್ರ ರಾಜನ ದರ್ಶನಕ್ಕೆ ಹೋದನು. ಸಿಂಹಾಸನದಲ್ಲಿ ಕೂತಿದ್ದ ತೋಂಡಮಾನರಾಜನನ್ನು ನೋಡಿ ಅವನಿಗೆ ಆಶೀರ್ವದಿಸಿ ಸ್ತೋತ್ರಮಾಡಿ ಅವನೊಡನೆ 'ರಾಜನೇ! ಬಹುಜನರ ಮುಖದಿಂದ ನಿನ್ನ ಕೀರ್ತಿಯನ್ನು ಕೇಳಿದೆನು. ಅದನ್ನು ಕೇಳಿ ನಿನ್ನ ಸಮೀಪಕ್ಕೆ ಈಗ ಬಂದಿರುವೆನು' ಎಂದು ಹೇಳಿದನು. ಬ್ರಾಹ್ಮಣನ ಮಾತನ್ನು ಕೇಳಿ ತೋಂಡಮಾನರಾಜನು ಬ್ರಾಹ್ಮಣನನ್ನು ಪೂಜಿಸಿ ತಾವು ಬಂದಿರುವ ಕಾರ್ಯವನ್ನು ತಿಳಿಸಬೇಕೆಂದು ಕೇಳಿಕೊಂಡನು. ಅದಕ್ಕೆ ಕೂರ್ಮ ಎಂಬ ಆ ಬ್ರಾಹ್ಮಣನು 'ನನ್ನ ತಂದೆಯು ಮೃತರಾದರು. ಅವರ ಅಸ್ಥಿಯನ್ನು ಹಿಡಿದುಕೊಂಡು ಗಂಗಾಸ್ನಾನ ಮಾಡುವುದಕ್ಕಾಗಿ ಕಾಶಿಗೆ ಹೋಗುತ್ತಿದ್ದೇನೆ. ದೈವೇಚ್ಛೆಯಿಂದ ಪತಿವ್ರತೆಯಾದ ನನ್ನ ಹೆಂಡತಿಯು ಗರ್ಭಿಣಿಯಾಗಿರುವಳು. ನನ್ನ ಐದು ವರ್ಷದ ಮಗನೂ ಕೂಡ ನನ್ನೊಡನೆ ನಡೆದುಕೊಂಡು ಬರಲು ಶಕ್ತನಲ್ಲ. ಆದುದರಿಂದ ಅವರಿಬ್ಬರನ್ನು ನೀನು ರಕ್ಷಿಸುತ್ತಿರಬೇಕು. ಗರ್ಭಿಣಿಯಾದ ಹೆಂಡತಿಯನ್ನೂ ಕರೆದುಕೊಂಡು ಹೋಗಲು ಸಾಧ್ಯವಾಗಲಾರದಿದೆ. ಹೆಂಗಸು ಗಂಡನ ಮನೆಯಲ್ಲಿ ನ್ಯಾಯವಾಗಿಯೂ ಇರಬೇಕಾದದ್ದು. ಅಥವಾ ತಂದೆಯ ಮನೆಯಲ್ಲಿ ಇರಬೇಕು. ಅಥವಾ ಸಹೋದರಿಯ ಮನೆಯಲ್ಲಿ ಇರಬೇಕು. ಅಥವಾ ಸೋದರಮಾವನ

1. ಭ.ಪು.ಅ.14

ಮನೆಯಲ್ಲಿ ಇರಬೇಕು. ಅಥವಾ ರಾಜನ ಮನೆಯಲ್ಲಿ ಇರಬೇಕು. ಆದುದರಿಂದ ನೀನು ನನ್ನ ಮಗನನ್ನು ಗರ್ಭಿಣಿಯಾದ ಹೆಂಡತಿಯನ್ನು ರಕ್ಷಿಸುವವನಾಗು' ಎಂದು ಹೇಳಿದರು.

ತೋಂಡಮಾನರಾಜನು ಹಾಗೆಯೇ ಆಗಲಿ ಎಂದು ಒಪ್ಪಿಕೊಂಡನು. ಬ್ರಾಹ್ಮಣನಿಗೆ ಬೇಕಾದಷ್ಟು ಹಣವನ್ನು ಕೊಟ್ಟನು. ಬ್ರಾಹ್ಮಣನು ಪತ್ನೀಪುತ್ರರನ್ನು ರಾಜನ ಬಳಿಯಲ್ಲಿ ಬಿಟ್ಟು ಕಣ್ಣುಗಳಲ್ಲಿ ನೀರನ್ನು ತುಂಬಿಸಿಕೊಂಡು ಕಣ್ಣೀರನ್ನು ಧರಿಸಿರುವ ಹೆಂಡತಿಯೊಡನೆ 'ಪ್ರಿಯೆ! ನಾನು ಗಂಗೆಗೆ ಹೋಗುವೆನು. ನೀನು ಅಳಬೇಡ. ಮಗುವನ್ನು ನೋಡಿಕೊಂಡಿರು' ಎಂದು ಹೇಳಿದನು. ಆದಕ್ಕೆ ಅವಳು ಗಂಡನ ಮುಖವನ್ನು ನೋಡುತ್ತಾ ದುಃಖವುಳ್ಳವಳಾಗಿ 'ನೀವು ಬೇಗನೆ ಗಂಗಾಸ್ನಾನವನ್ನು ಮುಗಿಸಿಕೊಂಡು ಬನ್ನಿರಿ. ನಿಮ್ಮ ಮಗನು ಯಾವಾಗಲೂ ನಿಮ್ಮನ್ನೇ ಕೇಳುತ್ತಾ ಇರುವನು' ಎಂದು ಹೇಳಿದಳು. ಈರೀತಿಯಾಗಿ ಹೇಳಿದ ಪತ್ನಿಯನ್ನು ನೋಡುತ್ತಾ ಮಗನನ್ನು ಆಲಿಂಗನಮಾಡಿ ಕಣ್ಣೀರನ್ನು ಒರಸಿ ಮಗನನ್ನು ಸಮಾಧಾನಮಾಡಿ ಹೊರಟುಹೋದನು.

ತರುವಾಯ ತೋಂಡಮಾನರಾಜನು 'ಲೋಕದಲ್ಲಿ ಒಳ್ಳೇ ಪುರುಷರೂ ಇರುವರು. ಕೆಟ್ಟ ಪುರುಷರೂ ಇರುವರು. ಆದುದರಿಂದ ನಾನು ಬ್ರಾಹ್ಮಣಪತ್ನಿಯನ್ನು ಜಾಗ್ರತೆಯಿಂದ ಕಾಪಾಡಬೇಕು' ಎಂದು ಯೋಚಿಸಿ ಏಕಾಂತದಲ್ಲಿ ಒಂದು ಮನೆಯನ್ನು ಮಾಡಿಸಿ, ಆ ಮನೆಯೊಳಗೆ ಆ ಬ್ರಾಹ್ಮಣನ ಪತ್ನೀಪುತ್ರರನ್ನು ಇಟ್ಟು ಅವರಿಗೆ ಆರು ತಿಂಗಳುಗಳಿಗೆ ಸಾಕಾಗುವಷ್ಟು ಅಕ್ಕಿಬೇಳೆ ಮೊದಲಾದ ಎಲ್ಲಾ ಪದಾರ್ಥಗಳನ್ನು ಇಟ್ಟು ಬಾಗಿಲಿಗೆ ಬೀಗ ಹಾಕಿ ನೋಡಿಕೊಳ್ಳಲಿಕ್ಕೆ ಭೃತ್ಯರನ್ನು ಇಟ್ಟನು. ದುಷ್ಟರ ಪುರುಷರ ಕಣ್ಣಿಗೇ ಅವಳು ಬೀಳಬಾರದು ಎಂದು ರಾಜನ ಅಭಿಪ್ರಾಯವಾಗಿತ್ತು.

ತರುವಾಯ ರಾಜನು ರಾಜ್ಯಭಾರದಲ್ಲಿ ಆಸಕ್ತನಾಗಿ ಈ ವಿಷಯವನ್ನೇ ಮರೆತುಬಿಟ್ಟನು. ಎರಡು ವರ್ಷವಾದ ಮೇಲೆ ಆ ಬ್ರಾಹ್ಮಣನು ಗಂಗಾಸ್ನಾನವನ್ನು ತೀರಿಸಿಕೊಂಡು ತಂದೆಗೆ ಗಯೆಯಲ್ಲಿ ಶ್ರಾದ್ಧವನ್ನು ಮಾಡಿ ಪಾತ್ರೆಯಲ್ಲಿ ಗಂಗಾಜಲವನ್ನು ಹಿಡಿದುಕೊಂಡು ತೋಂಡಮಾನನ ನಗರಕ್ಕೆ ಬಂದು ರಾಜನ ಮನೆಗೆ ಪ್ರವೇಶಿಸಿ ರಾಜನೊಡನೆ 'ರಾಜೇಂದ್ರ! ದೀರ್ಘಾಯುಷ್ಯವುಳ್ಳವನಾಗು. ಪುತ್ರವಂತನಾಗು. ಜ್ಞಾನವಂತನಾಗು. ನಿನ್ನ ಅನುಗ್ರಹದಿಂದ ಗಂಗಾಸ್ನಾನವಾಯಿತು. ಗಂಗಾಜಲವನ್ನು ತಂದಿದ್ದೇನೆ. ನೀನೂ ಗಂಗಾಸ್ನಾನವನ್ನು ಮಾಡು' ಎಂದು

ಹೇಳಿದನು. ಈರೀತಿಯಾಗಿ ಹೇಳಲು ರಾಜನು ತಾನು ಬ್ರಾಹ್ಮಣಸ್ತ್ರೀಯನ್ನು ಮನೆಯೊಳಗೆ ಇಟ್ಟು ಬೀಗಹಾಕಿದ್ದನ್ನು ಜ್ಞಾಪಿಸಿಕೊಂಡನು. ಕೋಲಿನಿಂದ ಬಡೆಯಲ್ಪಟ್ಟ ಹಾಲಿನಂತೆ ಏನು ಮಾಡಬೇಕೆಂದೂ ತೋರಲಿಲ್ಲ. ಸೈಂಧವನಿಂದ ಸೈನಿಕರೆಲ್ಲಾ ತಡೆಯಲ್ಪಟ್ಟು ವ್ಯೂಹದ ಒಳಗೆ ಮೃತನಾದ ಅಭಿಮನ್ಯುವನ್ನು ಕೇಳಿ ಅರ್ಜುನನ ಮನಸ್ಸು ಹೇಗೆ ಆಯಿತೋ, ರಾಮದೇವರ ಬಾಣದಿಂದ ಬಡೆಯಲ್ಪಟ್ಟ ರಾವಣನ ಮನಸ್ಸು ಹೇಗೆ ಆಯಿತೋ, ಹಾಗೆಯೇ ತೋಂಡಮಾನನ ಮನಸ್ಸು ನಡುಗಿಹೋಯಿತು. ಆದರೂ ಧೈರ್ಯದಿಂದ ಮನಸ್ಸನ್ನು ಸರಿಮಾಡಿಕೊಂಡನು.

ಆಗ ಬ್ರಾಹ್ಮಣನು ಸ್ವಲ್ಪ ದುಃಖವುಳ್ಳವನಾಗಿ 'ಮಹಾರಾಜನೇ! ಗರ್ಭಿಣಿಯಾದ ನನ್ನ ಹೆಂಡತಿಯು ಗಂಡು ಕೂಸನ್ನು ಹಡೆದಳೋ ಹೆಣ್ಣುಕೂಸನ್ನು ಹಡೆದಳೋ? ಅವರ ವೃತ್ತಾಂತವೇ ತಿಳಿಯಲಿಲ್ಲವಲ್ಲಾ! ನನ್ನ ಮಗನು ತುಂಬಾ ದುಷ್ಟನು. ಯಾವಾಗಲೂ ಆಡುವುದರಲ್ಲೇ ಆಸಕ್ತನಾಗಿರುವವನು. ಅವನು ಎಲ್ಲಿಯಾದರೂ ಸರೋವರ ದಲ್ಲಿಯೋ ಬಾವಿಯಲ್ಲೋ ಬಿದ್ದುಬಿಟ್ಟನೋ? ನನ್ನ ಮನಸ್ಸಿಗೇನೋ ತುಂಬಾ ಕಷ್ಟವಾಗುತ್ತದಲ್ಲಾ! ನನ್ನ ಹೆಂಡತಿಯೂ ಕೂಡ ಬಂದಿರುವ ನನ್ನನ್ನು ನೋಡಲಿಕ್ಕೆ ಯಾಕೆ ಬರಲಿಲ್ಲ? ರಾತ್ರಿಹಗಲೂ ಮಗನನ್ನೂ ಗರ್ಭಿಣಿಯಾದ ಪತ್ನಿಯನ್ನೂ ಯೋಚನೆ ಮಾಡುತ್ತಿರುವೆನು' ಎಂದು ಹೇಳಿದನು.

ಬ್ರಾಹ್ಮಣನ ಮಾತನ್ನು ಕೇಳಿ ರಾಜನು ದೈರ್ಯದಿಂದ 'ಬ್ರಾಹ್ಮಣಶ್ರೇಷ್ಠರೇ! ಭಯಪಡಬೇಡಿರಿ. ನಿಮ್ಮ ಪತ್ನಿಯು ಕ್ಷೇಮದಿಂದ ಹಡೆದಿರುವಳು. ಮಗಳಿನಿಂದಲೂ ಮಗನಿಂದಲೂ ಸಹಿತಳಾಗಿ ಕ್ಷೇಮದಿಂದ ಇದ್ದಾಳೆ. ನಿಮ್ಮ ಹೆಂಡತಿಯೂ ಮಗನೂ ನಿನ್ನೆ ಶುಕ್ರವಾರದಲ್ಲಿ ಎಲ್ಲಾ ಹೆಂಗಸರೊಡನೆ ಶ್ರೀನಿವಾಸದೇವರ ಅಭಿಷೇಕವನ್ನು ನೋಡಲಿಕ್ಕೆ ಹೋಗಿರುವರು. ಈದಿನವೋ ಅಥವಾ ನಾಳೆಯೋ ಅಥವಾ ನಾಡದೋ ಬರಬಹುದು'. ಈರೀತಿಯಾಗಿ ಹೇಳಿ ಆ ಬ್ರಾಹ್ಮಣನನ್ನು ಸಮಾಧಾನ ಪಡಿಸಿ ಮರೆಯಾಗಿ ಮಗನೊಡನೆ 'ಮಗ! ಈ ಬ್ರಾಹ್ಮಣರ ಪತ್ನಿಯನ್ನು ಇಟ್ಟಿರುವ ಮನೆಗೆ ಹೋಗಿ ಬಾಗಿಲು ತೆಗೆದುನೋಡಿ ಬಾ. ಬ್ರಾಹ್ಮಣಪತ್ನಿಯನ್ನೂ ಮಗನನ್ನೂ ಕರೆದುಕೊಂಡು ಬಾ' ಎಂದು ಹೇಳಿದನು. ಮಗನು ತಂದೆಯ ಮಾತನ್ನು ಕೇಳಿ ವಾಯುವೇಗದಿಂದ ಹೋಗಿ ಬಾಗಿಲು ತೆರೆದು ನೋಡುವಾಗ ಅವರ ಎಲುಬು ಗಳನ್ನು ಮಾತ್ರ ನೋಡಿದನು. ನಿಶ್ಚಯವಾಗಿಯೂ ನಮ್ಮ ವಂಶವೇ ನಾಶವನ್ನು ಹೊಂದುವುದು ಎಂದು ಯೋಚಿಸುತ್ತಾ ಅಳುತ್ತಾ ತಂದೆಯ ಬಳಿಗೆ ಬಂದು 'ತಂದೆಯೇ! ನಮ್ಮ ವಂಶವು ನಾಶವನ್ನು ಹೊಂದುವ ಕಾಲವು ಸಮೀಪಿಸಿತು. ಆ

ಗರ್ಭಿಣಿಯಾದ ಬ್ರಾಹ್ಮಣಸ್ತ್ರೀಯೂ ಅವಳ ಮಗನೂ ಅವರಿಗೆ ನಾವು ಅನ್ನಾದಿಗಳನ್ನು ವಿಚಾರಿಸಿಕೊಡದೆ ಇರುವ ಕಾರಣ ಮೃತರಾಗಿದ್ದಾರೆ. ಅವರ ಎಲುಬು ಮಾತ್ರ ಬಿದ್ದಿದೆ' ಎಂದು ಹೇಳಿದನು. ಅದನ್ನು ಕೇಳಿ ತೋಂಡಮಾನರಾಜನು ಧೈರ್ಯವನ್ನು ಮಾಡಿಕೊಂಡು ಬ್ರಾಹ್ಮಣನಿಗೆ ಅಡಿಗೆ ಮಾಡಿಕೊಳ್ಳಲಿಕ್ಕೆ ಅಕ್ಕಿಬೇಳೆ ಮೊದಲಾದವನ್ನು ಕೊಡಿಸಿ ಕಳುಹಿಸಿದನು. ಆಬ್ರಾಹ್ಮಣನು ಹೊರಟುಹೋದ ಮೇಲೆ ತೋಂಡಮಾನ ರಾಜನು ಮಗನಿಂದ ಸಹಿತನಾಗಿ ವೇಂಕಟಾಚಲಕ್ಕೆ ಹೋದನು. ಶ್ರೀನಿವಾಸದೇವರ ಎರಡು ಕಾಲುಗಳನ್ನು ಹಿಡಿದುಕೊಂಡು ಅಳುವವನಾದನು.

ಆಗ ಶ್ರೀನಿವಾಸದೇವರು 'ರಾಜನೇ! ಅಕಾಲದಲ್ಲಿ ಹೀಗೆ ಏಕೆ ಬಂದಿರುವೆ? ಮಹಾಪರಾಕ್ರಮಶಾಲಿಯೆಂದು ಭೂಮಿಯಲ್ಲಿ ಪ್ರಸಿದ್ಧನಾಗಿರುವ ನೀನು ಹೀಗೇಕೆ ಅಳುತ್ತಿರುವೆ?' ಎಂದು ಕೇಳಿದರು. ಆದರೆ ರಾಜನು ಒಂದು ಮಾತನ್ನೂ ಆಡಲೇ ಇಲ್ಲ. ಶ್ರೀನಿವಾಸದೇವರು ಅವನ ಮನಸ್ಸಿನ ಅಭಿಪ್ರಾಯವನ್ನು ತಿಳಿದವರು 'ರಾಜನೇ! ನಿನ್ನ ಅಭಿಪ್ರಾಯವನ್ನು ತಿಳಿದೆನು. ನೀನು ಮಾಡಿದ ಪಾಪ ನಾನೇ ಮಾಡಿದಂತಾಯಿತು. ಪಾಪಿಯೇ! ಹೊರಟುಹೋಗು. ನಿನ್ನಿಂದಾಗಿ ನಾನೇ ಪಾಪಮಾಡಿದಂತೆ ಆಯಿತು. ಭಕ್ತರಿಗೆ ನಾನು ದುಷ್ಟ ಐಶ್ವರ್ಯವನ್ನು ಕೊಡಬಾರದು. ದಾರಿದ್ರ್ಯವನ್ನೇ ಕೊಡಬೇಕು. ನಿನಗೆ ಐಶ್ವರ್ಯವನ್ನು ಕೊಟ್ಟದ್ದೇ ತಪ್ಪಾಯಿತು. ನೀನು ನನ್ನಲ್ಲಿ ಭಕ್ತಿಯನ್ನು ಮಾಡುತ್ತಿರುವಿ. ನೀನು ಮಹಾಪಾಪವನ್ನು ಮಾಡಿರುವಿ. ಆದರೂ ನಿನ್ನ ಮೇಲಿನ ಪ್ರೇಮದಿಂದ ಮೃತರಾದವರನ್ನು ಬದುಕಿಸುವೆನು. ಅವರ ಎಲುಬನ್ನು ತರಲಿಕ್ಕೆ ನಿನ್ನ ಮಗನನ್ನು ಕಳುಹಿಸು' ಎಂದು ಹೇಳಿದರು. ತೋಂಡಮಾನರಾಜನು ಕೂಡಲೇ ತನ್ನ ಮಗನನ್ನು ಕಳುಹಿಸಿದನು. ಅವನು ಅತಿವೇಗದಿಂದ ಹೋಗಿ ಎಲುಬುಗಳನ್ನೆಲ್ಲಾ ವಸ್ತ್ರದಲ್ಲಿ ಕಟ್ಟಿ ಮೇನೆಯಲ್ಲಿ ಇಟ್ಟು ವೇಂಕಟಾಚಲಕ್ಕೆ ಬಂದು ಎಲುಬುಗಳನ್ನು ತಂದಿರುವೆನೆಂದು ತಂದೆಯ ಹತ್ತಿರ ಹೇಳಿದನು. ರಾಜನು ಶ್ರೀನಿವಾಸದೇವರೊಡನೆ ನನ್ನ ಮಗನು ಎಲುಬುಗಳನ್ನು ತಂದಿರುವನೆಂದು ಹೇಳಿದನು. ಭಗವಂತನೇ! ಅವರನ್ನು ಬದುಕಿಸಬೇಕು ಎಂದನು.

ಶ್ರೀನಿವಾಸದೇವರು ಆ ಎಲುಬುಗಳನ್ನು ತೆಗೆದುಕೊಂಡು ತಾನು ಹೊದ್ದುಕೊಂಡ ವಸ್ತ್ರದಲ್ಲಿ ಕಟ್ಟಿದರು. ಸ್ವಾಮಿ ಪುಷ್ಕರಿಣಿಯ ಪೂರ್ವದಿಕ್ಕಿನಲ್ಲಿರುವ ಪಾಂಡುತೀರ್ಥದ ಬಳಿಗೆ ಹೋದರು. ತೋಂಡಮಾನ ರಾಜನನ್ನು ಅವನ ಮಗನನ್ನು ಅಲ್ಲಿಯೇ ನಿಲ್ಲಿಸಿ ಸ್ವಲ್ಪದೂರವಿರುವ. ಒಂದು ತೀರ್ಥಕ್ಕೆ ಹೋದರು. ಆತೀರ್ಥದಲ್ಲಿ ಕುತ್ತಿಗೆಯವರೆಗೆ ಮುಳುಗಿದರು. ಆ ತೀರ್ಥದ ಬಳಿಯಲ್ಲಿ ಕಲ್ಲಿನ

ಮೇಲೆ ಆ ಎಲುಬುಗಳನ್ನು ಇಟ್ಟು ತನ್ನ ಅಂಜಲಿಯಿಂದ ನೀರನ್ನು ಹಾಕಿ ಮುಟ್ಟಿದರು. ಆಗ ಎಲುಬುಗಳಲ್ಲಿ ಜೀವವು ಬಂದಿತು. ಈರೀತಿಯಾಗಿ ಭಗವಂತನ ಹಸ್ತದ ಸ್ಪರ್ಶದಿಂದ ಬ್ರಾಹ್ಮಣನ ಪತ್ನೀಪುತ್ರರು ಬದುಕಿದರು. ಆಗ ಇಂದ್ರಾದಿದೇವತೆಗಳು ಪುಷ್ಪದ ಮಳೆಯನ್ನು ಸುರಿಸಿದರು. ಆ ತೀರ್ಥದ ಮಹಿಮೆಗೂ ಆಶ್ಚರ್ಯವನ್ನು ಹೊಂದಿದರು. ಆ ತೀರ್ಥದ ಪ್ರಭಾವದಿಂದ ಮೃತರು ಬದುಕಿದ ಕಾರಣ ಆ ತೀರ್ಥಕ್ಕೆ ಅಸ್ಥಿತೀರ್ಥವೆಂದು ಹೆಸರಿಟ್ಟರು. ಯಾರ ಎಲುಬು ಈ ತೀರ್ಥದಲ್ಲಿ ಬೀಳುವುದೋ ಅವರು ನರಕದಲ್ಲಿದ್ದರೂ ಸ್ವರ್ಗವನ್ನು ಹೊಂದಲಿ ಎಂದು ವರವನ್ನು ಕೊಟ್ಟರು. ಶ್ರೀನಿವಾಸದೇವರು ತನ್ನ ಗರ್ಭದಲ್ಲಿದ್ದ ಮೃತರಾದ ಬ್ರಾಹ್ಮಣ ಪತ್ನೀಪುತ್ರರನ್ನು ಬದುಕಿಸಿ ತೋಂಡಮಾನರಾಜನಿಗೆ ಕೊಟ್ಟು 'ರಾಜ! ನೀನು ಮಾಡಿದ ಉಪಕಾರಕ್ಕೆ ನೂರಕ್ಕಿಂತಲೂ ಅಧಿಕವಾಗಿ ಪ್ರತ್ಯುಪಕಾರವನ್ನು ಮಾಡಿರು ವೆನು. ನಿನ್ನ ಅಣ್ಣನು ನನಗೆ ಹೆಣ್ಣು ಕೊಟ್ಟಿದ್ದಕ್ಕೆ ಈ ಪ್ರತ್ಯುಪಕಾರವನ್ನು ಮಾಡಿರುವೆನು. ಇನ್ನು ಮುಂದೆ ನಾನು ಮೌನವನ್ನು ಧರಿಸುವೆನು. ಯಾರೊಡನೆಯೂ ಮಾತಾಡಲಾರೆನು. ಈ ಕಲಿಯುಗದಲ್ಲಿ ಇನ್ನೊಬ್ಬರ ಮುಖದಿಂದ ಮಾತಾಡುವೆನಷ್ಟೆ. ನೀನು ನಿನ್ನ ನಗರಕ್ಕೆ ಹೋಗಿ ಆ ಬ್ರಾಹ್ಮಣನಿಗೆ ಹೆಂಡತಿ ಮಕ್ಕಳನ್ನು ಕೊಟ್ಟು ರಾಜ್ಯಭಾರ ಮಾಡುತ್ತಾ ಇರು' ಎಂದು ಹೇಳಿದರು.

ತೋಂಡಮಾನರಾಜನು ಶ್ರೀನಿವಾಸದೇವರ ಆಜ್ಞೆಯಿಂದ ಬ್ರಾಹ್ಮಣನ ಪತ್ನಿಯನ್ನೂ ಮಗನನ್ನೂ ಮಗಳನ್ನೂ ಕರೆದುಕೊಂಡು ತನ್ನ ನಗರಿಗೆ ಬಂದು ಬ್ರಾಹ್ಮಣ ನಿಗೆ ಒಪ್ಪಿಸಿದನು. ಬ್ರಾಹ್ಮಣನು ರಾಜನ ಮುಖದಿಂದ ಪತ್ನಿಯ ಸರ್ವವೃತ್ತಾಂತವನ್ನು ತಿಳಿದು ಹೆಂಡತಿಯೊಡನೆ ನೀನು ಎಲ್ಲಿಗೆ ಹೋಗಿದ್ದಿ? ಎಂದು ಕೇಳಿದನು.

ಅದಕ್ಕೆ ಮಹಾಲಕ್ಷ್ಮಿಯೆಂದು ಹೆಸರುಳ್ಳ ಬ್ರಾಹ್ಮಣಪತ್ನಿಯು 'ಭಗವಂತನ ಮಹಿಮೆಯನ್ನು ನಾನು ಏನೆಂದು ಹೇಳಲಿ? ನಾನು ದೇವರ ಹೊಟ್ಟೆಯಲ್ಲಿ ವಿಚಿತ್ರವಾದ ಲೋಕವನ್ನು ನೋಡಿದೆನು. ಬ್ರಹ್ಮಾದಿದೇವತೆಗಳನ್ನೂ ಎಲ್ಲರನ್ನೂ ನೋಡಿದೆನು' ಎಂದಳು.

ರಾಘವ ಎಂದು ಹೆಸರುಳ್ಳ ಮಗನು 'ತಂದೆಯೇ! ನಾನು ಅನೇಕ ರುದ್ರರನ್ನು ನೋಡಿದೆನು' ಎಂದನು.

ಹೆಣ್ಣುಕೂಸು 'ನಾನು ಏಳು ಸಮುದ್ರಗಳನ್ನೂ ದೇವದಾನವ ರಾಕ್ಷಸರನ್ನೂ ನೋಡಿದೆನು' ಎಂದಿತು.

ಆದನ್ನು ಕೇಳಿ ಲಜ್ಜಿತನಾಗಿ ಬ್ರಾಹ್ಮಣನು ಹೆಂಡತಿಮಕ್ಕಳೊಡನೆ 'ನನ್ನ ಜನ್ಮ ತಪಸ್ಸು ವೇದಾಧ್ಯಯನ ಇತ್ಯಾದಿಗಳಿಗೆ ಧಿಕ್ಕಾರವಿರಲಿ. ನೀವು ದೇವರ ಉದರದಲ್ಲಿ ಎಲ್ಲ ಜಗತ್ತನ್ನು ನೋಡಿರುವಿರಿ. ಇತರ ಸಾಮಾನ್ಯರಿಂದ ಈ ಕಾರ್ಯವು ಶಕ್ಯವಲ್ಲ' ಎಂದು ಹೇಳಿ ಅವರನ್ನು ಸ್ತೋತ್ರಮಾಡಿ ರಾಜನನ್ನು ಸ್ತುತಿಸಿ ತನ್ನ ಊರಿಗೆ ಹೊರಟನು.

ಆಗ ತೋಂಡಮಾನರಾಜನು 'ನಿಮ್ಮ ಹೆಂಡತಿ ಮಗ ಮಗು ಇವರು ಪರಮಭಾಗ್ಯವಂತರು. ಶ್ರೀನಿವಾಸದೇವರ ಉದರದಲ್ಲಿ ಅದ್ಭುತವಾದ ಜಗತ್ತನ್ನು ನೋಡಿರುವರು' ಎಂದು ಹೇಳಿದನು. ಬ್ರಾಹ್ಮಣನು ಹೆಂಡತಿ ಮಕ್ಕಳನ್ನು ಕರೆದುಕೊಂಡು ತನ್ನ ಸ್ಥಳವಾದ ಶ್ರೀರಂಗಕ್ಕೆ ಹೋದನು. ಬ್ರಾಹ್ಮಣನನ್ನು ಕಳುಹಿಸಿದ ರಾಜನು ಶ್ರೀನಿವಾಸದೇವರ ವಿಚಿತ್ರ ಮಹಿಮೆಯನ್ನು ಅವರು ತನಗೆ ಮಾಡಿದ ನಿಗ್ರಹವನ್ನು ತೀರ್ಥದ ಮಹಿಮೆಯನ್ನು ಯೋಚಿಸಿ, ತಾನು ಶ್ರೀನಿವಾಸದೇವರ ಅನುಗ್ರಹಕ್ಕಾಗಿ ಏನು ಮಾಡಲಿ? ಏನು ಕೊಡಲಿ? ಎಂದು ಯೋಚಿಸುತ್ತಿದ್ದನು.



## ಕುಂಬಾರಭೀಮನ ಕಥೆ [1]

ತರುವಾಯ ತೋಂಡಮಾನರಾಜನು ಬ್ರಾಹ್ಮಣರೊಡನೆ ಭಗವಂತನನ್ನು ಸಂತೋಷ ಪಡಿಸುವ ಉಪಾಯವು ಯಾವುದೆಂದು ಕೇಳಿದನು. ಆಗ ಬೃಹಸ್ಪತ್ಯಾಚಾರ್ಯರು ಶ್ರೀನಿವಾಸದೇವರ ನಿಗ್ರಹದಿಂದ ಭಯಗ್ರಸ್ತನಾದ ರಾಜನೊಡನೆ ಶ್ರೀನಿವಾಸದೇವರ ಅನುಗ್ರಹವುಂಟಾಗುವುದಕ್ಕಾಗಿ ಸಹಸ್ರ ತುಳಸೀದಳಗಳಿಂದ ಶ್ರೀನಿವಾಸದೇವರಿಗೆ ಪೂಜೆಯನ್ನು ಮಾಡು. ಶ್ರೀನಿವಾಸದೇವರಿಗೆ ತುಳಸಿಯಲ್ಲಿ ಬಹಳ ಪ್ರೀತಿಯಿದೆ. ತುಳಸಿಯಿಂದ ಪೂಜಿಸಿದರೆ ಶ್ರೀನಿವಾಸದೇವರು ಪ್ರತ್ಯಕ್ಷರಾಗುತ್ತಾರೆ ಎಂದು ಹೇಳಿದರು. ಆ ಮಾತನ್ನು ಕೇಳಿ ತೋಂಡಮಾನರಾಜನು ಬಂಗಾರರತ್ನಗಳಿಂದ ತುಳಸಿಯನ್ನು ಮಾಡಿಸಿ ವೇಂಕಟಸಹಸ್ರನಾಮಾವಳಿಗಳಿಂದ ಶ್ರೀನಿವಾಸದೇವರ ಪಾದಕ್ಕೆ ಬಂಗಾರದ ತುಳಸಿಗಳನ್ನು ಸಮರ್ಪಿಸಿದನು. ಹೀಗೆಯೇ ಮೂರು ತಿಂಗಳವರೆಗೆ ಶ್ರೀನಿವಾಸದೇವರಿಗೆ ಪೂಜೆಯನ್ನು ಮಾಡಿದನು. ಆದರೂ ಶ್ರೀನಿವಾಸದೇವರು ಸಂತೋಷವನ್ನು ಹೊಂದಲೇ ಇಲ್ಲ. ಆಗ ರಾಜನು ದುಃಖದಿಂದ ಭಗವಂತನೊಡನೆ 'ಗುಣವಂತರು ಭಕ್ತರ ಅಪರಾಧಗಳನ್ನು ಎಣಿಸುವುದಿಲ್ಲ.

1. ಭ.ಪು.ಅ.14

ಭಕ್ತನಾದ ನನ್ನ ಅಪರಾಧವನ್ನು ಕ್ಷಮಿಸು. ನೀನು ವರಗಳನ್ನು ಕೊಡುವುದರಲ್ಲಿ ಶ್ರೇಷ್ಠನಾದವನು. ಭಕ್ತನಾದ ನನ್ನ ಮೇಲೆ ದಯೆಯನ್ನು ತೋರಿಸು' ಎಂದು ಪ್ರಾರ್ಥಿಸಿಕೊಂಡನು. ಆಗ ಶ್ರೀನಿವಾಸದೇವರು ಕಾಣಿಸಿಕೊಳ್ಳದೆ ಆಕಾಶವಾಣಿ ಯಿಂದ 'ನನ್ನ ಭಕ್ತರು ಅನೇಕರು ಇದ್ದಾರೆ. ನಿನಗೆ ಸಮಾನರು ಒಬ್ಬರೂ ಇಲ್ಲ. ಬ್ರಾಹ್ಮಣ ಸ್ತ್ರೀಪುತ್ರರ ಸಂಹಾರರೂಪವಾದ ಮಹಾಪಾಪವನ್ನು ಮಾಡಿ ಅದನ್ನು ಹೇಗೆ ಪರಿಹರಿಸಿಕೊಳ್ಳುವೆ? ನಿನ್ನ ಅಣ್ಣನು ಮಾಡಿದ ಉಪಕಾರಕ್ಕಾಗಿ ನಾನು ಅವರನ್ನು ಬದುಕಿಸಿದೆನು' ಎಂದು ಹೇಳಿದರು.

ಈ ಆಕಾಶವಾಣಿಯನ್ನು ಕೇಳಿ ತೋಂಡಮಾನರಾಜನು 'ಭಗವಂತನೇ! ಉಪಕಾರವನ್ನು ಮಾಡಿಸಿಕೊಂಡ ಜನರು ಆ ಉಪಕಾರವನ್ನು ಆಮೇಲೆ ಸ್ಮರಿಸಲಾರರು. ನಾನು ಹೊರತು ಮೂರುಲೋಕಗಳಲ್ಲಿ ಶ್ರೇಷ್ಠನಾದ ಭಕ್ತನು ಯಾರಿರುವನು? ನಾನು ಯಾವಾಗಲೂ ನಿನ್ನಲ್ಲಿಯೇ ಆಸಕ್ತನಾಗಿರುವೆನು. ನಾನು ಭಕ್ತರಲ್ಲಿ ಶ್ರೇಷ್ಠನು. ನೀನು ದಯಾವಂತರಲ್ಲಿ ಶ್ರೇಷ್ಠನು' ಎಂದು ಹೇಳಿದನು. ಈರೀತಿಯಾಗಿ ರಾಜನ ಗರ್ವಯುಕ್ತವಾದ ಮಾತನ್ನು ಕೇಳಿ ಶ್ರೀನಿವಾಸದೇವರು ಸುಮ್ಮನೆ ಆದರು.

ಒಂದು ದಿನದಲ್ಲಿ ತೋಂಡಮಾನರಾಜನು ತಾನು ಪೂಜೆ ಮಾಡಿದ ಬಂಗಾರದ ತುಳಸಿಗಳ ಮೇಲೆ ಇದ್ದ ಹಸುರಾಗಿರುವ ಮಣ್ಣಿನಿಂದ ಮಾಡಿರುವ ತುಳಸೀಗಳನ್ನು ನೋಡಿದನು. ಇನ್ನೊಂದು ದಿನದಲ್ಲಿ ನೋಡುವಾಗ ತಾನು ಸಮರ್ಪಿಸಿದ ಬಂಗಾರದ ತುಳಸೀದಳಗಳು ದೂರದಲ್ಲಿ ಬಿದ್ದಿದ್ದವು. ದೇವರ ಪಾದಗಳಲ್ಲಿ ಮಣ್ಣಿನ ತುಳಸೀದಳಗಳು ಇದ್ದವು. ಇದನ್ನು ನೋಡಿ ತೋಂಡಮಾನರಾಜನು ಭಗವಂತನು ತನ್ನನ್ನು ನಿಗ್ರಹಮಾಡಿರುವನೆಂದು ತಿಳಿದುಕೊಂಡು ದುಃಖವುಳ್ಳವನಾಗಿ ಗಟ್ಟಿಯಾಗಿ ಅಳುತ್ತಾ 'ಭಗವಂತನೇ! ಕ್ರೂರಪಾಪಿಯಾದ ನನ್ನನ್ನು ಉಪೇಕ್ಷಾ ಮಾಡುವಿಯಾ? ಅನಾಥನಾದ ನನ್ನನ್ನು ಕೈಬಿಡುವಿಯಾ? ಯಾವ ಭಕ್ತಾಗ್ರೇಸರನು ಸಮರ್ಪಿಸಿರುವ ಮಣ್ಣಿನ ತುಳಸಿಯನ್ನು ಸ್ವೀಕರಿಸುತ್ತಿರುವೆ?' ಈ ರೀತಿಯಾಗಿ ಹೇಳಿದನು. ಆಗ ಶ್ರೀನಿವಾಸದೇವರು 'ಎಷ್ಟೋ ನನ್ನ ಭಕ್ತರಿರುವರು. ಅವರಲ್ಲಿ ಭೀಮ ಎಂದು ಹೆಸರುಳ್ಳ ದರಿದ್ರನಾದ ಕುಂಬಾರನು ಒಬ್ಬನು. ಅವನು ಇಲ್ಲಿಯೇ ಹತ್ತು ಮೈಲುದೂರದಲ್ಲಿ ಇರುವನು. ಅವನು ಅಲ್ಲಿ ಒಂದು ಗೋಡೆಯ ಬಿಲದಲ್ಲಿ ನನ್ನ ಮರದ ಬೊಂಬೆಯನ್ನು ನಿತ್ಯವೂ ಪೂಜಿಸುತ್ತಿರುವನು. ತನ್ನ ಕಾರ್ಯವನ್ನು ತೀರಿಸಿಕೊಂಡು ಸ್ನಾನಮಾಡಿ ಮಣ್ಣಿನ ತುಳಸೀಗಳಿಂದ ನನ್ನನ್ನು ಪೂಜಿಸುತ್ತಿರುವನು.

ನಾನು ಅವನ ಭಕ್ತಿಯಿಂದ ಸಂತುಷ್ಟನಾಗಿ ನಿತ್ಯವೂ ಅಲ್ಲಿಗೆ ಹೋಗಿ ಅವನನ್ನೂ ಅವನ ಹೆಂಡತಿಯನ್ನೂ ನೋಡಿ ಆ ಪೂಜೆಯನ್ನು ಅಂಗೀಕರಿಸುತ್ತೇನೆ. ರಾಜನೇ! ಎಷ್ಟೋ ಜನ ವಿರಕ್ತರಾದ ನನ್ನ ಭಕ್ತರಿರುವರು. ಪೂರ್ವದಲ್ಲಿ ನಾನೊಬ್ಬನೇ ಭಕ್ತನಿರುವೆನೆಂದು ಹೇಳಿದೆಯಲ್ಲಾ! ಅದು ಅಹಂಕಾರದ ಮಾತು' ಎಂದು ಹೇಳಿದರು.

ಆ ಮಾತನ್ನು ಕೇಳಿ ತೋಂಡಮಾನರಾಜನು ತಲೆಯನ್ನು ಬಗ್ಗಿಸಿಕೊಂಡು ಅಹಂಕಾರವನ್ನು ಬಿಟ್ಟವನಾಗಿ ರಾಜಗೌರವವನ್ನು ಬಿಟ್ಟು ಕಾಲು ನಡೆಯಿಂದಲೇ ಕುಂಬಾರನ ಮನೆಗೆ ಓಡಿದನು. ಕಾಲುನಡೆಯಿಂದಲೇ ಓಡಿ ಬರುತ್ತಿರುವ ಭೀಮನೆಂಬ ಕುಂಬಾರನ ಮನೆಯಲ್ಲಿ ಇದೆಯೆಂದು ಕೇಳುತ್ತಿರುವ ರಾಜನಿಗೆ, ಕುಂಬಾರರು, ಭಗವಂತನಲ್ಲಿ ಭಕ್ತಿಯುಳ್ಳ, ಭಗವಂತನನ್ನು ನಿತ್ಯವೂ ಪೂಜಿಸುತ್ತಿರುವ ಭೀಮನೆಂಬ ಕುಂಬಾರನು ಇಲ್ಲಿಯೇ ಇರುವನು ಎಂದು ಹೇಳಿ ಅವನ ಮನೆಯನ್ನು ತೋರಿಸಿದರು. ತೋಂಡಮಾನರಾಜನು ಅವನ ಮನೆಗೆ ಹೋದನು. ಮನೆಯ ಹೊರಗೆ ನಿಂತುಕೊಂಡು ಆ ಮನೆಯನ್ನು ಸ್ತುತಿಸಿದನು. ಬಾಗಿಲ ಹತ್ತಿರ ಬಂದು ಅಲ್ಲಿಯೇ ಬಿದ್ದುಬಿಟ್ಟನು. ತರುವಾಯ ಭೀಮನೆಂಬ ಕುಂಬಾರನು ಜನರು ಬಂದು ತನ್ನೊಡನೆ ತಿಳಿಸಲು ತನ್ನ ಮನೆಯ ಅಂಗಳದಲ್ಲಿ ಬಿದ್ದಿದ್ದ ರಾಜನನ್ನು ನೋಡಿದನು. 'ಇದೇನು ಮಹಾಕಷ್ಟವು ಏರ್ಪಟ್ಟಿತು? ಈ ರಾಜನೇಕೆ ಇಲ್ಲಿ ಬಿದ್ದಿರುವನು? ನನ್ನ ಅಪರಾಧವೊಂದೂ ಇಲ್ಲವಲ್ಲಾ! ಆದರೂ ರಾಜನು ನನ್ನನ್ನು ಶಿಕ್ಷಿಸಲು ಸಮರ್ಥನು. ಈದಿನವೇ ದೇವರ ನೈವೇದ್ಯಕ್ಕೆ ನೂರು ಗಡಿಗೆಗಳನ್ನು ಮಾಡಿಕೊಡಬೇಕೆಂದು ಹೇಳಿದ್ದನು. ಅವುಗಳನ್ನು ಈಗಲೇ ಕೊಡುವೆನು' ಎಂದು ಹೇಳಿದನು.

ಆ ಸಮಯದಲ್ಲಿ ರಾಜನು ಜ್ಞಾನವನ್ನು ಹೊಂದಿ 'ಭೀಮನೆಂಬ ಹೆಸರುಳ್ಳ ದೇವರನ್ನು ಸಂತೋಷಪಡಿಸಿದ ದೇವರ ಭಕ್ತನಾದ ಕುಂಬಾರನು ಯಾರು? ನಾನು ಅವನ ಎರಡು ಪಾದಗಳಿಗೆ ವಂದಿಸುವೆನು' ಎಂದನು. ಈರೀತಿಯಾಗಿ ರಾಜನು ಹೇಳುತ್ತಿರಲು ಶ್ರೀನಿವಾಸದೇವರು ಕುಂಬಾರನಿಗೆ ಪ್ರತ್ಯಕ್ಷರಾದರು. ಕುಂಬಾರನು ಪ್ರತ್ಯಕ್ಷರಾದ ಶ್ರೀನಿವಾಸದೇವರನ್ನು ನೋಡಿ ಸಂತೋಷವುಳ್ಳವನಾಗಿ ಭಕ್ತಿಯಿಂದ ನಾನಾವಿಧವಾಗಿ ಸ್ತೋತ್ರ ಮಾಡಿದನು. ಈರೀತಿಯಾಗಿ ಅವನು ಸ್ತೋತ್ರ ಮಾಡುತ್ತಿರಲು ಜಗನ್ಮಾತೆಯಾದ ರಮಾದೇವಿಯರು 'ಈ ಕುಂಬಾರನು ಯಾರು? ಇವನಿಗೆ ನಿಮ್ಮಲ್ಲಿ ಇಂತಹ ಭಕ್ತಿಯೇನು? ಇವನ ಜಾತಿಯೆಲ್ಲಿ? ನಿಮ್ಮ ಸದ್ಗುಣಗಳೆಲ್ಲಿ? ಇದೇನು ಆಶ್ಚರ್ಯ?' ಎಂದು ಕೇಳಿದರು. ಆಗ ಶ್ರೀನಿವಾಸದೇವರು ಗರುಡ ದೇವರೊಡನೆ ಆ ಕುಂಬಾರನನ್ನು ಬೇಗನೇ ನನ್ನ ಬಳಿಗೆ ಕರೆದುಕೊಂಡು ಬಾ'

ಎಂದರು. ಗರುಡದೇವರು ಬೇಗನೇ ಕರೆದುಕೊಂಡು ಬಂದರು. ಇಲ್ಲಿಗೆ ಬಾ ಎಂದು ಹೇಳಿ ಶ್ರೀನಿವಾಸದೇವರ ಹತ್ತಿರವೇ ಕರೆದುಕೊಂಡು ಬಂದರು. ಕುಂಬಾರನು ಶಿರಸ್ಸಿನಿಂದ ಶ್ರೀನಿವಾಸದೇವರಿಗೆ ನಮಸ್ಕರಿಸಿ 'ಭಗವಂತನೇ! ನನ್ನ ಮನೆಗೆ ಯಾಕೆ ಬಂದಿರುವಿ? ನಾನು ವಿದುರನಲ್ಲ, ಶಬರಿಯಲ್ಲ, ಗಜೇಂದ್ರನಲ್ಲ, ಉದ್ಧವನಲ್ಲ, ವಿಭೀಷಣನಲ್ಲ, ನಿನಗೆ ಕೊಡಲಿಕ್ಕೆ ನನ್ನ ಮನೆಯಲ್ಲಿ ಏನಿದೆ?' ಎಂದು ಹೇಳಿದನು. ಆಗ ಅವನ ಹೆಂಡತಿಯಾದ ತಮಾಲಿನಿಯು 'ಅನಾಥರ ನಾಥನೇ! ನನ್ನ ಮನಸ್ಸು ನಿನ್ನಲ್ಲಿಯೇ ಇದೆ. ಮಂತ್ರಮಾರ್ಗವನ್ನು ನಾನು ತಿಳಿದವಳಲ್ಲ. ಅಶುದ್ಧಕುಲದಲ್ಲಿ ಹುಟ್ಟಿದ ನಮಗೆ ವೇದವು ಹೇಗೆ ತಿಳಿಯಬೇಕು? ನನ್ನ ಮತ್ತು ನನ್ನ ಪತಿಗಳ ಭಕ್ತಿಯಿಂದ ಸಂತುಷ್ಟನಾಗಿ ನಾನು ಅಡಿಗೆಮಾಡಿರುವ ಜೋಳದ ಅನ್ನವನ್ನು ಸ್ವೀಕಾರ ಮಾಡುವವನಾಗು' ಎಂದು ಹೇಳಿದಳು. ಅದನ್ನು ಕೇಳಿ ಶ್ರೀನಿವಾಸದೇವರು ರಮಾದೇವಿಯರ ಮುಖವನ್ನು ನೋಡ ನೆಗಾಡಿದರು. 'ತಮಾಲಿನಿ! ನೀನು ಭಕ್ತಿಯಿಂದ ಕೊಡುವ ಅನ್ನವನ್ನು ಅವಶ್ಯವಾಗಿ ಸ್ವೀಕರಿಸುವೆನು' ಎಂದು ಹೇಳಿ ಶ್ರೀನಿವಾಸದೇವರು ರಮಾದೇವಿಯರಿಂದ ಸಹಿತರಾಗಿ ಆ ಕುಂಬಾರನೂ ಅವನ ಹೆಂಡತಿಯೂ ಹಾಕಿದ ಅನ್ನವನ್ನು ಭೋಜನ ಮಾಡಿ ಅವರಿಗೆ ತನ್ನ ಸ್ಥಾನವನ್ನು ಕೊಟ್ಟನು. ಈ ಆಶ್ಚರ್ಯವನ್ನು ನೋಡಿ ಬ್ರಹ್ಮರುದ್ರಾದಿದೇವತೆಗಳು ಬಂದು ಭಗವಂತನನ್ನು ಸ್ತೋತ್ರಮಾಡಿದರು. ದೇವದುಂದುಭಿಗಳನ್ನು ಬಾರಿಸಿದರು. ಆಕಾಶ ದಿಂದ ಪುಷ್ಪದ ಮಳೆಯು ಸುರಿಯಿತು. ಆ ಸಮಯದಲ್ಲಿ ವಿಮಾನವು ಬಂದಿತು. ಬಂದ ವಿಮಾನವನ್ನು ನೋಡಿ ಶ್ರೀನಿವಾಸದೇವರು ಆ ಕುಂಬಾರನಿಗೆ ಕಿರೀಟವನ್ನು ಶಂಖಚಕ್ರಗಳನ್ನು ಕೌಸ್ತುಭಮಣಿಯನ್ನು ಪೀತಾಂಬರವನ್ನು ಕೊಟ್ಟರು. ರಮಾ ದೇವಿಯರ ಆಭರಣಗಳನ್ನು ತಮಾಲಿನಿಗೆ ಕೊಟ್ಟರು. ಕುಂಬಾರ ದಂಪತಿಗಳು ತೋಂಡಮಾನರಾಜನು ನೋಡುತ್ತಿರುವಂತೆ ವಿಮಾನದಲ್ಲಿ ಕೂತುಕೊಂಡು ಭಗವಂತನ ಲೋಕಕ್ಕೆ ಹೋದರು. ಈರೀತಿಯಾಗಿ ಕುಂಬಾರನ ವೈಭವವನ್ನು ನೋಡಿ ತೋಂಡಮಾನರಾಜನು ಲಜ್ಜೆಯುಳ್ಳವನಾಗಿ ಶ್ರೀನಿವಾಸದೇವರೊಡನೆ 'ನನ್ನ ರಾಜ್ಯದಲ್ಲಿದ್ದ ಯಾವಾಗಲೂ ಪಾಪಮಾಡುತ್ತಿದ್ದ ಕುಂಬಾರನಿಗೆ ಸದ್ಗತಿಯನ್ನು ಕೊಟ್ಟಿರುವಿ? ನನಗೇನು ಗತಿ?' ಎಂದು ಕೇಳಿದನು.

ಅದಕ್ಕೆ ಶ್ರೀನಿವಾಸದೇವರು ಈ ದೇಹವನ್ನು ಪರಿತ್ಯಾಗ ಮಾಡಿ ಬೇರೆ ದೇಹವನ್ನು ಹೊಂದಿ ನನ್ನನ್ನು ಆರಾಧಿಸಿ ನನ್ನ ಸಾರೂಪ್ಯವನ್ನು ಹೊಂದು ಎಂದರು. ಈರೀತಿಯಾಗಿ ಹೇಳಲು ರಾಜನು ಸ್ವಾಮಿ ಪುಷ್ಕರಿಣಿಯಲ್ಲಿ ಸ್ನಾನ ಮಾಡಿ ದೇಹವನ್ನು

ಪರಿತ್ಯಜಿಸಿ ಬೇರೆ ದೇಹವನ್ನು ಹೊಂದಿ ಶ್ರೀನಿವಾಸದೇವರನ್ನು ಆರಾಧಿಸಿ ದೇವರ ಸಾರೂಪ್ಯವನ್ನು ಹೊಂದಿದನು. ಈರೀತಿಯಾಗಿ ಶ್ರೀನಿವಾಸದೇವರು ರಮಾದೇವಿಯ ರಿಂದ ಕೂಡಿಕೊಂಡು ದೇವತೆಗಳಿಂದ ಪೂಜಿತರಾಗಿ ಭಕ್ತರ ಅಭೀಷ್ಟವನ್ನು ಕೊಡುತ್ತಾ ವೇಂಕಟಾಚಲದಲ್ಲಿ ಸನ್ನಿಹಿತರಾಗಿ ಇರುವರು.

**ಭವಿಷ್ಯೋತ್ತರಪುರಾಣದ ಶ್ರೀನಿವಾಸದೇವರ ಕಲ್ಯಾಣಚರಿತೆಯು ಮುಗಿಯಿತು.**



# ಶ್ರೀನಿವಾಸದೇವರ ಮಹಿಮೆ

ಒಂದು ದಿನದಲ್ಲಿ ಶ್ರೀನಿವಾಸದೇವರು ಸಂತೋಷದಿಂದ ವಿಟವೇಷವನ್ನು ಧರಿಸಿಕೊಂಡು ವೇಂಕಟಾಲದಲ್ಲಿ ಉತ್ತರಭಾಗದಲ್ಲಿ ಸಂಚರಿಸುತ್ತಿದ್ದರು. ಕೆಲವು ಮುನಿಗಳು 'ವೇಂಕಟಾಚಲವು ಮಹಾಪವಿತ್ರವಾದದ್ದು. ಫಲಮೂಲಗಳಿಂದ ಸಹಿತವಾಗಿದೆ. ಸರ್ವವೃಕ್ಷಗಳಿಂದ ಯುಕ್ತವಾಗಿದೆ. ನಾನಾ ಜಲಪ್ರವಾಹಗಳಿಂದ ಸಹಿತವಾಗಿದೆ. ಯಜ್ಞಗಳಿಗೆ ಉಪಯುಕ್ತಗಳಾದ ಮರಗಳಿಂದ ಕೂಡಿದೆ. ನಾವು ಅಲ್ಲಿಯೇ ಸರ್ವಕಾಲದಲ್ಲಿಯೂ ವಾಸಮಾಡಬೇಕು' ಎಂದು ಮನಸ್ಸಿನಲ್ಲೇ ನಿಶ್ಚಯಿಸಿ ಅಲ್ಲಿಗೆ ಬಂದು ಶಾಸ್ತ್ರದಲ್ಲಿ ಹೇಳಿದ ರೀತಿಯಿಂದ ಯಜ್ಞವನ್ನು ಮಾಡಿದರು. ವಿಟರೂಪಿಯಾದ ಶ್ರೀನಿವಾಸದೇವರು ರಮಾದೇವಿಯರಿಂದ ಸಹಿತರಾಗಿ ಯಜ್ಞದ ಸಮೀಪಕ್ಕೆ ಬಂದರು. ಅವರು ಬಂಗಾರದ ವಿಚಿತ್ರವಾದ ವಸ್ತ್ರವನ್ನು ಧರಿಸಿದ್ದರು. ತಲೆಯಲ್ಲಿ ರುಮಾಲೆಯನ್ನು ಧರಿಸಿದ್ದರು. ಕೈಯಲ್ಲಿ ಒಂದು ಕತ್ತಿಯನ್ನು ಹಿಡಿದುಕೊಂಡಿದ್ದರು. ತಾಂಬೂಲವನ್ನು ಭಕ್ಷಿಸಿದ್ದರು. ನಗುಮುಖವುಳ್ಳವರಾಗಿದ್ದರು. ಕಸ್ತೂರಿಯನ್ನು ಹಚ್ಚಿಕೊಂಡಿದ್ದರು. ಬಂಗಾರದ ಯಜ್ಞೋಪವೀತವನ್ನು ಧರಿಸಿದ್ದರು. ಮನ್ಮಥನಂತೆ ಪರಮಸುಂದರರಾಗಿದ್ದರು. ಹಾಗೆಯೇ ಯಜ್ಞಸಭೆಯನ್ನು ಪ್ರವೇಶಿಸಿ ದರು. ಮುನಿಗಳೆಲ್ಲರೂ ಕಮಲದಂತೆ ಕಣ್ಣುಗಳುಳ್ಳ ಶ್ರೀನಿವಾಸದೇವರನ್ನೂ, ವೇಶ್ಯಾವೇಷವನ್ನು ಧರಿಸಿರುವ ಕೈಯಲ್ಲಿ ಲೀಲಾಕಮಲವುಳ್ಳ ಬಂಗಾರದಂತೆ ಹೊಳೆಯುತ್ತಿರುವ ಕಮಲದ ಮಧ್ಯದಂತೆ ಶೋಭಿಸುವ ಅರಸಿನದಂತೆ ಹೊಳೆಯುವ ವಕ್ರಗಳಾದ ತಲೆಕೂದಲುಗಳುಳ್ಳ ಶರತ್ಕಾಲದ ಚಂದ್ರನಂತೆ ಮುಖವುಳ್ಳ ತಾಂಬೂಲವನ್ನು ಭಕ್ಷಿಸಿರುವ ವಿಶಾಲಗಳಾದ ಕಣ್ಣುಗಳುಳ್ಳ ಇಷ್ಟರವರೆಗೆ ಯಾರೂ

1. ಭ.ಪು.ಅ.14

ನೋಡದೆ ಇರುವ ಸೌಂದರ್ಯವುಳ್ಳ ರಮಾದೇವಿಯರನ್ನು ನೋಡಿ ಪರಮ ಆಶ್ಚರ್ಯರಿತರಾದರು. 'ಆ ರಾಜಪುತ್ರನು ಯಾರು ಇರಬಹುದು? ಯಾರು ಇರಬಹುದು? ಏಕೆ ಬಂದಿರಬಹುದು? ನಾವೇ ಕೇಳುವ' ಎಂದುಕೊಂಡು ಮುನಿಗಳು 'ನೀನು ಯಾಕೆ ಇಲ್ಲಿಗೆ ಬಂದಿರುವಿ? ನಿನ್ನ ವಾಸಸ್ಥಾನವು ಯಾವುದು? ನಿನ್ನ ತಂದೆತಾಯಿಗಳು ಯಾರು?' ಎಂದು ಕೇಳಿದರು. ಆಗ ಶ್ರೀನಿವಾಸದೇವರು 'ನಾನು ರಾಜನೂ ಅಲ್ಲ, ಬ್ರಾಹ್ಮಣನೂ ಅಲ್ಲ, ನನಗೆ ಜಾತಿಯಿಲ್ಲ, ತಂದೆಯಿಲ್ಲ, ತಾಯಿಯಿಲ್ಲ, ವಾಸಸ್ಥಾನವೂ ಇದೇ ಎಂದು ಇಲ್ಲ, ಸರ್ವತ್ರವಾಸಮಾಡುವೆನು. ಸರ್ವವನ್ನು ಭಕ್ಷಿಸುವೆನು. ನನ್ನನ್ನು ಸಂಪೂರ್ಣವಾಗಿ ಹೇಳುವ ಹೆಸರೂ ಇಲ್ಲ, ಪ್ರಕೃತಿಯ ಗುಣಗಳಿಲ್ಲ, ನಿಮ್ಮನ್ನು ನೋಡಲಿಕ್ಕೆ ಬಂದಿರುವೆನು. ನೀವು ಈ ಅತ್ತಿಯ ಮರದ ಪಶು ಕಟ್ಟುವ ಕಂಬವನ್ನು ಹುಲಿಯ ಚರ್ಮದಿಂದ ಸಂಪೂರ್ಣ ಹೊದಿಸುವಿರಲ್ಲಾ, ಅದನ್ನು ಮುಟ್ಟಿಕೊಂಡು ಗಾಯನ ಮಾಡಲಿಕ್ಕೆ ಹೇಗೆ ಆಗುತ್ತದೆ' ಇತ್ಯಾದಿ ರೀತಿಯಾಗಿ ಕ್ರಿಯಾಲೋಪಗಳನ್ನೆಲ್ಲಾ ಹೇಳಿದರು. ತರುವಾಯ ಮುನಿಗಳು ಸೇರಿ ವಪಾಹೋಮಕ್ಕೆ ಸಮಯವು ಮೀರುತ್ತದೆ ಎಂದು ಜ್ವಲಿಸುವ ಅಗ್ನಿಯಲ್ಲಿ ಪವಿತ್ರವಾದ ವಾಸನೆಯುಳ್ಳ ವಪಾವನ್ನು ಹೋಮಿಸಿದರು. ಆಗ ಶ್ರೀನಿವಾಸದೇವರು ಶಂಖ ಚಕ್ರಗದಾಧಾರಿಯಾಗಿ ಬೇಗನೇ ಅಲ್ಲಿಗೆ ಹೋಗಿ ಕೋಟಿ ಸೂರ್ಯರಂತೆ ಶೋಭಿಸುವವರಾಗಿ ಆ ವಪಾವನ್ನು ಕೈಗಳಿಂದ ಹಿಡಿದರು. ಮುನಿಗಳೆಲ್ಲರೂ ದೇವರ ಕಾಂತಿಯಿಂದ ಕಣ್ಣುಮುಚ್ಚಿದಂತಾಗಿ ಒಂದುಕ್ಷಣ ಚಿತ್ರದಲ್ಲಿ ಬರೆದ ಬೊಂಬೆಯಂತೆ ನಿಂತುಬಿಟ್ಟರು. ಶ್ರೀನಿವಾಸದೇವರು 'ನಾನು ಸಂತುಷ್ಟನಾದೆನು' ಎಂದು ಎಲ್ಲರ ಹತ್ತಿರವೂ ಮರೆಯಾದರು. ಆಗ ಮುನಿಗಳೆಲ್ಲರೂ ಸಾಕ್ಷಾತ್ ಭಗವಂತನೇ ನಮ್ಮ ಯಜ್ಞಕ್ಕೆ ಬಂದನೆಂದು ಸಂತೋಷಪಟ್ಟರು. ಆಮೇಲೆ ಉಳಿದ ಯಾಗವನ್ನು ಮುಗಿಸಿದರು.



# ಬುದ್ಧದೇವರ ಕಥೆ [1]

ಕೃಷ್ಣಪರಮಾತ್ಮನಿಂದ ಸಹಿತರಾದ ಪಾಂಡವರೂ, ಯಾದವರೂ ಭೂಲೋಕವನ್ನು ಬಿಟ್ಟು ಹೋದಮೇಲೆ ಪಾಂಡವರ ವಂಶದವರಾದ ಪರೀಕ್ಷಿದ್ರಾಜನೇ ಮೊದಲಾದ ವರು ವೇದವ್ಯಾಸದೇವರಿಂದ ಉಪದಿಷ್ಟರಾಗಿ ರಾಜ್ಯವನ್ನು ರಕ್ಷಿಸುತ್ತಿದ್ದರು. ಕ್ಷೇಮಕರಾಜನ ವರೆಗೆ ಬಂದ ಆ ರಾಜರು ಭಾರತಾದಿ ಶಾಸ್ತ್ರಗಳನ್ನು ಕೇಳಿ ಸಮಸ್ತ ವನ್ನೂ ತಿಳಿದವರಾದ ಕಾರಣ ವೇದವ್ಯಾಸದೇವರ ಅನುಗ್ರಹದಿಂದಲೂ ಕಲಿಯುಗ ದಲ್ಲಿಯೂ ಧರ್ಮವೂ ಸರಿಯಾದ ಜ್ಞಾನವೂ ಸುರಕ್ಷಿತವಾಗಿತ್ತು. ನಾಶವನ್ನು ಹೊಂದಲಿಲ್ಲ.

ಕಲಿಯುಗದಲ್ಲಿ ಸಾವಿರ ವರ್ಷವಾದ ಮೇಲೆ ಸಜ್ಜನರೆಲ್ಲರೂ ಸ್ವರ್ಗವನ್ನು ಹೊಂದಿದ ಮೇಲೆ ಪೂರ್ವದಲ್ಲಿ ರುದ್ರದೇವರಿಂದ ಸುಟ್ಟುಹೋಗಿದ್ದ ತ್ರಿಪುರಾ ಸುರರು ಭೂಮಿಯಲ್ಲಿ ಹುಟ್ಟಿದರು. ಎಲ್ಲಾ ಮುನೀಶ್ವರರೂ ವೇದವ್ಯಾಸ ದೇವರೂ ಆಗ ಮರೆಯಾಗಿ ಹೋಗಿದ್ದರೂ, ಅವರ ಸಂಪ್ರದಾಯದಿಂದ ಆ ಅಸುರರೂ ಸರಿಯಾದ ಜ್ಞಾನವನ್ನೇ ಹೊಂದಿದರು. ಆ ಸಮಯದಲ್ಲಿ ದುಷ್ಟ ಶಾಸ್ತ್ರಗಳನ್ನು ದುಷ್ಟಸಂಪ್ರದಾಯಗಳನ್ನು ನಾಶಮಾಡಿದ್ದ ಕಾರಣ, ಒಳ್ಳೇಶಾಸ್ತ್ರಗಳೇ ಪ್ರಚಾರದಲ್ಲಿ ಇದ್ದ ಕಾರಣ ಆ ಪಾಪಿಗಳೂ ಸಹ ಸರಿಯಾದ ಜ್ಞಾನವನ್ನೇ ಹೊಂದಿದರು. ನಾಯಿಯು ಯಜ್ಞಕ್ಕೆ ಯೋಗ್ಯವಾದ ಹವಿಸ್ಸನ್ನು ಸ್ವೀಕರಿಸುವುದನ್ನು, ಚಂಡಾಲರು ವೇದವನ್ನು ಓದುವುದನ್ನು ನೋಡಿ ಹೇಗೆ ಸಜ್ಜನರು ಸಹಿಸಲಾರರೋ ಹಾಗೆಯೇ ಅನಂತ ದುಃಖಪ್ರಾಪ್ತಿಗೆ ಯೋಗ್ಯತೆಯುಳ್ಳ ಆ ಅಸುರರು ಉತ್ತಮವಾದ ವಿದ್ಯೆಯನ್ನು ಹೊಂದಿದ್ದನ್ನು ನೋಡಿ ಸುರರು ಸಹಿಸಲಿಲ್ಲ. ಸರಿಯಾದ ಜ್ಞಾನಿಗಳಿಗೆ ಅಧೋಗತಿ ಯಾಗಬಾರದು. ಅವರಿಗೆ ಉತ್ತಮ ಸುಖವೇ ಸಿಗಬೇಕು. ಅಸುರರಿಗೂ ತಮಸ್ಸೇ ಯೋಗ್ಯವಾದದ್ದು. ಅವರಿಗೆ ಮೋಕ್ಷವು ಸಿಗಬಾರದು. ಆದುದರಿಂದ ಉತ್ತಮವಾದ ವಿದ್ಯೆಯನ್ನು ಅಭ್ಯಾಸ ಮಾಡುತ್ತಿದ್ದ ಅಸುರರನ್ನು ನೋಡಿ ದೇವತೆಗಳು ಏನು ಮಾಡಲಿ ಎಂದು ಯೋಚಿಸಿದರು. ಸಜ್ಜನರಿಗೆ ಜ್ಞಾನ ಬರುವಂತೆಯೂ, ಅಸಜ್ಜರಿಗೆ ಜ್ಞಾನ ನಾಶಮಾಡುವುದಕ್ಕೂ ಶ್ರೀಭಗವಂತನಿಂದ ದೇವತೆಗಳು ಆಜ್ಞೆಯನ್ನು ಹೊಂದಿದವ ರಾದ ಕಾರಣ ಆ ಸಂದರ್ಭದಲ್ಲಿ ಬ್ರಹ್ಮಾದಿದೇವತೆಗಳು ಕ್ಷೀರಸಮುದ್ರದ ಉತ್ತರ ತೀರಕ್ಕೆ ಹೋಗಿ ಪರಮಾತ್ಮನನ್ನು ಸ್ತುತಿಸಿ ವಿಜ್ಞಾಪನೆಯನ್ನು ಮಾಡಿಕೊಂಡರು.

---

1. ಮ.ತಾ.ನಿ. ಅ–32. ಶಾಂ.ಪ. ಅ–348. ಭಾ.I–3

ಆಗ ಭಗವಂತನು ಅವರಿಗೆ ಅಭಯಪ್ರದಾನವನ್ನು ಮಾಡಿ, ಆಗಲೇ ಒಂದು ಸುದರವಾದ ಮಗುವಿನ ರೂಪವನ್ನು ಧರಿಸಿದನು. ಆ ಸಮಯದಲ್ಲಿ ತ್ರಿಪುರಾಸುರರಲ್ಲಿ ಮೊದಲಿನವರು ಶುದ್ಧೋದನ ಮತ್ತು ಜಿನ ಎಂದು ಎರಡು ಹೆಸರುಳ್ಳವನಾಗಿ ಹುಟ್ಟಿದ್ದನು. ಅವನಿಗೆ ಗಯಾ ಎಂದು ಹೆಸರುಳ್ಳ ಹೆಂಡತಿಯಲ್ಲಿ ಒಂದು ಮಗುವೂ ಹುಟ್ಟಿತ್ತು. ಭಗವಂತನು ಆ ಶಿಶುವನ್ನು ಎಲ್ಲಿಯೋ ದೂರದಲ್ಲಿ ಹಾಕಿ ಅದರ ಸ್ಥಾನದಲ್ಲಿ ತಾನು ಶಿಶುರೂಪದಿಂದ ಇದ್ದನು. ಜಿನಾದಿಗಳು ತಮ್ಮ ಕೂಸನ್ನು ಭಗವಂತನು ದೂರಕ್ಕೆ ಹಾಕಿದ್ದನ್ನು ತಿಳಿಯದೆ ಶಿಶುರೂಪಿಯಾದ ಭಗವಂತನನ್ನೇ ತಮ್ಮ ಮಗುವೆಂದು ತಿಳಿದುಕೊಂಡರು. ಆ ಶಿಶುವಿಗೆ ಜಾತಕರ್ಮವೇ ಮೊದಲಾದ ವೈದಿಕಕರ್ಮವನ್ನು ಮಾಡಲು ಆ ಶಿಶುವು ನಗಲಿಕ್ಕೆ ಆರಂಭಿಸಿತು. ಆಗಲೇ ಹುಟ್ಟಿದ ಕೂಸು ನಗುವುದನ್ನು ನೋಡಿ ಎಲ್ಲರೂ ಆಶ್ಚರ್ಯದಿಂದ ಪ್ರಶ್ನೆಮಾಡಲು ಶಿಶುರೂಪಿಯಾದ ಭಗವಂತನು 'ನಾನು ಬುದ್ಧನು ಅಂದರೆ ಜ್ಞಾನಿಯು' ಎಂದು ಹೇಳಿ ಬುದ್ಧಶಾಸ್ತ್ರವನ್ನು ಹೇಳಿದನು. ಆದರೂ ಜನರು ಭಗವಂತನ ಮಾತಿನ ಮೇಲೆ ವಿಶ್ವಾಸವನ್ನು ಮಾಡದೆ ಇದ್ದರು. ಆಗ ಭಗವಂತನು ದೇವತೆಗಳೆಲ್ಲರನ್ನು ಸ್ಮರಿಸಿದನು. ಆಗ ಎಲ್ಲಾ ದೇವತೆಗಳು ಭಗವಂತನ ಅಭಿಪ್ರಾಯವನ್ನು ತಿಳಿದವರಾಗಿ ತಮ್ಮತಮ್ಮ ಆಯುಧಗಳನ್ನು ಶಿಶುರೂಪಿಯಾದ ಪರಮಾತ್ಮನ ಮೇಲೆ ಜನರು ನೋಡುತ್ತಿರುವಾಗಲೇ ಹಾಕಿದರು. ಆಗ ತಾನೇ ಹುಟ್ಟಿದ ಕೂಸಿನಂತೆ ಇರುವ ಭಗವಂತನು ರುದ್ರದೇವರೇ ಮೊದಲಾದ ದೇವತೆಗಳು ಬಿಟ್ಟ ಆಯುಧಗಳನ್ನೆಲ್ಲಾ ನುಂಗಿದನು. ದೈತ್ಯರಿಗೆ ಇನ್ನು ಹೆಚ್ಚಾಗಿ ಮೋಹವನ್ನು ಉಂಟುಮಾಡಬೇಕೆಂದು ವಿಷ್ಣುರೂಪದಿಂದಲೇ ಬಂದು ಶಿಶುರೂಪವುಳ್ಳ ತನ್ನ ಮೇಲೆ ಚಕ್ರಾಯುಧವನ್ನು ಹಾಕಿದನು. ಆಗ ಆ ಶಿಶುವು ಚಕ್ರಾಯುಧವನ್ನು ಕೈಯಲ್ಲಿ ಹಿಡಿದು ಆ ಚಕ್ರಾಯುಧವನ್ನೇ ಆಸನವನ್ನಾಗಿ ಮಾಡಿಕೊಂಡು ಅದರ ಮೇಲೆ ಕೂತುಕೊಂಡಿತು. ಆಗ ಎಲ್ಲಾ ದೇವತೆಗಳೂ ಶಿಶುವಿಗೆ ನಮಸ್ಕರಿಸಿ ತಮ್ಮ ತಮ್ಮ ಸ್ಥಾನಕ್ಕೆ ಹೊರಟುಹೋದರು.

ಇದನ್ನು ನೋಡಿ ಜಿನನೇ ಮೊದಲಾದ ದೈತ್ಯರು ಬೇಗನೇ ಆ ಶಿಶುರೂಪಿಯಾದ ಬುದ್ಧದೇವರ ಮಾತನ್ನು ಸ್ವೀಕರಿಸಿದರು. ಪಾಪಿಗಳಾದ ಅಸುರರು ಬುದ್ಧದೇವರು ಉಪದೇಶಮಾಡಿದ ಶಾಸ್ತ್ರದಿಂದ ಮೋಹಿತರಾಗಿ ಸರಿಯಾದ ಜ್ಞಾನ ಧರ್ಮ ಇವುಗಳನ್ನು ಬಿಟ್ಟವರಾಗಿ 'ಎಲ್ಲಾ ಜಗತ್ತು ಕ್ಷಣಿಕವು, ಜ್ಞಾನರೂಪವು, ಅಸತ್ಯವು' ಎಂದು ದೃಢವಾಗಿ ಸ್ಮರಿಸುತ್ತಾ ಅಂಧಂತಮಸ್ಸಿಗೆ ಹೋದರು.

ಶ್ರೀಭಗವಂತನು ದೇವತೆಗಳ ಸಮೀಪಕ್ಕೆ ಹೋಗಿ ತಾನು ಉಪದೇಶ ಮಾಡಿದ

ವಿಷಯ ಇತ್ಯಾದಿಗಳನ್ನೆಲ್ಲಾ ಅವರೊಡನೆ ಹೇಳಿದನು. ಆಗ ದೇವತೆಗಳು ಪರಮಾತ್ಮನೊಡನೆ 'ತಾವು ದೈತ್ಯರಿಗೆ ಉಪದೇಶಮಾಡಿದ ವಚನಗಳಿಗೆ ತಮ್ಮ ಮನಸ್ಸಿಗೆ ಅಭಿಪ್ರೇತವಾದ ಅರ್ಥವೇನು' ಎಂದು ಕೇಳಿದರು. ಅದಕ್ಕೆ ಬುದ್ಧದೇವರು 'ಜಗತ್ತನ್ನು ಕ್ಷಣಿಕ ಎಂದಿರುವೆನು. ಕ್ಷಣವೆಂದು ಒಂದುಕ್ಷಣ ಮಾತ್ರವೆಂದು ನನ್ನ ಅಭಿಪ್ರಾಯವಲ್ಲ. ಅಲ್ಪಕಾಲವೆಂದು ಅರ್ಥ. ಜಗತ್ತು ಅಲ್ಪಕಾಲದಲ್ಲಿ ಇರತಕ್ಕದ್ದು. ನಶ್ವರ ಎಂದು ನನ್ನ ಅಭಿಪ್ರಾಯವು. ಆದುದರಿಂದ ಜಗತ್ತು ಸ್ಥಿರವಲ್ಲ. ಒಂದೇ ಕ್ಷಣದಲ್ಲಿರತಕ್ಕದ್ದು ಎಂದು ನನ್ನ ಅಭಿಪ್ರಾಯವಲ್ಲ. ಸ್ಥಿರವೂ ಹೌದು. ಆದರೆ ನಿತ್ಯವಲ್ಲ. ನಶ್ವರವಾದದ್ದು ಎಂದು ಅಭಿಪ್ರಾಯವು. ಮತ್ತು ಜಗತ್ತನ್ನು ಜ್ಞಾನವೆಂದಿರುವೆನು. ಸರ್ವಜ್ಞನಾದ ಕಾರಣ ನನಗೆ ಜ್ಞ ಎಂದು ಹೆಸರು. ಜಗತ್ತೆಲ್ಲವೂ ಅಸ್ವತಂತ್ರವಾದ ಪ್ರಯುಕ್ತ ನನ್ನಿಂದಲೆ (ಅನನೀಯ ಅಂದರೆ) ಚೇಷ್ಟೆ ಮಾಡುತ್ತದೆ. ಆದುದರಿಂದ ಅದಕ್ಕೆ ಸರ್ವಜ್ಞನಾದ ಪರಮಾತ್ಮನಿಂದ ತನ್ನ ವ್ಯಾಪಾರವನ್ನು ಮಾಡುವ ಕಾರಣ ಜ್ಞಾನವೆಂದು ಜಗತ್ತಿಗೆ ಹೆಸರು. ನನಗೆ ಶೂ ಎಂದು ಹೆಸರಿದೆ. ಅಂತಹ ಹೆಸರುಳ್ಳ ನನ್ನಿಂದ ಧರಿಸಲ್ಪಡುವ ಕಾರಣ ಜಗತ್ತು ಶೂನ್ಯವೆಂದು ಹೆಸರುಳ್ಳದ್ದು ಎಂದೂ ನಾನು ಹೇಳಿರುವೆನು. ಮತ್ತು ಜಗತ್ತಿಗೆ ಅಸತ್ ಎಂದು ಹೆಸರನ್ನು ಹೇಳಿರುವೆನು. ಅಸತ್ ಎಂದರೆ ಸುಳ್ಳು ಎಂದು ನನ್ನ ಅಭಿಪ್ರಾಯವಲ್ಲ. ದೋಷವಿರುದ್ಧವಾದ ಗುಣದ ಸ್ವರೂಪನಾದ ಕಾರಣವೂ ದೋಷವಿಲ್ಲದನಾದ ಕಾರಣವೂ ಎಲ್ಲರಿಂದಲೂ ಭಿನ್ನನಾದ ಕಾರಣವೂ ನನಗೆ ಅ ಎಂದು ಹೆಸರು ನನ್ನಿಂದ ಜಗತ್ತು 'ಸಾದ್ಯ' ಎಂದು ನಾಶವುಳ್ಳದ್ದಾಗಿರುವುದು. ಆದುದರಿಂದಲೇ ಜಗತ್ತಿಗೆ ಅಸತ್ ಎಂದು ಹೆಸರು. ಇತ್ಯಾದಿ ರೀತಿಯಾಗಿ ನಾನು ಹೇಳಿದ ಮಾತಿಗೆ ನಿಜವಾದ ಅರ್ಥವನ್ನು ತಿಳಿದುಕೊಳ್ಳಬೇಕು. ನಾನು ಹೇಳಿದ್ದರಲ್ಲಿ ಪರಿತ್ಯಾಗ ಮಾಡಲಿಕ್ಕೆ ಯೋಗ್ಯವಾದದ್ದು ಯಾವುದೂ ಇಲ್ಲ' ಎಂದು ಹೇಳಿ ದೇವತೆಗಳಿಗೆ ಉಪದೇಶಿಸುತ್ತಾ ಒಂದು ರೂಪದಿಂದ ಅಲ್ಲಿಯೇ ಇದ್ದನು. ಇನ್ನೊಂದು ರೂಪದಿಂದ ತನ್ನ ಸ್ಥಾನಕ್ಕೆ ಹೋಗಿ ಇದ್ದನು.

ತರುವಾಯ ಬುದ್ಧದೇವರು ಹೇಳಿದ ಪಕ್ಷವನ್ನು ಅವಲಂಬಿಸಿ ಜಿನನು ಬೇರೊಂದು ಮತವನ್ನೇ ಮಾಡಿದನು. ಮೇಲಾದ ಅರ್ಥವನ್ನೇ ತಿಳಿದುಕೊಂಡು ಆ ಬೌದ್ಧಮತದಿಂದಲೂ ಜಿನನು ಮಾಡಿದ ಮತದಿಂದಲೂ ದೈತ್ಯ ಅಂಶದವರೆಲ್ಲರೂ ಪ್ರೀತಿಯನ್ನು ಹೊಂದಿದರು. ದೇವತೆಗಳು ''**ಪ್ರಶಾಂತವಿದ್ಯೆ**''ಯೆಂದು ಹೆಸರುಳ್ಳ ಬುದ್ಧದೇವರ ನಿಜವಾದ ಅಭಿಪ್ರಾಯವನ್ನು ಸೂಚಿಸುವ ಶಾಸ್ತ್ರವನ್ನು ಹೊಂದಿ

ಸಂತೋಷವನ್ನು ಹೊಂದಿದರು. ಅದು ಸಮಸ್ತ ವೇದಗಳ ಸಾರವು ಅದನ್ನು ಸರಿಯಾಗಿ ತಿಳಿದುಕೊಂಡವರಿಗೆ ಬೇಗನೇ ಮೋಕ್ಷವುಂಟಾಗುವುದು.



## ಕಲ್ಕಿದೇವರ ಕಥೆ [1]

ಸಜ್ಜನರು ಭಾರತಾದಿ ಗ್ರಂಥಗಳನ್ನು ಓದುತ್ತಾ ಸರಿಯಾದ ಸಂಪ್ರದಾಯದಂತೆ ನಡೆಯುತ್ತಾ ಪರಮಾತ್ಮನನ್ನು ಪೂಜಿಸಿ ಉತ್ತಮವಾದ ಗತಿಯನ್ನು ಹೊಂದಿದರು. ಅದನ್ನು ನೋಡಿ ಕ್ರೋಧವಶಾದಿ ದೈತ್ಯರು ಸಹಿಸಲಿಲ್ಲ. ಅವರು ಬಹಳವಾಗಿ ರುದ್ರದೇವರ ತಪಸ್ಸನ್ನು ಮಾಡಿ ಜನರನ್ನು ಮೋಹಗೊಳಿಸುವ ಶಕ್ತಿಯನ್ನು ರುದ್ರದೇವರಿಂದ ಪಡೆಯುವವರಾಗಿ ಭೂಮಿಯಲ್ಲಿ ಹುಟ್ಟಿ ಕುತರ್ಕದಿಂದ ಭಗವಂತನಿಗೂ ಜೀವರಿಗೆ ಅಭೇದವನ್ನು ಹೇಳುತ್ತಾ ಜನರನ್ನು ಮೋಹಗೊಳಿಸಿದರು. ಅವರನ್ನು ಖಂಡನೆಮಾಡಲಿಕ್ಕೂ ಸಜ್ಜನರಿಗೆ ಉತ್ತಮಗತಿಯನ್ನು ಉಂಟು ಮಾಡಲಿಕ್ಕೂ ಭೀಮಸೇನದೇವರು ಶ್ರೀಮದಾನಂದತೀರ್ಥರಾಗಿ ಅವತರಿಸಿದರು. ಇನ್ನು ಮೇಲೆ ದುರ್ಗಾದೇವಿಯರು ಪಯಸ್ವಿನೀನದಿಯ ತೀರದಲ್ಲಿ ಬ್ರಾಹ್ಮಣ ಕುಲದಲ್ಲಿ ಅವತರಿಸಿ ಅಸುರರನ್ನೆಲ್ಲರನ್ನೂ ಸಂಹರಿಸುವರು.

ತರುವಾಯ ಕಲಿಯುಗದ ಕೊನೆಯಲ್ಲಿ ಧರ್ಮಜ್ಞಾನಾದಿ ಸದ್ಗುಣಗಳೆಲ್ಲವೂ ಮರೆಯಾಗುವುವು. ಆಗ ಬ್ರಹ್ಮರುದ್ರ ಇಂದ್ರಾದಿ ದೇವತೆಗಳು ಕ್ಷೀರಸಮುದ್ರತೀರಕ್ಕೆ ಹೋಗುವರು. ಅವರು ನಾರಾಯಣನನ್ನು ಸ್ತೋತ್ರಮಾಡಿ ಪ್ರಾರ್ಥನೆಮಾಡಲು ಶ್ರೀಭಗವಂತನು ಲೋಕದ ಕ್ಷೇಮಕ್ಕಾಗಿ 'ಶಂಭಲ' ಎಂಬ ಗ್ರಾಮದಲ್ಲಿ 'ವಿಷ್ಣುಯಶ' ಎಂಬ ಹೆಸರುಳ್ಳ ಮುನಿಗಳ ಪತ್ನಿಯಲ್ಲಿ 'ಕಲ್ಕಿ' ಎಂಬ ಹೆಸರಿನಿಂದ ಅವತರಿಸುವನು. (ಕಲೇಃ ಕಾತ್ಕಾರತಃ) ಕಲಿಯು ಹಿಂಸಾ ಮಾಡುವ ಕಾರಣ ಕಲ್ಕಿ ಎಂದು ಹೆಸರು. ಅಥವಾ ಕಲ ಎಂದರೆ ಜ್ಞಾನವು, ಕಎಂದರೆ ಸುಖವು ಜ್ಞಾನವೂ ಸುಖವೂ ಇರುವ ಕಾರಣ ಭಗವಂತನಿಗೆ ಕಲ್ಕಿ ಎಂದು ಹೆಸರು. ಆ ಕಲ್ಕಿ ಎಂದು ಹೆಸರುಳ್ಳ ಪರಮಾತ್ಮನು ಒಂದೇ ದಿನದಲ್ಲಿ ಎಲ್ಲಾ ದುಷ್ಟರ ಸಂಹಾರವನ್ನು ಮಾಡುವನು. ಆ ಭಗವಂತನು ಕುದುರೆಯ ಮೇಲೆ ಕೂತುಕೊಂಡು ಸಂಚರಿಸುತ್ತಾ ಅಧರ್ಮದಲ್ಲಿ ಆಸಕ್ತರಾಗಿರುವ ಮತ್ತು ಪರಮಾತ್ಮನಿಂದ ಪರಾಙ್ಮುಖರಾಗಿರುವ ಸಮಸ್ತ ಜನರನ್ನು ಸಂಹಾರ

---

1. ಮ.ತಾ.ನಿ. ಅ–32 ಭಾ.XII-2 ಭಾ.I-3

ಮಾಡುವನು. ತನ್ನ ಜನರಲ್ಲಿ ಧರ್ಮಮರ್ಯಾದೆಯನ್ನು ಉತ್ತಮವಾದ ಜ್ಞಾನವನ್ನು ಉತ್ತಮವಾದ ಭಕ್ತಿಯನ್ನು ಸ್ಥಾಪನೆಮಾಡುವನು. ಇದೇರೀತಿಯಾಗಿ ಪರಮಾತ್ಮನಿಗೆ ಅನಂತರೂಪಗಳು ಇರುವುವು. ಭಗವಂತನು ಆಯಾಕಾರ್ಯಗಳನ್ನು ಮಾಡಿರುವನು. ದೋಷರಹಿತ ಅನಂತಗುಣವುಳ್ಳವನಾಗಿರುವನು. ಆದುದರಿಂದಲೇ ಅವನಿಗೆ ಬ್ರಹ್ಮ ಎಂದು ಹೆಸರಿರುವುದು.



## ಹರಿಯೇ ಪರದೇವತೆಯು

ಪೂರ್ವದಲ್ಲಿ ಒಂದು ಸಮಯದಲ್ಲಿ ಸ್ವಾಯಂಭುವಮನುವು ಮುನಿಗಳಿಂದ ಕೂಡಿಕೊಂಡು ಬಹುಕಾಲದಲ್ಲಿ ಮುಗಿಯುವ ಸತ್ರಯಾಗವನ್ನು ಮಾಡಿದರು. ಅಲ್ಲಿಗೆ ವ್ರತಾನುಷ್ಠಾನವನ್ನು ಮಾಡಿದವರಾದ ನಾನಾ ಶಾಸ್ತ್ರಗಳನ್ನು ತಿಳಿದವರಾದ ಸರ್ವವೇದಗಳನ್ನು ಓದಿದವರಾದ ಸೂರ್ಯನಂತೆ ತೇಜಸ್ವಿಗಳಾದ ಮುನಿಗಳು ಬಂದಿದ್ದರು. ಅವರು ಎಲ್ಲವನ್ನೂ ತಿಳಿದವರಾಗಿದ್ದರೂ ಜನರಿಗೆ ತಿಳಿಯುವುದಕ್ಕಾಗಿ ವಿಚಾರಮಾಡಿದರು. ಬ್ರಹ್ಮ, ವಿಷ್ಣು, ರುದ್ರರ ಮಧ್ಯದಲ್ಲಿ ಯಾವ ದೇವತೆಯು ಉತ್ತಮನು? ಯಾರು ಸ್ತೋತ್ರ ಮಾಡಲ್ಪಟ್ಟವನಾಗಿ ಜನರಿಗೆ ಮೋಕ್ಷವನ್ನು ಕೊಡುವನು? ಯಾರ ಪಾದೋದಕವು ಸೇವ್ಯವು. ಯಾರ ನೈವೇದ್ಯವು ಸ್ವೀಕರಿಸಲಿಕ್ಕೆ ಅರ್ಹವಾದದ್ದು? ಯಾರ ಪ್ರಸಾದವೂ, ತೀರ್ಥವೂ ಪಿತೃಗಳಿಗೆ ತೃಪ್ತಿಯನ್ನು ಉಂಟುಮಾಡುವುದು?' ಎಂದು ಕೇಳಿದರು. ಆಗ ವಿಚಾರ ಮಾಡಿ ನಿರ್ಣಯವನ್ನು ಮಾಡುವ ಎಂಬ ಅಭಿಪ್ರಾಯದಿಂದ ಒಬ್ಬೊಬ್ಬರು ಒಂದೊಂದು ಪ್ರಕಾರವಾಗಿ ಹೇಳಲಿಕ್ಕೆ ಆರಂಭಿಸಿದರು. ಕೆಲವರು ರುದ್ರದೇವರನ್ನು ಉತ್ತಮರೆಂದು ಹೇಳಿದರು. ಇನ್ನು ಕೆಲವರು ಬ್ರಹ್ಮದೇವರನ್ನೂ ಮತ್ತೆ ಕೆಲವರು ಸೂರ್ಯದೇವರನ್ನೂ, ಕೆಲವರು ಪರಮಾತ್ಮನನ್ನು ಹೇಳಿದರು. ಹೀಗೆ ಅನೇಕರು ಅನೇಕ ವಿಧವಾಗಿ ಹೇಳಲು ಸ್ವಾಯಂಭುವಮನುವು 'ಕಲ್ಯಾಣಗುಣಗಳಿಂದ ಪೂರ್ಣನಾದ ತಾವರೆಹೂವಿನಂತೆ ಕಣ್ಣುಗಳುಳ್ಳವನಾದ ಶ್ರೀನಾರಾಯಣನೇ ಎಲ್ಲರಿಗೂ ಪೂಜ್ಯನು. ಇತರರು ಅಲ್ಲ' ಎಂದು ಹೇಳಿದನು. ಆಗ ಋಷಿಗಳು ಲೋಕಹಿತಕ್ಕಾಗಿ ಭೃಗುಋಷಿಗಳಿಗೆ ಕೈಮುಗಿದು ನೀವೇ ಈ ವಿಷಯವನ್ನು ನಿರ್ಣಯಿಸಿಕೊಂಡು ಬರಬೇಕೆಂದು ಹೇಳಿದರು.

ತರುವಾಯ ಭೃಗುಋಷಿಗಳು ಶೀಘ್ರವಾಗಿ ಕೈಲಾಸಕ್ಕೆ ಹೋದರು. ಅಲ್ಲಿ ರುದ್ರದೇವರ ಮನೆಯ ಬಾಗಿಲಿಗೆ ಹೋಗಿ ಅಲ್ಲಿ ನಿಂತಿದ್ದ ಕೈಯಲ್ಲಿ ಶೂಲವನ್ನು

ಹಿಡಿದುಕೊಂಡಿದ್ದ ಭಯಂಕರನಾಗಿದ್ದ ನಂದಿಯನ್ನು ನೋಡಿ 'ಬ್ರಾಹ್ಮಣನಾದ ಭೃಗು ಎಂದು ಹೆಸರುಳ್ಳ ನಾನು ದೇವಶ್ರೇಷ್ಠರಾದ ರುದ್ರದೇವರನ್ನು ನೋಡಲು ಬಂದಿರುವೆನು. ಬೇಗನೇ ಮಹಾನುಭಾವರಾದ ರುದ್ರದೇವರೊಡನೆ ತಿಳಿಸು' ಎಂದು ಹೇಳಿದರು. ಆ ಮಾತನ್ನು ಕೇಳಿ ಸರ್ವಗಣಗಳಿಗೆ ಶ್ರೇಷ್ಠನಾದ ನಂದಿಯು ಅಸಂತುಷ್ಟನಾಗಿ 'ಈಗ ರುದ್ರದೇವರನ್ನು ನೋಡಲಿಕ್ಕೆ ಆಗಲಾರದು. ಅವರು ದೇವಿಯೊಡನೆ ವಿಹರಿಸುತ್ತಿರುವರು. ಬದುಕಿರಬೇಕೆಂಬ ಆಸೆಯಿದ್ದರೆ ಹೋಗು, ಹೋಗು' ಎಂದು ಕಠಿಣವಾಗಿ ಹೇಳಿದನು. ಈರೀತಿಯಾಗಿ ನಂದಿಯಿಂದ ತಿರಸ್ಕೃತರಾದ ಭೃಗುಋಷಿಗಳು ಬಹುದಿವಸಗಳವರೆಗೆ ಬಾಗಿಲಲ್ಲಿಯೇ ಕಾದಿದ್ದರು. ಆಮೇಲೆ ಭೃಗುಋಷಿಗಳು ಕೋಪವುಳ್ಳವರಾಗಿ 'ರುದ್ರದೇವರು ಸ್ತ್ರೀಸಂಗದಲ್ಲಿಯೇ ಮುಳುಗಿಹೋದವರಾಗಿ ನನ್ನನ್ನು ಅವಮಾನ ಮಾಡಿದವರಾದ ಕಾರಣ ಯೋನಿಯಲ್ಲಿರುವ ಲಿಂಗದ ರೂಪವನ್ನು ಅವನು ಧರಿಸಲಿ. ಬ್ರಾಹ್ಮಣನಾದ ನಾನು ಬಂದಿರುವುದನ್ನು ತಿಳಿಯದೆ ಇರುವ ಕಾರಣ ಬ್ರಾಹ್ಮಣರಿಗೆ ಅಪೂಜ್ಯರಾಗಲಿ. ಆದುದರಿಂದ ರುದ್ರದೇವರಿಗೆ ಸಮರ್ಪಿಸಿದ ಅನ್ನವೂ, ನೀರೂ, ಪುಷ್ಪವೂ, ಹವಿಸ್ಸೂ, ನಿರ್ಮಾಲ್ಯವಾಗುವುದು. ಅಂದರೆ ಸ್ವೀಕಾರಕ್ಕೆ ಅನರ್ಹವಾಗುವುದು' ಎಂದು ಲೋಕಪೂಜ್ಯರಾದ ರುದ್ರದೇವರಿಗೆ ಶಾಪವನ್ನು ಕೊಟ್ಟು ಶೂಲವನ್ನು ಧರಿಸಿ ಕೊಂಡಿದ್ದ ಅತಿಕ್ರೂರನಾದ ನಂದಿಯೊಡನೆ 'ಯಾರು ರುದ್ರದೇವರ ಭಕ್ತರಾಗಿರು ವರೋ ಅವರು ಬೂದಿ, ಲಿಂಗ, ಎಲುಬುಗಳನ್ನು ಧರಿಸಿದವರಾಗಿ, ಪಾಷಂಡಿಗಳಾಗಿ ವೇದಬಾಹ್ಯರಾಗಲಿ' ಎಂದು ಶಾಪಕೊಟ್ಟು ಸರ್ವಲೋಕ ನಮಸ್ಕೃತವಾದ ಸತ್ಯಲೋಕಕ್ಕೆ ಹೋದರು. ಅಲ್ಲಿ ದೇವತೆಗಳಿಂದ ಸಹಿತರಾಗಿ ಕೂತುಕೊಂಡಿದ್ದ ಬ್ರಹ್ಮದೇವರನ್ನು ನೋಡಿ ಕೈಮುಗಿದು ನಮಸ್ಕಾರ ಮಾಡಿದರು. ಬ್ರಹ್ಮದೇವರ ಮುಂದೆ ಸುಮ್ಮನೆ ನಿಂತುಕೊಂಡರು. ಬ್ರಹ್ಮದೇವರು ಬಂದಿದ್ದ ಭೃಗುಋಷಿಗಳಿಗೆ ಸತ್ಕಾರವನ್ನು ಮಾಡಲಿಲ್ಲ. ಬರಬೇಕೆಂದು ಹೇಳಲಿಲ್ಲ.. ಪ್ರಿಯಮಾತನ್ನು ಆಡಲಿಲ್ಲ. ಭಗವಂತನ ಸರ್ವೋತ್ತಮತ್ವವು ಸಿದ್ಧಿಸುವುದಕ್ಕಾಗಿ ಐಶ್ವರ್ಯದಿಂದ ಸ್ವಲ್ಪ ಮದವುಳ್ಳವರಂತೆ ರಾಜಸ ಸ್ವಭಾವವನ್ನು ತೋರಿಸಿದರು. ಅದನ್ನು ನೋಡಿ ಭೃಗುಋಷಿಗಳು 'ಮಹಾರಜೋಗುಣದ ಸ್ವಭಾವವುಳ್ಳವರಾಗಿ ನನ್ನನ್ನು ಅವಮಾನ ಮಾಡಿದ ಕಾರಣ ಲೋಕದಲ್ಲಿ ಒಬ್ಬರೂ ನಿಮ್ಮನ್ನು ಪೂಜಿಸದೆ ಇರಲಿ' ಎಂದು ಶಾಪವನ್ನು ಕೊಟ್ಟರು. ರುದ್ರದೇವರೂ, ಬ್ರಹ್ಮದೇವರೂ ಭೃಗುಋಷಿಗಳಿಗಿಂತ ಎಷ್ಟೋ ದೊಡ್ಡವರು. ಆದರೂ ಬ್ರಾಹ್ಮಣರು ಕೊಟ್ಟ ಶಾಪವನ್ನು ಅನುಸರಿಸ

ಬೇಕೆಂದು ಭಗವಂತನ ಆಜ್ಞೆಯಿರುವುದರಿಂದ ಅದನ್ನು ಅವರಿಬ್ಬರೂ ಅಂಗೀಕರಿಸಿದರು.

ತರುವಾಯ ಭೃಗುಋಷಿಗಳನ್ನು ಕ್ಷೀರಸಮುದ್ರದ ಉತ್ತರತೀರದಲ್ಲಿರುವ ಭಗವಂತನ ಲೋಕಕ್ಕೆ ಹೋದರು. ಅಲ್ಲಿದ್ದ ಮಹಾನುಭಾವರೆಲ್ಲರೂ ಇವರನ್ನು ಸತ್ಕರಿಸಿದರು. ಒಬ್ಬರೂ ಒಳಗೆ ಹೋಗಲಿಕ್ಕೆ ತಡೆದವರಿಲ್ಲ. ಭೃಗುಋಷಿಗಳು ಅಂತಃಪುರದ ಒಳಗೆ ಹೋದರು. ಅಲ್ಲಿ ಸೂರ್ಯನಂತೆ ಪ್ರಕಾಶಮಾನವಾದ ವಿಮಾನದಲ್ಲಿ ಶೇಷದೇವರ ಮೇಲೆ ಶ್ರೀಭಗವಂತನು ಮಲಗಿದ್ದನು. ರಮಾದೇವಿಯರು ಎರಡು ಪಾದಗಳನ್ನು ಒತ್ತುತ್ತಿದ್ದರು. ಹಾಗೆ ಮಲಗಿದ್ದ ಪರಮಾತ್ಮನನ್ನು ನೋಡಿ ಭೃಗುಋಷಿಗಳು ಕೋಪವುಳ್ಳವರಾಗಿ ತನ್ನ ಎಡಪಾದದಿಂದ ಪರಮಾತ್ಮನ ಎದೆಗೆ ಒದೆಯುವವರಾದರು. ಕೂಡಲೇ ಪರಮಾತ್ಮನು ಎದ್ದು ಸಂತೋಷದಿಂದ ನಾನು ಧನ್ಯನಾದೆನು ಎಂದು ಹೇಳುತ್ತಾ ಎರಡು ಕೈಗಳಿಂದ ಭೃಗು ಋಷಿಗಳ ಪಾದವನ್ನು ಹಿಡಿದರು. ಮೆಲ್ಲನೆ ಅವರ ಪಾದಗಳನ್ನು ಒತ್ತಿ 'ನಾನು ಧನ್ಯನಾದೆನು. ಕೃತಾರ್ಥನಾದೆನು. ನನ್ನ ದೇಹದಲ್ಲಿ ತಮ್ಮ ಪಾದಸ್ಪರ್ಶದಿಂದ ಮಂಗಲವಾಗುವುದು. ಸಮಸ್ತ ಸಂಪತ್ತನ್ನು ಹೊಂದಲಿಕ್ಕೆ ಕಾರಣಗಳಾದ ಬರುವ ಆಪತ್ತುಗಳ ಸಮೂಹಕ್ಕೆ ಧೂಮಕೇತುವಿನಂತೆ ಇರುವ ಅಪಾರವಾದ ಸಂಸಾರ ಸಮುದ್ರವನ್ನು ದಾಟಿಸಲಿಕ್ಕೆ ಸೇತುವೆಯಂತೆ ಬ್ರಾಹ್ಮಣರ ಪಾದಧೂಳಿಗಳು ನನ್ನನ್ನು ಪವಿತ್ರೀಕರಿಸಲಿ. ಯಾರ ದೇಹದಲ್ಲಿ ಬ್ರಾಹ್ಮಣರ ಪಾದಧೂಳಿಗಳು ಇರುತ್ತವೆಯೋ ಅವನ ದೇಹದಲ್ಲಿ ಗಂಗಾದಿ ಸಮಸ್ತ ತೀರ್ಥಗಳೂ ಇರುತ್ತವೆ' ಎಂದು ಹೇಳಿ ಬೇಗನೆ ಎದ್ದು ರಮಾದೇವಿಯರಿಂದ ಸಹಿತನಾಗಿ ಗಂಧಪುಷ್ಪಾದಿಗಳಿಂದ ಭೃಗುಋಷಿಗಳನ್ನು ಪೂಜಿಸಿದನು. (ಭಗವಂತನು ಲೋಕಶಿಕ್ಷೆಗಾಗಿ ಅಂದರೆ ಬ್ರಾಹ್ಮಣರು ಕೋಪಿಸಿದರೂ ಅವರ ಮೇಲೆ ಪ್ರತಿಯಾಗಿ ಕೋಪಿಸಿಕೊಳ್ಳದೆ ಅವರನ್ನು ಸಮಾಧಾನಪಡಿಸಬೇಕು ಎಂಬ ಧರ್ಮವನ್ನು ಲೋಕಕ್ಕೆ ತಿಳಿಸುವುದಕ್ಕಾಗಿ ಭೃಗುಋಷಿಗಳಿಗೆ ಹಾಗೆ ಉಪಚರಿಸಿದನು. ಆದರೂ ಭೃಗುಋಷಿಗಳಿಗೆ ದೇವರ ಎದೆಯನ್ನು ಒದೆದ ಪಾಪದಿಂದ ವ್ಯಾಧಜನ್ಮವು ಬಂದಿತು. ಅವರು ಜರಾವ್ಯಾಧನೆಂಬ ಹೆಸರಿನಿಂದ ಹುಟ್ಟಿ ಕೃಷ್ಣಪರಮಾತ್ಮನ ಪಾದಕ್ಕೆ ಬಾಣವನ್ನು ಬಿಟ್ಟು ಆಮೇಲೆ ಪಶ್ಚಾತ್ತಾಪವನ್ನು ಹೊಂದಿ ಕೃಷ್ಣಪರಮಾತ್ಮನ ಅನುಗ್ರಹದಿಂದ ಉತ್ತಮಲೋಕವನ್ನು ಹೊಂದಿದರು.)

ಈರೀತಿಯಾಗಿ ಭೃಗುಋಷಿಗಳು ತನ್ನನ್ನು ಭಗವಂತನು ಉಪಚರಿಸಿದುದನ್ನು ನೋಡಿ 'ಭಗವಂತನೇ! ಏನು ನಿನ್ನ ರೂಪವು? ಏನು ಶಾಂತಿಯು! ಏನು ದಯೆಯು!

ಏನು ಜ್ಞಾನವು! ಏನು ಕ್ಷಮೆಯು! ಭಗವಂತನಿಗಿರುವ ಇಂತಹ ಉತ್ತಮಗುಣಗಳು ಬೇರೆ ಯಾರಿಗೂ ಇರುವುದಿಲ್ಲ. ಭಗವಂತನೇ! ಬ್ರಾಹ್ಮಣರಲ್ಲಿ ಪ್ರೀತಿಯುಳ್ಳವನೂ ಮರೆಹೊಂದಲಿಕ್ಕೆ ಅರ್ಹನಾದವನು ನೀನೊಬ್ಬನೇ! ಬ್ರಾಹ್ಮಣರಿಗೆಲ್ಲರಿಗೂ ನೀನೇ ಪೂಜ್ಯನು. ಇನ್ನೊಬ್ಬರು ಅಲ್ಲ. ರಜೋಗುಣ, ತಮೋಗುಣ ಮಿಶ್ರರಾದದ ಬ್ರಹ್ಮರುದ್ರಾದಿದೇವತೆಗಳು ನಿನ್ನಂತೆ ಪೂಜ್ಯರಲ್ಲ. ನೀನೇ ಎಲ್ಲರಿಗೂ ಪೂಜ್ಯನು. ನಿನ್ನ ಪಾದೋದಕವು ಎಲ್ಲಾ ದೇವತೆಗಳಿಗೂ ಪಿತೃಗಳಿಗೂ ಸೇವಿಸಲಿಕ್ಕೆ ಅರ್ಹವು. ಎಲ್ಲಾ ಬ್ರಾಹ್ಮಣರಿಗೂ ಮೋಕ್ಷಪ್ರದವಾದದ್ದು. ನಿನ್ನ ಉಚ್ಛಿಷ್ಟವು ಅಂದರೆ ನಿನ್ನ ನೈವೇದ್ಯವು ಎಲ್ಲಾ ದೇವತೆಗಳಿಗೂ ಪಿತೃಗಳಿಗೂ ಬ್ರಾಹ್ಮಣರಿಗೂ ಸೇವಿಸಲಿಕ್ಕೆ ಯೋಗ್ಯ ವಾಗುವುದು. ಇತರ ದೇವತೆಗಳ ನೈವೇದ್ಯವು ಸ್ವೀಕಾರಕ್ಕೆ ಅರ್ಹವಲ್ಲ. ಇತರ ದೇವತೆಗಳಿಗೆ ಸಮರ್ಪಿಸಿದ ಅನ್ನ ಪುಷ್ಪ ನೀರುಗಳನ್ನು ಮುಟ್ಟಬಾರದು. ಅದೆಲ್ಲವೂ ಮದ್ಯಕ್ಕೆ ಸಮಾನವಾದದ್ದು. ಆದುದರಿಂದ ಬ್ರಾಹ್ಮಣನಾದವನು ನಿತ್ಯವೂ ನಿನ್ನ ಪೂಜಿಸಿ ನಿನ್ನ ತೀರ್ಥವನ್ನೂ ನಿನ್ನ ನೈವೇದ್ಯವನ್ನೂ ಸ್ವೀಕರಿಸಬೇಕು. ಬ್ರಾಹ್ಮಣನು (ಸರ್ವೋತ್ತಮ ಎಂಬ ಭಾವನೆಯಿಂದ) ಇತರ ದೇವತೆಯನ್ನು ನೋಡಬಾರದು. ಇತರ ದೇವತೆಯನ್ನು ಪೂಜಿಸಬಾರದು. ಇತರ ದೇವತೆಯ ಪ್ರಸಾದವನ್ನು ಭೋಜನ ಮಾಡಬಾರದು. ಇತರ ದೇವತೆಯ ಗುಡಿಗೆ ಹೋಗಬಾರದು. ಪಿತೃಗಳ ಶ್ರಾದ್ಧದಲ್ಲಿ ನಿನ್ನ ತೀರ್ಥವನ್ನು ನಿನ್ನ ಪ್ರಸಾದವನ್ನೂ ಕೊಡದೆ ಇದ್ದರೆ ಆ ಶ್ರಾದ್ಧವು ವ್ಯರ್ಥವಾಗುವುದು. ಅವನ ಪಿತೃಗಳು ಕೋಟಿಸಾವಿರ ಕಲ್ಪ ಮತ್ತು ಕೋಟಿನೂರು ಕಲ್ಪ ಕೀವು ರಕ್ತದಿಂದ ಕೂಡಿದ ನರಕದಲ್ಲಿ ಬೀಳುವರು. ನಿನಗೆ ಸಮರ್ಪಿಸಿರುವ ವಸ್ತುವನ್ನು ಯಾರು ಹೋಮ ಮಾಡುತ್ತಾನೋ, ದಾನ ಮಾಡುತ್ತಾನೋ ಅವನು ದೇವತೆಗಳ ಮತ್ತು ಪಿತೃಗಳ ಅನಂತ ತೃಪ್ತಿಯನ್ನು ಹೊಂದುತ್ತಾನೆ. ಆದುದರಿಂದ ಬ್ರಾಹ್ಮಣರಿಗೆಲ್ಲರಿಗೂ ನೀನೇ ಪೂಜ್ಯನು. ಇನ್ನೊಬ್ಬರು ಪೂಜ್ಯರಲ್ಲ. ಮೋಹದಿಂದ ಇತರರನ್ನು ಪೂಜಿಸಿದರೆ ಅವನು ಪಾಷಂಡಿಯೆಂದೆನಿಸಿಕೊಳ್ಳುವನು' ಎಂದು ಹೇಳಿ ಅನೇಕ ವಿಧವಾಗಿ ಸ್ತೋತ್ರಮಾಡಿ 'ಭಗವಂತನೇ! ನಿನ್ನ ಬಂಧಕ ಶಕ್ತಿಯಿಂದ ಮೋಹಿತರಾಗಿ ದೇವತೆಗಳೂ ಋಷಿಗಳೂ ನಿನ್ನನ್ನು ಸರಿಯಾಗಿ ತಿಳಿಯುವುದಿಲ್ಲ. ನಿನ್ನ ಮಹತ್ವವನ್ನು ತಿಳಿದುಕೊಂಡು ಬರುವುದಕ್ಕಾಗಿ ಋಷಿಗಳು ನನ್ನನ್ನು ಕಳುಹಿಸಿದರು. ಭಗವಂತನೇ! ನಿನ್ನ ಎದೆಯ ಮೇಲೆ ಪಾದವನ್ನು ಇಟ್ಟುಬಿಟ್ಟೆನು. ಕ್ಷಮಿಸಬೇಕು' ಎಂದು ಹೇಳಿದರು.

ಈಪ್ರಕಾರವಾಗಿ ಹೇಳಿ ಭೃಗುಋಷಿಗಳು ಪುನಃ ಪುನಃ ಭಗವಂತನಿಗೆ

ನಮಸ್ಕರಿಸಿ ಅಲ್ಲಿ ಇದ್ದ ಋಷಿಗಳಿಂದ ಪೂಜಿಸಲ್ಪಟ್ಟವರಾಗಿ ಯಜ್ಞಮಾಡುತ್ತಿದ್ದ ಸ್ಥಳಕ್ಕೆ ಬಂದು ಸೇರಿದರು. ಅವರನ್ನು ನೋಡಿ ಎಲ್ಲಾ ಮುನಿಗಳೂ ಎದ್ದು ನಮಸ್ಕರಿಸಿ ವಿಧಿ ಪ್ರಕಾರವಾಗಿ ಪೂಜಿಸಿದರು. ಆಗ ಭೃಗು ಋಷಿಗಳು ಅವರೊಡನೆ 'ರಜೋಗುಣ ತಮೋಗುಣ ಸ್ವಭಾವವನ್ನು ತೋರಿಸಿದ ಬ್ರಹ್ಮದೇವರಿಗೂ ರುದ್ರದೇವರಿಗೂ ನಾನು ಶಾಪವನ್ನು ಕೊಟ್ಟಿರುವೆನು. ಆದುದರಿಂದ ಅವರು ಬ್ರಾಹ್ಮಣರಿಗೆ ಪೂಜ್ಯರಲ್ಲ ತಮೋಗುಣಸ್ವಭಾವವನ್ನು ತೋರಿಸಿದ ರುದ್ರದೇವರಿಗೆ ಬ್ರಾಹ್ಮಣರ ಅಪ್ರಿಯತ್ವವು ಬರುವಂತೆಯೂ ನಿಂದ್ಯವಾದ ರೂಪವು ಬರುವಂತೆಯೂ ಶಾಪವನ್ನು ಕೊಟ್ಟಿರುವೆನು. ಪರಮಮಂಗಳ ಗುಣಗಳುಳ್ಳ ಸರ್ವೋತ್ತಮನಾದವನು ನಾರಾಯಣನು. ಅವನನ್ನೇ ಬ್ರಾಹ್ಮಣರು ಪೂಜಿಸಬೇಕು. ಮೋಹದಿಂದ ಯಾರು ಇತರ ದೇವತೆಯನ್ನು ಪೂಜಿಸುವನೋ ಅವನು ಪಾಷಂಡಿಯಾಗುವನು. ನಾರಾಯಣನ ಸ್ಮರಣೆಯಿಂದಲೇ ಮೋಕ್ಷವಾಗುವುದು. ಅವನ ಪಾದೋದಕವೂ ಪ್ರಸಾದವೂ ಪವಿತ್ರವಾದದ್ದು. ಸೇವ್ಯವಾದದ್ದು. ಜನರಿಗೆ ಸ್ವರ್ಗಕ್ಕೂ ಮೋಕ್ಷಕ್ಕೂ ಕಾರಣ ವಾದದ್ದು. ಪರಮಾತ್ಮನಿಗೆ ಸಮರ್ಪಿಸಿದ ಹವಿಸ್ಸನ್ನೇ ದೇವತೆಗಳಿಗೆ ಹೋಮಿಸಬೇಕು. ಪಿತೃಗಳಿಗೂ ಕೊಡಬೇಕು. ಯಾರು ಶ್ರಾದ್ಧದಲ್ಲಿ ಭಗವಂತನ ನೈವೇದ್ಯವನ್ನು ಕೊಡುವುದಿಲ್ಲವೋ ಅವನ ಪಿತೃಗಳು ಯಾವಾಗಲೂ ಮಲಮೂತ್ರವನ್ನು ತಿನ್ನಬೇಕಾಗುವುದು. ಆದುದರಿಂದ ನಾರಾಯಣನ ಪ್ರಸಾದವನ್ನು ಎಲ್ಲಾ ಬ್ರಾಹ್ಮಣರೂ ಸೇವಿಸಬೇಕು. ಇತರ ದೇವತೆಗಳ ನಿರ್ಮಾಲ್ಯವು ನಿಂದ್ಯವಾದದ್ದು. ಯಾವ ಬ್ರಾಹ್ಮಣನು ಒಂದೇ ಬಾರಿ ರುದ್ರಾದಿ ದೇವತೆಗಳ ನಿರ್ಮಾಲ್ಯವನ್ನು ಭೋಜನ ಮಾಡುವನೋ ಅವನು ನಿಶ್ಚಯವಾಗಿಯೂ ಚಂಡಾಲನಾಗವನು. ಅವನು ಕೋಟಿಸಾವಿರ ಕಲ್ಪ ನರಕದಲ್ಲಿ ಶ್ರಮಪಡುವನು. ರುದ್ರದೇವರೇ ಮೊದಲಾದ ದೇವತೆಗಳ ನಿರ್ಮಾಲ್ಯವು ರಾಕ್ಷಸ ಯಕ್ಷ ಪಿಶಾಚಿಗಳ ಅನ್ನಕ್ಕೆ ಸಮಾನವಾದದ್ದು. ಮದ್ಯಮಾಂಸಕ್ಕೆ ಸಮಾನವಾದದ್ದು. ಆದುದರಿಂದ ಇತರ ದೇವತೆಗಳ ನೈವೇದ್ಯವನ್ನು ಬ್ರಾಹ್ಮಣರು ಭೋಜನ ಮಾಡಬಾರದು. ಆದುದರಿಂದ ಬದುಕಿರುವವರೆಗೂ ಇತರ ದೇವತೆಗಳನ್ನು ಬಿಟ್ಟು ನಾರಾಯಣನನ್ನೇ ಸರ್ವೋತ್ತಮ ನೆಂದು ಪೂಜಿಸಬೇಕು. ತಾಪಾದಿ ಪಂಚಸಂಸ್ಕಾರ ವುಳ್ಳವರಾಗಿ ಅಪ್ರಾಕೃತನಾದ ಆ ಪರಮಾತ್ಮನನ್ನೇ ಚೆನ್ನಾಗಿ ಪೂಜಿಸಬೇಕು. ತಪ್ತಚಕ್ರಮುದ್ರೆಯನ್ನು ಧರಿಸಿದವರು ಮೋಕ್ಷವನ್ನು ಹೊಂದುತ್ತಾರೆ. ತಪ್ತಚಕ್ರವನ್ನು ಧರಿಸದೆ ಇದ್ದವರು ನೀಚರು, ತಾಮಸರು. ಆದುದರಿಂದ ಸಮಸ್ತ ಪಾಪಸಮೂಹ ವನ್ನು ದಹಿಸುವ ಪರಮಾತ್ಮನ

ಚಕ್ರಮುದ್ರೆಯನ್ನು ಧರಿಸಬೇಕು. ಶಾಸ್ತ್ರದಲ್ಲಿ ಹೇಳಿದಂತೆ ದ್ವಾದಶನಾಮಗಳನ್ನು ಧರಿಸಬೇಕು. ವಿಧಿಪ್ರಕಾರವಾಗಿ ಮಂತ್ರರತ್ನ ಗಳಿಂದ ಆ ಭಗವಂತನನ್ನು ಪೂಜಿಸಬೇಕು. ನಿತ್ಯವೂ ಅವನ ಪ್ರಸಾದವನ್ನು ಸೇವಿಸಬೇಕು. ಅವನ ಪರಿವಾರ ದವರನ್ನಾಗಿ ಇತರ ದೇವತೆಗಳನ್ನು ಪೂಜಿಸಬೇಕು. ಅವನನ್ನೇ ಸರ್ವಯಜ್ಞಭೋಕ್ತೃ ಎಂದು ತಿಳಿದುಕೊಂಡು ಅವನಿಗೇ ಹೋಮಮಾಡ ಬೇಕು. ಅವನನ್ನೇ ಜಪಿಸಬೇಕು' ಎಂದು ಹೇಳಿದರು. ಅದನ್ನು ಕೇಳಿ ಋಷಿಗಳೆಲ್ಲರೂ ಭೃಗುಋಷಿಗಳಿಗೆ ನಮಸ್ಕರಿಸಿ 'ನೀವೇ ನಮ್ಮ ಸಂಶಯವನ್ನು ಪರಿಹರಿಸಿದಿರಿ. ನೀವೇ ನಮಗೆ ಗತಿಯು. ನಿಮ್ಮ ಅನುಗ್ರಹದಿಂದಲೇ ನಾವು ಇರುವೆವು' ಎಂದು ಭೃಗು ಋಷಿಗಳನ್ನು ಸ್ತುತಿಸುವವರಾಗಿ ಶ್ರೀಭಗವಂತನನ್ನು ಪೂಜಿಸಿ ಸುಖವಾಗಿ ಇದ್ದರು.



## ಪರಶುಕ್ಲತ್ರಯರು [1]

ಪರ ಎಂದರೆ ಪರಮಾತ್ಮನು. ಶುಕ್ಲ ಎಂದರೆ ಶುದ್ಧ ಎಂದು. ಅಂದರೆ ಪರಮಾತ್ಮನ ವಿಷಯದಲ್ಲಿ ಶುದ್ಧರಾದವರು ಪರಶುಕ್ಲರು. ಅಂದರೆ ಪರಮಾತ್ಮನಿಗೆ ಅಪರಾಧವನ್ನು ಮಾಡದೆ ಇರುವವರು. ಅವರು ಮೂರುಜನರು. ರಮಾದೇವಿಯರು, ವಾಯುದೇವರು, ಭಾರತೀದೇವಿಯರು ಇವರು. ವಾಯುದೇವರನ್ನು ಹೇಳಿದ್ದರಿಂದ ಅವರೇ ಬ್ರಹ್ಮಪದವಿಗೆ ಬರುವವರಾದ್ದರಿಂದ ಬ್ರಹ್ಮದೇವರೂ ಶುದ್ಧರೆಂದಾಯಿತು. ಹಾಗೆಯೇ ಭಾರತೀದೇವಿಯರೇ ಸರಸ್ವತೀದೇವಿಯರ ಪದವಿಗೆ ಬರುವವರಾದ ಕಾರಣ ಅವರೂ ಶುದ್ಧರೆಂದಾಯಿತು. ಆದುದರಿಂದ ಮೂರುಜನರು ಎಂದು ಹೇಳಿದ್ದರೂ ರಮಾದೇವಿಯರೂ ಬ್ರಹ್ಮವಾಯುಗಳೂ ಭಾರತೀಸರಸ್ವತಿಯರೂ ಪರಮಾತ್ಮನ ವಿಷಯದಲ್ಲಿ ಯಾವ ಅಪರಾಧವನ್ನು ಮಾಡದೆ ಶುದ್ಧರಾಗಿರುವರು ಎಂದು ಅಭಿಪ್ರಾಯವು. ಯದ್ಯಪಿ ಎಲ್ಲಾ ದೇವತೆಗಳೂ ಸಾಧನಮಾಡಿ ಪರಮಾತ್ಮನ ಅಪರೋಕ್ಷಜ್ಞಾನವನ್ನು ಹೊಂದಿದವರೇ. ಆದರೂ ಅವರು ಅಸುರಾವೇಶಬಲದಿಂದ ಕೆಲವು ಸಮಯಗಳಲ್ಲಿ ಪರಮಾತ್ಮನಲ್ಲಿ ಅಪರಾಧ ಮಾಡುವರು. ಆದರೆ ಈ ಮೂರು ಜನರಲ್ಲಿ ಮಾತ್ರ ಯಾವಾಗಲೂ ಅಸುರಾವೇಶವಿಲ್ಲದ ಕಾರಣ ಯಾವಾಗಲೂ ಪರಮಾತ್ಮನ ವಿಷಯದಲ್ಲಿ ಅಪರಾಧ ಮಾಡುವವರಲ್ಲ.

---

1. ಮ.ತಾ.ನಿ. ಅ–18

ರಮಾದೇವಿಯರು ಯಾವಾಗಲೂ ಪರಮಾತ್ಮನ ವಿಷಯದಲ್ಲಿ ಸ್ವಲ್ಪವೂ ಅಪರಾಧ ಮಾಡುವವರಲ್ಲ. ಪರಮಾತ್ಮನ ಸಂಕಲ್ಪಕ್ಕೆ ಅನುಸಾರವಾಗಿಯೇ ನಡೆಯುವವರು ಎಂಬುದು ಸಕಲ ಸಚ್ಛಾಸ್ತ್ರದಲ್ಲಿಯೂ ಪ್ರತಿಪಾದಿಸಿದ ವಿಷಯವು. ಆದುದರಿಂದ ಎಲ್ಲಿಯಾದರೂ ಪುರಾಣಗಳು ರಮಾದೇವಿಯರು ಮೂಲರೂಪ ದಲ್ಲಿಯೋ ಅವತಾರರೂಪದಲ್ಲಿಯೋ ಭಗವಂತನೊಡನೆ ಜಗಳವಾಡಿದಂತೆ ಹೇಳಿದ್ದರೆ ಅದು ಕೇವಲ ಮೋಹಕವಾದ ಕಥೆಯು ಅಥವಾ ರಮಾದೇವಿಯರು ಭಗವಂತನ ಸಂಕಲ್ಪವನ್ನು ತಿಳಿದವರಾಗಿ ಅದಕ್ಕೆ ಅನುಗುಣವಗಿ ಲೋಕದ ಸ್ತ್ರೀಯರ ಸ್ವಭಾವವನ್ನು ತೋರಿಸಲಿಕ್ಕೆ ಮಾಡಿದ್ದು ಎಂದು ತಿಳಿಯಬೇಕು. ವಾಸ್ತವಿಕವಾಗಿ ಅವರು ಯಾವ ವಿರೋಧವನ್ನು ಮಾಡುವವರಲ್ಲ.

ಹಾಗೆಯೇ ವಾಯುದೇವರೂ ವಿರೋಧವನ್ನು ಮಾಡಿದವರಲ್ಲ. ಬೃಹದಾರಣ್ಯಕ, ಛಾಂದೋಗ್ಯ, ಐತರೇಯ, ಷಟ್‌ಪ್ರಶ್ನ, ತಲವಕಾರ ಎಂಬ ಐದು ಉಪನಿಷತ್ತುಗಳಲ್ಲಿ ವಾಯುದೇವರ ಮಹಿಮೆಯನ್ನು ವಿಶೇಷವಾಗಿ ವರ್ಣಿಸಿರು ವುದು. ಒಂದು ಸಂದರ್ಭಲ್ಲಿ ದೇವತೆಗಳು ಅಸುರರಿಂದ ಪರಾಜಿತರಾಗಿ ಒಬ್ಬೊಬ್ಬ ದೇವತೆಗಳನ್ನೇ ಪ್ರತಿಮೆಯನ್ನಾಗಿ ಮಾಡಿಕೊಂಡು ಉದ್ಗೀಥನಾಮಕ ಪರಮಾತ್ಮನನ್ನು ಧ್ಯಾನಮಾಡಿದಾಗ ದೈತ್ಯರು ಒಂದೊಂದು ಪ್ರತಿಮೆಯನ್ನು ಕೆಡಿಸಿದರೆಂದೂ ವಾಯುದೇವರನ್ನು ಪ್ರತಿಮೆಯನ್ನಾಗಿ ಮಾಡಿಕೊಂಡಾಗ ದೈತ್ಯರು ಹತ್ತಿರ ಬಂದು ನಾಶವನ್ನೇ ಹೊಂದಿದರೆಂದೂ ಆದರಿಂದ ವಾಯುದೇವರಿಗೆ ಆಖಣಾಶ್ಮಸಮ ಅಂದರೆ ಗಟ್ಟಿಯಾದ ಕಲ್ಲಿಗೆ ಸಮಾನರೆಂದೂ ಹೇಳಿ ಅವರು ಅಸುರಾವೇಶರ ಹಿತರೆಂದು ಹೇಳಿದೆ. ಭಗವಂತನ ಸನ್ನಿಧಾನ ವಿಶೇಷದಿಂದ ತಾವು ದೈತ್ಯರನ್ನು ಜಯಿಸಿದಾಗ ಇಂದ್ರಾದಿದೇವತೆಗಳಿಗೆ ಮಾತ್ರ ಅಸುರಾವೇಶದಿಂದ ಅಹಂಕಾರವು ಬಂದಿತಲ್ಲದೆ ವಾಯುದೇವರಿಗೆ ಬಂದಿಲ್ಲವೆಂದು ಪ್ರತಿಪಾದಿಸಿದೆ. ದೇಹದಲ್ಲಿ ಇರುವಾಗ ಇಂದ್ರಿಯಾಭಿಮಾನಿಗಳಾದ ದೇವತೆಗಳೆಲ್ಲರೂ ಜಗಳಾಡಿದಾಗ ಬ್ರಹ್ಮ ದೇವರ ದೇಹದಲ್ಲಿ ಇತರ ಇಂದ್ರಿಯಾಭಿಮಾನಿಗಳಾದ ದೇವತೆಗಳು ಹೊರಟುಹೋದರೂ ಬ್ರಹ್ಮದೇವರ ದೇಹವು ಬೀಳಲಿಲ್ಲವೆಂದೂ ವಾಯುದೇವರು ಹೊರಟು ಹೋದಾಗ ಬಿದ್ದಿತೆಂದೂ, ಆಮೇಲೆ ಇತರ ದೇವತೆಗಳು ಪ್ರವೇಶಿಸಿದಾಗ ದೇಹವು ಏಳಲಿಲ್ಲವೆಂದೂ ವಾಯುದೇವರು ಪ್ರವೇಶಿಸಿದಾಗ ಬ್ರಹ್ಮದೇವರ ದೇಹವು ಎದ್ದಿತೆಂದೂ ತಿಳಿಸಿ ಪರಮಾತ್ಮನೂ ಬ್ರಹ್ಮದೇವರೂ ಆ ದೇಹದಲ್ಲಿ ವಾಯುದೇವರ ಉತ್ತಮತ್ವವನ್ನು ತಿಳಿಸುವುದಕ್ಕಾಗಿ ಉದಾಸೀನರಾಗಿದ್ದ ಕಾರಣ ಈ ಕಾರ್ಯವು

ನಡೆಯಿತೆಂದು ಈ ಇಬ್ಬರನ್ನು ಹೊರತು ಇತರರ ದೇವತೆಗಳಿಂದ ವಾಯುದೇವರೇ ಉತ್ತಮರು ಎಂದೂ ಸಮರ್ಥಿಸಿದೆ. ಇಂತಹ ವಾಯುದೇವರು ಮೂಲರೂಪದಲ್ಲಿ ಪರಮಾತ್ಮನ ವಿರೋಧವನ್ನು ಮಾಡಿದರು. ಪರಮಾತ್ಮನಿಗೆ ಅನಭಿಪ್ರೇತವಾದ ಕಾರ್ಯವನ್ನು ಮಾಡಿದರು ಎಂದು ಯಾವ ಸಚ್ಛಾಸ್ತ್ರದಲ್ಲಿಯೂ ಹೇಳಲಿಲ್ಲ. ಅವರ ಭಕ್ತಿಗೆ ಪರಮಾತ್ಮನು ಸರ್ವದಾ ಅಧೀನನಾಗಿರುವನೆಂದೇ ಉಪನಿಷತ್ತುಗಳಲ್ಲಿ ಹೇಳಿದೆ. ಆದುದರಿಂದ ಅವರು ಮೂಲರೂಪದಲ್ಲಿ ಯಾವಾಗಲೂ ಪರಮಾತ್ಮನಲ್ಲಿ ವಿರೋಧ ಮಾಡಿದವರಲ್ಲ.

ಹಾಗೆಯೇ ಅವತಾರ ರೂಪಗಳಲ್ಲಿಯೂ ವಿರೋಧ ಮಾಡಿದವರಲ್ಲ. ಹನುಮದವತಾರದಲ್ಲಿ ಇತರ ಕಪಿಗಳಿಂದ ಅಸಾಧ್ಯವಾದ ಸಮುದ್ರವನ್ನು ದಾಟಿದ್ದು, ಸೀತಾಕೃತಿಯನ್ನು ಕಂಡು ಬಂದದ್ದು, ಇತರರಿಂದ ಸಂಹರಿಸಲಿಕ್ಕೆ ಆಗದ ಅಸುರರನ್ನು ಸಂಹರಿಸಿದ್ದು ಇತ್ಯಾದಿ ಅನನ್ಯ ಸಾಧ್ಯವಾದ ರಾಮದೇವರ ಬಹುಸೇವೆಗಳನ್ನು ಮಾಡಿರುವರು. ಹನುಮಂತದೇವರು ರಾಮದೇವರಿಗೆ ವಿರುದ್ಧವಾದ ಕಾರ್ಯವನ್ನು ಮಾಡಿರುವರೆಂದು ಯಾವ ಶಾಸ್ತ್ರದಲ್ಲಿಯೂ ಹೇಳಿಲ್ಲ. ಅವರು ಸನಕಾದಿಗಳಿಗೆ ಶ್ರೀರಾಮದೇವರ ಸರ್ವೋತ್ತಮತ್ವವನ್ನು ಹೇಳುವ ಶಾಸ್ತ್ರಗಳನ್ನು ಪಾಠಹೇಳಿದ ರೆಂದೂ ಈಗಲೂ ಮೂಲರಾಮಾಯಣಾದಿ ಗ್ರಂಥಗಳನ್ನು ಪಠಿಸುತ್ತಾ ಕಿಂಪುರುಷ ಖಂಡದಲ್ಲಿ ಇರುತ್ತಿರುವರೆಂದೂ ಶಾಸ್ತ್ರೀಯ ಪ್ರಸಿದ್ಧಿಯಿರುವುದು.

ಹಾಗೆಯೇ ಎರಡನೆಯ ಅವತಾರವಾದ ಭೀಮಸೇನದೇವರಾಗಿರುವಾಗಲೂ ಕೃಷ್ಣಪರಮಾತ್ಮನಿಗೆ ವಿರೋಧವನ್ನು ಮಾಡಿದಂತೆ ಯಾವ ಕಡೆಯೂ ಇರುವುದಿಲ್ಲ. ಲಕ್ಷ್ಮಣಾದೇವಿಯರ ಸ್ವಯಂವರದಲ್ಲಿ ಅರ್ಜುನನು ಧನುಸ್ಸನ್ನು ಎತ್ತಿ ತನ್ನ ಸಾಮರ್ಥ್ಯವನ್ನು ತೋರಿಸಿದವನಾದರೂ ಭೀಮಸೇನದೇವರು ಮಾತ್ರ ಶ್ರೀಭಗವಂತ ನಿಗೆ ಸೇರುವ ಕನ್ಯೆಯ ವಿಷಯದಲ್ಲಿ ಸ್ವಲ್ಪವಾದರೂ ಪ್ರಯತ್ನಮಾಡುವುದೂ ಅಪರಾಧವೆಂದು ಆ ಧನುಸ್ಸಿನ ಪಾರ್ಶ್ವವನ್ನೇ ನೋಡದೆ ಭಗವಂತನಲ್ಲಿ ತನಗೆ ಇರುವ ಅತಿಶಯಿತ ಭಕ್ತಿಯನ್ನು ತೋರಿಸಿರುವರು. ಒಂದು ಸಂದರ್ಭದಲ್ಲಿ ಶ್ರೀಕೃಷ್ಣನ ಸರ್ವೋತ್ತಮತ್ವವನ್ನು ತಿಳಿಯಬೇಕೆಂದು ಕುಂತೀದೇವಿಯು ಪ್ರಾರ್ಥಿಸಿಕೊಂಡಾಗ ಶ್ರೀಭಗವಂತನು ಅಲ್ಲಿ ನೆರೆದಿದ್ದ ಎಲ್ಲಾ ರಾಜರನ್ನು ಜಯಿಸಿದನು. ಭೀಮಸೇನದೇವರ ಹತ್ತಿರ ಯುದ್ಧ ಮಾಡಿ ಹೇಳಿದಾಗ ಸರ್ವಥಾ ನಾನು ಯುದ್ಧಮಾಡಲಾರೆನೆಂದರು. ಕೊನೆಗೆ ಪರಮಾತ್ಮನು ಭೀಮಸೇನದೇವರ ಹತ್ತಿರ ನನ್ನ ರಥದ ಚಕ್ರವನ್ನಾದರೂ ಹಿಡಿ ಎಂದು ಹೇಳಿದನು. ಆಗ ಭೀಮಸೇನದೇವರು ಪರಮಾತ್ಮನಿಗೆ ನಮಸ್ಕರಿಸಿ

ಚಕ್ರವನ್ನು ಹಿಡಿದರು. ಆಗ ಭಗವಂತನು ರಥವನ್ನು ಓಡಿಸಿ 'ನೀನು ಸೋತುಹೋದಿ, ನಾನು ಜಯಿಸಿದೆನು' ಎಂದು ಹೇಳಿದನು. ಅಂದರೆ ಅಂತಹ ಕ್ರೀಡಾಸಮಯ ದಲ್ಲಿಯೂ ದೇವರಿಗೆ ವಿರುದ್ಧವಾದ ಕಾರ್ಯವನ್ನು ಮಾಡುವವರಲ್ಲ. ಕೃಷ್ಣ ಪರಮಾತ್ಮನ ಹತ್ತಿರ ಗದಾಯುದ್ಧವನ್ನು ಅಭ್ಯಾಸಮಾಡಿದರೆ ಅವರಿಗೆ ಎದುರಾಗಿ ಗದೆಯನ್ನು ಬೀಸುವಾಗ ಅವರ ಹತ್ತಿರ ಯುದ್ಧಮಾಡಿದಂತೆ ಆಗುವುದೆಂಬ ಭಾವನೆಯಿಂದ ಅವರೊಡನೆ ಗದಾಯುದ್ಧವನ್ನು ಅಭ್ಯಾಸ ಮಾಡದೆ ಬಲರಾಮ ದೇವರೊಡನೆ ಅಭ್ಯಾಸ ಮಾಡಿದರು. ಬಾಲ್ಯದಲ್ಲಿ ಬಲರಾಮದೇವರೊಡನೆ ಕ್ರೀಡಾಯುದ್ಧವನ್ನು ಮಾಡುತ್ತಿರುವಾಗ ಬಲರಾಮದೇವರಲ್ಲಿ ಆಗಾಗ್ಗೆ ಭಗವಂತನ ಶುಕ್ಲಕೇಶಾವೇಶ ಬಂದ ಸಮಯದಲ್ಲಿ ಬಲರಾಮದೇವರು ಎಷ್ಟು ಪೀಡಿಸಿದರೂ ಪರಮಾತ್ಮನ ಮೇಲಿನ ಭಕ್ತಿಯಿಂದ ಸಹಿಸಿಕೊಂಡಿರುವರು. ಇಂತಹ ಅನೇಕ ಕಥೆಗಳಿರುವುವು. ಯಾವ ಸಂದರ್ಭದಲ್ಲಿಯೂ ಭೀಮಸೇನದೇವರು ಶ್ರೀಭಗವಂತ ನಲ್ಲಿ ವಿರೋಧವನ್ನು ಮಾಡಿದವರಲ್ಲ.

ವಾಯುದೇವರ ಮೂರನೇ ಅವತಾರರಾದ ಶ್ರೀಮದಾನಂದತೀರ್ಥರೂ ಸರ್ವಥಾ ಭಗವಂತನಿಗೆ ವಿರೋಧವನ್ನು ಮಾಡಿದವರಲ್ಲ. ಪ್ರತಿಯೊಂದು ಶಾಸ್ತ್ರವೂ ಭಗವಂತನ ಸರ್ವೋತ್ತಮತ್ವವನ್ನೇ ಸಮರ್ಥಿಸಿರುವುದೆಂದು ಯುಕ್ತಯುಕ್ತವಾಗಿ ಪ್ರತಿಪಾದಿಸಿರುವರು. ಬ್ರಹ್ಮಸೂತ್ರಾದಿಗಳಿಗೆ ವ್ಯಾಖ್ಯಾನ ಮಾಡುವಾಗ ಮೂಲಕಾರಣ ರಾದ ಬಾದರಾಯಣರು ಹೇಳಿದ ಮಾತು ಸರಿಯಲ್ಲವೆಂದು ಇತರ ಭಾಷ್ಯಕಾರರು ಹೇಳಿದಂತೆ ಒಂದು ಸಂದರ್ಭದಲ್ಲಿಯೂ ಹೇಳಲಿಲ್ಲ. ವೇದದಲ್ಲಿ ಕೆಲವು ಭಾಗವು ಸುಳ್ಳು ಹೇಳುವುದೆಂದೂ ಕೆಲವು ಸತ್ಯವನ್ನು ಹೇಳುವುದೆಂದೂ ಕಲ್ಪಿಸಿ ಶ್ರೀಭಗವಂತನ ಪ್ರತಿಪಾದಕವಾದ ವೇದವನ್ನು ಹಾಳು ಮಾಡಿದವರಲ್ಲ. ಪರಕೀಯರಂತೆ ಗ್ರಂಥಕ್ಕೂ ಸಂದರ್ಭವಿರುದ್ಧವಾಗಿ ವ್ಯಾಖ್ಯಾನ ಮಾಡಿದವರಲ್ಲ. ಭಗವದಾಜ್ಞಾರೂಪವಾದ ಶಾಸ್ತ್ರದಲ್ಲಿ ಹೇಳಿದ ವರ್ಣಾಶ್ರಮಧರ್ಮವನ್ನು ಮೀರಿ ತನ್ನ ಮಹಿಮೆಯನ್ನು ಪ್ರಸಿದ್ಧಿಪಡಿಸಿದವರಲ್ಲ. ಗ್ರಂಥಗಳಲ್ಲಿಯೇ ಪೂರ್ವೋತ್ತರ ವಿರೋಧ ಬರುವಂತೆಯೂ ಪ್ರಮಾಣವಿರೋಧ ಬರುವಂತೆಯೂ ವ್ಯಾಖ್ಯಾನ ಮಾಡಿದವರಲ್ಲ. ಆಚಾರ್ಯರ ಮಹಿಮೆಯನ್ನು ಸಾವಿರ ನಾಲಿಗೆಗಳುಳ್ಳ ಶೇಷದೇವರಿಂದಲೂ ಸಂಪೂರ್ಣವಾಗಿ ಹೇಳಲಿಕ್ಕೆ ಆಗಲಾರದು. ಅಂತೂ ಅವರು ಯಾವ ಸಂದರ್ಭ ದಲ್ಲಿಯೂ ಯಾವ ವಿಧವಾಗಿಯೂ ಭಗವಂತನಲ್ಲಿ ವಿರೋಧವನ್ನು ಮಾಡಿಲ್ಲ ವೆಂಬುದನ್ನು ಮಾತ್ರ ಶಪಥಪೂರ್ವಕವಾಗಿ ಹೇಳಬಹುದು.

ಹೀಗೆಯೇ ಭಾರತೀದೇವಿಯರೂ ಮೂಲರೂಪದಲ್ಲಿಯೂ ಅವತಾರರೂಪ ದಲ್ಲಿಯೂ ಭಗವಂತನಿಗೆ ವಿರೋಧವನ್ನು ಮಾಡಿಲ್ಲ. ದ್ರೌಪದೀದೇವಿಯರಾಗಿ ಅವತರಿಸಿದಾಗ ಲೋಕರೀತಿಯಿಂದ ಆಪತ್ತು ಬಂದಾಗಲೂ ಪರಮಾತ್ಮನ ಸಂಕಲ್ಪವನ್ನು ಅನುಸರಿಸಿ ಪಗಡೆ ಆಟದ ಸಭೆಯಲ್ಲಿ ದುರ್ಯೋಧನಾದಿಗಳಿಗೆ ಶಾಪವನ್ನು ಕೊಡಲಿಲ್ಲ. ಧೃತರಾಷ್ಟ್ರನಿಂದ ತನಗಾಗಿ ವರವನ್ನು ಬೇಡಲಿಲ್ಲ. ಯಾವ ವಿಧದಿಂದಲೂ ಭಗವಂತನಲ್ಲಿ ವಿರೋಧ ಮಾಡಿಲ್ಲ. ಆದುದರಿಂದ ಈ ಮೂರು ಜನರೂ ಪರಮಪರಿಶುದ್ಧರು. ಪರಶುಕ್ಲತ್ರಯ ಎಂದು ಹೆಸರುಳ್ಳವರು.

ಇತರ ದೇವತೆಗಳು ಭಗವಂತನ ಅಪರೋಕ್ಷಜ್ಞಾನಿಗಳಾದ ಕಾರಣ ಭಗವದ್ಭಕ್ತರಾಗಿದ್ದರು. ಅಸುರಾವೇಶದಿಂದ ಕೆಲವು ಸಂದರ್ಭಗಳಲ್ಲಿ ಭಗವಂತನಲ್ಲಿ ವಿರೋಧವನ್ನು ಮಾಡಿರುವರು.

ಗರುಡದೇವರಿಗೆ ಒಂದು ದಿವಸದಲ್ಲಿ ಸರ್ವಜಗತ್ತನ್ನು ಧರಿಸಿರುವ ಪರಮಾತ್ಮ ನನ್ನೇ ನಾನು ಹೊತ್ತುಕೊಂಡು ಸಂಚರಿಸುವ ಕಾರಣ ತಾನು ಪರಮಾತ್ಮನಿಂದಲೂ ಹೆಚ್ಚಾದ ಸಾಮರ್ಥ್ಯವುಳ್ಳವನೆಂದು ಅಹಂಕಾರವು ಬಂದಿತು. ಆಗ ಪರಮಾತ್ಮನು ಭಾರವನ್ನು ತೋರಿಸಲು ಗರುಡದೇವರು ಕೆಳಗೆ ಬಿದ್ದುಬಿಟ್ಟರು. ಆಗ ಕಾಗೆಗಳು ಬಂದು ಅವರನ್ನು ಕುಕ್ಕಿದವು. ಅವುಗಳನ್ನು ಓಡಿಸಲಿಕ್ಕೆ ಸಾಮರ್ಥ್ಯವುಂಟಾಗಲಿಲ್ಲ. ತರುವಾಯ ಅವರು ತನ್ನಲ್ಲಿ ಅಂತರ್ಯಾಮಿಯಾಗಿರುವ ಪರಮಾತ್ಮನ ಸಾಮರ್ಥ್ಯದಿಂದ ತಾನು ಪರಮಾತ್ಮನನ್ನು ಹೊತ್ತುಕೊಂಡು ಸಂಚರಿಸುವುದು, ತನ್ನ ಸಾಮರ್ಥ್ಯವಲ್ಲ ಎಂದ ತಿಳಿದವರಾಗಿ ಪರಮಾತ್ಮನನ್ನೇ ಮರೆಹೊಂದಿದರು. ಪರಮಾತ್ಮನು ಅವರಿಗೆ ಅನುಗ್ರಹ ಮಾಡಿದರು. ಇದನ್ನು ಸೂಚಿಸುವುದಕ್ಕಾಗಿಯೇ ಈಗಲೂ ಕೂಡ ಗರುಡಾಕಾರವುಳ್ಳ ಪಕ್ಷಿಗಳನ್ನು ನೋಡಿದ ಕೂಡಲೇ ಅವುಗಳನ್ನು ಕಾಗೆಗಳು ಅಟ್ಟಿಸಿಕೊಂಡು ಹೋಗುತ್ತಿರುವುವು.

ಶೇಷದೇವರು ಬಲರಾಮದೇವರಾಗಿ ಅವತರಿಸಿದಾಗ ಸ್ಯಮಂತಕರತ್ನಕ್ಕಾಗಿ ಕೃಷ್ಣಪರಮಾತ್ಮನೊಡನೆ ವೈಮನಸ್ಸುವುಳ್ಳವನಾಗಿ ಐದುವರ್ಷಕಾಲ ವಿದೇಹನಗರಕ್ಕೆ ಹೋಗಿ ಇದ್ದರು.

ರುದ್ರದೇವರು ಮೂಲರೂಪದಿಂದಲೇ ರಾಮಾಯಣದಲ್ಲಿ ರಾವಣನನ್ನು ಸಂಹರಿಸಿದ ಮೇಲೆ ರಾಮದೇವರ ಹತ್ತಿರ ಯುದ್ಧಮಾಡಿದರು. ಬಾಣಾಸುರನೊಡನೆ ಯುದ್ಧವು ನಡೆಯುವಾಗಲೂ ಪಾರಿಜಾತಾಪಹಾರ ಸಮಯದಲ್ಲಿಯೂ ಕೃಷ್ಣ ಪರಮಾತ್ಮನೊಡನೆ ಯುದ್ಧವನ್ನು ಮಾಡಿರುವರು. ಅಶ್ವತ್ಥಾಮಾಚಾರ್ಯರಾಗಿ

ಅವತರಿಸಿದಾಗಲೂ ಕೃಷ್ಣಪರಮಾತ್ಮನನ್ನೇ ಇಲ್ಲದಂತೆ ಮಾಡಬೇಕೆಂದು ಅಭಿಪ್ರಾಯ ಪಟ್ಟರು.

ಇಂದ್ರದೇವರು ಮೂಲರೂಪದಲ್ಲಿ ಪಾರಿಜಾತಾಪಹಾರ ಸಮಯದಲ್ಲಿ ಕೃಷ್ಣಪರಮಾತ್ಮನೊಡನೆ ಯುದ್ಧವನ್ನು ಮಾಡಿರುವರು. ಅರ್ಜುನನಾಗಿ ಅವತಾರ ಮಾಡಿದಾಗ ಒಬ್ಬ ಬ್ರಾಹ್ಮಣನ ಶಿಶುವನ್ನು ರಕ್ಷಣೆ ಮಾಡುವ ವಿಷಯದಲ್ಲಿ ನಾನು ಕೃಷ್ಣನಂತೆ ಅಲ್ಲ, ಮಹಾಸಮರ್ಥನು ಎಂದು ಹೇಳಿ ಕೃಷ್ಣಪರಮಾತ್ಮನನ್ನು ಅವಮಾನಿಸಿರುವರು.

ಕಾಮನು ಪ್ರದ್ಯುಮ್ನನಾಗಿಯೂ ಸಾಂಬನಾಗಿಯೂ ಅವತರಿಸಿದಾಗ ಸುಭದ್ರೆಯನ್ನು ಅರ್ಜುನನಿಗೆ ಮದುವೆ ಮಾಡಿಕೊಡುವುದು ಕೃಷ್ಣಪರಮಾತ್ಮನಿಗೆ ಇಷ್ಟವೆಂದು ತಿಳಿದೂ ಬಲರಾಮದೇವರ ಮಾತನ್ನು ಕೇಳಿ ತಡಮಾಡಿದನು.

ಅನಿರುದ್ಧನು ಕೃಷ್ಣಪರಮಾತ್ಮನ ಮೊಮ್ಮಗನಾಗಿ ಅವತರಿಸಿದಾಗ ಸುಭದ್ರೆಯನ್ನು ಅರ್ಜುನನಿಗೆ ಕೊಡುವುದಕ್ಕೆ ತಡಮಾಡಿದನು.

ಬೃಹಸ್ಪತ್ಯಾಚಾರ್ಯರೂ ಉದ್ಧವನಾಗಿ ಅವತರಿಸಿದಾಗ ಸುಭದ್ರೆಯನ್ನು ಅರ್ಜುನನಿಗೆ ಕೊಡಲಿಕ್ಕೆ ತಡಮಾಡಿದರು.· ದ್ರೋಣಾಚಾರ್ಯರಾಗಿ ಅವತರಿಸಿ ಕೃಷ್ಣಪರಮಾತ್ಮನನ್ನೇ ಇಲ್ಲದಂತೆ ಮಾಡಬೇಕೆಂದು ಅಭಿಪ್ರಾಯವನ್ನು ಧರಿಸಿದರು.

ಯಮದೇವರ ಅವತಾರನಾದ ಧರ್ಮರಾಜನು ಕೃಷ್ಣಪರಮಾತ್ಮನನ್ನು ಮನುಷ್ಯ ನೆಂದು ತಿಳಿದುಕೊಂಡು ಜರಾಸಂಧನ ಸಂಹಾರ ವಿಷಯದಲ್ಲಿ ಪರಮಾತ್ಮನು ಸೋತುಹೋಗಿರುವನೆಂದು ಭಯಪಟ್ಟನು. ಯಮದೇವರ ಇನ್ನೊಂದು ಅವತಾರ ನಾದ ವಿದುರನು ಕೃಷ್ಣಪರಮಾತ್ಮನು ಕೌರವರ ಸಭೆಗೆ ಹೋದರೆ ಕಟ್ಟಿ(ಹಾಕುವ) ಹೋಗುವರೆಂದು ಭಯಪಟ್ಟು ಸಭೆಗೆ ಹೋಗುವುದು ಬೇಡವೆಂದನು. ಅಂದರೆ ಕೃಷ್ಣ ಪರಮಾತ್ಮನು ಸರ್ವೋತ್ತಮನು. ಅವನನ್ನು ಒಬ್ಬರೂ ಕಟ್ಟಿಹಾಕಲಿಕ್ಕೆ ಆಗಲಾರದು ಎಂಬ ದೇವರ ಮಹಿಮೆಯು ಆಗ ಅವನ ಮನಸ್ಸಿಗೆ ಬರಲಿಲ್ಲ.

ಸೂರ್ಯನ ಅವತಾರನಾದ ಕರ್ಣನೂ ಕೃಷ್ಣಪರಮಾತ್ಮನನ್ನು ಇಲ್ಲದಂತೆ ಮಾಡಬೇಕೆಂದು ಮನಸ್ಸಿನಲ್ಲಿ ಧರಿಸಿದನು.

ಭೃಗುಋಷಿಗಳು ವೈಕುಂಠಕ್ಕೆ ಹೋಗಿ ಪರಮಾತ್ಮನ ಎದೆಗೆ ಒದ್ದರು. ಇದರಿಂದ ಜರಾವ್ಯಾಧನೆಂಬ ಬೇಡನಾಗಿ ಹುಟ್ಟಿದರು. ಆಮೇಲೆ ಪಶ್ಚಾತ್ತಾಪಪಟ್ಟು ಪರಮಾತ್ಮನ ಅನುಗ್ರಹದಿಂದ ಉತ್ತಮಲೋಕವನ್ನು ಹೊಂದಿದರು.

ಕೋಣವಾಯುವೂ ವರುಣದೇವರೂ ಅಗ್ನಿದೇವರೂ ಪಾರಿಜಾತಾಪಹಾ ಸಮಯದಲ್ಲಿ ಕೃಷ್ಣಪರಮಾತ್ಮನೊಡನೆ ಯುದ್ಧ ಮಾಡಿರುವರು.

ನಿಋತಿಯೂ ಪಾರಿಜಾತಪಹಾರ ಸಮಯದಲ್ಲಿ ಯುದ್ಧಕ್ಕೆ ಬಂದಿರುವನು.

ಅಶ್ವಿನೀದೇವತೆಗಳ ಅವತಾರಭೂತರಾದ ಮೈಂದ ವಿವಿದರು ಕೃಷ್ಣ ಪರಮಾತ್ಮನಿಗೆ ವಿರೋಧ ಮಾಡಿರುವರು. ಮತ್ತು ಅಶ್ವಿನೀದೇವತೆಗಳಲ್ಲಿ ಒಬ್ಬನ ಅವತಾರನಾದ ನಕುಲನು ಕೃಷ್ಣಪರಮಾತ್ಮನೊಡನೆ ಕಪ್ಪಕೊಡಬೇಕೆಂದು ಹೇಳಿ ಕಳುಹಿಸಿದನು. ಇನ್ನೊಬ್ಬನ ಅವತಾರನಾದ ಸಹದೇವನು ಕೃಷ್ಣಪರಮಾತ್ಮನ ಮಕ್ಕಳಾದ ಯಾದವರೆಲ್ಲರೂ ಪರಸ್ಪರ ಯುದ್ಧ ಮಾಡಿಕೊಂಡು ಮೃತರಾದರೆಂದು ಶ್ರೀಭಗವಂತನ ಬುದ್ಧಿಯನ್ನು ನಿಂದಿಸಿದನು.

ಕುಬೇರನೂ ಪಾರಿಜಾತಾಪಹಾರ ಸಮಯದಲ್ಲಿ ಕೃಷ್ಣಪರಮಾತ್ಮನೊಡನೆ ಯುದ್ಧಕ್ಕೆ ಬಂದಿರುವನು.

ಕಶ್ಯಪನ ಅವತಾರನಾದ ವಸುದೇವನೂ ಅದಿತಿಯ ಅವತಾರಳಾದ ದೇವಕಿಯೂ ಕೃಷ್ಣಪರಮಾತ್ಮನನ್ನು ಮನುಷ್ಯನೆಂದು ತಿಳಿದುಕೊಂಡಿದ್ದರು. ಅದಿತಿ ದೇವಿಯು ಮೂಲರೂಪದಲ್ಲಿಯೂ ಸ್ವರ್ಗದಲ್ಲಿ ಇರುವಾಗ ಕೃಷ್ಣಪರಮಾತ್ಮನು ಬಂದು ನಮಸ್ಕರಿಸಿದಾಗ ಅಸುರಾವೇಶದಿಂದ ಪರಮಾತ್ಮನೆಂದು ತಿಳಿಯದೆ ಆಶೀರ್ವಾವನ್ನು ಮಾಡಿದ್ದಳು.

ದ್ಯುನಾಮಕವಸುವಿನ ಅವತಾರರಾದ ಭೀಷ್ಮಾಚಾರ್ಯರು ಪರಶುರಾಮ ದೇವರನ್ನು ಅವಮಾನ ಮಾಡಿರುವರು. ಅವರ ಹತ್ತಿರ ಯುದ್ಧವನ್ನೇ ಮಾಡಿರುವರು.

ಏಕಾದಶ ರುದ್ರರಲ್ಲಿ ಒಬ್ಬನಾದ ವಿಷ್ಕಂಭ ಎಂದು ಹೆಸರುಳ್ಳ ರುದ್ರನ ಅವತಾರರಾದ ಕೃಪಾಚಾರ್ಯರು ಕೃಷ್ಣಪರಮಾತ್ಮನೇ ಇಲ್ಲದಂತೆ ಮಾಡಬೇಕೆಂದು ಮನಸ್ಸನ್ನು ಧರಿಸಿದ್ದರು.

ಕೃಷ್ಣಪಕ್ಷಾಭಿಮಾನಿದೇವತೆಯ ಅವತಾರನಾದ ಸಾತ್ಯಕಿಯು ಅರ್ಜುನನನ್ನು ಕೃಷ್ಣಪರಮಾತ್ಮನಿಗೆ ಸಮಾನನನ್ನಾಗಿ ತಿಳಿಯುತ್ತಿದ್ದನು.

ಹೀಗೆ ದೇವತೆಗಳೇ ಶ್ರೀಭಗವಂತನನ್ನು ಕೆಲವು ಸಮಯದಲ್ಲಿ ಅವಮಾನ ಮಾಡಿರುವಾಗ ಋಷಿಗಳೂ ಗಂಧರ್ವರೂ ಮನುಷ್ಯರೂ ಮಾಡಿರುವರು ಎಂದು ಏನು ಹೇಳಬೇಕು. ಆದುದರಿಂದ ರಮಾದೇವಿಯರು ವಾಯುದೇವರು ಭಾರತೀದೇವಿಯರು ಇವರು ಮಾತ್ರ ಪರಮಾತ್ಮನಲ್ಲಿ ಅಪರಾಧವನ್ನು ಮಾಡದೆ ಇರುವರು. ಪರಶುಕ್ಲತ್ರಯ ಎಂದು ಹೆಸರುಳ್ಳವರು.

# ಷಣ್ಮಹಿಷಿಯರು

## ನೀಲಾದೇವಿಯು [1]

ಶ್ರೀಕೃಷ್ಣಪರಮಾತ್ಮನಿಗೆ ರುಕ್ಮಿಣೀ, ಸತ್ಯಭಾಮಾ, ನೀಲಾ, ಮಿತ್ರವಿಂದಾ, ಜಾಂಬವತೀ, ಭದ್ರಾ, ಲಕ್ಷ್ಮಣಾ, ಕಾಲಿಂದೀ ಎಂಬ ಅಷ್ಟ ಮಹಾಮಹಿಷಿಯರು. ಅವರಲ್ಲಿ ರುಕ್ಮಿಣೀ ಸತ್ಯಭಾಮಾದೇವಿಯರು ಲಕ್ಷ್ಮೀದೇವಿಯರ ರೂಪಗಳು. ಲಕ್ಷ್ಮೀದೇವಿಯರಿಗೆ ಶ್ರೀ, ಭೂ, ದುರ್ಗಾ ಎಂಬ ಮೂರು ರೂಪಗಳು ಇರುವುವು. ಶ್ರೀಯೆಂಬ ರೂಪವೇ ರುಕ್ಮಿಣೀದೇವಿಯರು, ಭೂ ಎಂಬ ರೂಪವೇ ಸತ್ಯಭಾಮಾ ದೇವಿಯರು. ದುರ್ಗಾ ಎಂಬವರೇ ನಂದಗೋಪನಿಗೆ ಮಗಳಾಗಿ ಕೃಷ್ಣಪರಮಾತ್ಮನಿಗೆ ತಂಗಿಯಾಗಿ ಅವತರಿಸಿರುವರು. ರುಕ್ಮಿಣೀ, ಸತ್ಯಭಾಮಾದೇವಿಯರನ್ನು ಬಿಟ್ಟು ಉಳಿದ ಆರು ಜನ ಮಹಾಮಹಿಷಿಯರು ಗರುಡಶೇಷ ರುದ್ರರಿಂದ ಐದು ಪಾಲು ಕಡಿಮೆಯಾದವರು.

ಅವರಲ್ಲಿ ನೀಲಾದೇವಿಯು ಪೂರ್ವಜನ್ಮದಲ್ಲಿ ಶವ್ಯಬಾಲ ಎನ್ನುವವನ ಮಗಳಾಗಿದ್ದಳು. ಅವಳು ಪರಮಾತ್ಮನನ್ನೇ ಪತಿಯನ್ನಾಗಿ ಹೊಂದಬೇಕೆಂದು ಆಸೆಯುಳ್ಳವಳಾಗಿ ಬೇರೆಯಾರನ್ನೂ ಮದುವೆಯಾಗಲೇ ಇಲ್ಲ. ಕನ್ಯೆಯಾಗಿಯೇ ಇದ್ದಳು. ಶವ್ಯಬಾಲನು ಸ್ವರೂಪದಿಂದ ಪಿತೃದೇವತೆಗಳಲ್ಲಿ ಒಬ್ಬನು. ಅವನು ಮಗಳಿಗೆ ಮದುವೆಮಾಡಬೇಕೆಂದು ಬಹಳ ಪ್ರಯತ್ನವನ್ನು ಮಾಡಿದನು. ಆದರೂ ಆ ಕನ್ಯೆಯು ಮದುವೆಯಾಗಲಿಕ್ಕೆ ಇಚ್ಛಿಸಲಿಲ್ಲ. ಆಗ ಶವ್ಯಬಾಲನು ಮಗಳೊಡನೆ 'ಮೂರ್ಖಳೇ! ನೀನು ಮದುವೆಯಾಗಲಿಕ್ಕೆ ಯಾಕೆ ಇಚ್ಛಿಸುವುದಿಲ್ಲ?' ಎಂದು ಕೇಳಿದನು. ಆಗ ಅವಳು ತಂದೆಯೊಡನೆ 'ತಂದೆಯೇ! ಪರಮಾತ್ಮನಿಂದ ಮುಖ್ಯವಾದ ಪತಿಯು ಬೇರೆ ಯಾರು ಇರುವನು? ನನಗೆ ಈ ಜನ್ಮದಲ್ಲಿ ಬೇರೆ ಪತಿಯು ಬೇಡ. ಭಗವಂತನೇ ಮುಖ್ಯಪತಿಯು. ಅನಾದಿನಿತ್ಯನಾದ ಲೋಕದಲ್ಲಿ ಶ್ರೇಷ್ಠನಾದ ಸುಂದರನಾದ ಮೋಕ್ಷವನ್ನು ಕೊಡುವವನಾದ ಅಭೀಷ್ಟವನ್ನು ಕೊಡುವವನಾದ ಭಗವಂತನನ್ನು ಯಾರು ತಿಳಿಯುವುದಿಲ್ಲವೋ ಅವರೆಲ್ಲರೂ ವಿಧವೆಯರು. ಪತಿಯೆಂದು ಹೆಸರು ನಿಮಿತ್ತಭೂತನಾದ ಜೀವನು ದೈನ್ಯವುಳ್ಳವನು. ಹರಿಭಕ್ತಿಯಿಲ್ಲದವನು. ಕಶ್ಮಲಭೂತನು. ನವದ್ವಾರದಿಂದ ಮಲವನ್ನು ಸುರಿಸು

---

1. ಗ.ಪು.ಬ್ರ.ಕಾಂ. ಅ–20 ಮ.ತಾ.ನಿ. ಅ.20, ಭಾ. X-71

ವವನು. ಭಗವಂತನನ್ನು ಬಿಟ್ಟು ಇಂತಹ ಪತಿಯು ನನಗೆ ಬೇಡ. ದೇವತಾ ಸ್ತ್ರೀಯರಾದರೋ, ತಮ್ಮ ಪತಿಗಳನ್ನು ಮದುವೆಯಾಗಿ ತಮ್ಮ ಪತಿಗಳಲ್ಲಿ ಪರಮಾತ್ಮನು ಇರುವನೆಂದು ತಿಳಿದುಕೊಂಡು ಆ ಪರಮಾತ್ಮನನ್ನೇ ಸಂತೋಷಪಡಿಸುವರು. ಆದರಿಂದ ಅವರು ಯಾವಾಗಲೂ ವಿಧವೆಯರಲ್ಲ. ಲೋಕದಲ್ಲಿ ಯಾವ ಹೆಂಗಸರಿಗೆ ಹರಿಭಕ್ತರಾದ ಪತಿಗಳು ಇರುವರೋ ಅವರ ಜನ್ಮವು ಸಾರ್ಥಕವಾಗುವುದು.

ಯಾವ ಸ್ತ್ರೀಯರಿಗೆ ಹರಿಭಕ್ತರಾದ ಪತಿಗಳು ಇರುವುದಿಲ್ಲವೋ ಅವರು ದೇಹವನ್ನೇ ಪರಿತ್ಯಾಗಮಾಡಬೇಕು. ಪತಿಯಲ್ಲಿ ಶ್ರೀಪರಮಾತ್ಮನಿರುವನೆಂದು ಆ ಭಗವಂತನನ್ನು ಸ್ಮರಿಸುತ್ತಾ ದೇಹಪರಿತ್ಯಾಗ ಮಾಡಿದರೆ ಅವರಿಗೆ ಆತ್ಮಹತ್ಯಾದಿ ದೋಷವು ಬರುವುದಿಲ್ಲವೆಂದು ಶಾಸ್ತ್ರದಲ್ಲಿ ಹೇಳಿರುವುದು. ಯಾರ ಪತಿಗಳು ನಾರಾಯಣನನ್ನು ತಿಳಿದಿರುವುದಿಲ್ಲವೋ ಅವರ ಸಂಸರ್ಗವನ್ನೇ ಮಾಡಬಾರದು. ಹೆಂಗಸರಿಗೆ ಬಹುಜನ್ಮಗಳಲ್ಲಿ ಮಾಡಿದ ಪಾಪಗಳಿಂದ ವಿಷ್ಣುಭಕ್ತಿಯಿಲ್ಲದ ಗಂಡಂದಿರು ಬರುವರು. ಕಲಿಯುಗದಲ್ಲಿ ವಿಷ್ಣುಭಕ್ತರು ಬಹಳ ಕಡಿಮೆ. ಕಲಿಯುಗದಲ್ಲಿ ವಿಷ್ಣುದೀಕ್ಷೆಯೂ ಕಡಿಮೆ. ಕಲಿಯುಗದಲ್ಲಿ ಭಗವತ್ತತ್ವನಿರ್ಣಯವೂ ಕಡಿಮೆ. ವಿಷ್ಣುಭಕ್ತರ ಸಹವಾಸವೂ ಕಡಿಮೆ. ದೇವರಿಗೆ ಪ್ರದಕ್ಷಿಣೆ ಬರುವುದೂ ಕಡಿಮೆ. ದೇವರಿಗೆ ನಮಸ್ಕಾರ ಮಾಡುವುದೂ ಕಡಿಮೆ. ವಿಷ್ಣುಭಕ್ತರನ್ನು ರಕ್ಷಿಸುವವರೂ ಕಡಿಮೆ. ವಿಷ್ಣುಭಕ್ತರಿಗೆ ಅನ್ನಪಾನಗಳು ಸಿಗುವುದು ಕಡಿಮೆಯಾಗಿದೆ. ಶಾಸ್ತ್ರದಲ್ಲಿ ಹೇಳಿದಂತೆ ದೇವರಪೂಜೆಯನ್ನು ಮಾಡುವುದು ಕಡಿಮೆ. ಭಗವಂತನ ನಾಮವನ್ನು ಉಚ್ಚರಿಸುವುದೇ ಕಡಿಮೆ. ಅವೈಷ್ಣವರನ್ನು ದೂಷಣ ಮಾಡುವುದೂ ಕಡಿಮೆ. ಸದ್ವೈಷ್ಣವರನ್ನು ಪ್ರಶಂಸಾಮಾಡುವುದೂ ಕಡಿಮೆ. ನಿತ್ಯವೂ ಸಾಲ ಗ್ರಾಮಸ್ಪರ್ಶ ಮಾಡುವುದೂ ಕಡಿಮೆ. ಸದ್ವೈಷ್ಣವರ ಸ್ಪರ್ಶ ಮಾಡುವುದೂ ಕಡಿಮೆ. ಗೋವಿನ ಸ್ಪರ್ಶ ಮಾಡುವುದೂ ಕಡಿಮೆ. ಉತ್ತಮವಾದ ಭಗವದ್ವಿಯಕವಾದ ಗಾಯನವೂ ಕಡಿಮೆ. ಸದ್ಗುರುಗಳು ಸಿಗುವುದೂ ಕಡಿಮೆ. ಒಳ್ಳೆಯ ಹೆಂಡತಿ ಮಕ್ಕಳು ಇರುವುದೂ ಕಡಿಮೆ. ತಿರುಪತಿಯಲ್ಲಿ ಇರುವ ಪರಮಾತ್ಮನ ದರ್ಶನವೂ ಕಡಿಮೆ. ಕಾವೇರೀತೀರದಲ್ಲಿರುವ ರಂಗನಾಥನ ದರ್ಶನವೂ ಕಡಿಮೆ. ಕಾಂಚೀಕ್ಷೇತ್ರದಲ್ಲಿ ಇರುವ ವರದರಾಜನ ದರ್ಶನವೂ ಕಡಿಮೆಯೇ. ಜನರಿಗೆ ರಾಮಸೇತುವಿನ ದರ್ಶನವಾಗುವುದೂ ಕಡಿಮೆ. ದರ್ಭಶಯನ ಪರಮಾತ್ಮನ ದರ್ಶನವೂ ಕಡಿಮೆ. ಭೀಮಾತೀರದಲ್ಲಿರುವ ಪಾಂಡುರಂಗವಿಠಲ ದೇವರ ದರ್ಶನವೂ ಕಡಿಮೆ. ಗಯಾಕ್ಷೇತ್ರದಲ್ಲಿ ಇರುವ ವಿಷ್ಣುಪಾದದ ದರ್ಶನವಾಗುವುದೂ ಕಡಿಮೆ.

ಬದರಿಯಲ್ಲಿ ಇರುವ ನಾರಾಯಣನ ದರ್ಶನವೂ ಹಾಗೆಯೇ ತಿರುಪತಿಯಲ್ಲಿರುವ ಶ್ರೀನಿವಾಸದೇವರ ಸನ್ನಿಧಾನದಲ್ಲಿ ತಪಸ್ಸು ಮಾಡುವವರೂ ಕಡಿಮೆ. ಪ್ರಯಾಗದಲ್ಲಿ ಮಾಧವನ ದರ್ಶನವಾಗುವುದೂ ಕಡಿಮೆ. ಆದುದರಿಂದ ಕೃಷ್ಣಪರಮಾತ್ಮನಿಂದ ಇತರನಾದ ಪತಿಯನ್ನು ನಾನು ಅಪೇಕ್ಷಿಸುವುದಿಲ್ಲ' ಎಂದು ಹೇಳಿ ತಿರುಪತಿಗೆ ಹೋದಳು.

ಅಲ್ಲಿ ಕಪಿಲತೀರ್ಥದಲ್ಲಿ ಸ್ನಾನಮಾಡಿ ಬೆಟ್ಟವನ್ನು ಹತ್ತಿ, ಶ್ರೀನಿವಾಸದೇವರ ದರ್ಶನವನ್ನು ಮಾಡಿ ನಮಸ್ಕಾರಮಾಡಿ ಮೂರು ದಿವಸ ಉಪವಾಸ ಮಾಡಿ ಪಾಪವಿನಾಶಿನೀ ತೀರ್ಥಕ್ಕೆ ಹೋಗಿ ಅಲ್ಲಿ ಸ್ನಾನಮಾಡಿ ವಿಚಾರಿಸಿ ಏಕಾಂತ ಪ್ರದೇಶಕ್ಕೆ ಹೋದಳು. ಪಾಪವಿನಾಶಿನಿಯ ಉತ್ತರದಿಕ್ಕಿನಲ್ಲಿ ನಾಲ್ಕು ಮೈಲು ದೂರದಲ್ಲಿ ಒಂದು ತಗ್ಗಾದ ಪ್ರದೇಶದಲ್ಲಿ ನಾರಾಯಣದೇವರನ್ನು ಧ್ಯಾನಮಾಡುತ್ತಾ ಉತ್ತಮವಾದ ತಪಸ್ಸನ್ನು ಮಾಡಿದಳು. ದೇವತೆಗಳ ಮಾನದಲ್ಲಿ ಸಾವಿರವರ್ಷಗಳಾದ ಮೇಲೆ ಭಗವಂತನನ್ನು ಸ್ತೋತ್ರ ಮಾಡಲಿಕ್ಕೆ ಆರಂಭಿಸಿದಳು. 'ಶ್ರೀಭಗವಂತನೇ! ನೀನೇ ತಾಯಿಯು. ನೀನೇ ತಂದೆಯು. ನೀನೇ ಪತಿಯು. ನೀನೇ ಬಂಧುವು. ನೀನೇ ಪುತ್ರನು. ನೀನೇ ಶ್ರೇಷ್ಠಗುರುವು. ನೀನೇ ಮಿತ್ರನು. ನೀನೇ ಸ್ವಾಮಿಯು. ಅನಾದ್ಯನಂತಜನ್ಮಗಳಲ್ಲಿ ವಿಚಾರಿಸಿದರೆ ಇನ್ನೊಬ್ಬರು ಸಹಾಯಮಾಡುವವರನ್ನು ಕಾಣೆನು. ಬೇರೆ ತಾಯಿತಂದೆಗಳೆಲ್ಲರೂ ನಿಮಿತ್ತ ಮಾತ್ರರು. ಅನಿಮಿತ್ತ ಬಂಧುವು ನೀನೇ. ಆದುದರಿಂದ ಭಗವಂತನೇ! ನಿನಗೇ ನಾನು ಪತ್ನಿಯಾಗಬೇಕೆಂದು ಆಸೆಯಿದೆ. ದುಷ್ಟ ತಂದೆತಾಯಿಗಳ ಸಹವಾಸವನ್ನು ಬಿಡಿಸು. ನಿನ್ನ ದ್ರೋಹಿಗಳ ನಿನ್ನ ಭಕ್ತರ ದ್ರೋಹಿಗಳ ಗುರುದ್ರೋಹಿಗಳ ದರ್ಶನವನ್ನು ಬಿಡಿಸು. ಗುರುದ್ರೋಹಿಗಳ ಸ್ಪರ್ಶವನ್ನು ಭಕ್ತದ್ರೋಹಿಗಳ ಸ್ನೇಹವನ್ನು ನಿನ್ನ ದ್ರೋಹಿಗಳೊಡನೆ ಮಾತಾಡುವುದನ್ನು ಬಿಡಿಸು. ನಿನ್ನ ಪಾದಾರವಿಂದದಲ್ಲಿ ಭಕ್ತಿಯನ್ನು ಕೊಡು. ಭಗವಂತನೇ! ಬಹಳ ಸಮಯವಾದರೂ ನಿನ್ನ ದರ್ಶನವಾಗಲಿಲ್ಲ. ಬ್ರಹ್ಮದೇವರಿಗೇ ಅನಂತಜನ್ಮಗಳಲ್ಲಿ ಮಾಡಿದ ಸಾಧನಗಳಿಂದ ನಿನ್ನ ದರ್ಶನವಾಗುವುದು. ಸಮಸ್ತ ದೋಷಗಳಿಂದ ಯುಕ್ತಳಾದ ನನಗೆ ನಿನ್ನ ದರ್ಶನವು ಹೇಗೆ ಆಗಬೇಕು? ಭಗವಂತನೇ! ನಿನ್ನ ದಾಸರ ದಾಸರ ದಾಸರ ದಾಸ್ಯನ್ನು ಕೊಡು. ಪ್ರಸನ್ನನಾಗು' ಎಂದು ಸೋತ್ರಮಾಡಲು ದಯಾನಿಧಿಯಾದ ಶ್ರೀನಿವಾಸನು ಅವಳ ಭಕ್ತಿಯಿಂದ ಪ್ರತ್ಯಕ್ಷನಾದನು. 'ನಿನಗೆ ಬೇಕಾದ ವರವನ್ನು ಕೇಳಿಕೊ. ನಿನಗೆ ವರವನ್ನು ಕೊಡಲಿಕ್ಕೆ ಬಂದಿರುವೆನು' ಎಂದು ಹೇಳಿದನು.

ಭಗವಂತನು ಹೇಳಿದ ಮಾತನ್ನು ಕೇಳಿ ಆ ಕನ್ಯೆಯು ಮಂದಹಾಸ ಯುಕ್ತವಾದ ಮುಖವುಳ್ಳವಳಾಗಿ 'ಮಾಧವ! ಸುಂದರ! ನಾನು ನಿಮ್ಮ ಹೆಂಡತಿಯಾಗಬೇಕು' ಎಂದು ಹೇಳಿದಳು. ಆಗ ಭಗವಂತನು 'ಸುಂದರಿ! ನಾನು ಭೂಮಿಯಲ್ಲಿ ಕೃಷ್ಣಾವತಾರ ಮಾಡಿದಾಗ ನಿನ್ನ ಗಂಡನಾಗುವೆನು' ಎಂದು ಹೇಳಿದನು. ಆಮೇಲೆ ಆ ಕನ್ಯೆಯು 'ಕೃಷ್ಣಾವತಾರದಲ್ಲಿ ನಾನು ಎಲ್ಲರಿಂದಲೂ ಮೊದಲು ನಿಮ್ಮ ಪತ್ನಿಯಾಗಬೇಕು. ನಿಮಗೆ ಉಪನಯವಾಗುವ ಪೂರ್ವದಲ್ಲಿಯೇ ನಿಮ್ಮ ಹೆಂಡತಿಯಾಗಿ ಎಲ್ಲಾ ಸ್ತ್ರೀಯರಿಂದಲೂ ಮೊದಲೇ ನನಗೆ ನಿಮ್ಮ ಅಂಗಸಂಗಸುಖವು ಸಿಗಬೇಕು' ಎಂದು ಹೇಳಿದಳು. ಆಮೇಲೆ ಪರಮಾತ್ಮನು 'ಹಾಗೆಯೇ ಆಗಲಿ' ಎಂದು ಹೇಳಿ 'ಕುಮಾರಿಯಿಂದ ಸ್ವೀಕೃತವಾದ ಕಾರಣ ನನ್ನ ಅನುಗ್ರಹದಿಂದಲೂ ಈ ತೀರ್ಥಕ್ಕೆ ಕುಮಾರಿಧಾರಿತೀರ್ಥವೆಂದು ಹೆಸರಾಗುವುದು. ಇಲ್ಲಿ ಯಾರು ಸ್ನಾನಮಾಡುವರೋ ಅವರ ಎಲ್ಲಾ ಮನಸ್ಸಿನ ಅಭೀಷ್ಟಗಳೂ ಸಿದ್ಧಿಯನ್ನು ಹೊಂದುವುವು' ಎಂದು ಹೇಳಿ ಪರಮಾತ್ಮನು ಅಲ್ಲಿಯೇ ಮರೆಯಾದನು.

ಆ ಕುಮಾರಿಯು ಅಲ್ಲಿಯೇ ದೇಹವನ್ನು ಪರಿತ್ಯಜಿಸಿ ಯಶೋದಾದೇವಿಯ ಅಣ್ಣನಾದ ಕುಂಭಕ ಎಂದು ಹೆಸರುಳ್ಳ ಗೋಪಾಲನಿಗೆ ಮಗಳಾಗಿ ನೀಲಾ ಎಂಬ ಹೆಸರಿನಿಂದ ಹುಟ್ಟಿದಳು. ಶವ್ಯಬಾಲನೇ ಕುಂಭಕನಾಗಿ ಹುಟ್ಟಿದ್ದನು. ಅವನ ಮನೆಗೆ ಶ್ರೀಕೃಷ್ಣಪರಮಾತ್ಮನು ಹೋಗಿ ರುದ್ರದೇವರ ವರದಿಂದ ಜಯಿಸಲಿಕ್ಕೆ ಅಶಕ್ಯರಾದ, ಬಲಿಷ್ಠಗಳಾದ ದೈತ್ಯರ ಸ್ವರೂಪಗಳಾದ ಏಳು ವೃಷಭಗಳನ್ನು ಕೊಂದು ನೀಲಾದೇವಿಯನ್ನು ಉಪನಯನಕ್ಕಿಂತ ಮೊದಲೇ ಮದುವೆಯಾದನು. ಶವ್ಯಬಾಲನೇ ನಗ್ನಜಿತ್ ಎಂಬ ರಾಜನಾಗಿಯೂ ಹುಟ್ಟಿದಳು. ಆ ಕನ್ಯೆಯು ಆ ರಾಜನಿಗೂ ನೀಲಾ ಎಂಬ ಹೆಸರಿನಿಂದಲೇ ಇನ್ನೊಂದು ರೂಪದಿಂದ ಹುಟ್ಟಿದ್ದಳು. ಆ ನೀಲಾದೇವಿಯ ಸ್ವಯಂವರ ಸಮಯದಲ್ಲಿಯೂ ಶ್ರೀಕೃಷ್ಣಪರಮಾತ್ಮನು ಹೋಗಿ ರುದ್ರದೇವರ ವರಬಲದಿಂದ ಯಾರಿಂದಲೂ ನಿಗ್ರಹಿಸಲಿಕ್ಕೆ ಅಶಕ್ಯಗಳಾದ ಏಳು ವೃಷಭಗಳನ್ನು ಜಯಿಸಿ ನೀಲಾದೇವಿಯನ್ನು ಮದುವೆಯಾದನು. ತರುವಾಯ ಕುಂಭಕನ ಮಗಳಾದ ನೀಲಾದೇವಿಯೂ ರಾಜಪುತ್ರಿಯಾದ ನೀಲಾದೇವಿಯಲ್ಲಿ ಪ್ರವೇಶಿಸಿ ಒಂದೇ ರೂಪವುಳ್ಳವಳಾದಳು.



# ಭದ್ರಾದೇವಿಯು [1]

ಭದ್ರಾದೇವಿಯು ತಾರತಮ್ಯದಲ್ಲಿ ನೀಲಾದೇವಿಗೆ ಸಮಾನಳು. ಅಂದರೆ ಗರುಡಶೇಷರುದ್ರರಿಂದ ಐದು ಪಾಲು ಕಡಿಮೆಯಾದವಳು. ಅವಳು ಪೂರ್ವಜನ್ಮದಲ್ಲಿ ನಳನ ಮಗಳಾಗಿದ್ದಳು. ಅವಳು ಭಗವಂತನ ಪತ್ನಿಯಾಗಬೇಕೆಂಬ ಆಸೆಯಿಂದ ದೇವರಿಗೆ ಪ್ರದಕ್ಷಿಣೆ ನಮಸ್ಕಾರಗಳನ್ನು ಮಾಡುತ್ತಿದ್ದಳು. ಈರೀತಿಯಾಗಿ ಮಂಗಳಕರಗಳಾದ ಗುಣಗಳಿದ್ದ ಕಾರಣ ಆಮೇಲೆ ಬಂದ ಜನ್ಮದಲ್ಲಿ ಭದ್ರಾ ಎಂದು ಹೆಸರುಳ್ಳವಳಾದಳು.

ಕನ್ಯೆಯಾದ ಪ್ರದಕ್ಷಿಣೆ ನಮಸ್ಕಾರಗಳನ್ನು ಮಾಡುತ್ತಿದ್ದ ಅವಳೊಡನೆ ತಂದೆಯಾದ ನಳನು 'ಹೀಗೆ ಯಾಕೆ ದೇಹಕ್ಕೆ ಶ್ರಮವನ್ನು ಕೊಡುವಿ? ಈ ಪ್ರದಕ್ಷಿಣೆ ನಮಸ್ಕಾರಗಳನ್ನು ಮಾಡುವುದರಿಂದ ಆಗುವ ಫಲವೇನು?' ಎಂದು ಕೇಳಿದನು. ಅದಕ್ಕೆ ಆ ಕನ್ಯೆಯು 'ತಂದೆಯೇ ಕೇಳು? ಭಗವಂತನ ಪ್ರದಕ್ಷಿಣೆ ನಮಸ್ಕಾರಗಳಿಂದ ಉಂಟಾಗುವ ಫಲವನ್ನು ಹೇಳಲಿಕ್ಕೆ ಯಾರು ಸಮರ್ಥನಾಗುವನು? ಆದರೂ ಶಕ್ತಿಯನ್ನು ಅನುಸರಿಸಿ ಸ್ವಲ್ಪವಾಗಿ ಹೇಳುತ್ತೇನೆ. ಕೇಳು. 'ಯಾವಾಗಲೂ ಪರಮಾತ್ಮನು ನನಗೆ ಸ್ವಾಮಿಯು ಭಗವಂತನೇ! ನಾನು ನಿನ್ನ ದಾಸಾನುದಾಸನು. ನನ್ನನ್ನು ರಕ್ಷಿಸು. ನಾನು ನಿನಗೆ ನಮಸ್ಕಾರ ಮಾಡುತ್ತೇನೆ' ಎಂದು ಹೇಳಿ ಉದ್ದಕ್ಕೆ ನಮಸ್ಕಾರವನ್ನು ಮಾಡಬೇಕು. ಭಗವಂತನ ನಮಸ್ಕಾರವನ್ನು ಸರಿಯಾಗಿ ಮಾಡಬೇಕು. ಇಲ್ಲದಿದ್ದರೆ ಫಲವು ಬರಲಾರದು. ರಮೇಶ, ಮಧ್ವೇಶ, ಸರಸ್ವತೀಶ ಎಂದು ಹೇಳುತ್ತಾ ಭಗವಂತನಿಗೆ ನಮಸ್ಕರಿಸಬೇಕು. ನಮಸ್ಕಾರ ಮಾಡುವುದರಿಂದ ಸಂತೋಷಪಡುವಷ್ಟು ಸಂತೋಷವನ್ನು ಭಗವಂತನು ಇತರ ಪೂಜೆಯಿಂದ ಹೊಂದುವುದಿಲ್ಲ. ಭಕ್ತಿಪೂರ್ವಕವಾದ ಭಗವಂತನ ನಾಮಸ್ಮರಣೆ ಯಿಂದಲೂ ನಮಸ್ಕಾರದಿಂದ ಹೋಗುವಷ್ಟು ಪಾಪವು ಇತರ ಯಾವ ಸಾಧನದಿಂದಲೂ ಹೋಗಲಾರದು. ಯಾರು ಭಗವಂತನಿಗೆ ನಮಸ್ಕಾರವನ್ನು ಮಾಡದೆ ದೇಹವನ್ನು ಬೆಳೆಸುವರೋ ಅವರ ದೇಹವು ವ್ಯರ್ಥವೆಂದು ಹೇಳುವರು. ಹಾಗೆ ದೇಹವನ್ನು ಪೋಷಿಸುವವರಿಗೆ ನರಕವಾಗುವುದೆಂದು ಹೇಳುವರು. ಯಮದೇವರು ಅಂಥವರ ದೇಹವನ್ನು ಒರಳಲ್ಲಿ ಹಾಕಿ ಒನಕೆಗಳಿಂದ ಕುಟ್ಟಿಸುವನು. ಯಾರು ಪಾದಗಳಿಂದ ಭಗವಂತನಿಗೆ ಪ್ರದಕ್ಷಿಣೆ ಬರುವುದಿಲ್ಲವೋ ಅವನ ಪಾದಗಳನ್ನು ಗಾಣದಲ್ಲಿ ಹಾಕಿ

1. ಗ.ಪು.ಬ್ರ.ಕಾಂ. ಅ–21 ಮ.ತಾ.ನಿ. ಅ.20, ಭಾ. X-71

ಪುಡಿಮಾಡಿಸುವರು. ಯಾರ ನಾಲಿಗೆಯು ಭಗವಂತನ ನಾಮವನ್ನು ಹೇಳುವುದಿಲ್ಲವೋ ಅವರ ನಾಲಿಗೆಯು ವ್ಯರ್ಥವೆಂದು ಹೇಳುವರು. ಯಮದೇವರು ಅವರ ನಾಲಿಗೆಯನ್ನು ಹೊರಗೆ ಸೆಳೆದು ಪುಡಿ ಮಾಡಿಸುವರು. ಯಾರು ನಾಲಿಗೆಯಿಂದ ಭಗವಂತನ ನಾಮವನ್ನು ಹೇಳುವುದಿಲ್ಲವೋ ದೇಹದಿಂದ ಭಗವಂತನಿಗೆ ನಮಸ್ಕರಿಸುವುದಿಲ್ಲವೋ ಪಾದಗಳಿಂದ ಭಗವಂತನಿಗೆ ಪ್ರದಕ್ಷಿಣೆ ಬರುವುದಿಲ್ಲವೋ ಅವರು ಮಾಡಿದ ಸಮಸ್ತಕಾರ್ಯವೂ ವ್ಯರ್ಥವೆಂದು ಹೇಳುವರು. ಅವರಿಗೆ ಕಾಶಿಯಲ್ಲಿ ವಾಸಮಾಡಿಯೂ ಪ್ರಯಾಗದಲ್ಲಿ ಮರಣವನ್ನು ಹೊಂದಿಯೂ ಯುದ್ಧರಂಗದಲ್ಲಿ ಮರಣವನ್ನು ಹೊಂದಿಯೂ ಸರಿಯಾಗಿ ಯಾಗಗಳನ್ನು ಮಾಡಿಯೂ ಸಮಸ್ತತೀರ್ಥ ಯಾತ್ರೆ ಮಾಡಿಯೂ ಶಾಸ್ತ್ರವನ್ನು ಓದಿಯೂ ಪ್ರಯೋಜನವಿರುವುದಿಲ್ಲ. ಆದುದರಿಂದ ದೇವರಿಗೆ ನಮಸ್ಕಾರವನ್ನು ಮಾಡಲೇಬೇಕು. ಭಗವಂತನ ಸ್ಮರಣೆಯನ್ನು ಮಾಡಲೇಬೇಕು. ಈ ಮನುಷ್ಯದೇಹವು ದುರ್ಲಭವಾದದ್ದು. ನಶ್ವರವಾದದ್ದು. ನೀರಿನ ಮೇಲೆ ಬರುವ ಗುಳ್ಳೆಯಂತೆ ಇರುವುದು. ನಾನು ನಾಳೆ ಬದುಕುತ್ತೇನೆ. ನಾಡಿದ್ದು ಬದುಕುತ್ತೇನೆ ಎಂದು ದೇಹದಲ್ಲಿ ವಿಶ್ವಾಸಮಾಡಬಾರದು. ತರುವಾಯ ಈಗ ಮಾಡಿದ ದೇವರ ನಮಸ್ಕಾರವು ನಿನ್ನದು. ಈಗ ಮಾಡಿದ ಭಗವಂತನ ಸ್ಮರಣೆಯು ನಿನ್ನದು. ಯಾವಾಗ ಮರಣವು ಬರುತ್ತದೆಯೆಂದು ತಿಳಿಯಲಿಕ್ಕೆ ಆಗಲಾರದು. ಆದುದರಿಂದ ದೇಹದಲ್ಲಿ ವಿಶ್ವಾಸವನ್ನು ಮಾಡಬೇಡ' ಎಂದು ಹೇಳಿದಳು.

ನಳನು ಮಗಳ ಮಾತನ್ನು ಕೇಳಿ ಭಗವಂತನಿಗೆ ಪ್ರದಕ್ಷಿಣೆ ನಮಸ್ಕಾರಗಳನ್ನು ಮಾಡಿದನು. ಆ ಕನ್ಯೆಯೂ ಬಹುದಿನ ಭಗವಂತನಿಗೆ ಪ್ರದಕ್ಷಿಣೆ ನಮಸ್ಕಾರಗಳನ್ನು ಮಾಡಿ ಭಗವಂತನನ್ನು ಧ್ಯಾನಮಾಡಿ ಮರಣಕಾಲದಲ್ಲಿ ಭಗವಂತನ ನಾಮವನ್ನು ಉಚ್ಚರಿಸಿ ಪ್ರಾಣವನ್ನು ಬಿಟ್ಟಳು. ಆಮೇಲೆ ಅವಳು ವಸುದೇವನ ತಂಗಿಯಾದ ಕೈಕೇಯಿ ಎಂದು ಹೆಸರುಳ್ಳವಳ ಉದರದಲ್ಲಿ ಭದ್ರಾ ಎಂಬ ಹೆಸರಿನಿಂದ ಹುಟ್ಟಿದಳು. ಅವಳ ಅಣ್ಣಂದಿರಾದ ಕೈಕೇಯರು ಎನ್ನುವವರು ಭಕ್ತಿಯಿಂದ ಶ್ರೀಕೃಷ್ಣಪರಮಾತ್ಮನಿಗೆ ಮದುವೆ ಮಾಡಿಕೊಟ್ಟರು.



# ಮಿತ್ರವಿಂದಾದೇವಿಯು[1]

ಶ್ರೀಕೃಷ್ಣಪರಮಾತ್ಮನ ಅಷ್ಟಮಹಾಮಹಿಷಿಯರಲ್ಲಿ ಮಿತ್ರವಿಂದಾದೇವಿಯೊಬ್ಬಳು. ಇವಳೂ ತಾರತಮ್ಯದಲ್ಲಿ ಗರುಡಶೇಷರುದ್ರರಿಗೆ ಐದು ಪಾಲು ಕಡಿಮೆಯಾದವಳು. ಇವಳು ಪೂರ್ವದಲ್ಲಿ ಅಗ್ನಿಷ್ವಾತ್ತ ಎಂದು ಹೆಸರುಳ್ಳ ಪಿತೃದೇವತೆಯ ಮಗಳು. ಅವಳು ಮಿತ್ರ ಎಂದು ಹೆಸರುಳ್ಳ ಭಗವಂತನನ್ನು ಹೊಂದಲಿಕ್ಕೆ ಬೇಕಾದ ಉಪಾಯವನ್ನು ಯೋಚಿಸಿದಳು.

'ಭಗವಂತನನ್ನು ಹೊಂದಲಿಕ್ಕೆ ಅನೇಕ ಸಾಧನಗಳು ಇರುವುವು. ಅವುಗಳ ಮಧ್ಯದಲ್ಲಿ ಪುರಾಣವನ್ನು ಕೇಳುವುದು ಶ್ರೇಷ್ಠವೆಂದು ಹೇಳುವರು. ಸಾತ್ವಿಕ ಪುರಾಣಗಳನ್ನೇ ಕೇಳಬೇಕು. ಯಾವ ಪುರಾಣದಲ್ಲಿ ವಿಷ್ಣುವಿನ ಸರ್ವೋತ್ತಮತ್ವವನ್ನು ಹೇಳುತ್ತದೋ ವಾಯುದೇವರ ಉತ್ಕರ್ಷವನ್ನು ಹೇಳುತ್ತದೋ ಸಜ್ಜನರಿಗೆ ಉತ್ಕರ್ಷವನ್ನು ಹೇಳುತ್ತದೋ ಆ ಪುರಾಣವನ್ನೇ ಯಾವಾಗಲೂ ಭಗವಂತನನ್ನೇ ಸ್ಮರಿಸುತ್ತಾ ಕೇಳಬೇಕು. ಬೇರೆ ಪುರಾಣವನ್ನು ಕೇಳಬಾರದು. ಯಾವ ದಿವಸದಲ್ಲಿ ಭಗವಂತನ ಶ್ರವಣವು ನಡೆಯುವುದಿಲ್ಲವೋ ಆ ದಿನದಲ್ಲಿ ಅವನು ಬದುಕಿರುವುದೇ ವ್ಯರ್ಥವಾಗುವುದು. ಭಗವಂತನ ಮಹಿಮೆಯನ್ನು ಶ್ರವಣ ಮಾಡದೆ ಇದ್ದರೆ ಸ್ನಾನವೂ ಜಪವೂ ಪಂಚಯಜ್ಞಗಳೂ ವ್ರತವೂ ಎಲ್ಲವೂ ವ್ಯರ್ಥವಾಗುವುದು. ಸರಿಯಾದ ಸಂಪ್ರದಾಯವನ್ನು ತಿಳಿದ ಗುರುಗಳ ಮುಖದಿಂದ ಯಾರು ಭಾಗವತಪುರಾಣವನ್ನು ಕೇಳುವುದಿಲ್ಲವೋ ವಿಷ್ಣುಪುರಾಣವನ್ನು ಕೇಳುವುದಿಲ್ಲವೋ ಗಾರುಡಪುರಾಣ ಬ್ರಹ್ಮಕಾಂಡವನ್ನು ಕೇಳುವುದಿಲ್ಲವೋ ಅವರ ಜನ್ಮವು ವ್ಯರ್ಥವೆಂದು ಜ್ಞಾನಿಗಳು ಹೇಳುವರು. ಆದುದರಿಂದ ಭಗವಂತನ ಕಥೆಯನ್ನು ಯಾವಾಗಲೂ ಕೇಳುತ್ತಿರಬೇಕು.

ಯಾವ ಊರಲ್ಲಿ ಭಗವಂತನ ಕಥೆಯೆಂಬ ನದಿಯು ಹರಿಯುತ್ತಿರುವು ದಿಲ್ಲವೋ, ಪರಮಾತ್ಮನ ಭಕ್ತರು ವಾಸಿಸುತ್ತಿರುವು ದಿಲ್ಲವೋ, ಭಗವಂತನ ಉತ್ಸವವು ನಡೆಯುತ್ತಿರುವುದಿಲ್ಲವೋ, ಆ ಊರಲ್ಲಿ ಒಂದುಕ್ಷಣವೂ ವಾಸಮಾಡಬಾರದು. ಯಾವ ಗ್ರಾಮದಲ್ಲಿ ಭಾಗವತಪುರಾಣವು ನಡೆಯುವುದಿಲ್ಲವೋ, ಯಾವ ಗ್ರಾಮದಲ್ಲಿ ಭಗವದ್ಭಕ್ತರು ವಾಸಿಸಿಕೊಂಡು ಇಲ್ಲವೋ, ಯಾವ ಮನೆಯಲ್ಲಿ ಭಗವದ್ಗೀತೆಯು ಇಲ್ಲವೋ, ಯಾವ ಗ್ರಾಮದಲ್ಲಿ ವಿಷ್ಣುಸಹಸ್ರನಾಮವನ್ನು

1. ಗ.ಪು.ಬ್ರ.ಕಾಂ. ಅ–20 ಮ.ತಾ.ನಿ. ಅ.20, ಭಾ. X–71

ಜಪಿಸುವುದಿಲ್ಲವೋ, ಯಾವ ಗ್ರಾಮದಲ್ಲಿ ವಿಷ್ಣುಸಹಸ್ರ ನಾಮದ ರಸವನ್ನು ತಿಳಿದವರು ಇರುವುದಿಲ್ಲವೋ, ಅಲ್ಲಿ ಒಂದುಕ್ಷಣವೂ ಇರಬಾರದು. ಯಾವ ದಿವಸದಲ್ಲಿ ಭಗವತ್ಕಥಾ ಶ್ರವಣವಾಗುವುದಿಲ್ಲವೋ ಆದಿನದ ಆಯುಷ್ಯವು ವ್ಯರ್ಥವಾಗಿ ಕಳೆದುಹೋಗುವುದು. ಮನುಷ್ಯಜನ್ಮವು ಪರಮ ದುರ್ಲಭವಾದದ್ದು. ಕಿವಿಗೆ ವಜ್ರದ ಕಡುಕು ಇತ್ಯಾದಿ ಆಭರಣಗನ್ನು ಹಾಕಿ ಕೊಂಡರೂ ಜ್ಞಾನಿಗಳೂ ಆ ಕಿವಿಯನ್ನು ಸುಂದರ ಎಂದು ಹೇಳಲಾರರು. ಭಗವಂತನ ಕಥಾಶ್ರವಣವೆಂಬ ಆಭರಣವಿದ್ದರೆ ಮಾತ್ರ ಅದನ್ನು ಸುಂದರ ವೆನ್ನುವರು. ಆದುದರಿಂದ ತಾತ್ಪರ್ಯಪೂರ್ವಕವಾಗಿ ಯಾವಾಗಲೂ ಕಿವಿಗಳಿಂದ ಭಾಗವತಾರ್ಥವನ್ನು ಕೇಳುತ್ತಾ ಇರಬೇಕು. ಯಾರು ಸ್ನಾನಮಾಡದೆ ಭಾಗವತಪುರಾಣವನ್ನು ಹೇಳುತ್ತಾರೋ ಅಥವಾ ಕೇಳುತ್ತಾರೋ ಅವರ ಜನ್ಮವು ವ್ಯರ್ಥವಾಗುವುದು. ಅವರಿಗೆ ಮಹಾಫಲವು ಬರಲಾರದು. ಯಾರು ರುಮಾಲೆಯನ್ನು ಧರಿಸಿಕೊಂಡು ಅಂಗಿಹಾಕಿಕೊಂಡು ಭಗವಂತನ ಕಥೆಯನ್ನು ಹೇಳುತ್ತಾರೋ ಅಥವಾ ಕೇಳುತ್ತಾರೋ ಅವರು ಮಹಾಪಾಪಿಗಳು. ಕೇವಲ ಸಂಸಾರವಿಷಯದಲ್ಲಿ ಆಸಕ್ತರಾದವರು.

ಯಾರು ದಾಕ್ಷಿಣ್ಯದಿಂದಲೋ ಹಣದ ಆಸೆಯಿಂದಲೋ ತತ್ವಭಾಗವನ್ನು ಮರೆಮಾಡಿ ಭಾಗವತವನ್ನು ಹೇಳುತ್ತಾರೋ ಅವರಿಗೆ ಯಮದೇವರೇ ಗತಿಯು. ಅಂದರೆ ನರಕವುಂಟಾಗುವುದು. ಯಾರು ಕಾಮ್ಯಕರ್ಮವನ್ನು ಮಾಡುವ ಭಾಗದಲ್ಲಿಯೋ ಇತರ ದೇವತೆಗಳನ್ನು ಹೇಳುವ ಭಾಗದಲ್ಲಿಯೋ ಜನರಿಗೆ ರುಚಿ ಉಂಟಾಗುವಂತೆ ಮಾಡುತ್ತಾರೋ 'ಇಷ್ಟು ಹಣ ವನ್ನು ಕೊಟ್ಟರೆ ಪುರಾಣವನ್ನು ಹೇಳುತ್ತೇನೆ' ಎಂದು ಮೊದಲೇ ಮಾತಾಡಿಕೊಂಡು ಬೆಲೆಗೆ ಪುರಾಣವನ್ನು ಹೇಳುವರೋ, ಬೆಲೆಗೆ ಪುರಾಣವನ್ನು ಕೇಳುವರೋ, ಬೆಲೆಗೆ ಶಾಸ್ತ್ರಾರ್ಥವನ್ನು ಹೇಳುವರೋ, ಕೇಳುವರೋ, ಬೆಲೆಗೆ ವೇದಗಳನ್ನು ಹೇಳಿಕೊಡುವರೋ, ಅವರೆಲ್ಲರಿಗೂ ಯಮದೇವರೇ ಗತಿಯು. ಯಾರು ಮೊದಲೇ ಇಷ್ಟು ಹಣವನ್ನು ಕೊಡಬೇಕೆಂದು ಹೇಳದೆ ಪುರಾಣಾದಿಗಳನ್ನು ಹೇಳಿ ಆಗ ದೈವೇಚ್ಛೆಯಿಂದ ಎಷ್ಟು ಹಣವು ಬರುತ್ತದೋ ಅಷ್ಟರಿಂದಲೇ ತೃಪ್ತಿಯನ್ನು ಹೊಂದುವವರಾಗಿದ್ದರೆ ಅವರು ಪುರಾಣಾದಿಗಳನ್ನು ಹೇಳಲಿಕ್ಕೆ ಯೋಗ್ಯರೆಂದೇ ತಿಳಿಯಬೇಕು. ಯಾರು ಕಾಮ್ಯಧರ್ಮಗಳನ್ನು ಮಾಡಲಿಕ್ಕೇ ಅತಿ ಆಸೆಯುಳ್ಳವ ರಾಗಿರುವರೋ ಅವರಿಗೆ ಭಾಗವತದಲ್ಲಿ ಅಧಿಕಾರವಿರುವುದಿಲ್ಲ.

'ಬ್ರಹ್ಮದೇವರಲ್ಲಿ ಅಂತರ್ಯಾಮಿಯಾದ ಭಗವಂತನು ನನ್ನನ್ನು ರಕ್ಷಣೆ

ಮಾಡುವನು. ಇತರ ದೇವತೆಗಳು ಸ್ವತಂತ್ರರಲ್ಲ' ಎಂದು ಯಾರು ಯಾವಾಗಲೂ ತಿಳಿದುಕೊಂಡು ಇರುವರೋ ಅವರ ಯೋಗಕ್ಷೇಮವನ್ನು ಭಗವಂತನೇ ನೋಡಿಕೊಳ್ಳುವನು. ಸದ್ವೈಷ್ಣವರಿಗೆ ಯಾವಾಗಲೂ ಅಶುಭವಿರುವುದಿಲ್ಲ. ಭಗವಂತ ಅವರವರ ಕರ್ಮಾನುಸಾರವಾಗಿ ಶುಭ ಅಥವಾ ಅಶುಭಫಲವನ್ನು ಕೊಡುವನು. ಆದುದರಿಂದ ಫಲಕ್ಕಾಗಿ ಪ್ರಯತ್ನಮಾಡಬಾರದು. ಪರಮಾತ್ಮನ ಧ್ಯಾನಕ್ಕಾಗಿಯೇ ಪ್ರಯತ್ನ ಮಾಡಬೇಕು. ಮೊದಲು ಸ್ನಾನಮಾಡಿ ದಿವ್ಯಮಂತ್ರಗಳನ್ನು ಜಪಿಸಿ ನಿರ್ಮಾಲ್ಯ ವಿಸರ್ಜನೆ ಮಾಡಿ ಶುದ್ಧನಾಗಿದ್ದುಕೊಂಡು ಭಾಗವತ ಪುರಾಣವನ್ನು ನಿತ್ಯವೂ ಹೇಳಬೇಕು ಅಥವಾ ಕೇಳಬೇಕು. ಕರ್ಮಾನುಸಾರವಾಗಿ ಧನಾದಿಗಳು ಬರುತ್ತವೆ. ಭಗವತ್ಕಥಾಶ್ರವಣವನ್ನು ಅತ್ಯಂತ ಆದರದಿಂದ ಮಾಡಬೇಕು. ಅದು ಅತಿದುರ್ಲಭ ವಾದದ್ದು. ಅತ್ಯಾದರದಿಂದ ಭಾಗವತಸಾರವನ್ನು ಆಸ್ವಾದನ ಮಾಡುವುದು ದುರ್ಲಭವಾದದ್ದು. ಭಾಗವತ ಪುರಾಣಾರ್ಥವನ್ನು ಆಸ್ವಾದನಮಾಡಿ ಆನಂದಬಾಷ್ಪವನ್ನು ಸುರಿಸುವುದು ಅತ್ಯಂತ ದುರ್ಲಭವಾದದ್ದು. ಶ್ರವಣಮಾಡಿ ತತ್ವನಿಶ್ಚಯವನ್ನು ಮನಸ್ಸಿನಲ್ಲಿ ಇಟ್ಟುಕೊಳ್ಳುವುದೂ ದುರ್ಲಭ ವಾದದ್ದು. ತತ್ವನಿಶ್ಚಯ ಮಾಡಿಕೊಂಡು ಕಾಮಕ್ರೋಧಾದಿಗಳನ್ನು ಜಯಿಸುವುದು ದುರ್ಲಭವಾದದ್ದು. ತತ್ವವನ್ನು ಅಯೋಗ್ಯರಿಗೆ ಉಪದೇಶ ಮಾಡದೆ ಇರುವುದೂ ದುರ್ಲಭವಾದದ್ದು. ತತ್ವವನ್ನು ತಿಳಿದುಕೊಂಡು ಅವೈಷ್ಣವರ ಸಹವಾಸ ಮಾಡದೆ ಇರುವುದು ದುರ್ಲಭವಾದದ್ದು. ಹೀಗೆಲ್ಲಾ ದೋಷಗಳು ತತ್ವವನ್ನು ತಿಳಿದವರಿಗೂ ಬಂದು ಸೇರುತ್ತದೆ. ಅದರಿಂದ ಅವರಿಗೂ ಕೆಲವು ಸಮಯದಲ್ಲಿ ಸಂದೇಹಗಳು ಬರುತ್ತವೆ. ಅದರಿಂದ ಅವರಿಗೂ ಕೆಲವು ಸಮಯದಲ್ಲಿ ಅಶುಭಫಲವುಂಟಾಗು ವುದು. ಆದುದರಿಂದ ಸರ್ವಕಾಲದಲ್ಲಿಯೂ ಶ್ರವಣವನ್ನು ಮಾಡುವೆನು. ಅದರಿಂದ ನಾನು ಭಗವಂತನ ಪತ್ನಿಯಾಗುವೆನು' ಎಂದು ಆ ಕನ್ಯೆಯು ನಿಶ್ಚಯಿಸಿ ಯಾವಾಗಲೂ ಆದರದಿಂದ ಭಗವತ್ಕಥಾಶ್ರವಣ ಮಾಡುತ್ತಿದ್ದಳು.

ಆಮೇಲೆ ಅವಳು ಮರಣವನ್ನು ಹೊಂದಿ ವಸುದೇವನ ತಂಗಿಯಾದ ಸುಮಿತ್ರೆಯ ಹೊಟ್ಟೆಯಲ್ಲಿ ಮಿತ್ರವಿಂದೆಯೆಂಬ ಹೆಸರಿನಿಂದ ಹುಟ್ಟಿದಳು. ಶ್ರವಣಮಾಡಿ ಮಿತ್ರನಾದ ಪರಮಾತ್ಮನನ್ನು ಹೊಂದಿದ ಕಾರಣ ಅವಳಿಗೆ ಮಿತ್ರವಿಂದಾ ಎಂಬ ಹೆಸರು ಸಾರ್ಥಕವಾಯಿತು. ಸ್ವಯಂವರದಲ್ಲಿ ರಾಜರಮಧ್ಯದಲ್ಲಿ ಮಿತ್ರವಿಂದೆಯು ಶ್ರೀಕೃಷ್ಣಪರಮಾತ್ಮನ ಕೊರಳಲ್ಲಿ ಮಾಲೆಯನ್ನು ಹಾಕಿದಳು. ಶ್ರೀಭಗವಂತನು ಎಲ್ಲಾ ರಾಜರನ್ನೂ ತಿರಸ್ಕರಿಸಿ ಅವಳನ್ನು ಮದುವೆಯಾಗಿ ದ್ವಾರಕಾಪಟ್ಟಣಕ್ಕೆ ಹೋಗಿ ಸಂತೋಷದಿಂದ ಇದ್ದನು.

# ಕಾಳಿಂದೀದೇವಿಯು [1]

ಕಾಳಿಂದೀದೇವಿಯೂ ಕೃಷ್ಣಪರಮಾತ್ಮನ ಅಷ್ಟಮಹಾಮಹಿಷಿಯರಲ್ಲಿ ಸೇರಿದವರು. ಇವಳೂ ನೀಲಾದೇವಿಯರಂತೆ ಗರುಡಶ್ರೇಷ್ಠರುದ್ರರಿಗಿಂತ ಐದುಪಾಲು ಕಡಿಮೆ ಯಾದವಳು. ಇವಳು ಸೂರ್ಯಾದೇವರ ಮಗಳು. ಯಮುನೆಯ ತಂಗಿಯು. ಇವಳು ಕೃಷ್ಣನ ಪತ್ನಿಯಾಗಬೇಕೆಂಬ ಆಸೆಯುಳ್ಳವಳಾಗಿ ಉತ್ತಮವಾದ ತಪಸ್ಸನ್ನು ಮಾಡಿದಳು. ತಪಸ್ಸು ಎಂದರೆ ಆಲೋಚನೆಯು. ಪೂರ್ವದಲ್ಲಿ ಮಾಡಿದ ಪಾಪಗಳಿಗೆ ಪಶ್ಚಾತ್ತಾಪವೂ ತಪಸ್ಸು ಎನ್ನಿಸಿಕೊಳ್ಳುವುದು. ಈ ಪಶ್ಚಾತ್ತಾಪಕ್ಕೆ ಪ್ರಾಯಃ ಎಂದು ಹೆಸರಿರುವುದು. ಚಿತ್ತವೆಂದರೆ ನಿಗ್ರಹವೆಂದು ಅರ್ಥವು. ಅಂದರೆ ಪೂರ್ವದಲ್ಲಿ ಮಾಡಿದ ಪಾಪಗಳಿಗೆ ಪಶ್ಚಾತ್ತಾಪ ಪೂರ್ವಕವಾಗಿ ಮಾಡುವ ಇಂದ್ರಿಯ ನಿಗ್ರಹಕ್ಕೆ ಪ್ರಾಯಶ್ಚಿತ್ತವೆಂದು ಹೆಸರು. ಬರೇ ಕ್ಷೌರ ಮಾಡಿಕೊಂಡರೆ ಅದು ಪ್ರಾಯಶ್ಚಿತ್ತವಾಗ ಲಾರದು.

ಕಾಲಿಂದಿಯು ಬಹಳ ಪಶ್ಚಾತ್ತಾಪವುಳ್ಳವಳಾದಳು. 'ಭಗವಂತನೇ! ನಾನು ಪೂರ್ವದಲ್ಲಿ ದಿವ್ಯಮಂತ್ರಗಳನ್ನು ಜಪಿಸಲಿಲ್ಲ. ತುಂಬಾ ಕ್ಲೇಶವನ್ನು ಹೊಂದಿದೆನು. ಭಗವಂತನ ನಾಮಾಮೃತವನ್ನು ಸ್ಮರಿಸಲಿಲ್ಲ. ಇನ್ನೊಬ್ಬರ ದೋಷಗಳನ್ನು ಸ್ಮರಿಸಿದೆನು. ಹರಿಕಥಾಮೃತವನ್ನು ಕೇಳಲಿಲ್ಲ. ಲೋಕವೃತ್ತಾಂತವನ್ನು ಕೇಳಿರುವೆನು. ಭಗವಂತನ ಪಾದಾರವಿಂದವನ್ನು ಪೂಜಿಸಲಿಲ್ಲ. ಪುತ್ರಮಿತ್ರಾದಿಗಳನ್ನು ಚೆನ್ನಾಗಿ ಪೂಜಿಸಿರುವೆನು. ಭಗವಂತನ ಪಾದಾರವಿಂದಕ್ಕೆ ನಮಸ್ಕರಿಸಲಿಲ್ಲ. ಮಿತ್ರರ ಪಾದಗಳಿಗೆ ನಮಸ್ಕರಿಸಿರುವೆನು. ಧೂಪದೀಪಗಳಿಂದ ಕೂಡಿದ ಭಗವಂತನ ಮುಖವನ್ನು ನೋಡಲಿಲ್ಲ. ಪುತ್ರಾದಿಗಳ ಮುಖವನ್ನು ಸರ್ವದಾ ನೋಡಿದೆನು. ಭೂಷಣಗಳಿಂದ ಪುತ್ರಮಿತ್ರರನ್ನು ಆದರಿಸಿದೆನು. ಭಗವಂತನನ್ನು ಆದರಿಸಲಿಲ್ಲ. ಹರಿನೈವೇದ್ಯವನ್ನು ಭೋಜನಮಾಡಲಿಲ್ಲ. ಮಿತ್ರರ ಮನೆಯಲ್ಲಿ ಷಡ್ರಸಾನ್ನವನ್ನು ಭೋಜನ ಮಾಡಿದೆನು. ಪುಷ್ಪಗಳನ್ನು ಭಗವಂತನಿಗೆ ಸಮರ್ಪಿಸಲಿಲ್ಲ. ಪುತ್ರಮಿತ್ರಾದಿಗಳಿಗೆ ಸಮರ್ಪಿಸಿರು ವೆನು. ಭಗವಂತನೇ! ನಿನ್ನ ಮುಖವನ್ನು ಯಾವಾಗ ನೋಡುವೆನೋ! ಅವೈಷ್ಣವರ ಅನ್ನಗಳಿಂದಲೂ ನುಗ್ಗೆಕಾಯಿ ಮೊದಲಾದ ನಿಷಿದ್ಧ ಪದಾರ್ಥಗಳಿಂದಲೂ ಭಗವಂತನಿಗೆ ಸಮರ್ಪಿಸದ ವೈಶ್ವದೇವ ಸಂಸ್ಕಾರವಾಗದ ಅನ್ನಗಳಿಂದಲೂ ನನ್ನ ನಾಲಿಗೆಯು ಸುಟ್ಟು ಹೋಗಿರುವುದು. ಯಾವಾಗ ನಿನ್ನ ಮುಖವನ್ನು

---

1. ಗ.ಪು.ಬ್ರ.ಕಾಂ. ಅ–220 ಮ.ತಾ.ನಿ. ಅ.20, ಭಾ. X–71

ನೋಡುವೆನೋ? ಶಂಖತೀರ್ಥವನ್ನು ಧರಿಸಲಿಲ್ಲ. ನನ್ನ ದೇಹವು ಪವಿತ್ರವಾಗಲಿಲ್ಲ. ನಿನಗೆ ಸಮರ್ಪಿಸದೆ ಇರುವ ಗಂಧಪುಷ್ಪಾದಿಗಳಿಂದಲೂ ಭೂಷಣವಸ್ತ್ರಾದಿಗಳಿಂದಲೂ ಅವೈಷ್ಣವರ ಗಂಧಾದಿಗಳಿಂದಲೂ ನನ್ನ ದೇಹವು ಸುಟ್ಟುಹೋಗಿರುವುದು. ನನಗೆ ಉದ್ಧಾರವು ಯಾವಾಗ ಆಗುವುದು ಎಂದು ತಿಳಿಯಲಿಲ್ಲ. ನಿನ್ನ ಕ್ಷೇತ್ರಗಳಿಗೆ ಸಂಚರಿಸದೆ ನನ್ನ ಪಾದಗಳು ಸುಟ್ಟುಹೋಗಿರುವುವು. ನಿನ್ನ ಪ್ರತಿಮೆಗಳನ್ನು ನೋಡದೆ ನನ್ನ ಕಣ್ಣುಗಳು ಸುಟ್ಟುಹೋಗಿರುವುವು. ನಿನ್ನನ್ನು ಪೂಜಿಸದೆ ಕೈಗಳು ಸುಟ್ಟುಹೋಗಿರುವುವು.

ಭಗವಂತನೇ! ನಾನು ಬಹುಪಾಪಗಳನ್ನು ಮಾಡಿರುವೆನು. ನಾನು ಯಾವಾಗ ನಿನ್ನ ಮುಖವನ್ನು ನೋಡುವೆನೋ! ನನ್ನ ದೋಷಗಳನ್ನು ಎಣಿಸದೆ ನನ್ನಲ್ಲಿ ದಯೆಯನ್ನು ತೋರಿಸಬೇಕು. ಸರ್ವದೋಷದೂರನೇ! ನನ್ನ ದೇಹದಲ್ಲಿ ಎಷ್ಟು ರೋಮಗಳು ಇರುವುವೋ ಅಷ್ಟೇ ಪಾಪಗಳೂ ಇರುವುವು. ನಿನ್ನ ಮುಖವನ್ನು ನಾನು ಯಾವಾಗ ನೋಡುವೆನೋ! ಅನಂತದೇಹಗಳಲ್ಲಿ ಪತಿ ಪುತ್ರಾದಿಗಳಿಂದಲೂ, ಮನೆಯಿಂದಲೂ, ಮಿತ್ರರಿಂದಲೂ, ಹಣದಿಂದಲೂ, ಪಶುಗಳಿಂದಲೂ, ನಿನ್ನ ಸೇವೆಯನ್ನು ಮಾಡದೆ ಸುಖಲೇಶವನ್ನೂ ಹೊಂದಲಿಲ್ಲ. ಇನ್ನು ಮೇಲೆ ನಾನು ಪುತ್ರಮಿತ್ರಾದಿಗಳನ್ನು ಒಬ್ಬರನ್ನೂ ಹೊಂದುವುದಿಲ್ಲ. ನಿನ್ನ ದಾಸಿಯಾಗುವೆನು. ಪುತ್ರಮಿತ್ರಾದಿಗಳಿಂದಲೇ ಸರಿಯಾದ ಸುಖವಾಗುವುದೆಂದು ಯಾರು ಹೇಳುವರೋ ಅವರಿಗೆ ನರಕದಲ್ಲಿ ಬಾಯಿಯಲ್ಲಿ ಮಲವು ಬೀಳುವುದು. ಮಿತ್ರಾದಿಗಳಿಗೆ ನಾವು ಕೊಟ್ಟ ಹಣವು ವ್ಯರ್ಥವಾಗಿಯೇ ಹೋಗುವುದು. ಸದ್ವೈಷ್ಣವರಿಗೆ ಕೊಟ್ಟಹಣವು ಹರಿಪ್ರೀತಿಗೆ ಕಾರಣವಾಗುವುದು. ದುಃಖಕ್ಕೆ ಕಾರಣವಾದ ಹಣವು ಸಾಕು. ಅದರಿಂದ ಬೇಕಾದ ದುಃಖವನ್ನು ಅನುಭವಿಸಿ ಆಯಿತು. ಭಗವಂತನೇ! ಸಜ್ಜನರ ಸಹವಾಸವನ್ನು ಕೊಡು. ದುರ್ಜನರ ಸಹವಾಸವನ್ನು ಬಿಡಿಸು. ದುರ್ಜನರ ಸಹವಾಸದಿಂದ ನನ್ನ ದೇಹವು ಸುಟ್ಟುಹೋಗಿರುವುದು. ವೈರಾಗ್ಯವನ್ನು ಹೊಂದಿರುವುದಿಲ್ಲ. ಈ ಪ್ರಕಾರವಾಗಿರುವ ನಾನು ಯಾವ ಗತಿಯನ್ನು ಹೊಂದುವೆನೋ ತಿಳಿಯಲಿಲ್ಲ. ದಯೆಯಿಂದ ನನ್ನನ್ನು ರಕ್ಷಿಸಬೇಕು'' ಈರೀತಿಯಾಗಿ ಕಾಳಿಂದಿಯು ಅನುತಾಪವನ್ನು ಹೊಂದಿದಳು.

ಆಮೇಲೆ ಭಗವತ್ತತ್ವವನ್ನು ವಿಚಾರಮಾಡಿದಳು. 'ಪರಮಾತ್ಮನೇ ಯಾವಾಗಲೂ ಸರ್ವೋತ್ತಮನು. ಅವನಿಂದಲೇ ಸಮಸ್ತ ಜಗತ್ತೂ ಉಂಟಾಗುವುದು. ಆದುದರಿಂದ ಅವನೇ ಗುಣಪೂರ್ಣನು. ಅವನೇ ಬ್ರಹ್ಮಾದಿ ಸಮಸ್ತ ದೇವತೆಗಳ

ಹೆಸರುಳ್ಳವನು. ಬ್ರಹ್ಮಾದಿಗಳು ಪೂರ್ಣರಲ್ಲ. ಬ್ರಹ್ಮದೇವರು ರಮಾದೇವಿಯರ ಅನುಗ್ರಹದಿಂದಲೂ, ಭಗವಂತನ ಅನುಗ್ರಹದಿಂದಲೂ ತನ್ನ ಯೋಗ್ಯತಾನುಸಾರ ವಾಗಿ ಪೂರ್ಣರಾಗಿರುವರು. ರಮಾದೇವಿಯರಂತೆ ಬ್ರಹ್ಮದೇವರು ಪೂರ್ಣರಲ್ಲ. ಭಗವಂತನಂತೆ ರಮಾದೇವಿಯರೂ ಪೂರ್ಣರಲ್ಲ. ವಾಯುದೇವರಂತೆ ಭಾರತೀದೇವಿಯರು ಪೂರ್ಣರಲ್ಲ. ಶೇಷದೇವರಂತೆ ನಾನು ಪೂರ್ಣಳಲ್ಲ' ಇತ್ಯಾದಿ ರೀತಿಯಿಂದ ವಿಚಾರಮಾಡುತ್ತಾ ಯಮುನಾನದಿಯ ತೀರದಲ್ಲಿ ತಪಸ್ಸನ್ನು ಮಾಡುತ್ತಿದ್ದಳು.

ಆ ಸಮಯದಲ್ಲಿ ಕೃಷ್ಣಪರಮಾತ್ಮನು ಅರ್ಜುನನಿಂದ ಸಹಿತನಾಗಿ ಮೃಗಬೇಟೆಯಾಗಿ ಯಮುನಾತೀರಕ್ಕೆ ಹೋದನು. ಅಲ್ಲಿ ತಪಸ್ಸು ಮಾಡುತ್ತಿದ್ದ ಕಾಲಿಂದಿಯನ್ನು ನೋಡಿ ಭಗವಂತನು ಅರ್ಜುನನೊಡನೆ ಆ ಕನ್ಯೆಯು ಯಾಕೆ ತಪಸ್ಸನ್ನು ಮಾಡುತ್ತಿರುವಳೆಂದು ವಿಚಾರಿಸಿಕೊಂಡು ಬಾರೆಂದು ಹೇಳಿ ಕಳುಹಿಸಿದನು. ಅರ್ಜುನನು ಅವಳ ಬಳಿಗೆ ಹೋಗಿ ವಿಚಾರಿಸಿ ಅವಳು ಕೃಷ್ಣಪರಮಾತ್ಮನು ಪತಿಯಾಗಬೇಕೆಂದು ತಪಸ್ಸನ್ನು ಮಾಡುತ್ತಿರುವಳೆಂದು ತಿಳಿದು ಕೃಷ್ಣಪರಮಾತ್ಮನ ಬಳಿಗೆ ಬಂದು ಎಲ್ಲವನ್ನು ತಿಳಿಸಿದನು. ತರುವಾಯ ಭಗವಂತನು ಶುಭಮುಹೂರ್ತ ದಲ್ಲಿ ಅವಳನ್ನು ಮದುವೆಯಾದನು. ಅವಳ ತಪಸ್ಸಿನಿಂದ ಪ್ರಸನ್ನನಾಗಿ ಶ್ರೀಭಗವಂತನು ಅವಳನ್ನು ಮದುವೆಯಾದನು. ಸ್ವತಃ ಪೂರ್ಣನಾದ ಭಗವಂತನಿಗೆ ಯಾರಿಂದಲೂ ಏನೂ ಆಗಬೇಕಾಗಿಲ್ಲ. ಕೇವಲ ಅವಳ ಅನುಗ್ರಹಕ್ಕಾಗಿ ಅವನು ಮದುವೆಯಾದನು.



## ಲಕ್ಷಣಾದೇವಿಯು [1]

ಲಕ್ಷಣಾದೇವಿಯೂ ಅಷ್ಟಮಹಾಮಹಿಷಿಯರಲ್ಲಿ ಸೇರಿದವಳು. ಇವಳೂ ತಾರತಮ್ಯದಲ್ಲಿ ಗರುಡಶೇಷರುದ್ರರಿಂದ ಐದು ಪಾಲು ಕಡಿಮೆಯಾದವಳು. ಇವಳು ಪೂರ್ವಜನ್ಮದಲ್ಲಿ ಬರ್ಹಿಷದ ಎಂದು ಹೆಸರುಳ್ಳ ಪಿತೃದೇವತೆಯ ಮಗಳು. ಉತ್ತಮಲಕ್ಷಣಗಳುಳ್ಳವರಾಗಿದ್ದ ಕಾರಣ ಲಕ್ಷಣಾ ಎಂದು ಹೆಸರುಳ್ಳವರಾಗಿದ್ದಳು. ಪರಮಾತ್ಮನಿಗೂ ರಮಾದೇವಿಯರಿಗೂ ಬ್ರಹ್ಮದೇವರಿಗೂ ಸರಸ್ವತಿಯರಿಗೂ

1. ಗ.ಪು.ಬ್ರ.ಕಾಂ. ಅ–23 ಮ.ತಾ.ನಿ. ಅ.20, ಭಾ. X-71

ವಾಯುದೇವರಿಗೂ ಭಾರತೀದೇವಿಯರಿಗೂ ಸಂಪೂರ್ಣ ಲಕ್ಷಣಗಳು ಎಂದರೆ ಮೂವತ್ತೆರಡು ಲಕ್ಷಣಗಳಿರುವುವು. ಉಳಿದವರಿಗೆ ಲಕ್ಷಣಗಳು ಕಡಿಮೆಯಾಗುತ್ತಾ ಹೋಗುವುವು. ರುದ್ರಾದಿಗಳಿಗಿದ್ದಷ್ಟು ಲಕ್ಷಣಗಳು ಲಕ್ಷಣಾದೇವಿಗೆ ಇರಲಿಲ್ಲ. ಆದರೂ ಇತರರಿಗಿಂತ ಲಕ್ಷಣಭರಿತಳಾದ ಕಾರಣವೂ ಪೋಷ್ಯವರ್ಗದಲ್ಲಿ ದಯಾವುಳ್ಳವಳಾಗಿ ಅನುಸಂಧಾನಪೂರ್ವಕವಾಗಿ ದಾನಮಾಡುತ್ತಿದ್ದ ಕಾರಣ ಅವಳಿಗೆ ಲಕ್ಷಣಾ ಎಂಬ ಹೆಸರಾಗಿತ್ತು.

ಗರುಡ ಶೇಷ ರುದ್ರರಿಗೆ ಇಪ್ಪತ್ತೆಂಟು ಲಕ್ಷಣಗಳು, ಭಗವಂತನ ಆರುಜನ ಮಹಾಮಹಿಷಿಯರಿಗೆ (ಜಾಂಬವತ್ಯಾದಿಗಳಿಗೆ) ಇಪ್ಪತ್ತೇಳು ಲಕ್ಷಣಗಳು, ವಾರುಣೀ ಸೌಪರ್ಣೀ(ಸುಪರ್ಣಿ) ಪಾರ್ವತಿದೇವಿಯರು ಇಪ್ಪತ್ತಾರು ಲಕ್ಷಣಗಳಿಂದ ಯುಕ್ತರು. ಇಂದ್ರದೇವರಿಗೆ ಇಪ್ಪತ್ತೈದು ಲಕ್ಷಣಗಳೂ, ಏಳು ಅವಲಕ್ಷಣಗಳೂ ಇರುವುವು. ಆಹಂಕಾರಿಕ ಪ್ರಾಣನಿಗೆ ಇಪ್ಪತ್ತನಾಲ್ಕು ಲಕ್ಷಣಗಳು ಎಂಟು ಅವಲಕ್ಷಣಗಳು. ಶಚೀದೇವಿಗೆ ಇಪ್ಪತ್ತಮೂರು ಲಕ್ಷಣಗಳು ಒಂಭತ್ತು ಅವಲಕ್ಷಣಗಳು. ಪ್ರವಹವಾಯುವು ಇಪ್ಪತ್ತ ಎರಡು ಲಕ್ಷಣಗಳು, ಹತ್ತು ಅವಲಕ್ಷಣಗಳೂ ಉಳ್ಳವರು. ಯಮದೇವರು ಇಪ್ಪತ್ತ ಒಂದು ಲಕ್ಷಣಗಳಿಂದಲೂ, ಹನ್ನೊಂದು ಲಕ್ಷ ಅವಲಕ್ಷಣಗಳಿಂದಲೂ ಯುಕ್ತರಾದವರು. ವರುಣದೇವರು ಇಪ್ಪತ್ತು ಲಕ್ಷಣಗಳಿಂದಲೂ ಹನ್ನೆರಡು ಅವಲಕ್ಷಣಗಳಿಂದಲೂ ಯುಕ್ತರಾದವರು. ಅಗ್ನಿದೇವರು ಹತ್ತೊಂಭತ್ತು ಲಕ್ಷಣಗಳಿಂದಲೂ, ಹದಿಮೂರು ಅವಲಕ್ಷಣ ಗಳಿಂದಲೂ ಯುಕ್ತರಾಗಿರುವರು. ವೈವಸ್ವತಮನುವಿಗೆ ಹದಿನೆಂಟು ಲಕ್ಷಣಗಳು, ಹದಿನಾಲ್ಕು ಅವಲಕ್ಷಣಗಳು. ಮಿತ್ರನಾಮಕ ಆದಿತ್ಯನಿಗೆ ಹದಿನೇಳು ಲಕ್ಷಣಗಳು ಹದಿನೈದು ಅವಲಕ್ಷಣಗಳು. ಕುಬೇರನಿಗೆ ಹದಿನಾರು ಲಕ್ಷಣಗಳು, ಹದಿನಾರು ಅವಲಕ್ಷಣಗಳು. ಅಗ್ನಿದೇವರ ಮಗನಾದ ಪಾವಕನು ಹದಿನೈದು ಲಕ್ಷಣಗಳಿಂದಲೂ ಹದಿನೇಳು ಅವಲಕ್ಷಣಗಳಿಂದಲೂ ಯುಕ್ತನಾದನು. ಗಂಗಾದೇವಿಗೆ ಹದಿನಾಲ್ಕು ಲಕ್ಷಣಗಳು ಹದಿನೆಂಟು ಅವಲಕ್ಷಣಗಳು. ಬುಧನಿಗೆ ಹದಿಮೂರು ಲಕ್ಷಣಗಳು ಹತ್ತೊಂಭತ್ತು ಅವಲಕ್ಷಣಗಳು. ಶನಿಗೆ ಹನ್ನೆರಡು ಲಕ್ಷಣಗಳು. ಇಪ್ಪತ್ತು ಅವಲಕ್ಷಣ ಗಳು. ಪುಷ್ಕರನಿಗೆ ಹನ್ನೊಂದು ಲಕ್ಷಣಗಳು. ಇಪ್ಪತ್ತೊಂದು ಅವಲಕ್ಷಣಗಳು. ಅಗ್ನಿದೇವರ ಮಕ್ಕಳು. ಆಜಾನದೇವತೆಗಳು ಹತ್ತು ಲಕ್ಷಣವುಳ್ಳವರು. ಇಪ್ಪತ್ತೆರಡು ದೋಷವುಳ್ಳವರು. ಚಿರಪಿತೃಗಳು ಒಂಭತ್ತು ಲಕ್ಷಣವುಳ್ಳವರು. ಇಪ್ಪತ್ತಮೂರು ದೋಷವುಳ್ಳವರು. ದೇವಗಂಧರ್ವರಿಗೆ ಎಂಟುಲಕ್ಷಣಗಳು. ಇಪ್ಪತ್ತನಾಲ್ಕು

ಅವಲಕ್ಷಣಗಳು. ಮನುಷ್ಯ ಗಂಧರ್ವರಿಗೆ ಏಳು ಲಕ್ಷಣಗಳು, ಇಪ್ಪತ್ತಐದು ಅವಲಕ್ಷಣಗಳು. ಆಮೇಲಿನವರು ಕೆಲವರು ಐದು ಲಕ್ಷಣವುಳ್ಳವರು. ನಾಲ್ಕು ಲಕ್ಷಣವುಳ್ಳವರು. ಮೂರು ಲಕ್ಷಣವುಳ್ಳವರು ಇರುವರು. ಕಲಿಯು ಯಾವಾಗಲೂ ಅವಲಕ್ಷಣಗಳಿಂದ ಯುಕ್ತನಾಗಿರುವನು. ಲಕ್ಷಣಾದೇವಿಯು ಇಪ್ಪತ್ತೇಳು ಲಕ್ಷಣವುಳ್ಳವಳಾಗಿದ್ದಳು.

ಅವಳು ಪೂರ್ವಜನ್ಮದಲ್ಲಿ ತಂದೆಯ ಮನೆಯಲ್ಲಿ ಇರುವಾಗ ತಂದೆಯು ಕುಟುಂಬವನ್ನು ಪೋಷಣೆ ಮಾಡುವುದಕ್ಕಾಗಿ ಪುತ್ರಮಿತ್ರಾದಿಗಳಿಗೆ ಅನ್ನಾದಿಗಳನ್ನು ಕೊಡುವುದನ್ನು ನೋಡಿ ತಂದೆಯೊಡನೆ ಹೇಳಿದಳು. 'ತಂದೆಯೇ! ನಾವು ಕೊಡುವ ಪ್ರತಿಯೊಂದು ಪದಾರ್ಥವನ್ನು ಅಲ್ಲಲ್ಲಿ ಇರುವ ಅಂತರ್ಯಾಮಿಯಾದ ಭಗವದ್ರೂಪವನ್ನು ಅನುಸಂಧಾನದ ಮಾಡಿಕೊಡಬೇಕು. ಹೀಗೆ ಮಾಡದೆ ಇದ್ದರೆ ಅದೆಲ್ಲವೂ ವ್ಯರ್ಥವಾಗುತ್ತದೆ. ಅಲ್ಲಲ್ಲಿ ಇರುವ ಭಗವಂತನ ರೂಪಗಳನ್ನು ಹೇಳುತ್ತೇನೆ ಕೇಳು.

ಮಕ್ಕಳಲ್ಲಿ ಬಾಲರೂಪದಿಂದ ಕೃಷ್ಣನು ಇದ್ದುಕೊಂಡು ನಾವು ಕೊಡುವ ಹಾಲು ಬೆಣ್ಣೆ ತುಪ್ಪ ಇತ್ಯಾದಿಗಳನ್ನು ಸ್ವೀಕರಿಸುವನು. ಆಭರಣ ವಸ್ತ್ರಾದಿಗಳನ್ನೂ ಸ್ವೀಕರಿಸುವನು. ಮಕ್ಕಳಿಗೆ ನಾವು ಏನನ್ನಾದರೂ ಕೊಡುವಾಗಿ ಹೀಗೆ ಅನುಸಂಧಾನ ಮಾಡಬೇಕು. ಇಲ್ಲದಿದ್ದರೆ ವ್ಯರ್ಥವಾಗುತ್ತದೆ. ಹೆಂಡತಿಗೆ ಅನ್ನ ಪಾನಾದಿಗಳನ್ನು ಕೊಡುವಾಗ ಅವಳಲ್ಲಿ ಮಾಧವ ಎಂಬ ರೂಪದಿಂದ ಭಗವಂತನು ಇದ್ದಾನೆಂದು ಸ್ಮರಿಸಬೇಕು. ಹಾಗೆ ಸ್ಮರಿಸಿಕೊಂಡು ಹೆಂಡತಿಗೆ ಏನನ್ನಾದರೂ ಕೊಟ್ಟರೆ ಅದು ಭಗವಂತನ ಪ್ರೀತಿಗೆ ಕಾರಣವಾಗುತ್ತದೆ. ಇಲ್ಲದಿದ್ದರೆ, ವ್ಯರ್ಥವಾಗುತ್ತದೆ. ಮನೆಯಲ್ಲಿ ವಾಸುದೇವನಾಮಕ ಪರಮಾತ್ಮನು ಇರುವನೆಂದು ತಿಳಿದುಕೊಂಡು ಅಲಂಕರಿಸಬೇಕು. ಸೊಸೆಯಲ್ಲಿ ಗೋವಿಂದನಾಮಕ ಪರಮಾತ್ಮನಿರುವನೆಂದೂ ಹೆಣ್ಣುಮಕ್ಕಳಲ್ಲಿ ವಾಸುದೇವನಾಮಕ ಪರಮಾತ್ಮನಿರುವನೆಂದೂ, ಮಿತ್ರನಲ್ಲಿ ಮುಕುಂದನಾಮಕ ಪರಮಾತ್ಮನಿರುವನೆಂದೂ, ಭಾವಮೈದುನನಲ್ಲಿ ಅನಿರುದ್ಧ ನಾಮಕ ಪರಮಾತ್ಮನಿರುವನೆಂದೂ, ಬ್ರಾಹ್ಮಣಶ್ರೇಷ್ಠರಲ್ಲಿ ನಾರಾಯಣನಾಮಕ ಪರಮಾತ್ಮನಿರುವನೆಂದೂ, ಗೋವುಗಳಲ್ಲಿ ವಿಷ್ಣುನಾಮಕ ಪರಮಾತ್ಮನಿರುವು ದೆಂದೂ, ಶೂದ್ರನಲ್ಲಿ ಸಂಕರ್ಷಣನಾಮಕ ಪರಮಾತ್ಮನಿರುವನೆಂದೂ, ವೈಶ್ಯನಲ್ಲಿ ಪ್ರದ್ಯುಮ್ನನಾಮಕ ಪರಮಾತ್ಮನಿರುವನೆಂದೂ, ಕ್ಷತ್ರಿಯರಲ್ಲಿ ಜನಾರ್ದನನಾಮಕ ಪರಮಾತ್ಮನಿರುವನೆಂದೂ, ದಾಸರಲ್ಲಿ ಮಹಿದಾಸನಾಮಕ ಪರಮಾತ್ಮನಿರುವ ನೆಂದೂ, ಎಮ್ಮೆಗಳಲ್ಲಿ ಉಪೇಂದ್ರನಾಮಕ ಪರಮಾತ್ಮನಿರುವನೆಂದೂ, ಆನೆಗಳಲ್ಲಿ

ಚಕ್ರಪಾಣಿನಾಮಕ ಪರಮಾತ್ಮನಿರುವನೆಂದೂ, ಬೆಕ್ಕುಗಳಲ್ಲಿ ವಿಶ್ವರೂಪಿಯಾದ ಪರಮಾತ್ಮನಿರುವನೆಂದೂ, ನಾಯಿಗಳಲ್ಲಿ ಭೂತಭಾವನ ಎಂಬ ಹೆಸರಿನಿಂದ ಭಗವಂತನಿರುವನೆಂದೂ ಇರುವೆಗಳಲ್ಲಿ ತ್ರಿವಿಕ್ರಮರೂಪಿಯಾದ ಪರಮಾತ್ಮನಿರುವ ನೆಂದೂ ಹೀಗೆಯೇ ಸರ್ವಪ್ರಾಣಿಗಳಲ್ಲಿಯೂ ಅನಂತರೂಪಗಳಿಂದ ಭಗವಂತ ನಿರುವನೆಂದೂ ತಿಳಿಯಬೇಕು. ಎಲ್ಲರಲ್ಲಿಯೂ ಇರುವ ಭಗವಂತನ ರೂಪಗಳಿಗೆ ಯಾವ ವಿಧವಾದ ಭೇದವೂ ಇರುವುದಿಲ್ಲ'' ಎಂದು ಹೇಳಿದಳು.

ಹಾಗೆಯೇ ಲಕ್ಷಣೆಯು ಅನುಸಂಧಾನ ಮಾಡುತ್ತಾ ಭಗವಂತನು ನನಗೆ ಪತಿಯಾಗಲಿ ಎಂದು ಚಿಂತಿಸುತ್ತಾ ದೇಹವನ್ನು ಪರಿತ್ಯಜಿಸಿದಳು. ತರುವಾಯ ಅವಳು ಮದ್ರದೇಶದಲ್ಲಿ ಮದ್ರನ ಮಗಳಾಗಿ ಹುಟ್ಟಿದಳು. ಅವಳ ಸ್ವಯಂವರದಲ್ಲಿ ಶ್ರೀಭಗವಂತನು ಮತ್ಸ್ಯಯಂತ್ರವನ್ನು ಭೇದಿಸಿ ಜಗಳಕ್ಕೆ ಬಂದ ರಾಜರೆಲ್ಲರನ್ನೂ ಓಡಿಸಿ ಲಕ್ಷಣಾದೇವಿಯನ್ನು ಮದುವೆಯಾಗಿ ದ್ವಾರಕಾಪಟ್ಟಣಕ್ಕೆ ಕರೆದುಕೊಂಡು ಬಂದು ಸಂತೋಷಪಡಿಸುತ್ತಾ ಇದ್ದನು.



## ಜಾಂಬವತೀದೇವಿಯು [1]

ಜಾಂಬವತೀದೇವಿಯೂ ಶ್ರೀಕೃಷ್ಣನ ಆರು ಮಹಾಮಹಿಷಿಯರಲ್ಲಿ ಒಬ್ಬಳು. ಇವಳ ಸರಿಯಾದ ಹೆಸರು ರೋಹಿಣಿಯೆಂದು ಜಾಂಬವಂತರ ಮಗಳಾದ ಕಾರಣ ಜಾಂಬವತಿಯೆಂದು ಪ್ರಸಿದ್ಧಿಯನ್ನು ಹೊಂದಿರುವಳು. ಇವಳು ಆರು ಮಹಾಮಹಿಷಿಯರಲ್ಲಿ ಸ್ವಲ್ಪ ಶ್ರೇಷ್ಠಳು. ಈ ಆರು ಜನರಲ್ಲಿಯೂ ರಮಾದೇವಿಯರ ಆವೇಶವು ಬಹಳವಾಗಿ ಇರುವಾಗ ಪರಮಾತ್ಮನು ವಿಶೇಷವಾಗಿ ಪ್ರೀತಿಸುವನು. ರಮಾದೇವಿಯರ ಆವೇಶವು ಕಡಿಮೆಯಾದಾಗ ಆರುಜನರೂ ಕಾಮಾದಿಗಳಿಂದ ಇಪ್ಪತ್ತುಪಾಲು ಉತ್ತಮರು. ರಮಾದೇವಿಯರ ಆವೇಶವು ಬಹಳವಾಗಿರುವಾಗ ಜಾಂಬವತಿಯು ಬಲರಾಮದೇವರಿಗೆ ಸಮಾನಳು. ರಮಾದೇವಿಯರ ಆವೇಶವು ಕಡಿಮೆಯಾದಾಗ ಇತರ ಐದು ಜನರಿಗೆ ಸಮಾನಳು. ಆದರೆ ಜಾಂಬವತಿಯಲ್ಲಿ ಸ್ವಲ್ಪ ರಮಾದೇವಿಯರ ಆವೇಶವು ಯಾವಾಗಲೂ ಇರುವ ಕಾರಣ ಇತರ ಐದು ಜನರಿಂದ ಸ್ವಲ್ಪ ಉತ್ತಮಳಾಗಿರುವರು.

1. ಗ.ಪು.ಬ್ರ.ಕಾಂ. ಅ–23 ಮ.ತಾ.ನಿ. ಅ.17

ಜಾಂಬವತಿಯು ಪೂರ್ವಜನ್ಮದಲ್ಲಿ ಸೋಮನ ಮಗಳು. ಅವಳು ತಂದೆಯ ಮನೆಯಲ್ಲಿ ಇದ್ದುಕೊಂಡು ತಂದೆಯಿಂದ ಕೂಡಿಕೊಂಡು ಭಗವಂತನ ಸೇವೆಯನ್ನು ಮಾಡಿ ತನ್ನ ಜನ್ಮವನ್ನು ಸಾರ್ಥಕಮಾಡಿಕೊಂಡಳು. ಯಾವಾಗಲೂ ಸಾತ್ವಿಕ ಪುರಾಣಗಳನ್ನು ಕೇಳುತ್ತಿದ್ದಳು. ಯಾವಾಗಲೂ ಭಗವಂತನ ಪಾದಗಳಿಗೆ ನಮಸ್ಕಾರ ವನ್ನು ಮಾಡುತ್ತಿದ್ದಳು. ಯಾವಾಗಲೂ ಭಗವಂತನನ್ನು ಸ್ಮರಿಸಿಕೊಂಡು ಪ್ರದಕ್ಷಿಣೆ ಬರುತ್ತಿದ್ದಳು.

ಅವಳು ತಂದೆಯಿಂದ ಕೂಡಿಕೊಂಡು ಭಗವಂತನ ಕಥೆಯ ಶ್ರವಣವನ್ನು ಮಾಡಿ ವೈರಾಗ್ಯವುಳ್ಳವಳಾಗಿದ್ದಳು. ಕೋಶವನ್ನು ಹಣವನ್ನೂ ಆನೆಕುದುರೆ ಮೊದಲಾದ ಸಮಸ್ತವನ್ನೂ ರತ್ನಾದಿಗಳನ್ನು ಮನೆಯನ್ನೂ ಎಲ್ಲವನ್ನೂ ಭಗವಂತನ ಅಧೀನವೆಂದು ತಿಳಿದುಕೊಂಡಳು. ಎಲ್ಲವನ್ನೂ ಪರಮಾತ್ಮನೇ ಕೊಟ್ಟಿದ್ದು ಎಂದು ತಿಳಿದುಕೊಂಡು ಅವನೇ ಅಪಹರಿಸಿದರೆ ದುಃಖವನ್ನೇಕೆ ಹೊಂದಬೇಕೆಂದು ತಿಳಿದುಕೊಂಡಿದ್ದಳು. ಭಗವಂತನು ಪರಮ ದಯಾಳುವು. ನನ್ನಲ್ಲಿ ದಯೆಯನ್ನು ಮಾಡಿರುವನು ಎಂದು ಆಗಾಗ್ಗೆ ಹೇಳುತ್ತಿದ್ದಳು. ತಂದೆಯಿಂದ ಸಹಿತಳಾಗಿ ಪರಮಾತ್ಮನಲ್ಲಿ ಏಕಾಂತ ಭಕ್ತಳಾಗಿದ್ದಳು. ದೈವೇಚ್ಛೆಯಿಂದ ಏನು ಸಿಗುತ್ತದೆಯೋ ಅದರಿಂದಲೇ ಜೀವನವನ್ನು ಮಾಡುತ್ತಿದ್ದಳು. ಕುರುಡರಂತೆಯೂ, ಕಿವುಡ ರಂತೆಯೂ, ಕಾಣಿಸುತ್ತಾ ಭೂಮಿಯಲ್ಲಿ ಸಂಚಾರಮಾಡಿದಳು. ಅವಳು ಯಾವಾಗಲೂ ತನ್ನ ಮನಸ್ಸನ್ನು ದುಃಖ ಸಮುದ್ರದಿಂದ ಉದ್ಧಾರಮಾಡುವ ಪರಮಾತ್ಮನಲ್ಲೇ ಇಟ್ಟಿದ್ದಳು. ತನ್ನ ನಾಲಿಗೆಯನ್ನು ಆ ಭಗವಂತನ ಗುಣಗಳನ್ನು ವರ್ಣಿಸಲಿಕ್ಕೇ ಉಪಯೋಗಿಸುತ್ತಿದ್ದಳು. ಕೈಗಳಿಂದ ಪರಮಾತ್ಮನ ಮಂದಿರವನ್ನು ಸಾರಿಸುತ್ತಿದ್ದಳು. ಕಿವಿಗಳನ್ನು ಪರಮಾತ್ಮನ ಕಥೆಯನ್ನು ಕೇಳಲಿಕ್ಕೆ ಉಪಯೋಗಿಸು ತ್ತಿದ್ದಳು. ಕಣ್ಣುಗಳನ್ನು ಭಗವಂತನ ಪ್ರತಿಮೆಗಳನ್ನು ನೋಡಲಿಕ್ಕೆ ಉಪಯೋಗಿಸು ತ್ತಿದ್ದಳು. ಸದ್ವೈಷ್ಣವರ ಸ್ಪರ್ಶವನ್ನು ಮಾಡುತ್ತಿದ್ದಳು. ಮೈಗೆ ಭಗವಂತನ ನಿರ್ಮಾಲ್ಯಗಂಧವನ್ನು ಹಚ್ಚಿಕೊಳ್ಳುತ್ತಿದ್ದಳು. ಮೂಗಿನಿಂದ ಪರಮಾತ್ಮನಿಗೆ ಸಮರ್ಪಿಸಿದ ಪುಷ್ಪಾದಿಗಳ ವಾಸನೆಯನ್ನು ಸ್ವೀಕರಿಸುತ್ತಿದ್ದಳು. ನಾಲಿಗೆಯಿಂದ ಪರಮಾತ್ಮನ ನೈವೇದ್ಯಶೇಷವನ್ನು ಭೋಜನ ಮಾಡುತ್ತಿದ್ದಳು. ಪಾದಗಳನ್ನು ಭಗವಂತನ ಕ್ಷೇತ್ರಕ್ಕೆ ಸಂಚಾರಮಾಡಲಿಕ್ಕೆ ಉಪಯೋಗಿಸುತ್ತಿದ್ದಳು. ತಲೆಯನ್ನು ಪರಮಾತ್ಮನಿಗೆ ನಮಸ್ಕಾರ ಮಾಡಲಿಕ್ಕೆ ಉಪಯೋಗಿಸುತ್ತಿದ್ದಳು. ಭಗವಂತನ ದಾಸ್ಯವನ್ನೇ ಇಚ್ಛಿಸುತ್ತಿದ್ದಳು. ಮತ್ತೆ ಯಾವುದನ್ನು ಇಚ್ಛಿಸುತ್ತಿದ್ದಿಲ್ಲ.

ಈರೀತಿಯಾಗಿ ಸಮಸ್ತ ಕಾರ್ಯವನ್ನು ಭಗವಂತನ ವಿಷಯವಾಗಿಯೇ ಮಾಡುವವಳಾಗಿ ತಂದೆಯಿಂದ ಸಹಿತಳಾಗಿ ಭಗವಂತನನ್ನು ಸಂತೋಷಪಡಿಸುವು ದಕ್ಕಾಗಿ ತೀರ್ಥಯಾತ್ರೆಗಾಗಿ ಹೊರಟಳು. ಮೊದಲು ವಿಷ್ಣುಭಕ್ತರಾದ ಬ್ರಾಹ್ಮಣರನ್ನು ಮನೆಯಲ್ಲಿ ವಸ್ತ್ರಾದಿಗಳಿಂದ ಪೂಜಿಸಿ ಆಮೇಲೆ ತೀರ್ಥಯಾತ್ರೆಯನ್ನು ಮಾಡುವೆ ನೆಂದು ಸಂಕಲ್ಪಮಾಡಿದಳು. 'ಭಗವಂತನೇ! ತೀರ್ಥಯಾತ್ರೆಯು ಮಾಡುವವರೆಗೆ ಬ್ರಹ್ಮಚಾರಿಣಿಯಾಗಿಯೇ ಇರುವೆನು. ಅಷ್ಟುಕಾಲವೂ ನನಗೆ ಸದ್ವೈಷ್ಣವರ ಸಹವಾಸ ವನ್ನು ಕೊಡು. ನನಗೆ ಯಾವಾಗಲೂ ಹರಿಕಥಾ ಶ್ರವಣವಾಗಲಿ. ಅವೈಷ್ಣವರ ಸಹವಾಸ ಮಾಡುವವರ ಸಹವಾಸವೂ ಆಗದಿರಲಿ. ದುರ್ಜನರೊಡನೆ ಪುತ್ರಮಿತ್ರಾದಿಗಳೊಡನೆ ತೀರ್ಥಯಾತ್ರೆಯನ್ನು ಮಾಡಲಾರೆನು. ಸಾಲಿಗ್ರಾಮವಿಲ್ಲದೆ ಯಾರು ತೀರ್ಥಯಾತ್ರೆಯನ್ನು ಮಾಡುವರೋ ಅವರ ಯಾತ್ರೆಯು ವ್ಯರ್ಥ ವಾಗುವುದೆಂದು ಜ್ಞಾನಿಗಳು ಹೇಳುವರು. ಯಾರು ಒಂದು ಫಲವನ್ನು ಇಚ್ಛಿಸಿಕೊಂಡು ತೀರ್ಥಯಾತ್ರೆಯನ್ನು ಮಾಡುವರೋ ಅವರ ಸಹವಾಸವನ್ನು ನನಗೆ ದೂರಮಾಡು. ತೀರ್ಥಾಂತರ್ಯಾಮಿಯಾದ ಪರಮಾತ್ಮನನ್ನು ಪರಮಾತ್ಮನ ಪ್ರತಿಮೆಯನ್ನು ನಮಸ್ಕಾರ ಮಾಡಬೇಕು. ಕಾಲಿನಿಂದ ನಡೆದುಕೊಂಡೇ ತೀರ್ಥಯಾತ್ರೆಯನ್ನು ಮಾಡಿದರೆ ಸಂಪೂರ್ಣ ಫಲವು ಬರುವುದೆಂದು ದೊಡ್ಡವರು ಹೇಳುವರು. ಪಾದರಕ್ಷೆಯನ್ನು ಹಾಕಿಕೊಂಡು ತೀರ್ಥಯಾತ್ರೆಯನ್ನು ಮಾಡಿದರೆ ನಾಲ್ಕನೇ ಒಂದು ಭಾಗ ಫಲವು ಕಡಿಮೆಯಾಗುವುದೆನ್ನುವರು. ಕುದುರೆಯಲ್ಲಿಯೇ ಇತರ ವಾಹನದಲ್ಲಿಯೇ ಕೂತು ಯಾತ್ರೆಯನ್ನು ಮಾಡಿದರೆ ಅರ್ಧಫಲವು ಕಡಿಮೆಯಾಗುವುದೆನ್ನುವರು. ಎತ್ತಿನ ಮೇಲೆ ಕೂತುಕೊಂಡು ಹೋದರೆ ನಾಲ್ಕನೇ ಒಂದು ಭಾಗ ಫಲವೇ ಬರುವುದು. ಪರಾನ್ನವನ್ನು ಭೋಜನ ಮಾಡುತ್ತಾ ತೀರ್ಥಯಾತ್ರೆಯನ್ನು ಮಾಡಿದರೆ ವ್ಯರ್ಥವೆನ್ನುವರು. ಆದರೆ ವೇದಜ್ಞಾನಿಗಳಾದ ಸದ್ವೈಷ್ಣವರ ಮನೆಯಲ್ಲಿ ಭೋಜನ ಮಾಡಿದರೆ ಪರಾನ್ನಭೋಜನಪ್ರಯುಕ್ತವಾದ ದೋಷವಿರುವುದಿಲ್ಲ. ಸೋಮನ ಮಗಳು ಆದರದಿಂದ ಸಂಕಲ್ಪಮಾಡಿ ತೀರ್ಥ ಯಾತ್ರೆಗೆ ಹೋದಳು.

ಬೆಳಿಗ್ಗೆ ಸ್ನಾನಮಾಡಿ ಭಗವಂತನ ನಿರ್ಮಾಲ್ಯಗಂಧವನ್ನು ತೆಗಿಸಿ ತಂದೆಯಿಂದ ಸಹಿತಳಾಗಿ ಸ್ವಲ್ಪಹೊತ್ತು ಭಗವಂತನ ಕಥೆಯ ಶ್ರವಣ ಮಾಡಿದಳು. ಆಮೇಲೆ ಭೋಜನ ಮಾಡದ ಮೊದಲೇ ಎರಡು ಮೈಲು ದೂರ ನಡೆಯುತ್ತಾ ಹೋದಳು. ಅಲ್ಲಿ ಅನ್ನಪಾನಾದಿಗಳಿಂದ ಬ್ರಾಹ್ಮಣರನ್ನು ಪೂಜಿಸಿ ರಾತ್ರಿಯಲ್ಲಿಯೂ ಅವರಿಂದ

ತತ್ವಶ್ರವಣ ಮಾಡಿದಳು. ಹೀಗೆ ಯಾರು ತೀರ್ಥಯಾತ್ರೆಯನ್ನು ಮಾಡುವರೋ ಅವರ ತೀರ್ಥಯಾತ್ರೆಯು ಸಫಲವಾಗುವುದೆಂದು ಹೇಳುವರು. ಭಗವಂತನ ಕಥೆಯನ್ನು ಕೇಳದೆ ತೀರ್ಥಯಾತ್ರೆಯನ್ನು ಮಾಡಿದರೆ ಆ ಯಾತ್ರೆಯು ವ್ಯರ್ಥವೆಂದು ಹೇಳುವರು. ತೀರ್ಥಯಾತ್ರೆಗೆ ಹೋಗುವಾಗ ಮಾರ್ಗದಲ್ಲಿ ರಾತ್ರಿಯಲ್ಲಿಯೂ ಹಗಲಲ್ಲಿಯೂ ಯಾರು ಭಗವಂತನ ತತ್ವವನ್ನು ಕೇಳುವುದಿಲ್ಲವೋ ಅವರ ಜನ್ಮವು ವ್ಯರ್ಥವೆನ್ನುವರು. ಅವರ ಆಯುಷ್ಯವು ವ್ಯರ್ಥವಾಗುವುದು. ಕುದುರೆ ಮೊದಲಾದ ಪ್ರಾಣಿಗಳು ಹೋಗುವಂತೆ ಅವರ ಯಾತ್ರೆಯಾಗುವುದು. ಗಂಗಾದಿ ನದಿಗಳನ್ನು ನೋಡುವ ಮಾತ್ರದಿಂದಲೇ ಪಾಪಪರಿಹಾರವಾಗುವುದಾದರೆ ಕುದುರೆ ಮೊದಲಾದ ಪ್ರಾಣಿಗಳಿಗೆ ಯಾಕೆ ಪಾಪವು ಹೋಗಬಾರದು? ಕ್ಷೇತ್ರದಲ್ಲಿ ಇರುವ ಪರಮಾತ್ಮನ ದರ್ಶನದಿಂದಲೇ ಪಾಪಪರಿಹಾರವಾಗುವುದಾದರೆ ಕ್ಷೇತ್ರದಲ್ಲಿರುವ ಎಲ್ಲರ ಪಾಪವೂ ಯಾಕೆ ಪರಿಹೃತವಾಗಬಾರದು? ಗಂಗಾಸ್ನಾನದಿಂದಲೇ ಪಾಪಪರಿಹಾರ ವಾಗುವುದಾದರೆ ಗಂಗೆಯಲ್ಲಿ ಮುಳುಗಿರುವ ಮೀನುಗಳ ಪಾಪಪರಿಹಾರವೂ ಆಗಬೇಕಾಗುವುದು. ಜಪಾದಿಗಳನ್ನು ಮಾಡುವುದರಿಂದಲೇ ಪಾಪಪರಿಹಾರ ವಾಗುವುದಾದರೆ ಬೆಕ್ಕುಗಳ ಪಾಪವೂ ಪರಿಹೃತವಾಗಬೇಕು. ಕ್ಷೇತ್ರದಲ್ಲಿರುವ ವಿಷ್ಣುವಿನ ಪೂಜೆಯಿಂದಲೇ ಪಾಪಪರಿಹಾರವಾಗುವುದಾದರೆ ಗುಡಿಯಲ್ಲಿ ಅರ್ಚನೆ ಮಾಡುವ ಪೂಜಾರಿಗಳ ಪಾಪವೂ ಪರಿಹೃತವಾಗ ಬೇಕಾಗುವುದು. ಚೆನ್ನಾಗಿ ತಿಂದು ಲೋಕವೃತ್ತಾಂತವನ್ನು ಮಾತಾಡುತ್ತಾ ತೀರ್ಥಯಾತ್ರೆ ಮಾಡುವವರಿಗೂ ಪಾಪ ಪರಿಹಾರವಾಗುವುದಾದರೆ ಕಪ್ಪೆಗಳಿಗೂ ಪಾಪಪರಿಹಾರವಾಗುವುದು. ಅನುಸಂಧಾನ ವಿಲ್ಲದೆ ಯಾವ ಕಾರ್ಯವನ್ನು ಮಾಡಿದರೂ ವ್ಯರ್ಥವಾಗುವುದೆಂದು ಜ್ಞಾನಿಗಳು ಹೇಳುವರು. ಆದುದರಿಂದ ಪಾಪಪರಿಹಾರಕವಾದ ಭಗವಂತನ ಕಥೆಯನ್ನು ಕೇಳಿದರೆ ಮಾತ್ರ ಭಗವಂತನಲ್ಲಿ ಭಕ್ತಿಯು ಹೆಚ್ಚುವುದು.

ಭಗವಂತನ ಪಾದವನ್ನು ನೋಡುತ್ತಾ ನೋಡುತ್ತಾ ಭಗವಂತನ ಪಾದವನ್ನು ಸ್ಮರಿಸುತ್ತಾ ಇದ್ದರೆ ಭಗವಂತನಲ್ಲಿ ಭಕ್ತಿಯು ಅಭಿವೃದ್ಧಿಯನ್ನು ಹೊಂದುವುದು. ಆ ಕನ್ಯೆಯು ತಂದೆಯಿಂದ ಕೂಡಿಕೊಂಡು ತಿರುಪತಿಯಲ್ಲಿ ಇರುವ ಶ್ರೀನಿವಾಸ ದೇವರನ್ನು ನೋಡಲಿಕ್ಕೆ ಹೋದಳು. ದಾರಿಯಲ್ಲಿ ಹೋಗುವಾಗ ಭಗವಂತನ ಅವಯವಗಳನ್ನು ಯಾವಾಗ ನೋಡುವೆನೆಂದು ಹೇಳುತ್ತಾ ಒಂದೊಂದೇ ಅವಯವವನ್ನು ಸ್ಮರಿಸುತ್ತಾ ಹೋದಳು. ಹೀಗೆ ದಾರಿಯಲ್ಲಿ ಚಿಂತಿಸುತ್ತಾ ಹೋಗಿ ತಿರುಪತಿ ಬೆಟ್ಟವನ್ನು ನೋಡಿದಳು. ನಾನು ಅನಂತ ಜನ್ಮಗಳಲ್ಲಿ ಮಾಡಿದ ಪುಣ್ಯದ

ಪ್ರಭಾವದಿಂದ ನನಗೀಗ ತಿರುಪತಿಬೆಟ್ಟದ ದರ್ಶನವಾಯಿತು ಎಂದು ಹೇಳುತ್ತಾ ಆನಂದಬಾಷ್ಪವನ್ನು ಸುರಿಸುತ್ತಾ ಬೆಟ್ಟಕ್ಕೆ ಎದುರಿನಲ್ಲಿ ಶಿರಸಾ ನಮಸ್ಕಾರ ಮಾಡಿದಳು. ಎದುರಲ್ಲಿ ಸಾಲಿಗ್ರಾಮವನ್ನು ಇಟ್ಟುಕೊಂಡು ಬೆಟ್ಟಕ್ಕೆ ಹನ್ನೆರಡು ನಮಸ್ಕಾರಗಳನ್ನು ಮಾಡಿದಳು. ವೈಷ್ಣವರು ಹೀಗೆಯೇ ಮಾಡಬೇಕು. ಅಂದರೆ ಬೆಟ್ಟದ ಮುಂಭಾಗದಲ್ಲಿಯೇ ನಮಸ್ಕರಿಸಬೇಕು. ಹಿಂದಿನ ಭಾಗದಲ್ಲಿ ನಮಸ್ಕರಿಸಬಾರದು. ಹಿಂದಿನ ಭಾಗದಲ್ಲಿ ಬೆಟ್ಟವನ್ನು ಹತ್ತಿಯೂ ಹೋಗಬಾರದು. ಸಾಲಿಗ್ರಾಮವನ್ನು ಮುಂದೆ ಇಡದೆ ನಮಸ್ಕಾರವನ್ನು ಮಾಡುವುದು ಸರಿಯಲ್ಲ. ಅವೈಷ್ಣವರು ಮಾತ್ರ ಬೇರೆ ವಿಧವಾಗಿ ಮಾಡುವರು. 'ಮಧ್ವಾಂತರ್ಯಾಮಿಯಾದ ರಮಾಬ್ರಹ್ಮಾದಿಗಳಿಂದ ಪೂಜಿತನಾದ ಶ್ರೀನಿವಾಸನು ಬೆಟ್ಟದ ಮೇಲೆ ಇರುವನು. ನಾನು ಅನಿಮಿತ್ತ ಬಂಧುವಾದ ಆ ಭಗವಂತನನ್ನು ನೋಡುವೆನು. ಬೆಟ್ಟವನ್ನು ಹತ್ತುವೆನು' ಎಂದು ಹೇಳಿಕೊಂಡು ಆ ಕನ್ಯೆಯು ತಂದೆಯಿಂದ ಸಹಿತಳಾಗಿ ಕಪಿಲತೀರ್ಥದಲ್ಲಿ ಸ್ನಾನವನ್ನು ಮಾಡಿದಳು. ಇಲ್ಲಿಯ ನೀರಿನಲ್ಲಿ ದ್ರವರೂಪದಿಂದ ಶ್ರೀನಿವಾಸನಿರುವನು ಎಂದು ಅನುಸಂಧಾನ ಮಾಡಿದಳು. ಗಂಡಸರಾದರೆ ಅಲ್ಲಿ ಮೊದಲು ಸ್ನಾನಮಾಡಿ ಕ್ಷೌರ ಮಾಡಿಕೊಂಡು ತೀರ್ಥಶ್ರಾದ್ಧವನ್ನು ಮಾಡಬೇಕು. ಆಮೇಲೆ ಗೋಭೂಹಿರಣ್ಯಾದಿ ದಾನಗಳನ್ನು ಮಾಡಿ ಪರ್ವತವನ್ನು ಏರಬೇಕು. ಆ ಕನ್ಯೆಯು ಕಪಿಲತೀರ್ಥದಲ್ಲಿ ಸ್ನಾನಮಾಡಿ ದಾನಗಳನ್ನು ಮಾಡಿ ಮುಂಭಾಗದಲ್ಲಿ ಸಾಲಿಗ್ರಾಮವನ್ನು ಇಟ್ಟು ನಮಸ್ಕರಿಸಿ ಆಮೇಲೆ ನೂರು ಮೆಟ್ಟಿಲುಗಳನ್ನು ಹತ್ತಿ ಹೋಗಿ ಅಲ್ಲಿ ಕೂತುಕೊಂಡು ಭಾಗವತವನ್ನು ವೇಂಕಟಾಚಲಮಹಿಮೆಯನ್ನು ಗುರುಗಳಾದ ರುದ್ರದೇವರ ಅವತಾರಭೂತರಾದ ಜೈಗೀಷವ್ಯರ ಮುಖದಿಂದ ಕೇಳಿದಳು.

ಜೈಗೀಷವ್ಯರು ಹೇಳಿದರು. 'ಕನ್ಯೆಯೇ! ವೇಂಕಟಾಚಲದ ಮೆಟ್ಟಿಲುಗಳನ್ನು ಹತ್ತುವುದ ರಿಂದ ಬರುವ ಪುಣ್ಯವನ್ನು ಹೇಳುತ್ತೇನೆ ಕೇಳು. ಯಾರು ಗೀತಾಪಾರಾಯಣವನ್ನು ಮಾಡುತ್ತಾ ಮೆಟ್ಟಲುಗಳನ್ನು ಹತ್ತುತ್ತಾನೋ ಅವನಿಗೆ ಒಂದೊಂದು ಹೆಜ್ಜೆಗೂ ಶ್ರೀನಿವಾಸದೇವರು ಸಂತುಷ್ಟರಾಗುತ್ತಾರೆ. ಅವರ ಸಂತೋಷದಿಂದ ಮೋಕ್ಷವೇ ಉಂಟಾಗುತ್ತದೆ. ಮೆಟ್ಟಲಿನಲ್ಲಿ ಕೂತುಕೊಂಡು ಯಾರು ಪುರಾಣವನ್ನು ಕೇಳುತ್ತಾನೋ ಅವನು ಸರ್ವತೀರ್ಥಯಾತ್ರೆಯನ್ನು ಮಾಡಿದ ಪುಣ್ಯವನ್ನು ಹೊಂದುತ್ತಾನೆ. ಈ ದಾರಿಯಲ್ಲಿ ಎಲ್ಲಾ ದೇವತೆಗಳೂ ಶ್ರೀನಿವಾಸ ದೇವರನ್ನು ಸ್ತೋತ್ರಮಾಡುತ್ತಾರೆ' ಎಂದು ಹೇಳಲು ಆ ಕನ್ಯೆಯು ಭಕ್ತಿಯುಳ್ಳವಳಾಗಿ ಸಾಲಿಗ್ರಾಮವನ್ನು ಮುಂದೆ ಇಟ್ಟು ಅಲ್ಲಿಯೇ ನಮಸ್ಕರಿಸಿದಳು. ಅಲ್ಲಿಂದ ಆಮೇಲೆ

ಮೇಲೆ ಹತ್ತುತ್ತಾ ಹೋದಳು. ಭಗವಂತನನ್ನು ಸ್ಮರಿಸುತ್ತಾ ಹೋದಳು. ಅವೈಷ್ಣವರು ಬೆಟ್ಟವನ್ನು ಹತ್ತಿಹೋಗುವುದರಿಂದ ಭಗವಂತನು ಅವರಿಗೆ ಅಪ್ರೀತನಾಗುತ್ತಾನೆ. ಇದರಿಂದ ಅವರಿಗೆ ಅಂಧಂತಮಸ್ಸಿಗೆ ಹೋಗಲಿಕ್ಕೆ ಸಾಧನವಾಗುತ್ತದೆ. ಆ ಕನ್ಯೆಯು ಹಾಗೆಯೇ ಮೇಲೆ ಹತ್ತುತ್ತಾ ಹೋಗಿ ಜೈಗೀಷವ್ಯರೊಡನೆ 'ಶ್ರೀನಿವಾಸದೇವರು ಬ್ರಹ್ಮಾದಿ ದೇವತೆಗಳಿಗೆ ಹೇಗೆ ಕಾಣಿಸುತ್ತಾರೆ? ಮನುಷ್ಯರಿಗೆ ಹೇಗೆ ಕಾಣಿಸುತ್ತಾರೆ?' ಎಂದು ಕೇಳಿದಳು.

ಅದಕ್ಕೆ ಜೈಗೀಷವ್ಯರು 'ಶ್ರೀನಿವಾಸದೇವರು ಬ್ರಹ್ಮಾದಿದೇವತೆಗಳಿಗೆ ಅನಂತಸೂರ್ಯರಿಗಿಂತಲೂ ಅಧಿಕವಾದ ಕಾಂತಿಯುಳ್ಳವರಾಗಿ ಕಾಣಿಸುವರು. ರುದ್ರಾದಿಗಳಿಗ ಲಕ್ಷಸೂರ್ಯರಿಗೆ ಅಧಿಕವಾದ ಕಾಂತಿಯುಳ್ಳವರಾಗಿ ಕಾಣಿಸುವರು. ಮನುಷ್ಯರಿಗೆ ಮಿಂಚಿನಂತೆ ಕಾಣಿಸುವರು. ಋಷ್ಯಾದಿಗಳಿಗೆ ಚಂದ್ರನಂತೆ ಕಾಣಿಸುವರು. ಅಪರೋಕ್ಷಜ್ಞಾನಿಗಳಾದ ಮನುಷ್ಯರಿಗೆ ನಕ್ಷತ್ರದಂತೆ ಕಾಣಿಸುವರು. ಅಪರೋಕ್ಷಿಗಳಾದ ಋಷಿಗಳಿಗೆ ಸೂರ್ಯನಂತೆ ಕಾಣಿಸುವರು. ವಿಪರೀತ ಜ್ಞಾನಿಗಳಿಗೆ ಕಲ್ಲಿನಂತೆ ಕಪ್ಪಾಗಿ ಕಾಣಿಸುವನು. ಕಲಿಯುಗದಲ್ಲಿ ರಾಜಸರು ತಾಮಸರೇ ಹೆಚ್ಚಾಗಿ ಇರುವುದರಿಂದ ಶ್ರೀನಿವಾಸದೇವರು ಸರಿಯಾಗಿ ಕಾಣಿಸುವುದಿಲ್ಲ. ಕಲಿಯುಗದಲ್ಲಿ ಭಕ್ತರೇ ದುರ್ಲಭರು. ಭಕ್ತರಂತೆ ಕಾಣಿಸುತ್ತಾರಷ್ಟೆ, ಭಕ್ತರಲ್ಲ. ಭಕ್ತಿಯಜ್ಞಾನವೇ ದುರ್ಲಭವು. ಭಕ್ತಿಯಿಂದ ಪರಮಾತ್ಮನ ದರ್ಶನವೂ ದುರ್ಲಭವೂ ಮಹಾತ್ಮ್ಯಜ್ಞಾನಪೂರ್ವಕವಾದ ಸುದೃಢಸ್ನೇಹವೇ ಭಕ್ತಿಯು. ಅದು ನವದ್ವೇಷಗಳಿಂದ ರಹಿತವಾಗಿರಬೇಕು. ಸ್ವತಂತ್ರನಾದ ಪರಮಾತ್ಮನಿಗೆ ಅಸ್ವತಂತ್ರ ನಾದ ಜೀವನಿಂದ ಅಭೇದವನ್ನು ಹೇಳುವುದೂ, ಜ್ಞಾನಾನಂದಾದಿಗುಣಪೂರ್ಣ ನಾದ ಪರಮಾತ್ಮನಿಗೆ ಗುಣವೇ ಇಲ್ಲವೆಂದು ಹೇಳುವುದೂ, ಅಲ್ಪಗುಣಗಳು ಇರುವುದೆಂದು ಹೇಳುವುದೂ, ಬ್ರಹ್ಮಾದಿದೇವತೆಗಳಿಗೂ ಬ್ರಾಹ್ಮಣರಿಗೂ ಭಗವಂತನ ಸಾಮ್ಯಚಿಂತನೆಯನ್ನು ಮಾಡುವುದೂ, ಬ್ರಹ್ಮಾದಿದೇವತೆಗಳಿಗೆ ಪರಮಾತ್ಮನಿಗಿಂತ ಅಧಿಕ್ಯವನ್ನು ತಿಳಿಯುವುದೂ, ಪರಮಾತ್ಮನ ಹಸ್ತಪಾದಾದಿಗಳಿಗೆ ಭೇದಚಿಂತನೆ ಮಾಡುವುದೂ, ಅವತಾರಗಳಿಗೆ ವ್ಯತ್ಯಾಸವನ್ನು ತಿಳಿಯುವುದೂ, ಪರಮಾತ್ಮನ ಭಕ್ತರ ದ್ವೇಷಮಾಡುವುದೂ, ಭಗವಂತನನ್ನು ಹೇಳುವ ಪ್ರಮಾಣವನ್ನು ನಿಂದಿಸುವುದೂ ಒಂಭತ್ತು ಪ್ರಕಾರವಾದ ದ್ವೇಷಗಳು. ಇಂತಹ ದ್ವೇಷವುಳ್ಳ ಭಕ್ತರೇ ಕಾಣಿಸುತ್ತಾರೆ ಕಲಿಯುಗದಲ್ಲಿ. ಆದುದರಿಂದ ಅವರು ಸರಿಯಾದ ಭಕ್ತರಲ್ಲ' ಎಂದು ಹೇಳಿದರು.

ಆಗ ಕನ್ಯೆಯು ಭಕ್ತರು ಯಾರು ಎಂಬುದನ್ನು ತಿಳಿಸಬೇಕೆಂದು ಪ್ರಾರ್ಥಿಸಲು ಜೈಗೀಷವ್ಯರು 'ಪ್ರಹ್ಲಾದ, ಪರಾಶರ, ನಾರದ, ಅಂಬರೀಷ, ಮುಚುಕುಂದ, ಪುಂಡರೀಕ, ಮೊದಲಾದವರೂ ಬ್ರಹ್ಮಾದಿದೇವತೆಗಳೂ ನದ್ಯಾದಿ ಅಭಿಮಾನಿಗಳೂ ಎಲ್ಲರೂ ಶ್ರೀನಿವಾಸದೇವರ ಭಕ್ತರು. ಎಲ್ಲಿ ಪರಮಾತ್ಮನ ಕಥಾನದಿಯು ಹರಿಯುತ್ತಾ ಇರುತ್ತದೆಯೋ ವಿಷ್ಣುಭಕ್ತರ ಸಮೂಹವು ಸೇರುತ್ತದೋ ಅಲ್ಲಿ ಎಲ್ಲ ಭಕ್ತರೂ ಸನ್ನಿಹಿತರಾಗಿರುತ್ತಾರೆ. ಇಂತಹ ಶ್ರೀನಿವಾಸದೇವರ ದರ್ಶನವನ್ನು ಅವಶ್ಯವಾಗಿ ಮಾಡಬೇಕು. ಸದ್ಬ್ರಾಹ್ಮಣರನ್ನು ನಮಸ್ಕರಿಸಬೇಕು. ಗಂಗಾದಿತೀರ್ಥ ಗಳಿಗೂ ನಮಸ್ಕರಿಸಬೇಕು. ತುಳಸೀಗೆ ಅಶ್ವತ್ಥಕ್ಕೆ ನಮಸ್ಕರಿಸಬೇಕು. ವಿಷ್ಣುಭಕ್ತ ರಾದವರು ಪರಮಾತ್ಮನಿಗೆ ಪೂಜೆಯನ್ನು ಮಾಡಬೇಕು. ಅಭಕ್ತರು ಪೂಜಿಸಬಾರದು. ಪೂಜಿಸಿದರೆ ಅದರಿಂದ ಅವರಿಗೆ ಅನರ್ಥವಾಗುತ್ತದೆ. ಇದನ್ನೆಲ್ಲಾ ಮನಸ್ಸಿನಲ್ಲಿ ಇಟ್ಟುಕೊಂಡು ಬೆಟ್ಟವನ್ನು ಹತ್ತಬೇಕು' ಎಂದು ಹೇಳಲು ಎಲ್ಲರೂ ಸೇರಿ ಪರಮಾತ್ಮನ ನಾಮಗಳನ್ನು ಹೇಳುತ್ತಾ ಅದರ ಅರ್ಥವನ್ನು ಅನುಸಂಧಾನ ಮಾಡುತ್ತಾ ಕೈಚಪ್ಪಾಳೆ ಬಡಿಯುತ್ತಾ ನರ್ತನ ಮಾಡುತ್ತಾ ಬೆಟ್ಟವನ್ನು ಹತ್ತಿ ಹೋದರು.



# ಭಗವದ್ಗೀತೆಯ ಪ್ರಥಮಾಧ್ಯಾಯದ ಮಹಿಮೆ [1]

ನಿರ್ಣಯ ಶಾಸ್ತ್ರದಲ್ಲಿ ಭಾರತವು ಶ್ರೇಷ್ಠವು. ಭಾರತದಲ್ಲಿಯೂ ಭಗವದ್ಗೀತೆಯು ಶ್ರೇಷ್ಠವು. ಶ್ರೀಭಗವಂತನು ಶ್ರೀದೇವಿಯರೊಡನೆ ಹೇಳಿದನು.

ಪೂರ್ವದಲ್ಲಿ ಸುಶರ್ಮಾ ಎಂಬ ಬ್ರಾಹ್ಮಣನಿದ್ದನು. ಅವನು ಅತ್ಯಂತ ದುರ್ಬುದ್ಧಿಯುಳ್ಳವನಾಗಿದ್ದನು. ಅತಿ ಪಾಪಿಯಾಗಿದ್ದನು. ವೇದಾಭ್ಯಾಸವನ್ನು ಮಾಡದೆ ಇದ್ದ ಕ್ರೂರಕರ್ಮವುಳ್ಳ ಬ್ರಾಹ್ಮಣರ ವಂಶದಲ್ಲಿ ಹುಟ್ಟಿದನು. ಅವನು ಧ್ಯಾನವನ್ನಾಗಲೀ, ಜಪವನ್ನಾಗಲೀ, ಹೋಮವನ್ನಾಗಲೀ, ಅತಿಥಿಪೂಜೆಯನ್ನಾಗಲೀ, ಮಾಡಿದವನಲ್ಲ. ಕೇವಲ ವಿಷಯದಲ್ಲಿಯೇ ಆಸಕ್ತನಾಗಿದ್ದನು. ನೇಗಿಲಿನಿಂದ ಭೂಮಿಯನ್ನು ಉಳುತ್ತಿದ್ದನು. ಮದ್ಯಪಾನ ಮಾಡುತ್ತಿದ್ದನು. ಮಾಂಸವನ್ನು ಭಕ್ಷಿಸುತ್ತಾ ಬಹುಕಾಲವನ್ನು ಕಳೆದನು. ಎಲೆಗಳನ್ನು ಮಾರಿ ಜೀವಿಸುತ್ತಿದ್ದನು. ಒಂದು ದಿನದಲ್ಲಿ ಎಲೆಗಳನ್ನು ತರಲಿಕ್ಕೆ ಋಷಿಗಳು ಇರುವ ವನಕ್ಕೆ ಹೋದನು. ಅಲ್ಲಿ ಒಂದು ಕೃಷ್ಣಸರ್ಪವು ಕಚ್ಚಿ ಸತ್ತುಹೋದನು. ಮೃತನಾಗಿ ಬಹುನರಕಗಳನ್ನು ಹೊಂದಿ ಆಮೇಲೆ ಭೂಮಿಯಲ್ಲಿ ಎತ್ತು ಆಗಿ ಹುಟ್ಟಿದನು. ಒಬ್ಬ ನೊಂಡಿಯು ತನ್ನ ಜೀವನಕ್ಕಾಗಿ ಆ ಎತ್ತನ್ನು ಕ್ರಯಕ್ಕೆ ಪಡೆದನು. ಆ ಎತ್ತು ಆ ನೊಂಡಿಯನ್ನು ಬೆನ್ನಿನಲ್ಲಿ ಹೊರುತ್ತಾ ಏಳೆಂಟುವರ್ಷಗಳನ್ನು ಕಷ್ಟದಿಂದ ಕಳೆದನು(ಕಳೆಯಿತು).

ಒಂದು ದಿವಸದಲ್ಲಿ ಆ ನೊಂಡಿಯು ಆ ಎತ್ತನ್ನು ಬಹುಹೊತ್ತು ಬಹುದೂರ ವೇಗದಿಂದ ಓಡಿಸಿದನು. ಆಗ ಎತ್ತು ಬೇಗನೇ ಭೂಮಿಯಲ್ಲಿ ಬಿದ್ದು ಮೂರ್ಛೆಯನ್ನು ಹೊಂದಿತು. ಕಾಲುಗಳು ಬಿದ್ದುಹೋದವು(ಹೋಯಿತು). ಕಣ್ಣು ತಿರುಗಿ ಹೋಯಿತು. ಬಾಯಿಯಿಂದ ನೊರೆಯನ್ನು ಕಾರಿತು. ಅದಕ್ಕೆ ಪ್ರಾಣವೂ ಹೋಗಲಾರದು. ಸರಿಯಾಗಿ ಜೀವಿಸಲೂ ಆಗಲಿಲ್ಲ. ಅದನ್ನು ನೋಡಿ ಕುತೂಹಲದಿಂದ ಬಹುಜನರು ಸೇರಿದರು. ತಮ್ಮ ತಮ್ಮ ಪುಣ್ಯವನ್ನು ಸ್ಮರಿಸಿಕೊಂಡು ಅದಕ್ಕೆ ಕೊಟ್ಟರು. ಅಲ್ಲಿ ಇದ್ದ ವೇಶ್ಯಾಸ್ತ್ರೀಯು ತನ್ನ ಪುಣ್ಯವನ್ನು ತಿಳಿಯದೆ ತಾನು ಮಾಡಿದ ಯಾವುದೇ ಪುಣ್ಯವನ್ನು ಕೊಟ್ಟಳು. ತರುವಾಯ ಆ ಎತ್ತು ಮರಣವನ್ನು ಹೊಂದಿತು. ಆ ವೇಶ್ಯಾಸ್ತ್ರೀಯು ಕೊಟ್ಟ ಪುಣ್ಯದಿಂದ ಆ ಎತ್ತು ಆಗಿದ್ದ ಜೀವನನ್ನು ಬಿಟ್ಟುಬಿಟ್ಟನು. ಅವನು ಪುನಃ ಭೂಮಿಯಲ್ಲಿ ಒಳ್ಳೇ ವಂಶದಲ್ಲಿ ಬ್ರಾಹ್ಮಣನಾಗಿ ಹುಟ್ಟಿದನು. ಅವನಿಗೆ ಪೂರ್ವಜನ್ಮದ ಸ್ಮರಣೆಯಿದ್ದಿತು. ಬಹುಕಾಲವಾದ ಮೇಲೆ

---

1. ಪ. ಪು.ಉ.ಖಂ. ಅ–171

ತನಗೆ ಆ ವೇಶ್ಯೆಯು ಕೊಟ್ಟ ಪುಣ್ಯವೇನೆಂದು ತಿಳಿಯುವುದಕ್ಕಾಗಿ ಆ ವೇಶ್ಯೆಯ ಬಳಿಗೆ ಹೋಗಿ 'ನೀನು ನನಗೆ ಕೊಟ್ಟ ಪುಣ್ಯವೇನೆಂದು ಕೇಳಿದನು. ಅದಕ್ಕೆ ವೇಶ್ಯೆಯು 'ಗೂಡಿನಲ್ಲಿರುವ ಈ ಗಿಣಿಯು ಏನೋ ಹೇಳುತ್ತಿರುವುದು. ಆದರಿಂದ ನಾನು ಪವಿತ್ರಳಾಗಿ ಆ ಪುಣ್ಯವನ್ನು ನಾನು ಕೊಟ್ಟಿರುವೆನು' ಎಂದು ಹೇಳಿದಳು.

ತರುವಾಯ ಅವರಿಬ್ಬರೂ ಗಿಣಿಯ ಬಳಿಗೆ ಹೋಗಿ ಕೇಳಲು ಅದು ತನ್ನ ಪೂರ್ವಜನ್ಮಸ್ಮರಣೆಯುಳ್ಳದ್ದಾಗಿ 'ನಾನು ಪೂರ್ವದಲ್ಲಿ ಪಂಡಿತನಾಗಿದ್ದೆನು. ಪಂಡಿತನೆಂದು ಅಹಂಕಾರದಿಂದ ರಾಗದ್ವೇಷದಿಂದ ಗುಣವಂತರಾದ ವಿದ್ವಾಂಸ ರಲ್ಲಿಯೂ ಮಾತ್ಸರ್ಯವುಳ್ಳವನಾಗಿದ್ದೆನು. ಕಾಲಕ್ರಮದಿಂದ ನಾನು ಮೃತನಾದವ ನಾಗಿ ನಿಂದ್ಯಗಳಾದ ಲೋಕಗಳನ್ನು ಹೊಂದಿದವನಾಗಿ ಆಮೇಲೆ ಗಿಣಿಯಾಗಿ ಹುಟ್ಟಿದೆನು. ನಾನು ಪೂರ್ವದಲ್ಲಿ ಗುರುಗಳನ್ನು ನಿಂದಿಸಿದ್ದೆನು. ದುಷ್ಕರ್ಮವುಳ್ಳ ನಾನು ಗಿಣಿಯಾಗಿ ಹುಟ್ಟಿದಾಗ ತಂದೆತಾಯಿಗಳು ಮೃತರಾದರು. ಬಿಸಿಲಿನ ಕಾಲದಲ್ಲಿ ದಾರಿಯಲ್ಲಿ ಶ್ರಮದಿಂದ ಇದ್ದೆನು. ನನ್ನ ಋಷಿಗಳು ತೆಗೆದುಕೊಂಡು ಬಂದರು. ತಮ್ಮ ಆಶ್ರಮದಲ್ಲಿ ಪಂಜರದಲ್ಲಿ ನನ್ನನ್ನು ಇಟ್ಟರು. ಋಷಿಗಳು ಗೀತೆಯ ಪಾರಾಯಣ ಮಾಡುತ್ತಿದ್ದರು. ಅದನ್ನು ಕೇಳಿ ನನಗೆ ಪ್ರಥಮಾಧ್ಯಾಯವು ಬಾಯಿಗೆ ಬಂದಿತು. ಅದನ್ನೇ ಯಾವಾಗಲೂ ಹೇಳುತ್ತಿರುತ್ತೇನೆ. ಈ ಸಮಯದಲ್ಲಿ ಒಬ್ಬ ಕಳ್ಳನು ನನ್ನನ್ನು ಕದ್ದುಕೊಂಡು ಇವಳಿಗೆ ಮಾರಿದನು' ಎಂದು ಹೇಳಿತು. ಈರೀತಿಯಾಗಿ ಗೀತೆಯ ಪ್ರಥಮಾಧ್ಯಾಯವು ಪ್ರಶಸ್ತವಾದದ್ದು. ಆ ಅಧ್ಯಾಯದ ಮಹಿಮೆಯಿಂದ ಪಾಪದಿಂದ ಬಿಡುಗಡೆಯನ್ನು ಹೊಂದಿದನು.



## ಗೀತೆಯ ದ್ವಿತೀಯಾಧ್ಯಾಯದ ಮಹಿಮೆ [1]

ದಕ್ಷಿಣದಿಕ್ಕಿನಲ್ಲಿ ಪುರಂದರ ಎಂಬ ಪಟ್ಟಣದಲ್ಲಿ ದೇವಶರ್ಮ ಎಂದು ಪ್ರಸಿದ್ಧನಾದ ಒಬ್ಬ ಬ್ರಾಹ್ಮಣನಿದ್ದನು. ಅವನು ಅತಿಥಿಗಳನ್ನು ಸತ್ಕರಿಸುತ್ತಿದ್ದನು. ವೇದಶಾಸ್ತ್ರದಲ್ಲಿ ಪಂಡಿತನಾಗಿದ್ದನು. ಅನೇಕ ಯಾಗಗಳನ್ನು ಮಾಡಿದ್ದನು. ಋಷಿಗಳಿಗೆ ಪ್ರಿಯನಾಗಿ ದ್ದನು. ಅಗ್ನಿಯಲ್ಲಿ ಹೋಮಮಾಡಿ ಬಹುಕಾಲ ದೇವತೆಗಳನ್ನು ತೃಪ್ತಿಪಡಿಸಿದ್ದನು. ಆದರೂ ಅವನಿಗೆ ಮನಸ್ಸಿಗೆ ಶಾಂತಿಯುಂಟಾಗಲಿಲ್ಲ. ಶ್ರೇಯಸ್ಸಿಗೆ ಸಾಧನವನ್ನು

1. ಪ. ಪು.ಉ.ಖಂ. ಅ–172

ತಿಳಿಯಬೇಕೆಂಬ ಆಸೆಯಿಂದ ಅನೇಕ ತಪಸ್ವಿಗಳನ್ನು ಸೇವಿಸಿದನು. ಹೀಗೆಯೇ ಬಹುಸಮಯವು ಕಳೆದುಹೋಯಿತು. ಒಂದು ದಿನದಲ್ಲಿ ಮೂಗಿನ ಅಗ್ರವನ್ನೇ ನೋಡುತ್ತಾ ಧ್ಯಾನಮಾಡುತ್ತಿದ್ದ ಯಾವ ಫಲವನ್ನೂ ಅಪೇಕ್ಷಿಸದೆ ಇರುವ ಶಾಂತವಾದ ಮನಸ್ಸುಳ್ಳ ಪರಬ್ರಹ್ಮನನ್ನು ಧ್ಯಾನ ಮಾಡುತ್ತಾ ಆನಂದಮಗ್ನನಾದ ಒಬ್ಬ ಪುರುಷನು ಕಾಣಿಸಿದನು. ದೇವಶರ್ಮನು ಅವನ ಕಾಲುಹಿಡಿದು ನಮಸ್ಕರಿಸಿ ವಿಧಿಪ್ರಕಾರವಾಗಿ ಅತಿಥಿ ಸತ್ಕಾರವನ್ನು ಮಾಡಿದನು. ಸಂತೋಷವನ್ನು ಹೊಂದಿದ ಅವನೊಡನೆ ನಮಸ್ಕಾರ ಮಾಡಿ ಶ್ರೇಯಸ್ಸಾಧನವನ್ನು ಕೇಳಿದನು.

ಅದಕ್ಕೆ ಅವನು 'ಪುರ ಎಂಬ ಸ್ಥಳದಲ್ಲಿ ಮಿತ್ರವಂತನೆಂಬ ಮೇಕೆಮೇಯಿಸುವವನಿರುವನು. ಅವನು ಜ್ಞಾನಿಯು. ನಿನಗೆ ಉಪದೇಶಿಸುವನು' ಎಂದನು. ವಿಷ್ಣುಶರ್ಮನು ಅವನಿಗೆ ನಮಸ್ಕರಿಸಿ ಪುರ ಎಂಬ ಸ್ಥಳಕ್ಕೆ ಹೋದನು. ಅದರ ಉತ್ತರ ಭಾಗದಲ್ಲಿ ದೊಡ್ಡ ವನವನ್ನು ನೋಡಿದನು. ಆ ವನದಲ್ಲಿ ನದೀತೀರದಲ್ಲಿ ಒಂದು ಕಲ್ಲಿನ ಮೇಲೆ ಆನಂದದಿಂದ ಕೂತಿದ್ದ ಮಿತ್ರವಂತನನ್ನು ನೋಡಿದನು. ಅವನ ಬಳಿಯಲ್ಲಿ ಮೃಗಗಳು ಸಹಜವಾದ ವಿರೋಧವನ್ನು ಬಿಟ್ಟು ಸ್ನೇಹದಿಂದ ಇದ್ದವು. ಮಿತ್ರವಂತನು ಸಂತೋಷದಿಂದ ಕೃಪೆಯಿಂದ ನೋಡುತ್ತಾ ಇದ್ದನು. ದೇವಶರ್ಮನು ವಿನಯದಿಂದ ಅವನ ಸಮೀಪಕ್ಕೆ ಹೋಗಲು ಅವನು ಸ್ವಲ್ಪ ತಲೆಯನ್ನು ಬಗ್ಗಿಸಿ ಸತ್ಕರಿಸಿದನು. ಮಿತ್ರವಂತನು ಧ್ಯಾನ ಮಾಡುತ್ತಿದ್ದನು. ಅವನ ಧ್ಯಾನವು ಮುಗಿದಮೇಲೆ ದೇವಶರ್ಮನೊಡನೆ ಶ್ರೇಯಸ್ಸಿನ ಸಾಧನವನ್ನು ತನಗೆ ತಿಳಿಸಬೇಕೆಂದು ಕೇಳಿಕೊಂಡನು.

ಅದಕ್ಕೆ ಮಿತ್ರವಂತನು 'ಪೂರ್ವದ ಒಂದು ಕಥೆಯನ್ನು ಹೇಳುವೆನು. ಕೇಳಿ. ಗೋದಾವರೀ ತೀರದಲ್ಲಿ ಪ್ರತಿಷ್ಠಾನ ಎಂಬ ನಗರವಿದೆ. ಅಲ್ಲಿ ದುರ್ದಮ ಎಂಬ ಬ್ರಾಹ್ಮಣನಿದ್ದನು. ಅಲ್ಲಿ ವಿಕ್ರಮ ಎಂಬ ರಾಜನಿದ್ದನು. ಆ ಬ್ರಾಹ್ಮಣನು ನಿತ್ಯವೂ ದಾನವನ್ನು ತೆಗೆದುಕೊಳ್ಳುತ್ತಿದ್ದನು. ತನ್ನ ಹೊಟ್ಟೆಯನ್ನು ತುಂಬಿಸಿಕೊಳ್ಳುತ್ತಿದ್ದನು. ಕಾಲಕ್ರಮದಿಂದ ಅವನು ಮೃತನಾದನು. ಅವನನ್ನು ಯಮಲೋಕಕ್ಕೆ ಕರೆದು ಕೊಂಡು ಹೋದರು. ಅಲ್ಲಿ ಅನೇಕ ನರಕಗಳನ್ನು ಅನುಭವಿಸಿ ದುರಾಚಾರಿಗಳಾದ ಬ್ರಾಹ್ಮಣರ ಕುಲದಲ್ಲಿ ಹುಟ್ಟಿದನು. ಜನ್ಮಾಂತರದಿಂದ ಇರುವ ಅಜ್ಞಾನದಿಂದ ಕೂಡಿದವನಾಗಿ ಅಧಮವಂಶದಲ್ಲಿ ಹುಟ್ಟಿದ ಒಂದು ಸ್ತ್ರೀಯನ್ನು ಮದುವೆಯಾದನು. ಆ ಸ್ತ್ರೀಯು ಕ್ರಮದಿಂದ ಯೌವನವನ್ನು ಹೊಂದಿದಳು. ಅವಳು ಪತಿಯ ಬಡತನವನ್ನು ನೋಡಿ ಸಹಿಸಲಿಲ್ಲ. ಅವಳು ಬೇರೆ ಪುರುಷರನ್ನು ಅಪೇಕ್ಷಿಸಿದಳು. ಆ

ಬ್ರಾಹ್ಮಣನು ಜೀವನಕ್ಕಾಗಿ ಹೊರಗೆ ಹೋಗಿರಲು ಅವಳು ಊರಿನ ಹೊರಗೆ ಹೋಗಿ ಒಬ್ಬ ಕಾಮುಕನಿಂದ ಚಂಡಾಲನ ಸಂಬಂಧವನ್ನು ಮಾಡಿದಳು. ಅದರಿಂದಲೇ ಗರ್ಭಿಣಿಯಾಗಿ ಒಂದು ಹೆಣ್ಣನ್ನು ಹಡೆದಳು. ಅವಳು ಕ್ರಮದಿಂದ ಮುದುಕಿಯಾಗಿ ಮೃತಳಾಗಿ ಡಾಕಿನಿಯೆಂಬ ಪಿಶಾಚಿಯಾದಳು.

ದುಷ್ಟಸ್ತ್ರೀಯರ ಸಹವಾಸದಿಂದ ದುರ್ಬುದ್ಧಿಯುಳ್ಳವಳಾಗಿದ್ದ ಅವಳು ರಕ್ತದಲ್ಲಿ ಆಸೆಯುಳ್ಳವಳಾಗಿ ರೋಗಿಯಾದ ಒಬ್ಬ ಬೇಡನನ್ನು ತಿಂದು ಹಾಕಿದಳು. ಆಮೇಲೆ ಆ ಬೇಡನು ಹುಲಿಯಾಗಿ ಹುಟ್ಟಿದನು. ಅವಳು ಅನೇಕ ನರಕಗಳನ್ನು ಅನುಭವಿಸಿ ನನ್ನ ಮನೆಯಲ್ಲಿ ಮೇಕೆಯಾಗಿ ಹುಟ್ಟಿದಳು. ನಾನು ಆ ಮೇಕೆಯನ್ನು ಇತರ ಮೇಕೆಗಳೊಡನೆ ಕಾಡಿನಲ್ಲಿ ರಕ್ಷಿಸುತ್ತಿರುವಾಗ ಒಂದು ಭಯಂಕರವಾದ ಹುಲಿಯು ಬರುವುದನ್ನು ನೋಡಿದೆನು. ನೋಡಿ ಮರಣಭಯ ವುಳ್ಳವನಾಗಿ ಮೇಕೆಗಳೊಡನೆ ಓಡಿದೆನು. ಆ ಹುಲಿಯು ಪೂರ್ವವೈರವನ್ನು ಸ್ಮರಿಸಿಕೊಂಡು ಅಟ್ಟಿಸಿಕೊಂಡು ಬಂದಿತು. ಆ ಮೇಕೆಯು ನದಿಯ ಸಮೀಪಕ್ಕೆ ಬಂದು ಭಯವಿಲ್ಲದೆ ಸುಮ್ಮನೆ ನಿಂತುಬಿಟ್ಟಿತು. ಹುಲಿಯೂ ಕೂಡ ದ್ವೇಷರಹಿತವಾಗಿ ನಿಂತುಬಿಟ್ಟಿತು. ಹಾಗೆ ನಿಂತಿದ್ದ ಹುಲಿಯನ್ನು ನೋಡಿ ಮೇಕೆಯು 'ಹುಲಿಯೇ! ನನ್ನ ಮಾಂಸವನ್ನು ಆದರದಿಂದ ತಿನ್ನುವವನಾಗು. ಯಾಕೆ ಸುಮ್ಮನೆ ನಿಂತಿರುವಿ?' ಎಂದು ಕೇಳಿತು. ಅದಕ್ಕೆ ಹುಲಿಯು 'ನನಗೆ ದ್ವೇಷವು ಹೊರಟುಹೋಯಿತು. ಹಸಿವೆದಾಹಗಳೂ ಹೊರಟುಹೋದವು. ಆದುದರಿಂದ ಹತ್ತಿರಬಂದರೂ ನಿನ್ನನ್ನು ನಾನು ಅಪೇಕ್ಷಿಸುವುದಿಲ್ಲ' ಎಂದು ಹೇಳಿತು. ಆಗ ಮೇಕೆಯು 'ಇಲ್ಲಿಗೆ ಬರಲು ನನಗೆ ಭಯವಿಲ್ಲದೆ ಹೋಗಲಿಕ್ಕೆ ಕಾರಣವೇನು? ನಿನಗೆ ಕಾರಣವು ತಿಳಿದಿದ್ದರೆ ನನಗೆ ಹೇಳುವವನಾಗು' ಎಂದು ಕೇಳಲು ಹುಲಿಯು 'ನನಗೆ ತಿಳಿಯಲಾರದು. ಮುಂದೆ ಹೋಗುತ್ತಿರುವವನನ್ನು ಕೇಳುವ' ಎಂದು ಇಬ್ಬರೂ ನನ್ನ ಹತ್ತಿರ ಕೇಳಿದವು.

ನಾನು ಅವರಿಬ್ಬರಿಂದ ಸಹಿತನಾಗಿ ಅಲ್ಲಿ ಇದ್ದ ಒಂದು ಕಪಿಯೊಡನೆ ಕೇಳಿದೆನು. ಆಗ ಕಪಿಯು 'ಮೇಕೆಯನ್ನು ಮೇಯಿಸುವವನೇ! ಇಲ್ಲಿಯ ಪೂರ್ವವೃತ್ತಾಂತವನ್ನು ಕೇಳು. ಈ ವನದಲ್ಲಿ ಇರುವ ದೊಡ್ಡ ದೇವಾಲಯವನ್ನು ನೋಡು. ಇಲ್ಲಿ ಒಂದು ರುದ್ರಲಿಂಗವಿದೆ. ಅದನ್ನು ಸುಕರ್ಮ ಎಂಬ ಜ್ಞಾನಿಯು ಪೂಜಿಸುತ್ತಿರುವನು. ಅವನು ಕಾಡಿನಿಂದ ಪುಷ್ಪಗಳನ್ನು ತಂದು ನದಿಯ ನೀರನ್ನು ತಂದು ಅಭಿಷೇಕ ಮಾಡಿ ಪೂಜಿಸುತ್ತಿದ್ದನು. ಬಹುಕಾಲದ ಮೇಲೆ ಅವನ ಸಮೀಪಕ್ಕೆ ಒಬ್ಬ ಅತಿಥಿಯು ಬಂದನು. ಅವನಿಗೆ ಹಣ್ಣುಗಳಿಂದ ಆತಿಥ್ಯವನ್ನು ಮಾಡಿದನು. ಅತಿಥಿಯು ಅದರಿಂದ

ಸಂತುಷ್ಟನಾಗಿ ಸುಕರ್ಮನೊಡನೆ 'ನೀನು ಹೀಗೆ ಹಣ್ಣುಗಳನ್ನು ತಿಂದುಕೊಂಡು ಇಲ್ಲಿ ಇರುವೆಯಲ್ಲಾ! ಇದರಿಂದ ಏನು ಫಲವಾಗುವುದೆಂದು ತಿಳಿದಿರುವಿ. ಅಥವಾ ಎಲ್ಲರೂ ಮಾಡುತ್ತಾರೆ ಎಂದು ನೀನೂ ಮಾಡುವಿಯಾ?' ಎಂದು ಕೇಳಿದನು. ಅದಕ್ಕೆ ಸುಕರ್ಮನು 'ಇದರಿಂದ ಏನು ಫಲವಾಗುವುದೆಂದು ನನಗೆ ತಿಳಿಯದು. ಅದಕ್ಕಾಗಿಯೇ ರುದ್ರದೇವರ ಸೇವೆಯನ್ನು ಮಾಡುತ್ತಿದ್ದೇನೆ. ಆ ಸೇವೆಯು ಫಲಿಸಿದ ಕಾರಣ ನಿಮ್ಮ ದರ್ಶನವಾಯಿತು' ಎಂದು ಹೇಳಿದನು.

ಈರೀತಿಯಾಗಿ ಮಧುರವಾದ ಮಾತನ್ನು ಕೇಳಿ ಅತಿಥಿಯಾಗಿ ಬಂದ ಮಹಾನುಭಾವರು ಕಲ್ಲಿನಲ್ಲಿ ಭಗವದ್ಗೀತೆಯ ದ್ವಿತೀಯ ಅಧ್ಯಾಯವನ್ನು ಬರೆದರು. ಸುಕರ್ಮನೊಡನೆ ಅದನ್ನು ಓದಿ ಅಭ್ಯಾಸಮಾಡಲಿಕ್ಕೆ ಹೇಳಿದರು. 'ನಿನ್ನ ಮನಸ್ಸಿನ ಅಭೀಷ್ಟವು ಫಲಿಸುತ್ತದೆ' ಎಂದು ಹೇಳಿ ಮರೆಯಾಗಿ ಹೋದರು. ಸುಕರ್ಮನು ಆಶ್ಚರ್ಯವುಳ್ಳವನಾಗಿ ಹಾಗೆಯೇ ಅನುಷ್ಠಾನ ಮಾಡಿದನು. ತರುವಾಯ ಬಹುಕಾಲವಾದ ಮೇಲೆ ಪ್ರಸನ್ನವಾದ ಮನಸ್ಸುಳ್ಳವನಾಗಿ ಎಲ್ಲೆಲ್ಲಿ ಸಂಚಾರ ಮಾಡಿದನೋ ಆ ಆ ತಪೋವನವು ಶಾಂತವಾಗಿರುವುದು. ಅಲ್ಲಿ ಹಸಿವೆ, ದಾಹ ಇತ್ಯಾದಿ ಯಾವ ಪೀಡೆಯೂ ಇರುವುದಿಲ್ಲ. ಗೀತೆಯ ಎರಡನೆಯ ಅಧ್ಯಾಯವನ್ನು ಜಪಿಸಿದ ಆ ಮಹಾನುಭಾವನ ತಪಸ್ಸಿನ ಸಾಮರ್ಥ್ಯದಿಂದ ಹೀಗೆ ಆಗಿರುವುದು' ಎಂದು ಹೇಳಿತು.

ತರುವಾಯ ನಾನು ಪ್ರಸನ್ನವಾದ ಕಪಿಯಿಂದ ಅನುಜ್ಞೆಯನ್ನು ಪಡೆದು ಮೇಕೆಯಿಂದಲೂ ಹುಲಿಯಿಂದಲೂ ಸಹಿತನಾಗಿ ಆ ಕಪಿಯು ಹೇಳಿದ ಸ್ಥಳಕ್ಕೆ ಹೋಗಿ ಕಲ್ಲಿನಲ್ಲಿ ಬರೆದಿದ್ದ ಗೀತೆಯ ಎರಡನೆಯ ಅಧ್ಯಾಯವನ್ನು ನೋಡಿದೆನು. ಅದನ್ನು ಅಭ್ಯಾಸ ಮಾಡಿದ್ದರಿಂದಲೇ ತಪಸ್ಸುಳ್ಳವನಾದೆನು. ನೀನೂ ಕೂಡ ಗೀತೆಯ ಎರಡನೇ ಅಧ್ಯಾಯವನ್ನು ಜಪಿಸುತ್ತಾ ಇರು. ನಿನಗೆ ಬೇಗನೇ ಮೋಕ್ಷವು ಉಂಟಾಗುವುದು' ಎಂದು ಹೇಳಿದನು. ಈರೀತಿಯಾಗಿ ಮಿತ್ರವಂತನಿಂದ ಆಜ್ಞಪ್ತನಾಗಿ ಅವನಿಗೆ ನಮಸ್ಕರಿಸಿ ಪೂಜಿಸಿ ಪುರಂದರಪುರಕ್ಕೆ ಹೋದನು. ಅಲ್ಲಿ ಒಂದು ದೇವಾಲಯದಲ್ಲಿ ಒಬ್ಬ ಪಂಡಿತನನ್ನು ನೋಡಿ ಅವನೊಡನೆ ಈ ವಿಷಯವನ್ನು ತಿಳಿಸಿ ಅವನಿಂದ ಗೀತೆಯ ಎರಡನೆಯ ಅಧ್ಯಾಯವನ್ನು ಅಭ್ಯಾಸಮಾಡಿದನು. ಆಮೇಲೆ ಆದರದಿಂದ ಅದನ್ನು ಪಠಿಸುತ್ತಿದ್ದನು.



# ಭಗವದ್ಗೀತೆಯ ಮೂರನೇ ಅಧ್ಯಾಯದ ಮಹಿಮೆ [1]

ಜನಸ್ಥಾನದಲ್ಲಿ ಜಡ ಎಂದು ಹೆಸರುಳ್ಳ ಕೌಶಿಕ ಗೋತ್ರದ ಬ್ರಾಹ್ಮಣನಿದ್ದನು. ಅವನು ತನ್ನ ಜಾತಿಗೆ ಯೋಗ್ಯವಾದ ಕರ್ಮವನ್ನು ಬಿಟ್ಟು ವೈಶ್ಯವೃತ್ತಿಯನ್ನು ಕೈಗೊಂಡನು. ಪರಸ್ತ್ರೀಯರಲ್ಲಿ ಆಸಕ್ತನಾಗಿದ್ದನು. ಪಗಡೆ ಆಟವಾಡುತ್ತಿದ್ದನು. ಮದ್ಯಪಾನ ಮಾಡುತ್ತಿದ್ದನು. ಮೃಗಬೇಟೆ ಆಡುತ್ತಿದ್ದನು. ಹೀಗೆಯೇ ಕಾಲವನ್ನು ಕಳೆದನು. ಹಣವೆಲ್ಲಾ ವೆಚ್ಚವಾಗಲು ರಾತ್ರಿಯಲ್ಲಿ ಕಳ್ಳತನ ಮಾಡಲಿಕ್ಕೆ ಆರಂಭಿಸಿದನು. ಯಜ್ಞ ಮಾಡುವವರ ಹಣವನ್ನು ಅಪಹರಿಸಿದನು. ಆ ಹಣವನ್ನು ಹಿಡಿದುಕೊಂಡು ಬಹುದೂರ ವ್ಯಾಪಾರಮಾಡಲಿಕ್ಕೆ ಹೋದನು. ಕಸ್ತೂರಿ ಅಗುರುಗಂಧ ಇತ್ಯಾದಿಗಳನ್ನು ತೆಗೆದುಕೊಂಡು ಊರಿಗೆ ಹಿಂದಿರುಗಿ ಬಂದನು. ತನ್ನ ಪತ್ನಿಯನ್ನು ನೋಡಬೇಕೆಂಬ ಆಸೆಯಿಂದ ಬಹುದೂರ ಬರುವವನಾಗಿ ದಾರಿಯಲ್ಲಿ ಸೂರ್ಯನು ಮುಳುಗಲು ಕತ್ತಲೆಯು ಉಂಟಾಗಲು ಒಂದು ಮರದ ಬುಡದಲ್ಲಿ ವಾಸಮಾಡಿದನು. ಅಲ್ಲಿ ಕಳ್ಳರು ಬಂದು ಅವನನ್ನು ಕೊಂದು ಹಾಕಿದರು. ಧರ್ಮಭ್ರಷ್ಟನಾದ ಕಾರಣ ಅವನು ಭಯಂಕರವಾದ ಪಿಶಾಚನಾದನು. ಹಸಿವೆ ದಾಹದಿಂದ ಪೀಡಿತನಾಗಿ ಮೇಲೆ ತಲೆಕೂದಲು ಉಳ್ಳವನಾಗಿ ಎಲುಬು ಮಾತ್ರ ದೇಹವುಳ್ಳವನಾಗಿ ಸಂಚರಿಸುತ್ತಿದ್ದನು. ಅವನ ಮಗನು ತಂದೆಯನ್ನು ವಿಚಾರಿಸುತ್ತಾ ವರ್ತಮಾನವನ್ನೇ ತಿಳಿಯಲಿಲ್ಲ.

ಆಮೇಲೆ ಒಂದು ದಿವಸದಲ್ಲಿ ತನ್ನ ತಂದೆಯು ಮೃತನಾದ ವಿಷಯವನ್ನು ತಿಳಿದವನಾಗಿ ತುಂಬಾ ದುಃಖವನ್ನು ಹೊಂದಿದನು. ತರುವಾಯ ಬುದ್ಧಿವಂತನಾದ ಅವನು ಯೋಚನೆ ಮಾಡಿ ಕಾಶಿಗೆ ಹೋಗಿ ತಂದೆಗೆ ಹಿತವಾದ ಕಾರ್ಯವನ್ನು ಮಾಡುವುದಕ್ಕಾಗಿ ಸಾಮಗ್ರಿಯನ್ನು ಹಿಡಿದುಕೊಂಡು ಹೋದನು. ದಾರಿಯಲ್ಲಿ ಏಳೆಂಟುದಿವಸ ಹೋದವನು ಒಂದುದಿನ ಒಂದು ಮರವು ಬುಡದಲ್ಲಿ ಸಂಧ್ಯಾವಂದನೆ ಮಾಡಿದನು. ಆಮರದ ಬುಡದಲ್ಲಿಯೇ ಅವನ ತಂದೆಯು ಮೃತನಾಗಿದ್ದನು. ಅಲ್ಲಿ ಮಗನು ಸಂಧ್ಯಾವಂದನೆಯನ್ನು ಮುಗಿಸಿ ಭಗವದ್ಗೀತೆಯ ಮೂರನೆಯ ಅಧ್ಯಾಯವನ್ನು ಪಾರಾಯಣಮಾಡಿದನು. ತರುವಾಯ ಆಕಾಶಮಧ್ಯದಲ್ಲಿ ಘೋರವಾದ ಸ್ವರವು ಉಂಟಾಯಿತು. ಆಗಲೇ ಘೋರನಾದ ಕೆಳಗೆ ಬೀಳುತ್ತಿದ್ದ ತಂದೆಯನ್ನು ನೋಡಿದನು. ಆಶ್ಚರ್ಯಭಯಗಳ ವಶನಾದನು.

---

1. ಪ. ಪು.ಉ.ಖಂ. ಅ–173

ತರುವಾಯ ಆಕಾಶದಲ್ಲಿ ತುಂಬಾ ಬೆಳಕಾಯಿತು. ನೂರಾರು ಗಂಟೆಗಳಿಂದ ಕೂಡಿದ ವಿಮಾನವು ಕಾಣಿಸಿತು. ಆ ವಿಮಾನದಲ್ಲಿ ಕೂತಿದ್ದ ದಿವ್ಯಸ್ತ್ರೀಯರಿಂದ ಸಹಿತನಾದ ಮುನಿಗಳಿಂದ ಸ್ತೋತ್ರಮಾಡಲ್ಪಡುತ್ತಿದ್ದ ಪೀತಾಂಬರ ಧಾರಿಯಾದ ತಂದೆಯನ್ನು ನೋಡಿ ನಮಸ್ಕಾರವನ್ನು ಮಾಡಿದನು.

ಆಗ ತಂದೆಯು ಆಶೀರ್ವಾದವನ್ನು ಮಾಡಿದನು. ಮಗನು ಇದೇನೆಂದು ಕೇಳಲು ತಂದೆಯು ಹೇಳಿದನು 'ಮಗ! ನನ್ನ ಸಮೀಪದಲ್ಲಿ ಮೂರನೇ ಅಧ್ಯಾಯಗೀತೆಯನ್ನು ಪಾರಾಯಣಮಾಡಿ ನನ್ನನ್ನು ಮಹಾಪಾಪಕರ್ಮದಿಂದ ಬಿಡಿಸಿದಿ. ಕಾಶಿಗೆ ಯಾವ ಕಾರ್ಯಕ್ಕಾಗಿ ಹೊರಟಿರುವಿಯೋ ಆ ಕಾರ್ಯವು ಈಗಲೇ ಆಯಿತು' ಎಂದು ಹೇಳಲು ಮಗನು 'ನಾನಿನ್ನು ಏನು ಮಾಡಬೇಕು? ಅದನ್ನು ತಿಳಿಸಬೇಕು' ಎಂದು ಕೇಳಿದನು. ಅದಕ್ಕೆ ತಂದೆಯು 'ನಾನು ಮಾಡಿದಂತೆಯೇ ನನ್ನ ತಮ್ಮನೂ ಬಹುಪಾಪ ಮಾಡಿರುವನು. ಅವನು ಘೋರವಾದ ನರಕವನ್ನು ಹೊಂದಿರುವನು. ಅವನನ್ನು ನೀನು ಬಿಡಿಸಬೇಕು. ಇನ್ನು ನಮ್ಮ ವಂಶದವರು ಅನೇಕರು ನರಕವನ್ನು ಹೊಂದಿರುವರು. ಅವರೆಲ್ಲರನ್ನೂ ನರಕದಿಂದ ಬಿಡಿಸಬೇಕು' ಎನ್ನಲು ಮಗನು ಕೈಮುಗಿದು ಹಾಗೆಯೇ ಆಗಲಿ ಎಂದು ಹೇಳಿ ಯಾವ ಕರ್ಮದಿಂದ ಅವರನ್ನೆಲ್ಲರನ್ನೂ ಬಿಡಿಸಲಿ ಎಂದು ಕೇಳಿದನು. ತಂದೆಯು 'ನನ್ನನ್ನು ಬಿಡಿಸಿದ ಕರ್ಮದಿಂದಲೇ ಬಿಡಿಸು. ಎಂದರೆ ಮೂರನೇ ಅಧ್ಯಾಯಗೀತೆಯನ್ನು ಪಾರಾಯಣಮಾಡು. ಅದರ ಪುಣ್ಯವನ್ನು ಅವರಿಗೆ ಕೊಡು. ಅದರಿಂದ ಅವರು ಬೇಗನೆ ನರಕದಿಂದ ಬಿಡುಗಡೆಯನ್ನು ಹೋಗಿ ಭಗವಂತನ ಲೋಕಕ್ಕೆ ಹೋಗುವರು' ಎಂದು ಹೇಳಿದನು. ಅದಕ್ಕೆ ಮಗನು 'ಹಾಗಾದರೆ ನಿಮ್ಮ ಇಷ್ಟವಾಗಿದ್ದರೆ ನರಕದಲ್ಲಿ ಇರುವ ಎಲ್ಲರನ್ನೂ ಬಿಡಿಸುವೆನು' ಎಂದು ಹೇಳಲು ತಂದೆಯ ಹಾಗೆಯೇ ಮಾಡು ಎಂದು ಹೇಳಿ ವಿಮಾನದಲ್ಲಿ ಕೂತುಕೊಂಡು ಭಗವಂತನ ಲೋಕಕ್ಕೆ ಹೋದನು.

ಮಗನು ಜನಸ್ಥಾನಕ್ಕೆ ಬಂದು ಒಂದು ದೇವಾಲಯದಲ್ಲಿ ಗೀತಾ ಮೂರನೇ ಅಧ್ಯಾಯವನ್ನು ಪಾರಾಯಣ ಮಾಡುತ್ತಾ ಇದ್ದು ನರಕದವರನ್ನು ಬಿಡಿಸುವುದಕ್ಕಾಗಿ ಆ ಪುಣ್ಯವನ್ನು ಅವರಿಗೆ ಸಮರ್ಪಿಸಿದನು. ಆ ಸಮಯದಲ್ಲಿ ನರಕದಲ್ಲಿ ಇರುವವರನ್ನು ಅಲ್ಲಿಂದ ಬಿಡಿಸುವುದಕ್ಕಾಗಿ ಯಮದೇವರ ಬಳಿಗೆ ಪರಮಾತ್ಮನ ದೂತರು ಬಂದರು. ಅವರನ್ನು ನೋಡಿ ಯಮದೇವರು ಪೂಜಿಸಿದರು. ಇಲ್ಲಿಗೆ ಬರಲು ಕಾರಣವೇನೆಂದು ಕೇಳಿದರು. ಅದಕ್ಕೆ ವಿಷ್ಣುದೂತರು 'ಭಗವಂತನು ನರಕದಲ್ಲಿ ಇರುವವರನ್ನು

ಬಿಡಿಸಿಕೊಂಡು ಬರಬೇಕೆಂದು ಆಜ್ಞಾಪಿಸಿರುವನು' ಎಂದು ಹೇಳಿದನು. ಯಮದೇವರು ಭಗವಂತನ ಆಜ್ಞೆಯನನು ಶಿರಸಾವಹಿಸಿ ನರಕದವರನ್ನೆಲ್ಲಾ ಬಿಟ್ಟು ಬಿಟ್ಟರು. ಸ್ವಲ್ಪ ಯೋಚಿಸಿ ತಾನೂ ಕೂಡ ಅವರೊಡನೆ ಭಗವಂತನ ಲೋಕಕ್ಕೆ ಹೋಗಿ ಭಗವಂತನನ್ನು ಸ್ತೋತ್ರ ಮಾಡಿ 'ನಿನ್ನ ಆಜ್ಞೆಯಿಂದ ನರಕದಲ್ಲಿ ಇರುವವರನ್ನೆಲ್ಲಾ ಬಿಟ್ಟಿರುವೆನು. ಇನ್ನು ಮುಂದೆ ನಾನು ಮಾಡಬೇಕಾದದ್ದನ್ನು ಆಜ್ಞಾಪಿಸಬೇಕು' ಎಂದು ಹೇಳಿದರು. ಭಗವಂತನು 'ನೀನು ಜನರನ್ನು ಪಾಪದಿಂದ ಉದ್ಧಾರಮಾಡುವಿ. ನಿನ್ನಲ್ಲಿ ಆ ಭಾರವನ್ನು ನಾನು ಇಟ್ಟಿರುವೆನು. ನಿನ್ನ ಕರ್ತವ್ಯವನ್ನು ಮಾಡು. ನಿನ್ನ ಸ್ಥಾನವನ್ನು ಹೊಂದು' ಎಂದು ಹೇಳಿ ಮರೆಯಾದನು.

ಆ ವೈಶ್ಯವೃತ್ತಿಯ ಬ್ರಾಹ್ಮಣನ ಮಗನು ನರಕದಲ್ಲಿ ಇದ್ದ ಎಲ್ಲರನ್ನೂ ಉದ್ಧರಿಸಿ ತಾನು ವಿಮಾನದಲ್ಲಿ ಕೂತುಕೊಂಡು ವಿಷ್ಣುಲೋಕಕ್ಕೆ ಹೋದನು.



# ಭಗವದ್ಗೀತೆಯ ನಾಲ್ಕನೇ ಅಧ್ಯಾಯ ಮಹಿಮೆ[1]

ಭಾಗೀರಥೀತೀರದಲ್ಲಿ ವಾರಣಾಸೀ ಎಂಬ ನಗರವಿದೆ. ಅಲ್ಲಿ ವಿಶ್ವೇಶ್ವರನ ದೇವಾಲಯದಲ್ಲಿ ಭರತನೆಂಬ ಒಬ್ಬ ಬ್ರಾಹ್ಮಣನು ಭಗವದ್ಗೀತೆಯ ನಾಲ್ಕನೇ ಅಧ್ಯಾಯವನ್ನು ಭಕ್ತಿಯಿಂದ ಪಾರಾಯಣಮಾಡುತ್ತಿದ್ದನು. ಅದರ ಅಭ್ಯಾಸದಿಂದ ಶುದ್ಧವಾದ ಮನಸ್ಸುಳ್ಳವನಾಗಿ ಇದ್ದನು. ಅವನು ಒಂದು ದಿನದಲ್ಲಿ ಊರಿನ ಹೊರಗೆ ಉದ್ಯಾನದಲ್ಲಿ ಇರುವ ದೇವತೆಗಳನ್ನು ನೋಡಬೇಕೆಂದು ಹೋದನು. ಅಲ್ಲಿ ಎರಡು ಬೋರೆಹಣ್ಣಿನ ಮರಗಳು ಹತ್ತಿರದಲ್ಲಿ ಬೆಳೆದಿದ್ದವು. ಆ ಬ್ರಾಹ್ಮಣನು ಒಂದು ಮರದಲ್ಲಿ ತಲೆಯನ್ನು ಇಟ್ಟುಕೊಂಡು ಮತ್ತೊಂದು ಮರದಲ್ಲಿ ಕಾಲನ್ನು ಇಟ್ಟುಕೊಂಡು ಮಲಗಿದನು. ಸ್ವಲ್ಪಹೊತ್ತು ವಿಶ್ರಾಂತಿಯನ್ನು ಹೊಂದಿದನು. ಆಮೇಲೆ ಅವನು ಹೊರಟುಹೋಗಲು ಐದಾರುದಿವಸಗಳಲ್ಲಿ ಆ ಎರಡು ಮರಗಳೂ ಒಣಗಿಹೋಗಿ ಎಲೆಗಳು ಉದುರಿಹೋದವು.

ತರುವಾಯ ಆ ಎರಡು ವೃಕ್ಷಜೀವರು ಬ್ರಾಹ್ಮಣ ವಂಶದಲ್ಲಿ ಕನ್ಯೆಯರಾಗಿ ಹುಟ್ಟಿದವು. ಆ ಕನ್ಯೆಯರಿಗೆ ಏಳು ವರ್ಷಗಳಾದವು. ಅವರು ಒಂದು ದಿವಸದಲ್ಲಿ ಒಬ್ಬ ಸನ್ಯಾಸಿಯಾದ ಬ್ರಾಹ್ಮಣನು ಬರುತ್ತಿರುವುದನ್ನು ನೋಡಿ ಆ ಯತಿಯ ಕಾಲನ್ನು

1. ಪ. ಪು.ಉ.ಖಂ. ಅ–174

ಮುಟ್ಟಿ ನಮಸ್ಕಾರ ಮಾಡಿ ನಿಮ್ಮ ಅನುಗ್ರಹದಿಂದ ನಮಗೆ ಬೋರೆಹಣ್ಣಿನ ಮರದ ಜನ್ಮವು ಹೋಗಿ ಮನುಷ್ಯಜನ್ಮವು ಲಭಿಸಿತು' ಎಂದು ಹೇಳಿದರು. ಆಗ ಆ ಯತಿಯು ಆಶ್ಚರ್ಯವುಳ್ಳವನಾಗಿ 'ಹೆಣ್ಣುಮಕ್ಕಳೇ! ನಾನು ನಿಮ್ಮನ್ನು ಬೋರೆಹಣ್ಣಿನ ಮರದ ಜನ್ಮದಿಂದ ಯಾವಾಗ ಬಿಡಿಸಿದೆನು? ನಿಮಗೆ ಆ ಮರದ ಜನ್ಮವು ಹೇಗೆ ಬಂದಿತು?' ಎಂದು ಕೇಳಿದನು.

ಅದಕ್ಕೆ ಕನ್ಯೆಯರು 'ಗೋದಾವರೀತೀರದಲ್ಲಿ ಜನರಿಗೆ ಪುಣ್ಯಪ್ರದನಾದ ಛಿನ್ನಪಾಪ ಎಂದು ಪ್ರಸಿದ್ಧವಾದ ಒಂದು ಪವಿತ್ರವಾದ ಪ್ರದೇಶವಿದೆ. ಅಲ್ಲಿ ಸತ್ಯತಪ ಎಂಬ ಬ್ರಾಹ್ಮಣನು ಕಠಿಣವಾದ ತಪಸ್ಸನ್ನು ಮಾಡುತ್ತಿದ್ದನು. ಬೇಸಿಗೆ ಕಾಲದಲ್ಲಿ ಪಂಚ ಅಗ್ನಿಗಳ ಮಧ್ಯದಲ್ಲಿಯೂ ಮಳೆಗಾಲದಲ್ಲಿ ಮಳೆಯಲ್ಲಿ ನೆನೆಯುತ್ತಲೂ, ಛಳಿಗಾಲದಲ್ಲಿ ನೀರಿನಲ್ಲಿ ಮುಳುಗಿಕೊಂಡು ತಪಸ್ಸು ಮಾಡಿದನು. ಈರೀತಿಯಾಗಿ ಬಹುಕಾಲ ತಪಸ್ಸನ್ನು ಮಾಡಿದನು. ಆಗ ಇಂದ್ರದೇವರು ಭಯವುಳ್ಳವರಾಗಿ ನೂರಾರು ವಿಘ್ನಗಳನ್ನು ಮಾಡಿದರು. ಅಪ್ಸರಸ್ತ್ರೀಯರ ಮಧ್ಯದಲ್ಲಿ ಒಂದೇ ವಿಧವಾದ ರೂಪವಿದ್ದ ನಮಗೆ ಇಬ್ಬರಿಗೆ ಆಜ್ಞಾ ಮಾಡಿದರು. ಅವರ ಆಜ್ಞೆಯಂತೆ ಆ ಬ್ರಾಹ್ಮಣನಿಗೆ ವಿಘ್ನ ಮಾಡುವುದಕ್ಕಾಗಿ ಗೋದಾವರೀತೀರಕ್ಕೆ ಹೋದೆವು. ಆ ಬ್ರಾಹ್ಮಣನ ಮುಂಭಾಗದಲ್ಲಿ ಅತಿಮನೋಹರವಾಗಿ ನರ್ತನ ಮಾಡಿದೆವು. ಗಾಳಿಗೆ ನಮ್ಮ ಸೀರೆಯೂ ಹಾರಿಹೋಯಿತು. ಹೀಗೆಲ್ಲಾ ತನ್ನನ್ನು ಮೋಹಗೊಳಿಸುವುದಕ್ಕಾಗಿ ನಾವು ಮಾಡುತ್ತಿದ್ದ ಪ್ರಯತ್ನವನ್ನು ನೋಡಿ ಆ ಬ್ರಾಹ್ಮಣನು ಕೈಯಲ್ಲಿ ನೀರನ್ನು ಬಿಟ್ಟು 'ನೀವಿಬ್ಬರೂ ಗಂಗಾತೀರದಲ್ಲಿ ಬೋರೆಹಣ್ಣಿನ ಮರವಾಗಿರಿ' ಎಂದು ಶಾಪವನ್ನು ಕೊಟ್ಟನು. ಆಗ ನಾವು 'ಪರಾಧೀನರಾಗಿ ನಾವು ಮಾಡಿದ ಅಪರಾಧವನ್ನು ಕ್ಷಮಿಸಬೇಕೆಂದು ಕೇಳಿಕೊಂಡೆವು.

ಅದಕ್ಕೆ ಆ ಬ್ರಾಹ್ಮಣನು 'ಭರತನೆಂಬ ಬ್ರಾಹ್ಮಣನು ಬರುವವರೆಗೆ ಮರಗಳಾಗಿರುವಿರಿ. ಆಮೇಲೆ ಮನುಷ್ಯರಾಗಿ ಹುಟ್ಟುವಿರಿ. ನಿಮಗೆ ಪೂರ್ವಜನ್ಮಗಳ ಸ್ಮರಣೆಯಿರುವುದು' ಎಂದು ಅನುಗ್ರಹಿಸಿದರು. ನಾವು ಮರವಾಗಿರುವಾಗ ನೀವು ನಮ್ಮ ಸಮೀಪಕ್ಕೆ ಬಂದು ಭಗವದ್ಗೀತೆಯ ನಾಲ್ಕನೇ ಅಧ್ಯಾಯವನ್ನು ಸ್ಮರಿಸುವವರಾಗಿ ನಮ್ಮನ್ನು ಶಾಪದಿಂದ ಬಿಡಿಸಿದಿರಿ. ಘೋರಸಂಸಾರದಿಂದಲೇ ಬಿಡಿಸಿದಿರಿ' ಎಂದು ಹೇಳಿದರು. ಅದನ್ನು ಕೇಳಿ ಆ ಮುನಿಯು ಅವರಿಂದ ಸತ್ಕೃತನಾಗಿ ಸಂತೋಷದಿಂದ ಹೋದನು. ಆ ಕನ್ಯೆಯರು ಭಗವದ್ಗೀತೆಯ ನಾಲ್ಕನೇ ಅಧ್ಯಾಯವನ್ನು ಆದರದಿಂದ ಪಾರಾಯಣಮಾಡುತ್ತಿದ್ದರು. (ದೇವಲೋಕದ ಅಪ್ಸರಸ್ತ್ರೀಯರು ಭೂಮಿಯಲ್ಲಿ

ಹುಟ್ಟಿದವರಾದ ಕಾರಣ ಅವರು ಗೀತೆಯನ್ನು ಪಾರಾಯಣಮಾಡಿದ್ದು ಉಚಿತು. ಸಾಮಾನ್ಯಮನುಷ್ಯ ಸ್ತ್ರೀಯರಿಗೆ ಭಗವದ್ಗೀತೆ ಮೊದಲಾದವನ್ನು ಗಂಡಸರು ಹೇಳುವಾಗ ಕೇಳುವುದಕ್ಕೆ ಮಾತ್ರ ಅಧಿಕಾರವಿಲ್ಲದೆ ತಾವು ಪಾರಾಯಣ ಮಾಡಲಿಕ್ಕೆ ಅಧಿಕಾರವಿಲ್ಲವೆಂದು ತಿಳಿಯಬೇಕು.)



## ಭಗವದ್ಗೀತೆಯ ಐದನೇ ಅಧ್ಯಾಯದ ಮಹಿಮೆ [1]

ಮದ್ರದೇಶದಲ್ಲಿ ಪುರುಕುತ್ಸ ನಗರದಲ್ಲಿ ವೇದ ಓದಿಕೊಂಡು ಪ್ರಸಿದ್ಧವಾದ ಬ್ರಾಹ್ಮಣರ ವಂಶದಲ್ಲಿ ಪಿಂಗಲ ಎಂಬ ಬ್ರಾಹ್ಮಣನು ಹುಟ್ಟಿದ್ದನು. ಅವನು ತನ್ನ ಕುಲಕ್ಕೆ ಯೋಗ್ಯವಾದ ಶಾಸ್ತ್ರಗಳನ್ನು ವೇದಗಳನ್ನು ಬಿಟ್ಟು ಸಂಗೀತವನ್ನು ಅಭ್ಯಾಸ ಮಾಡಲಿಕ್ಕೆ ಮನಸ್ಸನ್ನು ಮಾಡಿದನು. ಗಾಯನದಲ್ಲಿಯೂ, ನರ್ತನದಲ್ಲಿಯೂ, ವಾದ್ಯದಲ್ಲಿಯೂ, ಅತಿಪ್ರಸಿದ್ಧಿಯನ್ನು ಹೊಂದಿ ರಾಜನ ಮನೆಗೆ ಹೋದನು. ಅಲ್ಲಿ ರಾಜನಿಂದ ಸತ್ಕೃತನಾದನು. ಅಲ್ಲಿ ಇದ್ದುಕೊಂಡು ಪರಸ್ತ್ರೀಯರ ಸಂಗವನ್ನು ಮಾಡುತ್ತಿದ್ದನು. ಅಹಂಕಾರವುಳ್ಳವನಾಗಿ ಏಕಾಂತದಲ್ಲಿ ರಾಜನೊಡನೆ ಇನ್ನೊಬ್ಬರ ಚಾಡಿ ಹೇಳುತ್ತಿದ್ದನು. ಅವನಿಗೆ ಹೀನವಂಶದಲ್ಲಿ ಹುಟ್ಟಿದ ಅರುಣಾ ಎಂಬ ಹೆಂಡತಿಯಿದ್ದಳು. ಅವಳು ವ್ಯಭಿಚಾರ ಮಾಡುತ್ತಾ ತನಗೆ ವಿಘ್ನಕರನಾಗಿರುವನೆಂದು ಮಧ್ಯರಾತ್ರಿಯಲ್ಲಿ ಗಂಡನ ತಲೆಯನ್ನು ಕಡಿದು ಕೊಂದು ನೆಲದಲ್ಲಿ ಹೂಳಿಟ್ಟಳು. ಅದರಿಂದ ಅವನು ಯಮಲೋಕಕ್ಕೆ ಹೋಗಿ ಅನೇಕ ನರಕಗಳನ್ನು ಹೊಂದಿ ಜನಸಂಚಾರ ರಹಿತವಾದ ಅರಣ್ಯದಲ್ಲಿ ಹದ್ದುಪಕ್ಷಿಯಾಗಿ ಹುಟ್ಟಿದನು. ಅವನ ಹೆಂಡತಿಯೂ ಭಗಂದರ ರೋಗದಿಂದ ಸಾಯುವವಳಾಗಿ ಅನೇಕ ನರಕಗಳನ್ನು ಅನುಭವಿಸಿ ಅದೇ ವನದಲ್ಲಿ ಗಿಣಿಯಾಗಿ ಹುಟ್ಟಿದಳು. ಆ ಗಿಣಿಯು ಆಹಾರವನ್ನು ಹುಡುಕುತ್ತಿರಲು ಆ ಹದ್ದು ಪಕ್ಷಿಯು ಬಂದು ಪೂರ್ವ ವೈರವನ್ನು ಸ್ಮರಿಸಿಕೊಂಡು ತನ್ನ ತೀಕ್ಷ್ಣ ಉಗುರುಗಳಿಂದ ಆ ಗಿಣಿಯನ್ನು ಸೀಳಿ ಹಾಕಿತು. ಕೆಳಗೆ ಬಂದು ಮನುಷ್ಯನ ತಲೆಯ ಓಡಿನಲ್ಲಿ ತುಂಬಾ ನೀರು ಇದ್ದಿತು. ಅದರಲ್ಲಿ ಆ ಗಿಣಿಯು ಬಿದ್ದಿತು. ಹದ್ದೂ ಅಲ್ಲಿಗೆ ಬೇಗನೇ ಬಂದು ಕೊಂದು ಹಾಕಿತು. ಆ ಹದ್ದೂ ನೀರಿನಲ್ಲಿ ಮುಳುಗಿ ಪ್ರಾಣವನ್ನು ಬಿಟ್ಟಿತು.

ಆಗ ಯಮದೂತರು ಬಂದು ಆ ಇಬ್ಬರನ್ನೂ ಕರೆದುಕೊಂಡು ಹೋದರು.

1. ಪ. ಪು.ಉ.ಖಂ. ಅ–175

ಅವರಿಬ್ಬರೂ ತಾವು ಪೂರ್ವದಲ್ಲಿ ಮಾಡಿದ್ದ ದುಷ್ಕರ್ಮಗಳನ್ನು ಸ್ಮರಿಸಿಕೊಂಡು ಅಂಜಿಕೊಂಡು ಹೋದರು. ಯಮದೇವರು ಅವರು ಮೊದಲು ಮಾಡಿದ ದುಷ್ಕರ್ಮವನ್ನು ಆ ಮನುಷ್ಯನ ತಲೆಯ ಓಡಿನಲ್ಲಿ ಇದ್ದ ನೀರಿನಲ್ಲಿ ಸ್ನಾನದಿಂದ ಪಾಪವು ನಷ್ಟವಾದದ್ದನ್ನೂ ತಿಳಿದು ಇವರನ್ನು ಉತ್ತಮಲೋಕಕ್ಕೆ ಕರೆದುಕೊಂಡು ಹೋಗಿರಿ ಎಂದರು. ಅದನ್ನು ಕೇಳಿ ಬಹುಪಾಪವನ್ನು ಮಾಡಿದ ಅವರಿಬ್ಬರೂ ತಮ್ಮ ಪಾಪವನ್ನು ಸ್ಮರಿಸಿಕೊಂಡು ಯಮದೇವರಿಗೆ ನಮಸ್ಕರಿಸಿ 'ನಾವು ಬಹುಪಾಪವನ್ನು ಮಾಡಿರುವೆವು. ನಮಗೆ ಇಷ್ಟಲೋಕಗಳು ಸಿಗಲಿಕ್ಕೆ ಕಾರಣವೇನು?' ಎಂದು ಕೇಳಿದರು. ಅದಕ್ಕೆ ಯಮದೇವರು 'ಗಂಗಾತೀರದಲ್ಲಿ ಬ್ರಹ್ಮಜ್ಞಾನಿಯಾದ ಒಬ್ಬ ಬ್ರಹ್ಮಚಾರಿಯಿದ್ದನು. ಅವನು ಅಹಂಕಾರ ಮಮಕಾರಗಳು ಬಿಟ್ಟು ನಿತ್ಯವೂ ಭಗವದ್ಗೀತೆಯ ಐದನೆಯ ಅಧ್ಯಾಯವನ್ನು ಯಾವಾಗಲೂ ಪಾರಾಯಣ ಮಾಡುತ್ತಿದ್ದನು. ಆ ಪುಣ್ಯದಿಂದ ಪವಿತ್ರವಾದ ದೇಹವುಳ್ಳವನಾಗಿ ಮೃತನಾದನು. ಆ ಗೀತಾಪಾರಾಯಣದಿಂದ ಪವಿತ್ರವಾದ ಆತನ ತಲೆಯ ಓಡಿದ ನೀರಿನ ಸಂಬಂಧದಿಂದ ನೀವು ಪವಿತ್ರರಾಗಿರು ವಿರಿ. ಆದುದರಿಂದ ನೀವು ಬೇಕಾದ ಲೋಕಗಳಿಗೆ ಹೋಗಿರಿ' ಎಂದು ಹೇಳಿದರು. ತರುವಾಯ ಅವರಿಬ್ಬರೂ ಸಂತೋಷವುಳ್ಳವರಾಗಿ ವಿಮಾನದಲ್ಲಿ ಕೂತುಕೊಂಡು ವಿಷ್ಣುಲೋಕವನ್ನು ಹೊಂದಿದರು.



## ಭಗವದ್ಗೀತೆಯ ಆರನೇ ಅಧ್ಯಾಯದ ಮಹಿಮೆ [1]

ಗೋದಾವರೀ ತೀರದಲ್ಲಿ ಪ್ರತಿಷ್ಠಾನವೆಂಬ ನಗರವಿರುವುದು. ಅಲ್ಲಿ ಪಿಪ್ಪಲೇಶ ಎಂದು ಹೆಸರಿನಿಂದ ರುದ್ರದೇವರು ಇರುವರು. ಆ ಪರಮ ಸುಂದರವಾದ ನಗರದಲ್ಲಿ ಜಾನಶ್ರುತಿಯೆಂದು ಹೆಸರುಳ್ಳ ರಾಜನಿದ್ದನು. ಅವನು ಧರ್ಮದಿಂದ ರಾಜ್ಯಭಾರವನ್ನು ಮಾಡುತ್ತಿದ್ದನು. ಬಹುದಾನಗಳನ್ನು ಮಾಡುತ್ತಿದ್ದನು. ಬಹುಯಾಗ ಗಳನ್ನು ಮಾಡುತ್ತಿದ್ದನು. ಅವನ ರಾಜ್ಯದಲ್ಲಿ ಯಾವ ಉಪದ್ರವೂ ಇರಲಿಲ್ಲ. ಅವನು ಮಾಡಿದ ದಾನ ತಪಸ್ಸು ಯಜ್ಞಪ್ರಜಾಪಾಲನಗಳಿಂದ ದೇವತೆಗಳು ಸಂತುಷ್ಟರಾಗಿ ಅವನಿಗೆ ವರವನ್ನು ಕೊಡಬೇಕೆಂದು ಬಂದಿದ್ದರು.

1. ಪ. ಪು.ಉ.ಖಂ. ಅ–176

ಒಂದು ದಿವಸದಲ್ಲಿ ಆ ರಾಜನು ರಾತ್ರಿಯಲ್ಲಿ ಮಲಗಿದ್ದನು. ಅಂತರಿಕ್ಷ ಮಾರ್ಗದಲ್ಲಿ ರೆಕ್ಕೆಯನ್ನು ಹಾರಿಸುತ್ತಾ ದೇವಹಂಸಗಳು ಹಾರಿಹೋಗುತ್ತಿದ್ದವು. ಮಾತಾಡಿಕೊಂಡು ವೇಗದಿಂದ ಹೋಗುತ್ತಿರಲು ಎರಡು ಮೂರು ಪಕ್ಷಿಗಳು ಮುಂದೆ ಹಾರಿಹೋಗುತ್ತಿದ್ದವು. ಅವುಗಳನ್ನು ನೋಡಿ ಹಿಂದೆ ಹೋಗುತ್ತಿದ್ದ ಹಂಸಗಳು 'ನೀವು ಯಾಕೆ ಮುಂದೆ ಹೋಗುವಿರಿ. ಈ ದುರ್ಗಪ್ರದೇಶದಲ್ಲಿ ನಾವೆಲ್ಲರೂ ಸೇರಿಕೊಂಡು ಹೋಗಬೇಕು. ಪುಣ್ಯಮೂರ್ತಿಯಾದ ಜಾನಶ್ರುತಿಯ ತೇಜಸ್ಸಿನ ಸಮೂಹವು ಮುಂದೆ ಪ್ರಕಾಶಿಸುತ್ತದೆ. ನೋಡಿರಿ' ಎಂದು ಹೇಳಿದವು. ಅದನ್ನು ಕೇಳಿ ಮುಂದೆ ಹಾರಿಹೋಗುತ್ತಿದ್ದ ಹಂಸಪಕ್ಷಿಗಳು ನಗುತ್ತಾ ತಿರಸ್ಕಾರವನ್ನು ಮಾಡಿ 'ಇದು ಬ್ರಹ್ಮಜ್ಞಾನಿಗಳಾದ ರೈಕ್ವಮುನಿಯ ತೇಜಸ್ಸಲ್ಲ, ಜಾನಶ್ರುತಿರಾಜನ ತೇಜಸ್ಸು ತಿಳಿಯಿತೋ' ಎಂದು ಹೇಳಿದವು. ಅತಿ ಎತ್ತರವಾದ ಮಹಡಿಯಲ್ಲಿ ಸುಖವಾಗಿ ಮಲಗಿದ್ದ ಜಾನಶ್ರುತಿರಾಜನು ಹಂಸಪಕ್ಷಿಗಳ ಮಾತುಗಳನ್ನು ಕೇಳಿದನು.

ತರುವಾಯ ರಾಜನು ಆಶ್ಚರ್ಯವುಳ್ಳವನಾಗಿ ಸಾರಥಿಯನ್ನು ಕರೆದು 'ಆ ಮಹಾನುಭಾವರಾದ ರೈಕ್ವರು ಎಲ್ಲಿರುವರು? ಕರೆದುಕೊಂಡು ಬಾ' ಎಂದು ಹೇಳಿದನು. ರಾಜನ ಮಾತಿನಂತೆ ಸಾರಥಿಯು ಹೊರಟು ರೈಕ್ವರನ್ನು ಹುಡುಕುತ್ತಾ ಬಹುದೇಶಗಳಲ್ಲಿ ಸಂಚರಿಸುತ್ತಾ ಹೋದನು. ಕೊನೆಗೆ ಕಾಶ್ಮೀರದೇಶದಲ್ಲಿ ನೆರಳಲ್ಲಿ ಒಂದು ಬಂಡಿಯ ಮೇಲೆ ಕೂತುಕೊಂಡು ಮೈಯನ್ನು ತುರಿಸಿಕೊಂಡು ಇದ್ದ ರೈಕ್ವರನ್ನು ನೋಡಿದನು. ರಾಜನು ಹೇಳಿದ ಚಿಹ್ನೆಯಿಂದ ತಿಳಿದು ಬೇಗನೇ ಬಂದು ರೈಕ್ವರಿಗೆ ನಮಸ್ಕರಿಸಿ 'ತಮ್ಮ ಹೆಸರೇನು? ಇಲ್ಲಿ ಯಾಕೆ ಕೂತಿರುವಿರಿ? ಯಾವುದನ್ನು ಮಾಡಲಿಕ್ಕೆ ಇಚ್ಛಿಸುವಿರಿ?' ಎಂದು ಕೇಳಿದನು. ಅದನ್ನು ಕೇಳಿ ರೈಕ್ವರು ತನ್ನ ಹೆಸರನ್ನು ಕೇಳಿ ತನ್ನ ಮನಸ್ಸಿನ ಅಭಿಪ್ರಾಯವನ್ನು ತಿಳಿದು ಸೇವೆಯನ್ನು ಮಾಡುವವರು ತನಗೆ ಬೇಕಾಗಿದೆಯೆಂದು ಹೇಳಿದರು. ರೈಕ್ವರ ಅಭಿಪ್ರಾಯವನ್ನು ತಿಳಿದು ಸಾರಥಿಯು ರಾಜನಿದ್ದಲ್ಲಿಗೆ ಬಂದು ಕೈಮುಗಿದು ಎಲ್ಲಾ ವಿಷಯವನ್ನೂ ತಿಳಿಸಿದನು.

ಅವನ ಮಾತನ್ನು ಕೇಳಿ ರಾಜನು ಆಶ್ಚರ್ಯವುಳ್ಳವನಾಗಿ ರೈಕ್ವರ ಬಹುಮಾನ ಮಾಡಲಿಕ್ಕೆ ಶ್ರದ್ಧೆಯುಳ್ಳವಾದನು. ಅಶ್ವ ತರಿಯಿಂದ ಕೂಡಿದ ಬಂಡಿಯನ್ನು, ಮುತ್ತಿನಸರವನ್ನು, ಪಟ್ಟೆವಸ್ತ್ರವನ್ನೂ, ಸಾವಿರ ಗೋವುಗಳನ್ನೂ ಹಿಡಿದುಕೊಂಡು ರೈಕ್ವರು ಇದ್ದ ಕಾಶ್ಮೀರದೇಶಕ್ಕೆ ಹೋಗಿ ಅವರಿಗೆ ಉದ್ದಕ್ಕೆ ನಮಸ್ಕರಿಸಿದನು. ರೈಕ್ವರು ರಾಜನ ಮೇಲೆ ಕೋಪಿಸಿಕೊಂಡು 'ಶೂದ್ರನೇ! ನನ್ನ ಅಭಿಪ್ರಾಯವನ್ನು ತಿಳಿಯಲಿಲ್ಲವೇ? ಈ ರಥವನ್ನು ವಸ್ತ್ರವನ್ನೂ ಮುತ್ತಿನ ಸರಗಳನ್ನೂ ಗೋವುಗಳನ್ನೂ

ತೆಗೆದುಕೊಂಡು ಹೋಗು' ಎಂದು ಹೇಳಿದರು. ಆ ಮಾತನ್ನು ಕೇಳಿ ರಾಜನು ಬಹಳ ಅಂಜಿಕೊಂಡನು. ಅವರೆಲ್ಲಿ ಶಾಪವನ್ನು ಕೊಡುವರೋ ಎಂಬ ಭಯದಿಂದ ಅವರ ಕಾಲಿಗೆ ಬಿದ್ದು ಪ್ರಸನ್ನರಾಗಬೇಕೆಂದು ಕೇಳಿಕೊಂಡನು. ಮತ್ತೂ 'ಪೂಜ್ಯರೇ! ತಮಗೆ ಈ ಅದ್ಭುತವಾದ ಮಹಿಮೆಯು ಹೇಗೆ ಬಂದಿತೆಂದು ತಿಳಿಸಬೇಕೆಂದು ಕೇಳಿಕೊಂಡನು.

ರೈಕ್ವರು 'ನಾನು ನಿತ್ಯವೂ ಭಗವದ್ಗೀತೆಯ ಆರನೇ ಅಧ್ಯಾಯವನ್ನು ಪಾರಾಯಣ ಮಾಡುತ್ತಿರುವೆನು. ಆದರಿಂದಲೇ ನನಗೆ ಇಷ್ಟು ತೇಜಸ್ಸು ಬಂದಿರುವುದು' ಎಂದರು ಜಾನಶ್ರುತಿಯು ರೈಕ್ವರಿಂದ ಭಗವದ್ಗೀತೆಯ ಆರನೇ ಅಧ್ಯಾಯವನ್ನು ಅಭ್ಯಾಸ ಮಾಡಿ ಮೋಕ್ಷವನ್ನು ಹೊಂದಿದನು. ರೈಕ್ವರೂ ಆ ಆರನೇ ಅಧ್ಯಾಯವನ್ನೇ ಪಾರಾಯಣ ಮಾಡುತ್ತಾ ಸಂತೋಷಪಡುತ್ತಿದ್ದರು.



## ಭಗವದ್ಗೀತೆಯ ಏಳನೇ ಅಧ್ಯಾಯದ ಮಹಿಮೆ [1]

ಪಾಟಲಿಪುತ್ರವೆಂಬ ನಗರವಿದೆ. ಅಲ್ಲಿ ಶಂಕುಕರ್ಣ ಎಂದು ಹೆಸರುಳ್ಳ ಬ್ರಾಹ್ಮಣನಿದ್ದನು. ಅವನು ವೈಶ್ಯವೃತ್ತಿಯನ್ನು ಕೈಗೊಂಡು ಬಹಳ ಹಣವನ್ನು ಸಂಪಾದಿಸಿದನು. ಅವನು ಪಿತೃಗಳನ್ನೂ ಪೂಜಿಸಲಿಲ್ಲ, ದೇವತೆಗಳನ್ನು ಪೂಜಿಸಲಿಲ್ಲ, ಹಣವನ್ನು ಸಂಪಾದಿಸುವುದಕ್ಕಾಗಿಯೇ ರಾಜರಿಗೆ ಭೋಜನವನ್ನು ಹಾಕುತ್ತಿದ್ದನು. ಅವನು ನಾಲ್ಕನೇ ಮದುವೆ ಮಾಡಿಕೊಳ್ಳುವುದಕ್ಕಾಗಿ ಮಕ್ಕಳಿಂದ ಬಂಧುಗಳಿಂದ ಕೂಡಿಕೊಂಡು ಹೊರಟನು. ಅವನು ರಾತ್ರಿಯಲ್ಲಿ ನಿದ್ರೆಯನ್ನು ಮಾಡುತ್ತಿರಲು ಒಂದು ಸರ್ಪವು ಬಂದು ಕಚ್ಚಿತು. ಅದು ಕಚ್ಚಿದ ಮಾತ್ರವೇ ಅವನು ಕೆಲವು ಕ್ಷಣಗಳಲ್ಲಿಯೇ ಮೃತನಾದನು. ಮಕ್ಕಳು ಅವನ ದೇಹವನ್ನು ಮರದ ಕೊಂಬೆಯಲ್ಲಿ ಇಟ್ಟು ಮನೆಗೆ ಬಂದರು. ಬಹುಕಾಲದ ಮೇಲೆ ಅವನು ಸರ್ಪನಾದನು. ಅವನು ಪೂರ್ವಸಂಸ್ಕಾರದಿಂದ ಮಕ್ಕಳನ್ನು ವಂಚಿಸಿ ಮನೆಯ ಹೊರಗೆ ಕೋಟಿಸಂಖ್ಯೆಯುಳ್ಳ ಹಣವನ್ನು ಇಟ್ಟಸ್ಥಳದಲ್ಲಿಯೇ ಅದನ್ನು ರಕ್ಷಿಸುತ್ತಾ ಇದ್ದನು. ಮಕ್ಕಳು ಶ್ರದ್ಧೆಯಿಂದ ಮೃತನಾದ ತಂದೆಗೆ ನಾರಾಯಣಬಲಿಯನ್ನು ಮಾಡಿದರು.

ಒಂದು ದಿವಸದಲ್ಲಿ ಸ್ವಪ್ನದಲ್ಲಿ ಮಕ್ಕಳಿಗೆ ತಂದೆಯು ಸರ್ಪರೂಪದಿಂದ ಬಂದು

1. ಪ. ಪು.ಉ.ಖಂ. ಅ–177

ತನ್ನ ಸರ್ಪಜನ್ಮವು ಬಂದಿರುವುದನ್ನು ತಿಳಿಸಿದನು. ಇದರಿಂದ ಬೆಳಿಗ್ಗೆ ಅವರು ಎದ್ದು ಅತ್ಯಂತ ಆಶ್ಚರ್ಯವನ್ನು ಹೊಂದಿದರು. ಒಬ್ಬರಿಗೊಬ್ಬರು ಹೇಳಿಕೊಂಡರು. ಒಬ್ಬನು ತಂದೆಯ ಮೇಲಿನ ಸ್ನೇಹದಿಂದ ತಂದೆಯನ್ನು ಉದ್ಧಾರಮಾಡಬೇಕೆಂದು ಇಚ್ಚಿಸಿದನು. ಇನ್ನೊಬ್ಬನು ಹಣದ ಲೋಭದಿಂದ ಆ ಹಾವನ್ನು ಕೊಂದು ಬಿಡುವ ಎಂದನು. ತಂದೆಯು ಬಹುಕಾಲ ಸರ್ಪವಾಗಿರಬಾರದು ಎಂದು ಹೇಳಿ ಅತ್ತನು.

ಮಧ್ಯಮಪುತ್ರನು ಇಬ್ಬರು ಸಹೋದರರನ್ನು ವಂಚಿಸಿ ಏನೋ ನೆಪವನ್ನು ಹೇಳಿ ತನ್ನ ಮನೆಗೆ ಹೋದನು. ಕೈಯಲ್ಲಿ ಆಯುಧವನ್ನು ಹಿಡಿದುಕೊಂಡು ಹೆಂಡತಿಯನ್ನು ಕರೆದುಕೊಂಡು ಸರ್ಪವಿದ್ದ ಸ್ಥಳವನ್ನು ಹುಡುಕಿಕೊಂಡು ಹೋದನು. ಲೋಭದಿಂದ ಹುತ್ತದ ಹತ್ತಿರ ಹೋಗಿ ಹುತ್ತವನ್ನು ತೋಡಿದನು. ಹೆಂಡತಿಯು ಮಣ್ಣನ್ನು ತೆಗೆದುಹಾಕಿದಳು. ಆಗ ಆ ಹುತ್ತದಿಂದ ಭಯಂಕರವಾದ ಹಾವು ಮೇಲ್ಕಕೆ ಬಂದಿತು. ಬುಸುಗುಟ್ಟಿತು. 'ನೀನು ಯಾರು? ಯಾಕೆ ಬಂದಿರುವಿ? ಯಾಕೆ ಹುತ್ತವನ್ನು ತೋಡುತ್ತಿರುವಿ? ಮೂರ್ಖನೇ! ಯಾರು ನಿನ್ನನ್ನು ಕಳುಹಿಸಿದರು? ಹೇಳು' ಎಂದಿತು. ಅದಕ್ಕೆ ಮಗನು 'ನಾನು ನಿಮ್ಮ ಮಗನು. ನನ್ನ ಹೆಸರು ಶಿವನೆಂದು ರಾತ್ರಿಯಲ್ಲಿ ಸ್ವಪ್ನನೋಡಿ ಆಶ್ಚರ್ಯಪಟ್ಟು ಹಣದ ಆಸೆಯಿಂದ ಬಂದಿರುವೆನು' ಎಂದು ಹೇಳಿದನು. ಅದನ್ನು ಕೇಳಿ ನಗುತ್ತಾ ಗಟ್ಟಿಯಾಗಿ 'ನೀನು ನನ್ನ ಮಗನಾಗಿದ್ದರೆ ಬೇಗನೇ ಆ ಬಂಧನದಿಂದ ಬಿಡಿಸು. ಪೂರ್ವಜನ್ಮದ ಈ ಹಣಕ್ಕಾಗಿಯೇ ಸರ್ಪಜನ್ಮವನ್ನು ತೆಗೆದಿರುವೆನು' ಎಂದಿತು. ಅದಕ್ಕೆ ಮಗನು 'ತಂದೆಯೇ! ನಿಮಗೆ ಹೇಗೆ ಇದರಿಂದ ಬಿಡುಗಡೆಯಾಗುವುದೆಂದು ತಿಳಿಸಿರಿ' ಎಂದನು. ಆ ಮಾತನ್ನು ಕೇಳಿ ಸರ್ಪವು 'ಮಗನೇ! ತೀರ್ಥಗಳೂ ದಾನಗಳೂ ತಪಸ್ಸುಗಳೂ ಯಾಗಗಳೂ ನನ್ನನ್ನು ಉದ್ಧರಿಸಲಿಕ್ಕೆ ಸಮರ್ಥಗಳಾಗಲಾರವು. ಪ್ರಾಣಿಯ ವಾರ್ಧಕ್ಯ ಮರಣದುಃಖವನ್ನು ಪರಿಹರಿಸುವ ಭಗವದ್ಗೀತೆಯ ಏಳನೇ ಅಧ್ಯಾಯವನ್ನು ಹೊರತು ಮತ್ತೆ ಯಾವ ಸಾಧನದಿಂದಲೂ ನನಗೆ ಬಿಡುಗಡೆಯಾಗಲಾರದು. ನನ್ನ ಶ್ರಾದ್ಧದಿನದಲ್ಲಿ ಗೀತೆಯ ಏಳನೇ ಅಧ್ಯಾಯವನ್ನು ಪಾರಾಯಣ ಮಾಡುವ ಬ್ರಾಹ್ಮಣನನ್ನು ಭೋಜನ ಮಾಡಿಸು. ಶಕ್ತಿಯನ್ನು ಅನುಸರಿಸಿ ವೇದಶಾಸ್ತ್ರಪಾರಂಗತರಾದ ಇತರ ಬ್ರಾಹ್ಮಣರನ್ನೂ ಅತ್ಯಂತ ಶ್ರದ್ಧೆಯಿಂದ ಭೋಜನ ಮಾಡಿಸು. ಅದರಿಂದ ನನಗೆ ಬಿಡುಗಡೆ ಯಾಗುವುದು' ಎಂದು ಹೇಳಿತು.

ಈ ವಿಷಯವನ್ನು ತಿಳಿದು ಎಲ್ಲಾ ಮಕ್ಕಳು ಅವನು ಹೇಳಿದ್ದಕ್ಕಿಂತಲೂ ಹೆಚ್ಚಾಗಿಯೇ ಶ್ರಾದ್ಧವನ್ನು ಮಾಡಿದರು. ಇದರಿಂದ ಶಂಕುಕರ್ಣನು ಸರ್ಪದೇಹವನ್ನು

ಬಿಟ್ಟು ಆ ಹಣವನ್ನು ಮಕ್ಕಳ ವಶಮಾಡಿ ದಿವ್ಯದೇಹವನ್ನು ಹೊಂದಿ ಹೊರಟುಹೋದನು. ಮಕ್ಕಳು ತಮಗೆ ತಂದೆಯು ವಿಭಾಗಮಾಡಿಕೊಟ್ಟ ಕೋಟಿ ಸಂಖ್ಯೆಯುಳ್ಳ ಹಣವನ್ನು ಪಡೆದು ಸಂತೋಷವನ್ನು ಹೊಂದಿದರು. ಅವರು ಧರ್ಮಬುದ್ಧಿಯುಳ್ಳವರಾಗಿ ಆ ಹಣದಿಂದ ಧರ್ಮದ ಇಳಿಭಾವಿ ಸರೋವರ ಇತ್ಯಾದಿಗಳನ್ನು ಮಾಡಿಸಿದರು. ಅನ್ನಛತ್ರವನ್ನು ಇಡಿಸಿದರು. ಏಳನೇ ಅಧ್ಯಾಯವನ್ನು ಜಪಿಸಿ ಮೋಕ್ಷವನ್ನು ಹೊಂದಿದರು.



## ಭಗವದ್ಗೀತೆಯ ಎಂಟನೇ ಅಧ್ಯಾಯ ಮಹಿಮೆ [1]

ಪೂರ್ವದಲ್ಲಿ ಆಮರ್ದಕವೆಂಬ ಪಟ್ಟಣವಿದ್ದಿತು. ಅಲ್ಲಿ ಭಾವಶರ್ಮ ಎಂದು ಹೆಸರುಳ್ಳ ಬ್ರಾಹ್ಮಣನಿದ್ದನು. ಅವನು ವೇಶ್ಯಾಪತಿಯಾಗಿದ್ದನು. ಅವನು ಮಾಂಸವನ್ನು ತಿನ್ನುತ್ತಾ ಮಧ್ಯವನ್ನು ಕುಡಿಯುತ್ತಾ ಸಜ್ಜನರ ಸಂಪತ್ತನ್ನು ಕಳವುಮಾಡುತ್ತಾ ಪರಸ್ತ್ರೀಯರೊಡನೆ ರಮಿಸುತ್ತಾ ಮೃಗಬೇಟೆಯಲ್ಲಿ ಕೂತೂಹಲಪಡುತ್ತಾ ಕಾಲವನ್ನು ಕಳೆಯುವವನಾದನು. ಅವನು ಒಂದು ಸಲ ಮದ್ಯಪಾನ ಮಾಡುತ್ತಾ ತಾಳಿಯ ಹಣ್ಣನ್ನು ಕುತ್ತಿಗೆಯ ಪರ್ಯಂತ ತಿನ್ನುವವನಾಗಿ ಅಜೀರ್ಣದಿಂದ ಸತ್ತವನಾಗಿ ತಾಳಿಯ ಮರವಾಗಿ ಹುಟ್ಟಿದನು. ಆ ಮರದ ನೆರಳಿನಲ್ಲಿ ಬ್ರಹ್ಮರಾಕ್ಷಸದಂಪತಿಗಳು ವಾಸಮಾಡಿಕೊಂಡಿದ್ದವು.

ಆ ಬ್ರಹ್ಮರಾಕ್ಷಸದಂಪತಿಗಳ ಚರಿತ್ರೆಯು ಹೀಗೆ ಇರುವುದು—ಪೂರ್ವದಲ್ಲಿ ವೇದವೇದಾಂಗಶಾಸ್ತ್ರತತ್ವವನ್ನು ತಿಳಿದವನಾದ ಸರ್ವಶಾಸ್ತ್ರಾಸ್ತ್ರ ಪಂಡಿತನಾದ ಸದಾಚಾರವಂತನಾದ ಕುಶೀಬಲ ಎಂದು ಹೆಸರುಳ್ಳ ಬ್ರಾಹ್ಮಣನಿದ್ದನು. ಅವನಿಗೆ ಕುಮತಿ ಎಂದು ಹೆಸರುಳ್ಳ ಹೆಂಡತಿಯಿದ್ದಳು. ಪತ್ನಿಯಿಂದ ಸಹಿತನಾದ ಆ ಬ್ರಾಹ್ಮಣನು ಅತಿಲೋಭವುಳ್ಳವನಾಗಿ ಮಹಾದಾನಗಳನ್ನು ಪಡೆಯುತ್ತಿದ್ದನು. ಎಮ್ಮೆಯ ದಾನ ಕಾಲ ಪುರುಷದಾನ ಕುದುರೆಯದಾನ ಇತ್ಯಾದಿ ದಾನಗಳನ್ನು ತೆಗೆದುಕೊಂಡು ಬ್ರಾಹ್ಮಣರಿಗೆ ತಾನು ಮೂರುಕಾಸನ್ನೂ ಕೊಡುತ್ತಿರಲಿಲ್ಲ. ಕಾಲಕ್ರಮದಿಂದ ಮೃತರಾಗಿ ಆ ದಂಪತಿಗಳು ಬ್ರಹ್ಮರಾಕ್ಷಸರಾಗಿ ಹಸಿವೆದಾಹದಿಂದ ಪೀಡಿತರಾಗಿ ಭೂಮಿಯಲ್ಲಿ ಎಲ್ಲಾ ಸಂಚರಿಸುತ್ತಿದ್ದರು. ಅವರು ಆ ತಾಳೀಮರದ

1. ಪ. ಪು.ಉ.ಖಂ. ಅ–178

ಬುಡಕ್ಕೆ ಬಂದು ವಿಶ್ರಾಂತಿಯನ್ನು ಹೊಂದಿದರು. ಹೆಂಡತಿಯು ಗಂಡನೊಡನೆ ನಮ್ಮ ಈ ಮಹಾ ದುಃಖವು ಹೇಗೆ ಹೋಗುವುದು? ಎಂದು ಕೇಳಲು ಗಂಡನು ಬ್ರಹ್ಮವಿದ್ಯೋಪದೇಶವಿಲ್ಲದೆ ಅಧ್ಯಾತ್ಮವಿಚಾರವಿಲ್ಲದೆ ಕರ್ಮವಿಧಿಜ್ಞಾನವಿಲ್ಲದೆ ಈ ಸಂಕಟದಿಂದ ಹೇಗೆ ಬಿಡುಗಡೆಯಾಗುವುದು. ಆಗ ಹೆಂಡತಿಯು ಆ ಬ್ರಹ್ಮನು ಯಾರು? ಅಧ್ಯಾತ್ಮವೆಂದರೆ ಯಾರು? ಕರ್ಮವು ಏನು ಎಂದು ಕೇಳಿದಳು. (ಆ ಮಾತೇ ಸಂಸ್ಕೃತದಲ್ಲಿ 'ಕಿಂ ತದ್ಬ್ರಹ್ಮ ಕಿಮಧ್ಯಾತ್ಮಂ ಕಿಂ ಕರ್ಮ ಪುರುಷೋತ್ತಮ' ಎಂದು. ಅದು ಗೀತೆಯ ಎಂಟನೆಯ ಅಧ್ಯಾಯದ ಮೊದಲಿನ ಭಾಗವು) ಆ ಬ್ರಹ್ಮರಾಕ್ಷಸಿಯ ಬಾಯಿಯಿಂದ ಆ ಮಾತು ಬರುತ್ತಲೇ ಆ ತಾಳೀವೃಕ್ಷದ ರೂಪವು ಹೋಗಿ ಭಾವಶರ್ಮನು ದಿವ್ಯರೂಪವುಳ್ಳವನಾದನು. ಪಾಪರಹಿತನಾದನು. ದೈವೇಚ್ಛೆಯಿಂದ ಬ್ರಹ್ಮರಾಕ್ಷಸಿಯ ಬಾಯಿಯಿಂದ ಬಂದ ಆ ಶ್ಲೋಕದಿಂದ ಆ ದಂಪತಿಗಳೂ ಪಾಪರಹಿತರಾದರು. ಆಗಲೇ ದಿವ್ಯವಾದ ವಿಮಾನವು ಬಂದಿತು. ಆ ದಂಪತಿಗಳು ಆ ದಿವ್ಯವಿಮಾನದಲ್ಲಿ ಕೂತುಕೊಂಡು ಸ್ವರ್ಗಕ್ಕೆ ಹೊರಟುಹೋದರು.

ತರುವಾಯ ಭಾವಶರ್ಮನು ಆ ಅರ್ಧಶ್ಲೋಕವನ್ನು ಆದರಿಂದ ಬರೆದನು. ಕಾಶೀನಗರಿಗೆ ಹೋಗಿ ಅಲ್ಲಿ ಪರಮಾತ್ಮನನ್ನು ಆರಾಧನೆ ಮಾಡಲಿಕ್ಕೆ ಇಚ್ಛಿಸುವವನಾಗಿ ಉತ್ತಮವಾದ ತಪಸ್ಸನ್ನು ಮಾಡುತ್ತಿದ್ದನು. ಆ ಸಮಯದಲ್ಲಿ ಕ್ಷೀರಸಮುದ್ರದಲ್ಲಿ ರಮಾದೇವಿಯರು ಪರಮಾತ್ಮನೊಡನೆ ನೀವೇನು ಯೋಚಿಸುತ್ತಿರುವಿರಿ ಎಂದು ಕೇಳಿದರು. ಆಗ ಪರಮಾತ್ಮನು 'ಭಾವಶರ್ಮನು ಕಾಶಿಯಲ್ಲಿ ನನ್ನಲ್ಲಿ ಅತಿಭಕ್ತಿಉಳ್ಳವ ನಾಗಿ ಅಷ್ಟಮಗೀತಾಧ್ಯಾಯದ ಶ್ಲೋಕಾರ್ಥವನ್ನು ಜಪಿಸುತ್ತಾ ತಪಸ್ಸನ್ನು ಮಾಡುತ್ತಿರುವನು. ಅವನ ತಪಸ್ಸಿನಿಂದ ನಾನು ಬಹಳ ಸಂತುಷ್ಟನಾಗಿರುವೆನು. ಅವನಿಗೆ ಏನು ಫಲವನ್ನು ಕೊಡುವುದೆಂದು ಯೋಚಿಸುತ್ತಿರುವೆನು' ಎಂದು ಸರ್ವಜ್ಞನಾದ ಭಗವಂತನು ಲೋಕದ ಜನರಂತೆ ನಟಿಸುತ್ತಾ ಹೇಳುವವನಾದನು. ಅಂದರೆ ಗೀತೆಯ ಎಂಟನೇ ಅಧ್ಯಾಯವು ಪರಮಶ್ರೇಷ್ಠವೆಂದು ತೋರಿಸಿದನು. ಭಾವಶರ್ಮನು ಭಗವಂತನ ಅತ್ಯಂತ ಅನುಗ್ರಹವನ್ನು ಹೊಂದಿ ಅತ್ಯಂತ ಸುಖವನ್ನು ಹೊಂದಿದನು. ಅವನ ವಂಶದವರೂ ಎಲ್ಲರೂ ನರಕವನ್ನು ಹೊಂದಿದವರು ಉತ್ತಮವಾದ ಲೋಕವನ್ನು ಹೊಂದಿದರು.



# ಭಗವದ್ಗೀತೆಯ ಒಂಭತ್ತನೇ ಅಧ್ಯಾಯದ ಮಹಿಮೆ [1]

ನರ್ಮದಾನದಿಯ ತೀರದಲ್ಲಿ ಮಾಹಿಷ್ಮತೀ ಎಂಬ ನಗರವಿದೆ. ಅಲ್ಲಿ ಮಾಧವ ಎಂದು ಹೆಸರುಳ್ಳ ಬ್ರಾಹ್ಮಣನಿದ್ದನು. ಅವನು ವೇದವೇದಾಂಗ ಶಾಸ್ತ್ರಗಳ ರಹಸ್ಯವನ್ನು ತಿಳಿದವನಾಗಿದ್ದನು. ಅತಿಥಿಗಳಿಗೆ ಸತ್ಕರಿಸುತ್ತಿದ್ದನು. ವಿದ್ಯೆಯಿಂದಲೇ ಬಹಳ ಹಣವನ್ನು ಸಂಪಾದಿಸಿದನು. ಅವನು ಒಂದು ದೊಡ್ಡ ಯಾಗವನ್ನು ಮಾಡಬೇಕೆಂದು ಆರಂಭಿಸಿದನು. ಯಾಗದಲ್ಲಿ ಮೇಕೆಯನ್ನು ತಂದು ಅಲಂಕರಿಸಿ ಸಂಹಾರಮಾಡಲಿಕ್ಕೆ ಹೋಗಲು ಆ ಮೇಕೆಯು ಎಲ್ಲರಿಗೂ ಆಶ್ಚರ್ಯವನ್ನು ಉಂಟುಮಾಡುತ್ತಾ ಗಟ್ಟಿಯಾಗುತ್ತಾ ನಗುತ್ತಾ 'ಶಾಸ್ತ್ರದಲ್ಲಿ ಹೇಳಿದ ರೀತಿಯಾಗಿಯೇ ಮಾಡಿದರೂ ನಶ್ವರವಾದ ಫಲವುಳ್ಳ ಜನ್ಮವಾರ್ಧಕ್ಯ ಮರಣಗಳು ಫಲವಾಗಿಉಳ್ಳ ಈ ಬಹಳ ಯಾಗಗಳನ್ನು ಮಾಡಿದ್ದರಿಂದ ಏನು ಪ್ರಯೋಜನವಿದೆ? ಬ್ರಾಹ್ಮಣ! ನಾನು ಇಷ್ಟೆಲ್ಲಾ ಮಾಡಿದ್ದರೂ ನನಗೆ ಬಂದಿರುವ ಗತಿಯನ್ನು ನೋಡಿ' ಎಂದು ಹೇಳಿತು. ಮೇಕೆಯ ಮಾತನ್ನು ಕೇಳಿ ಯಜ್ಞಸಭೆಯಲ್ಲಿ ಇದ್ದ ಜನರೆಲ್ಲರೂ ಆಶ್ಚರ್ಯವನ್ನು ಹೊಂದಿದರು. ತರುವಾಯ ಆ ಬ್ರಾಹ್ಮಣನು ಕೈಮುಗಿದು ಶ್ರದ್ಧೆಯುಳ್ಳವನಾಗಿ ನಮಸ್ಕಾರಮಾಡಿ ಆದರದಿಂದ ಆ ಮೇಕೆಯೊಡನೆ 'ನೀನು ಯಾವ ಜಾತಿಯವನಾಗಿದ್ದಿ? ಯಾವ ವೃತ್ತಾಂತವುಳ್ಳವನಾಗಿದ್ದಿ? ಯಾವ ಕರ್ಮದಿಂದ ಮೇಕೆಯ ಜನ್ಮವು ಬಂದಿತು? ಎಂದು ತಿಳಿಸಬೇಕು ಎಂದು ಕೇಳಿದನು.

ಅದಕ್ಕೆ ಆ ಮೇಕೆಯು 'ಪೂರ್ವದಲ್ಲಿ ನಾನು ಅತಿ ನಿರ್ಮಲವಾದ ಬ್ರಾಹ್ಮಣರ ವಂಶದಲ್ಲಿ ಹುಟ್ಟಿದ್ದೆನು. ವೇದವಿದ್ಯೆಯಲ್ಲಿ ಪಂಡಿತನಾಗಿದ್ದೆನು. ಅನೇಕ ಯಾಗಗಳನ್ನು ಮಾಡಿದ್ದೆನು. ಒಂದು ದಿನದಲ್ಲಿ ನನ್ನ ಹೆಂಡತಿಯು ಮಗುವಿನ ರೋಗಪರಿಹಾರಕ್ಕಾಗಿ ಚಂಡಿಕೆಗೆ ಮೇಕೆಯನ್ನು ಬಲಿಕೊಡಬೇಕೆಂದು ಹೇಳಿದಳು. ಅವಳ ಮಾತಿನಿಂದ ನಾನು ಹಾಗೆಯೇ ಮಾಡಿದೆನು. ಚಂಡಿಕೆಯ ಗುಡಿಯಲ್ಲಿ ಆಮೇಕೆಯನ್ನು ಬಲಿಕೊಡಲು ಬ್ರಹ್ಮಜ್ಞಾನವಿದ್ದವಳಾದ ಆ ಮೇಕೆಯ ತಾಯಿಯು 'ಎಲ್ಲಾ ಪಾಪಿಯೇ! ಶಾಸ್ತ್ರದಲ್ಲಿ ಹೇಳದೆ ಇರುವ ಮಾರ್ಗದಿಂದ ನನ್ನ ಕೂಸನ್ನು ಕೊಲ್ಲಿಸಿಯಾದ ಕಾರಣ ನೀನು ಮೇಕೆಯಾಗಿ ಹುಟ್ಟುವಿ' ಎಂದು ಶಪಿಸಿದಳು. ತರುವಾಯ ನಾನು ಅನೇಕ ಯೋನಿಗಳನ್ನು ಹೊಂದಿ ಮೇಕೆಯಾಗಿ ಹುಟ್ಟಿದೆನು. ಆದರೆ ಮೇಕೆಯಾಗಿರುವಾಗಲೂ ಈಗ ನನಗೆ ಪೂರ್ವಜನ್ಮಗಳ ಸ್ಮರಣೆಯಿದೆ' ಎಂದು ಹೇಳಿತು.

---

1. ಪದ್ಮ ಪು.ಉ.ಖಂ. ಅ–179

ಆಗ ಬ್ರಾಹ್ಮಣನು 'ಇನ್ನೂ ನಿನ್ನ ವೃತ್ತಾಂತವನ್ನು ತಿಳಿಯಬೇಕೆಂದು ನಮಗೆಲ್ಲಾ ಆಸೆಯಿದೆ ಎಂದು ಹೇಳಿದನು. ಅದಕ್ಕೆ ಮೇಕೆಯು 'ನಾನು ಒಂದುಸಲ ಕೋತಿಯಾಗಿ ಹುಟ್ಟಿದ್ದೆನು. ನನ್ನನ್ನು ಆಡಿಸುವವನು ಆಡಿಸುತ್ತಿದ್ದನು. ಆಗ ನನ್ನನ್ನು ನನ್ನ ಹೆಂಡತಿಯೂ ಮಕ್ಕಳೂ ಬಂದು ನೋಡಿದರು. ಅವರನ್ನು ನೋಡಿ ನನಗೆ ನರ್ತನಮಾಡುವ ಉತ್ಸಾಹವು ನಿಂತುಹೋಯಿತು. ಆಗ ನನ್ನನ್ನು ಆಡಿಸುತ್ತಾ ಇದ್ದವನು ರೋಷದಿಂದ ಕೆಂಪಾದ ಕಣ್ಣುಳ್ಳವನಾಗಿ ಕೋಲುಗಳಿಂದ ಚೆನ್ನಾಗಿ ಬಡೆದನು. ಅದರಿಂದ ನನ್ನ ಮೈಯೆಲ್ಲಾ ಗಾಯವಾಗಿ ರಕ್ತವು ಸುರಿಯಿತು. ನನಗೆ ಮೂರ್ಛೆಯು ಬಂದಿತು. ಅನ್ನ ನೀರನ್ನು ಮುಟ್ಟದೆ ಹಾಗೆಯೇ ಮರಣವನ್ನು ಹೊಂದಿದೆನು. ತರುವಾಯ ನಾನು ನಾಯಿಯಾಗಿ ಹುಟ್ಟಿದೆನು. ಮನೆಮನೆಗಳಲ್ಲಿ ಸುತ್ತುವವನಾಗಿ ಬಿಸಾಡಿದ ಎಂಜಲು ಅನ್ನವನ್ನು ತಿನ್ನುತ್ತಾ ಹೊಟ್ಟೆ ತುಂಬಿಸಿಕೊಳ್ಳುತ್ತಿದ್ದೆನು. ಒಂದುದಿವಸದಲ್ಲಿ ನಾಯಿಯಾಗಿದ್ದುಕೊಂಡು ಹಸಿವೆಯುಳ್ಳವನಾಗಿ ಮೆಲ್ಲನೆ ನನ್ನ ಮನೆಯೊಳಗೆ ಪಾತ್ರೆಯಲ್ಲಿ ಇಟ್ಟಿದ್ದ ಅನ್ನವನ್ನು ತಿನ್ನಲಿಕ್ಕೆ ಹೋದೆನು. ಆಗ ನನ್ನ ಪೂರ್ವಜನ್ಮದ ಮಕ್ಕಳೂ ಮುದುಕಿಯಾಗಿದ್ದ ಹೆಂಡತಿಯೂ ನನ್ನನ್ನು ನೋಡಿ ಕೋಲುಗಳಿಂದ ಚೆನ್ನಾಗಿ ಬಡೆದು ಹಾಕಿದರು. ಇದರಿಂದ ನನ್ನ ಸೊಂಟವು (ಕಟಿಯು) ಮುರಿದುಹೋಯಿತು. ರಕ್ತವನ್ನು ಕಾರುತ್ತಾ ಕಷ್ಟದಿಂದ ಮನೆಯ ಹೊರಗೆ ಬಂದು ಮೂರ್ಛೆಯನ್ನು ಹೊಂದಿದೆನು. ತರುವಾಯ ಮೈಯಲ್ಲೆಲ್ಲಾ ಕೀವು ಬಂದು ಸಾಯುವವನಾದೆನು.

ತರುವಾಯ ಕಾಲಕ್ರಮದಿಂದ ಕುದುರೆಯಾದೆನು. ಆ ಜನ್ಮದಲ್ಲಿ ತುಂಬಾ ಮುದುಕನಾದೆನು. ಒಂದು ದಿನ ನನ್ನ ಯಜಮಾನನು ಮುದಿತನದಿಂದ ಹಲ್ಲುಬಿದ್ದು ಹೋಗಿರುವ ನನ್ನನ್ನು ಮಾರುವುದಕ್ಕಾಗಿ ಜನರು ತುಂಬಿ ಇದ್ದ ಸ್ಥಳಕ್ಕೆ ಕರೆದುಕೊಂಡುಹೋದನು. ಅಲ್ಲಿ ಒಬ್ಬಳು ಮುದುಕಿಯು ಮಕ್ಕಳಿಂದ ಕೂಡಿಕೊಂಡು ದ್ವಾರಕಾಯಾತ್ರೆಯನ್ನು ಮಾಡಬೇಕೆಂದು ಅಲ್ಪಕ್ರಯಕ್ಕೆ ಕುದುರೆಯನ್ನು ತೆಗೆದುಕೊಳ್ಳ ಬೇಕೆಂದು ಯೋಚಿಸಿ ಸ್ವಲ್ಪ ಹಣವನ್ನು ಕೊಟ್ಟು ನನ್ನನ್ನು ಕ್ರಯಕ್ಕೆ ಪಡೆದಳು. ತರುವಾಯ ಅವಳು ಎರಡುಮೂರು ಮಕ್ಕಳಿಂದ ಸಹಿತಳಾಗಿ ನನ್ನ ಮೇಲೆ ಕೂತುಕೊಂಡು ಪ್ರಯಾಣ ಮಾಡಿದಳು. ಮೆಲ್ಲಮೆಲ್ಲನೆ ಸರೋವರದ ತೀರದಲ್ಲಿ ಹೋಗುತ್ತಿರುವಾಗ ಬಹಳ ಕೆಸರಿನಿಂದ ನನ್ನ ಕಾಲುಗಳು ಹೂತುಹೋದವು. ಮತ್ತೆ ತಲೆಕೆಳಗಾಗಿ ಆ ಕೆಸರಿನಲ್ಲಿ ಬಿದ್ದೆನು. ತರುವಾಯ ಮಕ್ಕಳು ಕೋಲಿನಿಂದ ಕಲ್ಲಿನಿಂದ ನನ್ನನ್ನು ಬಡೆದರು. ಬಹಳವಾಗಿ ನನ್ನನ್ನು ಎಬ್ಬಿಸಲು ಪ್ರಯತ್ನಮಾಡಲು ನಾನು

ಪ್ರಾಣಗಳನ್ನು ಬಿಟ್ಟೆನು. ನಾನು ಸತ್ತದ್ದನ್ನು ತಿಳಿದು ಮಕ್ಕಳು ದೀನಳಾದ ತಾಯಿಯನ್ನು ಕರೆದುಕೊಂಡು ಹಿಂದೆಯೇ ತಮ್ಮ ಮನೆಗೆ ಹೋದನು. ತರುವಾಯ ನಾನು ಬಹುಕಾಲದ ಮೇಲೆ ಮೇಕೆಯ ಜನ್ಮವನ್ನು ಹೊಂದಿದೆನು' ಎಂದು ಹೇಳಿತು.

ಆಗ ಬ್ರಾಹ್ಮಣನು 'ಹಾಗಾದರೆ ಇಂತಹ ದುಃಖಕ್ಕೆ ಕಾರಣವಾದ ಈ ಯಾಗವು ಏನು (ಏಕೆ) ಬೇಕಾಗಿದೆ? ನನಗೆ ಹೇಗೆ ಅತ್ಯಂತ ಸುಖವುಂಟಾಗುವುದೋ ಹಾಗೆ ತಿಳಿಸುವವನಾಗು' ಎಂದನು.

ಅದಕ್ಕೆ ಮೇಕೆಯು 'ನಾನು ಇನ್ನೊಂದು ಆಶ್ಚರ್ಯಕರವಾದ ವಿಷಯವನ್ನು ಹೇಳುತ್ತೇನೆ. ಕುತೂಹಲವಿದ್ದರೆ ಕೇಳು. ಕುರುಕ್ಷೇತ್ರವೆಂಬ ಮೋಕ್ಷದಾಯಕವಾದ ಕ್ಷೇತ್ರವಿದೆ. ಅಲ್ಲಿ ಸೂರ್ಯವಂಶದ ಚಂದ್ರಶರ್ಮ ಎಂಬ ರಾಜನಿದ್ದನು. ಅವನು ಸೂರ್ಯಗ್ರಹಣಕಾಲದಲ್ಲಿ ಕಾಲಪುರುಷ ದಾನವನ್ನು ಮಾಡಬೇಕೆಂದು ಆರಂಭಿಸಿ ದರು. ವೇದವೇದಾಂಗಶಾಸ್ತ್ರ ಸಂಪನ್ನನಾದ ಕರೆದುಕೊಂಡು ಪುರೋಹಿತರಿಂದ ಸಹಿತನಾಗಿ ತೀರ್ಥಸ್ನಾನ ಮಾಡಲಿಕ್ಕೆ ಹೋದನು. ಆಗ ಕಾಲಪುರುಷನು ಗಟ್ಟಿಯಾಗಿ ನಗುವಂತೆ 'ಕ್ಷೇತ್ರದಲ್ಲಿ ಇತರರು ಸ್ವಲ್ಪವೂ ದಾನವನ್ನು ತೆಗೆದುಕೊಳ್ಳುವುದಿಲ್ಲ. ಸೂರ್ಯಗ್ರಹಣ ಕಾಲದಲ್ಲಿ ಕುರುಕ್ಷೇತ್ರದಲ್ಲಿ ಒಬ್ಬರೂ ದಾನ ತೆಗೆದುಕೊಳ್ಳುವುದಿಲ್ಲ. ನೀನು ಮಾತ್ರ ಹಣದ ಆಸೆಯಿಂದ ಕಾಲಪುರುಷದಾನವನ್ನು ತೆಗೆದುಕೊಳ್ಳಲಿಕ್ಕೆ ಇಚ್ಛಿಸುವಿ' ಎಂದು ವೇದವೇದಾಂಗಶಾಸ್ತ್ರಪಾರಂಗತನಾದ ಬ್ರಾಹ್ಮಣನನ್ನು ನೋಡಿ ಕೇಳಿದನು. ಅದಕ್ಕೆ ಆ ಬ್ರಾಹ್ಮಣನು 'ಈ ಪ್ರಕಾರವಾದ ಮಹಾದಾನಗಳಿಂದ ಉಂಟಾಗುವ ಪಾಪವೆಂಬ ಸಮುದ್ರವನ್ನು ದಾಟಲಿಕ್ಕೆ ಉಪಾಯವನ್ನು ನಾನೇ ತಿಳಿದಿರುವೆನು' ಎಂದು ಹೇಳಿದನು.

ತರುವಾಯ ರಾಜನು ಸ್ನಾನಮಾಡಿ ಶುದ್ಧವಸ್ತ್ರಗಳನ್ನು ಉಟ್ಟುಕೊಂಡವನಾಗಿ ಪ್ರಸನ್ನವಾದ ಮನಸ್ಸುಳ್ಳವನಾಗಿ ಬಿಳಿಯಾದ ಹೂ ಗಂಧಗಳನ್ನು ಧರಿಸುವವನಾಗಿ ಹತ್ತಿರವಿದ್ದ ಪುರೋಹಿತರ ಕೈಹಿಡಿದುಕೊಂಡು ಬಂದನು. ಬಂದು ವಿಧಿಪ್ರಕಾರವಾಗಿ ಭಕ್ತಿಯಿಂದ ಆ ಬ್ರಾಹ್ಮಣನಿಗೆ ಕಾಲಪುರುಷನನ್ನು ದಾನಮಾಡಿದನು. ಆಗ ಕಾಲಪುರುಷನ ಹೃದಯವನ್ನು ಭೇದಿಸಿಕೊಂಡು ದಯಾಹೀನನಾದ ಪಾಪಿಯಾದ ಕೆಂಪಾದ ಕಣ್ಣುಳ್ಳ ಒಬ್ಬ ಚಂಡಾಲನು ಬಂದನು. ನಿಂದಾಭಿಮಾನಿಯು ಚಂಡಾಲಕನ್ಯೆಯಾಗಿ ಪಾರ್ಶ್ವದಿಂದ ಹೊರಟುಬಂದಳು. ಈರೀತಿಯಾಗಿ ಕೆಂಪಾದ ಕಣ್ಣುಳ್ಳ ಆ ಇಬ್ಬರು ಚಂಡಾಲರು ಬಲಾತ್ಕಾರದಿಂದ ಆ ಬ್ರಾಹ್ಮಣನ ದೇಹದಲ್ಲಿ ಸಂಚರಿಸಿದರು. ಆಗ ಬ್ರಾಹ್ಮಣನು ಭಗವದ್ಗೀತೆಯ ಒಂಭತ್ತನೇ ಅಧ್ಯಾಯವನ್ನು

ಜಪಿಸುತ್ತಾ ಇದ್ದನು. ರಾಜನು ನೋಡುತ್ತಲೇ ಇದ್ದನು. ತರುವಾಯ ಅವರಿಬ್ಬರೂ ಗೀತಾಕ್ಷರ ಜಪದಿಂದ ಪೀಡಿತರಾಗಿ ಚಂಡಾಲ ಚಂಡಾಲಿಯರು ಓಡಿಹೋದರು. ಅದನ್ನು ನೋಡಿ ಆಶ್ಚರ್ಯವುಳ್ಳವನಾಗಿ ರಾಜನು ಆ ಬ್ರಾಹ್ಮಣನೊಡನೆ 'ಈ ಆಪತ್ತನ್ನು ನೀವು ಹೇಗೆ ದಾಟಿದಿರಿ. ಯಾವ ಮಂತ್ರವನ್ನು ಜಪಿಸಿದಿರಿ. ನಿಮ್ಮ ಮೇಲೆ ಬಂದ ಆ ಗಂಡಸೂ ಹೆಂಗಸೂ ಯಾರು? ಅವರು ಹೇಗೆ ಶಾಂತಿಯನ್ನು ಹೊಂದಿದರು? ಅದನ್ನು ನನಗೆ ಹೇಳಬೇಕು' ಎಂದು ಕೇಳಿಕೊಂಡನು. ಅದಕ್ಕೆ ಬ್ರಾಹ್ಮಣನು 'ಪಾಪವು ಮೂರ್ತಿಮತ್ತಾಗಿ ಚಂಡಾಲರೂಪದಿಂದ ಬಂದಿತು. ಪರನಿಂದೆಯು ಚಂಡಾಲನಿಯಾಗಿ ಬಂದಿತು. ನಾನು ಗೀತೆಯ ಒಂಭತ್ತನೇ ಅಧ್ಯಾಯವನನು ಜಪಿಸುತ್ತಿರುವೆನು. ಅದರ ಮಹಿಮೆಯಿಂದ ಅವರಿಬ್ಬರೂ ಓಡಿಹೋದರು. ನಾನು ನಿತ್ಯವೂ ಗೀತೆಯ ಒಂಭತ್ತನೇ ಅಧ್ಯಾಯವನ್ನು ಜಪಿಸುತ್ತಿರುವೆನು. ಅದರಿಂದ ದುಷ್ಟದಾನಗಳಿಂದ ಉಂಟಾದ ಪಾಪಗಳನ್ನೆಲ್ಲಾ ಪರಿಹರಿಸಿಕೊಂಡಿರುವೆನು' ಎಂದು ಹೇಳಿದನು. ತರುವಾಯ ರಾಜನು ಆಬ್ರಾಹ್ಮಣನಿಂದ ಗೀತೆಯ ಒಂಭತ್ತನೇ ಅಧ್ಯಾಯವನ್ನು ಅಭ್ಯಾಸಮಾಡಿದನು. ಅವರಿಬ್ಬರೂ ಪರಮಸುಖವನ್ನು ಹೊಂದಿದರು.



## ಭಗವದ್ಗೀತೆಯ ಹತ್ತನೇ ಅಧ್ಯಾಯ ಮಹಿಮೆ[1]

ಪೂರ್ವದಲ್ಲಿ ಪಾರ್ವತಿದೇವಿಯರು ರುದ್ರದೇವರೊಡನೆ ಭಗವದ್ಗೀತೆಯ ಹತ್ತನೇ ಅಧ್ಯಾಯದ ಮಹಿಮೆಯನ್ನು ಹೇಳಬೇಕೆಂದು ಕೇಳಿಕೊಂಡರು. ಆಗ ರುದ್ರದೇವರು 'ಸುಂದರಿ! ಪರಮಪವಿತ್ರವಾದ ಕಥೆಯನ್ನು ಹೇಳುವೆನು. ಕೇಳು. ಕಾಶಿಯಲ್ಲಿ ಶಾಂತವಾದ ಮನಸ್ಸುಳ್ಳ ಒಬ್ಬರನ್ನೂ ಹಿಂಸಾಮಾಡದ ನಂದಿಯಂತೆ ನನ್ನಲ್ಲಿ ಭಕ್ತಿಯುಳ್ಳವನಾದ ಧೀರಧೀ ಎಂದು ಪ್ರಸಿದ್ಧವಾದ ಬ್ರಾಹ್ಮಣನಿದ್ದನು. ಅವನು ನನ್ನನ್ನೇ ಧ್ಯಾನಮಾಡುತ್ತಾ ನಡೆಯುವಾಗ ಪ್ರೀತಿಯಿಂದ ನಾನು ಕರಾವಲಂಬನವನ್ನು ಕೊಡುವೆನು. ಒಂದು ದಿನದಲ್ಲಿ ಅವನು ಮೂಗಿನ ಅಗ್ರಭಾಗದಲ್ಲಿ ದೃಷ್ಟಿಯನ್ನು ಇಟ್ಟು ಸ್ವಲ್ಪ ನಿದ್ರೆಯುಳ್ಳವನಾಗಿ ಹೊಸ್ತಿಲಿನಲ್ಲಿ ತಲೆಯನ್ನು ಇಟ್ಟು ರಾತ್ರಿಯಲ್ಲಿ ಮಲಗುವವನಾದನು.

---

1. ಪ. ಪು.ಉ.ಖಂ. ಅ–180

ಭೃಂಗಿರಿಟಿಯು ನನ್ನ ಪಾದಕಮಲಕ್ಕೆ ನಮಸ್ಕರಿಸಿ ನನ್ನೊಡನೆ 'ಈ ಮಹಾನುಭಾವನು ಏನು ತಪಸ್ಸು ಮಾಡಿರುವನು? ಏನು ಜಪವನ್ನು ಮಾಡಿರುವನು. ಒಂದೊಂದು ಹೆಜ್ಜೆಗೂ ತಾವು ಅವನಿಗೆ ಹಸ್ತಲಾಘವವನ್ನು ಕೊಡುವಿರಲ್ಲಾ! ಇವನು ಯಾಕೆ ನಮ್ಮ ಕಾಶಿಯನ್ನು ಬಿಟ್ಟು ಹೊರಗೆ ಹೋಗುವುದಿಲ್ಲ. ದೈವೇಚ್ಛೆಯಿಂದ ಕಾಶಿಯ ಎಲ್ಲೆಯಿಂದ ಹೊರಟುಹೋದರೂ ಪಾರ್ಶ್ವದಲ್ಲಿಯೇ ಇದ್ದವರನ್ನೂ ನೋಡಲಾರನು. ಅದಕ್ಕೆ ಕಾರಣವನ್ನು ತಮ್ಮ ಮುಖದಿಂದ ಕೇಳಬೇಕೆಂದು ಇಚ್ಛೆಯುಳ್ಳವನಾಗಿರುವೆನು' ಎಂದು ಕೇಳಿದನು.

ಭೃಂಗಿರಿಟಿಯ ಮಾತನ್ನು ಕೇಳಿ ನಾನು ಹೇಳಿದೆನು. 'ಒಂದು ಸಮಯದಲ್ಲಿ ಅತಿಸುಂದರವಾದ ಪುನ್ನಾಗಕಾನನದಲ್ಲಿ ಜಗಲಿಯಲ್ಲಿ ಒಂದು ಕ್ಷಣ ಇದ್ದೆನು. ಅಲ್ಲಿ ಮಹತ್ತಾದ ಗಾಳಿಯು ಬಂದಿತು. ಅಲ್ಲಿ ಆಕಾಶದಿಂದ ಒಂದು ಪಕ್ಷಿಯು ಇಳಿದುಬಂದಿತು. ಅದರ ಮೈಯು ಕಪ್ಪಾಗಿ ಇದ್ದಿತು. ಪಾದಗಳಿಂದ ನೆಲವನ್ನು ಊರಿ ನನಗೆ ನಮಸ್ಕರಿಸಿತು. ಬಾಡದೆ ಅರಳಿರುವ ಒಂದು ಕಮಲಪುಷ್ಪವನ್ನು ನನ್ನ ಪಾದಕ್ಕೆ ಸಮರ್ಪಿಸಿತು. ಆಮೇಲೆ ಸ್ಪಷ್ಟವಾಗಿ ನನ್ನನ್ನು ಸ್ತೋತ್ರಮಾಡಿತು. ಅದನ್ನು ಕೇಳಿ 'ನೀನು ಯಾರು? ಎಲ್ಲಿಯವನು? ನಿನ್ನ ದೇಹವು ಹಂಸದ ಆಕಾರವುಳ್ಳದಾಗಿದೆ. ಕಾಗೆಯ ಬಣ್ಣವುಳ್ಳದಾಗಿದೆ. ಯಾವ ಪ್ರಯೋಜನಕ್ಕಾಗಿ ಇಲ್ಲಿಗೆ ಬಂದಿರುವೆ?' ಎಂದು ಕೇಳಲು ಪಕ್ಷಿಯು ಮಧುರವಾದ ವಾಣಿಯಿಂದ ಹೇಳಿತು. 'ನಾನು ಬ್ರಹ್ಮದೇವರ ಹಂಸವು. ನನ್ನ ಮೈಯು ಕಪ್ಪಾದದ್ದಕ್ಕೆ ಕಾರಣವನ್ನು ಹೇಳುತ್ತೇನೆ. ನಾನು ಮಾನಸಸರೋವರದಿಂದ ಭೂಮಿಗೆ ಬಂದೆನು. ಸೌರಾಷ್ಟ್ರನಗರದ ಬಳಿಯಲ್ಲಿದ್ದ ಸರೋವರದಲ್ಲಿ ಇದ್ದ ಪದ್ಮದ ಗೆಡ್ಡೆಗಳನ್ನು ಹಿಡಿದುಕೊಂಡು ವೇಗದಿಂದ ಆಕಾಶದಲ್ಲಿ ಹಾರಿಹೋದೆನು. ಅಕಸ್ಮಾತ್ತಾಗಿ ಆಕಾಶದಲ್ಲಿ ಹಾರುತ್ತಿದ್ದವನು ಕೆಳಗೆ ಬಿದ್ದೆನು. ಇಂದ್ರಿಯಬಲಹೀನನಾಗಿದ್ದೆನು. ತಣ್ಣಗಿನ ಗಾಳಿಯಿಂದ ನಡುಗುತ್ತಿದ್ದೆನು. ಮೂರ್ಛಿತ ನಾದೆನು. ಎಚ್ಚರಿಕೆಯನ್ನು ಹೊಂದಿದವನಾಗಿ ಕೆಳಗೆ ಬೀಳಲಿಕ್ಕೆ ಕಾರಣವು ತಿಳಿಯದೆ 'ಇದೇನು? ನಾನು ಕೆಳಗೆ ಬೀಳಲಿಕ್ಕೆ ಕಾರಣವೇನು? ಬೆಳ್ಳಗಿದ್ದ ನನ್ನ ಮೈಯಲ್ಲಿ ಈರೀತಿಯಾಗಿ ಕಪ್ಪುಬಣ್ಣವು ಹೇಗೆ ಬಂದಿತು?' ಎಂದು ಆಶ್ಚರ್ಯವುಳ್ಳವನಾಗಿ ವಿಚಾರ ಮಾಡುತ್ತಾ ಇದ್ದೆನು.

ಅಷ್ಟರಲ್ಲಿ ಒಂದು ಕಮಲಪುಷ್ಪದ ಒಳಗಿನಿಂದ 'ಹಂಸವೇ! ಏಳು. ನೀನು ಬೀಳಲಿಕ್ಕೆ ನಿನ್ನ ಮೈಯು ಕಪ್ಪಾಗಲಿಕ್ಕೂ ಕಾರಣವನ್ನು ಹೇಳುವೆನು' ಎಂಬ ಮಾತು ಕೇಳಿತು. ತರುವಾಯ ನಾನು ಎದ್ದು ಸುಂದರಿಯಾದ ಐದು ಕಮಲಗಳಿಂದ ಕೂಡಿದ

ಪದ್ಮಿನಿಯನ್ನು ನೋಡಿ ನಾನು ಬೀಳಲಿಕ್ಕೂ ಕಪ್ಪಾದದ್ದಕ್ಕೂ ಕಾರಣವನ್ನು ಕೇಳಿದೆನು. ನಾಲ್ಕು ಕೈಗಳುಳ್ಳ ಗದಾ ಶಂಖ ಚಕ್ರ ಪದ್ಮಗಳುಳ್ಳ ಕಿರೀಟ ಕೇಯೂರ ಕುಂಡಲ ಇತ್ಯಾದಿ ಆ ಭರಣಗಳಿಂದ ಕೂಡಿದ ಆಕಾಶದಲ್ಲಿ ಇದ್ದ ಅರವತ್ತು ಸಾವಿರ ಪುರುಷರನ್ನು ನೋಡಿದೆನು.

ತರುವಾಯ ನಾನು ನಮಸ್ಕಾರ ಮಾಡಿ ಪ್ರದಕ್ಷಿಣೆಬಂದು ನನ್ನ ವಿಷಯವನ್ನು ಕೇಳಿದೆನು. ಆಗ ಪದ್ಮಿನಿಯು 'ನೀನು ಆಕಾಶದಲ್ಲಿ ನನ್ನನ್ನು ದಾಟಿಹೋದಿ. ಅದರಿಂದ ನೀನು ಕೆಳಗೆ ಬಿದ್ದಿರುವಿ. ನಿನ್ನ ಮೈಯೂ ಕಪ್ಪಗೆ ಆಯಿತು. ಬಿದ್ದ ನಿನ್ನನ್ನು ನೋಡಿ ಕೃಪಾಪೂರ್ಣವಾದ ಮನಸ್ಸಿನಿಂದ ಈ ಮಧ್ಯಮ ಕಮಲದಿಂದ ಮಾತಾಡುತ್ತಿರುವಾಗ ಉಂಟಾದ ವಾಸನೆಯನ್ನು ಮೂಸಿ ಅರವತ್ತು ಸಾವಿರ ಭ್ರಮರಗಳು ಆಕಾಶಕ್ಕೆ ಹಾರಿಹೋದವು. ಅವರನ್ನೇ ಆಕಾಶದಲ್ಲಿ ನೀನು ನೋಡಿರುವೆ. ಅವರೆಲ್ಲರೂ ಕಳೆದುಹೋದ ಏಳನೇ ಜನ್ಮದಲ್ಲಿ ಮುನಿಪುತ್ರರಾಗಿದ್ದರು. ಇದೇ ಸರೋವರದ ತೀರದಲ್ಲಿ ತಪಸ್ಸನ್ನು ಮಾಡುತ್ತಿದ್ದರು.

ಒಂದು ಸಮಯದಲ್ಲಿ ಒಬ್ಬಳು ಸುಂದರಿಯು ಬಂದು ವೀಣೆಯನ್ನು ಬಾರಿಸುತ್ತಾ ಸುಂದರವಾಗಿ ಗಾಯನ ಮಾಡಿದಳು. ಅವಳ ಗಾಯನವನನು ಕೇಳಿ ತಪಸ್ಸು ಮಾಡುತ್ತಿದ್ದ ಬ್ರಾಹ್ಮಣರು ಜಿಂಕೆಗಳಂತೆ ಎಲ್ಲರೂ ಓಡಿಬಂದು ಅವಳನ್ನೇ ನೋಡಿದರು. 'ನಾನು ಇವಳನ್ನು ನೋಡಿದೆನು. ನನಗೆ ಇವಳು ಬೇಕು' ಎನ್ನುತ್ತಾ ಜಗಳವಾಡಿ ಎಲ್ಲರೂ ಸತ್ತುಹೋದರು. ಅವರು ಘೋರ ನರಕಗಳನ್ನು ಅನುಭವಿಸಿ ಸರಭ ಎಂಬ ಹೆಸರಿನಿಂದ ಹುಟ್ಟಿ ಅನೇಕ ಮೃಗಗಳನ್ನು ಸಂಹರಿಸಿದರು. ಆಮೇಲೆ ಅವರು ಕಾಡಿನ ಬೆಂಕಿಯಿಂದ ಸುಟ್ಟುಹೋದರು. ಆನೆಗಳಾಗಿ ಹುಟ್ಟಿ ದಾರಿಯಲ್ಲಿ ಹೋಗುವವರನ್ನು ಸಂಹರಿಸಿದವು. ಆಮೇಲೆ ಕಾಡಿನಲ್ಲಿ ವಿಷಮಿಶ್ರವಾದ ನೀರನ್ನು ಕುಡಿದು ಸತ್ತವು. ಆಮೇಲೆ ಕ್ರಮದಿಂದ ಕತ್ತೆ ಒಂಟೆ ಬೆಕ್ಕುಗಳ ಜನ್ಮಗಳ್ನು ಹೊಂದಿ, ಆಮೇಲೆ ಭ್ರಮರಗಳಾಗಿ ಈ ಸರೋವರದಲ್ಲಿ ಇರುತ್ತಿದ್ದವು. ಈಗ ನನ್ನ ಗಂಧವನ್ನು ಮೂಸಿ ಅದರಿಂದ ಸ್ವರ್ಗಕ್ಕೆ ಹೋದರು. ಹೀಗೆ ಆಗಲಿಕ್ಕೆ ನನ್ನ ಮಹಿಮೆಯನ್ನು ಹೇಳುತ್ತೇನೆ. ನಾನು ಕಳೆದ ಮೂರನೇ ಜನ್ಮದಲ್ಲಿ ಭೂಮಿಯಲ್ಲಿ ಸರೋಜವದನಾ ಎಂದು ಹೆಸರುಳ್ಳ ಬ್ರಾಹ್ಮಣ ಕನ್ಯೆಯಾಗಿದ್ದೆನು. ಪತಿವ್ರತೆಯಾಗಿದ್ದೆನು. ಗುರುಗಳ ಸೇವೆಯನ್ನು ಮಾಡುತ್ತಿದ್ದೆನು. ಒಂದು ದಿವಸದಲ್ಲಿ ನಾನು ಅವಸರವಾಗಿ ಸಾರಿಕಾಪಕ್ಷಿಗೆ ಹೇಳಿಕೊಡುತ್ತಿರುವ ಸಮಯ ನನ್ನ ಪತಿಯು ಕೋಪಿಸಿಕೊಂಡು ನೀನು ಸಾರಿಕಾಪಕ್ಷಿಯಾಗು ಎಂದು ಶಾಪಕೊಟ್ಟರು. ನಾನು ಸಾರಿಕಾಪಕ್ಷಿಯಾದೆ. ಆದರೂ

ಪಾತಿವ್ರತ್ಯಪ್ರಭಾವದಿಂದ ಮುನಿಗಳ ಮನೆಯಲ್ಲಿಯೇ ನನ್ನನ್ನು ಒಬ್ಬಳು ಕನ್ಯೆಯು ನನ್ನನ್ನು ಪೋಷಿಸಿದಳು. ಅಲ್ಲಿ ಬ್ರಾಹ್ಮಣನು ಗೀತೆಯ ಹತ್ತನೇ ಅಧ್ಯಾಯವನ್ನು ಪಾರಾಯಣಮಾಡುತ್ತಿದ್ದನು. ಅದನ್ನು ನಾನು ಕೇಳಿದೆನು. ಆಮೇಲೆ ಬಹಳ ಸಮಯವಾದ ಮೇಲೆ ನಾನು ಸಾರಿಕಾದೇಹವನ್ನು ಬಿಟ್ಟು ಹತ್ತನೇ ಅಧ್ಯಾಯದ ಮಹಿಮೆಯಿಂದ ಪದ್ಮಾವತಿಯೆಂದು ಪ್ರಸಿದ್ಧಳಾದ ಅಪ್ಸರಸ್ತ್ರೀಯಾಗಿ ಹುಟ್ಟಿದೆನು.

ನಾನು ಒಂದು ದಿವಸದಲ್ಲಿ ವಿಮಾನದಲ್ಲಿ ಕೂತುಕೊಂಡು ಆಕಾಶಮಾರ್ಗದಲ್ಲಿ ಹೋಗುತ್ತಿರುವಾಗ ಮನೋಹರವಾದ ನಿರ್ಮಲಗಳಾದ ತಾವರೆಹೂಗಳಿಂದ ಕೂಡಿದ ಈ ಸರೋವರವನ್ನು ನೋಡಿ ಇಲ್ಲಿ ಇಳಿದು ಜಲಕ್ರೀಡೆಯಾಡುತ್ತಿದ್ದೆನು. ಅಷ್ಟರಲ್ಲಿ ದುರ್ವಾಸರು ಬಂದರು. ವಸ್ತ್ರರಹಿತಳಾಗಿದ್ದ ನನ್ನನ್ನು ನೋಡಿದರು. ಅವರ ಭಯದಿಂದ ನಾನು ಎರಡು ಪಾದಗಳಲ್ಲಿ ಎರಡು ಪದ್ಮಗಳನ್ನೂ ಎರಡು ಕೈಗಳಲ್ಲಿ ಎರಡು ಪದ್ಮಗಳನ್ನು ಮುಖದಲ್ಲಿ ಒಂದು ಪದ್ಮವನ್ನು ಹೀಗೆ ಐದು ಪದ್ಮಗಳನ್ನು ಧರಿಸಿ ಪದ್ಮಿನೀ ರೂಪವನ್ನು ಧರಿಸಿದೆನು. ದುರ್ವಾಸರು ಕೋಪದಿಂದ ನನ್ನನ್ನು ನೋಡಿ 'ಪಾಪಿಯೇ! ಇದೇ ರೂಪದಿಂದ ನೂರು ವರ್ಷ ಇರು' ಎಂದು ಹೇಳಿ ಮರೆಯಾದರು. ಗೀತೆಯ ಹತ್ತನೇದಾದ ವಿಭೂತಿ ಅಧ್ಯಾಯದ ಮಹಿಮೆಯಿಂದ ನನಗಿನ್ನೂ ಮಾತಾಡುವ ಸಾಮರ್ಥ್ಯವಿದೆ. ನನ್ನನ್ನು ನೀನು ದಾಟಿದ ಮಾತ್ರದಿಂದ ಕೆಳಗೆ ಬಿದ್ದು ಕಪ್ಪಾಗಿರುವೆ. ನೀನಿರುವಾಗಲೇ ನನಗೆ ಈಗ ಶಾಪಪರಿಹಾರ ವಾಗುವುದು. ನಾನೀಗ ಹತ್ತನೇ ಅಧ್ಯಾಯವನ್ನು ಹೇಳುವೆನು. ಅದನ್ನು ಕೇಳುವ ಮಾತ್ರದಿಂದ ನಿನಗೂ ಬಿಡುಗಡೆಯಾಗುವುದು' ಎಂದು ಹೇಳಿ ಮಧುರವಾಗಿ ಗೀತೆಯ ಹತ್ತನೇ ಅಧ್ಯಾಯವನ್ನು ಹೇಳಿದಳು. ನಾನು ಅದನ್ನು ಕೇಳಿ ಅವಳು ಕೊಟ್ಟಿರುವ ಈ ಹೂವನ್ನು ನಿಮ್ಮ ಪಾದಕ್ಕೆ ಸಮರ್ಪಿಸಿರುವೆನು' ಈಪ್ರಕಾರವಾಗಿ ಹೇಳಿ ಆ ಪಕ್ಷಿಯು ತನ್ನ ದೇಹವನ್ನು ಪರಿತ್ಯಜಿಸಿತು' ಎಂದು (ರುದ್ರದೇವರು) ಹೇಳಿದರು.

ಭೃಂಗರಿಟಿಯು 'ಬ್ರಹ್ಮದೇವರ ಹಂಸವು ಪೂರ್ವಜನ್ಮದಲ್ಲಿ ಯಾರಾಗಿದ್ದಿತು?' ನಿಮ್ಮ ಮುಂಭಾಗದಲ್ಲಿ ಏಕೆ ದೇಹವನ್ನು ಪರಿತ್ಯಜಿಸಿತು'? ಎಂದು ಕೇಳಿದನು. ಅದಕ್ಕೆ ನಾನು (ರುದ್ರದೇವರು) ಇವನು ಪೂರ್ವಜನ್ಮದಲ್ಲಿ ಬ್ರಾಹ್ಮಣರ ಮನೆಯಲ್ಲಿ ಹುಟ್ಟಿದನು. ಸುತಪಾ ಎಂಬ ಪ್ರಸಿದ್ಧವಾದ ಬ್ರಹ್ಮಚಾರಿಯಾಗಿ ಗುರುಕುಲದಲ್ಲಿ ವಾಸ ಮಾಡುತ್ತಾ ವೇದಾಧ್ಯಯನವನ್ನು ಮಾಡುತ್ತಾ ಗುರುಗಳ ಸೇವೆಯನ್ನು ಮಾಡುತ್ತಾ ಇದ್ದನು. ಅವನು ನಿದ್ದೆಯನ್ನು ಮಾಡುವಾಗ ಮಲಗಿದ್ದ ಗುರುಗಳ ಹಾಸಿಗೆಯನ್ನು ಕಾಲಿನಿಂದ ಮುಟ್ಟಿದನು. ಆ ಪಾಪದಿಂದ ಅವನು ಸ್ವರ್ಗದಲ್ಲಿಯಾದರೂ ಪಕ್ಷಿಯಾಗಿ

ಆದನು. ಈಲೋಕದಲ್ಲಿ ಅವನಿಗೆ ನನ್ನನ್ನು ನೋಡುವವರೆಗೆ ಆಯುಷ್ಯವಿದ್ದಿತು. ಪದ್ಮಿನಿಯು ಹೇಳಿದ ಗೀತಾಹತ್ತನೇ ಅಧ್ಯಾಯವನ್ನು ಕೇಳಿದ ಕಾರಣ ಉತ್ತಮವಾದ ಬ್ರಹ್ಮಜ್ಞಾನವನ್ನು ಹೊಂದಿದನು. ಅವನೇ ಈಗ ಹತ್ತನೇ ಅಧ್ಯಾಯದ ಮಹಿಮೆ ಯಿಂದ ಬ್ರಾಹ್ಮಣಕುಲದಲ್ಲಿ ಹುಟ್ಟಿರುವನು.

ಜನ್ಮಾಂತರದ ಅಭ್ಯಾಸದಿಂದ ಇವನಿಗೆ ಮಗುವಾಗಿರುವಾಗ ಗೀತೆಯ ಹತ್ತನೇ ಅಧ್ಯಾಯವು ಬರುತ್ತಿದ್ದಿತು. ಅದರ ಅರ್ಥಜ್ಞಾನದಿಂದ ಸರ್ವಪ್ರಾಣಿಗಳಲ್ಲಿ ಇರುವ ಶಂಖಚಕ್ರಗದಾಧಾರಿಯಾದ ಪರಮಾತ್ಮನನ್ನು ಯಾವಾಗಲೂ ನೋಡುತ್ತಿರುವನು. ಅವನು ಯಾರನ್ನು ಸ್ನೇಹದಿಂದ ನೋಡುವನೋ ಅವನು ಸುರಾಪಾನ ಮಾಡಿದವನಾಗಿರಲಿ, ಬ್ರಹ್ಮಹತ್ಯೆಯನ್ನು ಮಾಡಿದವನಾಗಿರಲಿ, ಪಾಪದಿಂದ ಮುಕ್ತಿಯನ್ನು ಹೊಂದುವನು. ಅದನ್ನು ತಿಳಿದು ನಾನು ಸ್ವಭಾವದಿಂದಲೇ ಮುಕ್ತಿಕ್ಷೇತ್ರವಾದ ಇಲ್ಲಿಗೆ ಅವನನ್ನು ಕರೆದುಕೊಂಡು ಬಂದಿರುವೆನು. ಇಲ್ಲಿರುವ ಜನರಿಗೆ ಮೋಕ್ಷವು ಹಸ್ತಗತವಾಗಿರುವುದು. ಆದರಿಂದ ಇವನ ದೃಷ್ಟಿಬೀಳುವುದರಿಂದ ಜನರಿಗೆ ವಿಶೇಷವೊಂದೂ ಆಗುವುದಿಲ್ಲ. ಇವನನ್ನು ಇಲ್ಲಿಂದ ಹೊರಗೆ ಹೋಗಲಿಕ್ಕೆ ಬಿಡುವುದಿಲ್ಲ. ಹತ್ತನೇ ಅಧ್ಯಾಯ ಗೀತೆಯ ಮಹಿಮೆಯಿಂದ ಇವನಿಗೆ ದುರ್ಲಭವಾದ ತತ್ವಜ್ಞಾನವುಂಟಾಗಿರುವುದು. ಆದರಿಂದ ಇವನು ಜೀವನ್ಮುಕ್ತನಾಗಿರುವನು. ಆದುದರಿಂದ ನಾನು ಇವನು ನಡೆಯುವಾಗ ಹಸ್ತಾಲಂಬನವನ್ನು ಕೊಡುತ್ತೇನೆ. ಗೀತೆಯ ಹತ್ತನೇ ಅಧ್ಯಾಯದ ಮಹಿಮೆಯು ಹೀಗೆ ಇರುವುದು' ಎಂದು (ರುದ್ರದೇವರು) ಭಂಗಿರಿಟಿಯೊಡನೆ ಹೇಳಿದರು. ಈ ಹತ್ತನೇ ಅಧ್ಯಾಯವನ್ನು ಕೇಳುವ ಮಾತ್ರದಿಂದ ಸ್ತ್ರೀಗೂ ಪುರುಷನಿಗೂ ಸರ್ವಾಶ್ರಮಗಳ ಫಲವು ಬರುವುದು.



## ಭಗವದ್ಗೀತೆಯ ಹನ್ನೊಂದನೇ ಅಧ್ಯಾಯದ ಮಹಿಮೆ [1]

ಪ್ರಣೀತಾ ಎಂಬ ನದಿಯ ತೀರದಲ್ಲಿ ಮೇಘಂಕರವೆಂಬ ನಗರವಿದ್ದಿತು. ಆ ನಗರ ದಲ್ಲಿ ಸುನಂದ ಎಂದು ಪ್ರಸಿದ್ಧನಾದ ಬ್ರಾಹ್ಮಣನಿದ್ದನು. ಅವನು ಬ್ರಹ್ಮಚರ್ಯದಲ್ಲಿ ಆಸಕ್ತನಾಗಿದ್ದನು. ಅಹಂಕಾರ ಮಮಕಾರಗಳನ್ನು ಬಿಟ್ಟಿದ್ದನು. ವೇದಶಾಸ್ತ್ರಗಳಲ್ಲಿ

1. ಪ. ಪು.ಉ.ಖಂ. ಅ–181

ಪಾರಂಗತನಾಗಿದ್ದನು. ಪರಮಾತ್ಮನಲ್ಲಿ ಭಕ್ತಿಯುಳ್ಳವನಾಗಿದ್ದನು. ಅವನು ಯಾವಾಗಲೂ ಭಗವಂತನ ಬಳಿಯಲ್ಲಿ ಗೀತೆಯ ಹನ್ನೊಂದನೆಯದಾದ ವಿಶ್ವರೂಪಾಧ್ಯಾಯವನ್ನು ಪಾರಾಯಣ ಮಾಡುತ್ತಿದ್ದನು. ಅದರಿಂದ ಅವನು ಬ್ರಹ್ಮಜ್ಞಾನವನ್ನು ಹೊಂದಿದನು. ಅವನು ಒಂದು ಸಮಯದಲ್ಲಿ ಸಿಂಹರಾಶಿಯಲ್ಲಿ ಗುರುವಿರುವಾಗ ಗೋದಾವರೀ ಯಾತ್ರೆಯನ್ನು ಮಾಡಬೇಕೆಂದು ಹೊರಟು ದಾರಿಯಲ್ಲಿ ಅನೇಕ ಕ್ಷೇತ್ರಗಳನ್ನು ದಾಟಿ ಮಿತ್ರರಿಂದ ಕೂಡಿಕೊಂಡು ವಿವಾಹ ಮಂಟಪವೆಂಬ ಪಟ್ಟಣವನ್ನು ಬಂದು ಸೇರಿದನು. ಅಲ್ಲಿ ಒಂದೊಂದು ಮನೆಯಲ್ಲಿಯೂ ವಾಸಮಾಡಲಿಕ್ಕೆ ಸ್ಥಳವನ್ನು ಯಾಚಿಸಿದರೂ ಸ್ಥಳವನ್ನು ಹೊಂದಲಿಲ್ಲ. ಕೊನೆಗೆ ಗ್ರಾಮಪಾಲನು ಒಂದು ವಿಶಾಲವಾದ ಛತ್ರವನ್ನು ತೋರಿಸಲು ತನ್ನ ಮಿತ್ರರಿಂದ ಕೂಡಿಕೊಂಡು ಅಲ್ಲಿ ವಾಸಮಾಡಿದನು.

ಮರುದಿವಸ ಬೆಳಗಾಗಲು ತಾನು ಆ ಛತ್ರದ ಹೊರಗಿನ ಪಾರ್ಶ್ವದಲ್ಲಿ ಇದ್ದನು. ತನ್ನೊಟ್ಟಿಗೆ ಮಲಗಿದ್ದ ಮಿತ್ರರೊಬ್ಬರೂ ಇರಲಿಲ್ಲ. ಅವರನ್ನು ಹುಡುಕುತ್ತಾ ಬರುತ್ತಿರಲು ಆ ಗ್ರಾಮಪಾಲನನ್ನು ನೋಡಿದನು. ಗ್ರಾಮಪಾಲನು ಅವನನ್ನು ನೋಡಿ 'ನೀನು ಆಯುಷ್ಯವಂತನಾಗಿರುವಿ. ಪುಣ್ಯವಂತನಾಗಿರುವಿ. ನಿನ್ನಲ್ಲಿ ಏನೋ ವಿಶೇಷಪ್ರಭಾವ ವಿರಬೇಕು. ನಿನ್ನ ಮಿತ್ರರೆಲ್ಲರೂ ಎಲ್ಲಿಗೆ ಹೋದರೆಂಬುದನ್ನು ನಿನಗೆ ಹೇಳುವೆನು. ನಿನಗೆ ಸಮಾನನಾದ ತಪಸ್ವಿಯನ್ನು ನಾನು ನೋಡಲಿಲ್ಲ. ನೀನು ಮಹಾಮಂತ್ರವನ್ನು ತಿಳಿದಿರುವಿಯಾ? ಯಾವ ವಿದ್ಯೆಯನ್ನು ತಿಳಿದಿರುವಿ? ಯಾವ ದೇವತೆಯ ಅನುಗ್ರಹದಿಂದ ನಿನ್ನಲ್ಲಿ ಲೋಕೋತ್ತರ ಸಾಮರ್ಥ್ಯವಿರುವುದು? ನೀನು ಕೃಪೆಯಿಂದ ಈ ಗ್ರಾಮದಲ್ಲಿಯೇ ಇರು. ನಿನಗೆ ಎಲ್ಲಾ ಸೇವೆಯನ್ನು ಮಾಡುವೆನು. ಎಂದು ಆ ಗ್ರಾಮದಲ್ಲಿಯೇ ಅವನನ್ನು ವಾಸಮಾಡಿಸಿದನು. ರಾತ್ರಿಹಗಲು ಭಕ್ತಿಯಿಂದ ಸೇವೆಯನ್ನು ಮಾಡುತ್ತಿದ್ದನು. ಹೀಗೆಯೇ ಏಳೆಂಟು ದಿವಸಗಳೂ ಗ್ರಾಮಪಾಲನು ಬೆಳಿಗ್ಗೆ ಬಂದು ಗಟ್ಟಿಯಾಗಿ ಅಳುವವನಾದನು. 'ಭಾಗ್ಯಹೀನನಾದ ನನ್ನ ಗುಣವಂತನಾದ ಭಕ್ತಿಯುಳ್ಳವನಾದ ಮಗನು ಜ್ವಲಿಸುವ ಕೋರೆಹಲ್ಲುಗಳುಳ್ಳ ರಾಕ್ಷಸನಿಂದ ರಾತ್ರಿಯಲ್ಲಿ ಭಕ್ಷಿತನಾದನು' ಎಂದು ಅಳುತ್ತಾ ಹೇಳಿದನು.

ಅದಕ್ಕೆ ಬ್ರಾಹ್ಮಣನು 'ಆ ರಾಕ್ಷಸನು ಎಲ್ಲಿರುವನು? ಅವನನ್ನು ರಾಕ್ಷಸನು ಹೇಗೆ ಭಕ್ಷಿಸಿದನು?' ಎಂದು ಕೇಳಿದನು. ಅದಕ್ಕೆ ಗ್ರಾಮಪಾಲನು 'ಈ ನಗರದಲ್ಲಿ ಘೋರವಾದ ರಾಕ್ಷಸನು ಇರುವನು. ಅವನು ಯಾವಾಗಲೂ ಬಂದು ಊರಜನರನ್ನು ತಿನ್ನುತ್ತಿದ್ದನು. ಎಲ್ಲಾ ಊರಿನ ಜನರೂ ಸೇರಿ ಆ ರಾಕ್ಷಸನೊಡನೆ

'ರಾಕ್ಷಸನೇ! ನಿನಗೆ ನಾವು ಆಹಾರವನ್ನು ಕೊಡುತ್ತೇವೆ. ನಮ್ಮನ್ನು ರಕ್ಷಿಸು. ಛತ್ರದಲ್ಲಿ ಗ್ರಾಮಪಾಲನಿಂದ ಕಳುಹಿಸಲ್ಪಡುವವರಾಗಿ ಯಾವ ದಾರಿಗರು ಮಲಗುವರೋ ಅವರನ್ನು ಆಹಾರವನ್ನಾಗಿ ಮಾಡಿಕೊ' ಎಂದು ಹೇಳಿ ತಮ್ಮ ಪ್ರಾಣರಕ್ಷಣೆಗಾಗಿ ಅವನಿಗೆ ಆಹಾರವನ್ನು ಕಲ್ಪನೆ ಮಾಡಿದರು. ನೀನು ನಿನ್ನ ಮಿತ್ರರೊಡನೆ ಇಲ್ಲಿ ಮಲಗುವವನಾದಿ. ನಿನ್ನ ಮಿತ್ರರನ್ನು ಅವನು ಸಂಹರಿಸಿದನು. ನೀನು ಬದುಕಿರುವಿ. ನಿನ್ನ ಪ್ರಭಾವವನ್ನು ನೀನೇ ತಿಳಿದಿರುವಿ. ನನ್ನ ಮಗನ ಮಿತ್ರನೊಬ್ಬನು ಬಂದಿದ್ದನು. ನಾನು ಅವನು ನನ್ನ ಮಗನ ಮಿತ್ರನೆಂದು ತಿಳಿಯದೆ ಇತರ ದಾರಿಗರೊಡನೆ ಅವನನ್ನೂ ಛತ್ರಕ್ಕೆ ಕಳುಹಿಸಿದೆನು. ಅದನ್ನು ಕೇಳಿ ನನ್ನ ಮಗನು ಅವನನ್ನು ಕರೆದುಕೊಂಡು ಬರುವುದಕ್ಕಾಗಿ ಛತ್ರಕ್ಕೆ ಹೋದನು. ಅವನೂ ಆ ರಾಕ್ಷಸನಿಂದ ಭಕ್ಷಿತನಾದನು. ಬೆಳಗಾಗಲು ನಾನು ದುಃಖದಿಂದ ರಾಕ್ಷಸನೊಡನೆ 'ನನ್ನ ಮಗನನ್ನು ನುಂಗಿದಿಯಲ್ಲಾ! ನಿನ್ನ ಹೊಟ್ಟೆಯನ್ನು ಹೊಂದಿರುವ ಅವನು ಬದುಕುವ ಉಪಾಯವಿದ್ದರೆ ಹೇಳು'ಎಂದು ಕೇಳಿದನು. ಅದಕ್ಕೆ ಅವನು ನಿನ್ನ ಮಗನೆಂದು ತಿಳಿಯದೆ ಇತರ ದಾರಿಗರೊಡನೆ ನಿನ್ನ ಮಗನನ್ನು ಭಕ್ಷಿಸಿದೆನು. ಯಾರಾದರೂ ನಿತ್ಯವೂ ಭಗವದ್ಗೀತೆಯ ಹನ್ನೊಂದನೇ ಅಧ್ಯಾಯವನ್ನು ಜಪಿಸುವವನಿದ್ದರೆ ಅವನಿಂದ ನನಗೂ ಬಿಡುಗಡೆಯಾಗುವುದು. ನನ್ನಿಂದ ಮೃತರಾದವರೆಲ್ಲರೂ ಬದುಕುವರು' ಎಂದು ಹೇಳಿದನು.

ಅದಕ್ಕೆ ನಾನು (ಗ್ರಾಮಪಾಲನು) ಹನ್ನೊಂದನೇ ಅಧ್ಯಾಯಕ್ಕೆ ಅಷ್ಟು ಅದ್ಭುತವಾದ ಮಹಿಮೆಯು ಹೇಗೆ ಎಂದು ಕೇಳಿದನು. ಅದಕ್ಕೆ ರಾಕ್ಷಸನು ''ಪೂರ್ವದಲ್ಲಿ ಒಂದು ಹದ್ದು ಪಕ್ಷಿಯು ಆಕಾಶಮಾರ್ಗದಲ್ಲಿ ಹಾರುವಾಗ ಅದರ ಬಾಯಿಯಿಂದ ಒಂದು ಎಲುಬಿನಲ್ಲಿ ಚೂರು ಒಂದು ಸರೋವರಕ್ಕೆ ಬಿದ್ದಿತು. ಅಲ್ಲಿಗೆ ಬಂದು ಒಬ್ಬ ಮಹಾಜ್ಞಾನಿಯು ಆ ಸರೋವರವು ಮಹಾತೀರ್ಥವೆಂದು ಹೇಳಿ ಅಲ್ಲಿ ಪಿತೃತರ್ಪಣವನ್ನು ಮಾಡಿದನು. ಅದನ್ನು ನೋಡಿ ಜನರು ಇದು ಹೇಗೆ ಮಹಾತೀರ್ಥವೆಂದು ಕೇಳಿದರು. ಅದಕ್ಕೆ ಆ ಜ್ಞಾನಿಯು 'ಒಬ್ಬ ಬ್ರಾಹ್ಮಣನು ಮೂರು ಕಾಲದಲ್ಲಿಯೂ ಗೀತೆಯ ಹನ್ನೊಂದನೆಯ ಅಧ್ಯಾಯವನ್ನು ಜಪಿಸುತ್ತಿದ್ದನು. ಅವನು ದಾರಿಯಲ್ಲಿ ಹೋಗುತ್ತಿರುವಾಗ ಕೆಲವು ಕಳ್ಳರು ಅವನನ್ನು ಹಣವಂತನೆಂದು ಕೊಂದುಹಾಕಿದರು. ಅವನ ಎಲುಬು ಹದ್ದುಪಕ್ಷಿಯ ಬಾಯಿಯಿಂದ ಈ ನೀರಿಗೆ ಬಿದ್ದಿತು. ಆದುದರಿಂದ ಇದು ಮಹಾತೀರ್ಥವಾಯಿತು' ಎಂದನು. ತರುವಾಯ ಜನರೆಲ್ಲರೂ ಆ ಸರೋವರದಲ್ಲಿ ಸ್ನಾನಮಾಡಿ ದೋಷರಹಿತರಾಗಿ ಉತ್ತಮವಾದ

ಲೋಕವನ್ನು ಹೊಂದಿದರು. ಆ ಹನ್ನೊಂದನೇ ಅಧ್ಯಾಯದ ಪ್ರಭಾವದಿಂದ ನನಗೂ ಬಿಡುಗಡೆಯಾಗುವುದು. ದಾರಿಗರೂ ಬದುಕುವರು.

ನಾನು ಪೂರ್ವದಲ್ಲಿ ಒಬ್ಬ ಬ್ರಾಹ್ಮಣನು ತಿನ್ನದೆ ಬಿಟ್ಟಿರುವೆನಲ್ಲಾ, ಅವನು ಇಲ್ಲೇ ವಾಸಮಾಡುತ್ತಿರುವನು. ಅವನು ನಿತ್ಯವೂ ಗೀತೆಯ ಹನ್ನೊಂದನೇ ಅಧ್ಯಾಯವನ್ನು ಜಪಿಸುತ್ತಿರುವನು. ಅವನು ಎದ್ದು ಆ ಮಂತ್ರದಿಂದ ನೀರನ್ನು ಅಭಿಮಂತ್ರಿಸಿ ಆ ನೀರನ್ನು ನನ್ನ ಮೇಲೆ ಹಾಕಿದವನಾದರೆ ನನಗೆ ಶಾಪದಿಂದ ಬಿಡುಗಡೆ ಯಾಗುವುದು'' ಎಂದು ಹೇಳಿರುವನು. ಆದರಿಂದ ನಾನು ನಿನ್ನ ಬಳಿಗೆ ಬಂದಿರು ವೆನು' ಎಂದು (ಗ್ರಾಮಪಾಲನು) ಹೇಳಲು ಬ್ರಾಹ್ಮಣನು 'ಅವನು ಯಾವ ಪಾಪದಿಂದ ರಾಕ್ಷಸನಾದನು' ಎಂದು ಕೇಳಲು ಗ್ರಾಮಪಾಲನು 'ಪೂರ್ವದಲ್ಲಿ ಈ ಗ್ರಾಮದಲ್ಲಿ ಕೃಷಿಮಾಡುವ ಒಬ್ಬ ಬ್ರಾಹ್ಮಣನಿದ್ದನು. ಅವನು ಒಂದು ದಿನದಲ್ಲಿ ತನ್ನ ಗದ್ದೆಯನ್ನು ರಕ್ಷಿಸುವುದರಲ್ಲಿ ಆಸಕ್ತನಾಗಿದ್ದನು. ಅವನ ಹತ್ತಿರದಲ್ಲಿಯೇ ಒಬ್ಬ ದಾರಿಗನನ್ನು ಒಂದು ದೊಡ್ಡ ಹದ್ದು ಪಕ್ಷಿಯು ತಿನ್ನಲಿಕ್ಕೆ ಆರಂಭಿಸಿತು. ಅದನ್ನು ದೂರದಲ್ಲಿ ನೋಡಿ ಒಬ್ಬ ತಪಸ್ವಿಯು ದಯೆಯಿಂದ ಬಂದನು. ಅವನು ದೂರದಿಂದ ಬರುವಷ್ಟರಲ್ಲಿಯೇ ಆ ಹದ್ದುವು ದಾರಿಗನನ್ನು ತಿಂದುಹಾಕಿ ಆಕಾಶದಲ್ಲಿ ಹಾರಿಹೋಯಿತು.

ಆಗ ತಪಸ್ವಿಯು ಗದ್ದೆಯಲ್ಲಿ ಇದ್ದ ಆ ಬ್ರಾಹ್ಮಣನನ್ನು ನೋಡಿ ಕೋಪದಿಂದ 'ಎಲಾ ದುಷ್ಟನೇ! ದಯಾಹೀನನಾದ ಕ್ರೂರನಾದ ನಿನ್ನ ಹೊಟ್ಟೆಯಲ್ಲಿಯೇ ಆಸಕ್ತನಾದ, ಇನ್ನೊಬ್ಬರನ್ನು ರಕ್ಷಣೆ ಮಾಡದೆ ಇರುವ, ಸತ್ತಪ್ರಾಯನಾದ ನಿನಗೆ ಧಿಕ್ಕಾರವಿರಲಿ. ಕಳ್ಳರಿಂದಲೂ ದುಷ್ಟಮೃಗಗಳಿಂದಲೂ ಸರ್ಪಗಳಿಂದಲೂ, ಅಗ್ನಿ ವಿಷಜಲಗಳಿಂದಲೂ, ಹದ್ದುಗಳಿಂದಲೂ, ರಾಕ್ಷಸ ರಿಂದಲೂ, ಭೂತಗಳಿಂದಲೂ, ವೇತಾಲಗಳಿಂದಲೂ, ಕೊಲ್ಲಲ್ಪಡುವ ಪುರುಷನನ್ನು ನೋಡಿ ತಾನು ಬಿಡಿಸಲಿಕ್ಕೆ ಶಕ್ತನಾಗಿದ್ದೂ ಬಿಡಿಸುವುದಿಲ್ಲವೋ, ಅವನು ಅವನನ್ನು ಕೊಂದ ಫಲವನ್ನೇ ಹೊಂದುವನು. ಯಾರು ಸಮರ್ಥನಾಗಿದ್ದುಕೊಂಡು ಕಳ್ಳರೇ ಮೊದಲಾದವರಿಂದ ಪೀಡಿಸಲ್ಪಡುವ ಬ್ರಾಹ್ಮಣನನ್ನು ಬಿಡಿಸುವುದಿಲ್ಲವೋ ಅವನು ಘೋರವಾದ ನರಕವನ್ನು ಹೊಂದಿ ತೋಳವಾಗಿ ಹುಟ್ಟುವನು. ಕಾಡಿನಲ್ಲಿ ಹುಲಿಯೋ ಹದ್ದೋ ಕೊಲ್ಲುತ್ತಿರುವಾಗ ಬಿಡುಬಿಡು ಎಂದು ಕೂಗಿಕೊಂಡರೆ ಉತ್ತಮವಾದ ಗತಿಯಾಗು ವುದು. ಸಾವಿರ ಅಶ್ವಮೇಧ ಯಾಗಗಳು, ನೂರು ವಾಜಪೇಯಿಯಾಗಗಳೂ, ಶರಣಾಗತರನ್ನು ರಕ್ಷಿಸುವುದರಿಂದ ಉಂಟಾಗುವ ಪುಣ್ಯದಲ್ಲಿ ಹದಿನಾರನೇ

ಒಂದಂಶವನ್ನು ಉಂಟುಮಾಡಲಾರವು. ನೀನು ಹದ್ದುಪಕ್ಷಿಯು ದಾರಿಯಲ್ಲಿ ಹೋಗುವವನನ್ನು ತಿನ್ನುವುದನ್ನು ನೋಡಿಯೂ ರಕ್ಷಣೆ ಮಾಡಲಿಲ್ಲ. ದಯಾಹೀನನಾಗಿರುವಿ. ಆದುದರಿಂದ ನೀನು ರಾಕ್ಷಸನಾಗುವಿ' ಎಂದು ಶಾಪವನ್ನು ಕೊಟ್ಟನು. ಇದರಿಂದ ಆ ಬ್ರಾಹ್ಮಣನು ಭಯವುಳ್ಳವನಾಗಿ ತಪಸ್ವಿಗೆ ನಮಸ್ಕರಿಸಿ 'ನಾನು ಗದ್ದೆಯನ್ನು ರಕ್ಷಿಸುವುದರಲ್ಲಿಯೇ ಆಸಕ್ತನಾಗಿದ್ದೆನು. ಹತ್ತಿರದಲ್ಲಿಯೇ ಹದ್ದು ದಾರಿಗನನ್ನು ಕೊಲ್ಲುವುದನ್ನು ನಾನು ನೋಡಲಿಲ್ಲ. ಆದುದರಿಂದ ನನ್ನ ಮೇಲೆ ಅನುಗ್ರಹಮಾಡಬೇಕು' ಎಂದು ಹೇಳಿಕೊಂಡನು.

ಆಗ ತಪಸ್ವಿಯು 'ಯಾರು ನಿತ್ಯವೂ ಗೀತೆಯ ಹನ್ನೊಂದನೆಯ ಅಧ್ಯಾಯವನ್ನು ಜಪಿಸುತ್ತಿರುವನೋ ಅವನಿಂದ ಅಭಿಮಂತ್ರಿತವಾದ ನೀರು ನಿನ್ನ ತಲೆಯ ಮೇಲೆ ಬಿದ್ದರೆ ನಿನ್ನ ಶಾಪವು ಬಿಡುಗಡೆಯನ್ನು ಹೊಂದುವುದು' ಎಂದು ಹೇಳಿ ಹೊರಟುಹೋದನು. ಆ ಬ್ರಾಹ್ಮಣನು ರಾಕ್ಷಸನಾದನು. ಆದುದರಿಂದ ನೀನು ನೀರನ್ನು ಅಭಿಮಂತ್ರಿಸಿ ಆ ರಾಕ್ಷಸನ ತಲೆಯಮೇಲೆ ಹಾಕು' ಎಂದು (ಗ್ರಾಮಪಾಲನು) ಹೇಳಲು ಸುನಂದ ಬ್ರಾಹ್ಮಣನು ಕೃಪೆಯುಳ್ಳವನಾಗಿ ಹನ್ನೊಂದನೇ ಅಧ್ಯಾಯ ಗೀತಾದಿಂದ ಅಭಿಮಂತ್ರಿತವಾದ ನೀರನ್ನು ರಾಕ್ಷಸನ ತಲೆಯ ಮೇಲೆ ಹಾಕಿದನು.

ಆಗ ಅದರ ಪ್ರಭಾವದಿಂದ ರಾಕ್ಷಸನು ರಾಕ್ಷಸದೇಹವನ್ನು ಬಿಟ್ಟು ನಾಲ್ಕು ಕೈಗಳುಳ್ಳವನಾದನು. ಅವನು ನುಂಗಿದ್ದ ಸಾವಿರಾರು ದಾರಿಗರೆಲ್ಲರೂ ನಾಲ್ಕು ಕೈಗಳುಳ್ಳವರಾದರು. ಎಲ್ಲರೂ ಶಂಕಚಕ್ರಗದಾಧಾರಿಗಳಾಗಿ ವಿಮಾನವನ್ನು ಏರಿದರು. ಆಗ ಗ್ರಾಮಪಾಲನು ರಾಕ್ಷಸನೊಡನೆ 'ನನ್ನ ಮಗನು ಯಾರೆಂದು ತೋರಿಸು' ಎಂದು ಕೇಳಿದನು. ಆಗ ದಿವ್ಯಜ್ಞಾನವುಳ್ಳ ರಾಕ್ಷಸನು ವಿಮಾನದಲ್ಲಿ ಕೂತಿದ್ದ ಅವನ ಮಗನನ್ನು ತೋರಿಸಿದನು. ಗ್ರಾಮಪಾಲನು ಮಗನನ್ನು ಮನೆಗೆ ಕರೆದುಕೊಂಡು ಹೋಗಲಿಕ್ಕೆ ಆರಂಭಿಸಿದನು. ಆಗ ಮಗನು ನಗುವವನಾಗಿ 'ನಿನಗೆ ನಾನು ಎಷ್ಟು ಬಾರಿ ಮಗನಾಗಿರುವೆನು? ಪೂರ್ವದಲ್ಲಿ ನಿನ್ನ ಮಗನಾಗಿದ್ದೆನು. ಈಗ ದೇವತೆಯಾಗಿರುವೆನು. ಈ ಬ್ರಾಹ್ಮಣನ ಅನುಗ್ರಹದಿಂದ ವಿಷ್ಣುಲೋಕಕ್ಕೆ ಹೋಗುವೆನು. ಈ ರಾಕ್ಷಸನೂ ನಾಲ್ಕು ಕೈಗಳುಳ್ಳವನಾಗಿರುವನು. ನೋಡು. ಇವನೂ ಹನ್ನೊಂದನೇ ಅಧ್ಯಾಯದ ಮಹಿಮೆಯಿಂದ ಜನರಿಂದ ಕೂಡಿಕೊಂಡು ಸ್ವರ್ಗಕ್ಕೆ ಹೋಗುತ್ತಿರುವನು. ನೀನೂ ಈ ಬ್ರಾಹ್ಮಣನಿಂದ ಹನ್ನೊಂದನೇ ಅಧ್ಯಾಯಗೀತೆಯನ್ನು ಅಭ್ಯಾಸ ಮಾಡುವವನಾಗಿ ಯಾವಾಗಲೂ ಜಪಿಸುತ್ತಿರು. ನಿನಗೂ ಇದೇ ಪ್ರಕಾರವಾದ

ಉತ್ತಮವಾದ ಗತಿಯಾಗುವುದು. ಭಗವಂತನ ವಿಶ್ವರೂಪವನ್ನು ಧ್ಯಾನ ಮಾಡು' ಇತ್ಯಾದಿ ವಿಷಯವನ್ನು ಹೇಳಿ ಎಲ್ಲರಿಂದ ಸಹಿತನಾಗಿ ವಿಷ್ಣುಲೋಕಕ್ಕೆ ಹೋದನು.

ಗ್ರಾಮಪಾಲನು ಆ ಅಧ್ಯಾಯವನ್ನು ಅಭ್ಯಾಸಮಾಡಿದನು. ತರುವಾಯ ಸುನಂದನೂ ಗ್ರಾಮಪಾಲನೂ ಇಬ್ಬರೂ ವಿಷ್ಣುಲೋಕಕ್ಕೆ ಹೋದರು. ಈ ಕಥೆಯನ್ನು ಕೇಳುವ ಮಾತ್ರದಿಂದಲೇ ಮಹಾಪಾಪಗಳು ಪರಿಹಾರವಾಗುವುದು.



# ಭಗವದ್ಗೀತೆಯ ಹನ್ನೆರಡನೇ ಅಧ್ಯಾಯದ ಮಹಿಮೆ [1]

ಕೊಲ್ಲಾಪುರವೆಂದು ಹೆಸರುಳ್ಳ ಉತ್ತಮವಾದ ಮಹಾಲಕ್ಷ್ಮೀಕ್ಷೇತ್ರವಿರುವುದು. ಅಲ್ಲಿ ಒಬ್ಬ ಲಕ್ಷಣಾಭರಿತನಾದ ಸುಂದರಪುರುಷನು ಲಕ್ಷ್ಮೀದೇವಿಯರ ಸಂದರ್ಶನವನ್ನು ಮಾಡಬೇಕೆಂದು ಆಸೆಯಿಂದ ಬಂದು ಮಣಿಕಂಠವೆಂಬ ಸರೋವರದಲ್ಲಿ ಸ್ನಾನಮಾಡಿ ಭಕ್ತಿಯಿಂದ ರಮಾದೇವಿಯನ್ನು ಸ್ತೋತ್ರಮಾಡಿದನು. ಆದರಿಂದ ರಮಾದೇವಿಯರು ಸಂತುಷ್ಟರಾಗಿ ಪ್ರತ್ಯಕ್ಷರಾಗಿ 'ರಾಜಪುತ್ರ! ನಾನು ಪ್ರಸನ್ನಳಾಗಿರುವೆನು. ನಿನಗೆ ಬೇಕಾದ ವರವನ್ನು ಕೇಳಿಕೊ' ಎಂದು ಹೇಳಿದರು. ಅದಕ್ಕೆ ರಾಜಪುತ್ರನು 'ನನ್ನ ತಂದೆಯಾದ ಮಹಾರಾಜನು ಅಶ್ವಮೇಧಯಾಗವನ್ನು ಮಾಡುತ್ತಾ ದೈವೇಚ್ಛೆಯಿಂದ ರೋಗವುಳ್ಳವನಾಗಿ ಸ್ವರ್ಗಸ್ಥನಾದನು. ಅವನ ದೇಹವನ್ನು ದೇಹದಲ್ಲಿ ಹಾಗೆಯೇ ಇಟ್ಟು ಆ ಯಾಗವು ಹಾಗೆಯೇ ನಡೆಯಿತು. ಮಧ್ಯರಾತ್ರಿಯಲ್ಲಿ ಯಾರೋ ಬಂದು ಯಾಗದ ಕುದುರೆಯನ್ನು ಅಪಹರಿಸಿಕೊಂಡು ಹೋದರು. ಜನರು ಕುದುರೆಯನ್ನು ಹುಡುಕಲಿಕ್ಕೆ ಹೋಗಿ ಎಲ್ಲಿಯೂ ಕುದುರೆಯನ್ನು ನೋಡದೆ ಹಿಂದೆ ಬರಲು, ಋತ್ವಿಕ್‌ಗಳನ್ನು ಕೇಳಿಕೊಂಡು ಬಂದು ನಿಮ್ಮನ್ನೇ ಮರೆ ಹೊಂದಿರುವೆನು. ದೇವಿ! ನೀವು ಪ್ರಸನ್ನರಾದರೆ ನನ್ನ ಯಾಗದ ಕುದುರೆಯೂ ಸಿಗಲಿ. ಯಾಗವು ಸಂಪೂರ್ಣವಾಗಲಿ. ಆದರಿಂದ ನನ್ನ ತಂದೆಯ ಋಣವು ಪರಿಹೃತವಾಗುತ್ತದೆ. ಜಗತ್ತಿನ ತಾಯಿಯೇ! ಹಾಗೆ ಅನುಗ್ರಹವನ್ನು ಮಾಡು' ಎಂದು ಹೇಳಿದನು.

ರಮಾದೇವಿಯರು, ನನ್ನ ಬಾಗಿಲಲ್ಲೇ ಸಿದ್ಧಸಾಮಧಿಯೆಂದು ಹೆಸರುಳ್ಳ ಒಬ್ಬ ಬ್ರಾಹ್ಮಣನಿರುವನು. ನನ್ನ ಆಜ್ಞೆಯಿಂದ ಅವನು ನಿನ್ನ ಎಲ್ಲಾ ಕಾರ್ಯವನ್ನು ಮಾಡಿಕೊಂಡುವನು' ಎಂದು ಹೇಳಿದರು.

1. ಪ. ಪು.ಉ.ಖಂ. ಅ–182

ತರುವಾಯ ಆ ರಾಜಪುತ್ರನು ಸಿದ್ಧಸಮಾಧಿಯೆಂಬ ಆ ಮುನಿಯು ಇದ್ದಲ್ಲಿಗೆ ಹೋದನು. ಅವನ ಪಾದಕ್ಕೆ ನಮಸ್ಕರಿಸಿ ನಿಂತುಕೊಂಡನು. ಆಗ ಆ ಮುನಿಯು 'ನಿನ್ನನ್ನು ದೇವಿಯರು ಕಳುಹಿಸಿರುವರು. ನಿನ್ನಕಾರ್ಯವನ್ನು ಸಾಧಿಸುತ್ತೇನೆ. ನೋಡು' ಎಂದು ಹೇಳಿ ಮಂತ್ರಬಲದಿಂದ ಎಲ್ಲಾ ದೇವತೆಗಳನ್ನೂ ಸೆಳೆದನು. ರಾಜಪುತ್ರನು ಬಂದಿದ್ದ ಎಲ್ಲಾ ದೇವತೆಗಳನ್ನೂ ಸೆಳೆದನು. ರಾಜಪುತ್ರನು ಬಂದಿದ್ದ ಎಲ್ಲಾ ದೇವತೆಗಳನ್ನೂ ನೋಡಿದನು. ಆ ಮುನಿಯು ಅವರೊಡನೆ 'ಈ ರಾಜಪುತ್ರನ ಯಾಗದ ಕುದುರೆಯನ್ನು ರಾತ್ರಿಯಲ್ಲಿ ಇಂದ್ರದೇವರು ಅಪಹರಿಸಿರುವರು. ಆ ಕುದುರೆಯನ್ನು ಬೇಗನೇ ತಂದು ಕೊಡಿರಿ' ಎಂದು ಹೇಳಿದನು. ಆಗ ದೇವತೆಗಳು ಕುದುರೆಯನ್ನು ತಂದುಕೊಟ್ಟು ಆ ಮುನಿಯ ಅನುಜ್ಞೆಯನ್ನು ಪಡೆದು ಹೊರಟುಹೋದರು. ಇದನ್ನು ನೋಡಿ ಕುದುರೆಯನ್ನು ಹೊಂದಿ ಆ ಮುನಿಯೊಡನೆ ರಾಜಪುತ್ರನು 'ನಿಮ್ಮ ಸಾಮರ್ಥ್ಯವು ಅಶ್ಚರ್ಯಕರವಾಗಿರುವುದು. ದೇವತೆಗಳನ್ನು ಸೆಳೆದಿರಿ. ನನ್ನ ಯಾಗದ ಕುದುರೆಯನ್ನು ತರಿಸಿಕೊಟ್ಟಿರಿ. ತಮ್ಮಿಂದ ಆಗದೆ ಇರುವ ಕಾರ್ಯವೇ ಇರಲಾರದು. ತಮ್ಮಿಂದ ಇನ್ನೊಂದು ಕಾರ್ಯವಾಗಬೇಕು. ಬೃಹದ್ರಥ ಎಂಬ ರಾಜನು ನನ್ನ ತಂದೆಯಾಗಿದ್ದನು. ಅವನು ಅಶ್ವಮೇಧಯಾಗವನ್ನು ಆರಂಭಿಸಿ ದೈವೇಚ್ಛೆಯಿಂದ ಮೃತನಾದನು. ಅವನ ದೇಹವು ಇನ್ನೂ ಎಣ್ಣೆಯಲ್ಲಿ ಇರುವುದು. ಅವನನ್ನು ತಾವು ಕೃಪೆಯಿಂದ ಬದುಕಿಸಬೇಕು' ಎಂದು ಹೇಳಿದನು.

ಆ ಮಾತನ್ನು ಕೇಳಿ ಮುನಿಯು ಮಂದಹಾಸವನ್ನು ಮಾಡಿ 'ನಿನ್ನ ತಂದೆಯಿರುವ ಯಾಗಮಂಟಪಕ್ಕೆ ಹೋಗುವ' ಎಂದು ಹೇಳಿ ಆ ಮುನಿಯು ಅಲ್ಲಿಗೆ ಹೋಗಿ ನೀರನ್ನು ಅಮಂತ್ರಿಸಿ ಆ ಶವದ ಮೇಲೆ ಹಾಕಲು ಆ ರಾಜನು ಬದುಕಿ ಎದ್ದನು. ಮುನಿಯೊಡನೆ ನೀವು ಯಾರು ಎಂದು ಕೇಳಿದನು. ರಾಜಪುತ್ರನು ತಂದೆಗೆ ನಮಸ್ಕರಿಸಿ ಎಲ್ಲಾ ವಿಷಯವನ್ನು ಹೇಳಿದನು. ರಾಜನು ಆ ಮುನಿಗೆ ನಮಸ್ಕರಿಸಿ 'ತಮಗೆ ಇಂತಹ ಪ್ರಭಾವವು ಹೇಗೆ ಬಂದಿತೆಂದು ಕೇಳಿದನು. ಆಗ ಸಿದ್ಧಸಮಾಧಿಯು 'ನಾನು ಯಾವಾಗಲೂ ಭಗವದ್ಗೀತೆಯ ಹನ್ನೆರಡನೆ ಅಧ್ಯಾಯವನ್ನು ಜಪಿಸುತ್ತಿರುವೆನು. ಅದರಿಂದ ಇಂತಹ ಸಾಮರ್ಥ್ಯವು ಬಂದಿರುವುದು' ಎಂದನು. ತರುವಾಯ ರಾಜನು ಆ ಬ್ರಾಹ್ಮಣನಿಂದ ಗೀತೆಯ ಹನ್ನೆರಡನೇ ಅಧ್ಯಾಯವನ್ನು ಅಭ್ಯಾಸ ಮಾಡಿದನು. ಆ ಅಧ್ಯಾದ ಮಹಿಮೆಯಿಂದ ಅವರೆಲ್ಲರೂ ಸದ್ಗತಿಯನ್ನು ಹೊಂದಿದರು. ಇತರರು ಜಪಿಸಿಯೂ ಉತ್ತಮವಾದ ಗತಿಯನ್ನು ಹೊಂದಿದರು.



# ಭಗವದ್ಗೀತೆಯ ಹದಿಮೂರನೇ ಅಧ್ಯಾಯದ ಮಹಿಮೆ [1]

ತುಂಗಭದ್ರಾ ನದಿಯ ತೀರದಲ್ಲಿ ಹರಿಹರ ಎಂಬ ಪಟ್ಟಣವಿದ್ದಿತು. ಅಲ್ಲಿ ಹರಿದೀಕ್ಷಿತನೆಂಬ ಒಬ್ಬ ಬ್ರಾಹ್ಮಣನಿದ್ದನು. ಅವನು ತಪಸ್ವಿಯು. ವೇದಶಾಸ್ತ್ರ ಪಾರಂಗತನು. ಅವನಿಗೆ ಹೆಸರಿನಿಂದಲೂ ಕರ್ಮದಿಂದಲೂ ದುರಾಚಾರಳೆಂಬ ಹೆಂಡತಿಯಿದ್ದಳು. ಒಂದು ದಿವಸದಲ್ಲಿಯೂ ಅವಳು ಗಂಡನೊಡನೆ ಮಲಗಿದವ ಳಲ್ಲ. ಯಾವಾಗಲೂ ಕೆಟ್ಟ ಮಾತುಗಳನ್ನೇ ಆಡುವಳು. ಕುತ್ತಿಗೆಯವರೆಗೆ ಕಳ್ಳು ಕುಡಿಯುವಳು. ಗಂಡನ ಕಡೆಯವರೆಲ್ಲರನ್ನೂ ಬಯ್ಯುತ್ತಿರುವಳು. ಯಾವಾಗಲೂ ವಿಟಪುರುಷರೊಡನೆ ರಮಿಸುತ್ತಿದ್ದಳು. ಊರಿನಲ್ಲಿ ಜನರು ತಿರುಗುತ್ತಾ ಇರುವರೆಂದು ಕಾಡಿಗೆ ಹೋಗಿ ಅಲ್ಲಿ ವಿಹರಿಸುತ್ತಿದ್ದಳು. ಹೀಗೆಯೇ ಬಹುಕಾಲವನ್ನು ಕಳೆದಳು.

ವಸಂತಋತುವಿನಲ್ಲಿ ಒಂದು ದಿವಸ ರಾತ್ರಿ ಬೆಳದಿಂಗಳಿನಲ್ಲಿ ಅವಳು ಕಾಮಪೀಡಿತಳಾದಳು. ಆ ದಿವಸ ಅವಳಿಗೆ ಒಬ್ಬ ವಿಟಪುರುಷನೂ ಸಿಗಲಿಲ್ಲ. ಅವಳು ಮನೆಯಿಂದ ಕಾಡಿಗೆ ಹೋದಳು. ಕಾಮಮೋಹಿತಳಾಗಿ ಅಲ್ಲಿ ಯಾರಾದರೂ ಸಿಕ್ಕುತ್ತಾರೋ ಎಂದು ಹುಡುಕಿದಳು. ಒಬ್ಬನೂ ಸಿಗಲಿಲ್ಲ. ಕಾಮಮೋಹಿತಳಾಗಿ ಮರವನನು ಆಲಂಗಿಸಿದಳು. ಚುಂಬಿಸಿದಳು. ವಿಲಾಪವನ್ನು ಮಾಡಿದಳು. ಅವಳು ಗಟ್ಟಿಯಾಗಿ ವಿಲಾಪವನ್ನು ಮಾಡುತ್ತಿರಲು ಅವಳ ಧ್ವನಿಯನ್ನು ಕೇಳಿ ಅಲ್ಲಿಯೇ ಸ್ವಲ್ಪ ದೂರದಲ್ಲಿ ಮಲಗಿದ್ದ ಹುಲಿಯು ಎದ್ದು ಅವಳಿದ್ದಲ್ಲಿಗೆ ಬಂದಿತು. ಗುರುಗುರು ಎಂಬ ಶಬ್ದವನ್ನು ಮಾಡುತ್ತಾ ಗರ್ಜನೆಮಾಡುತ್ತಾ ಬಂದಿತು. ಬಾಲವನ್ನು ಎತ್ತಿಕೊಂಡು ಅವಳಿದ್ದಲ್ಲಿಗೆ ಹಾರಿಬಂದಿತು. ಕಾಮಮೋಹಿತಳಾದ ಅವಳು ಯಾರೋ ಒಬ್ಬ ಪುರುಷನು ಬರುತ್ತಿರುವನೆಂದೇ ಭಾವಿಸಿ ಪ್ರೇಮದಿಂದ ಮುಂದೆ ಹೋದಳು. ಅದು ಉಗುರಿನಿಂದ ಗಾಯವನ್ನು ಮಾಡಿ ಗರ್ಜನೆ ಮಾಡಲು ಅವಳಿಗೆ ಅದು ಪ್ರಿಯಪುರುಷನಲ್ಲವೆಂದು ತಿಳಿಯಿತು. ಹುಲಿಯು ಉಗುರುಗಳಿಂದ ಗಾಯಮಾಡಿ ಅವಳನ್ನು ಕೆಳಗೆ ಬೀಳಿಸಿತು. ಆ ಸಮಯದಲ್ಲಿ ಅವಳು ಅಳುತ್ತಾ 'ಹುಲಿಯೇ! ನೀನು ಯಾಕೆ ನನ್ನನ್ನು ಕೊಲ್ಲಲು ಬಂದಿರುವಿ. ಅದನ್ನು ಹೇಳಿ ಆಮೇಲೆ ನನ್ನನ್ನು ಸಂಹರಿಸು' ಎಂದು ಹೇಳಿದಳು.

ಅದಕ್ಕೆ ಹುಲಿಯು ಒಂದು ಕ್ಷಣ ಅವಳನ್ನು ಬಿಟ್ಟು ಸ್ವಲ್ಪ ನಗುತ್ತಾ 'ದಕ್ಷಿಣದಲ್ಲಿ ಮಲಾಪಹಾ ಎಂಬ ನದಿಯಿದೆ. ಅದರ ತೀರದಲ್ಲಿ ಮುನಿಪರ್ಣ ಎಂಬ ನಗರಿಯಿದೆ.

---

1. ಪ. ಪು.ಉ.ಖಂ. ಅ–183

ಅಲ್ಲಿ ಪಂಚಲಿಂಗ ಎಂಬ ರುದ್ರದೇವರಿರುವರು. ಆ ನಗರಿಯಲ್ಲಿ ನಾನೊಬ್ಬ ಬ್ರಾಹ್ಮಣಕುಮಾರನಾಗಿದ್ದೆನು. ಯಾರಿಗೆ ಪೌರೋಹಿತ್ಯ ಮಾಡಿಸ ಬಾರದೋ ಅವರಿಗೆಲ್ಲಾ ಮಾಡಿಸಿದ್ದೆನು. ಹಣದ ಆಸೆಯಿಂದ ವೇದಪಾಠದ ಫಲವನ್ನು ಮಾಡುತ್ತಿದ್ದೆನು. ಭಿಕ್ಷುಕರು ಬಂದರೆ ಕೆಟ್ಟಮಾತನ್ನಾಡಿ ತಿರಸ್ಕರಿಸುತ್ತಿದ್ದೆನು. ಹಾಗೆಯೇ ಮುದುಕನಾದೆನು. ತಲೆಯು ಬೆಳ್ಳಗಾಯಿತು. ಕಣ್ಣು ಕಾಣಿಸದೆ ಹೋಯಿತು. ಹಲ್ಲುಉದುರಿಹೋಯಿತು. ಆದರೂ ದಾನವನ್ನು ತೆಗೆದುಕೊಳ್ಳುತ್ತಲೇ ಇದ್ದೆನು. ತರುವಾಯ ತುಂಬಾ ದುರ್ಬಲವಾದ ಅಂಗವುಳ್ಳವನಾಗಿ ಕೆಲವು ಬ್ರಾಹ್ಮಣರೊಡನೆ ಭೋಜನ ಮಾಡಲಿಕ್ಕಾಗಿ ಯಾಚನೆ ಮಾಡಲಿಕ್ಕೆ ಹೋಗುತ್ತಿರಲು ದಾರಿಯ ಮಧ್ಯದಲ್ಲಿ ಒಂದು ನಾಯಿಯು ನನ್ನ ಕಾಲನ್ನು ಕಚ್ಚಿತು. ಕೂಡಲೇ ಮೂರ್ಛಿತನಾಗಿ ಕೆಳಗೆ ಬಿದ್ದು ಬಿಟ್ಟೆನು. ಹಾಗೆಯೇ ಪ್ರಾಣಬಿಟ್ಟೆನು. ಆಮೇಲೆ ಹುಲಿಯಾಗಿ ಹುಟ್ಟಿದೆನು. ಪೂರ್ವ ಪಾಪವನ್ನು ಸ್ಮರಿಸಿಕೊಂಡು ಈ ಕಾಡಿನಲ್ಲಿ ಇರುತ್ತಿರುವೆನು. ನಾನು ಧರ್ಮಿಷ್ಠರನ್ನೂ ಯತಿಗಳನ್ನೂ ಸಜ್ಜನರನ್ನೂ ಪತಿವ್ರತೆಯರನ್ನೂ ತಿನ್ನುವುದಿಲ್ಲ. ಆದುದರಿಂದ ವ್ಯಭಿಚಾರಿಣಿಯಾದ ನೀನು ನನ್ನ ಬಾಯಿಗೆ ತುತ್ತಾಗಿರುವೆ' ಈ ಪ್ರಕಾರವಾಗಿ ಹೇಳಿ ತನ್ನ ಉಗುರುಗಳಿಂದ ಅವಳ ದೇಹವನ್ನು ತುಂಡು ತುಂಡು ಮಾಡಿ ತಿಂದು ಹಾಕಿತು.

ಮೃತಳಾದ ಅವಳನ್ನು ಯಮದೂತರು ಬಂದು ಸೆಳೆದುಕೊಂಡು ಹೋದರು. ಯಮದೇವರ ಆಜ್ಞೆಯಿಂದ ಮಲಮೂತ್ರ ರಕ್ತಗಳಿಂದ ತುಂಬಿದ್ದ ಕುಂಡಗಳಲ್ಲಿ ಮುಳುಗಿಸಿದರು. ರೌರವ ನರಕದಲ್ಲಿ ಹಾಕಿದರು. ಆಮೇಲೆ ಅಲ್ಲಿಂದ ಎಳೆದು ಅಳುತ್ತಿದ್ದ ಅವಳನ್ನು ಬೆಂಕಿಯಲ್ಲಿ ಹಾಕಿದರು. ಹೀಗೆ ಅವಳು ಘೋರವಾದ ನರಕಯಾತನೆಯನ್ನು ಅನುಭವಿಸಿ ಚಂಡಾಲಿನಿಯಾಗಿ ಹುಟ್ಟಿದಳು. ಚಂಡಾಲ ಗೃಹದಲ್ಲಿಯೇ ಬೆಳೆಯುತ್ತಿದ್ದಳು. ಕುಷ್ಠರೋಗ ಕ್ಷಯರೋಗವುಳ್ಳವಳಾಗಿದ್ದಳು. ಕಣ್ಣುನೋವಿನಿಂದಲೂ ಯುಕ್ತಳಾಗಿದ್ದಳು. ಕೆಲವು ಸಮಯದ ಮೇಲೆ ತನ್ನ ನಗರಿಗೆ ಬಂದಳು. ಅಲ್ಲಿ ವಾಸುದೇವ ಎಂಬ ಬ್ರಾಹ್ಮಣನು ಭಗವದ್ಗೀತೆಯ ಹದಿಮೂರನೇ ಅಧ್ಯಾಯವನ್ನು ಪಾರಾಯಣ ಮಾಡುತ್ತಿರುವುದನ್ನು ಕೇಳಿದಳು. ಆ ಗೀತೆಯನ್ನು ಕೇಳಿದ ಮಾತ್ರದಿಂದಲೇ ಅವಳ ಚಂಡಾಲದೇಹವು ಹೋಯಿತು. ದಿವ್ಯದೇಹವನ್ನು ಹೊಂದಿ ಸ್ವರ್ಗಕ್ಕೆ ಹೊರಟುಹೋದಳು.



# ಭಗವದ್ಗೀತೆಯ ಹದಿನಾಲ್ಕನೇ ಅಧ್ಯಾಯದ ಮಹಿಮೆ[1]

ಪೂರ್ವದಲ್ಲಿ ಕಾಶ್ಮೀರದೇಶದಲ್ಲಿ ಶೌರ್ಯವರ್ಮ ಎಂಬ ರಾಜನು ಆಳುತ್ತಿದ್ದನು. ಹಾಗೆಯೇ ಸಿಂಹಲದ್ವೀಪದಲ್ಲಿ ವಿಕ್ರಮವೇತಾಲನೆಂಬ ರಾಜನು ಇದ್ದನು. ಅವರಿಬ್ಬರೂ ಪರಸ್ಪರ ಮಿತ್ರರಾಗಿದ್ದರು. ಒಂದು ದಿನದಲ್ಲಿ ಶೌರ್ಯವರ್ಮದಿಂದ ಪ್ರೇಮದಿಂದ ಕಳುಹಿಸಿದ ಎರಡು ಹೆಣ್ಣು ನಾಯಿಗಳನ್ನು ನೋಡಿ ವಿಕ್ರಮವೇತಾಲನು, ಅವನಿಗೆ ಮದ ಭರಿತವಾದ ಆನೆಯನ್ನು ಚಾಮರವನ್ನು ರತ್ನವನ್ನು ಕೊಟ್ಟು ಕಳುಹಿಸಿದನು. ತರುವಾಯ ಒಂದು ದಿವಸದಲ್ಲಿ ಆ ಎರಡು ನಾಯಿಗಳನ್ನು ಮೇನೆಯಲ್ಲಿ ಇಟ್ಟು ಚಾಮರವನ್ನು ಬೀಸುತ್ತಾ ವಾದ್ಯಘೋಷದಿಂದ ಕರಕೊಂಡು ಹೋದರು. ಅದರ ಒಟ್ಟಿಗೆ ರಾಜನು ಮೃಗಬೇಟೆಗಾಗಿ ರಾಜಪುತ್ರರೊಡನೆ ಪಂಥಹಾಕಿಕೊಂಡರು. ಮಹಾಕೋಲಾಹಲವು ಆಯಿತು. ಆಗ ಸಮಾನವಾದ ವಯಸ್ಸುಳ್ಳ ಒಬ್ಬ ರಾಜಪುತ್ರನು ಬಹು ಹಣವನ್ನು ಪಂದ್ಯವನ್ನಾಗಿ ಇಟ್ಟನು. ಅಂದರೆ ಯಾರ ನಾಯಿಯು ಹೋಗಿ ಮೊಲವನ್ನು ಹಿಡಿಯುವುದೋ ಅವನಿಗೆ ಆ ಹಣವನ್ನು ಕೊಡಬೇಕೆಂದು ನಿಶ್ಚಯಮಾಡಿಕೊಂಡರು. ತರುವಾಯ ರಾಜನ ನಾಯಿಯನ್ನು ಮೇನೆಯಿಂದ ಕೆಳಗೆ ಇಳಿಸಿಬಿಟ್ಟರು. ರಾಜಪುತ್ರನೂ ತನ್ನ ನಾಯಿಯನ್ನು ಬಿಟ್ಟನು.

ಎರಡು ನಾಯಿಗಳೂ ಒಂದು ಮೊಲವನ್ನು ಅಟ್ಟಿಸಿಕೊಂಡು ಹೋದವು. ಮೊಲವು ಅತಿಶ್ರಮದಿಂದ ಬಂದು ತಗ್ಗಾದ ಪ್ರದೇಶಧಲ್ಲಿ ಬಿದ್ದಿತು. ಬಿದ್ದರೂ ಅಂದು ನಾಯಿಗೆ ಸಿಗಲಿಲ್ಲ. ಆಮೇಲೆ ಮೆಲ್ಲನೆ ಎದ್ದು ಓಡಿತು. ಆಗ ರೋಷದಿಂದ ರಾಜನ ನಾಯಿಯು ಹೋಗಿ ಅದನ್ನು ಹಿಡಿಯಿತು. ಆಗ ಅದು ಬಹುಕಷ್ಟದಿಂದ ಹಾರಿ ತಪ್ಪಿಸಿಕೊಂಡು ಓಡಿಹೋಯಿತು. ಆಗ ರಾಜಪುತ್ರನ ನಾಯಿಯು ಹೋಗಿ ಅದರ ಕುತ್ತಿಗೆಯಲ್ಲಿಯೇ ಹಿಡಿಯಿತು. ನಾವು ಜಯಿಸಿದೆವು ಎಂದು ಜನರು ಗಟ್ಟಿಯಾಗಿ ಕೂಗಿಕೊಂಡರು. ಆ ಕೋಲಾಹಲದಿಂದ ಸ್ವಲ್ಪ ಭಯಪಟ್ಟ ನಾಯಿಯ ಬಾಯಿಯಿಂದ ಆ ಮೊಲವು ಜಾರಿಬಿದ್ದು ಹಲ್ಲಿನ ಗಾಯದಿಂದರಕ್ತವನ್ನು ಸುರಿಸುತ್ತಾ ಅಲ್ಲಿಯೇ ಒಂದು ಪ್ರದೇಶದಲ್ಲಿ ಅಡಗಿಕೂತುಕೊಂಡಿತು. ತರುವಾಯ ರಾಜನ ನಾಯಿಯು ಬಹುರೋಷವುಳ್ಳದ್ದಾಗಿ ಆ ಪ್ರದೇಶವನ್ನು ಮೂಸುತ್ತಾ ಹೋಗಿ ಆ ಮೊಲವನ್ನು ನೋಡಿತು. ಕೂಡಲೇ ಮೊಲವು ಭಯದಿಂದ ಒಂದು ಗೇಣುದೂರ ಸರಿಯಿತು. ಅಲ್ಲಿ ಒಳ್ಳೇ ಗಾಳಿಯು ಬರುತ್ತಿತ್ತು. ಅಲ್ಲಿ ಜಿಂಕೆಗಳು ನೆರಳಿನಲ್ಲಿ

1. ಪದ್ಮ ಪು.ಉ.ಖಂ. ಅ–184

ವಿಶ್ವಾಸದಿಂದ ನಿಂತಿದ್ದವು. ಅಲ್ಲಿ ಸಿಂಹಗಳು ಆನೆಮರಿಗಳೊಡನೆ ಆಡುತ್ತಿದ್ದವು. ಅಲ್ಲಿ ಒಂದು ಆಶ್ರಮದಲ್ಲಿ ವತ್ಸ ಎಂಬ ಮುನಿಗಳು ಗೀತೆಯ ಹದಿನಾಲ್ಕನೇ ಅಧ್ಯಾಯವನ್ನು ಜಪಿಸುತ್ತಾ ಇದ್ದರು. ಅಲ್ಲಿ ಅವರ ಶಿಷ್ಯರು ಪಾದವನ್ನು ತೊಳೆದ ನೀರಿನಿಂದ ಉಂಟಾದ ಕೆಸರಿನಲ್ಲಿ ಶ್ವಾಸಮೂತ್ರ ಉಳಿದಿದ್ದ ಆ ಮೊಲವು ಹೋಗಿ ಬಿದ್ದಿತು. ಆ ಕೆಸರಿನ ಸ್ಪರ್ಶ ಮಾತ್ರದಿಂದಲೇ ಆಮೊಲವು ತನ್ನ ದೇಹವನ್ನು ಪರಿತ್ಯಜಿಸಿ ದಿವ್ಯ ದೇಹವುಳ್ಳದ್ದಾಗಿ ವಿಮಾನದಲ್ಲಿ ಕೂತುಕೊಂಡು ಸ್ವರ್ಗಕ್ಕೆ ಹೊರಟುಹೋಯಿತು. ರಾಜನ ನಾಯಿಗೂ ಸ್ವಲ್ಪ ಆ ಕೆಸರು ಮೈಗೆ ತಾಗಲು ಅದೂ ಹಸಿವೆದಾಹಗಳಿಂದ ರಹಿತವಾಗಿ ನಾಯಿಯ ದೇಹವನ್ನು ಬಿಟ್ಟು ದಿವ್ಯಸ್ತ್ರೀರೂಪವುಳ್ಳದ್ದಾಗಿ ದಿವ್ಯ ವಿಮಾನವನ್ನು ಏರಿ ಸ್ವರ್ಗಕ್ಕೆ ಹೊರಟುಹೋಯಿತು.

ತರುವಾಯ ಜ್ಞಾನಿಯಾದ ವತ್ಸಮುನಿಗಳ ಶಿಷ್ಯನಾದ ಸ್ವಕಂಧರ ಎಂಬ ಮುನಿಯು ಆ ನಾಯಿ ಮೊಲಗಳ ಪೂರ್ವಜನ್ಮದ ವೈರದ ಕಾರಣವನ್ನು ತಿಳಿದುಕೊಂಡು ನಗುವವನಾದನು. ರಾಜನು ಈ ವಿಷಯವೆಲ್ಲವನ್ನೂ ನೋಡಿ ಆಶ್ಚರ್ಯವುಳ್ಳವನಾಗಿ ಸ್ವಕಂಧರನಿಗೆ ನಮಸ್ಕರಿಸಿ 'ಈ ನಾಯಿ ಮೊಲಗಳು ಸ್ವರ್ಗಕ್ಕೆ ಹೇಗೆ ಹೋದವು' ಎಂದು ಕೇಳಿದನು. ಅದಕ್ಕೆ ಸ್ವಕಂಧರನು 'ಈ ವನದಲ್ಲಿ ವತ್ಸ ಎಂಬ ಮುನಿಗಳು ಯಾವಾಗಲೂ ಭಗವದ್ಗೀತೆಯ ಹದಿನಾಲ್ಕನೆ ಅಧ್ಯಾಯವನ್ನು ಜಪಿಸುತ್ತಾ ಇರುವವರು. ನಾನು ಅವರ ಶಿಷ್ಯನು. ಬ್ರಹ್ಮವಿದ್ಯೆಯಲ್ಲಿ ಪಂಡಿತನು. ನಾನೂ ಪ್ರತಿನಿತ್ಯವೂ ಗೀತೆಯ ಹದಿನಾಲ್ಕನೇ ಅಧ್ಯಾಯವನ್ನು ಜಪಿಸುತ್ತಾ ಇರುತ್ತೇನೆ. ನಾನು ಕಾಲುತೊಳೆದ ನೀರಿನಲ್ಲಿ ಹೊರಳಾಡಿ ಮೊಲವು ಸ್ವರ್ಗಕ್ಕೆ ಹೋಯಿತು. ನಾಯಿಯೂ ಆ ನೀರು ಮೈಗೆ ತಾಗಿ ಸ್ವರ್ಗಕ್ಕೆ ಹೋಯಿತು ಎಂದು ಹೇಳಿದನು. ರಾಜನು 'ನೀವು ನಗಾಡಲಿಕ್ಕೆ ಕಾರಣವೇನು?' ಎಂದು ಕೇಳಿದನು. ಸ್ವಕಂಧರನು 'ಪೂರ್ವದಲ್ಲಿ ಮಹಾರಾಷ್ಟ್ರದಲ್ಲಿ ಪ್ರತ್ಯುದಕ ಎಂಬ ದೊಡ್ಡ ನಗರವಿದ್ದಿತು. ಅಲ್ಲಿ ಕೇಶವ ಎಂಬ ಬ್ರಾಹ್ಮಣನಿದ್ದನು. ಅವನು ಪಗಡೆ ಆಟದಲ್ಲಿ ಅಗ್ರಗಣ್ಯನಾಗಿದ್ದನು. ಅವನಿಗೆ ವಿಲೋಭನಾ ಎಂಬ ಹೆಂಡತಿಯಿದ್ದಳು. ಅವಳು ವ್ಯಭಿಚಾರಿಣಿಯಾಗಿದ್ದಳು. ಅದರಿಂದ ಕೇಶವನು ಕೋಪದಿಂದ ಅವಳನ್ನು ಕೊಂದು ಹಾಕಿದನು. ತರುವಾಯ ಆ ಬ್ರಾಹ್ಮಣನು ಹೆಂಗಸನ್ನು ಕೊಂದಪಾಪದಿಂದ ಮೊಲವಾಗಿ ಹುಟ್ಟಿದನು. ಆ ಹೆಂಗಸೂ ಪಾಪದಿಂದ ನಾಯಿಯಾಗಿ ಹುಟ್ಟಿದಳು. ಈ ಜನ್ಮದಲ್ಲಿಯೂ ಅವರಿಗೆ ಪೂರ್ವದ ವೈರವು ಬಿಟ್ಟುಹೋಗಲಿಲ್ಲ' ಎಂದನು. ಇದನ್ನು ಕೇಳಿ ರಾಜನೂ ಶ್ರದ್ಧೆಯಿಂದ ಗೀತೆಯ ಹದಿನಾಲ್ಕನೇ ಅಧ್ಯಾಯವನ್ನು ಪಾಠಮಾಡಿ ಉತ್ತಮವಾದ ಗತಿಯನ್ನು ಹೊಂದಿದನು.

# ಭಗವದ್ಗೀತೆಯ ಹದಿನೈದನೇ ಅಧ್ಯಾಯದ ಮಹಿಮೆ [1]

ಗೌಡದೇಶದಲ್ಲಿ ಕೃಪಾಣನರಸಿಂಹ ಎಂದು ಹೆಸರುಳ್ಳ ಪರಾಕ್ರಮಶಾಲಿಯಾದ ರಾಜನಿದ್ದನು. ಅವನಿಗೆ ಸರಭಭೇರುಂಡ ಎಂದು ಹೆಸರುಳ್ಳ ಮಹಾಬಲಿಷ್ಠನಾದ ಸೇನಾಧಿಪತಿಯಿದ್ದನು. ಅವನು ಎಲ್ಲಾ ವಿಷಯದಲ್ಲಿಯೂ ರಾಜನಿಗೆ ಸಮಾನ ನಾಗಿದ್ದನು. ಪಾಪಿಯಾದ ಅವನು ಒಂದು ದಿನದಲ್ಲಿ ರಾಜನನ್ನು ಕೊಂದು ತಾನೇ ರಾಜನಾಗಬೇಕೆಂದು ಯೋಚಿಸಿದನು. ಅದಕ್ಕಾಗಿ ಅವನು ತನ್ನ ಮಕ್ಕಳಿಂದ ಕೂಡಿಕೊಂಡು ಕೆಲವು ಸಾಹಸಿಕಜನರಿಂದ ಕೂಡಿಕೊಂಡು ಆಲೋಚನೆ ಮಾಡುತ್ತಿದ್ದನು. ಅಷ್ಟರಲ್ಲಿ ವಿಷೂಚಿಕಾ (ಸಿಡುಬು, ಅಮ್ಮೆ) ಎಂಬ ರೋಗವು ಬಂದು ಮೃತನಾದನು.

ಅವನು ಈರೀತಿಯಾಗಿ ದುರಾಲೋಚನೆ ಮಾಡಿದ ಪಾಪದಿಂದಲೇ ಸಿಂಧುದೇಶದಲ್ಲಿ ಶ್ರೇಷ್ಠವಾದ ಕುದುರೆಯಾಗಿ ಹುಟ್ಟಿದನು. ಕುದುರೆಯ ರಹಸ್ಯವನ್ನು ತಿಳಿದ ಒಬ್ಬ ವೈಶ್ಯಪುತ್ರನು ಬಹುಹಣವನ್ನು ಕೊಟ್ಟು ಆ ಕುದುರೆಯನ್ನು ತೆಗೆದುಕೊಂಡು ಬಂದು ರಾಜನ ಆಗಮನವನ್ನು ನಿರೀಕ್ಷಿಸುತ್ತಾ ದ್ವಾರದಲ್ಲಿ ನಿಂತುಕೊಂಡನು. ದ್ವಾರಪಾಲಕನು ಅವನನ್ನು ರಾಜನಿಗೆ ತೋರಿಸಲು ರಾಜನು ಬಂದಿರುವ ಕಾರಣವನ್ನು ಕೇಳಿದನು. ಆಗ ವೈಶ್ಯಕುಮಾರನು ತಾನು ಲಕ್ಷಣಭರಿತ ವಾದ ಕುದುರೆಯನ್ನು ತಂದಿರುವುದಾಗಿ ಹೇಳಿದನು. ತರುವಾಯ ರಾಜನು ಹತ್ತಿರವಿದ್ದವರ ಮುಖವನ್ನು ನೋಡಿ ಬೇಗನೇ ಕುದುರೆಯನ್ನು ತರಲಿಕ್ಕೆ ಹೇಳಿದನು. ವೈಶ್ಯಕುಮಾರನು ಆ ಕುದುರೆಯನ್ನು ತಂದನು. ಅದನ್ನು ನೋಡಿ ಲಕ್ಷಣವನ್ನು ತಿಳಿದ ಮಂತ್ರಿಗಳು ಅದನ್ನು ತುಂಬಾ ವರ್ಣಿಸಿದರು. ತರುವಾಯ ರಾಜನು ಸಂತೋಷ ದಿಂದ ವೈಶ್ಯಕುಮಾರನಿಗೆ ಬಹುಬಂಗಾರವನ್ನು ಕೊಟ್ಟು ಕುದುರೆಯನ್ನು ತೆಗೆದು ಕೊಂಡನು.

ಒಂದು ದಿನದಲ್ಲಿ ರಾಜನು ಆ ಕುದುರೆಯ ಮೇಲೆ ಕೂತುಕೊಂಡು ಮೃಗಬೇಟೆಗಾಗಿ ಕಾಡಿಗೆ ಹೋದನು. ಸೈನಿಕರನ್ನು ಹಿಂದೆ ಬಿಟ್ಟು ರಾಜನು ಜಿಂಕೆಗಳನ್ನು ಅನುಸರಿಸುತ್ತಾ ಹೋದನು. ಅವನಿಗೆ ತುಂಬಾ ನೀರಡಿಕೆಯಾಯಿತು. ತರುವಾಯ ಕುದುರೆಯಿಂದ ಇಳಿದು ನೀರನ್ನು ಹುಡುಕುತ್ತಾ ಹೋದನು. ಕುದುರೆಯನ್ನು ಮರದ ಕೊಂಬೆಗೆ ಕಟ್ಟಿ ಒಂದು ಕಲ್ಲಿನ ಮೇಲೆ ಹತ್ತಿಹೋದನು.

---

1. ಪದ್ಮ ಪು.ಉ.ಖಂ. ಅ–185

ಭಗವದ್ಗೀತೆಯ ಹದಿನೈದನೇ ಅಧ್ಯಾಯದ ಅರ್ಧಶ್ಲೋಕವನ್ನು ಬರೆದಿದ್ದ ಒಂದು ಪತ್ರವು ಗಾಳಿಗೆ ಅಲ್ಲಿ ಬಿದ್ದಿರುವುದನ್ನು ನೋಡಿ ಅದನ್ನು ತೆಗೆದು ರಾಜನು ಆ ಶ್ಲೋಕಾರ್ಥವನ್ನು ಗಟ್ಟಿಯಾಗಿ ಓದಿದನು. ಅದನ್ನು ಕೇಳಿದ ಮಾತ್ರದಿಂದಲೇ ಕುದುರೆಯು ಕೆಳಗೆ ಬಿದ್ದಿತು. ರಾಜನು ಕುದುರೆಯ ಹಗ್ಗವನ್ನು ಬಿಚ್ಚಿ ಎಬ್ಬಿಸಿದರೂ ಚಾಟುವಾರಿಯಿಂದ ಬಡೆದರೂ ಕುದುರೆಯು ಏಳಲೇ ಇಲ್ಲ. ತರುವಾಯ ಸರಭಭೇರುಂಡನು ಬೇಗನೇ ರಾಜನಿಗೆ ನಮಸ್ಕರಿಸಿ ದಿವ್ಯವಿಮಾನದಲ್ಲಿ ಕೂತುಕೊಂಡು ಸ್ವರ್ಗಕ್ಕೆ ಹೋದನು.

ತರುವಾಯ ರಾಜನು ಅಲ್ಲಿಯೇ ಇದ್ದ ಒಂದು ಬೆಟ್ಟದ ಮೇಲೆ ಹೋಗಿ ಅಲ್ಲಿ ಒಂದು ಆಶ್ರಮವನ್ನು ನೋಡಿ ಅಲ್ಲಿ ಇದ್ದ ಮುನಿಗಳಿಗೆ ನಮಸ್ಕರಿಸಿ ತನ್ನ ಕುದುರೆಯು ಸ್ವರ್ಗಕ್ಕೆ ಹೋದದ್ದಕ್ಕೆ ಕಾರಣವೇನೆಂದು ಕೇಳಿದನು. ತ್ರಿಕಾಲಜ್ಞಾನಿಗಳಾದ ಆ ಮುನಿಗಳು 'ರಾಜನೇ! ಅವನು ಪೂರ್ವದಲ್ಲಿ ನಿನ್ನ ಸರಭಭೇರುಂಡ ಎಂದು ಹೆಸರುಳ್ಳ ಸೇನಾಪತಿಯಾಗಿದ್ದನು. ಅವನು ಮಕ್ಕಳಿಂದ ಕೂಡಿಕೊಂಡು ನಿನ್ನನ್ನು ಕೊಂದು ರಾಜನಾಗಬೇಕೆಂದು ಆಸೆಪಟ್ಟನು. ಆದರೆ ಅಷ್ಟರಲ್ಲಿಯೇ ರೋಗದಿಂದ ಸತ್ತನು. ಅವನು ಆ ಪಾಪದಿಂದ ಬಹುಕಾಲದ ಮೇಲೆ ಕುದುರೆಯಾಗಿ ಹುಟ್ಟಿದನು. ನನ್ನ ಶಿಷ್ಯನೊಬ್ಬನು ವನಕ್ಕೆ ಹೋದವನು ಸಂತೋಷದಿಂದ ಒಂದು ಎಲೆಯಲ್ಲಿ ಗೀತೆಯ ಹದಿನೈದನೇ ಅಧ್ಯಾಯದ ಅರ್ಧಶ್ಲೋಕವನ್ನು ಬರೆದಿದ್ದನು. ಅದನ್ನು ನೀನು ಓದುತ್ತಿರುವಾಗ ಕುದುರೆಯು ಕೇಳಿ ಅನೇಕ ಜನ್ಮದಲ್ಲಿ ಮಾಡಿದ ಪಾಪದಿಂದಲೂ ರಹಿತವಾಗಿ ಸ್ವರ್ಗಕ್ಕೆ ಹೋಯಿತು! ಎಂದು ಹೇಳಿದರು. ಅದನ್ನು ಕೇಳಿ ರಾಜನು ಸಂತೋಷವುಳ್ಳವನಾಗಿ ಆ ಮುನಿಗಳಿಗೆ ನಮಸ್ಕರಿಸಿ ಹೊರಟು ಹೋದನು. ಗೀತಾಶ್ಲೋಕವನ್ನು ಬರೆದಿದ್ದ ಆ ಎಲೆಯನ್ನೇ ತೆಗೆದುಕೊಂಡು ಹೋಗಿ ಸಂತೋಷದಿಂದ ಅದನ್ನೇ ಓದುತ್ತಾ ತನ್ನ ಮಗನಾದ ಸಿಂಹಬಲನನ್ನು ಸಿಂಹಾಸದಲ್ಲಿ ಕೂತುಕೊಳ್ಳಿಸಿ(ಕೂಡಿಸಿ) ತಾನು ಮುಕ್ತಿಯನ್ನು ಹೊಂದಿದನು.



# ಭಗವದ್ಗೀತೆಯ ಹದಿನಾರನೇ ಅಧ್ಯಾಯದ ಮಹಿಮೆ[1]

ಗುರ್ಜರದೇಶದಲ್ಲಿ ಸೌರಾಷ್ಟ್ರಕವೆಂಬ ಪುರವಿದೆ. ಅಲ್ಲಿ ಪರಾಕ್ರಮಶಾಲಿಯಾದ ಖಡ್ಗಬಾಹು ಎಂದು ಹೆಸರುಳ್ಳ ರಾಜನಿದ್ದನು. ಅವನಿಗೆ ಅರಿಮರ್ದನ ಎಂಬ ಹೆಸರುಳ್ಳ ಮದಭರಿತವಾದ ದೊಡ್ಡ ಆನೆಯಿದ್ದಿತು. ಒಂದು ದಿವಸದಲ್ಲಿ ಅದು ರಾತ್ರಿಯಲ್ಲಿ ಕಾಲಿಗೆ ಹಾಕಿದ್ದ ಕಬ್ಬಿಣದ ಸಂಕೋಲೆಗಳನ್ನು ಕಡಿದುಕೊಂಡು ಕಟ್ಟಿಹಾಕಿದ್ದ ಕಂಬವನ್ನು ಮುರಿದುಹಾಕಿ ಅಂಕುಶವನ್ನು ಕೈಯಲ್ಲಿ ಹಿಡಿದುಕೊಂಡಿದ್ದ, ಪಾರ್ಶ್ವದಲ್ಲೇ ಇದ್ದ ಮಾವುತರನ್ನು ಲಕ್ಷ್ಯಮಾಡದೆ ಆನೆಯನ್ನು ಕಟ್ಟುವ ಶಾಲೆಯನ್ನೆಲ್ಲಾ ಪುಡಿಮಾಡಿತು. ಮಾವುತರು ಸುತ್ತಲೂ ಅಂಕುಶದಿಂದಲೂ ಬಿದಿರುಗಳಿಂದಲೂ ಬಡೆದರೂ ಅದನ್ನು ಭಯಪಡಿಸಲಿಕ್ಕೆ ಸಮರ್ಥರಾಗಲಿಲ್ಲ.

ತರುವಾಯ ಇದನ್ನು ತಿಳಿದು ಹಸ್ತಿಕಲೆಯನ್ನು (ಆನೆಯ ವಿಷಯವಾದ ವಿದ್ಯೆಯನ್ನು) ತಿಳಿದವರಾದ ರಾಜಕುಮಾರರಿಂದ ಕೂಡಿಕೊಂಡು ಕುತೂಹಲದಿಂದ ನೋಡು ತ್ತಿದ್ದನು. ಆನೆಯು ರಸ್ತೆಯಲ್ಲಿ ಹೋಗುತ್ತಿತ್ತು. ಜನರೆಲ್ಲರೂ ದೂರಕ್ಕೆ ಓಡುತ್ತಿದ್ದರು. ಭಯದಿಂದ ಮಕ್ಕಳನ್ನು ರಕ್ಷಣೆ ಮಾಡುತ್ತಾ ಇದ್ದರು. ಓಡುವ ಜನರಿಂದ ರಸ್ತೆಯು ತುಂಬಿಹೋಗಿತ್ತು. ಇಂತಹ ಸಮಯದಲ್ಲಿ ಅದೇ ಮಾರ್ಗದಲ್ಲಿ ಒಬ್ಬ ಬ್ರಾಹ್ಮಣನು ಸ್ನಾನಮಾಡಿ ಒದ್ದೆಬಟ್ಟೆಯನ್ನು ಧರಿಸಿಕೊಂಡು ಗೀತೆಯ ಹದಿನಾರನೇ ಅಧ್ಯಾಯವನ್ನು ಜಪಿಸುತ್ತಾ ಆ ಆನೆಯು ಇದ್ದ ಮಾರ್ಗದಲ್ಲಿಯೇ ಬಂದನು. ಊರಜನರೂ ಆನೆಯ ಮಾವುತರೂ ಈ ದಾರಿಯಲ್ಲಿ ಹೋಗಬೇಡವೆಂದು ತಡೆದರು. ಆದರೂ ಆ ಬ್ರಾಹ್ಮಣನು ಭಯಪಡಲೂ ಇಲ್ಲ. ಆ ಮಾರ್ಗವನ್ನು ಬಿಟ್ಟುಹೋಗಲೂ ಇಲ್ಲ. ಬಾಯಿಯಿಂದ ಫೂಫೂ ಎಂದು ಶಬ್ದವನ್ನು ಮಾಡತ್ತಾ ಜನರನ್ನು ತಳ್ಳಿಕೊಂಡು ಆನೆಯ ಹತ್ತಿರದಿಂದಲೇ ಹೊರಟುಹೋದನು. ಆನೆಯೂ ಒಂದೂ ಮಾಡಲಿಲ್ಲ. ಇದನ್ನು ನೋಡುತ್ತಾ ಇದ್ದ ರಾಜನು ತನ್ನ ವಾಹನದಿಂದ ಕೆಳಗೆ ಇಳಿದುಬಂದು ಬ್ರಾಹ್ಮಣನಿಗೆ ನಮಸ್ಕರಿಸಿ 'ಸ್ವಾಮಿ! ತಾವು ಮಾಡಿದ ಕಾರ್ಯವು ಲೋಕದಲ್ಲಿ ಯಾರೂ ಮಾಡಲಿಕ್ಕೆ ಆಗದೆ ಇದ್ದದ್ದು. ನೀವು ಯಮನಂತೆ ಇರುವ ಈ ಆನೆಯ ಸಮೀಪಕ್ಕೆ ಹೇಗೆ ಹೋದಿರಿ? ಯಾವ ದೇವತೆಯನ್ನು ಪೂಜಿಸುತ್ತಿರುವಿರಿ? ಯಾವ ಮಂತ್ರವನ್ನು ಜಪಿಸುತ್ತಿರುವಿರಿ? ನಿಮಗೆ ಏನು ಸಿದ್ಧಿಯಿರುವುದು?' ಎಂದು ಕೇಳಿದನು.

---

1. ಪದ್ಮ ಪು.ಉ.ಖಂ. ಅ–186

ಅದನ್ನೇ ಆ ಬ್ರಾಹ್ಮಣನು 'ರಾಜನೇ! ನಾನು ನಿತ್ಯವೂ ಗೀತೆಯ ಹದಿನಾರನೇ ಅಧ್ಯಾಯವನ್ನು ಜಪಿಸುತ್ತಿರುವೆನು. ಇದರಿಂದ ನನಗೆ ಈ ಎಲ್ಲಾ ಸಿದ್ಧಿಗಳೂ ಉಂಟಾಗಿರುವುವು' ಎಂದು ಹೇಳಿದನು.

ತರುವಾಯ ರಾಜನು ಆ ಬ್ರಾಹ್ಮಣನನ್ನು ಕರೆದುಕೊಂಡು ತನ್ನ ಮನೆಗೆ ಹೋದನು. ಒಳ್ಳೇ ಮುಹೂರ್ತವನ್ನು ನೋಡಿ ಬ್ರಾಹ್ಮಣನಿಗೆ ಲಕ್ಷ ಬಂಗಾರದ ನಾಣ್ಯಗಳನ್ನು ದಕ್ಷಿಣೆಯನ್ನಾಗಿ ಕೊಟ್ಟು ಸಂತೋಷಪಡಿಸಿ ಗೀತೆಯ ಹದಿನಾರನೇ ಅಧ್ಯಾಯವನ್ನು ಉಪದೇಶ ತೆಗೆದುಕೊಂಡನು. ಹದಿನಾರನೇ ಅಧ್ಯಾಯದ ಕೆಲವು ಶ್ಲೋಕಗಳನ್ನು ಅಭ್ಯಾಸ ಮಾಡಿದನು. ಮತ್ತೊಂದು ಬಾರಿ ಆನೆಯು ಪೂರ್ವದಂತೆ ಮಾಡಲು ರಾಜನೇ ಮಂತ್ರ ವಿಶ್ವಾಸದಿಂದ ತಾನೇ ಆ ಆನೆಯ ಮುಂದೆ ಹೋದನು. ಆನೆಯು ಅವನನ್ನು ಒಂದೂ ಮಾಡಲಿಲ್ಲ. ಕೊನೆಗೆ ರಾಜನು ಮಗನಿಗೆ ಪಟ್ಟಾಭಿಷೇಕಮಾಡಿ ಗೀತೆಯ ಹದಿನಾರನೇ ಅಧ್ಯಾಯದ ಮಹಿಮೆಯಿಂದ ಉತ್ತಮವಾದ ಲೋಕವನ್ನು ಹೊಂದಿದನು.



## ಭಗವದ್ಗೀತೆಯ ಹದಿನೇಳನೇ ಅಧ್ಯಾಯದ ಮಹಿಮೆ [1]

ಗುರ್ಜರದೇಶದ ರಾಜನಾದ ಖಡ್ಗಬಾಹುವಿನ ಮಗನಿಗೆ ದುಃಶಾಸನನೆಂಬ ಭೃತ್ಯನಿದ್ದನು. ಒಂದು ದಿವಸದಲ್ಲಿ ಒಬ್ಬನು ಆನೆಯಲ್ಲಿ ಸವಾರಿ ಮಾಡುವುದರಲ್ಲಿ ಬಹು ಹಣವನ್ನು ಪಂದ್ಯವನ್ನು ಇಟ್ಟು ಆನೆಯ ಮೇಲೆ ಕೂತುಕೊಂಡು ಬಂದನು. ಆನೆಯು ಕೆಲವು ಹೆಜ್ಜೆಗಳನ್ನು ಇಡುವಷ್ಟರಲ್ಲಿಯೇ ಜನರು ತಡೆದರು. ದುಃಶಾಸನನು ಗಟ್ಟಿಯಾಗಿ ಕೂಗಿದನು. ದುಃಶಾಸನನ ಶಬ್ದವನ್ನು ಕೇಳಿ ಆನೆಗೆ ಬಹುಕೋಪ ಬಂದು ಅವನ ಹತ್ತಿರಕ್ಕೆ ಬಂದಿತು. ಅಷ್ಟರಲ್ಲಿಯೇ ಅವನು ಭಯದಿಂದ ನಡುಗಿ ಕೆಳಗೆ ಬಿದ್ದುಬಿಟ್ಟನು. ಆನೆಯು ಬಂದು ಕೆಳಗೆ ಬಿದ್ದಿದ್ದ ಅವನನ್ನು ಮೇಲೆ ಹಾರಿಸಿ ಕೊಂದು ಹಾಕಿತು. ಅಷ್ಟರಲ್ಲಿಯೇ ಬಿಡದೆ ರೋಷದಿಂದ ಅವನ ಎಲುಬುಗಳನ್ನೆಲ್ಲಾ ಪುಡಿಪುಡಿ ಮಾಡಿ ಚೆಲ್ಲಿತು. ಅದರಿಂದ ದುಃಶಾಸನನು ಕಾಲಾಂತರದಲ್ಲಿ ಆನೆಯ ಜನ್ಮವನ್ನು ಹೊಂದಿದನು. ಸಿಂಹಲದ್ವೀಪದ ರಾಜನ ಬಳಿಯಲ್ಲಿ ಬಹುಕಾಲ ಕಳೆದನು.

ಸಿಂಹಲದ್ವೀಪದ ರಾಜನಿಗೂ ಖಡ್ಗಬಾಹುವಿಗೂ ಪರಮಸ್ನೇಹವಿದ್ದ ಕಾರಣ

1. ಪದ್ಮ ಪು.ಉ.ಖಂ. ಅ–187

ಸಿಂಹಲದ್ವೀಪದ ರಾಜನು ನೀರಿನ ಮಾರ್ಗದಿಂದ ಆ ಆನೆಯನ್ನು ಖಡ್ಗಬಾಹುವಿನ ಮಗನಿಗೆ ಕಳುಹಿಸಿಕೊಟ್ಟನು. ಆ ಆನೆಗೆ ಪೂರ್ವಜನ್ಮದ ಸ್ಮರಣೆಯಿದ್ದಿತು. ಅದು ತನ್ನ ಪೂರ್ವದ ಬಂಧುಗಳನ್ನು ಸಹೋದರರನ್ನು ನೋಡಿಕೊಂಡು ಬಹುಕಷ್ಟದಿಂದ ಕೆಲವು ದಿವಸಗಳನ್ನು ಕಳೆಯಿತು. ಆಮೇಲೆ ರಾಜನು ಒಬ್ಬ ಕವಿಯು ಸಮಸ್ಯಾಪೂರಣ ಮಾಡಿದುದರಿಂದ ಸಂತುಷ್ಟನಾಗಿ ಅವನಿಗೆ ಆ ಆನೆಯನ್ನು ಕೊಟ್ಟುಬಿಟ್ಟನು. ಆ ಕವಿಯು ಆ ಆನೆಗೆ ರೋಗಬರುವುದೆಂಬ ಭಯದಿಂದ ಮಾಲವರಾಜನಿಗೆ ಮಾರಿದನು. ಅಲ್ಲಿ ಆ ಆನೆಯನ್ನು ಚೆನ್ನಾಗಿ ರಕ್ಷಣೆ ಮಾಡುತ್ತಿದ್ದರೂ ಕೆಲವು ಸಮಯದಲ್ಲಿ ಆ ಆನೆಗೆ ಜ್ವರವು ಬಂದು ಅದಕ್ಕೆ ಮರಣವು ಸಮೀಪಿಸಿತು. ಅದು ಸರಿಯಾಗಿ ಮಲಗುತ್ತಿದ್ದಿಲ್ಲ. ಕಣ್ಣಿನಲ್ಲಿ ನೀರನ್ನು ಸುರಿಸುತ್ತಿತ್ತು. ರಾತ್ರಿಯಲ್ಲಿಯೂ ಹಗಲಲ್ಲಿಯೂ ಸುಮ್ಮನೆ ನಿಂತುಕೊಂಡು ಇರುತ್ತಿತ್ತು. ಇದನ್ನು ನೋಡಿ ಆನೆ ಮಾವುತರು ಬೇಗನೆ ರಾಜನ ಬಳಿಗೆ ಹೋಗಿ ಈ ವಿಷಯವನ್ನು ತಿಳಿಸಿದರು. 'ರಾಜನೇ! ನಿಮ್ಮ ಆನೆಯು ಆಹಾರವನ್ನು ತಿನ್ನುವುದಿಲ್ಲ. ನೀರನ್ನು ಕುಡಿಯುವುದಿಲ್ಲ. ಕಣ್ಣೀರನ್ನು ಸುರಿಸುತ್ತಾ ಇದೆ. ಬಂದು ನೋಡಿ' ಎಂದು ಮಾವುತರು ಹೇಳಿದರು. ಅದನ್ನು ಕೇಳಿ ರಾಜನು ಮಂತ್ರಿಗಳಿಂದಲೂ ಆನೆಯ ರೋಗವನ್ನು ವಾಸಿಮಾಡುವುದ ರಲ್ಲಿ ಸಮರ್ಥರಾದ ವೈದ್ಯರಿಂದಲೂ ಸಹಿತನಾಗಿ ಆನೆಯನ್ನು ನೋಡಲಿಕ್ಕೆ ಬಂದನು. ಆಗ ಆನೆಯು ರಾಜನನ್ನು ನೋಡಿ ಜ್ವರದ ವೇದನೆಯನ್ನು ಬಿಟ್ಟು ಎಲ್ಲರಿಗೂ ಆಶ್ಚರ್ಯವಾಗುವಂತೆ 'ನೀತಿಶಾಸ್ತ್ರವನ್ನು ತಿಳಿದ ಸರ್ವಶಾಸ್ತ್ರವನ್ನು ತಿಳಿದ ಶತ್ರುಗಳನ್ನು ಜಯಿಸಿದ ಪರಮಾತ್ಮನ ಭಕ್ತನಾದ ರಾಜಶ್ರೇಷ್ಠನೇ! ಔಷಧಗಳಿಂದ ವೈದ್ಯರಿಂದ ದಾನಗಳಿಂದ ಜಪಮಾಡುವವರಿಂದ ಏನಾಗಲಿಕ್ಕೆ ಹೋಗುತ್ತದೆ. ಭಗವದ್ಗೀತೆಯ ಹದಿನೇಳನೇ ಅಧ್ಯಾಯವನ್ನು ಯಾವಾಗಲೂ ಜಪಿಸುತ್ತಿರುವ ಬ್ರಾಹ್ಮಣನನ್ನು ಕರಕೊಂಡು ಬಾ. ಅವನಿಂದ ನನ್ನ ರೋಗವು ಪರಿಹೃತವಾಗುವುದು. ಸಂದೇಹವಿಲ್ಲ' ಎಂದು ಹೇಳಿತು.

ರಾಜನು ಹಾಗೆಯೇ ಹದಿನೇಳನೇ ಅಧ್ಯಾಯ ಜಪಿಸುತ್ತಿದ್ದ ಒಬ್ಬ ಬ್ರಾಹ್ಮಣನನ್ನು ತರಿಸಿದನು. ಆ ಬ್ರಾಹ್ಮಣನು ಆಮಂತ್ರದಿಂದ ಅಭಿಮಂತ್ರಿಸಿ ನೀರನ್ನು ಆನೆಯ ತಲೆಯ ಮೇಲೆ ಹಾಕಲು ಆನೆಯ ಜನ್ಮವು ಹೋಯಿತು. ದಿವ್ಯವಿಮಾನದಲ್ಲಿ ಕೂತಿದ್ದ ದುಃಶಾಸನನನ್ನು ರಾಜನು ನೋಡಿದನು. ರಾಜನು ಅವನೊಡನೆ 'ನೀನು ಯಾರು? ನಿನ್ನ ವೃತ್ತಾಂತವೇನು?' ಎಂದು ಕೇಳಲು ದುಃಶಾಸನನು ಹದಿನೇಳನೇ ಅಧ್ಯಾಯ ಗೀತೆಯನ್ನು ಪಾರಾಯಣ ಮಾಡುತ್ತಾ ಸ್ವಲ್ಪ ಸಮಯದಲ್ಲಿಯೇ ಉತ್ತಮವಾದ ಗತಿಯನ್ನು ಹೊಂದಿದನು.

# ಭಗವದ್ಗೀತೆಯ ಹದಿನೆಂಟನೇ ಅಧ್ಯಾಯದ ಮಹಿಮೆ [1]

ಮೇರುಪರ್ವತದ ಶಿಖರದಲ್ಲಿ ಮನೋಹರವಾದ ಅಮರಾವತಿಯೆಂಬ ಪಟ್ಟಣವಿದೆ. ಅದು ಪೂರ್ವದಲ್ಲಿ ರುದ್ರದೇವರ ವಿನೋದಕ್ಕಾಗಿ ವಿಶ್ವಕರ್ಮನಿಂದ ರಚಿತವಾದ ನಗರಿಯು ಮೋಕ್ಷದಂತೆ ಮಹಾವೈಭವದಿಂದ ಕೂಡಿದ ಅಲ್ಲಿ ಇಂದ್ರದೇವರು ಇದ್ದರು. ಒಂದುದಿನ ಅವರು ದೇವತೆಗಳಿಂದ ಸಹಿತರಾಗಿ ಶಚೀದೇವಿಯಿಂದ ಸಹಿತರಾಗಿ ಸಿಂಹಾಸನದಲ್ಲಿ ಕೂತಿದ್ದರು. ಆಗ ಸಾವಿರ ಕಣ್ಣುಳ್ಳ ಒಬ್ಬ ಪುರುಷನು ವಿಷ್ಣುದೂತರಿಂದ ಕೂಡಿದ ವಿಮಾನದಲ್ಲಿ ಕೂತುಕೊಂಡು ಬರುತ್ತಿರುವುದನ್ನು ನೋಡಿದರು. ಅವನ ತೇಜಸ್ಸಿನಿಂದ ಇಂದ್ರದೇವರು ಸಿಂಹಾಸನದಿಂದ ಕೆಳಗೆ ಬಿದ್ದರು. ಆಗ ವಿಷ್ಣುದೂತರು ಬಂದು ಆ ಪುರುಷನಿಗೆ ಇಂದ್ರದೇವರ ಸಿಂಹಾಸನದಲ್ಲಿ ಕೂತುಕೊಳ್ಳಿಸಿ ಪಟ್ಟಾಭಿಷೇಕ ಮಾಡಿದರು.

ದೇವತಾಸ್ತ್ರೀಯರು ಆ ಪುರುಷನಿಗೆ ಆರತಿ ಮಾಡಿದರು. ಋಷಿಗಳು ವೇದಮಂತ್ರ ಗಳಿಂದ ಆಶೀರ್ವಾದ ಮಾಡಿದರು. ರಂಭಾದಿ ಅಪ್ಸರಸ್ತ್ರೀಯರು ಅವನ ಮುಂಭಾಗದಲ್ಲಿ ನರ್ತನ ಮಾಡಿದರು. ಗಂಧರ್ವರು ಹಾಡನ್ನು ಹೇಳಿದರು. ಇಂದ್ರದೇವರು ಹೊಸತಾಗಿ ಬಂದ ಇಂದ್ರನನ್ನು ನೋಡಿ ಆಶ್ಚರ್ಯಪಟ್ಟರು. ಇವನು ನೂರು ಯಾಗಗಳನ್ನು ಮಾಡದೆ ಬೇರೆ ಯಾವ ಪುಣ್ಯಕಾರ್ಯಗಳನ್ನು ಮಾಡದೆ ಇಂದ್ರಪದವಿಯನ್ನು ಹೇಗೆ ಹೊಂದಿದನೆಂದು ಯೋಚಿಸುತ್ತಾ ಪರಮಾತ್ಮನ ಬಳಿಗೆ ಬಂದು ಎಲ್ಲಾ ವಿಷಯವನ್ನು ತಿಳಿಸಿದರು. ಅದಕ್ಕೆ ಪರಮಾತ್ಮನು ಅವನು ಪ್ರತಿನಿತ್ಯವೂ ಗೀತೆಯ ಹದಿನೆಂಟನೇ ಅಧ್ಯಾಯದ ಐದು ಶ್ಲೋಕವನ್ನು ನಿತ್ಯವೂ ಜಪಿಸುತ್ತಾ ನನ್ನನ್ನು ಆರಾಧಿಸುತ್ತಿದ್ದ ಕಾರಣ ಅವನಿಗೆ ನಿನ್ನ ಸಾಮ್ರಾಜ್ಯವು ಪ್ರಾಪ್ತವಾಯಿತು' ಎಂದು ಹೇಳಿದನು.

ಅದನ್ನು ಕೇಳಿ ಇಂದ್ರದೇವರು ಬ್ರಾಹ್ಮಣವೇಷವನ್ನು ಧರಿಸಿಕೊಂಡು ಗೋದಾವರೀತೀರಕ್ಕೆ ಹೋದವರಾಗಿ ಗೀತೆಯ ಹದಿನೆಂಟನೇ ಅಧ್ಯಾಯವನ್ನು ಜಪಿಸುತ್ತಿದ್ದ ಬ್ರಾಹ್ಮಣನನ್ನು ನೋಡಿ ಅವನಿಂದ ಗೀತೆಯ ಹದಿನೆಂಟನೇ ಅಧ್ಯಾಯವನ್ನು ಅಭ್ಯಾಸಮಾಡಿದರು. ಆ ಪುಣ್ಯದಿಂದ ಇಂದ್ರಪದವಿಯು ನಶ್ವರ ವೆಂದು ತಿಳಿದುಕೊಂಡು ವಿಷ್ಣುಲೋಕಕ್ಕೆ ಹೋದರು. ಈರೀತಿಯಾಗಿ ಗೀತೆಯ ಹದಿನೆಂಟನೇ ಅಧ್ಯಾಯವೂ ಪರಮಪ್ರಶಸ್ತವಾದದ್ದು. (ಈ ಕಥೆಯು ಈ

1. ಪದ್ಮ ಪು.ಉ.ಖಂ. ಅ–188

ಮನ್ವಂತರವು ಸಂಪೂರ್ಣ ಮುಗಿದು ಪುರಂದರ ಎಂಬ ಇಂದ್ರದೇವರ ಅಧಿಕಾರವು ಮುಗಿಯುವ ಸಮಯದಲ್ಲಿ ನಡೆಯುವುದೆಂದು ತಿಳಿಯಬೇಕು. ಇಷ್ಟರವರೆಗೆ ನಡೆದಿಲ್ಲ. ಏಕೆಂದರೆ ಈಗಲೂ ಪುರಂದರನೇ ಇಂದ್ರಪದವಿಯಲ್ಲಿ ಇರುವರೆಂದೂ, ಈ ಮನ್ವಂತರವು ಮುಗಿಯುವವರೆಗೂ ಇವರೇ ಇಂದ್ರದೇವರಾಗಿರುವರೆಂದೂ ಪ್ರಮಾಣ ಸಿದ್ಧವಾಗಿದೆ.)



# (ದೇವತಾ) ತಾರತಮ್ಯವು [1]

1. ಶ್ರೀಮನ್ನಾರಾಯಣನು ಸರ್ವೋತ್ತಮನು
2. ಶ್ರೀರಮಾದೇವಿಯರು ಅವನಿಗಿಂತ ಅನಂತಪಾಲು ಕಡಿಮೆಯಾದವರು.
3. ಬ್ರಹ್ಮದೇವರೂ ವಾಯುದೇವರೂ ಅವರಿಂದ ಕೋಟಿಪಾಲು ಕಡಿಮೆ ಯಾದವರು.
4. ಅವರಿಂದ ಸರಸ್ವತೀ ಭಾರತಿಯರು ನೂರುಪಾಲು ಕಡಿಮೆಯಾದವರು.
5. ಅವರಿಂದ ಗರುಡ ಶೇಷ ರುದ್ರರು ನೂರುಪಾಲು ಕಡಿಮೆಯಾದವರು.
6. ಅವರಿಂದ ಜಾಂಬವತೀ, ಮಿತ್ರವಿಂದಾ, ಕಾಲಿಂದೀ, ನೀಲಾ, ಭದ್ರಾ, ಲಕ್ಷಣಾ ಎಂದು ಹೆಸರುಳ್ಳ ಭಗವಂತನ ಆರು ಜನ ಮಹಿಷಿಯರು ಐದು ಪಾಲು ಕಡಿಮೆಯಾದವರು.
7. ಇವರಿಗಿಂತ ಸುಪರ್ಣೀ, ವಾರುಣೀ, ಪಾರ್ವತಿಯರು ಎರಡು ಪಾಲು ಕಡಿಮೆಯಾಗಿರುವರು.
8. ಅವರಿಗಿಂತ ಇಂದ್ರಕಾಮರು ಹತ್ತುಪಾಲು ಕಡಿಮೆಯಾಗಿರುವರು.
9. ಅವರಿಗಿಂತ ಹತ್ತುಪಾಲು ಕಡಿಮೆಯಾದವನು ಆಹಂಕಾರಿಕ ಪ್ರಾಣನು.
10. ಅವನಿಗಿಂತ ಹತ್ತುಪಾಲು ಕಡಿಮೆಯಾದವರು ಶಚಿ, ರತಿ, ದಕ್ಷ, ಅನಿರುದ್ಧ , ಬೃಹಸ್ಪತಿ, ಸ್ವಾಯಂಭುವ ಮನು ಎಂಬ ಆರು ಜನರು.
11. ಅವರಿಂದ ಐದು ಪಾಲು ಕಡಿಮೆಯಾದವನು ಪ್ರವಹವಾಯುವು. ಅವನಿಗೇ ನಾಸಿಕ್ಯ ವಾಯುವೆಂದೂ ಭೌತಿಕವಾಯುವೆಂದೂ ಹೆಸರು.
12. ಅವನಿಂದ ಎರಡುಪಾಲು ಕಡಿಮೆಯಾದವರು ಯಮದೇವರೂ, ಸ್ವಾಯಂಭುವ ಮನುವಿನ ಪತ್ನಿಯಾದ ಶತರೂಪಾದೇವಿಯೂ, ಚಂದ್ರನೂ, ಸೂರ್ಯನೂ.
13. ಇವರಿಂದ ಕಾಲು ಅರೆಕಾಲು ಪಾಲು (3/8) ಕಡಿಮೆಯಾದವರು ವರುಣ ದೇವರು.

---

1. **ಗರುಡಪುರಾಣದ ಬ್ರಹ್ಮಕಾಂಡದ ಅನೇಕ ಅಧ್ಯಾಯಗಳಲ್ಲಿ ದೇವತಾತಾರತಮ್ಯ ವಿಷಯಗಳು ವಿಸ್ತೃತವಾಗಿ ಬಂದಿವೆ. (ರಾಮತತ್ತ್ವಪ್ರಕಾಶ, ಬೆಳಗಾಂ 1-7-1905)**

14. ಅವರಿಂದ 1/8 ಪಾಲು ಕಡಿಮೆಯಾದವರು ನಾರದರು.

15. ಅವರಿಂದ 1/8 ಪಾಲು ಕಡಿಮೆಯಾದವರು ಭೃಗುಋಷಿಗಳೂ ಅಗ್ನಿ ದೇವರೂ ದಕ್ಷಪ್ರಜೇಶ್ವರರ ಪತ್ನಿಯಾದ ಪ್ರಸೂತಿದೇವಿಯೂ.

16. ಇವರಿಂದ ಎರಡು ಪಾಲು ಕಡಿಮೆಯಾದವರು ವಸಿಷ್ಠರೂ ಮರೀಚಿ ಋಷಿಗಳೂ, ಅತ್ರಿ ಋಷಿಗಳೂ, ಅಂಗಿರಋಷಿಗಳೂ ಪುಲಸ್ತ್ಯಋಷಿಗಳೂ, ಪುಲಹಋಷಿಗಳೂ, ಕ್ರತುಋಷಿಗಳೂ, ವೈವಸ್ವತಮನುವೂ, ವಿಶ್ವಾಮಿತ್ರರೂ.

17. ಇವರಿಂದ 1/16 ಪಾಲು ಕಡಿಮೆಯಾದವರು ದ್ವಾದಶ ಆದಿತ್ಯರಲ್ಲಿ ಒಬ್ಬನೂ ಆದ ಮಿತ್ರನೂ, ಬೃಹಸ್ಪತ್ಯಾಚಾರ್ಯರ ಪತ್ನಿಯಾದ ತಾರೆಯೂ, ನಿಋತಿಯೂ, ಪ್ರವಹವಾಯುವಿನ ಪತ್ನಿಯಾದ ಪ್ರಾವಹಿಯೂ.

18. ಇವರಿಂದ 1/16 ಪಾಲು ಕಡಿಮೆಯಾದವರು ವಿಷ್ವಕ್ಸೇನನೂ, ಅಶ್ವಿನಿದೇವತೆ ಗಳೂ, ಗಣಪನೂ, ಕುಬೇರನೂ, ಅಗ್ನಿಯನ್ನು ಬಿಟ್ಟು ಉಳಿದ ದ್ರೋಣ, ಪ್ರಾಣ, ಧ್ರುವ, ಅರ್ಕ, ದೋಷ, ವಸು, ವಿಭಾವಸು ಎಂದು ಹೆಸರುಳ್ಳ ಏಳುಜನ ವಸುಗಳೂ, ಮೂಲರುದ್ರ ದೇವರನ್ನು ಬಿಟ್ಟು ಉಳಿದ ರೈವತ, ಅಜ, ಭವ, ಭೀಮ, ವಾಮ, ಉಗ್ರ, ವೃಷಾಕಪಿ, ಅಜೈಕಪಾತ್, ಅಹಿರ್ಬುಧ್ನ, ಬಹುರೂಪ ಎಂದು ಹೆಸರುಳ್ಳ ಹತ್ತುಜನ ರುದ್ರರೂ, ಆಹಂಕಾರಿಕ ಪ್ರಾಣ ಪ್ರವಹರಿಂದ ಭಿನ್ನರಾದ ನಾಲ್ವತ್ತೇಳು ಜನ ಮರುತ್ತುಗಳೂ, ಸವಿತಾ, ಆರ್ಯಮಾ, ಧಾತಾ, ಪೂಷಾ, ತ್ವಷ್ಟಾ, ಭಗ ಎಂಬ ಆರು ಆದಿತ್ಯರೂ, ಧುರಿ, ವಿಲೋಚನ, ಕ್ರತು, ದಕ್ಷ, ಸತ್ಯ, ವಸು, ಕಾಮ, ಕಾರಿಕ ಎಂದು ಹೆಸರುಳ್ಳ ವಿಶ್ವೇದೇವತೆಗಳೂ, ಒಂದು ಋಭುದೇವತೆಗಳ ಗಣವೂ, ಮೂರುಜನ ಪಿತೃಗಳೂ, ದ್ಯಾವಾಪೃಥಿವೀ ದೇವತೆಗಳೂ.

19. ಇವರಿಂದ 1/16 ಪಾಲು ಕಡಿಮೆಯಾದವರು ಜಯ, ವಿಜಯ, ಪ್ರಚಂಡ, ಚಂಡ, ನಂದ, ಸುನಂದ, ಕುಮುದ, ಕುಮುದಾಕ್ಷ ಎಂದು ಹೆಸರುಳ್ಳ ಎಂಟು ದ್ವಾರಪಾಲಕರೂ, ಕಾಲಾಭಿಮಾನಿದೇವತೆಯೂ.

20. ಇವರಿಂದ 1/16 ಪಾಲು ಕಡಿಮೆಯಾದವರು ಪಾವಕ ಎಂದು ಹೆಸರುಳ್ಳ ಅಗ್ನಿಪುತ್ರನೂ, ಭೃಗುಋಷಿಗಳ ಮಗನಾದ ಚ್ಯವನಋಷಿಗಳೂ, ಬೃಹಸ್ಪತ್ಯಾ ಚಾರ್ಯರ ಮಗನಾದ ಉಚಥ್ಯರೂ, ರೈವತ, ಚಾಕ್ಷುಷ, ಸ್ವಾರೋಚಿಷ, ಉತ್ತಮ, ಸಾವರ್ಣಿ, ಬ್ರಹ್ಮಸಾವರ್ಣಿ, ರುದ್ರಸಾವರ್ಣಿ, ವೇದಸಾವರ್ಣಿ,

ಇಂದ್ರಸಾವರ್ಣಿ, ದಕ್ಷಸಾವರ್ಣಿ, ಧರ್ಮಸಾವರ್ಣಿ ಎಂಬ ಮನುಗಳೂ, ಏಳು ಪಿತೃಗಳೂ, ಪೃಥುಚಕ್ರವರ್ತಿ, ಕಾರ್ತವೀರ್ಯಾರ್ಜುನ, ಶಶಬಿಂದು, ಪ್ರಿಯವ್ರತ, ಕಕುಸ್ಥ, ಗಯ, ಮಾಂಧಾತ, ಭರತ, ವಿಧೃತಿ, ಸ್ವಧೃತಿ, ಬಲಿ, ದಿವಸ್ಪತಿ, ಶುಚಿ, ಅದ್ಭುತ, ಶಂಭು, ಎಂಟು ಗಂಧರ್ವರು, ಪ್ರಹ್ಲಾದನೂ,

21. ಇವರ ಅನಂತರದಲ್ಲಿ 1/16 ಪಾಲು ಕಡಿಮೆಯಾದವರು ಗಂಗಾದೇವಿಯೂ, ಯಮಪತ್ನಿಯಾದ ಶ್ಯಾಮಲಾದೇವಿಯೂ, ಪರ್ಜನ್ಯ ಎಂದು ಹೆಸರುಳ್ಳ ಆದಿತ್ಯನೂ, ಸೂರ್ಯಪತ್ನಿಯಾದ ಸಂಜ್ಞಾದೇವಿಯೂ ಚಂದ್ರಪತ್ನಿಯಾದ ರೋಹಿಣಿದೇವಿಯೂ, ಅನಿರುದ್ಧನ ಹೆಂಡತಿಯಾದ ವಿರಾಟ್ ಎನ್ನುವವಳೂ ಸಮಾನರು.

22. ಆಮೇಲೆ 2 ಗುಣ ಕಡಿಮೆಯಾದವಳು ಅಗ್ನಿಪತ್ನಿಯಾದ ಸ್ವಾಹಾದೇವಿಯು.

23. ಅವಳ ಅನಂತರದಲ್ಲಿ 2 ಗುಣ ಕಡಿಮೆಯಾದವನು ನೀರಿಗೆ ಅಭಿಮಾನಿ ಯಾದ ಬುಧನು.

24. ಅವನ ಅನಂತರದಲ್ಲಿ 2 ಗುಣ ಕಡಿಮೆಯಾದ ಭೂಮಿಗೆ ಅಭಿಮಾನಿಯಾದ ಶನಿಯು.

25. ಇವನಿಗೂ 2 ಗುಣ ಕಡಿಮೆಯಾದವರ ಕರ್ಮಕ್ಕೆ ಅಭಿಮಾನಿ ಯಾದ ಪುಷ್ಕರನು.

26. ಅನಂತರದಲ್ಲಿ ಆಜಾನಜ ದೇವತೆಗಳು 1/16 ಕಡಿಮೆಯಾದವರು. ವಿರಾಧ, ತುಂಬುರು, ದನು, ಚಿತ್ರರಥ, ಧೃತರಾಷ್ಟ್ರ, ಕಿಶೋರ, ಹೂಹೂ, ಹಾಹಾ, ವಿದ್ಯಾಧರ, ಉಗ್ರಸೇನ, ವಿಶ್ವಾವಸು, ಪರಾವಸು, ಚಿತ್ರಸೇನ, ಗೋಪಾಲ, ಬಲ ಇತ್ಯಾದಿ ನೂರುಜನ ಗಂಧರ್ವರೂ ಆಜಾನಜದೇವತೆಗಳಿಗೆ ಸಮಾನರು. ಘೃತಾಚೀ ಮೇನಕಾ ರಂಭಾ ಊರ್ವಶೀ ತಿಲೋತ್ತಮಾ ಸುಕೇಶೀ ಶಬರೀ, ಮಂಜುಘೋಷಾ ಪಿಂಗಲಾ ಇತ್ಯಾದಿ ಸಾವಿರ ಅಪ್ಸರ ಸ್ತ್ರೀಯರೂ ಆಜಾನ ದೇವತೆಗಳಿಗೆ ಸಮಾನರು. ವಿಶ್ವಾಮಿತ್ರ, ವಸಿಷ್ಠ, ನಾರದ, ಚ್ಯವನ, ಉಚಥ್ಯ, ಭೃಗುಗಳನ್ನು ಬಿಟ್ಟು ಉಳಿದ ಋಷಿಗಳು ಅಂದರೆ ಶತರ್ಚಿ, ಕಶ್ಯಪ, ಮಾಧ್ಯಮ ಪರಾಶರ ಪಾವಮಾನಿ ಪ್ರಗಥಾ ಕ್ಷುದ್ರಸೂಕ್ತ ದೇವಲ, ಗೃತ್ಸ್ನಮದ, ಆಸುರಿ, ಭರದ್ವಾಜ, ಮುದ್ಗಲ, ಉದ್ದಾಲಕ, ಋಷ್ಯಶೃಂಗ, ಶಂಖ ಸತ್ಯವ್ರತ, ಸುಯಜ್ಞ, ಬಾಭ್ರವ್ಯ, ಮಾಂಡೂಕ, ಬಾಷ್ಕಲ,

ಧರ್ಮಾಚಾರ್ಯ, ಅಗಸ್ತ್ಯ, ದಾಲ್ಭ್ಯ, ದೃಢಚ್ಯುತ, ಕೃಪಯ, ಹರಿತ, ಕಣ್ವ ವಿರೂಪ, ವಿಷ್ಣುವರ್ಧ, ಆತ್ರೇಯ, ಶ್ರೀವತ್ಸ, ವತ್ಸ, ಔರ್ವ, ಮಾಂಡೂಕೇಯ, ಮಂಡೂಕ, ಜಾಬಾಲಿ, ವೀತಿಹವ್ಯ, ಶೌನಕ ಇತ್ಯಾದಿ ಋಷಿಗಳೂ ಆಜಾನಜ ದೇವತೆಗಳಿಗೆ ಸಮಾನರು. ಹದಿನಾರು ಸಾವಿರದ ನೂರು ಕೃಷ್ಣಪರಮಾತ್ಮನ ಪತ್ನಿಯರಾಗಿ ಹುಟ್ಟಿದ ಅಗ್ನಿದೇವರ ಮಕ್ಕಳೂ ಆಜಾನಜ ದೇವತೆಗಳು.

27. ಇವರಿಂದ 1/16 ಕಡಿಮೆಯಾದವರು ಸಪ್ತಪಿತೃಗಳಿಂದ ಇತರರಾದ ಪಿತೃಗಳು.

28. 10 ಗುಣ ಅವರಿಂದ ಕಡಿಮೆಯವರು ದೇವಗಂಧರ್ವರು.

29. ಅವರಿಂದ 100 ಪಾಲು ಕಡಿಮೆಯಾದವರು ಮನುಷ್ಯಗಂಧರ್ವರು.

30. ಅವರಿಂದ 100 ಪಾಲು ಕಡಿಮೆ ಚಕ್ರವರ್ತಿಗಳು.

31. ಅವರಿಂದ 100 ಪಾಲು ಕಡಿಮೆ ಮನುಷ್ಯೋತ್ತಮರು. ಈರೀತಿಯಾಗಿ ದೇವತಾ ತಾರತಮ್ಯವನ್ನು ತಿಳಿಯಬೇಕು.

## ॥ ಶ್ರೀಕೃಷ್ಣಾರ್ಪಣಮಸ್ತು ॥



# ಆಧಾರ ಗ್ರಂಥಗಳು


01. ಶ್ರೀಮನ್ಮಧ್ವಾಚಾರ್ಯರ ಭಾಗವತ ತಾತ್ಪರ್ಯ, ಮಹಾಭಾರತ ತಾತ್ಪರ್ಯ ನಿರ್ಣಯ, ಬ್ರಹ್ಮಸೂತ್ರ ಭಾಷ್ಯ, ಕೃಷ್ಣಾಮೃತ ಮಹಾರ್ಣವ, ತಲವಕಾರಭಾಷ್ಯ, ಛಾಂದೋಗ್ಯಭಾಷ್ಯ ಮುಂತಾದವು...

02. ಪದ್ಮಪುರಾಣ – ಮಹಾದೇವ ಚಿಮ್ನಾಜಿ ಆಪ್ಟೆ - ಫೆಲೋ- ಬಾಂಬೆ ವಿಶ್ವವಿದ್ಯಾಲಯ– ಇವರ ಪ್ರಕಾಶನ, ಆನಂದಾಶ್ರಮ–ಮುದ್ರಣಾಲಯ, ಪೂನಾ. 1894.

03. ಶ್ರೀವೇಂಕಟಾಚಲಮಾಹಾತ್ಮ್ಯಮ್– ಶ್ರೀ ತಿರುಮಲ ತಿರುಪತಿ ದೇವಸ್ಥಾನ, ತಿರುಪತಿ ಇವರ ಪ್ರಕಾಶನ. 1962

04. ಗರುಡ ಪುರಾಣ, ಬ್ರಹ್ಮಕಾಂಡ – ರಾಮತತ್ತ್ವಪ್ರಕಾಶ ಮುದ್ರಣಾಲಯ, ಬೆಳಗಾಂ-1905.

05. ಮಹಾಭಾರತ - ಗೀತಾಪ್ರೆಸ್, ಗೋರಖಪುರ ಪ್ರಕಾಶನ. 1957

06. ಹರಿವಂಶ – ಗೀತಾಪ್ರೆಸ್, ಗೋರಖಪುರ ಪ್ರಕಾಶನ. 1960.

07. ರುಕ್ಮಿಣೀಶವಿಜಯ – ಸೋದೆಮಠ ಪ್ರಕಾಶನ, ಶ್ರೀಮನ್ಮಧ್ವ ಸಿದ್ಧಾಂತ ಉನ್ನಾಹಿನೀ ಸಭಾ, ತಿರಚಾನೂರು(ಆಂಧ್ರ) 1996.

08. ಭಾಗವತ ಮಹಾಪುರಾಣ – (ಭಾಗವತಾಶ್ರಮ ಪ್ರತಿಷ್ಠಾನ ಮೊದಲಾದ ಪ್ರಕಾಶನಗಳು)

09. ಪುರಾಣನಾಮ ಚೂಡಾಮಣಿ – ಮೈಸೂರು ವಿಶ್ವವಿದ್ಯಾನಿಲಯ, 1969.

10. Puranic Encyclopedia - Vettam Mani Motilal Banarasidas Publishers-Delhi. 1983.

11. ಶ್ರೀಮಹಾಭಾರತ ತಾತ್ಪರ್ಯ ನಿರ್ಣಯ-ಭಾಗ-1,2. ತತ್ತ್ವ ಸಂಶೋಧನ ಸಂಸತ್, ಪಲಿಮಾರು ಮಠ, ಉಡುಪಿ. 2009

12. ಶ್ರೀ ಬ್ರಹ್ಮಸೂತ್ರಭಾಷ್ಯ-ಟೀಕಾ ಶ್ರೀ ತ್ರಿವಿಕ್ರಮಪಂಡಿತಾಚಾರ್ಯರ ತತ್ತ್ವದೀಪಿಕಾ-ಅಖಿಲ ಭಾರತ ಮಾಧ್ವಮಹಾಮಂಡಲ. ಉಡುಪಿ-ಪ್ರಕಾಶನ. 1957

# ನಮ್ಮ ಪ್ರಕಟಣೆಗಳು

01. ಗಾಯತ್ರೀ ಹೃದಯ
02. ಗಾಯತ್ರೀ ಭಾವತಿಲಕಂ (ಸಂಸ್ಕೃತ)
03. ಅಹಂ ಬ್ರಹ್ಮಾಸ್ಮಿ
04. ಗುರಿಯಿಲ್ಲದ ದಾರಿ
05. ಗಾಯತ್ರಿಯಲ್ಲಿ ಅಧ್ಯಾತ್ಮದೀಪ
06. ಗಾಯತ್ರಿಯಲ್ಲಿ ವ್ಯಾಸಚಿಂತನೆ
07. ಹರಿನಾಮ ರಹಸ್ಯ
08. ಗೀತಾರ್ಥ ವೈಭವ
09. ಗೀತಾಸಾರ ಸೌರಭ
10. ಭಾಗವತವು ಬೆಳಗಿದ ವೇದಾಂತ ದೀಪಾವಳಿ
11. ಗೀತೆಯಲ್ಲಿ ಪ್ರಾಣತತ್ತ್ವದ ಹಿರಿಮೆ
12. ಭಗವಂತನು ನಿರ್ಗುಣ, ನಿರಾಕಾರನೇ ?
13. ವಾಸುದೇವನಲ್ಲಿ ಗೀತಾಕಟಾಕ್ಷ
14. ಹರಿತತ್ತ್ವ ಚೂಡಾಮಣಿ
15. ಹರಿತೀರ್ಥ ವಿವೇಕ
16. ಭಾಗವತ ರಸ ಸಂದೇಶ
17. ಶಿವರಾತ್ರಿ ರಹಸ್ಯ
18. ವಿರೋಧೋದ್ಧಾರ (ಸಂಸ್ಕೃತ)
19. ಸುಲಲಿತಂ ಶ್ರೀಮದ್ಭಾಗವತಂ - 7 ಸಂಪುಟಗಳಲ್ಲಿ
    (ಸಮಗ್ರ ಭಾಗವತದ ಕನ್ನಡಾನುವಾದ)

